# ಹೊಸಗನ್ನಡದ ಅರುಣೋದಯ

(ಪರಿಷ್ಕೃತ ತೃತೀಯ ಆವೃತ್ತಿ)

ಡಾ. ಶ್ರೀನಿವಾಸ ಹಾವನೂರ



ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ
ಕನ್ನಡ ಭವನ ಜೆ.ಸಿ.ರಸ್ತೆ
ಬೆಂಗಳೂರು –೫೬೦ ೦೦೨

**Hosagannadada Arunodaya** - The Beginnings of Modern Era in Kannada, By Dr.Shrinivasa Havanur. (Revised and Enlarged Edition) **Published.by B.H.Mallikarjuna, Administrative officer** Kannada Pustaka Pradhikara, Kannada Bhavana, J.C.Road, Bangalore - 560 002



ಮೊದಲ ಮುದ್ರಣ : ೧೯೭೪
ದ್ವಿತೀಯ ಮುದ್ರಣ : ೨೦೦೦
ತೃತೀಯ ಮುದ್ರಣ : ೨೦೧೧
ಪುಟಗಳು : xxviii + ೬೯೨
ಬೆಲೆ ರೂ : ೩೫೦.೦೦
ಪ್ರತಿಗಳು : 1000

First Edition : 1974
Second Edition : 2000
Third Edition : 2011
Pages : xxviii + 692
Price : ₹ ೩೫೦.೦೦
Copies : 1000

ಪ್ರಕಾಶಕರು:
**ಬಿ.ಎಚ್.ಮಲ್ಲಿಕಾರ್ಜುನ**
ಆಡಳಿತಾಧಿಕಾರಿಗಳು
**ಕನ್ನಡ ಪುಸ್ತಕ ಪ್ರಾಧಿಕಾರ**
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು-೫೬೦ ೦೦೨

ಕರಡು ತಿದ್ದಿದವರು : ಲೇಖಕರು

ಮುದ್ರಕರು:
**ಮೆ॥ ಪ್ರಿಂಟ್ ಪಾರ್ಕ್**
೧೪೯೬/೪, ೩ನೇ ಅಡ್ಡರಸ್ತೆ, ಮರಿಯಪ್ಪನಪಾಳ್ಯ,
ಶ್ರೀರಾಂಪುರಂ ಅಂಚೆ, ಬೆಂಗಳೂರು-೫೬೦ ೦೨೧
ದೂ:೦೮೦-೨೩೪೨ ೨೮೩೮

## ಅಧ್ಯಕ್ಷರ ಮಾತು

ಕನ್ನಡ ಪುಸ್ತಕ ಪ್ರಾಧಿಕಾರದ ವಿವಿಧ ಮಹತ್ವದ ಯೋಜನೆಗಳಲ್ಲಿ ಪುಸ್ತಕ ಪ್ರಕಟಣೆಯೂ ಒಂದು ಅಪರೂಪದ ಮೌಲಿಕ ಕೃತಿಗಳನ್ನು ಮುದ್ರಿಸುವುದು, ಮರುಮುದ್ರಿಸುವ ಮುಖ್ಯ ಉದ್ದೇಶವೆಂದರೆ, ಸುಲಭದರದಲ್ಲಿ ಮೌಲಿಕ ಕೃತಿಗಳು ಜನಸಾಮಾನ್ಯರಿಗೆ ತಲುಪಬೇಕೆಂಬುದೇ ಆಗಿದೆ. ಜನಪ್ರಿಯ ಸಾಹಿತ್ಯ ಪ್ರಕಾರದ ಪುಸ್ತಕಗಳನ್ನು ಖಾಸಗೀ ಪ್ರಕಾಶಕರು ಮುದ್ರಿಸುತ್ತಾರೆ ಅದು ತಪ್ಪೆಂದು ಹೇಳುವಂತಿಲ್ಲ. ಆ ಪ್ರಕಟಣಾ ಕಾರ್ಯ ಅವರಿಗೆ ಸಾಹಿತ್ಯ ಸೇವೆಯೊಂದಿಗೆ ಉಪಜೀವನವೂ ಆಗಿದೆ. ಶಾಸ್ತ್ರಗ್ರಂಥಗಳು, ಸಂಶೋಧನೆ, ವಿಮರ್ಶೆ, ವಿಜ್ಞಾನ.. ಇತ್ಯಾದಿ ಪ್ರಕಾರಗಳಿಗೆ ಸೇರಿದ ಗಂಭೀರ ಕೃತಿಗಳು ಜನಸಾಮಾನ್ಯರಿಗೆ ಸುಲಭದರದಲ್ಲಿ ತಲುಪಿಸುವುದು ಖಾಸಗಿಯವರಿಂದ ಅಸಾಧ್ಯ. ಈ ಕೆಲಸವನ್ನು ನಾಡಿನ ವಿಶ್ವವಿದ್ಯಾಲಯಗಳು, ಅಕಾಡೆಮಿಗಳು, ಪ್ರಾಧಿಕಾರ ಸಮರ್ಪಕವಾಗಿ ಮಾಡುತ್ತಾ ಬಂದಿವೆ.

**'ಹೊಸಗನ್ನಡದ ಅರುಣೋದಯ'** ಕನ್ನಡದ ಒಂದು ಮೇರು ಕೃತಿ. ಹೊಸಗನ್ನಡ ಸಾಹಿತ್ಯ ಮೂಡುವ ಮುಂಚೆ ಹಳೆಗನ್ನಡ ಸಾಹಿತ್ಯ ರಚನೆ ನಿಂತುಹೋದ ನಂತರದ ಸಂಧಿ ಕಾಲದಲ್ಲಿನ ಸಂದರ್ಭಗಳನ್ನು ಲೇಖಕರು ಇಲ್ಲಿ ಅಧಿಕೃತವಾಗಿ ದಾಖಲಿಸಿದ್ದಾರೆ. ಡಾ. ಶ್ರೀನಿವಾಸ ಹಾವನೂರರ ಈ ಕೃತಿ, ಮುಂದೆ ಯಾವ ಕಾಲಕ್ಕೂ ಸಂಶೋಧಕರಿಗೆ ಅಧಿಕೃತ ಆಕರ ಗ್ರಂಥವಾಗುವಂತದ್ದು. ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ಹಾವನೂರರದು ಬಹಳ ದೊಡ್ಡ ಹೆಸರು. ಹಿರಿಯ ವಿದ್ವಾಂಸರೂ, ಸೌಜನ್ಯಶೀಲರೂ ಆದ ಅವರನ್ನು ಪ್ರಾಧಿಕಾರ ಈ ಕೃತಿಯ ಮರುಮುದ್ರಣಕ್ಕೆ ಅನುಮತಿ ಕೋರಿದಾಗ ಸಂತೋಷದಿಂದ ಒಪ್ಪಿ, ಮೂರನೇ ಮುದ್ರಣಕ್ಕೆ ಅಗತ್ಯ ತಿದ್ದುಪಡಿಗಳನ್ನು ಮಾಡಿ ಸ್ವತಃ ಪ್ರಾಧಿಕಾರಕ್ಕೆ ತಂದುಕೊಟ್ಟಿದ್ದರು. ಪುಸ್ತಕ ಹೊರಬರುವ ಮುಂಚೆಯೇ ಅವರು ನಮ್ಮನ್ನು ಅಗಲಿರುವುದು ತುಂಬಾ ವೇದನೆಯನ್ನುಂಟುಮಾಡಿದೆ. ಅವರಿಗೆ ನಾನು ಇಡೀ ಕನ್ನಡ ವಾಚಕಲೋಕದ ಪರವಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಈ ಪುಸ್ತಕವನ್ನು ಹೊರತರುವಲ್ಲಿ ಪ್ರಾರಂಭದಿಂದ ವಿಶೇಷ ಆಸಕ್ತಿ ವಹಿಸಿದ ಪ್ರಾಧಿಕಾರದ ಆಡಳಿತಾಧಿಕಾರಿಗಳಾದ ಶ್ರೀ ಬಿ.ಎಚ್. ಮಲ್ಲಿಕಾರ್ಜುನ ನನ್ನ ಆಪ್ತ ಕಾರ್ಯದರ್ಶಿ ಶ್ರೀ ಕೆ. ಮುಕುಂದನ್, ಪ್ರಾಧಿಕಾರದ ಎಲ್ಲಾ ಸದಸ್ಯರು ಹಾಗೂ

ಸಿಬ್ಬಂದಿ ವರ್ಗದವರಿಗೆ ಆಭಾರಿಯಾಗಿದ್ದೇನೆ. ಈ ಮೌಲಿಕ ಕೃತಿ ಕನ್ನಡ ಗಂಭೀರ ಸಾಹಿತ್ಯ ಪ್ರಿಯರೂ, ಸಂಶೋಧಕರಿಗೆ ಉಪಯುಕ್ತವಾಗುತ್ತದೆಂದು ಭಾವಿಸುತ್ತೇನೆ.

ಡಾ.ಸಿದ್ಧಲಿಂಗಯ್ಯ
ಅಧ್ಯಕ್ಷರು

# ಅರಿಕೆ

ಇದು 'ಹೊಸಗನ್ನಡದ ಅರುಣೋದಯ'ದ ಮೂರನೇ ಪರಿಷ್ಕೃತ ಆವೃತ್ತಿ. ಪಿಎಚ್.ಡಿ ಮಹಾಪ್ರಬಂಧಗಳು ಮುದ್ರಿತ ರೂಪದಲ್ಲಿ ಹೊರಬರುವಾಗ ರೆಕ್ಕೆಪುಕ್ಕಗಳನ್ನು ಕತ್ತರಿಸಿಕೊಂಡು ಮೊಟಕಾಗುವುದು ಕನ್ನಡದಲ್ಲಿ ಸರ್ವೇ ಸಾಧಾರಣ. ಆದರೆ ದಿ॥ ಹಾವನೂರರ ಈ ಕೃತಿ ಇದಕ್ಕೆ ಸಂಪೂರ್ಣ ಅಪವಾದ. ಮೊದಲ ಮುದ್ರಣ (1974)ದ ನಂತರದ ಕಾಲು ಶತಮಾನದ ಅವಧಿಯಲ್ಲಿ ತಾವು ಸಂಶೋಧಿಸಿದ ಹೊಸ ಸಂಗತಿಗಳನ್ನು ಅವರು ಎರಡನೆಯ ಮುದ್ರಣ (2001) ದಲ್ಲಿ ಅನುಬಂಧ ರೂಪದಲ್ಲಿ ಅಳವಡಿಸಿದ್ದರು. ಪ್ರಸ್ತುತ ಆವೃತ್ತಿಯಲ್ಲಿಯೂ ಈ ವಿಧಾನವನ್ನೇ ಅನುಸರಿಸಲಾಗಿದೆ.

ಈ ಆವೃತ್ತಿಯನ್ನು ಸಿದ್ಧಗೊಳಿಸಲು ಬಹುಮಟ್ಟಿಗೆ ಎರಡನೆಯ ಆವೃತ್ತಿಯನ್ನೇ ಆಧರಿಸಲಾಗಿದೆ. ಆದರೆ ಎರಡನೇ ಆವೃತ್ತಿಯಲ್ಲಿ ಸೇರಿಸದೆ ಬಿಟ್ಟಿದ ಮೊದಲ ಮುದ್ರಣದ ಕೆಲವು ವಿವರಗಳನ್ನು ಇಲ್ಲಿ ಪುನಃ ಅಳವಡಿಸಲಾಗಿದೆ. ಎರಡನೇ ಮುದ್ರಣದ ನಂತರ ಲಭ್ಯವಾದ ಹೊಸ ಮಾಹಿತಿಯನ್ನು ಸೂಕ್ತಸ್ಥಳಗಳಲ್ಲಿ ಸೇರಿಸಲಾಗಿದೆ. ಡಾ॥ ಶಿವರಾಮ ಪಡಿಕ್ಕಲ್‌ರವರು 'ಸಂ-ಕಥನ' ಕ್ಕೆಂದು ಬರೆದ ವಿದ್ವತ್ಪೂರ್ಣವಾದ ಲೇಖನವನ್ನು ಮುನ್ನುಡಿಯಾಗಿ ಬಳಸಿಕೊಳ್ಳಲಾಗಿದೆ.

ಪ್ರಸ್ತುತ ಆವೃತ್ತಿಯ ಪರಿಷ್ಕರಣದ ಬಹುಪಾಲು ಕೆಲಸವನ್ನು ಡಾ॥ಹಾವನೂರರೇ ಮಾಡಿ ಮುಗಿಸಿದ್ದರು. ಪುಟ ಕಟ್ಟುವಿಕೆ, ಅಂತಿಮ ಹಂತದ ಕರಡಚ್ಚಿನ ತಿದ್ದುವಿಕೆ, ಚಿತ್ರಗಳು ಮತ್ತು ಪದಸೂಚಿಯ ಅಳವಡಿಕೆ, ಮುಖಪುಟ ವಿನ್ಯಾಸ ಮುಂತಾದ ಕೊನೆಯ ಹಂತದ ಕೆಲಸಗಳಷ್ಟೇ ಬಾಕಿ ಉಳಿದಿದ್ದವು. ಆದರೆ ಅಷ್ಟರಲ್ಲಿ ಅವರು ನಮ್ಮನ್ನು ಅಗಲಿದರು(ಏಪ್ರಿಲ್ 5, 2010). ತಮ್ಮ ನಿಧನದ ಸಂಗತಿ ಮೊದಲೇ ತಿಳಿದಿತ್ತೋ ಎಂಬಂತೆ ಅವರು ನೀಡಿದ್ದ 'ಅಕಸ್ಮಾತ್ ನಾನು ಈ ಕೆಲಸವನ್ನು ಮುಗಿಸಲು ಸಾಧ್ಯವಾಗದಿದ್ದಲ್ಲಿ ನೀವು ಅದರ ಹೊಣೆ ವಹಿಸಬೇಕು" ಎಂಬ ಆದೇಶಕ್ಕೆ ತಲೆಬಾಗಿ ಮುಂದಿನ ಜವಾಬ್ದಾರಿಯನ್ನು ನಾನು ಯಥಾಮತಿ ನಿರ್ವಹಿಸಿದ್ದೇನೆ. ಹಾವನೂರರ ಕುಟುಂಬವರ್ಗದ ಸಹಕಾರ, ಯುವಮಿತ್ರ ಸ.ಕಾರ್ತಿಕ್‌ರ ನೆರವು ಮತ್ತು ಕನ್ನಡ ಗಣಕ ಪರಿಷತ್ತಿನ, ಅದರಲ್ಲೂ ವಿಶೇಷವಾಗಿ ಶ್ರೀ. ನರಸಿಂಹ ಮೂರ್ತಿಯವರ ಬೆಂಬಲ ದೊರೆತಿದ್ದರಿಂದ ಮಾತ್ರ ಈ ಗುರುತರವಾದ ಕಾರ್ಯ ಸಾಧ್ಯವಾಗಿದೆ. ಆದರೂ ಅಲ್ಲಲ್ಲಿ ತಪ್ಪುಗಳು ಉಳಿದಿರುವುದು ಸಾಧ್ಯ. ಪ್ರಾಜ್ಞರು ಇದಕ್ಕಾಗಿ ನನ್ನನ್ನು ಮನ್ನಿಸಬೇಕೆಂದು

ಕೋರುವೆ. ಈ ಕೃತಿಯನ್ನು ಪ್ರಕಟಿಸಿದ ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ, ಸುಂದರವಾಗಿ ಮುಖಪುಟವನ್ನು ವಿನ್ಯಾಸಗೊಳಿಸಿದ ಕಲಾವಿದರಿಗೆ ಹಾಗೂ ಅಚ್ಚುಕಟ್ಟಾಗಿ ಮುದ್ರಿಸಿದ ತಂತ್ರಜ್ಞರಿಗೆ ವಿಶೇಷ ವಂದನೆಗಳು.

ಡಾ॥ ಎಸ್.ಎಲ್.ಶ್ರೀನಿವಾಸಮೂರ್ತಿ

# ಮುನ್ನುಡಿ
## (ಮೊದಲ ಆವೃತ್ತಿಗೆ)

ಡಾ. ಶ್ರೀನಿವಾಸ ಹಾವನೂರ ಅವರು ಕನ್ನಡದ ಪ್ರಸಿದ್ಧ ಸಂಶೋಧಕರಲ್ಲಿ ಒಬ್ಬರು. ಒಂದು ಕಾಲದಲ್ಲಿ ಲಲಿತ ಸಾಹಿತ್ಯದ ಸೃಷ್ಟಿಯಲ್ಲಿ ಆಸಕ್ತರಾಗಿದ್ದ ಹಾವನೂರರು ಈಗ ಸಂಶೋಧನೆಗೆ ಸಂಪೂರ್ಣವಾಗಿ ತಮ್ಮನ್ನು ಮೀಸಲು ಮಾಡಿಕೊಂಡಿದ್ದಾರೆ.

ಅವರ ಸಂಶೋಧನೆಯ ಸ್ವರೂಪ, ವ್ಯಾಪ್ತಿ, ಮಹತ್ವಗಳನ್ನು ಈಗ ಪ್ರಕಟವಾಗುತ್ತಿರುವ 'ಹೊಸಗನ್ನಡದ ಅರುಣೋದಯ' ಎಂಬ ಈ ಕೃತಿ ಸಮರ್ಥವಾಗಿ ಪ್ರತಿನಿಧಿಸುತ್ತದೆ. ಮೂಲತಃ ಇದು ಅವರಿಗೆ ಪೂನಾ ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ ಪದವಿಯನ್ನು ದೊರಕಿಸಿಕೊಟ್ಟ ನಿಬಂಧ. ಆದರೆ ಅವರು ತಮ್ಮ ನಿಬಂಧವನ್ನು ಪ್ರಕಟಣೆಯ ದೃಷ್ಟಿಯಿಂದ ಸಂಪೂರ್ಣವಾಗಿ ಪರಿಷ್ಕರಿಸಿದ್ದಾರೆ; ಅನೇಕ ಬದಲಾವಣೆಗಳೊಂದಿಗೆ ಕೆಲವು ಸಂಗತಿಗಳನ್ನು ಸೇರಿಸಿದ್ದಾರೆ. ಪದವಿ ನಿಬಂಧ ಮತ್ತು ಪುಸ್ತಕ ಇವುಗಳೊಳಗಿನ ವ್ಯತ್ಯಾಸವನ್ನು ಚೆನ್ನಾಗಿ ಬಲ್ಲ ಡಾ. ಹಾವನೂರರು ತಮ್ಮ ನಿಬಂಧವನ್ನು ಅತ್ಯಂತ ಸಮರ್ಪಕ ರೀತಿಯಲ್ಲಿ ಪುಸ್ತಕವಾಗಿ ಮಾರ್ಪಡಿಸಿದ್ದಾರೆ. ಕನ್ನಡ ಭಾಷೆ, ಸಾಹಿತ್ಯದ ಸಂಬಂಧವಾದ ಸಂಶೋಧನೆಯ ಕ್ಷೇತ್ರದಲ್ಲಿ 'ಹೊಸಗನ್ನಡದ ಅರುಣೋದಯ'ದ ಪ್ರಕಟಣೆ ಅತ್ಯಂತ ಮಹತ್ವಪೂರ್ಣವಾದ ಘಟನೆಯೆಂದು ನಾನು ಭಾವಿಸುತ್ತೇನೆ. ಒಂದು ನಿರ್ದಿಷ್ಟ ಕಾಲಾವಧಿಯ ನಮ್ಮ ಸಾಹಿತ್ಯದ ಹಿನ್ನೆಲೆಯ ಚರಿತ್ರೆ ಇಷ್ಟು ವ್ಯಾಪಕವಾಗಿ, ಹೊಸ ಹೊಸ ವಿಚಾರಗಳನ್ನು ತುಂಬಿಕೊಂಡು ಇದುವರೆಗೆ ಪ್ರಕಟವಾಗಿರಲಿಲ್ಲ. ಕನ್ನಡ ಸಾಹಿತ್ಯ ಚರಿತ್ರೆಗೆ ಡಾ. ಹಾವನೂರರ ಈ ಗ್ರಂಥ ಹೊಸ ಆಯಾಮಗಳನ್ನು ಜೋಡಿಸುತ್ತದೆ.

ಹತ್ತೊಂಬತ್ತನೆಯ ಶತಮಾನ ನಮ್ಮ ರಾಷ್ಟ್ರಜೀವನದಲ್ಲಿಯೇ ತುಂಬ ವಿಶಿಷ್ಟವಾದ ಅವಧಿ. ರಾಜಕೀಯಕ್ಕೆ ಸಂಬಂಧಿಸಿದಂತೆ ನಮ್ಮ ಸ್ವಾತಂತ್ರ್ಯ ಪೂರ್ಣವಾಗಿ ಹರಣವಾದದ್ದೂ, ಅದನ್ನು ಮರಳಿ ಪಡೆಯಬೇಕೆಂಬ ಛಲ ಹರಳುಗೊಂಡದ್ದೂ ಈ ಕಾಲದಲ್ಲಿಯೇ. ಹೊರಗಿನ ಆಚಾರ ಪದ್ಧತಿ ಪರಂಪರೆಗಳು, ನವೀನ ವಿಚಾರಧಾರೆಗಳು ನಮಗೆ ಪರಿಚಯವಾದವು. ಕ್ರಾಂತಿಕಾರಕವೆಂದು ತೋರುತ್ತಿದ್ದ ಅನೇಕ ಸಂಗತಿಗಳು ರಾಷ್ಟ್ರಜೀವನವನ್ನು ತುಂಬಿಕೊಂಡವು. ಹಿಂದಿನ ಸಹಸ್ರಾರು ವರ್ಷಗಳ ಚರಿತ್ರೆಯಲ್ಲಿ ಯಾವಾಗಲೂ ಕಂಡುಬಂದ ಕ್ರಿಯೆ ಪ್ರತಿಕ್ರಿಯೆಗಳು ಈ ಕಾಲದಲ್ಲಿ ತೋರಿಸಿಕೊಂಡವು. ಬದುಕನ್ನು ದೃಢವಾಗಿ ತುಂಬಿಕೊಂಡಿದ್ದ ನಂಬಿಕೆ ನಡೆವಳಿಕೆಗಳನ್ನು ಪ್ರಶ್ನಿಸುವ ಧೈರ್ಯ

ಉಂಟಾಯಿತು. ಹಳತು ಹೊಸದರ ಘರ್ಷಣೆಯೊಂದು ಕಡೆ; ಅವುಗಳ ಕಸಿಯಿಂದ ಮೂಡಿದ ಚಿಗುರು ಇನ್ನೊಂದು ಕಡೆ. ಒಟ್ಟಿನಲ್ಲಿ ರಾಷ್ಟ್ರದ ಗತಿಸ್ಥಿತಿಗಳು ಸಂಕೀರ್ಣಸ್ವರೂಪವನ್ನು ತಾಳಿದ್ದುವು. ಪಾಶ್ಚಾತ್ಯರ ಸಂಪರ್ಕದಿಂದ ಇಡೀ ದೇಶದಲ್ಲಿ ಹೊಸ ಅಲೆಗಳೆದ್ದುವು. ಕುಸಿದುಹೋಗಿದ್ದ ಆಡಳಿತ ವ್ಯವಸ್ಥೆಗೆ ಹೊಸ ಚೇತನವೂ, ತುಕ್ಕುಗಟ್ಟಿದ್ದ ವಿಚಾರಗಳಿಗೆ ಹೊಸ ಕಾಂತಿಯೂ ಬಂದುವು. ಇದೆಲ್ಲದರ ಪರಿಣಾಮ ಆ ಕಾಲದ ಸಾಹಿತ್ಯಿಕ ಚಟುವಟಿಕೆಗಳ ಮೇಲೆ ಆಗದೆ ಇರಲಿಲ್ಲ. ಆದ್ದರಿಂದ ಭಾರತೀಯ ಭಾಷೆ–ಸಾಹಿತ್ಯಗಳ ನವೋದಯವು ಹತ್ತೊಂಬತ್ತನೆಯ ಶತಮಾನದಲ್ಲಿ ಕಣ್ಣೊಡೆಯಿತು. ಕುಡಿಯಾಯಿತು. ಯಾವುದನ್ನು ನಾವು ಆಧುನಿಕ ಸಾಹಿತ್ಯ ಎಂದು ಕರೆಯುತ್ತೇವೆಯೋ ಅದರ ಆರಂಭವಾದದ್ದು ನಿಶ್ಚಿತವಾಗಿ ಕಳೆದ ಶತಮಾನದಲ್ಲಿ ಹೊಸ ಹೊಸ ಸಾಹಿತ್ಯ ಪ್ರಕಾರಗಳು ಈ ಕಾಲದಲ್ಲಿ ಕಾಣಿಸಿಕೊಂಡವು. ಸಾಹಿತ್ಯದ ವಸ್ತು, ಪುರಾಣ ಇತಿಹಾಸಗಳಿಂದ ದೂರವಾಗಿ ಸಮಾಜ ಜನಜೀವನಗಳಿಗೆ ಹತ್ತಿರವಾಯಿತು. ಗದ್ಯ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಿತು. ಮುದ್ರಣ, ಗ್ರಂಥಪ್ರಕಟಣೆ, ನಿಯತಕಾಲಿಕೆಗಳು, ಪತ್ರಿಕೆಗಳು– ಇವುಗಳಿಂದಾಗಿ ಸಾಹಿತ್ಯ ಅರಮನೆ ಗುರುಮನೆಗಳಿಂದ ಹೊರಬಂದು ಎಲ್ಲರ ಸ್ವತ್ತಾಯಿತು. ರಾಷ್ಟ್ರಜೀವನದ ಈ ಪರಿಸ್ಥಿತಿಯಿಂದ ಕನ್ನಡವೇನೂ ಬೇರೆಯಾಗಿರಲಿಲ್ಲ. ಇಲ್ಲಿನ ಚಟುವಟಿಕೆಗಳು, ರಾಷ್ಟ್ರದ ಇತರ ಭಾಗಗಳಿಗೆ ಹೋಲಿಸಿದರೆ, ಆರಂಭವಾಗುವುದರಲ್ಲಿ ಸ್ವಲ್ಪ ನಿಧಾನವಾಗಿರಬಹುದು. ಆದರೆ ಸ್ವರೂಪದಲ್ಲಿ ಮಾತ್ರ ಯಾವ ಬದಲಾವಣೆಯೂ ಇರಲಿಲ್ಲ. ಆದ್ದರಿಂದ ಈ ಶತಮಾನವನ್ನು ಡಾ. ಹಾವನೂರ ಅವರು ಹೊಸಗನ್ನಡದ ಅರುಣೋದಯದ ಕಾಲವೆಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ. ಈ 'ಮಹಾ ಬೆಳಗಿ'ನ ಕಥೆಯನ್ನು ನಿರೂಪಿಸುವ ಅದೃಷ್ಟ ಅವರ ಪಾಲಿನದಾಗಿದೆ.

ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಹತ್ತೊಂಬತ್ತನೆಯ ಶತಮಾನದ ಮಹತ್ವವನ್ನು ಎಲ್ಲರೂ ಒಪ್ಪಿರುವರಾದರೂ, ಆ ಕಾಲದ ಸಾಹಿತ್ಯ ಇತಿಹಾಸವನ್ನು ರಚಿಸಲು ಮಾತ್ರ ಇದುವರೆಗೆ ಯಾರೂ ಮುಂದೆ ಬರದಿದ್ದುದು ವ್ಯಥೆಯ ಮಾತಾದರೂ ಆಶ್ಚರ್ಯ ಎನ್ನಿಸುವುದಿಲ್ಲ. ಏಕೆಂದರೆ ಈ ಶತಮಾನದ ಚಟುವಟಿಕೆಗಳ ವೈವಿಧ್ಯ ವಿಸ್ತಾರಗಳನ್ನೂ ಇತಿಹಾಸ ನಿರೂಪಣೆಗೆ ಅಗತ್ಯವಾದ ಆಕರಗಳ ಕೊರತೆಯನ್ನೂ ಬಲ್ಲ ಯಾರಿಗೇ ಆದರೂ, ಈ ಕೆಲಸಕ್ಕೆ ಕೈ ಹಾಕುವವರಿಗೆ ಹೆಚ್ಚಿನ ಧೈರ್ಯ ತಾಳ್ಮೆಗಳು ಇರಬೇಕೆನ್ನುವುದು ಸ್ಪಷ್ಟವಾಗಿತ್ತು. ಸಂಶೋಧನೆಯಲ್ಲಿ ದಿಢೀರ್ ಖ್ಯಾತಿಯನ್ನೂ, ಶೀಘ್ರ ಪ್ರತಿಫಲವನ್ನೂ ಬಯಸುವ ಯಾರೇ ಆದರೂ ಈ ವಿಷಯವನ್ನು ಆಯ್ದುಕೊಳ್ಳುವುದು ಸಾಧ್ಯವಿರಲಿಲ್ಲ. ಈ ಬಗೆಯ ಸಂಶೋಧನೆಗೆ ಅಗತ್ಯವಾದ ಅನುಕೂಲ ಅವಕಾಶಗಳು ನಮ್ಮಲ್ಲಿಲ್ಲ. ದೊಡ್ಡ ಅಡಚಣೆಯೆಂದರೆ ಆಕರ ಸಾಮಗ್ರಿಯ ಕೊರತೆ. ಮೊದಲಿನಿಂದಲೂ ನಮ್ಮಲ್ಲಿ ಚಾರಿತ್ರಿಕ ಪ್ರಜ್ಞೆ ಬೆಳೆದು ಬರಲಿಲ್ಲ. ಮಾಡಿದ ಕೆಲಸ ಮುಖ್ಯ, ಮಾಡಿದವನೇನು ಮಹಾ ಎಂಬ

ತಾತ್ತ್ವಿಕ ಧೋರಣೆಯನ್ನು ಬೆಳೆಸಿಕೊಂಡು ಬಂದದ್ದರಿಂದ ನಮಗೆ ನಮ್ಮ ಎಷ್ಟೋ ಕವಿ ಕಲಾವಿದರ, ಋಷಿ ಸಂತರ ಕಾಲ ಗೊತ್ತಿಲ್ಲ. ಅವರ ಜೀವನ ವಿಚಾರ ತಿಳಿಯದು. ತಿಳಿದ ಅಲ್ಪ ಸ್ವಲ್ಪ ವಿಚಾರಗಳೂ ವಾದಗ್ರಸ್ತ. ಧೋರಣೆ ಭಿನ್ನವಾಗಿದ್ದರೂ ಪರಿಸ್ಥಿತಿಯಲ್ಲಿ ಮಾತ್ರ ಈಗಲೂ ಬದಲಾವಣೆಯಿಲ್ಲ. ಇಂದೂ ದಾಖಲೆಗಳನ್ನು ನಾವು ಉದಾಸೀನತೆಯಿಂದ ಕಾಣುತ್ತೇವೆ. ಅವನ್ನು ಉಳಿಸಬೇಕೆಂಬ ತಿಳಿವಳಿಕೆ ವಿದ್ಯಾವಂತರಾದವರಲ್ಲಿಯೂ ಇಲ್ಲ. ವ್ಯಕ್ತಿಗಳೇನು? ಸಂಘ ಸಂಸ್ಥೆಗಳಲ್ಲಿಯೂ ಈ ದೃಷ್ಟಿ ಇಲ್ಲವಾಗಿದೆ. ಪುಸ್ತಕ ಭಂಡಾರ, ವಾಚನಾಲಯಗಳಲ್ಲಾದರೂ ವರ್ತಮಾನ ಪತ್ರಿಕೆಗಳನ್ನು ನಿಯತಕಾಲಿಕೆಗಳನ್ನು ಸಂಗ್ರಹಿಸಿಡಬೇಕೆನ್ನುವ ಯೋಚನೆ ಇಲ್ಲ. ಪತ್ರಿಕೆಗಳ ಕಛೇರಿಗಳಲ್ಲಿಯೂ ಹಿಂದಿನ ಸಂಚಿಕೆಗಳು ದೊರೆಯುವುದಿಲ್ಲ. ಸಮಕಾಲೀನ ಇತಿಹಾಸ ರಾಜಕೀಯ ಮೊದಲಾದವನ್ನು ಕುರಿತು ಸಂಶೋಧಕ ಏನು ಮಾಡಬೇಕು? ನಮ್ಮ ಸಹಕಾರ ಸಂಘಗಳ ವಾರ್ಷಿಕ ವರದಿಗಳನ್ನೂ ಜೋಪಾನವಾಗಿ ತೆಗೆದಿಡಬೇಕಾದದ್ದು ಗ್ರಂಥಭಂಡಾರಗಳ ಕರ್ತವ್ಯ. ಇಲ್ಲದಿದ್ದರೆ ಹತ್ತು ವರ್ಷದ ಹಿಂದಿನ ಸಹಕಾರಿ ಚಟುವಟಿಕೆಗಳ ಬಗ್ಗೆ ಸಂಶೋಧನೆ ನಡೆಸುವವರಿಗೆ ಈ ಗ್ರಂಥಭಂಡಾರಗಳು ಏನು ನೆರವು ನೀಡುತ್ತವೆ? ನಮ್ಮ ವಿಶ್ವವಿದ್ಯಾನಿಲಯದ ಗ್ರಂಥಭಂಡಾರಕ್ಕೆ ಕನ್ನಡದಲ್ಲಿ ಪ್ರಕಟವಾಗುತ್ತಿರುವ ಪತ್ತೇದಾರಿ ಕಾದಂಬರಿಗಳನ್ನು ಕೊಳ್ಳಬೇಕೆಂದು ಸಲಹೆ ಬಂದಾಗ ಪ್ರಖ್ಯಾತ ವಿದ್ವಾಂಸ ಪ್ರಾಧ್ಯಾಪಕರೊಬ್ಬರು ರೇಗಿದ್ದು ನನಗೆ ಚೆನ್ನಾಗಿ ನೆನಪಿದೆ. ಅದಕ್ಕೆ ಪ್ರತಿಯಾಗಿ "ಹತ್ತು ವರ್ಷಗಳಾದ ಮೇಲೆ ಒಬ್ಬ ವಿದ್ಯಾರ್ಥಿ 'ಕನ್ನಡದಲ್ಲಿ ಪತ್ತೇದಾರಿ ಕಾದಂಬರಿ' ಎಂಬ ವಿಷಯದ ಮೇಲೆ ಸಂಶೋಧನೆ ನಡೆಸುತ್ತಾನೆ ಎಂದಿಟ್ಟುಕೊಳ್ಳಿ. ಅವನಿಗೆ ನಮ್ಮ ವಿಶ್ವವಿದ್ಯಾನಿಲಯದ ಪುಸ್ತಕ ಭಂಡಾರದಿಂದ ಏನು ನೆರವು ದೊರೆಯುತ್ತದೆ? ವಿಮರ್ಶಕರಾಗಿ ಬೇಡ, ಸಂಶೋಧಕರಾಗಿ ಹೇಳಿ" ಎಂದು ನಾನು ಕೇಳಿದಾಗ ಅವರು ಉತ್ತರ ಕೊಡದೆ ಹೋದರು! ಇವತ್ತು ಪ್ರಕಟವಾಗುತ್ತಿರುವ ನಮ್ಮ ಎಷ್ಟೋ ಪುಸ್ತಕಗಳಲ್ಲಿ ಪ್ರಕಟಣೆಯ ವರ್ಷವೇ ನಮೂದಾಗಿರುವುದಿಲ್ಲ; ಹಿಂದಿನ ಮುದ್ರಣಗಳ ಪ್ರಸ್ತಾಪ ವಿರುವುದಿಲ್ಲ. ಇವನ್ನು ಇಟ್ಟುಕೊಂಡ ಸಂಶೋಧಕ ಏನು ಮಾಡಬೇಕು? ನಮ್ಮ ಸಮಕಾಲೀನ ಲೇಖಕರು ಕೆಲವರ ಕೃತಿಗಳೇ ಇಂದು ನೋಡಲು ದೊರೆಯುವುದಿಲ್ಲ. ಬೇರೆಡೆ ಬೇಡ, ಲೇಖಕರ ಬಳಿಯೇ ಅವುಗಳ ಪ್ರತಿಗಳು ಇಲ್ಲ. ಕೆಲವರು ಲೇಖಕರಿಗೆ ತಾವು ಪ್ರಕಟಿಸಿರುವ ಕೃತಿಗಳ ಸಂಖ್ಯೆಯೂ ತಿಳಿಯದು. ಇಂದಿನ ಸ್ಥಿತಿಯೇ ಹೀಗಿರುವಾಗ ನೂರು ವರ್ಷಗಳ ಹಿಂದಿನ ಸ್ಥಿತಿಯನ್ನು ವರ್ಣಿಸಬೇಕಾಗಿಲ್ಲ. ಆ ಕಾಲಕ್ಕೆ ಸಂಬಂಧಿಸಿದ ಸಂಶೋಧನೆ ನಡೆಸುವವರಿಗೆ ಹೆಜ್ಜೆ ಹೆಜ್ಜೆಗೂ ತೊಡಕು; ಮಾತು ಮಾತಿಗೂ ಅನುಮಾನ.

ಡಾ. ಹಾವನೂರರು ತುಂಬ ಶ್ರಮವಹಿಸಿ, ಅನೇಕ ವರ್ಷ ತಾಳ್ಮೆಯಿಂದ ಕೆಲಸ ಮಾಡಿ, ದುರ್ಲಭವಾಗಿರುವ ಮಾಹಿತಿಗಳನ್ನು ಸಂಗ್ರಹಿಸಿ, ಆಕರಗಳನ್ನು ಕಲೆಹಾಕಿ

ಮೊದಲ ಬಾರಿಗೆ ಹತ್ತೊಂಬತ್ತನೆಯ ಶತಮಾನದ ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ವಿವರಿಸಿದ್ದಾರೆ. ಹೊಸಗನ್ನಡ ಗದ್ಯದಲ್ಲಿ ಬೈಬಲ್ ಭಾಷಾಂತರಕ್ಕೆ ಸಿದ್ಧನಾದ ಜಾನ್ ಹ್ಯಾಂಡ್ಸ್ ಇಲ್ಲಿಗೆ ಬಂದ ವರ್ಷವನ್ನು (೧೮೦೯) ಅವರು ಹೊಸಗನ್ನಡದ ಅರುಣೋದಯ ಕಾಲದ ಆರಂಭ ವರ್ಷವೆಂದು ಇಟ್ಟುಕೊಂಡಿದ್ದಾರೆ; ಹೊಸ ಕಾದಂಬರಿಯ ಪ್ರಧಾನ ಲಕ್ಷಣಗಳನ್ನೊಳಗೊಂಡ ಸ್ವತಂತ್ರ ಸಾಮಾಜಿಕ ಕಾದಂಬರಿ 'ಇಂದಿರಾಬಾಯಿ' ಪ್ರಕಟನೆಯಾದ ವರ್ಷದ (೧೮೯೯) ವರೆಗೆ ಈ ಅವಧಿಯ ಹರವನ್ನು ಗುರುತಿಸಿದ್ದಾರೆ.

ಈ ಅವಧಿಯಲ್ಲಿ ಸಾವಿರದ ಐನೂರಕ್ಕೂ ಹೆಚ್ಚು ಪುಸ್ತಕಗಳು ಪ್ರಕಟವಾಗಿವೆ. ಸುಮಾರು ಎಂಬತ್ತಕ್ಕೂ ಹೆಚ್ಚು ಪತ್ರಿಕೆಗಳು ಬೆಳಕು ಕಂಡಿವೆ. ಹತ್ತಿರ ಹತ್ತಿರ ನೂರು ಮುದ್ರಣಾಲಯಗಳು ಸ್ಥಾಪಿತವಾಗಿ ಪತ್ರಿಕೆ, ಗ್ರಂಥೋದ್ಯಮ ಕಾರ್ಯಗಳನ್ನು ಕೈಗೊಂಡಿವೆ. ಒಂಬತ್ತು ದಶಕಗಳಷ್ಟು ದೀರ್ಘಕಾಲದ ಇಷ್ಟು ಬಗೆ ಬಗೆಯಾದ ಕಾರ್ಯ ಚಟುವಟಿಕೆಗಳನ್ನು ಸಂಬಂಧಿತ ಇತಿಹಾಸವನ್ನಾಗಿ ನಿರೂಪಿಸುವುದು ತುಂಬ ಕಷ್ಟದ ಕೆಲಸ. ಅದರಲ್ಲಿಯೂ ಆಕರಗಳ ಕೊರತೆಯನ್ನು ಗಮನಿಸಿದಾಗ ಈ ಕಷ್ಟ ಇನ್ನು ಹೆಚ್ಚಿನದಾಗಿ ತೋರುತ್ತದೆ. ಆದರೂ ಡಾ. ಹಾವನೂರರು ತುಂಬ ಸಮರ್ಥವಾಗಿ ಸಮರ್ಪಕವಾಗಿ ತಮ್ಮ ಕೆಲಸವನ್ನು ನಿರ್ವಹಿಸಿದ್ದಾರೆಂಬುದು ಸಂತೋಷದ ಮಾತು. ಈ ಗ್ರಂಥವನ್ನು ಪರಿಶೀಲಿಸುವ ಯಾರಿಗಾದರೂ ಅವರ ದುಡಿಮೆಯ ಮಹತ್ವ ಅನುಭವಕ್ಕೆ ಬರುತ್ತದೆ. ಇದಕ್ಕಾಗಿ ನಾನು ಡಾ. ಹಾವನೂರರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಡಾ. ಹಾವನೂರರು ಪುಸ್ತಕ ಪ್ರಪಂಚದ ಪಳೆಯುಳಿಕೆಗಳ ಪ್ರೇಮಿ. ಹಳೆಯ ಪುಸ್ತಕದ ಅಂಗಡಿಗಳು, ಗ್ರಂಥ ಭಂಡಾರಗಳು ಅವರ ಯಾತ್ರಾಸ್ಥಳಗಳು. ಹಳೇ ಪತ್ರಿಕೆಯ ಚೂರುಗಳಿಂದ ಅವರನ್ನು ಯಾರೂ ಆಕರ್ಷಿಸಬಹುದು. ಅವರ ಕೈಚೀಲದಲ್ಲಿ ಯಾವಾಗಲೂ ಬಹು ಜನರು ನೋಡಿರದ, ಕೆಲವರಾದರೂ ನೋಡಲು ಚಡಪಡಿಸುವ ಹಳೆಯ ಪುಸ್ತಕ, ಪತ್ರಿಕೆಗಳೋ, ಕಾಗದ ಪತ್ರಗಳೋ ಒಂದೆರಡಾದರೂ ಇದ್ದೇ ಇರುತ್ತವೆ. ತಮ್ಮ ಹೇಳಿಕೆಗಳನ್ನು ಕೇವಲ ಎರಡನೆಯವರ ಹೇಳಿಕೆಗಳ ಮೇಲೆ ಸ್ಥಾಪಿಸಲು ಸಾಮಾನ್ಯವಾಗಿ ಅವರು ಇಷ್ಟಪಡುವುದಿಲ್ಲ. ಎಷ್ಟೇ ಕಷ್ಟವಾಗಲಿ, ನಷ್ಟ ಬರಲಿ ಮೂಲ ಆಕರಗಳನ್ನು ಕಣ್ಣಾರೆ ಕಂಡು ಬಳಸಬೇಕೆಂಬ ಛಲಗಾರರು ಅವರು. ಆದ್ದರಿಂದಲೇ 'ಹೊಸಗನ್ನಡದ ಅರುಣೋದಯ' ಗ್ರಂಥದಲ್ಲಿ ಅನನ್ಯವಾದ ಒಂದು ಅಧಿಕೃತತೆ ತುಂಬಿದೆ. ಇದು ಒಂದು ವಿಧದಲ್ಲಿ ತುಂಬ ವಿಶಿಷ್ಟವಾದ 'ಹಾವನೂರುತನ'!

ಮೂಲಗ್ರಂಥ, ಪತ್ರಿಕೆಗಳಿಂದ ಡಾ. ಹಾವನೂರರು ಎತ್ತಿಕೊಡುವ ಉದಾಹರಣೆಗಳಿಂದ ಅವರ ಅಭಿರುಚಿಯನ್ನೂ, ಔಚಿತ್ಯ ಪ್ರಜ್ಞೆಯನ್ನೂ ಗುರುತಿಸಬಹುದು. ವಿಷಯ ನಿರೂಪಣೆ ತಾರ್ಕಿಕವಾಗಿದ್ದು ಹೇಳಬೇಕೆನ್ನುವಷ್ಟಕ್ಕೇ ಸೀಮಿತವಾಗಿರುತ್ತದೆ. ಸಂಶೋಧಕನಿಗೆ ಅಗತ್ಯವಾದ ಖಚಿತತೆ ನಿರ್ದುಷ್ಟತೆಗಳ ಕಡೆ ಅವರು ಹೆಚ್ಚಿನ ಗಮನ ನೀಡಿದ್ದಾರೆ. ಅವರ ಶೈಲಿ

ಇನ್ನಷ್ಟು ಲಲಿತವಾಗಿರಬಹುದಿತ್ತೆಂದು ನನ್ನಂಥವರಿಗೆ ಅನ್ನಿಸಬಹುದೇನೋ ಏನೊ.

ಕೇವಲ ಚರಿತ್ರೆಯ ಅಂಶಗಳು ತುಂಬಿಕೊಂಡಿರದೆ ವಿಮರ್ಶೆಯೂ, ಮೌಲ್ಯಮಾಪನವೂ ಈ ಬರಹದಲ್ಲಿ ಹೊಳವು ಹಾಕಿರುವುದು ಒಂದು ವಿಶೇಷ. ಅತ್ಯುತ್ತಮವಾದ ಸಾಹಿತ್ಯ ಚರಿತ್ರೆ ಮಾಡಬೇಕಾದ ಕೆಲಸವೇ ಇದು. ಕೆಲ ಸಂದರ್ಭಗಳಲ್ಲಿ ಡಾ. ಹಾವನೂರರು ಮೌಲಿಕವಾಗಿ ವಿಚಾರ ವಿವೇಚನೆ ಮಾಡಿದ್ದಾರೆ; ಹೊಸ ಆಧಾರಗಳನ್ನು ಕಲೆಹಾಕಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಕುರಿತಂತೆ ಇಷ್ಟು ವಿಚಾರಗಳು ಈವರೆಗೆ ಒಂದೆಡೆ ಪ್ರಕಟವಾಗಿದ್ದು ನನಗೆ ತಿಳಿಯದು. ಕ್ರೈಸ್ತ ಮಿಶನರಿಗಳ ಸಾಹಿತ್ಯದ ಇತಿಮಿತಿಗಳನ್ನೂ ಕೊಡುಗೆಗಳನ್ನೂ ಚರ್ಚಿಸಿರುವ ರೀತಿ ಮೆಚ್ಚುವಂಥದು. ಕನ್ನಡ ಪತ್ರಿಕೋದ್ಯಮದ ಆರಂಭದ ಬಗೆಗೆ ಈತನಕ ಬೆಳೆದು ಬಂದ ಅಭಿಪ್ರಾಯ ತಪ್ಪಾಗಿರುವುದನ್ನು ಡಾ. ಹಾವನೂರರು ಸಾಧಾರವಾಗಿ ತೋರಿಸಿಕೊಟ್ಟು, ಆ ದಾಖಲೆಗಳನ್ನು ಸರಿಪಡಿಸಿದ್ದಾರೆ. ಕಳೆದ ಶತಮಾನದಲ್ಲಿ ಕರ್ಣಾಟಕದಲ್ಲಿ ಮುದ್ರಣಾಲಯಗಳು ಆರಂಭವಾಗಿ ಬೆಳೆದುಕೊಂಡು ಬಂದ ಬಗೆಯನ್ನು ವಿವರಿಸಿರುವುದು ಈ ಗ್ರಂಥದ ಅತ್ಯುಪಯುಕ್ತವಾದ ಒಂದು ಭಾಗವಾಗಿದೆ.

'ಹೊಸಗನ್ನಡದ ಅರುಣೋದಯ' ಒಂದು ಅಪರೂಪದ ಆಕರಗ್ರಂಥ; ಶ್ರೇಷ್ಠವಾದ ಸಂಶೋದನ ಗ್ರಂಥ. ನಮ್ಮ ಸಾಹಿತ್ಯ ಚರಿತ್ರೆಯ ಮುಂದಿನ ಸಂಶೋಧಕರು ಇದಕ್ಕೆ ಹೊಸ ವಿಷಯಗಳನ್ನು ಸೇರಿಸಬಹುದು; ಇದರ ಕೊರತೆಗಳನ್ನೂ ಹೇಳಬಹುದು. ಆದರೆ ಇದನ್ನು ಅಭ್ಯಸಿಸದೆ, ಆಧಾರವಾಗಿಟ್ಟುಕೊಳ್ಳದೆ ಹತ್ತೊಂಬತ್ತನೆಯ ಶತಮಾನಕ್ಕೆ ಸಂಬಂಧಿಸಿದ ಕೆಲಸ ಮಾಡುವುದು ಮಾತ್ರ ಖಂಡಿತ ಸಾಧ್ಯವಿಲ್ಲ.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು, ಮಾರ್ಚಿ ೧೦, ೧೯೭೪

**ಹಾ. ಮಾ. ನಾಯಕ**

# ಲೇಖಕನ ಟಿಪ್ಪಣಿ
## (೨ನೇ ಆವೃತ್ತಿಯ ಕಾಲಕ್ಕೆ)

ಈ ಗ್ರಂಥದ ಹಸ್ತಪ್ರತಿಯನ್ನು ಪುಣೆ ವಿಶ್ವವಿದ್ಯಾಲಯದ ಪಿಎಚ್.ಡಿ ಪದವಿಗಾಗಿ ಸಾದರಪಡಿಸುವಾಗ ಡಾ.ಹಾ.ಮಾ. ನಾಯಕರು (ಅವರಂತೆ ದಿ. ಮರಿಯಪ್ಪ ಭಟ್ಟರು) ಪರೀಕ್ಷಕರಾಗಿ ಹಸ್ತಪ್ರತಿಯನ್ನು ಪರಿಶೀಲಿಸಿದ್ದರು. ಇವರಿಬ್ಬರೂ ಆಗ ನನ್ನ ಮೌಖಿಕ ಪರೀಕ್ಷೆ ತಗೊಳ್ಳುವ ಅಗತ್ಯವಿಲ್ಲ; ಡಿಗ್ರಿ ಕೊಡಬಹುದು, ಎಂದು ವಿಶ್ವವಿದ್ಯಾಲಯಕ್ಕೆ ತಿಳಿಸಿದ್ದರು. ಹೀಗಾಗಿ ನನ್ನ, ಡಾ. ಹಾ.ಮಾ.ನಾಯಕರ ಪರಸ್ಪರ ಪರಿಚಯ ತಪ್ಪಿಹೋಯಿತು. ಅದಾಗಿ ಒಂದೆರಡು ವರ್ಷ ಕಳೆದ ಮೇಲೆ ಅವರನ್ನು ಕಂಡಿದ್ದೆ. ಪ್ರಕಟಣೆಯ ಬಗ್ಗೆ ವಿಚಾರಿಸಿದರು. 'ಅದರ ಪ್ರಕಟನೆ ಆಗಿಲ್ಲ; ಸಾಧ್ಯವೂ ಇಲ್ಲ', ಎಂದು ನಾನು ಹೇಳಿದಾಗ ಕನ್ನಡ ಅಧ್ಯಯನ ಸಂಸ್ಥೆಯ ವತಿಯಿಂದ ಪ್ರಕಟಿಸಿದರು. ಮೇಲ್ಕಂಡ ಉದಾರ ಭಾವದ ಮುನ್ನುಡಿಯನ್ನೂ ಬರೆದರು.

ಆ ಮುಂದೆಯೂ ಅವರು ನನ್ನ ಅಕಡೆಮಿಕ್ ವೃತ್ತಿಯಲ್ಲಿ ಅಸ್ಥೆ ವಹಿಸಿದರು. ಮುಂಬಯಿಯ ಟಾಟಾ ಮೂಲಭೂತ (ವಿಜ್ಞಾನ) ಸಂಶೋಧನ ಸಂಸ್ಥೆಯಲ್ಲಿದ್ದ ನಾನು ಆ ಸಂಸ್ಥೆಯಿಂದ ಸ್ವ-ಇಚ್ಛೆಯ ನಿವೃತ್ತಿ ಪಡೆಯ ಬಯಸಿದ್ದಾಗ, ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಮುಖ್ಯಸ್ಥನಾಗುವುದಕ್ಕೆ ಶಿಫಾರಸು ಮಾಡಿದವರು, ನಾಯಕರು. "ನನಗೆ ಕಾಲೇಜ್, ವಿಶ್ವವಿದ್ಯಾಲಯಗಳಲ್ಲಿ ಕಲಿಸಿದ ಅನುಭವವಿಲ್ಲ. ಅದ್ಹೇಗೆ ಶಿಫಾರಸು ಮಾಡಿದಿರಿ?" ಎಂಬ ಸಂಶಯ ವ್ಯಕ್ತಪಡಿಸಿದೆ. "ಸ್ನಾತಕೋತ್ತರ ವಿಭಾಗದಲ್ಲಿ ಸಂಶೋಧನೆ ಮುಖ್ಯ. ನಿಮ್ಮ 'ಹೊಸಗನ್ನಡದ ಅರುಣೋದಯ'ದ ಸಂಶೋಧನದ ಅನುಭವ ಸಾಕು" ಎಂದಿದ್ದರು.

ಎರಡು ವರ್ಷ ಕಳೆದಾದ ಮೇಲೆ, ಮತ್ತೆ ನಾನು ಮಂಗಳೂರು ವಿಶ್ವವಿದ್ಯಾಲಯದಿಂದ ನಿವೃತ್ತನಾಗಬಯಸಿದ್ದೆ. ಹಾ. ಮಾ. ನಾಯಕರು ಹೇಳಿದರು: "ಮುಂಬಯಿ ವಿಶ್ವವಿದ್ಯಾಲಯದಲ್ಲಿ ಕನ್ನಡ ಹುದ್ದೆ ಖಾಲಿ ಇದೆ. ಅರ್ಜಿ ಹಾಕಿದ್ದೀರಲ್ಲವೆ?" ನಾನು "ಇಲ್ಲ. ಮುಂಬಯಿ ವಾಸ ನನಗೆ ಬೇಡವಾಗಿದೆ" ಎಂದೆಲ್ಲ ಗೋಗರೆದೆ. ನಾಯಕರು ಹೇಳಿದರು "ಇದು, ಕೂಡದು. ಮದ್ರಾಸದಲ್ಲಿ ಕನ್ನಡ ನಿರ್ಜೀವವಾಗುತ್ತ ನಡೆದ ಹಾಗೆ, ಮುಂಬಯಿಯಲ್ಲಿ ಆಗಕೂಡದು. ನೀವು ಅರ್ಜಿ ಹಾಕಲೇಬೇಕು" ಎಂದು ಹೇಳಿ ಐದು ವರ್ಷ ನಾನು ಅಲ್ಲಿ ಇರುವಂತೆ ಮಾಡಿದರು. ಹೀಗೆ ನನ್ನ ಪಿಎಚ್.ಡಿ.ಯ ಮುಂದಿನ ಅಕಡೆಮಿಕ್ ಶ್ರೇಯಸ್ಸಿಗೆ ಅವರೇ ಕಾರಣರಾದರು. ಆ

ಮುಂದೆಯೂ ನನ್ನಲ್ಲಿ ಅವರು ಇಟ್ಟಿದ್ದ ಅಸ್ಥೆ, ತೋರಿದ ಆತ್ಮೀಯತೆ ಅನನ್ಯವಾದದ್ದು.

'ಅರುಣೋದಯ'ದ ಮರು ಪ್ರಕಟಣೆಯ ವಿಷಯ ಅವರಿಗೆ ಹೇಳಿಯೆ ಇದ್ದೆ. ಈಚೆಗೆ ಭೆಟ್ಟಿಯಾದಾಗ, 'ಮುದ್ರಣ ಮುಗೀತಾ' ಬಂದಿದೆ ಎಂದಾಗ ಸಂತೋಷಪಟ್ಟಿದ್ದರು. "ನನಗೊಂದು ಪ್ರತಿ ಕೊಡ್ತೀರಿ, ತಾನೇ" ಎಂದು ನಕ್ಕು ನುಡಿದಿದ್ದರು.

ಈ ಗ್ರಂಥದ ಮುಖಪುಟದ ಮುದ್ರಣವೂ ಮುಗೀತಾ ಬಂದಾಗ ಆ ಕೆಟ್ಟ ಸುದ್ದಿ ಬಂತು – ಹಾ.ಮಾ. ನಾಯಕರು ಇನ್ನಿಲ್ಲ, ಎಂದು. ಸುಧಾರಿತ ಆವೃತ್ತಿಯ ಈ ಗ್ರಂಥವನ್ನು ಅವರಿಗೆ ಅರ್ಪಿಸುತ್ತಿದ್ದೇನೆ. ಅವರು ಕೇಳಿದ್ದ ಒಂದು ಪ್ರತಿ ಏಕೆ, ಎಲ್ಲ ಪ್ರತಿಗಳನ್ನೂ ಅವರಿಗೆ ಸಲ್ಲಿಸಿದಂತಾಯಿತೆಂದು ಬಗೆಯುವೆ.

೨೭ ನವೆಂಬರ್ ೨೦೦೦ — **– ಶ್ರೀನಿವಾಸ ಹಾವನೂರ**

# ಮೂರೇ ಮಾತು

ಈ ಗ್ರಂಥದ ಅಪರೂಪದ ೩ನೆಯ ಆವೃತ್ತಿಗಾಗಿ ಹೇಳಬೇಕಾದ್ದು ಮೂರೇ ಮಾತು. ಅದೂ ಕೃತಜ್ಞತೆಯ ಸ್ವರೂಪದ್ದು. ಹೊಸ ಆವೃತ್ತಿ ಎಂದೊಡನೆ ಇನ್ನಷ್ಟು ವಿಷಯ ಸೇರಿಸುವ ಪರಿಪಾಠ ಇರುತ್ತದೆ, ಇಲ್ಲ; ನಾನು ಹಾಗೆ ಮಾಡದೇ ೩೫ ವರ್ಷಗಳ ಹಿಂದೆ ಅಗತ್ಯವೆನಿಸಿದ್ದ ಕೆಲ ವಿಷಯಗಳನ್ನು ಬಿಟ್ಟಿದ್ದೇನೆ. ಬದಲಾಗಿ, ಈಚೆಗೆ ಎರಡು ಬಾರಿ ವಿದೇಶಕ್ಕೆ ಹೋದಾಗ ದೊರೆತ ಹೊಸ ಸಾಮಗ್ರಿಯನ್ನು ಸೇರಿಸಿದ್ದೇನೆ. ಉದಾಹರಣೆಗೆ ಹಿಂದಿನ ಕಾಲದ ಬಾಸೆಲ್ ಮಿಶನ್ನಿನವರು ಕಿಟೆಲರ ವಿಷಯದಲ್ಲಿ ತೋರಿದ ಅಪಾರ ಅಲಕ್ಷ್ಯ. ಕಿಟೆಲರಾದರೂ ಅಷ್ಟೇ. ತಮಗೆ ಗೌರವ ಡಾಕ್ಟರೇಟ್ ಕೊಟ್ಟ ಟ್ಯೋಬಿಂಗೆನ್ ವಿಶ್ವವಿದ್ಯಾಲಯಕ್ಕೆ ಉಪಕಾರ ಸ್ಮರಣೆಯಾಗಿ ಅವರು ಇತ್ತದ್ದು ಮಿಶನರಿಯೊಬ್ಬ ಹೊಸ ತಾಡವೋಲೆ ಮೇಲೆ ಬರೆದ ಶಬ್ದ ಮಂಜರಿಯ ಕೇವಲ ೧೦ ಪುಟಗಳ ಹಸ್ತಪ್ರತಿ ಮಾತ್ರ!

ಈ ನನ್ನ ಇಳಿಯವಯಸ್ಸಿನಲ್ಲಿ ಗ್ರಂಥದ ೬೫೦ ಪುಟದಲ್ಲಿ ತಪ್ಪುಗಳನ್ನು ಒಪ್ಪುಗಳಿಸಲು ಸಾಹಸ ಪಟ್ಟವರು ಶ್ರೀ ವಿ.ಕೃಷ್ಣ ಅವರು.

ಇನ್ನೊಂದು ರೀತಿಯಲ್ಲಿ ನೆರವಾದವರು ಶ್ರೀ ಕಾರ್ತಿಕ ಅವರು. ನಿಶ್ಚಿತವಾಗಿ ಮುಂದೆ ಸಂಶೋಧಕರಾಗುವ ಯೋಗ್ಯತೆಯುಳ್ಳವರು. ಮುಮ್ಮಡಿ ಕೃಷ್ಣರಾಜರ ಹೆಸರಿನ ಗ್ರಂಥಗಳನ್ನು ಒರೆಗೆ ಹಚ್ಚಿ ಸರಿಪಡಿಸಿದವರು. ಇಡೀ ಪ್ರಕರಣವನ್ನೇ ಮರಳಿ ಬರೆದರು.

ಗಣಕ ಪರಿಷತ್ತಿನವರು ಶ್ರೀ ನರಸಿಂಹಮೂರ್ತಿಗಳ ನೇತೃತ್ವದಲ್ಲಿ ಈ ಗ್ರಂಥವನ್ನು ಮರು ನಿರ್ಮಿಸಿದ್ದಾರೆ. ಈ ವಿಷಯದಲ್ಲಿ ಅವರು ಮತ್ತು ಅವರ ಸಿಬ್ಬಂದಿಯವರು ತೋರಿದ ನಿಷ್ಠೆ ಮನನೀಯವಾದದ್ದು. ಎಂದಿನಂತೆ ಇಂದೂ ಅದೇ ರೀತಿಯ ಸಹಾಯ ಸಲ್ಲಿಸಿದ್ದಾರೆ.

Last but not the least ಎಂಬ ಮಾಮೂಲಿಯ ವಾಕ್ಯವನ್ನು ಇಲ್ಲಿ ಉಪಯೋಗಿಸಿದರೂ ಪುಸ್ತಕ ಪ್ರಾಧಿಕಾರದ ಡಾ.ಸಿದ್ದಲಿಂಗಯ್ಯನವರು ಈ ಗ್ರಂಥ ಆದ್ಯತೆಯ ಮೇಲೆ ಪ್ರಕಟವಾಗತಕ್ಕದೆಂದು ಹೇಳುತ್ತಲೇ ಇದ್ದರು. ನನ್ನಿಂದ ಮಾತ್ರ ತಡವಾಯಿತು. ಅವರು ವಹಿಸಿದ್ದ ಆಸ್ಥೆಗೆ ಬಾಗಿ ನಮಿಸುವೆ.

ಡಾ. ಶ್ರೀನಿವಾಸ ಹಾವನೂರ

# ಮುನ್ನುಡಿ
## (ಎರಡನೇ ಆವೃತ್ತಿಗೆ)

ಜ್ಞಾನ ಸಂಪಾದನೆ ಮತ್ತು ಜ್ಞಾನ ಪ್ರಸಾರಗಳ ಅತ್ಯಂತ ಪ್ರಬಲ ಮತ್ತು ಪರಿಣಾಮಕಾರೀ ಮಾಧ್ಯಮ ಅಕ್ಷರ ಮಾಧ್ಯಮ. ಈ ಮಾಧ್ಯಮದಲ್ಲಿ ಆಹ್ಲಾದಕಾರಿಯೂ, ಅತ್ಯಾಕರ್ಷಕವೂ, ಜೀವನ ಸೌಂದರ್ಯದಾಯಕವೂ, ಸಂಸ್ಕೃತಿ ಸಂಪನ್ನವೂ, ಬುದ್ಧಿ ಮನಸ್ಸುಗಳ ವರ್ಧಕವೂ ಆದ ಅಪೂರ್ವ ಮಾಧ್ಯಮವೇ ಸಾಹಿತ್ಯ. ನಿತ್ಯ ಪರಿವರ್ತನಾಶೀಲವಾದ ಜಗತ್ತಿನ ಜ್ಞಾನ ವಿಜ್ಞಾನ ಸಂಸ್ಕೃತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರವಹಣ ಮಾಡುತ್ತ ಮನುಷ್ಯನ ಜೀವನವನ್ನು ಪುಷ್ಟಿಗೊಳಿಸುತ್ತ, ತುಷ್ಟಿಗೊಳಿಸುತ್ತ, ವಿಕಾಸಗೊಳಿಸುತ್ತ, ಪೂರ್ಣ ದೆಸೆಯ ಕಡೆಗೆ ಅವನನ್ನು ಕರೆದೊಯ್ಯುವುದೇ ಇದರ ಪರಮ ಗುರಿ. ಇಂಥ ಜೀವನೋತ್ಥಾನಕಾರಿಯಾದ ಉತ್ತಮ ಜ್ಞಾನ ಸಂಪತ್ತನ್ನು ವಿಶಿಷ್ಟ ಹಾಗೂ ಅರ್ಥಪೂರ್ಣ ಗ್ರಂಥಗಳ ಮೂಲಕ ಕನ್ನಡ ಓದುಗರಿಗೆ ಒದಗಿಸುವ ಗುರುತರ ಜವಾಬ್ದಾರಿಯನ್ನು ಕನ್ನಡ ಪುಸ್ತಕ ಪ್ರಾಧಿಕಾರ ಹೊತ್ತುಕೊಂಡು ನಿರ್ವಹಿಸುತ್ತಿದೆ.

ಜ್ಞಾನ, ಸಂಸ್ಕೃತಿ ಮತ್ತು ಸಾಹಿತ್ಯ ಪ್ರಸಾರ ಕಾರ್ಯಕ್ಕೆ ಕರ್ನಾಟಕ ಸರ್ಕಾರ ಬಹು ಹಿಂದಿನಿಂದ ಒತ್ತಾಸೆ ನೀಡುತ್ತ ಬಂದಿದೆ. ಈ ಮೌಲಿಕ ಪರಂಪರೆಯನ್ನು ಆರಂಭಿಸಿದ ಕೀರ್ತಿ ಕರ್ನಾಟಕದ ಅತ್ಯಂತ ದಕ್ಷ ಹಾಗೂ ದೂರದೃಷ್ಟಿಯ ಮುಖ್ಯಮಂತ್ರಿಗಳಲ್ಲಿ ಒಬ್ಬರಾದ ಶ್ರೀ ಕೆಂಗಲ್ ಹನುಮಂತಯ್ಯ ಅವರಿಗೆ ಸಲ್ಲಬೇಕು. ಕನ್ನಡದ ಶ್ರೀಮಂತ ಸಾಂಸ್ಕೃತಿಕ ಪರಂಪರೆಯ ಶ್ರೇಷ್ಠ ಗ್ರಂಥಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ತಲುಪಿಸುವ ಕಾರ್ಯವನ್ನು ಅಂದಿನಿಂದ ನಿರ್ವಹಿಸುತ್ತ ಬಹು ಬೇಡಿಕೆಯ ನೂರಾರು ಕೃತಿಗಳನ್ನು ಸರ್ಕಾರ ಪ್ರಕಟಿಸಿ ಜನಮನ್ನಣೆಯನ್ನು ಗಳಿಸಿದೆ.

ಇದುವರೆಗೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಿಸುತ್ತಿದ್ದ ಇಂಥ ಪ್ರಾಚೀನ ಹಾಗೂ ಆಧುನಿಕ ಜನಪ್ರಿಯ ಪುಸ್ತಕಗಳನ್ನು ಈಗ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸುತ್ತಿದೆ. ಅಲಭ್ಯವಾಗಿರುವ ಹಾಗೂ ಬಹು ಬೇಡಿಕೆಯ, ಸಾಹಿತ್ಯ ಮೌಲ್ಯ ಮತ್ತು ವೈಚಾರಿಕ ಮೌಲ್ಯಗಳನ್ನು ಒಳಗೊಂಡಿರುವ ಕೃತಿಗಳನ್ನು ಅತ್ಯಂತ ಕಡಿಮೆ ಬೆಲೆಯಲ್ಲಿ ಕನ್ನಡದ ಸಹೃದಯರಿಗೆ ನೀಡುವುದೇ 'ಜನಪ್ರಿಯ ಪುಸ್ತಕ ಮಾಲೆ'ಯ ಮುಖ್ಯೋದ್ದೇಶ.

ಈ ಮಾಲೆಯಲ್ಲಿ ಇದೀಗ ಡಾ. ಶ್ರೀನಿವಾಸ ಹಾವನೂರ ಅವರ 'ಹೊಸಗನ್ನಡದ ಅರುಣೋದಯ' ಎಂಬ ಮಹತ್ವದ ಗ್ರಂಥ ಪ್ರಕಟವಾಗುತ್ತಿರುವುದು ಸಾಹಿತ್ಯ ಪ್ರಿಯರಿಗೆ

ತುಂಬಾ ಸಂತೋಷದ ಸಂಗತಿಯಾಗಿದೆ. ಡಾ. ಶ್ರೀನಿವಾಸ ಹಾವನೂರರು ಕನ್ನಡದ ಹಿರಿಯ ಶ್ರೇಣಿಯ ಸಂಶೋಧಕರಲ್ಲಿ ಅತಿ ಮುಖ್ಯರಾದವರು. ಎರಡು ವಿಶ್ವವಿದ್ಯಾನಿಲಯಗಳಲ್ಲಿ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯ, ಇತಿಹಾಸದ ಹೊಸಮುಖಗಳನ್ನು ಬೋಧಿಸಿದವರು ಮತ್ತು ಶೋಧಿಸಿದವರು. ಬಹು ವರ್ಷ ಕಾಲ ಗ್ರಂಥಗಳ ಒಡನಾಡಿಯಾಗಿ ಅವುಗಳ ಅಂತರ್ಯವನ್ನು ಕೂಲಂಕಷವಾಗಿ ಅರಿತ, ಅರಗಿಸಿಕೊಂಡ ಶ್ರೇಷ್ಠ ವಿದ್ವಾಂಸರಾಗಿ ಸಂಶೋಧನಾ ಲೋಕದಲ್ಲಿ ಅಪಾರ ಕೀರ್ತಿಯನ್ನು ಪಡೆದ ಪ್ರತಿಭಾವಂತರು. ಅವರ ಯಾವುದೇ ಬರಹ ಅಥವಾ ಕೃತಿಯಲ್ಲಿ ವಿಷಯದ ಆಳಕ್ಕೆ ಇಳಿದು ಅದರ ಮೂಲಚೂಲಗಳನ್ನು ಗಂಭೀರವಾದ ವ್ಯಾಸಂಗದ ಮೂಲಕ ಅತ್ಯಂತ ಆಧಾರಭೂತವಾಗಿ ಅನಾವರಣ ಮಾಡುವ ಮೂಲಕ ಆ ಕ್ಷೇತ್ರದಲ್ಲಿ ಇತರರು ಮಾಡಿರುವ ಸಂಶೋಧನೆಯ ವ್ಯಾಪ್ತಿಯನ್ನು ಗಮನಾರ್ಹವಾಗಿ ವಿಸ್ತರಿಸಿದವರು. ಅವರ ಪ್ರಸ್ತುತ ಕೃತಿ ಅವರು ಪಿಎಚ್.ಡಿ.ಗಾಗಿ ನಡೆಸಿದ ವಿಪುಲ ವ್ಯಾಸಂಗದ ಮತ್ತು ಸ್ವೋಪಜ್ಞಶೀಲ ಚಿಂತನೆಯ ಶ್ರೇಷ್ಠ ಫಲವಾಗಿದೆ. ಕನ್ನಡ ಸಾಹಿತ್ಯದ ಹಳಮೆಯನ್ನು ಮತ್ತು ವಿಸ್ತಾರವನ್ನು ಪರಿಚಯಿಸುವ ಮಹಾ ವಿದ್ವಾಂಸ ರಾ. ನರಸಿಂಹಾಚಾರ್ಯರ ಕವಿಚರಿತೆಯ ಸಂಪುಟಗಳು ನಮ್ಮ ಎದುರಿಗಿದ್ದರೂ ಮತ್ತು ಅವು ನಮ್ಮ ಸಾಹಿತ್ಯದ ಇತಿಹಾಸವನ್ನು ಅರಿಯಲು ಲಭ್ಯವಿದ್ದ ಮಹಾ ಆಕರ ಗ್ರಂಥಗಳಾಗಿದ್ದರೂ ಅವುಗಳಿಂದ ಸ್ಥೂಲವಾದ ಮಾಹಿತಿ ಮಾತ್ರ ನಮಗೆ ಲಭ್ಯವಾಗುತ್ತಿದ್ದ ಸನ್ನಿವೇಶದಲ್ಲಿ ಡಾ. ರಂ.ಶ್ರೀ. ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟವು ಪ್ರಕಟವಾಗಿ, ಕವಿ ಮತ್ತು ಕೃತಿಗಳ ಒಳಗನ್ನು ಅರ್ಥೈಸಿಕೊಳ್ಳುವುದಕ್ಕೆ ಸಾಹಿತ್ಯಾಭ್ಯಾಸಗಳಿಗೆ ಹೆಚ್ಚು ಅನುಕೂಲವಾಯಿತು.ಆದರೆ ಇಂಗ್ಲಿಷ್ ಶಿಕ್ಷಣ ಕರ್ನಾಟಕದಲ್ಲಿ ಕಾಲೂರಿ ಬೆಳೆಯುತ್ತಿದ್ದ ಸಂದರ್ಭದಲ್ಲಿ ಆ ಮೂಲಕ ಇಂಗ್ಲಿಷ್ ಸಾಹಿತ್ಯದ ಪ್ರಭಾವ ಕನ್ನಡ ಸಾಹಿತ್ಯವನ್ನು ಗಾಢವಾಗಿ ಆವರಿಸಿದ ಸಮಯದಲ್ಲಿ ಕನ್ನಡ ಸಾಹಿತ್ಯ ಲೋಕದಲ್ಲಿ ಆದ ವೈವಿಧ್ಯಮಯವಾದ ಹಾಗೂ ವೈಶಿಷ್ಟ್ಯಮಯವಾದ ಬದಲಾವಣೆಗಳನ್ನು ಹಾಗೂ ಅದರ ಪರಿಣಾಮವಾಗಿ ರೂಪುಗೊಂಡ ಹೊಸಗನ್ನಡ ಸಾಹಿತ್ಯದ ರೂಪ, ಸ್ವರೂಪಗಳನ್ನು ಕೂಲಂಕಷವಾಗಿ ತಿಳಿಸುವ ಆಧಾರ ಗ್ರಂಥವೊಂದರ ಕೊರತೆ ತೀವ್ರವಾಗಿತ್ತು. ಈ ಕೊರತೆಯನ್ನು ನೀಗಿಸುವುದು ಸುಲಭವಾದ ಮಾತಾಗಿರಲಿಲ್ಲ. ಏಕೆಂದರೆ ಹೊಸಗನ್ನಡದ ಆರಂಭದ ಇತಿಹಾಸವನ್ನು ದಾಖಲಿಸುವವರಿಗೆ ಅದಕ್ಕೆ ಗಟ್ಟಿಯಾದ ಹಿನ್ನೆಲೆಯಾಗಿ ನಿಂತ ಹಳಗನ್ನಡ ಮತ್ತು ನಡುಗನ್ನಡ ಭಾಷೆ ಹಾಗೂ ಸಾಹಿತ್ಯಗಳ ಗಾಢವಾದ ವ್ಯಾಸಂಗದ ಭದ್ರ ನೆಲೆಗಟ್ಟು ಹಾಗೂ ಪಾಶ್ಚಾತ್ಯ ಲೋಕದ ಬಹುಮುಖ ಪ್ರಗತಿಯ ತಾತ್ವಿಕ ಹಾಗೂ ಕ್ರಿಯಾತ್ಮಕ ಪ್ರವಾಹಗಳೊಡನೆ ನುಗ್ಗಿ ಬರುತ್ತಿದ್ದ ಹೊಸ ಸಾಹಿತ್ಯ ರಚನೆಯ ವ್ಯಾಪಕವಾದ ಪರಿಚಯವೂ ಅತ್ಯಗತ್ಯವಾಗಿತ್ತು. ಇಂತಹ ಸಂಕ್ರಮಣ ಸಂದರ್ಭದಲ್ಲಿ ಡಾ. ಶ್ರೀನಿವಾಸ ಹಾವನೂರರು ಹೊಸಗನ್ನಡ ಸಾಹಿತ್ಯದ ಅರುಣೋದಯ ಕಾಲದ ಸಾಧನೆ, ಸಿದ್ಧಿ ಹಾಗೂ ಲೋಪದೋಷಗಳನ್ನು ಕೂಲಂಕಷವಾಗಿ ಹಾಗೂ ಪ್ರಮಾಣಭೂತವಾಗಿ ಅಭಿವ್ಯಕ್ತಿಸುವ ಈ ಗ್ರಂಥವನ್ನು ರಚಿಸುವ ಮೂಲಕ

ನಮ್ಮ ಸಾಹಿತ್ಯದ ಅಭ್ಯಾಸಿಗಳಿಗೆ ದೊಡ್ಡದೊಂದು ನಿಧಿಯ ಬಾಗಿಲನ್ನೇ ತೆರೆದರು. ಹೊಸಗನ್ನಡ ಸಾಹಿತ್ಯ ತನ್ನ ಅತ್ಯಂತ ವೈಭವದ ಮತ್ತು ಸಮೃದ್ಧತೆಯ ಸ್ಥಿತಿಯಲ್ಲಿರುವ ಈ ಕಾಲದವರಿಗೆ ಇದರ ನೆಲೆಗಟ್ಟಾಗಿ, ಜೀವನ ಪೋಷಕ ದ್ರವ್ಯವಾಗಿ ಹೆಚ್ಚು ಅಬ್ಬರವಿಲ್ಲದೆ ಕ್ರಿಯಾಶೀಲರಾಗಿದ್ದ ವಿದೇಶಿ ಮತ್ತು ಸ್ವದೇಶೀ ಲೇಖಕರ ಕನ್ನಡ ಅಭಿಮಾನ, ವಿಸ್ತಾರ ವಿದ್ವತ್ತು, ಅವಿರತ ಪರಿಶ್ರಮ, ಇವುಗಳಿಂದ ಉದ್ಭವಿಸಿದ ವೈವಿಧ್ಯಮಯವೂ, ವೈಶಿಷ್ಟ್ಯಮಯವೂ ಆದ ಭಾಷಾ-ಸಾಹಿತ್ಯ ಪ್ರತಿಕ್ರಿಯೆಗಳನ್ನು ಅವರು ಈ ಕೃತಿಯಲ್ಲಿ ಅತ್ಯಂತ ವಿಶದವಾಗಿ ಮತ್ತು ಸಮರ್ಥವಾಗಿ ನಿರೂಪಿಸಿದ್ದಾರೆ. ಸುಮಾರು ೭೦೦ ಪುಟಗಳ ಈ ಬೃಹತ್ ಕೃತಿ ಡಾ. ಶ್ರೀನಿವಾಸ ಹಾವನೂರರ ವಿಸ್ತಾರ ಅಧ್ಯಯನಕ್ಕೆ ಸೂಕ್ಷ್ಮ ಚಿಂತನೆಗೆ, ವಿಚಾರಶೀಲ ಬುದ್ಧಿಮತ್ತೆಗೆ, ವಿಶ್ಲೇಷಣಾ ಪ್ರಜ್ಞೆಗೆ, ಇತಿಹಾಸನಿಷ್ಠ ಪ್ರಾಮಾಣಿಕತೆಗೆ ಹಾಗೂ ಖಚಿತ ಮತ್ತು ಉಚಿತ ನಿರೂಪಣಾ ವೈದುಷ್ಯಕ್ಕೆ ಜ್ವಲಂತ ಸಾಕ್ಷಿಯಾಗಿ ಅವತರಿಸಿದೆ. ಅತ್ಯಂತ ಸಂದಿಗ್ಧವಾದ ಮತ್ತು ಸಂಕೀರ್ಣ ಹಾಗೂ ಪ್ರಯೋಗಶೀಲ ಕಾಲಘಟ್ಟದ ಸಾಹಿತ್ಯ ಸೃಷ್ಟಿಯ ವಿವರಗಳು ಇಲ್ಲಿ ತಮ್ಮೆಲ್ಲ ಜೀವಂತಿಕೆಗಳೊಡನೆ ನಮ್ಮೆದುರು ನಿಂತುಕೊಳ್ಳುತ್ತವೆ. ಸೂರ್ಯೋದಯವನ್ನು ಬಹಳ ಜನ ಕಾಣಬಲ್ಲರು, ಸವಿಯ ಬಲ್ಲರು, ವರ್ಣಿಸಬಲ್ಲರು. ಆದರೆ ಅದರ ಪೂರ್ವಭಾವಿಯಾಗಿ ಮೂಡಿದ ಅರುಣೋದಯದ ಸೌಂದರ್ಯ, ವ್ಯಾಪ್ತಿ ಮತ್ತು ಪರಿಣಾಮಗಳನ್ನು ಬಹಳ ಜನ ಗಮನಿಸುವುದಿಲ್ಲ. ಇಂತಹ ಹೊಸಗನ್ನಡ ಸಾಹಿತ್ಯದ ಸಂಪದ್ಭರಿತ ಬೆಳೆಸಿಗೆ ಬುನಾದಿಯನ್ನು ಕಲ್ಪಿಸಿಕೊಟ್ಟ ಅರುಣೋದಯ ಕಾಲದ ಸಾಧನೆಯ ಚಟುವಟಿಕೆಗಳನ್ನು ಪ್ರಾಮಾಣಿಕವಾಗಿ ಮತ್ತು ಸಮರ್ಥವಾಗಿ ದಾಖಲಿಸಿರುವ ಈ ಗ್ರಂಥವು ಇಂದೂ, ಮುಂದೂ ಸಾಹಿತ್ಯ ವ್ಯಾಸಂಗಿಗಳಿಗೆ ಒಂದ ಮಹತ್ತಾದ ಆಕರ ಗ್ರಂಥವಾಗಿದೆ.

ಇಂತಹ ಶ್ರೇಷ್ಠ ಆಕರ ಗ್ರಂಥವೊಂದನ್ನು ಮರುಮುದ್ರಿಸಲು ಪ್ರಾಧಿಕಾರಕ್ಕೆ ಅವಕಾಶ ಮಾಡಿಕೊಟ್ಟ ಪ್ರಸಿದ್ಧ ವಿದ್ವಾಂಸರಾದ ಡಾ. ಶ್ರೀನಿವಾಸ ಹಾವನೂರ ಅವರಿಗೆ ನಮ್ಮ ವಿಶೇಷ ಕೃತಜ್ಞತೆಗಳು. ಇದನ್ನು ಪ್ರಕಟಿಸಲು ಸಮ್ಮತಿಸಿದ ಪ್ರಾಧಿಕಾರದ ಸದಸ್ಯ ಬಳಗಕ್ಕೆ ಹಾಗೂ ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿರುವ ಮೆ. ಪ್ರಗತಿ ಪ್ರಿಂಟ್ಸ್ ಕಮ್ಯುನಿಕೇಷನ್ಸ್ ಮುದ್ರಣಾಲಯದ ಮಾಲಿಕರು ಮತ್ತು ಸಿಬ್ಬಂದಿ ವರ್ಗಕ್ಕೆ ನನ್ನ ನಮನಗಳು.

ಸ್ಥಳ : ಬೆಂಗಳೂರು
ದಿನಾಂಕ : ೨೪-೦೮-೨೦೦೦

**ಡಾ. ಎಚ್.ಜೆ. ಲಕ್ಕಪ್ಪಗೌಡ**
ಅಧ್ಯಕ್ಷರು

# ಕೆಲವು ಸೂಚನೆಗಳು

## ೧. ಪ್ರಕರಣ / ವಿಭಾಗಗಳ ಸಂಖ್ಯೆ

ಈ ಗ್ರಂಥದಲ್ಲಿ ಪೂರ್ವಾರ್ಧ, ಉತ್ತರಾರ್ಧಗಳಿದ್ದು ಪ್ರತಿಯೊಂದರಲ್ಲಿ ಒಂಬತ್ತು ಪ್ರಕರಣಗಳಿವೆ. ಅವನ್ನು ಪ್ರತ್ಯೇಕಿಸುವ ದೃಷ್ಟಿಯಿಂದ ಒಂದಕ್ಕೆ ಕನ್ನಡ ಅಂಕಿಗಳನ್ನೂ ಇನ್ನೊಂದಕ್ಕೆ ಇಂಗ್ಲಿಷ್ ಅಂಕಿಗಳನ್ನೂ ಕೊಟ್ಟಿದೆ. ಯಾವುದೊಂದು ವಿಷಯದ ಸಂದರ್ಭಗಳನ್ನು ಅಂಕಿಗಳ ಮೂಲಕ ಅಲ್ಲಲ್ಲಿ ಸೂಚಿಸಿದೆಯಷ್ಟೆ. ಅದನ್ನು ಪರಿಶೀಲಿಸುವಾಗ ಈ ಭೇದವನ್ನು ಅವಶ್ಯವಾಗಿ ಗಮನಿಸಬೇಕು. ಪೂರ್ವಾರ್ಧದಲ್ಲಿ ಬಂದಿರುವ ಬಿ.ಎಲ್. ರೈಸರಿಗೆ ಸಂಬಂಧಿಸಿದ <೫೩೧> ಅಂಕಿಯನ್ನು ನೋಡುವಾಗ, ತಪ್ಪಿ ಇಂಗ್ಲಿಷ್ ಅಂಕಿಯ <531> ಸಂದರ್ಭವನ್ನು ನೋಡಿದ್ದಾದರೆ, ನಿಮಗೆ ಬೇಕಾಗಿದ್ದ ವಿಷಯ ಸಿಕ್ಕದೇ ಹೋಗುತ್ತದೆ. <೫೩೧> ಪೂರ್ವಾರ್ಧದ್ದು.

ಇನ್ನೊಂದೆಂದರೆ, ವಿಭಾಗಗಳ ಸಂಖ್ಯೆಗೆ ದಶಾಂಶದ ಗಣನೆಯಿದೆ. ೫೩೧ ಎಂದರೆ, ೫ನೆಯ ಪ್ರಕರಣದ ಮೂರನೇದ್ದರ ಒಂದನೇ ಉಪವಿಭಾಗ ಎಂದು ತಿಳಿಯಬೇಕಲ್ಲದೆ, ೫೦೦ಕ್ಕೆ ೩೧ ಕೂಡಿಸಿದರೆ ಬರುವ ಸಂಖ್ಯೆಯಲ್ಲ.

### ೨. ಅವತರಣಿಕೆಗಳು

ಬೇರೆ ಬೇರೆ ಪುಸ್ತಕಗಳಿಂದ ಅವತರಣಿಕೆಗಳನ್ನು ಕೊಡುವಾಗ ಆಗಿನ ಬರವಣಿಗೆಯ ಬಗೆಯನ್ನು ತಿಳಿಯಲೋಸುಗ, ಅವನ್ನು ಇದ್ದುದಿದ್ದಂತೆ ಕೊಟ್ಟಿದೆ. ಅವುಗಳಲ್ಲಿಯ ವ್ಯಾಕರಣದ ಇಲ್ಲವೆ ಅಕ್ಷರಿಕೆಯ ತಪ್ಪುಗಳನ್ನು ಸಹ ತಿದ್ದಹೋಗಿಲ್ಲ. ಉದಾ : ಮಾಡಿದ್ಧಾರೆ, ಬೈಬಿಲ್, ತಿರಿಗಿ. ಆದ್ದರಿಂದ ಅವನ್ನು ಮುದ್ರಣ ದೋಷಗಳೆಂದು ತಿಳಿಯಬಾರದು.

### ೩. ಪುಸ್ತಕಗಳ ಪ್ರಕಟನ ವಿವರಗಳು

ಹದಿನೆಂಟನೆಯ ಶತಮಾನದಲ್ಲಿ ೧೫೦೦ಕ್ಕೆ ಮೇಲ್ಪಟ್ಟು ಗ್ರಂಥಗಳು ಪ್ರಕಟವಾಗಿವೆ. ಅವುಗಳ ಪ್ರಕಾಶನ, ಮುದ್ರಣ ಮುಂತಾದ ವಿವರಣೆಗಳಿರುವ ಪಟ್ಟಿಯನ್ನು ಇಲ್ಲಿ ಕೊಡುವುದು ಅವಶ್ಯವಿದ್ದಿತಾದರೂ ವಿಸ್ತಾರಭಯದಿಂದ ಹಾಗೆ ಮಾಡಿಲ್ಲ. ಈ ವಿವರಗಳು ಬೇಕಾದರೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ 'ಗ್ರಂಥಸೂಚಿ'ಯ ಸಂಪುಟಗಳನ್ನು ನೋಡಬೇಕಾಗಿ ಬಿನ್ನಹ. ಅದರಂತೆ ಎಲ್.ಡಿ. ಬಾರ್ನೆಟ್ ಸಂಪಾದಿತ A Catalogue of the Kannada; Books in the Library of the British Museum' (London, 1910) ಹಾಗೂ ಆಲ್ಬರ್ಟಿನ್ ಗೌರ್ ಅವರು ಇದಕ್ಕೆ ಪೂರಕವಾಗಿ ಸಂಕಲಿಸಿದ 'Supplementary Catalogue; Kannada. . .Books . .' (London 1985), ಇವನ್ನು ನೋಡಬಹುದು.

* * * * * * *

# ಪರಿವಿಡಿ

## ಹೊಸಗನ್ನಡದ ಅರುಣೋದಯ
## ಉತ್ತರಾರ್ಧ



## ಅನುಬಂಧಗಳು

ಪ್ರಕರಣ : ೧

# ಅರುಣೋದಯದ ಹಿನ್ನೆಲೆ

ಪ್ರಮುಖವಾದ ಯಾವುದೇ ಭಾಷೆಯ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ಅದರಲ್ಲಿ ಪ್ರಾಚೀನ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯ ಎಂಬ ಭೇದವು ಕಂಡುಬರುತ್ತದೆ. ಕನ್ನಡದಲ್ಲಿಯೂ ಸ್ಥೂಲವಾಗಿ ಈ ಭೇದವಿದೆ. ರೂಢಿಯಲ್ಲಿ ಇದನ್ನು ಹಳಗನ್ನಡ ಸಾಹಿತ್ಯ ಹಾಗೂ ಹೊಸಗನ್ನಡ ಸಾಹಿತ್ಯ ಎಂಬ ವಿಶಿಷ್ಟವಾದ ಪದಗಳಿಂದ ಕರೆಯುತ್ತೇವಷ್ಟೇ. ಯಾವಾಗಿನಿಂದ ಹಳಗನ್ನಡ ಕಾಲವು ಮುಗಿದು ಹೊಸಗನ್ನಡ ಕಾಲವು ಮೊದಲಾಯಿತು? ಬ್ರಿಟಿಶರ ಆಳ್ವಿಕೆಯ ಮೂಲಕ ಪಾಶ್ಚಾತ್ಯ ವಿಚಾರಗಳ ಗಾಳಿ ಬೀಸತೊಡಗಿದಂದಿನಿಂದ ನವೋದಯವು ನಮ್ಮ ಜೀವನದಲ್ಲಿ ಎಂತೋ ಅಂತೆಯೇ ಸಾಹಿತ್ಯದಲ್ಲಿಯೂ ಕಾಣಿಸಿಕೊಂಡಿತು. ಎಂದರೆ ೧೯ನೆಯ ಶತಮಾನದಿಂದ ಈಚಿನದು ಹೊಸಗನ್ನಡ - ಎಂಬ ಗ್ರಹಿಕೆ ಸಾಮಾನ್ಯವಾಗಿ ಇದೆ. ಆದರೆ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ನೋಡಿದಾಗ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬ ಮೂರು ಅವಸ್ಥೆಗಳನ್ನು ನಾವು ಗುರುತಿಸಬಹುದು. ಇವುಗಳಲ್ಲಿ ನಮಗೆ ಪ್ರಸ್ತುತವಾದ ೧೮ನೆಯ ಶತಮಾನದ ಸಾಹಿತ್ಯವನ್ನು ಇಲ್ಲಿ ಗಮನಿಸಿದೆ.

### ೧೧ ಹದಿನೆಂಟನೆಯ ಶತಮಾನ

ಹದಿನೆಂಟನೆಯ ಶತಮಾನದ ಸಾಹಿತ್ಯವು ಮುನ್ನಿನಷ್ಟು ಸತ್ವಪೂರ್ಣವಾಗಿ ಹೊರಹೊಮ್ಮಲಿಲ್ಲ. ಅದಕ್ಕೆ ದೇಶದ ಸ್ಥಿತಿಗತಿಯೇ ಮೂಲ ಕಾರಣ. ಆ ಶತಮಾನದ ಕರ್ನಾಟಕದಲ್ಲಿ ಬಲಿಷ್ಠವಾದ ರಾಜಮನೆತನವಾವುದೂ ಆಳುತ್ತಿರಲಿಲ್ಲ. ಸಾಲದ್ದಕ್ಕೆ ಪೇಶವೆ, ನಿಜಾಮ ಮುಂತಾದ ಅನ್ಯ ಭಾಷಿಕರ ರಾಜಸತ್ತೆಯಲ್ಲಿ ಕನ್ನಡದ ಅನೇಕ ಪ್ರದೇಶಗಳು ಸಿಕ್ಕಿಕೊಂಡಿದ್ದುವು. ಕವಿಬಳ್ಳಿಗಳಿಗೆ ಬಿದಿರಿನ ಹಂದರವನ್ನಾದರೂ ಒದಗಿಸಿದ್ದ ಮೈಸೂರಲ್ಲಿ, ಚಿಕ್ಕದೇವರಾಜನ ಯೋಗ್ಯತೆಯುಳ್ಳ ಅರಸರು ಮುಂದಿನ ಒಂದು ಶತಮಾನದ ವರೆಗೆ ಯಾರೂ ಹೊರಡಲಿಲ್ಲ. ಹೈದರ, ಟೀಪೂ ಸುಲ್ತಾನರ ರಾಜ್ಯಭಾರದಲ್ಲಿ ನಡೆದ ಸಂಸ್ಕೃತಿ ಸಂವರ್ಧನೆಯು ಹೇಳಿಕೊಳ್ಳುವಂತಹದೇನಲ್ಲ.

ಇಂಥ ವಾತಾವರಣದಲ್ಲಿ ೧೮ನೆಯ ಶತಮಾನದ ಸಾಹಿತ್ಯ ನಿರ್ಮಿತಿಯು, ಇತರ ಶತಮಾನಗಳಿಗೆ ಹೋಲಿಸಿದಾಗ ಅಷ್ಟೊಂದು ಸತ್ವಯುತವಾಗಿ ಹೊರ ಬರಲಿಲ್ಲವೆನ್ನುವುದು ನಿಜ. ಆದರೆ ಆ ಕಾಲದ ಸಾಹಿತ್ಯವು ಅತ್ಯಂತ ಬರಡು, ಅತಿ ನಿಸ್ಸತ್ವ ಎಂದು ತಿಳಿಯುವುದು ಸರಿಯಲ್ಲ.*

ಕವಿಚರಿತೆಯ ಮೂರನೆಯ ಸಂಪುಟ, ಮತ್ತಿತರ ಆಧಾರಗಳಿಂದ ಹೇಳುವುದಾದರೆ ೧೮ನೆಯ ಶತಮಾನದಲ್ಲಿ ಸುಮಾರು ಇನ್ನೂರು ಜನ ಗ್ರಂಥಕರ್ತರು ೩೫೦ಕ್ಕೆ ಮಿಕ್ಕಿದ ಕೃತಿಗಳನ್ನು ರಚಿಸಿದ್ದಾರೆ. ಅವರಲ್ಲಿ ಬಹು ಸಂಖ್ಯಾತ ಕವಿಗಳು ಮೈಸೂರು ಸಂಸ್ಥಾನದ ಪರಿಸರದಲ್ಲಿದ್ದವರೇ.

ವಿಷಯದ ದೃಷ್ಟಿಯಿಂದ ಮೌಲಿಕವೆನ್ನುವುದು ಈ ಶತಮಾನದ ಕೃತಿಗಳಲ್ಲಿ ಇಲ್ಲವೆಂದು ಅನ್ನಿಸಬಹುದು. ಅವೇ ರಾಮಾಯಣ, ಮಹಾಭಾರತ ಪ್ರಸಂಗಗಳು; ಅಷ್ಟಾದಶ ಪುರಾಣಗಳಲ್ಲಿ ಬಂದಿರುವ ಮಾಹಾತ್ಮ್ಯದ ಕಥೆಗಳು ; ಶ್ರೀವೈಷ್ಣವ, ವೀರಶೈವ ಹಾಗೂ ಜೈನ ಮತಗಳಿಗೆ ಸಂಬಂಧಿಸಿದ ಸಂಸ್ಕೃತ ಗ್ರಂಥಗಳ ಟೀಕಾನುವಾದ ಮತ್ತು ಶತಕಗಳು, ಸ್ತೋತ್ರಗಳು ಇವೇ ಹೆಚ್ಚಾಗಿ ಕಂಡುಬರುತ್ತವೆ. ಆದರೆ ಈ ಮೊದಲು ಚಂಪೂವಿನಲ್ಲಿ ಬಂದ ವಿಷಯವನ್ನು ಷಟ್ಪದಿಯಲ್ಲಿಯೋ ಸಾಂಗತ್ಯದಲ್ಲಿಯೋ ಬರೆದರೆನ್ನುವುದರಲ್ಲಿ ಹೊಸ ದೃಷ್ಟಿಯಿದೆ. ಕೆಲವು ವೈದ್ಯ ಹಾಗೂ ಜ್ಯೋತಿಷ್ಯಕ್ಕೆ ಸಂಬಂಧಿಸಿದ ಕೃತಿಗಳಿವೆ ಮತ್ತು ಜಯದೇವನ ಗೀತಗೋವಿಂದ ಹಾಗೂ ಕಾಳಿದಾಸನ ರಘುವಂಶ ಮೊದಲಾದವುಗಳು ಅನುವಾದಗೊಂಡದ್ದು ಒಂದು ವಿಶೇಷವೇ ಸೈ.

ಈ ಶತಮಾನದಲ್ಲಿ ಹಳಗನ್ನಡ, ನಡುಗನ್ನಡ ಇವೆರಡೂ ಸಾಹಿತ್ಯ ಸ್ವರೂಪಗಳು ಕಂಡುಬಂದರೂ ಅವುಗಳಲ್ಲಿ ನಡುಗನ್ನಡದ್ದೇ ಮೇಲುಗೈ. ಎಂದರೆ ಕವಿಗಳು ಷಟ್ಪದಿ, ಸಾಂಗತ್ಯ, ಚೌಪದಿಗಳಲ್ಲಿಯೇ ತಮ್ಮ ಕಾವ್ಯ ನಿರ್ಮಿತಿಯ ಒಲವನ್ನು ತೋರಿಸಿದ್ದಾರೆ. ಯಕ್ಷಗಾನದ ಹಾಡಿನ ರಚನೆಗೂ ಈ ಶತಮಾನದಲ್ಲಿ ಹೆಚ್ಚಿನ ಪುರಸ್ಕಾರ ದೊರೆಯಿತು.

ಮಿಕ್ಕುಳಿದ ಕೃತಿಗಳಿಗೆ ಮತೀಯ ದೃಷ್ಟಿಯೇ ಪ್ರಚೋದಕವಾಗಿದ್ದಿತು. ಮತ್ತು ತಂತಮ್ಮ ವಿಶಿಷ್ಟ ಮತಗಳ ಹೆಚ್ಚಳವನ್ನು ತೋರಿಸುವ ಪರಿಪಾಠವು ಕಂಡುಬಂದು ಮುಂದಿನ ಶತಮಾನದಲ್ಲಿ ಹೆಚ್ಚು ನಿಚ್ಚಳವಾಗಿ ವ್ಯಕ್ತವಾಯಿತು.

---

* 1. The numerous authors of this period do not otherwise call for special notice and the troblous times of Mahratta invasions and Muhammad usurpation were not favourable to the progress of literature.

2. After the 17th Century we do not come across any Kannada work deserving our serious notice till we come to the Modern period ... For almost two hundred years i.e., till the end of the 19th Century, Kannada literature as such, simply ceased to exist.

ಹದಿನೆಂಟನೆಯ ಶತಮಾನದ ಇನ್ನೊಂದು ವೈಶಿಷ್ಟ್ಯವೆಂದರೆ ಚಾರಿತ್ರಿಕ ಕಾವ್ಯಗಳ ರಚನೆ. ಪೋಷಕ ದೊರೆ, ಮಂತ್ರಿಗಳ ಪ್ರೋತ್ಸಾಹವೇ ಇದರ ಸೆಲೆಯಾಗಿದೆ. ಈ ಹಿಂದೆ, ಕಾವ್ಯಗಳಲ್ಲಿ ಚಾರಿತ್ರಿಕ ಅಂಶಗಳು ಸೂಚ್ಯವಾಗಿ ಕಂಡುಬಂದಿದ್ದರೆ, ೧೭ನೆಯ ಶತಮಾನದ ಉತ್ತರಾರ್ಧದಿಂದ ಅವು ನೇರವಾಗಿ ನಿರೂಪಿಸಲ್ಪಟ್ಟಿವೆ. ಈ ಪರಂಪರೆಯು ನೆಲೆಗೊಳ್ಳುವುದಕ್ಕೆ ಮೈಸೂರಿನ ಅರಸರೇ ನಿಮಿತ್ತರಾದರೆಂದು ಕಾಣುತ್ತದೆ.

ನಂಜುಂಡ ಕವಿಯ 'ಕುಮಾರರಾಮನ ಸಾಂಗತ್ಯ'ದಿಂದ (ಸು ೧೫೨೫) ಆರಂಭವಾದ ಐತಿಹಾಸಿಕ ಕಾವ್ಯರಚನೆಯು ಚಿಕ್ಕದೇವರಾಜನ ಕಾಲದಲ್ಲಿ ಪ್ರಾಶಸ್ತ್ಯವನ್ನು ಪಡೆಯಿತು. ಮಂತ್ರಿ ತಿರುಮಲೆಯಾರ್ಯನ 'ಚಿಕ್ಕದೇವರಾಯ ವಂಶಾವಳಿ'ಯು ಸುಸ್ಪಷ್ಟವಾದ ಚಾರಿತ್ರಿಕ ಬರಹವಾಗಿದೆ. ಚಿಕ್ಕದೇವರಾಯನಿಂದಲೇ ರಚಿತವಾದುದೆಂದು ಹೇಳಲಾದ 'ಶೂದ್ರಾಚಾರ ನಿರ್ಣಯ' ವೆಂಬ ಸಂಸ್ಕೃತ ಶಾಸ್ತ್ರಗ್ರಂಥವೊಂದಿದೆ. ಆದರೆ ಈ ವಿಶಿಷ್ಟ ಗ್ರಂಥದ ಮೊದಲ ಪ್ರಕರಣವು ಮೈಸೂರರಸರ ಚರಿತ್ರಾವಳಿಗೆ ಮೀಸಲು. ಈ ಬಗೆಯ ವಂಶಾವಳಿಯ ಕಥನವು ಎಷ್ಟರಮಟ್ಟಿಗೆ ಆಳವಾಗಿ ನೆಲೆಗೊಂಡಿತ್ತೆಂಬುದನ್ನು ಅದರಿಂದ ಊಹಿಸಬಹುದು.

ಮೈಸೂರರಸರಲ್ಲದೆ, ಬಿಳಗಿ, ಕೆಳದಿ, ಕೊಡಗು ಈ ರಾಜವಂಶೀಯರ ಬಗ್ಗೆಯೂ ಚಾರಿತ್ರಿಕ ಕಾವ್ಯಗಳು ೧೮ನೆಯ ಶತಮಾನದಲ್ಲಿ ಹೊರಬಂದಿವೆ. ಇಂಥ ಚಾರಿತ್ರಿಕ ಕೃತಿ ರಚನೆಯು ೧೯ನೆಯ ಶತಮಾನದಲ್ಲಿಯೂ ಮುಂದುವರಿಯಿತೆಂಬುದು ಗಮನಿಸಬೇಕಾದ ಸಂಗತಿ.

ಹದಿನೆಂಟನೆಯ ಶತಮಾನದ ಇನ್ನೊಂದು ವೈಶಿಷ್ಟ್ಯವೆಂದರೆ 'ಉಕ್ತಿವಿಲಾಸ'ಗಳ ಪರಂಪರೆ. ಮುಮ್ಮಡಿ ಕೃಷ್ಣರಾಜರ ಅನೇಕ ಗದ್ಯ ಕೃತಿಗಳು 'ಕೃಷ್ಣರಾಜ ವಾಣೀವಿಲಾಸ' ಅಥವಾ 'ಉಕ್ತಿವಿಲಾಸ' ಎಂಬ ಸದರಿನಲ್ಲಿ ರಚಿತವಾಗಿದ್ದು, ೧೮ನೆಯ ಶತಮಾನದಲ್ಲಿಯೇ ಅದರ ಉಗಮವನ್ನು ಕಾಣುತ್ತೇವೆ. ಕಳಲೆಯ ವೀರರಾಜ, ನಂಜರಾಜರು, ರಾಣಿ ಚೆಲುವಾಂಬೆ, ಕತ್ತಿಯ ಗೋಪಾಲರಾಜ ಇವರ ಹೆಸರಿನಲ್ಲಿ ಇಂಥ ಉಕ್ತಿ ಅಥವಾ ವಾಣೀವಿಲಾಸಗಳು ಹೊರಬಂದಿವೆ. 'ಚಾಮರಾಜೋಕ್ತಿವಿಲಾಸ' ವೆಂಬ ರಾಮಾಯಣದ ಪ್ರಸಿದ್ಧ ಗದ್ಯಾನುವಾದವೂ ಈ ಕಾಲದ್ದೇ ಆಗಿದೆ.

ಇವೆಲ್ಲ ಸಾಹಿತ್ಯಿಕ ಚಟುವಟಿಕೆಗಳು ನಾಡಿನ ದಕ್ಷಿಣ ಭಾಗಕ್ಕೆ ಮೀಸಲಾಗಿದ್ದರೆ, ಉತ್ತರದ ಆಗಿನ ನಿಜಾಮ ಕರ್ನಾಟಕದಲ್ಲಿ ಕೆಲವು ಪ್ರಸಿದ್ಧ ಹರಿದಾಸರು ಆಗಿಹೋದರು. ಕರ್ನಾಟಕದ ಹರಿದಾಸ ಇತಿಹಾಸದಲ್ಲಿ ಪುರಂದರದಾಸ, ಕನಕದಾಸ, ವಿಜಯದಾಸ, ಗೋಪಾಲದಾಸ ಮತ್ತು ಜಗನ್ನಾಥದಾಸ ಈ ಐವರು ಪ್ರಮುಖರಷ್ಟೆ. ಇವರಲ್ಲಿ ಕಡೆಯ ಮೂವರು ೧೮ನೆಯ ಶತಮಾನದಲ್ಲಿಯೆ ಬಾಳಿದವರು. ವಿಜಯದಾಸರು (೧೬೮೭–೧೭೫೫) ಪುರಂದರದಾಸರಂತೆಯೇ ಅಸಂಖ್ಯಾತ ಸುಳಾದಿಗಳನ್ನು ರಚಿಸಿದ್ದಾರೆ;

ಸುಳಾದಿದಾಸರೆಂದೇ ಹೆಸರಾಗಿದ್ದಾರೆ. ಅವರ ವಿಶಾಲ ಶಿಷ್ಯವರ್ಗದಲ್ಲಿ ಗೋಪಾಲದಾಸ, ಮೋಹನದಾಸ, ವ್ಯಾಸವಿಠಲ ಮತ್ತು ಜಗನ್ನಾಥದಾಸ ಇವರು ಅಗ್ರೇಸರರು. ಒಬ್ಬೊಬ್ಬರೂ ಮಹಾಮಹಿಮರು. ಇವರೆಲ್ಲರಲ್ಲಿ ಕವನಸ್ಫೂರ್ತಿಯು ಸಹಜವಾಗಿ ಹೊರಹೊಮ್ಮಿ ಸಾವಿರಾರು ಹಾಡುಗಳ ಸೃಷ್ಟಿಯಾಯಿತು. ಹಾಡು, ಕೀರ್ತನೆಗಳಲ್ಲದೆ ಕಥನ ಕವನಗಳನ್ನು ರಚಿಸಿದವರಿದ್ದಾರೆ. ಶ್ರೀಹರಿಯ ಲೀಲೆಗಳು ಮತ್ತು ಹರಿಭಕ್ತರ ಚರಿತ್ರೆಗಳು ಈ ಕಥನ ಕವನಗಳ ವಸ್ತುಗಳಾಗಿವೆ. ರಘುಪತಿವಿಠಲರೆಂಬವರು (೧೮ನೇ ಶತಮಾನದ ಕೊನೆ) ತಮ್ಮ 'ಅಧ್ಯಾತ್ಮಮಾಲಾ' ಕೃತಿಯಲ್ಲಿ ಮಾಧ್ವ ತತ್ತ್ವ ವಿವೇಚನೆಯನ್ನು ಗದ್ಯದಲ್ಲಿಯೆ ನಿರೂಪಿಸಿದುದು ಒಂದು ವಿಶೇಷ.

ವಿಜಯದಾಸರ ಮತ್ತು ಅವರ ಅನಂತರದ ಹರಿದಾಸರ ಚರಿತ್ರೆ ಹಾಗೂ ಕೃತಿಗಳು ಗೊರಾಬಾಳ ಹನುಮಂತರಾವ, ಬೇಲೂರ ಕೇಶವದಾಸ ಮತ್ತು ನಾರಾಯಣರಾವ ಕಲಮದಾನಿ – ಇವರ ವಿಶೇಷ ಪ್ರಯತ್ನಗಳ ಮೂಲಕ ಈಚೆಗೆ ಮಾತ್ರ ಬೆಳಕಿಗೆ ಬಂದಿವೆ. ಸಮಸ್ತ ದಾಸಪೀಳಿಗೆಯವರ ಅನೇಕ ಹಾಡುಗಳು ಈ ಮುನ್ನವೆ ಮುದ್ರಿತವಾಗಿ ಅವುಗಳ ಸಮೀಕ್ಷೆ – ವಿಮರ್ಶೆಗಳು ನಡೆದು ಹೋಗಿದ್ದರೆ, ಈ ಶತಮಾನವನ್ನು ಕತ್ತಲೆಯ ಕಾಲವೆಂದು ಯಾರೂ ಹೇಳುತ್ತಿರಲಿಲ್ಲವೇನೋ. ವಿಜಯದಾಸ, ಗೋಪಾಲದಾಸರ ಭಾವಪೂರ್ಣ ಸುಳಾದಿಗಳು ಮತ್ತು ಜಗನ್ನಾಥದಾಸರ 'ಹರಿಕಥಾಮೃತಸಾರ' – ಇವುಗಳನ್ನು ಕನ್ನಡಕ್ಕೆ ನೀಡಿದ ೧೮ನೆಯ ಶತಮಾನವು ಅದೆಂತು ನಿಸ್ಸತ್ವವೆನಿಸೀತು?

ಈ ಶತಮಾನದ ಬಹು ದೊಡ್ಡ ವೈಶಿಷ್ಟ್ಯವೆಂದರೆ ಗದ್ಯದ ಪ್ರಾದುರ್ಭಾವ. ಕನ್ನಡ ಸಾಹಿತ್ಯದಲ್ಲಿ ಗದ್ಯದ ನಡೆಯು ಪದ್ಯದಷ್ಟೇ ಪ್ರಾಚೀನವೆಂದು ತೋರಿದರೂ, ಹಿಂದಿನ ಶತಮಾನಗಳಲ್ಲಿ ಗದ್ಯಸಾಹಿತ್ಯ ರಚನೆಯು ಗುಣ ಮತ್ತು ಗಾತ್ರ ಇವೆರಡೂ ದೃಷ್ಟಿಯಿಂದ ಹಿನ್ನಡೆಯದೇ ಆಗಿದೆ. ಸಮಗ್ರ ಗದ್ಯ ಗ್ರಂಥಗಳೆಂದು ವಡ್ಡಾರಾಧನೆ, ಚಾವುಂಡರಾಯ ಪುರಾಣ ಮುಂತಾದ ಬೆರಳೆಣಿಕೆಯ ಗ್ರಂಥಗಳನ್ನು ಬಿಟ್ಟರೆ ಗದ್ಯಸಾಹಿತ್ಯ ಚರಿತ್ರೆಯು ಒಟ್ಟಿನಲ್ಲಿ ಮೆಲ್ನಡೆಯದೇ. ಕವಿರಾಜಮಾರ್ಗದಲ್ಲಿ ಉಕ್ತರಾದ ಗದ್ಯಾಶ್ರಯಿಗಳ ಹೆಸರನ್ನಷ್ಟೆ ಬಲ್ಲೆವಲ್ಲದೆ, ಅವರ ಕೃತಿಗಳ ಪರಿಚಯ ಅಂತಿರಲಿ, ಹೆಸರು ಕೂಡ ತಿಳಿಯದು. ಚಂಪೂ ಮತ್ತು ರಗಳೆಗಳಲ್ಲಿ ಅರ್ಧಪಾಲನ್ನು ಪಡೆದ ಗದ್ಯ, ಮೂಲತಃ ಪದ್ಯದ ಛಾಯೆಯುಳ್ಳ ವಚನಗಳ ಗದ್ಯ, ಕೆಲವು ಶಾಸನಗಳ ಗದ್ಯ–ಹೀಗೆ ಎಲ್ಲವೂ ಅಂಶತಃ ಕಂಡುಬರುವ ಗದ್ಯ ರಚನೆಯಲ್ಲದೆ, ಅದಕ್ಕೆ ನಿಶ್ಚಿತವಾದ ಪರಂಪರೆ ಇದ್ದಿಲ್ಲ. ಆ ಪರಂಪರೆ ಆರಂಭವಾದುದು ೧೭ನೆಯ ಶತಮಾನದ ಕೊನೆಗಾಲದಿಂದ. 'ಚಿಕ್ಕದೇವರಾಯ ವಂಶಾವಳಿ'ಯೇ ಈ ದಿಶೆಯಲ್ಲಿ ದೊಡ್ಡ ಹೆಜ್ಜೆ. ಅಂದಿನಿಂದ ೧೯ನೆಯ ಶತಮಾನದ ಆರಂಭದ ವರೆಗೆ ಸುಮಾರು ಐವತ್ತು ಗದ್ಯಗ್ರಂಥಗಳು ಕಂಡುಬರುತ್ತವೆ.

ಪಾಶ್ಚಿಮಾತ್ಯ ಸಂಪರ್ಕ ಅಥವಾ ಮುದ್ರಣದ ಅನುಕೂಲತೆಯೊದಗಿದ ಮೇಲೆಯೇ ಗದ್ಯಾವತಾರವಾಯಿತೆಂದೇನೂ ಅಲ್ಲ.

ಈ ಶತಮಾನದಲ್ಲಿಯ ಗದ್ಯದ ಪ್ರಾದುರ್ಭಾವಕ್ಕೆ ಕಾಗದದ ವ್ಯಾಪಕ ಬಳಕೆಯೂ ಬಹುಮಟ್ಟಿಗೆ ಕಾರಣವಾಗಿದೆ. ಹಿಂದಿನ ಕಾಲದ ಭೂರ್ಜಪತ್ರ ಹಾಗೂ ತಾಡವೋಲೆಗಳು ದುರ್ಮಿಳವೂ ಬರೆಯುವುದಕ್ಕೆ ಕಷ್ಟಸಾಧ್ಯವೂ ಆಗಿದ್ದುವೆಂಬುದು ತಿಳಿದ ವಿಷಯ. ಚಿಂದಿಬಟ್ಟೆ, ನಾರುಗಳಿಂದ ತಯಾರಿಸಲಾಗುವ ಕಾಗದವು ಮುಸಲ್ಮಾನರ ಮೂಲಕ ಭಾರತದಲ್ಲಿ ಪ್ರವೇಶಿಸಿತು. ಹನ್ನೆರಡನೆಯ ಶತಮಾನದಲ್ಲಿ, ಗುಜರಾತದಲ್ಲಿ ಕಾಗದದ ಬಳಕೆಯಿತ್ತೆಂಬುದಕ್ಕೆ ಸ್ಪಷ್ಟವಾದ ಉಲ್ಲೇಖವಿದೆ. ಮುಸಲ್ಮಾನರು ದೇಶದಲ್ಲಿ ಹಬ್ಬುತ್ತ ನಡೆದಂತೆ ಕಾಗದದ ಬಳಕೆಯೂ ಹೆಚ್ಚಿತು. ಹದಿನಾರನೆಯ ಶತಮಾನದ ಹೊತ್ತಿಗೆ ರಾಜಕೀಯ ಹಾಗೂ ಇತರ ದಾಖಲೆಗಳಿಗಾಗಿ ಕಾಗದವು ಅನಿವಾರ್ಯವಾದ ಸಾಧನವಾಗಿದ್ದಿತು.

ಕರ್ನಾಟಕದಲ್ಲಿ ಕಾಗದದ ಬಳಕೆ ಎಂದಿನಿಂದ ಮೊದಲಾಯಿತೆಂಬುದನ್ನು ಹೇಳುವುದು ಸಾಧ್ಯವಿಲ್ಲ. ಆದರೆ ಕ್ರಿ.ಶ. ೧೩೧೦ನೆಯ ಇಸವಿಯ ಮೈಸೂರ ಶಾಸನವೊಂದರಲ್ಲಿ 'ಕಾಗಜ' ಶಬ್ದದ ಪ್ರಸ್ತಾಪವಿದೆ. (Mysore Archaeological Survey Report for 1931. ಶಾಸನ ನಂ.೧. ಸಾಲು ೪೦). ಆ ಮುಂದೆ ಮಂಗರಾಜನ 'ಅಭಿನವಾಭಿದಾನಂ' ಕೋಶದಲ್ಲಿಯೂ (೧೩೯೮) ಕಾಣಿಸಿಕೊಂಡಿದೆ. (ಭೂಮಿಕಾಂಡ. ೧೫ನೆಯ ಪದ್ಯ). ಹದಿನಾಲ್ಕನೆಯ ಶತಮಾನದಿಂದ ಕಾಗದವು ಒಂದು ಗೃಹಕೈಗಾರಿಕೆಯಾಗಿ ತಯಾರಾಗುತ್ತಿದ್ದಿತು ಎನ್ನಬಹುದು. ಉತ್ತರ ಕರ್ನಾಟಕದ ಕೆಲವು ಮುಸ್ಲಿಂ ಮನೆತನಗಳ ಅಡ್ಡ ಹೆಸರು 'ಕಾಗಜ' ಎಂದು ಈಗಲೂ ಇರುವುದನ್ನು ಗಮನಿಸಬೇಕು. ಅಂತೂ ವಿಜಯನಗರದ ಅರವೀಡು ರಾಜಮನೆತನ, ಬಹಮನೀ ರಾಜ್ಯಗಳು ಮತ್ತು ಮೈಸೂರು ಸಂಸ್ಥಾನ-ಇವುಗಳ ರಾಜ್ಯಾಡಳಿತ ಕಾಲದಲ್ಲಿ ಕಾಗದವನ್ನು ತಪ್ಪದೆ ಉಪಯೋಗಿಸುತ್ತಿದ್ದರೆನ್ನಬಹುದು. ಸುಪ್ರಸಿದ್ಧವಾದ 'ರಾಮರಾಯನ ಬಖೈರ'ನ್ನು ಕಾಗದದ ಮೇಲೆಯೇ ಬರೆದಿರಬೇಕೆಂದು ಊಹಿಸಬಹುದು. ಮುಂದೆ ೧೮ನೆಯ ಶತಮಾನದ ಹೊತ್ತಿಗೆ ಕಾಗದದ ವಿಷಯಕ್ಕಿದ್ದ ಮೈಲಿಗೆಯ ಭಾವನೆಯು ಕಡಿಮೆಯಾಗಿ ಅದನ್ನು ಎಲ್ಲ ವರ್ಗಗಳವರು ಬಳಸತೊಡಗಿದರು. ಎರಡನೆಯ ಕಂಠೀರವ ನರಸರಾಜರ ೧೭೭೯ನೆಯ ವರ್ಷದ ಒಂದು ಶಾಸನವು ಕಾಗದದ ಮೇಲೆ ಇದ್ದಿತೆಂಬುದು ಮೇಲಣ ಮಾತಿಗೆ ಪುಷ್ಟಿಯನ್ನು ಕೊಡಬಲ್ಲುದು.[೩]

ಹದಿನೆಂಟನೆಯ ಶತಮಾನದಲ್ಲಿ ಗದ್ಯವನ್ನು ಪುರಾಣ ಮತ್ತು ಶಾಸ್ತ್ರ ಗ್ರಂಥಗಳ ಟೀಕಾನುವಾದಕ್ಕಾಗಿಯೇ ಮುಖ್ಯವಾಗಿ ಬಳಸಲಾಯಿತು. ಮೈಸೂರು ಆಸ್ಥಾನದಲ್ಲಿದ್ದ ವೀರಶೈವ ಹಾಗೂ ಶ್ರೀವೈಷ್ಣವ ವಿದ್ವಾಂಸರು ವಿಶೇಷವಾಗಿ ಇಂಥ ಟೀಕಾಗದ್ಯವನ್ನು

ರಚಿಸಿದರು. ಆದರೆ ಜೈನ ಹಾಗೂ ಅದ್ವೈತಿಗಳ ಗದ್ಯ ಕೃತಿಗಳು ಸಂಖ್ಯಾಮಾನದಿಂದ ಅಷ್ಟಾಗಿ ಕಂಡುಬರುವುದಿಲ್ಲ. ಇನ್ನು ಚಾರಿತ್ರಿಕ ನಿರೂಪಣೆಗೆ ಗದ್ಯವು ಹೆಚ್ಚು ಹೃದ್ಯವಾಗುತ್ತಿದ್ದಿತೇನೋ ನಿಜ, ಹಾಗೆಂದು ಭಾವಿಸಿ ಕೃತಿರಚನೆ ಮಾಡಿದ ತಿರುಮಲಾರ್ಯನ ಗದ್ಯ ಪರಂಪರೆಯನ್ನು ಮುಂದಿನ ಚಾರಿತ್ರಿಕ ಲೇಖಕರಲ್ಲಿ ಅನುಸರಿಸಿದವರು ಒಬ್ಬಿಬ್ಬರು ಮಾತ್ರ.

ಆದರೆ ಗದ್ಯವನ್ನು ಜ್ಯೋತಿಷ್ಯ, ವೈದ್ಯಕೀಯ, ವ್ಯಾಕರಣ ಮುಂತಾದ ಶಾಸ್ತ್ರ ವಿಷಯಗಳ ನಿರೂಪಣೆಗೆ ಆಯ್ದುಕೊಂಡುದು, ಗದ್ಯದ ಮುನ್ನಡೆಯ ಲಕ್ಷಣವಾಗಿದೆ. ಕಳಲೆಯ 'ವೀರರಾಜೋಕ್ತಿವಿಲಾಸ' ಎನಿಸಿದ ಸಕಲ 'ವೈದ್ಯ ಸಂಹಿತಾಸಾರಾರ್ಣವ'ವೂ, ತಿಮ್ಮರಾಜಗೌಡನ 'ಸ್ತ್ರೀವೈದ್ಯ'ವೂ ಈ ಮಾತಿಗೆ ನಿದರ್ಶನಗಳಾಗಿವೆ. 'ಶಬ್ದಮಣಿದರ್ಪಣ'ಕ್ಕೆ ಟೀಕೆಯನ್ನು ಬರೆದ ನಿಷ್ಠೂರು ನಂಜಯ್ಯನು ಇದೇ ಕಾಲದವನು. 'ಗೀತಗೋವಿಂದ', 'ಸೌಂದರ್ಯಲಹರಿ'–ಇವುಗಳೂ ಗದ್ಯ ರೂಪದಲ್ಲಿ ಅನುವಾದಗೊಂಡುವು.

ಹೀಗೆ ೧೮ನೆಯ ಶತಮಾನದಲ್ಲಿ ಉಚ್ಚಮಟ್ಟದ ಕೃತಿಶ್ರೇಣಿ ಇಲ್ಲವೆಂಬ ಮಾತು ತೌಲನಿಕವಾಗಿ ನಿಜವಾದರೂ, ಮೇಲೆ ಹೇಳಿದ ದಾಸತ್ರಯರ ಹಾಗೂ ಇನ್ನು ಕೆಲವರ ಕೃತಿಗಳು ಇದಕ್ಕೆ ಅಪವಾದವಾಗಿವೆ. ಮುಖ್ಯ ಮಾತೆಂದರೆ ಹೊಸಗನ್ನಡಕ್ಕೆ ಸಂಬಂಧಿಸಿದ ಹಲವು ಪರಂಪರೆಗಳು ಈ ಶತಮಾನದಲ್ಲಿಯೆ ಉಗಮ ಹೊಂದಿದುವು. ಅವು ಮುಂದಿನ ಶತಮಾನದಲ್ಲಿ ಹೆಚ್ಚು ಸ್ಫುಟವಾಗಿ ಹೊರಹೊಮ್ಮಿದುವು.

ಈ ರೀತಿಯಲ್ಲಿ ಹರಿದು ಬಂದ ಕನ್ನಡ ಸಾಹಿತ್ಯವಾಹಿನಿಗೆ ಪಾಶ್ಚಾತ್ಯ ಸಂಪರ್ಕದ ಹೊಸ ನೀರು ಸೇರಿಕೊಂಡಿತು. ಈ ವಾಙ್ಮಯ ಸಂಗಮದ ರೂಪರೇಷೆಗಳನ್ನು ಪರಿಶೀಲಿಸುವ ಮೊದಲು ೧೯ನೆಯ ಶತಮಾನದಲ್ಲಿ ನಾಡಿನ ಸ್ಥಿತಿ ಹೇಗಿದ್ದಿತು, ಮತ್ತು ಹೊಸ ವಿಚಾರಧಾರೆಯು ಯಾವ ರೀತಿಯಲ್ಲಿ ಪರಿಣಾಮ ಮಾಡಿತೆಂಬುದನ್ನು ನೋಡೋಣ.

## ೧.೨ ಪಾಶ್ಚಾತ್ಯ ಸಂಪರ್ಕ

### ೧.೨.೧ ರಾಜಕೀಯ ಮತ್ತು ಸಾಮಾಜಿಕ ಸ್ಥಿತ್ಯಂತರಗಳು

ವಾಸ್ಕೋ-ದ-ಗಾಮನ ಕಾಲದಿಂದಲೇ ಯುರೋಪಿಯನ್ನರ ಸಂಪರ್ಕವು ಭಾರತಕ್ಕೆ ಒದಗಿ ಬಂದಿದ್ದರೂ ಜನಜೀವನದ ಮೇಲೆ ಅದರ ವಿಶೇಷ ಪರಿಣಾಮವಾಗಿರಲಿಲ್ಲ. ಬಂಗಾಲದ ಸಿರಾಜ ಉದ್ದೌಲನು ಕ್ರಿ.ಶ. ೧೭೫೭ರ ಪ್ಲಾಸಿಯುದ್ಧದಲ್ಲಿ ಸೋತಂದಿನಿಂದ ಪಾಶ್ಚಾತ್ಯ ಪ್ರಭಾವದ ನಾಂದಿಯಾಯಿತು. ಮುಂದೆ ೧೭೬೫ರಲ್ಲಿ ಸಮಗ್ರ ಬಂಗಾಲ ಮತ್ತು ಬಿಹಾರ ಇವುಗಳ ಆಡಳಿತವು ಬ್ರಿಟಿಶರ ಹಸ್ತಗತವಾಯಿತು. ಅಂತೂ ಪಶ್ಚಿಮ ದಿಕ್ಕಿನಿಂದ ಬಂದ ಬ್ರಿಟಿಶರು ಪೂರ್ವದ ಬದಿಯಿಂದ ಭಾರತದ ಆಕ್ರಮಣಕ್ಕೆ ತೊಡಗಿದರು.

ಇತ್ತ ಮುಂಬಯಿ, ಮದ್ರಾಸ ಈ ಮುನ್ನಿನ ವ್ಯಾಪಾರ ಸ್ಥಳಗಳು ರಾಜಕೀಯ ವ್ಯವಹಾರ ಕೇಂದ್ರಗಳಾದುವು. ಕ್ರಿಶ. ೧೭೯೮ರಂದು ವೆಲ್ಲಸ್ಲಿಯ ಸಹಾಯಕ ಸೈನ್ಯಪದ್ಧತಿಯು ಆಚರಣೆಯಲ್ಲಿ ಬಂದಾಗ ಬ್ರಿಟಿಶರ ವ್ಯಾಪಾರೋದ್ದೇಶವು ಸಂಪೂರ್ಣ ಲುಪ್ತವಾಯಿತು ಎನ್ನಬಹುದು. ದಕ್ಷಿಣದಲ್ಲಿ ಹೈದರ, ಟೀಪೂ ಇವರು ಮಾತ್ರ ಬ್ರಿಟಿಶರಿಗೆ ಮಲೆತು ನಿಂತಿದ್ದರು. ಕ್ರಿ.ಶ. ೧೭೯೯ರ ಶ್ರೀರಂಗಪಟ್ಟಣದ ಕೊನೆಯ ಕಾಳಗದಲ್ಲಿ ಟೀಪೂ ಸುಲ್ತಾನನು ಮಡಿದಾಗ, ಇಂಗ್ಲಿಶರಿಗೆ ಅನೇಕ ಹೊಸ ಪ್ರದೇಶಗಳು ಕೈವಶವಾದುವಲ್ಲದೆ ಮೈಸೂರು ಸಂಸ್ಥಾನದ ಆಡಳಿತ ಅವರ ಕೈಗೆ ಬಂದಿತು. ಇತ್ತ ಪಶ್ಚಿಮದಲ್ಲಿ ಪೇಶವೆಯವರು ಉಳಿದಿದ್ದರಷ್ಟೆ. ಕ್ರಿ.ಶ.೧೭೬೧ರ ಪಾಣೀಪತ್ ಯುದ್ಧದ ಕಾಲದಿಂದ ಇಳಿಮುಖವಾಗಿದ್ದ ಅವರ ಅರಸೊತ್ತಿಗೆಯು ೧೮೧೮ರ ಖಡಕಿಯ ಯುದ್ಧದಲ್ಲಿ ಅಸ್ತಂಗತವಾಯಿತು. ಅಂದಿನಿಂದ ಬ್ರಿಟಿಶರಿಗೆ ಸರಿಸಮವಾಗಿ ಸೆಣಸಾಡಬಲ್ಲ ಯಾವ ದೊಡ್ಡ ರಾಜರೂ ಉಳಿಯಲಿಲ್ಲ. ನಿಜಾಮನಾದಿಯಾಗಿ ಸಣ್ಣ, ದೊಡ್ಡ ಸಂಸ್ಥಾನಿಕರೆಲ್ಲರೂ ಬ್ರಿಟಿಶರ ಹತೋಟಿಯಲ್ಲಿಯೇ ಇದ್ದರು.

ಕರ್ನಾಟಕದಲ್ಲಿ, ಬ್ರಿಟಿಶರ ನೇರವಾದ ಆಡಳಿತಕ್ಕೆ ಒಳಗಾದ ಮೊತ್ತಮೊದಲಿನ ಪ್ರದೇಶವೆಂದರೆ 'ಕೆನರಾ' (೧೭೯೯). ಅದು ಟೀಪೂವಿನಿಂದ ದೊರೆತದ್ದು. ಮರುವರ್ಷ ನಿಜಾಮನು ಬಳ್ಳಾರಿ ವಿಭಾಗವನ್ನು ಬ್ರಿಟಿಶರಿಗೆ ಬಿಟ್ಟುಕೊಟ್ಟನು. ಖಡಕಿಯ ಯುದ್ಧವು ಜರುಗುವುದಕ್ಕೆ ಒಂದು ವರುಷ ಮೊದಲೇ, ಬ್ರಿಟಿಶರು ಪೇಶ್ವೆಯವರಿಂದ ಧಾರವಾಡ ಸುಭೆಯನ್ನು ಪಡೆದಿದ್ದರು. ಪೇಶ್ವೆ ಸತ್ತೆಯು ಅಳಿದ ಮೇಲೆ ಮುಂಬಯಿ ಕರ್ನಾಟಕದ* ಬಹುಭಾಗವು ಬ್ರಿಟಿಶರಿಗೆ ವಶವಾಯಿತು. ಅದಕ್ಕೂ ಉತ್ತರದ ಪ್ರದೇಶಗಳಾದ ರಾಯಚೂರು, ಕಲಬುರ್ಗಿ, ಬೀದರ ಜಿಲ್ಲೆಗಳು ಮಾತ್ರ ನಿಜಾಮನ ವಶದಲ್ಲೇ ಉಳಿದವು. ಸಣ್ಣಪುಟ್ಟ ಸಂಸ್ಥಾನಗಳಲ್ಲೊಂದಾದ ಕೊಡಗು ೧೮೩೪ರಲ್ಲಿ ಬ್ರಿಟಿಶರ ಅಧೀನವಾಯಿತು.

ಹೀಗೆ ೧೯ನೆಯ ಶತಮಾನದ ಆರಂಭದಲ್ಲಿಯೇ ಕರ್ನಾಟಕವನ್ನು ಆಡಳಿತ ದೃಷ್ಟಿಯಿಂದ ಹಲವಾರು ತುಂಡುಗಳಾಗಿ ಮಾಡುವ ಕಾರ್ಯವು ಮುಗಿದಿದ್ದಿತು. ಇಷ್ಟರ ಮಟ್ಟಿಗಿನ ವಿಭಜನೆಯು, ಇತರ ಯಾವುದೇ ಒಂದು ಭಾಷಾ ಪ್ರದೇಶದಲ್ಲಿ ನಡೆದಿರಲಿಲ್ಲ. ಇದು ಸಾಲಲಿಲ್ಲವೆಂಬಂತೆ 'ಕೆನರಾ'ವನ್ನು ೧೮೬೨ರಲ್ಲಿ ಒಡೆದು, ಉತ್ತರ ಕನ್ನಡ ಜಿಲ್ಲೆಯನ್ನು ಸೃಷ್ಟಿಸಿ ಮುಂಬಯಿ ಪ್ರಾಂತ್ಯಕ್ಕೆ ಸೇರಿಸಲಾಯಿತು. ನೆರೆಯಲ್ಲಿದ್ದ ಈ ಎರಡೂ ಪ್ರದೇಶಗಳ ಪ್ರಾಂತ್ಯಮಟ್ಟದ ರಾಜಧಾನಿಗಳಲ್ಲಿ ಒಂದು ಪೂರ್ವಕ್ಕೆ (ಮದ್ರಾಸ) ಮುಖಮಾಡಿದ್ದರೆ, ಇನ್ನೊಂದು ಪಶ್ಚಿಮದತ್ತ! (ಮುಂಬಯಿ). ಅಂತೂ ೧೯ನೆಯ ಶತಮಾನದಲ್ಲಿ ಕನ್ನಡನಾಡು ಅರ್ಧ ಬ್ರಿಟಿಶರ ಆಧಿಪತ್ಯದಲ್ಲಿಯೂ ಇನ್ನರ್ಧ ಬೇರೆ

* ಎಂದರೆ ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳು.

ಬೇರೆ ಸಂಸ್ಥಾನಿಕರ ವಶದಲ್ಲಿಯೂ ಉಳಿಯಿತು. ವಿವಿಧ ಆಡಳಿತಗಳಲ್ಲಿ ಹೀಗೆ ಹರಿದು ಹಂಚಿದ್ದ ಪರಿಣಾಮವಾಗಿ ಕನ್ನಡಿಗರು ಶೈಕ್ಷಣಿಕ, ಸಾಹಿತ್ಯಿಕ ಮತ್ತಿತರ ರಂಗಗಳಲ್ಲಿ ಹಿಂದೆ ಬಿದ್ದರು.

ಭಾರತದಲ್ಲಿ ಬ್ರಿಟಿಶರ ಸತ್ತೆಯು ನಿರಂಕುಶವೇನೂ ಆಗಿರಲಿಲ್ಲ. ಅಲ್ಲಲ್ಲಿದ್ದ ಪ್ರತಿಭಟನಾ ಶಕ್ತಿಗಳು ಒಟ್ಟುಗೂಡಿ ೧೮೫೭ರಲ್ಲಿ ದಂಗೆ ಎದ್ದುವು. ಉತ್ತರದಲ್ಲಿ ಅದು ಪ್ರಖರವಾಗಿದ್ದಷ್ಟು ದಕ್ಷಿಣ ಭಾರತದಲ್ಲಿ ಇರಲಿಲ್ಲ. ಅಂತೂ ಬ್ರಿಟಿಶರಿಗೆ ಜಯವಾಗಿ ಅವರ ರಾಜಸತ್ತೆಯು ಅಬಾಧಿತವಾಯಿತು. ನಾಮಮಾತ್ರದ ಮೊಗಲರ ಅರಸೊತ್ತಿಗೆಯು ಅಂದಿಗೆ ಮುಗಿಯಿತು. ಬ್ರಿಟಿಶರು ಪಾಶ್ಚಾತ್ಯ ನಾಗರಿಕ ಸೌಕರ್ಯದ ಅಂಶಗಳನ್ನು ವಿಸ್ತರಿಸತೊಡಗಿದರು. ಅವುಗಳಲ್ಲಿ, ಸಂಪರ್ಕ ಸಾಧನಗಳನ್ನು ಇಲ್ಲಿ ಪ್ರಸ್ತಾಪಿಸಬೇಕು. ಕ್ರಿ.ಶ. ೧೮೭೦ರ ಹೊತ್ತಿಗೆ ಪ್ರಮುಖ ನಗರಗಳಾದ ಕಲ್ಕತ್ತ, ಮದ್ರಾಸ, ಮುಂಬಯಿಗಳು ರೈಲುಮಾರ್ಗದಿಂದ ಜೋಡಿಸಲ್ಪಟ್ಟಿದ್ದುವು. ತಂತಿಯ ಸಂಪರ್ಕವು (ಟೆಲಿಗ್ರಾಫ್) ಇದೇ ಸಮಯಕ್ಕೆ ಹಬ್ಬುತ್ತ ನಡೆಯಿತು. ಅಂಚೆಯ ವ್ಯವಸ್ಥೆಯಲ್ಲಿ ಸುಧಾರಣೆಗಳಾಗಿದ್ದುವು ಮತ್ತು ಗ್ರಂಥಪ್ರಸಾರಕ್ಕೆ ನೆರವಾಗತಕ್ಕ ಬುಕ್-ಪೋಸ್ಟ್ ವ್ಯವಸ್ಥೆಯೂ ಪ್ರಥಮತಃ ಆಚರಣೆಯಲ್ಲಿ ಬಂದಿತು.

ಈ ಹೊಸ ರಾಜ್ಯಭಾರದ ಮಹತ್ವದ ಪರಿಣಾಮವೆಂದರೆ ಮಧ್ಯಯುಗದ ಪಾಳೆಯಗಾರಿಕೆಯ (Feudalism) ಅಂತ್ಯ. ನಿರಂಕುಶಾಧಿಕಾರವುಳ್ಳ ರಾಜ, ಮಂತ್ರಿ, ಸರದಾರ, ಪಂಡಿತ–ಇವರಿಂದ ಕೂಡಿದ ರಾಜನ ದರ್ಬಾರು; ವಿವಿಧ ಪಾಳೆಯಗಾರರು; 'ರಾಜನು ಯಾರಾದರೇನು; ರಾಗಿ ಬೀಸುವುದು ತಪ್ಪಿದ್ದಲ್ಲ' ಎಂಬ ಮನೋಭಾವದ ಜನತೆ–ಈ ಮಧ್ಯಯುಗೀನ ರಾಜಕೀಯ ಅನುಕ್ರಮದ ಪರಿಸಮಾಪ್ತಿಯು ಕ್ರಿ. ಶ. ೧೭೫೭ರಿಂದ ಆರಂಭವಾಗಿ ಮುಂದಿನ ನೂರನೆಯ ವರ್ಷಕ್ಕೆ ಪೂರ್ಣಗೊಂಡಿತು. ಸಾಹಿತ್ಯಲೋಕದಲ್ಲಿ ಕಂಡುಬಂದ ಇದರ ಪರಿಣಾಮವೆಂದರೆ, ಕವಿಗಳು ಕೇವಲ ರಾಜಾಶ್ರಯವನ್ನು ನಂಬಿ ಬದುಕಬೇಕಾಗಿದ್ದ ಸ್ಥಿತಿಯು ಕ್ರಮೇಣ ಹೋಯಿತು. ಆದರೆ ಈ ಮಾತು ಕರ್ನಾಟಕಕ್ಕೆ ಪೂರ್ಣವಾಗಿ ಅನ್ವಯಿಸುವುದಿಲ್ಲ. ಪಂಡಿತ ಪೋಷಣೆಗೆ ಹೆಸರಾದ ಮೈಸೂರು ಸಂಸ್ಥಾನವು ಮಾತ್ರ ಈ ಮಧ್ಯಯುಗೀನ ಪರಂಪರೆಯನ್ನು ಮುಂದುವರಿಸಿತು. ನಿಜಾಮ ಕರ್ನಾಟಕದಲ್ಲಿಯೂ ತುಸುಮಟ್ಟಿಗೆ ಮಧ್ಯಯುಗೀನ ಸ್ವರೂಪವು ಉಳಿದುಕೊಂಡಿತು.

ಹತ್ತೊಂಬತ್ತನೆಯ ಶತಮಾನದ ಭಾರತಕ್ಕೆ ಪಾಶ್ಚಾತ್ಯ ಸಂಪರ್ಕವು ಈ ನಾಲ್ಕು ಬಗೆಯಲ್ಲಿ ಒದಗಿ ಬಂದಿತು.

ಒಂದು; ಆಡಳಿತ, ವ್ಯವಹಾರ

ಎರಡು; ಮುದ್ರಣ ಯಂತ್ರ

ಮೂರು; ಕ್ರಿಸ್ತಮತ ಪ್ರಚಾರ

ನಾಲ್ಕು; ಹೊಸ ಶಿಕ್ಷಣ ಪದ್ಧತಿ, ಮತ್ತು ಹೊಸ ವಿಚಾರಸರಣಿ.

ಬ್ರಿಟಿಶರ ಆಡಳಿತದಲ್ಲಿ, ಅವರ ಸ್ವಾರ್ಥಸಾಧನೆ ಎಷ್ಟೇ ಇರಲಿ, ಆಗ ಇದ್ದ ಸುವ್ಯವಸ್ಥೆ, ಬಿಗುವು ಆ ಹಿಂದಿನ ದೇಶೀಯ ರಾಜ್ಯಭಾರಗಳಲ್ಲಿ ವಿಶೇಷತಃ ೧೭–೧೮ನೆಯ ಶತಮಾನಗಳಲ್ಲಿ ಇರಲಿಲ್ಲ. ಬ್ರಿಟಿಶ್ ಅಧಿಕಾರಿಗಳ ಕಾರ್ಯಕ್ಷಮತೆಯಂತೂ ಸಾಮಾನ್ಯ ಭಾರತೀಯನನ್ನು ಬೆರಗುಗೊಳಿಸಿತು. ಕೆಲವೇ ಬ್ರಿಟಿಶ್ ಅಧಿಕಾರಿಗಳು ಇಡೀ ಜಿಲ್ಲೆಯೊಂದನ್ನು ಸಮರ್ಥಯುತವಾಗಿ ನಿಯಂತ್ರಿಸುತ್ತಿದ್ದಾಗ ಆಡಳಿತದ ಹಿಡಿತವು ದೇಶದ ಹಳ್ಳಿ ಹಳ್ಳಿಗೂ ಪಸರಿಸಿತು. ಅದರ ಹಿಂದೆ, ದೇಶದ ಆರ್ಥಿಕ ಶೋಷಣೆ ನಡೆದಿದ್ದಿತಾದರೂ ಆ ಮುನ್ನಿನ ಅಸ್ಥಿರ ರಾಜಕೀಯದ ಅಶಾಂತ ವಾತಾವರಣವು ಕಣ್ಮರೆಯಾಗಿ, ಜನತೆಗೆ ನೆಮ್ಮದಿ, ಭದ್ರತೆಗಳು ದೊರಕಿದುವೆಂಬುದು ನಿಜ.

ಇತ್ತ ಯುರೋಪದ ಔದ್ಯೋಗಿಕ ಸುಧಾರಣೆಗಳು ಒಂದೊಂದಾಗಿ ಭಾರತದಲ್ಲಿ ಕಾಲಿಡತೊಡಗಿದುವು. ಉದ್ಯಮ, ಕೈಗಾರಿಕೆಗಳಿಗೆ ಸಂಬಂಧಿಸಿದ ಯಂತ್ರ ಸಾಮಗ್ರಿ, ಆಧುನಿಕ ಸಂಚಾರ ಸಾಧನ ಇವುಗಳಲ್ಲಿ ಕೆಲವು ಭಾರತೀಯರ ಊಹೆಗೂ ನಿಲುಕದಿದ್ದವುಗಳು. ಅದರಂತೆ ಅತ್ಯಂತ ಭಿನ್ನವಾದ ಪಾಶ್ಚಾತ್ಯ ನಾಗರಿಕತೆಯು ಜನಕ್ಕೆ ಆಕರ್ಷಕವಾಗಿ ತೋರಿತು. ಮುಖ್ಯವಾಗಿ ಅವರ ಚಿಕಿತ್ಸಕ ಮನೋವೃತ್ತಿ, ವ್ಯಾವಹಾರಿಕ ದೃಷ್ಟಿ, ಜಾತಿಗಳ ಮೇಲು ಕೀಳನ್ನೆಣಿಸದ ವ್ಯವಹರಣೆ ಇವು ಭಾರತೀಯರ ಬದುಕಿನಲ್ಲಿ ಹರಡುತ್ತ ನಡೆದು, ಅವರ ಜೀವನ ದೃಷ್ಟಿಯನ್ನು ಬದಲಿಸತೊಡಗಿದವು.

ಭಾರತದ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ಒದಗಿ ಬಂದ ಅಮೂಲ್ಯ ಸಾಮಗ್ರಿ ಎಂದರೆ ಮುದ್ರಣ ಯಂತ್ರ. ಯಾವ ದೇಶದಲ್ಲಿಯೆ ಆಗಲಿ ಮುದ್ರಣವು ಮೊದಲು ಕಾಲಿರಿಸಿದ ಕೆಲವೇ ಕಾಲದಲ್ಲಿ ಆ ದೇಶವು ಪ್ರಗತಿ ಪಥದಲ್ಲಿ ಮುನ್ನಡೆದುದು ಐತಿಹಾಸಿಕವಾಗಿ ಸಿದ್ಧವಾದ ಮಾತು. ಭಾರತದಲ್ಲಿಯೂ ಹಾಗೆಯೇ ಆಯಿತು. ಅದು ಶೈಕ್ಷಣಿಕ ಹಾಗೂ ಸಾಹಿತ್ಯಿಕ ರಂಗಗಳಲ್ಲಿ ಕ್ರಾಂತಿಯನ್ನುಂಟುಮಾಡಿತು. ಒಂದು ಕೈಯಲ್ಲಿ ಬೈಬಲ್, ಅದರ ಬೆನ್ನಿಗೇ ಮುದ್ರಣ ಸಾಮಗ್ರಿ–ಇವನ್ನು ಹಿಡಿದುಕೊಂಡು ಬಂದ ಮಿಶನರಿಗಳು ಸ್ವಮತ ಪ್ರಸಾರದ ಕಾರ್ಯದಲ್ಲಿ ತೊಡಗಿದರು. ಆ ನಿಮಿತ್ತದಿಂದ ಸಾಹಿತ್ಯ, ಶಿಕ್ಷಣ ಕ್ಷೇತ್ರಗಳಲ್ಲಿ ನೇರವಾಗಿ ಪ್ರವೇಶಿಸಿದರು.

ಪಾಶ್ಚಾತ್ಯ ಸಂಪರ್ಕಗಳಲ್ಲಿ ಹೊಸ ಶಿಕ್ಷಣ ಕ್ರಮವೇ ಎದ್ದು ಕಾಣುವಂತಹದು. ತಮ್ಮ ಅನುಕೂಲಕ್ಕೆ ಸರಕಾರವೂ ಮಿಶನರಿ ಜನರೂ ಇಂಗ್ಲಿಷ್ ಶಾಲೆಗಳನ್ನು ತೆರೆದೊಡನೆ ಭಾರತೀಯರು ಆ ವಿದ್ಯಾಪ್ರವಾಹದಲ್ಲಿ ಈಸು ಬಿದ್ದರು. ಅವರ ಅಧ್ಯಯನಕ್ಕಾಗಿ ಇದ್ದ ಆಧುನಿಕ ವಿಜ್ಞಾನ, ಪ್ರಪಂಚ ಪರಿಚಯ, ಇಂಗ್ಲಿಷ್ ವಾಙ್ಮಯ ಎಲ್ಲವೂ ಅವರಿಗೆ ಹೊಸತೊಂದು ಜಗತ್ತನ್ನು ತೆರೆದು ತೋರಿದುವು.

ಈ ಸಂಪರ್ಕಗಳ ಅಪ್ರತ್ಯಕ್ಷ ಪರಿಣಾಮವೆಂಬಂತೆ ಜೀವನದ ನೀತಿ ಮೌಲ್ಯಗಳು ಮಾರ್ಪಟ್ಟುವು. ಜನತೆಯಲ್ಲಿ ಸ್ವಾಭಿಮಾನ ಹಾಗೂ ಸ್ವತಂತ್ರ ವಿಚಾರಸರಣಿ - ಇವು ಒಡಮೂಡಿದುವು. ಈ ಸಂದರ್ಭದ ವೈಚಿತ್ರ್ಯವೊಂದನ್ನು ನೋಡುವ ಹಾಗಿದೆ. ಮಿಶನರಿಗಳು ಹಿಂದೂಧರ್ಮವನ್ನು ಮನಸಾರೆ ತೆಗಳಿ, ಜನರನ್ನು ಆ ಧರ್ಮದಿಂದ ವಿಮುಖರನ್ನಾಗಿ ಮಾಡಬಯಸಿದಷ್ಟೂ ಜನತೆಯಲ್ಲಿ ತಮ್ಮ ಪುರಾತನ ಮತತತ್ತ್ವ-ಪರಂಪರೆಗಳಲ್ಲಿ ಅಭಿಮಾನ ಹೆಚ್ಚುತ್ತ ನಡೆಯಿತು. ಶ್ರೀರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ದಯಾನಂದ ಸರಸ್ವತಿ; ಅದರಂತೆ ಚಿಪಳೂಣಕರ, ಟಿಳಕ ಮುಂತಾದವರಿಂದಲೂ ಆರ್ಯಸಮಾಜ, ಬ್ರಹ್ಮಸಮಾಜದಂಥ ಸಂಸ್ಥೆಗಳಿಂದಲೂ ನಡೆದ ಧಾರ್ಮಿಕ ಜಾಗೃತಿ ಮತ್ತು ಸಾಮಾಜಿಕ ಸುಧಾರಣಾ ಕಾರ್ಯವು ಅಭೂತಪೂರ್ವವೆನಿಸಿತು. ಬ್ರಿಟಿಶರೇ ಸ್ಥಾಪಿಸಿದ ಮುಂಬಯಿಯ ಎಲ್‌ಫಿನ್‌ಸ್ಟನ್ ಕಾಲೇಜ್, ದಿಲ್ಲಿಯ ಉರ್ದು ಕಾಲೇಜ್, ಕಲಕತ್ತೆಯ ಹಿಂದೂ ಕಾಲೇಜ್, ಪುಣೆಯ ಡೆಕ್ಕನ್ ಕಾಲೇಜ್ - ಇವು ಇಂಥ ಅಭಿಮಾನಿಗಳ ನಿರ್ಮಾಣ ಕೇಂದ್ರಗಳಾಗಿ ಪರಿಣಮಿಸಿದುವು. ಅವರು ತಮ್ಮ ಪ್ರಾಚೀನ ಪರಂಪರೆಗಳನ್ನು ಬಿಟ್ಟುಕೊಡದೇ, ಅದರಲ್ಲಿಯೆ ಸುಧಾರಣೆಗಳನ್ನು ಮಾಡಬಯಸಿದರು. ಬ್ರಿಟಿಶರು ಭಾರತೀಯನನ್ನು ತಮ್ಮ ಅಡಿಯಾಳಾಗಿ ಇಟ್ಟುಕೊಳ್ಳುವ ಮೂಲೋದ್ದೇಶದಿಂದ ಇಂಗ್ಲಿಷ್ ಶಿಕ್ಷಣವನ್ನು ಕೊಡಲು ಬಯಸಿದ್ದರು. ಆದರೆ ಅದು ಅವನಲ್ಲಿ ಸ್ವತಂತ್ರ ವಿಚಾರ ಶಕ್ತಿಯನ್ನು ಪ್ರೇರೇಪಿಸಿತು ಮತ್ತು ಮುಂದಿನ ರಾಜಕೀಯ ಆಂದೋಲನಕ್ಕೆ ನೆಲವನ್ನು ಹರಗಿ ಸಜ್ಜುಗೊಳಿಸಿತು. ಹೀಗೆ ಈ ಎರಡೂ ಸಂಪರ್ಕಗಳ ಹಿಂದಿದ್ದ ಉದ್ದೇಶವು ಸ್ವಾರ್ಥದೃಷ್ಟಿಯಿಂದ ಕೂಡಿದ್ದರೂ ಭಾರತದ ಜನತೆಗೆ ಅದೊಂದು ಉಪಕಾರವಾಗಿ ಪರಿಣಮಿಸಿತು.

ಪಾಶ್ಚಾತ್ಯ ಸಂಪರ್ಕದ, ಸಾಮಾಜಿಕ ರೀತಿಯ ಪರಿಣಾಮ ವಿಶೇಷವೆಂದರೆ ಮಧ್ಯಮ ವರ್ಗದ ಪ್ರತಿಷ್ಠಾಪನೆ ಮತ್ತು ಆ ವರ್ಗೀಯರು ಬೆಳೆಯಿಸಿಕೊಂಡ ಚಿಕಿತ್ಸಕ ಮನೋವೃತ್ತಿ. ತಾವು ಪಡೆದ ಹೊಸ ಬಗೆಯ ಶಿಕ್ಷಣದ ಪರಿಣಾಮವಾಗಿ ಅವರಲ್ಲಿ, 'ಪುರಾಣಮಿತ್ಯೇವ ನ ಸಾಧು ಸರ್ವಂ' ಎಂಬ ಮನೋಭಾವ ಉದಯಿಸಿತು. ಹಿರಿಯರು ಹೇಳಿದುದೆಂಬ ಏಕಮೇವ ಕಾರಣದಿಂದ ಹಿಂದಿನದೆಲ್ಲವನ್ನೂ ಸ್ವೀಕರಿಸಲೊಲ್ಲದೆ, ಅದರ ಬಗ್ಗೆ ಅವರಲ್ಲಿ ಜಿಜ್ಞಾಸೆಯ ಬೆಳೆದು ಬಂದಿತು. ವಿ.ಸೀ. ಅವರ ಮಾತಿನಲ್ಲಿ ವಿವರಿಸುವುದಾದರೆ 'ವಿಜ್ಞಾನವೂ ವಿಜ್ಞಾನ ತಂತ್ರವೂ ದೈವವಾದವನ್ನು ಪ್ರತಿಭಟಿಸುವಂತೆ ಹಬ್ಬಿದಾಗ ಅಲ್ಲಿನಂತೆಯೇ ಇಲ್ಲಿಯೂ ಆಸ್ತಿಕತೆಯೂ ಪೂರ್ವಾಚಾರವೂ ಭಕ್ತಿ ಶ್ರದ್ಧೆಗಳೂ ಸಡಿಲವಾದುವು......ಯಾವುದನ್ನೂ ಕುರಿತು, ಏಕೆ ಹೀಗೆ? ವಿಧಾನ ಹೇಗೆ? ಈ ವಾದ, ಈ ನಿರ್ಣಯ ಏಕಾಗಬಾರದು? ಎಂಬ ಪ್ರಶ್ನೆಯ ಪೃಚ್ಛೆಯ ಧಾರಾಳ, ಸ್ವಾತಂತ್ರ್ಯ ಹುಟ್ಟಿತು.[೪]

ಸಾಮಾಜಿಕ ಸ್ಥಿತ್ಯಂತರದ ಇನ್ನೊಂದು ವೈಶಿಷ್ಟ್ಯವೆಂದರೆ, ಭಾರತೀಯನಲ್ಲಿ ಮೂಡಿಬಂದ ಲೌಕಿಕ ಹಾಗೂ ವ್ಯಕ್ತಿಗತವಾದ ದೃಷ್ಟಿಕೋಣ. ಇದುವರೆಗೆ ಮತಧರ್ಮದ ಆವರಣದಲ್ಲಿ ಬೆಳೆದು ಬಂದ ಅವನ ಮನೋವೃತ್ತಿಯು ಸಮಷ್ಟಿಯದಾಗಿತ್ತು. ಪಾಶ್ಚಾತ್ಯ ಪ್ರಭಾವದಿಂದ ಮೂಡಿದ ಲೌಕಿಕ ವಿಚಾರಗಳಿಂದಾಗಿ ಜೀವನಕ್ರಮವು ಹೆಚ್ಚು ಹೆಚ್ಚು ವ್ಯಕ್ತಿಪರವಾಗುತ್ತ ನಡೆಯಿತು. ಮತ್ತು ಇಹಲೋಕದ ನಡೆವಳಿಕೆಗಳಿಗೆ ಪ್ರಾಧಾನ್ಯವನ್ನೀಯಬೇಕಾದ ಪರಿಸ್ಥಿತಿಯು ತಲೆದೋರಿತು. ಈ ವೈಯಕ್ತಿಕ ಮನೋಭಾವವೂ ಮೇಲೆ ಹೇಳಿದ ಜಿಜ್ಞಾಸಾ ಪ್ರವೃತ್ತಿಯೂ ಮಧ್ಯಮ ವರ್ಗೀಯರಲ್ಲಿಯೆ ಹೆಚ್ಚಾಗಿ ವ್ಯಕ್ತವಾದುವು.

## ೧.೨ ಮಿಶನರಿ ಜನರ ಆಗಮನ

ಯುರೋಪ್, ಅಮೇರಿಕೆಗಳಲ್ಲಿನ ಮಿಶನರಿಗಳನ್ನು ಭಾರತವೇ ಹೆಚ್ಚಾಗಿ ಆಕರ್ಷಿಸಿತು. ಹತ್ತೊಂಬತ್ತನೆಯ ಶತಮಾನದ ಮಧ್ಯದ ಸುಮಾರಿಗೆ ನಾಲ್ಕು ಮಿಶನ್ ಸಂಸ್ಥೆಗಳಿಗೆ ಸಂಬಂಧಿಸಿದ ೪೦೦ಕ್ಕೆ ಮಿಕ್ಕಿದ ಮಿಶನರಿ ಜನರು ಭಾರತದ ವಿವಿಧ ಪ್ರದೇಶಗಳಲ್ಲಿ ಕಾರ್ಯತತ್ಪರರಾಗಿದ್ದರು. ಅದೇ ಕಾಲದಲ್ಲಿ ಪ್ರಪಂಚದ ಬೇರೆಡೆಗಳಲ್ಲಿ ಚದುರಿದ್ದ ಮಿಶನರಿಗಳ ಒಟ್ಟಿನ ಸಂಖ್ಯೆಯು ೨೦೦ರಷ್ಟು ಇದ್ದಾಗ, ಭಾರತದಲ್ಲಿಯ ಅವರ ಈ ಸಂಖ್ಯಾಬಾಹುಲ್ಯವು ಎದ್ದು ಕಾಣುತ್ತದೆ.[೫]

ಆ ಕಾಲದಲ್ಲಿ ಕ್ರಿಸ್ತಮತ ಪ್ರಸಾರಕ್ಕೆಂದು ಭಾರತಕ್ಕೆ ಬರುತ್ತಿದ್ದ ವಾರ್ಷಿಕ ಧನಸಹಾಯವು ಸುಮಾರು ೨೦ ಲಕ್ಷ ರೂಪಾಯಿಗಳಷ್ಟಿದ್ದಿತು. ಆ ಹಣದ ಬಹ್ವಂಶವು ಶಿಕ್ಷಣ ಮತ್ತು ಮುದ್ರಣಗಳಿಗೇ ವೆಚ್ಚವಾಗುತ್ತಿದ್ದಿತು. ಅವರ ಮುದ್ರಣಾಲಯಗಳೂ ನೂರಾರು ವಿದ್ಯಾಲಯಗಳೂ ದೇಶಾದ್ಯಂತ ಕಾರ್ಯನಿರತವಾಗಿದ್ದುವು.

ಈ ಧನವೆಚ್ಚ ಮತ್ತು ಪರಿಶ್ರಮದ ಮಾನದಿಂದ, ಅವರಿಗೆ ಮತಾಂತರ ರೂಪದಲ್ಲಿ ದೊರೆಯಬೇಕಾದ ಪ್ರತಿಫಲವು ಒಟ್ಟಿನಲ್ಲಿ ನಿರಾಶಾಜನಕವಾಗಿದ್ದಿತು. ಯಾವುದೊಂದು ಊರಲ್ಲಿ ಕೇಂದ್ರವನ್ನು ಸ್ಥಾಪಿಸಿ ಮತಾಂತರದ ಎಲ್ಲ ವಿಧಾನಗಳನ್ನು ಅನುಸರಿಸುತ್ತ ಏಳೆಂಟು ವರ್ಷಗಳನ್ನು ಕಳೆದರೂ ಒಬ್ಬನಾದರೂ ಕ್ರಿಸ್ತೀಯನಾಗದಿದ್ದ ಸಂದರ್ಭಗಳೂ ಇಲ್ಲದಿಲ್ಲ. ಬೆರಳೆಣಿಕೆಯಷ್ಟು ಹುಡುಗರಿರುವ ಶಾಲೆಗಳನ್ನು ಅವರು ವರ್ಷಾವಧಿಯ ವರೆಗೆ ನಡೆಸಿದುದುಂಟು. ಪುಸ್ತಕ ವಿಚಾರದಲ್ಲಿಯೂ ಇದೇ ಸ್ಥಿತಿ. ಕಾಗದವನ್ನು ಆಯಾತ ಮಾಡಿಕೊಂಡು ಸಣ್ಣ ಮುದ್ರಾಯಂತ್ರದಲ್ಲಿ ಬಹು ಪ್ರಯಾಸದಿಂದ ಸಾವಿರಾರು ಪ್ರತಿಗಳನ್ನು ಮುದ್ರಿಸಿ ದೇಶದ ಮೂಲೆ ಮೂಲೆಗಳಲ್ಲಿ ಪುಕ್ಕಟೆಯಾಗಿ ಹಂಚಿಯೊ, ಅಲ್ಪ ಬೆಲೆಗೆ ಮಾರಾಟ ಮಾಡಿಯೊ ಬರುತ್ತಿದ್ದರು. ಅದಕ್ಕೆ ಹೇಳಿಕೊಳ್ಳುವಂತಹ ಪುರಸ್ಕಾರ ಸುರುವಿಗೆ ದೊರೆಯುತ್ತಿರಲಿಲ್ಲ.

ಅಂದಿನ ಕಾಲದ ಮಿಶನರಿಗಳ ಬದುಕಿನ ಹಿನ್ನೆಲೆಯನ್ನು ತುಸು ಗಮನಿಸಬೇಕು. ಅವರಲ್ಲಿ ಅನೇಕರು ಜನ್ಮತಃ ಕುಶಾಗ್ರಬುದ್ಧಿಯವರು. ಕೆಲವರು ಯುರೋಪದ ವಿಶ್ವವಿದ್ಯಾಲಯಗಳ ಉನ್ನತ ಪದವೀಧರರು. ಇವರು ತಮ್ಮ ದೇಶದಲ್ಲಿಯೇ ಯಾವುದೊಂದು ಉದ್ಯೋಗದಲ್ಲಿದ್ದು ಲಾಭದಾಯಕವಾದ, ನಿಶ್ಚಿಂತವಾದ ಜೀವನವನ್ನು ಸಾಗಿಸಬಹುದಿತ್ತು. ಆದರೆ ಸ್ವಧರ್ಮನಿಷ್ಠೆಯಿಂದ ಪ್ರೇರಿತರಾಗಿ ಕ್ರಿಸ್ತ ಸೇವಾದೀಕ್ಷೆಯನ್ನು ಕೈಕೊಂಡರು. ಯುರೋಪದಲ್ಲಿಯ ಮಿಶನ್ ಸಂಸ್ಥೆಯೊಂದರ ಸದಸ್ಯರಾಗಿ ಅವರು ೨-೩ ವರ್ಷ ಮತಪ್ರಸಾರದ ವಿಷಯಕವಾದ ತರಬೇತಿಯನ್ನು ಹೊಂದಿ, ತರುಣ ವಯಸ್ಸಿನಲ್ಲಿಯೆ ಭಾರತಕ್ಕೆ ಬರುತ್ತಿದ್ದರು. ಹೊಸ ನೆಲ, ಹೊಸ ಜನ, ಪರಿಚಯಸ್ಥರು ಎಲ್ಲೋ ಒಬ್ಬಿಬ್ಬರು. ಭಾಷೆಯಂತೂ ಸಂಪೂರ್ಣ ಹೊಸತು. ತಮ್ಮ ಮುಖ್ಯ ಕಾರ್ಯದಲ್ಲಿ ಅವರು ಜಯಿಸಬೇಕಾದದ್ದು, ಪ್ರಗಲ್ಭವೂ ವೈವಿಧ್ಯಮಯವೂ ಆದ ಹಿಂದೂ ಧರ್ಮದ ತತ್ತ್ವಗಳನ್ನು. ಆ ಮೂಲಕ ಜನತೆಯ ದ್ವೇಷ ಮತ್ತು ಅಪಮಾನಗಳನ್ನು ಅವರು ಸಹನೆಯಿಂದಲೂ ಧೈರ್ಯದಿಂದಲೂ ಎದುರಿಸಬೇಕಾಗಿದ್ದಿತು.

ಮಿಶನರಿ ಜನರ ನಿತ್ಯದ ಬದುಕು ಎಳ್ಳಷ್ಟೂ ಬಿಡುವಿಲ್ಲದುದು. ಪ್ರವಚನ, ಉಪದೇಶ ಮುಂತಾದ ಧಾರ್ಮಿಕ ಕಾರ್ಯಗಳಲ್ಲದೆ, ಶಾಲೆ, ಮುದ್ರಣಾಲಯ, ಸಾರ್ವಜನಿಕ ಮತ್ತು ಸರಕಾರೀ ಸಂಪರ್ಕ -ಇವೂ ಅವರ ದೈನಂದಿನ ಸಮಯವನ್ನು ಬೇಡುತ್ತಿದ್ದವು. ಅವರ ಬದುಕಿನ ಇನ್ನೊಂದು ವೈಶಿಷ್ಟ್ಯವೆಂದರೆ ತಿರುಗಾಟ. ತಮ್ಮ ಕೇಂದ್ರ ಸ್ಥಳದಿಂದ ತುಂಬ ದೂರದವರೆಗೆ, ಬಿಸಿಲಿನ ಬೇಗೆ, ಆಹಾರ ನೀರುಗಳ ಅಸಮರ್ಪಕತೆ – ಇವುಗಳನ್ನು ಲೆಕ್ಕಿಸದೆ ಪ್ರವಾಸದಲ್ಲಿರುತ್ತಿದ್ದರು.

ಇವೆಲ್ಲ ತೊಂದರೆಗಳ ಮಧ್ಯದಲ್ಲಿ ಅವರ ಸ್ವಂತದ ಭಾಷಾಭ್ಯಾಸ ಮತ್ತು ಪುಸ್ತಕ ರಚನೆ ನಡೆಯುತ್ತಿದ್ದುವು. ಭಾಷೆಯ ವಿಶೇಷ ಅಧ್ಯಯನಕ್ಕೆ, ಈಗಿನಂತೆ ಹಿಂದಿನ ಕೃತಿಗಳೆಲ್ಲವೂ ಮುದ್ರಣ ರೂಪದಲ್ಲಿ ದೊರೆಯುತ್ತಿರಲಿಲ್ಲ. ದೇಶೀಯ ವಿದ್ವಾಂಸರು ಮುಕ್ತ ಮನಸ್ಸಿನಿಂದ ಇವರಿಗೆ ನೆರವಾಗುತ್ತಿರಲಿಲ್ಲ. ಪರಿಸ್ಥಿತಿ ಹೀಗೆ ತೊಡಕಿನದಾಗಿದ್ದರೂ ಆಗಿನ ಕೆಲವು ಮಿಶನರಿಗಳು ಭಾರತೀಯ ಭಾಷೆಗಳಲ್ಲಿ ಪರಿಣತಿಯನ್ನು ಹೊಂದಿದುದೇ ಅಲ್ಲದೆ, ಹಲವು ಮೇಲ್ಮಟ್ಟದ ಸಾಹಿತ್ಯಿಕ ಕೃತಿಗಳನ್ನು ಕೊಡಮಾಡಿದ್ದುದು ಸಾಹಸದ ಮಾತೇ ಸೈ. ಮಿಶನರಿಗಳ ಸಾಹಿತ್ಯಿಕ, ಅದರಂತೆ ಶೈಕ್ಷಣಿಕ ಸಾಧನೆಗೆ ಅವರ ಕುಶಾಗ್ರಮತಿತ್ವ ಕಷ್ಟಸಹಿಷ್ಣುತೆ, ತ್ಯಾಗದ ಮನೋವೃತ್ತಿ, ಹಿಡಿದ ಕೆಲಸವನ್ನು ಉತ್ಕೃಷ್ಟ ರೀತಿಯಲ್ಲಿ ಕೊನೆಗಾಣಿಸಬೇಕೆನ್ನುವ ಶ್ರದ್ಧೆ ಮತ್ತು ಛಲ – ಇವುಗಳೇ ಕಾರಣವಾಗಿವೆ. ಅಂತೆಯೇ 'ಮಿಶನರಿ ಝೀಲ್' ಎನ್ನುವುದು ಹತ್ತೊಂಬತ್ತನೆಯ ಶತಮಾನದ ಈಚೆಗೆ ಒಂದು ಆದರ್ಶ ದ್ಯೋತಕವಾದ ಪಡೆಮಾತಾಗಿ ನೆಲೆಗೊಂಡಿತು.

ಮಿಶನರಿಗಳ ಸಾಹಿತ್ಯಕಾರ್ಯವು ಒಂದು ನಿಶ್ಚಿತ ಕ್ರಮದಲ್ಲಿ ನಡೆದು ಬಂದಿತು. ತಮ್ಮ ಮಿಶನ್ ಕ್ಷೇತ್ರದ ಭಾಷೆಯನ್ನು ಕಲಿತ ಮೇಲೆ, ಬೈಬಲ್ ಹಾಗೂ ಮತ ತತ್ತ್ವದ ಪುಸ್ತಕಗಳನ್ನು ಅನುವಾದಿಸುವುದು; ಜೊತೆಗೆ ಆ ಭಾಷೆಯ ವ್ಯಾಕರಣ, ಕೋಶಗಳನ್ನು ರಚಿಸುವುದು –ಇದು ಒಂದು ನಿಟ್ಟಿನ ಕೆಲಸವಾದರೆ ಮಿಶನ್ ಶಾಲೆಗಳ ವಿದ್ಯಾರ್ಥಿಗಳಿಗಾಗಿ ಪಠ್ಯಪುಸ್ತಕ ರಚನೆಯೂ ನಡೆಯುತ್ತಿದ್ದಿತು. ಇವೆಲ್ಲವುಗಳ ಪ್ರಕಟನೆಗಾಗಿ ಮಿಶನ್ನಿನ ವತಿಯಿಂದ ಒಂದು ಅಚ್ಚುಕೂಟವನ್ನು ಸ್ಥಾಪಿಸಿ, ಅವುಗಳ ಮುದ್ರಣ, ವಿತರಣಗಳನ್ನು ಕೈಗೊಳ್ಳುವುದು; ಅನುಕೂಲವಾದರೆ ತಮ್ಮ ಸಂಸ್ಥೆಯ ಮುಖಪತ್ರಿಕೆಯನ್ನು ಹೊರಡಿಸುವುದು – ಈ ಚೌಕಟ್ಟಿನಲ್ಲಿಯೆ ಮಿಶನರಿಗಳ ವಾಙ್ಮಯ ಕಾರ್ಯವು ಮುಂದುವರಿಯಿತು. ಹಾಗೆ ಮಾಡುತ್ತಲೇ ನಮ್ಮ ದೇಶದ ಅನೇಕ ಭಾಷಾ ಸಾಹಿತ್ಯಗಳಲ್ಲಿ ಕೆಲವು ಹೊಸ ಪರಂಪರೆಗಳನ್ನು ಅವರು ಪ್ರಸ್ಥಾಪಿಸಿದರು.

ಅವರ ಗ್ರಂಥ ಪ್ರಕಟನೆಯು 'ಸಹಾಯಕ ಬೈಬಲ್ ಸಂಘ' ಹಾಗೂ 'ಬುಕ್ ಎಂಡ್ ಟ್ರ್ಯಾಕ್ಟ್ ಬುಕ್ ಸೊಸೈಟಿ'ಗಳ ಮುಖಾಂತರವೇ ನಡೆಯಬೇಕಾಗಿದ್ದಿತು. ಇಂಥ ಸಂಸ್ಥೆಗಳಿಗೆ ಲಂಡನ್ನಿನಲ್ಲಿದ್ದ 'ಬ್ರಿಟಿಶ್ ಎಂಡ್ ಫಾರೆನ್ ಬೈಬಲ್ ಸೊಸೈಟಿ' ಹಾಗೂ 'ರಿಲಿಜಸ್ ಟ್ರ್ಯಾಕ್ಟ್ ಸೊಸೈಟಿ'ಗಳು ವಿಶೇಷ ಧನಸಹಾಯವನ್ನು ಒದಗಿಸುತ್ತಿದ್ದುವು. ಇದರ ಪರಿಣಾಮವಾಗಿ ಮಿಶನರಿ ಕೇಂದ್ರಗಳಿದ್ದ ಎಲ್ಲಾ ಮಹತ್ವದ ಸ್ಥಳಗಳಲ್ಲಿಯೂ ಇಂಥ ಪೂರಕ ಸಂಸ್ಥೆಗಳು ಜನ್ಮತಾಳಿದುವು; ಗ್ರಂಥೋದ್ಯಮಕ್ಕೆ ನೆರವಾದುವು. ಲಂಡನ್ನಿನ ಕೇಂದ್ರೀಯ ಮಿಶನ್ ಸಂಸ್ಥೆಯ ವರದಿಯೊಂದರ ಪ್ರಕಾರ ೧೮೪೯–೧೮೫೯ರ ಅವಧಿಯಲ್ಲಿ ಭಾರತದಲ್ಲಿದ್ದ ಮಿಶನರಿಗಳು ೮೩೪ ಪುಸ್ತಕಗಳನ್ನು ವಿವಿಧ ಭಾಷೆಗಳಲ್ಲಿ (ಹೆಚ್ಚಾಗಿ ಬಂಗಾಲಿ ಮತ್ತು ತಮಿಳು) ರಚಿಸಿ ಪ್ರಕಟಿಸಿದ್ದಾರೆ. ಕೆಲವೊಂದು ಮುಖ್ಯ ಕೃತಿಗಳು ಬಹುತರ ಎಲ್ಲ ಭಾಷೆಗಳಲ್ಲಿಯೂ ಅನುವಾದಗೊಂಡವು. ಬೈಬಲ್ ಅಂತೂ ಸರಿಯೇ. ಜಾನ್ ಬನ್ಯನ್ನನ 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' ಹಾಗೂ 'ಹೋಲೀ ವಾರ್'; 'ಫುಲಮಣಿ ಕರುಣಾ' ಎಂಬ ಕಥಾನಕ, ಮೊದಲಾದ ಕೃತಿಗಳು ಹತ್ತಾರು ಭಾಷೆಗಳಲ್ಲಿ ಕಾಣಿಸಿಕೊಂಡಿವೆ. ಇಂಗ್ಲಿಷ್ ಪುಸ್ತಕಗಳಲ್ಲದೆ, ಕೆಲವು ಮಿಶನರಿ ಜನರು ತಾವು ವಾಸವಾಗಿದ್ದ ಪ್ರದೇಶದ ಭಾಷೆಯಲ್ಲಿ ಸ್ವತಂತ್ರ ಕೃತಿಗಳನ್ನು ರಚಿಸಿದುದು ಕಂಡುಬರುತ್ತದೆ. ಈ ಕೃತಿಗಳಲ್ಲಿಯ ವಿಷಯವು ಒಟ್ಟಿನ ಮತಪ್ರಚಾರಕ್ಕೆ ಅನುಕೂಲವೇ ಆದ್ದರಿಂದ ಅವುಗಳಲ್ಲಿ ಕೆಲವು ನೆರೆಯ ಭಾಷೆಗಳಲ್ಲಿ ಅನುವಾದಗೊಂಡವು.

ಮಿಶನರಿಗಳ ಯಾವುದೇ ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಕಾರ್ಯವನ್ನು ತೆಗೆದುಕೊಳ್ಳಲಿ, ಅದರ ಹಿಂದೆ ಕ್ರೈಸ್ತಧರ್ಮ ಪ್ರಸಾರ ಮತ್ತು ಮತಾಂತರವು ಏಕಮೇವ ಪ್ರಚೋದನೆಯಾಗಿದ್ದಿತು. ಶಬ್ದಕೋಶದ ರಚನೆಯಲ್ಲಿ ಧಾರ್ಮಿಕ ಉದ್ದೇಶವೇನಿದ್ದೀತು – ಎಂದು ನಮಗೆ ಮೇಲುನೋಟಕ್ಕೆ ತೋರಬಹುದು. ವಿಸ್ತಾರವಾದ ಮರಾಠೀ –

ಇಂಗ್ಲಿಷ್ ಕೋಶವನ್ನು ಸಿದ್ಧಪಡಿಸಿದ ಮೋಲ್ಸ್‌ವರ್ಥನ ಈ ಮಾತುಗಳನ್ನು ಗಮನಿಸಬೇಕು:

It was undertaken not from a thirst after honour or emolument, but from an humble desire of promoting the propagation of the glorious Gospel; and it was continued by the energy of this desire, through sickness and weakness and against troubles and difficulties and grievous discouragement.[೬]

ಹೀಗೆ ಮಿಶನರಿ ಜನರು ಭಾರತೀಯರಿಗಾಗಿ, ಅವರ ಏಳ್ಗೆಗಾಗಿ ಇಂಥ ಕಾರ್ಯವನ್ನು ಕೈಕೊಂಡವರೇನಲ್ಲ. ಅವರು ಭಾರತದ ಪ್ರಾಚೀನ ಗ್ರಂಥಗಳಲ್ಲಿ, ಸಾಂಸ್ಕೃತಿಕ ಪರಂಪರೆಯಲ್ಲಿ ಆಸಕ್ತಿ ವಹಿಸಿದ್ದರೆ, ಅದು ಸ್ವಮತ ಪ್ರಸಾರದ ಉದ್ದೇಶ ಸಾಧನೆಗಾಗಿಯೇ. ಅವರ ಸಾಹಿತ್ಯಿಕ ಕಾರ್ಯವು, ಪ್ರೀತಿಮ್ ಸೊರೊಕಿನ್ ಒಂದೆಡೆ ಹೇಳಿದಂತೆ, 'by-product' ಸ್ವರೂಪದಲ್ಲಿ ಭಾರತೀಯರ ಪ್ರಯೋಜನಕ್ಕೆ ಒದಗಿ ಬಂದಿತು. ಈ ಮಾತನ್ನು ನಿಚ್ಚಳವಾಗಿ ತಿಳಿದುಕೊಂಡಷ್ಟೂ ಅವರ ಗ್ರಂಥೋದ್ಯಮದ ನಿಜವಾದ ನೆಲೆ-ಬೆಲೆಗಳನ್ನು ಕಂಡುಕೊಳ್ಳುವುದಕ್ಕೆ ಸಹಾಯಕವಾಗುತ್ತದೆ.

ಆದರೆ ಯಾವುದೊಂದು ವಿಷಯದಲ್ಲಿ ಸಂಪೂರ್ಣ ತಲ್ಲೀನರಾಗಿ ಆಳವಾದ ಅಭ್ಯಾಸವನ್ನು ಕೈಕೊಂಡು ಆ ಕುರಿತು ಗ್ರಂಥರಚನೆ ಮಾಡಿದ್ದಾಗ ಮತೀಯ ದೃಷ್ಟಿಯು ಹಿಂದುಳಿದು ಆ ಕೃತಿಯು ಸರ್ವಜನ ಗ್ರಾಹ್ಯವಾದ ಸಂದರ್ಭಗಳೂ ಇವೆ. ಅಂಥ ಗ್ರಂಥಗಳು ಇಂದಿಗೂ ಪ್ರಮಾಣಭೂತವಾಗಿ ಉಳಿಯುವಷ್ಟು ಸತ್ವವನ್ನು ಪಡೆದಿವೆ. ಕಿಟೆಲರ ಕನ್ನಡ ನಿಘಂಟು ಈ ಮಾತಿಗೆ ಅತ್ಯುತ್ತಮ ನಿದರ್ಶನ. ಇಂಥ ಮೌಲಿಕ ಕೃತಿಗಳು ಇತರ ಭಾರತೀಯ ಭಾಷೆಗಳಲ್ಲಿಯೂ ಕೆಲವಿವೆ.

ಕರ್ನಾಟಕಕ್ಕೆ ಬಂದಿದ್ದ ಮಿಶನರಿಗಳು 'ಜೆಸುಯಿಟ್ ಸೊಸೈಟಿ', 'ಲಂಡನ್ ಮಿಶನ್, 'ವೆಸ್ಲಿಯನ್ ಮೆಥಾಡಿಸ್ಟ್ ಮಿಶನ್' ಹಾಗೂ 'ಜರ್ಮನ್ ಇವ್ಯಾಂಜೆಲಿಕಲ್ (ಬಾಸೆಲ್) ಮಿಶನ್' – ಇವುಗಳಲ್ಲೊಂದು ಸಂಸ್ಥೆಗೆ ಸೇರಿದವರಾಗಿದ್ದರು. ಮೊದಲಿನದು ರೋಮನ್ ಕೆಥಲಿಕರದಾದರೆ, ಉಳಿದವು ಪ್ರೊಟೆಸ್ಟಂಟ್ ಸಂಸ್ಥೆಗಳಾಗಿವೆ. ಭಾರತದ ಇತರ ಕಡೆಗಳಲ್ಲಿ ಕಂಡು ಬರುವ ಡೇನಿಶ್ ಹಾಗೂ ಅಮೇರಿಕನ್ ಬ್ಯಾಪ್ಟಿಸ್ಟ್ ಮೊದಲಾದ ಸಂಸ್ಥೆಯವರು ೧೯ನೆಯ ಶತಮಾನದಲ್ಲಿ ಕರ್ನಾಟಕಕ್ಕೆ ಬಂದುದಿಲ್ಲ.

ನಮ್ಮ ನಾಡಿನಲ್ಲಿ ಮಿಶನರಿ ಚಟುವಟಿಕೆಯು ೧೭ನೆಯ ಶತಮಾನದಷ್ಟು ಹಿಂದಿನ ಕಾಲದ್ದು. ಅದನ್ನು ಆರಂಭಿಸಿದವನು ಜೆಸುಯಿಟ್ ಪಾದ್ರಿಯಾದ ಲಿಯೊನಾರ್ದೊ ಸಿನ್ನಾಮಿ (೧೬೮೯ – ೧೬೭೬). ಅವನು ಕಾಲವಾದ ಮೇಲೆ ಜೆಸುಯಿಟರ ಮತಾಂತರ ಕಾರ್ಯವು ಮುಂದುವರಿದು ಮಂಗಳೂರು, ಬೆಂಗಳೂರುಗಳು ರೋಮನ್ ಕೆಥಲಿಕ್ ವಸತಿಯ ಪ್ರಮುಖ ಕೇಂದ್ರಗಳಾದುವು. ಕ್ರಿ.ಶ. ೧೮೫೦ರಲ್ಲಿ ಚಾರ್ಬೊನಾ ಎಂಬವನು

ಮೈಸೂರ ಸಂಸ್ಥಾನದ 'ವಿಕಾರ್ ಎಪೋಸ್ಟಲಿಕ್' ಆದಾಗಿನಿಂದ ಕೆಥಲಿಕರ ಕನ್ನಡ ಚಟುವಟಿಕೆಗಳು ಕಂಡುಬಂದವು.

ಇತ್ತ ಪ್ರೊಟೆಸ್ಟಂಟ್ ಮಿಶನರಿಗಳ ಕಾರ್ಯಾಚರಣೆಗೆ ಒಳಗಾದ ಆರಂಭದ ಭಾರತೀಯ ಪ್ರದೇಶಗಳಲ್ಲಿ ಕರ್ನಾಟಕವೂ ಒಂದು. ಲಂಡನ್ ಮಿಶನ್ ಸಂಸ್ಥೆಯ ಜಾನ್ ಹ್ಯಾಂಡ್ಸ್ ೧೮೧೦ರಂದು ಬಳ್ಳಾರಿಯಲ್ಲಿ ಮಿಶನ್ ಕೇಂದ್ರವನ್ನು ಸ್ಥಾಪಿಸಿದನು. ಆಮೇಲೆ ೧೮೨೦ರಲ್ಲಿ ಬೆಳಗಾಂವಿ, ಬೆಂಗಳೂರುಗಳಲ್ಲಿ ಕೇಂದ್ರಗಳನ್ನು ತೆರೆಯಲಾಯಿತು. ಬೆಯ್ನನ್ ಸ್ಮಿಥ್ ಇವರು ಬೆಳಗಾಂವಿ ವಿಭಾಗದ ಶೈಕ್ಷಣಿಕ ಪ್ರಗತಿಗೆ ಕಾರಣರಾದರು. ಬೆಂಗಳೂರಿನ ಲಂಡನ್ ಮಿಶನ್ ಕೇಂದ್ರವು ಬಿ.ಎಚ್. ರೈಸರ ಕಾಲದಲ್ಲಿ ಉತ್ಕರ್ಷವನ್ನು ಹೊಂದಿತು.

ವೆಸ್ಲಿಯನ್ನರ ಕನ್ನಡ ಚಟುವಟಿಕೆಗಳಿಗೆ ಶ್ರೀಕಾರ ಹಾಕಿದವನು, **ಥಾಮಸ್ ಹಾಡ್ಸನ್** (೧೮೩೩). ಇವನ ಕಾರ್ಯಕ್ಷೇತ್ರವು ಮೈಸೂರ ಸಂಸ್ಥಾನದ ಹಲವು ನಗರಗಳಿಗೆ ಸೀಮಿತವಾಗಿತ್ತು. ಹಾಡ್ಸನ್ನನ ಅನಂತರ ಬಂದ ಜೋಸಿಯ ಹಡ್ಸನ್ನನ (೧೮೭೮) ಕಾಲದಲ್ಲಿ ವೆಸ್ಲಿಯನ್ನರ ಶೈಕ್ಷಣಿಕ ಕಾರ್ಯವು ಹೆಚ್ಚು ವಿಸ್ತಾರವನ್ನು ಹೊಂದಿತು. ಇನ್ನೊಬ್ಬ ಪ್ರಸಿದ್ಧ ವೆಸ್ಲಿಯನ್ ಮಿಶನರಿಯಾದ ಹೆನ್ರಿ ಹೇಗ್ ಮೈಸೂರು ನಗರದಲ್ಲಿ ನಿಂತು ಮುದ್ರಣ, ಪತ್ರಿಕೋದ್ಯಮ, ಕನ್ನಡ ಬೈಬಲ್ ನವೀಕರಣ ಕಾರ್ಯಗಳಲ್ಲಿ ಬಹುವಾಗಿ ಶ್ರಮಿಸಿದನು.

ಇತ್ತ ನಾಡಿನ ಪಶ್ಚಿಮಕ್ಕೆ ಜರ್ಮನ್(ಬಾಸೆಲ್) ಮಿಶನರಿಗಳು ನೆಲೆನಿಂತರು. ತುಸು ತಡವಾಗಿ ಬಂದರೂ (೧೮೩೪) ಉಳಿದ ಸಂಸ್ಥೆಗಳಿಗಿಂತ ಹೆಚ್ಚು ವ್ಯಾಪಕವಾದ ಕಾರ್ಯಗಳಲ್ಲಿ ತೊಡಗಿದರು. ಮಂಗಳೂರಲ್ಲಿ ಈ ಮಿಶನ್ನನ್ನು ಆರಂಭಿಸಿದ್ದ ಸ್ಯಾಮ್ಯುಯಲ್ ಹೆಬಿಕ್ ಅಲ್ಲಿ ಹೆಚ್ಚು ಕಾಲ ನಿಲ್ಲಲಿಲ್ಲ. ಆಮೇಲೆ ಬಂದ ಮೊವ್‌ಗ್ಲಿಂಗ್* ಮತ್ತು ವೈಗ್ಲೆ ಇವರು ಮಿಶನ್ನನ್ನು ಅಭಿವೃದ್ಧಿಗೆ ತಂದರು. ಆರಂಭದಿಂದ ೧೮೫೭ರ ವರೆಗೆ ಒಟ್ಟಿಗೆ ೭೩ ಜರ್ಮನ್ ಸ್ತ್ರೀ ಪುರುಷರು ಇಲ್ಲಿಯ ಕೇಂದ್ರಕ್ಕೆ ಬಂದಿದ್ದರೆನ್ನುವುದು ಮಿಶನ್ನಿನ ಬೆಳವಣಿಗೆಯ ದ್ಯೋತಕವಾಗಿದೆ. ಅನಂತರ ಬಂದ ಕಿಟೆಲ್, ಶ್ಲಿಗ್ಲರ್ ಮೊದಲಾದವರಿಂದಾಗಿ ಮಿಶನ್ನಿನ ಕೀರ್ತಿಯು ಎಲ್ಲೆಡೆ ಪಸರಿಸಿತು.

ಇವರ ಸಂಘಟನಾ ಶಕ್ತಿಯು ಅನುಪಮವಾದುದು. ಕರ್ನಾಟಕದ ದಕ್ಷಿಣ ಕನ್ನಡ, ಧಾರವಾಡ ಮತ್ತು ಕೊಡಗು ಜಿಲ್ಲೆಗಳು ಮಾತ್ರವಲ್ಲ ಕೇರಳದಲ್ಲಿಯೂ ಇವರು ಕಾರ್ಯನಿರತರಾದರು. ಔದ್ಯೋಗಿಕ ಕ್ಷೇತ್ರದಲ್ಲಿಯೂ ಪರಿಶ್ರಮ ಪಟ್ಟಿದ್ದಾರೆ. ಪ್ರಥಮ ಮಹಾಯುದ್ಧದ ಕಾಲಕ್ಕೆ ಜರ್ಮನ್ ಬ್ರಿಟನ್ನಿನ ಸಂಬಂಧವು ಹದಗೆಟ್ಟಿದ್ದರಿಂದ ಮಿಶನ್ನಿನ ಕಾರ್ಯಾಚರಣೆಗೆ ಆತಂಕವುಂಟಾಯಿತು.

---

* **M'o'gling** — ಈ ಹೆಸರಿನ ಸರಿಯಾದ ಉಚ್ಚಾರ ಹೇಳುವುದು ಕಠಿಣ. ಮ್ಯೊವ್‌ಗ್ಲಿಂಗ್ ಎಂದೂ ಆಗಬಹುದು.

ಇವರೆಲ್ಲ ಮಿಶನರಿಗಳ ಕಾರ್ಯನಿಷ್ಠೆ ಹಾಗೂ ಸತತ ಪ್ರಯತ್ನದ ಫಲವಾಗಿ ೧೯ನೆಯ ಶತಮಾನದ ಅಂತ್ಯದಲ್ಲಿ ದೇಶೀ ಕ್ರೈಸ್ತರ ನೂರಾರು ಮನೆತನಗಳು ತಲೆಯೆತ್ತಿದುವು. ಮೊದಲು ಮತಪ್ರಸಾರಕ್ಕೆ ಅನುಕೂಲವಾಗಲೆಂದು ಶಿಕ್ಷಣ ಮತ್ತು ಗ್ರಂಥೋದ್ಯಮ ಕಾರ್ಯಗಳು ನಡೆದುವಾದರೆ, ಅನಂತರ ದೇಶೀ ಕ್ರೈಸ್ತರಿಗೆಂದೇ ಈ ರಂಗದಲ್ಲಿಯ ಚಟುವಟಿಕೆಗಳು ವಿಸ್ತಾರ ಹೊಂದಿದುವು.

## ೧೩. ಭಾರತದಲ್ಲಿ ಅರುಣೋದಯ ಸಾಹಿತ್ಯ

ಪಾಶ್ಚಾತ್ಯ ಸಂಪರ್ಕದ ಬಗೆಯನ್ನೂ ಅದರಲ್ಲಿ ಮಿಶನರಿ ಜನರ ಪಾತ್ರವೇನೆಂಬುದನ್ನೂ ನೋಡಿದೆವು. ಸಂಪೂರ್ಣ ವಿಭಿನ್ನವಾದ ಈ ಪಾಶ್ಚಾತ್ಯ ಪ್ರಭಾವವನ್ನು, ಭಾರತೀಯ ಸಾಹಿತ್ಯ ಪರಂಪರೆಯು ಹೇಗೆ ಬರಮಾಡಿಕೊಂಡಿತು?

ಯಾವುದೊಂದು ಹೊರಗಿನ ವಿಚಾರ ಪ್ರಣಾಲಿಯು ನೇರವಾಗಿ ಆಗಮಿಸಬಹುದು ಅಥವಾ ಇದ್ದುದನ್ನು ಪಲ್ಲಟಿಸಿ ಆದೇಶವಾಗಿ ಬರಬಹುದು. ಇಲ್ಲವೆ ಮುಂಚೆ ಇದ್ದುದನ್ನು ಲೋಪಗೊಳಿಸಬಹುದು. ಹೀಗೆ ಆಗಮ, ಆದೇಶ, ಲೋಪ — ಈ ಮೂರೂ ಕ್ರಿಯೆಗಳು ಇಂಥ ಸಂಧಿಕಾಲದಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಲೋಪ, ಆದೇಶ ಕ್ರಿಯೆಗಳು ಪ್ರತಿಭಟನಾ ಸ್ವರೂಪದವು. ಆದರೆ ಭಾರತೀಯ ಜಾಯಮಾನಕ್ಕೆ ಅನ್ಯ ಗುಣಗ್ರಹಣ ಮತ್ತು ಸಮನ್ವಯಗಳೇ ಹೆಚ್ಚು ಒಗ್ಗುತ್ತವೆ. ವಿಹಿತವಾದಂಥ ಯಾವುದೇ ಅಂಶವಿರಲಿ, ವಿರೋಧ ಮಂಡಲದಿಂದ ಬಂದದ್ದಿರಲಿ ಅದನ್ನು ಸ್ವೀಕರಿಸುವುದಲ್ಲದೆ ಹಾಗಿಲ್ಲದುದನ್ನು ತನಗೆ ಅನುಕೂಲಿಸುವ ಮಟ್ಟಿಗೆ ಬದಲಿಸಿಕೊಂಡು ತನ್ನಲ್ಲಿ ಬರಮಾಡಿಕೊಳ್ಳುವ ಉದಾರಮತತ್ವವು ನಮ್ಮ ಪರಂಪರೆಯಲ್ಲಿ ಕಂಡುಬರುತ್ತದೆ.

ಅಂತೂ ಪಾಶ್ಚಾತ್ಯ ವಿಚಾರ ಪ್ರಣಾಲಿಗೆ ಒಟ್ಟಿನಲ್ಲಿ ಇಂಬು ದೊರೆಯಿತು. ಇದರರ್ಥ ಪ್ರತಿಭಟನೆಯು ಕಂಡು ಬರಲೇ ಇಲ್ಲವೆಂದಲ್ಲ. ಆದರೆ ಅದು ಉಗ್ರವಾಗಿರಲಿಲ್ಲ. ಹಿಂದೂ ಧರ್ಮದ ಅವಹೇಳನೆ ಮಾಡುತ್ತ ಮಿಶನರಿ ಜನರು ಹಿಂದೂ ದೇವ—ದೇವತೆಗಳನ್ನು ತೆಗಳಿಯೊ, ಮೂರ್ತಿಪೂಜೆಯನ್ನು ಖಂಡಿಸಿಯೊ ಜೋರಿನಲ್ಲಿ ಬರೆದಾಗ ಅಷ್ಟೇ ಬಲವತ್ತರ ಪ್ರತಿಕ್ರಿಯೆಯು ಪರಂಪರಾಗತವಾದ ಸಾಹಿತ್ಯ ವಲಯಗಳಿಂದ ಹೊರಹೊಮ್ಮಲಿಲ್ಲ. ಬದಲಾಗಿ ಸ್ವಧರ್ಮದ ಬಗ್ಗೆ ಹೆಚ್ಚಿನ ಅಭಿಮಾನ, ಅದರಲ್ಲಿಯೇ ಸುಧಾರಣೆ ಈ ರೂಪದಲ್ಲಿ ಪ್ರತಿಕ್ರಿಯೆಯು ವ್ಯಕ್ತವಾಯಿತು. ಇಂತು ಪಾಶ್ಚಾತ್ಯ ಪ್ರಣಾಲಿಯು ಆದೇಶ ಮತ್ತು ಆಗಮ ಕ್ರಿಯೆಗಳಿಂದ ಭಾರತೀಯ ಸಾಹಿತ್ಯ ರಂಗವನ್ನು ಪ್ರವೇಶಿಸಿತು.

ಹೇಗೂ ಸಂಸ್ಕೃತದ ಮತ್ತು ದೇಶ ಭಾಷೆಗಳ ಹಿಂದಿನ ಸಾಹಿತ್ಯ ಪರಂಪರೆಯು ಸಾಕಷ್ಟು ಪ್ರಭಾವಯುತವಾಗಿ, ಆದರೆ ಪಾಶ್ಚಾತ್ಯ ಅಭಿಯೋಗದ ಕಾಲದಲ್ಲಿ ತುಸು

ನಿಧಾನವಾಗಿ, ಸಾಗಿದ್ದಿತು. ಅತ್ತ ಹೊಸ ಸಾಹಿತ್ಯದ ಪ್ರಭಾವವು ಅದರ ನೆರೆಯಲ್ಲಿಯೆ ಹರಿದು ಬರುತ್ತಿದ್ದಾಗ, ತನ್ನ ಪಾತ್ರದಲ್ಲಿಯೆ ಆ ಹೊಸ ನೀರನ್ನು ಕ್ರಮೇಣ ಸೇರಿಸಿಕೊಂಡು ತನ್ನ ವೇಗವನ್ನು ಹೆಚ್ಚಿಸಿಕೊಂಡಿತು.

ಈ ನವೋದಿತ ಸಾಹಿತ್ಯಕ್ಕೆ ಮೇಲೆ ಹೇಳಿದ ಕ್ರೈಸ್ತ ಮತಪ್ರಸಾರ, ಮುದ್ರಣ ಮತ್ತು ಹೊಸ ಶಿಕ್ಷಣ ಕ್ರಮ – ಇವು ಬಾಹ್ಯ ಪ್ರೇರಣೆಗಳು. ಮೂಲಭೂತ ಪ್ರಚೋದನೆಯೆಂದರೆ ತಾನು ತಿಳಿದಿದ್ದ ಹೊಸ ವಿಚಾರಗಳನ್ನು, ಕಂಡ ಅನುಭವಗಳನ್ನು ಅಭಿವ್ಯಕ್ತಗೊಳಿಸಲು ಲೇಖಕನ ಮನದಲ್ಲಿ ಮೂಡಿದ ಒತ್ತಡ ಹಾಗೂ ಅದಮ್ಯ ಅಂತಃಪ್ರೇರಣೆ. ಈ ಪ್ರೇರಣೆಯು ಅದೇ ಪ್ರತಿಷ್ಠಿತನಾಗಿದ್ದ ಮಧ್ಯಮ ವರ್ಗೀಯನಲ್ಲಿ ಉದ್ಭವವಾದುದು ಗಮನಾರ್ಹವಾಗಿದೆ. ಎಂಥ ಸಾಮಾನ್ಯನಿಗೂ ಮುಕ್ತವಾಗಿದ್ದ ಹೊಸ ಶಿಕ್ಷಣದ ಪರಿಣಾಮವಾಗಿ ನವೀನ ವಿಚಾರಗಳು ಅಂದಿನ ವಿದ್ಯಾವಂತರ ಮನದಲ್ಲಿ ಮಥನಗೊಂಡವು. ಮಿಶನರಿ ಜನರ ಮುದ್ರಿತ ಪ್ರಕಟನೆಗಳ ಅನಿರ್ಬಂಧ ಪ್ರಸಾರದಿಂದಾಗಿ ವಾಚನಾಭಿರುಚಿಯು ಕುದುರಿತು. ತಾವೂ ಬರೆಯಬೇಕು; ಬರೆದು ಪ್ರಕಟಿಸಬೇಕು – ಎಂಬ ಒತ್ತಾಸೆ ಮೇಲೆದ್ದಿತು. ಹೇಗೂ ಮುದ್ರಣ ಯಂತ್ರದ ಸೌಲಭ್ಯವು ಹೊಸತಾಗಿ ದೊರಕಿದ್ದತಲ್ಲ. ಇಂತು ಸಾಮಾನ್ಯ ವಿದ್ಯಾವಂತನೂ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗುವಂತಾಯ್ತು.

ಅರುಣೋದಯ ಕಾಲದ ಸಾಹಿತ್ಯದಲ್ಲಿ ಎರಡು ಸ್ಪಷ್ಟವಾದ ಮಾರ್ಗಗಳನ್ನು ಗುರುತಿಸಬಹುದು. ಒಂದರಲ್ಲಿ ಹೊಸ ಬಗೆಯ ಸಾಹಿತ್ಯದ ಆರಂಭದ ಹೆಜ್ಜೆಗಳನ್ನು ಕಾಣುತ್ತೇವೆ. ಶಬ್ದಕೋಶ, ವ್ಯಾಕರಣ ಗ್ರಂಥ, ಪಾಶ್ಚಾತ್ಯ ವಿಚಾರಗಳ ಅನುವಾದ, ಸಾಮಾನ್ಯ ಸ್ವರೂಪದ ಕಥನ– ಹೀಗೆ ಬಿಡಿಬಿಡಿಯಾದ ಪ್ರಯತ್ನಗಳಿವು. ನವಭಾರತದ ವಾಙ್ಮಯ ಕಂದನನ್ನು ಮಿಶನರಿ ಜನರು ಮತ್ತು ಆಡಳಿತಾಧಿಕಾರಿಗಳು – ತಮ್ಮ ಅನುಕೂಲಕ್ಕೆಯೇ ಇರಲಿ – ಕೈಹಿಡಿದು ನಡೆಸಿ, ಹೆಜ್ಜೆ ಹಾಕಲು ಕಲಿಸಿಕೊಟ್ಟ ಕಾಲವಿದು.

ಇನ್ನು ತನ್ನ ಕಾಲಮೇಲೆ ನಿಂತು ನಡೆದಾಡುವಂತಾದ ಕಾಲಾವಧಿಯು ಆಮೇಲಿನದು. ಅರುಣೋದಯದ ಇವೆರಡು ನಡೆಗಳನ್ನು ಪೂರ್ವಾಯಣ ಮತ್ತು ಉತ್ತರಾಯಣಗಳೆನ್ನಬಹುದು. ಪಾಶ್ಚಾತ್ಯ ಪ್ರಭಾವದಿಂದ ತನ್ನಲ್ಲಿ ಮೂಡಿದ ವಿಚಾರಗಳನ್ನು ತನ್ನದೇ ಆದ ರೀತಿಯಲ್ಲಿ ಅಭಿವ್ಯಕ್ತಗೊಳಿಸುವುದಕ್ಕಾಗಿ ಲೇಖಕನ ಮನಸ್ಸಿನಲ್ಲಿ ಅದೆಂದು ಒತ್ತಡ ಮೂಡಿತೋ ಅಂದೇ ನವೋದಿತ ಸಾಹಿತ್ಯದ ಉತ್ತರಾಯಣ ಕಾಲವು ಮೊದಲಾಯಿತು ಎಂದು ತಿಳಿಯಬೇಕು. ಆ ಬಗೆಯ ಅಭಿವ್ಯಕ್ತಿಯಲ್ಲಿ ವೈಯಕ್ತಿಕ ವಿಚಾರ ಸರಣಿ, ಲೌಕಿಕ ದೃಷ್ಟಿ ಮತ್ತು ವಾಸ್ತವತೆಯ ಪ್ರಜ್ಞೆ — ಇವು ಒಡಮೂಡಿದುವು. ಈ ಅಂಶವು ಎಲ್ಲ ಭಾರತೀಯ ಸಾಹಿತ್ಯಗಳಲ್ಲಿ ಕಂಡು ಬಂದಿದ್ದು, ಕೆಲವುಗಳ ಕಾಲಾವಧಿಯನ್ನು ವಿ. ಕೃ. ಗೋಕಾಕರು ಈ ರೀತಿಯಾಗಿ ನಿರ್ದೇಶಿಸಿದ್ದಾರೆ:

If the impulses behind Renaissance crystalised into a definite and original literary form in the Fifties in Bengal, they did so in the Seventies in Marathi and this happened in the Eighties in Kannada.[೭]

ಅರುಣೋದಯ ಕಾಲದ ಸಾಹಿತ್ಯ ರಚನೆಯನ್ನು ಅನುಕರಣ, ಪರಿಷ್ಕರಣ ಮತ್ತು ಸ್ವತಂತ್ರ ನಿರ್ಮಾಣ ಎಂದು ಮೂರು ವಿಧವಾಗಿ ವಿಂಗಡಿಸಬಹುದು. ಅನ್ಯ ಭಾಷೆಯ (ವಿಶೇಷತಃ ಸಂಸ್ಕೃತ ಮತ್ತು ಇಂಗ್ಲಿಷ್) ಕೃತಿಗಳನ್ನು ಅನುವಾದ ಮಾಡಿಯೊ ರೂಪಾಂತರಗೊಳಿಸಿಯೊ ಸ್ವಭಾಷೆಗೆ ತಂದದ್ದು ಅನುಕರಣ. ಇದು ಪ್ರತಿಯೊಂದು ಭಾಷೆಯಲ್ಲಿ ವ್ಯಾಪಕವಾಗಿ ನಡೆಯಿತು. ಕಾಳಿದಾಸ, ಹರ್ಷ, ಶೇಕ್ಸ್‌ಪಿಯರ್ ಮೊದಲಾದವರ ಕೃತಿಗಳು ಹಾಗೂ ಅರೇಬಿಯನ್ ನೈಟ್ಸ್‌ದಂತಹ ಕಥನಗಳು ದೇಶ ಭಾಷೆಗಳಲ್ಲಿ ಕಾಣಿಸಿಕೊಂಡವು. ಎಲ್ಲವೂ ಮೇಲ್ಮಟ್ಟದ ಕೃತಿಗಳೇ ಎಂದಲ್ಲ. ಅನೇಕ ಅನುವಾದಕರಲ್ಲಿ ಯೋಗ್ಯತೆಯೂ ಅಷ್ಟಕ್ಕಷ್ಟೆ. ಹೀಗಾಗಿ ಎಷ್ಟೋ ಬಾರಿ ಕೈಗೆ ಸಿಕ್ಕಿದ್ದನ್ನು ಅನುವಾದಿಸಿದ ಪ್ರವೃತ್ತಿಯು ಕಂಡು ಬರುತ್ತದೆ. "They ploughed the barren furlough of imitation, and translation of tenth-rate English works" ಎಂಬುದಾಗಿ ಕುಸುಮಾವತಿ ದೇಶಪಾಂಡೆಯುವರು ಮರಾಠೀ ನವೋದಯ ಸಾಹಿತ್ಯಕ್ಕೆ ಸಂಬಂಧಿಸಿ ಹೇಳಿದ ಮಾತು, ಇತರ ದೇಶೀ ಸಾಹಿತ್ಯಗಳಿಗೂ ಹೆಚ್ಚು ಕಡಿಮೆಯಾಗಿ ಅನ್ವಯಿಸುವಂತಹದೇ.[೮]

ಸ್ವಧರ್ಮ ಸ್ವಭಾಷೆಗಳ ಮೇಲಿನ ಅಭಿಮಾನವು ಆಗಿನ ಸಾಹಿತ್ಯಿಕರಲ್ಲಿ ಉಕ್ಕಿ ಬಂದಿತೆಂದು ಹೇಳಿದೆವಷ್ಟೆ. ಪರಿಣಾಮವಾಗಿ ಧರ್ಮ ಹಾಗೂ ವಾಙ್ಮಯ ಇವುಗಳಿಗೆ ಸಂಬಂಧಿಸಿದ ಅನೇಕ ಪ್ರಾಚೀನ ಕೃತಿಗಳನ್ನು ಪರಿಷ್ಕರಿಸಿ, ಟೀಕೆ—ಟಿಪ್ಪಣಿ ಅನುವಾದಗಳೊಡನೆ ಪ್ರಕಟಿಸುವ ಕಾರ್ಯವು ದೊಡ್ಡ ಪ್ರಮಾಣದಲ್ಲಿ ನಡೆಯಿತು. ಈ ಬಗೆಯ ಗ್ರಂಥ ಸಂಪಾದನದ ವ್ಯವಸ್ಥಿತವಾದ ಕ್ರಮವನ್ನು ಮೊದಲಿಗೆ ತೋರಿಸಿಕೊಟ್ಟವರು ಸರಕಾರೀ ಅಧಿಕಾರಿಗಳು ಹಾಗೂ ಮಿಶನರಿಗಳು. ಪರಿಷ್ಕರಣ ಕಾರ್ಯವನ್ನು ದೇಶೀಯರೇ ಹೆಚ್ಚಾಗಿ ಕೈಕೊಂಡರಾದರೂ ಅವರ ಪರಿಷ್ಕರಣವು ಆರಂಭ ಕಾಲದಲ್ಲಿ ಶಾಸ್ತ್ರೀಯವಾಗಿ ನಡೆಯಲಿಲ್ಲ. ಇತ್ತ ಕೋಶ, ವ್ಯಾಕರಣ ಮುಂತಾದ ಭಾಷಾಭ್ಯಾಸದ ಸಾಧನಗಳನ್ನು ಹೊಸ ರೀತಿಯಲ್ಲಿ ಪರಿಷ್ಕರಿಸಿ, ಸುಲಭಗೊಳಿಸಿ ಪ್ರಕಟಿಸುವ ಎತ್ತುಗಡೆಯೂ ಎಲ್ಲ ಭಾಷೆಗಳಲ್ಲಿ ನಡೆಯಿತು.

ಈ ಎಲ್ಲ ಸಾಹಿತ್ಯವು ಹೆಚ್ಚಾಗಿ ಪ್ರಕಟವಾದದ್ದು ಗದ್ಯ ರೂಪದಲ್ಲಿ. ಭಾರತದ ಯಾವುದೇ ಭಾಷಾ ಸಾಹಿತ್ಯದ ಹಿಂದಿನ ಕಾಲಾವಧಿಯನ್ನು ಗಮನಿಸಿದಲ್ಲಿ ಗದ್ಯವು ಯಾವಾಗಲೂ ನಿಮ್ನ ವಾಹಿನಿಯಾಗಿಯೇ ಕಂಡುಬರುತ್ತದೆ. ೧೮—೧೯ನೆಯ ಶತಮಾನಗಳಿಂದ ಮಾತ್ರ, ಗದ್ಯವಾಹಿನಿಯು ಅವೆಲ್ಲವುಗಳಲ್ಲಿ ಬಹಿರಂಗವಾಗಿ ಕಾಣಿಸಿಕೊಳ್ಳುತ್ತದೆ. ಇದಕ್ಕೆ ಕಾರಣಗಳು ಹಲವಾರು; ಮತ್ತು ಅವು ಒಂದಕ್ಕೊಂದು

ಹೊಂದಿಕೊಂಡಿರುವಂತಹವು. ಕಾಗದದ ವ್ಯಾಪಕ ಬಳಕೆ; ಮುದ್ರಣ ಯಂತ್ರದ ಅಸ್ತಿತ್ವ — ಅದರಿಂದಾಗಿ ಪ್ರತಿಯೊಂದನ್ನೂ ನೆನಪಿಡುವ ಪ್ರಮೇಯ ತಪ್ಪಿದುದು; ಲೌಕಿಕ ವಿಚಾರಗಳನ್ನು ಆಲಂಕಾರಿಕವಾಗಿ ಪದ್ಯ ರೂಪದಲ್ಲಿ ಹೇಳುವುದಕ್ಕಿಂತ ನೇರವಾಗಿ ಸುಲಭ ರೀತಿಯಲ್ಲಿ ವಿವರಿಸುತ್ತ ಹೋಗಬೇಕಾದುದರ ಅಗತ್ಯ — ಈ ಅಂಶಗಳು ಗದ್ಯದ ಪ್ರಾದುರ್ಭಾವಕ್ಕೆ ಕಾರಣವಾಗಿವೆ. ಆ ಮೊದಲು ಗದ್ಯವು ಕಾವ್ಯ ಪ್ರಪಂಚದ ಒಂದು ವೈವಿಧ್ಯವೆಂಬಂತೆ ಇದ್ದರೆ ಈಗ ಗದ್ಯವನ್ನು ಬಿಟ್ಟರೆ ನಡೆಯುವಂತಿಲ್ಲ ಎಂಬ ಅನಿವಾರ್ಯ ಪರಿಸ್ಥಿತಿ ತಲೆದೋರಿತು. ಇದರಿಂದ ಪದ್ಯದ ಮಹತ್ವವು ಕಡಿಮೆಯಾಯಿತೆಂದೇನೂ ಇಲ್ಲ. ಗದ್ಯ ರಚನೆಯ ಜೊತೆಗೇ ಅದು ಮುಂದುವರಿಯಿತು. ಆದರೆ ಗದ್ಯದಲ್ಲಿಯ ಹೊಸತನ, ವೈವಿಧ್ಯಗಳು ಅರುಣೋದಯ ಕಾಲದ ಪದ್ಯ ರಚನೆಯಲ್ಲಿ ಅಷ್ಟಾಗಿ ಇರಲಿಲ್ಲ.

ಗದ್ಯರೂಪದ ವೈವಿಧ್ಯವೋ ಅತ್ಯಂತ ಮನನೀಯವಾಗಿದೆ. ಬೈಬಲ್ ಮೊದಲಾದ ಕ್ರೈಸ್ತ ಗ್ರಂಥಗಳ ನೇರ ಅನುವಾದದ ಗದ್ಯವು ಒಂದೆಡೆ ಕಂಡು ಬಂದರೆ, ಪತ್ರಿಕಾ ಗದ್ಯ, ಕಥನರೂಪೀ ಗದ್ಯ; ಅಲ್ಲಿಂದ ಕಾದಂಬರಿ ಮತ್ತು ಪ್ರಬಂಧಗಳ ಗದ್ಯ ಇವೆಲ್ಲ ಮೈದೋರಿದುವು. ಮತೀಯ ಹಾಗೂ ಕ್ರಮಿಕ ಪುಸ್ತಕಗಳಲ್ಲಿ ಪ್ರಶ್ನೋತ್ತರ ರೂಪವು (Catechism) ಹೆಚ್ಚು ಉಪಯುಕ್ತವೆನಿಸಿತು. ಅದರಂತೆ ಕಾವ್ಯ, ನಾಟಕಗಳ ಮೂಲ ಸ್ವರೂಪವೂ ತುಸು ಮಾರ್ಪಾಟನ್ನು ಹೊಂದಿತು. ಸಾಹಿತ್ಯ ರೂಪಗಳ ಇಷ್ಟೆಲ್ಲ ವೈವಿಧ್ಯದಿಂದ ವಿಚಾರ ಮಂಡನೆಯ ಹರಹು ವಿಸ್ತಾರಗೊಂಡಿತು. ತನ್ನ ಗ್ರಂಥದ ವಿಷಯಕ್ಕೆ ಅನುಗುಣವಾದ ಸಾಹಿತ್ಯ ರೂಪವನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯವು ಲೇಖಕನಿಗೆ ದೊರೆತುದರಿಂದ ಅಂಥ ಕೃತಿಯ ವಾಚನ ಸುಭಗತೆ ಹೆಚ್ಚಿತು; ರಸಗ್ರಹಣವು ಇನ್ನಷ್ಟು ಸುಲಭವಾಯಿತು.

### ೧.೩.೧ ಸಾಹಿತ್ಯಾರಂಭದ ಹೆಜ್ಜೆಗಳು

ಭಾರತೀಯ ಸಾಹಿತ್ಯದಲ್ಲಿ ಹೊಸ ಯುಗವು ಒಂದೇ ಕಾಲಾವಧಿಯಲ್ಲಿ, ಎಂದರೆ ೧೯ನೆಯ ಶತಮಾನದಲ್ಲಿ ಕಾಣಿಸಿಕೊಂಡಿತು. ತಮಿಳುನಾಡು ಮತ್ತು ಬಂಗಾಲಗಳಲ್ಲಿ ಮಾತ್ರ ಹೊಸ ಸಾಹಿತ್ಯದ ಆರಂಭದ ಹೆಜ್ಜೆಗಳು ೧೮ನೆಯ ಶತಮಾನದಲ್ಲೇ ಕಂಡು ಬಂದದ್ದಾದರೆ ಕಾಶ್ಮೀರದಲ್ಲಿ ಅದರ ನಿಶ್ಚಿತ ರೂಪವು ೨೦ನೆಯ ಶತಮಾನದ ಆದಿಯಲ್ಲಿ ತೋರಿ ಬಂದಿದೆ. ಈ ಕೆಲವು ಭಾಷಾ ಸಾಹಿತ್ಯಗಳ ಕಾಲಾವಧಿಯಲ್ಲಿ ಹೀಗೆ ತುಸು ಹೆಚ್ಚು ಕಡಿಮೆಗಳಿದ್ದರೂ ಒಟ್ಟನಲ್ಲಿ ೧೯ನೆಯ ಶತಮಾನವೇ ನವೋದಿತ ಸಾಹಿತ್ಯದ ತೂಗುತೊಟ್ಟಿಲಾಗಿದೆ. ಹೊಸ ಸಾಹಿತ್ಯವು ಭಾರತದ ವಿವಿಧ ಭಾಷೆಗಳಲ್ಲಿ ತಲೆದೋರಿದ ಬಗೆಯನ್ನು ಸ್ಥಾಲೀಪುಲಾಕನ್ಯಾಯದಿಂದ ಇಲ್ಲಿ ನಿದರ್ಶಿಸಬಹುದಾಗಿದೆ.

ಮಿಶನರಿಗಳೂ ಸರಕಾರೀ ಅಧಿಕಾರಿಗಳೂ ಹೊಸ ಸಾಹಿತ್ಯದ ಆರಂಭಕಾರರೆಂಬುದನ್ನು ಈ ಹಿಂದೆ ಹೇಳಿದೆ. ಮಿಶನರಿಗಳ ಗಮನವನ್ನು ಮೊತ್ತಮೊದಲು ಸೆಳೆದ ಭಾರತೀಯ ಭಾಷೆಗಳೆಂದರೆ, ಕೊಂಕಣಿ, ತಮಿಳು ಮತ್ತು ಬಂಗಾಲಿ. ಗೋವೆಯು ೧೬ನೆಯ ಶತಮಾನದಿಂದಲೇ ಪೋರ್ತುಗೀಸರ ಗಂಡುಮೆಟ್ಟಿನ ಸ್ಥಳವಾಗಿದ್ದುದರಿಂದ ಕೊಂಕಣಿಯು ಪಾಶ್ಚಾತ್ಯ ಸಂಪರ್ಕ ಹೊಂದಿದ ಪ್ರಥಮ ಭಾರತೀಯ ಭಾಷೆಯಾಯಿತು. ಅಲ್ಲಿಯ ಜೆಸುಯಿಟ್ ಮಿಶನರಿಗಳು ಕೆಲವು ಕೊಂಕಣಿ ಭಾಷೆಯ ಪುಸ್ತಕಗಳನ್ನು ಮುದ್ರಿಸಿದರು. ಮುಂದಿನ ಶತಮಾನದಲ್ಲಿ ಆಗಿಹೋದ ಫಾದರ್ ಸ್ಟೀಫನಸ್ ಮೊದಲಾದವರು ಕೊಂಕಣಿ ಭಾಷೆಯಲ್ಲಿ ಆಸ್ಥೆ ವಹಿಸಿ, ಆ ಕುರಿತು ಯುರೋಪಿಯನ್ ಭಾಷೆಗಳಲ್ಲಿ ಕೋಶ, ವ್ಯಾಕರಣಗಳನ್ನು ರಚಿಸಿದ್ದಾರೆ. ಮುಂದೆ ೧೮ನೆಯ ಶತಮಾನದಿಂದ ಗೋವೆಯಲ್ಲಿ ಮುದ್ರಣ ಕಾರ್ಯ ನಿಂತುಹೋದದ್ದರಿಂದ ಕೊಂಕಣಿ ಭಾಷೆಯು ಅದಕ್ಕೂ ಹೆಚ್ಚಿನ ಪುರಸ್ಕಾರವನ್ನು ಪಡೆಯಲಿಲ್ಲ.

ಸಂತ ಝೇವಿಯರನ ಸುಪ್ರಸಿದ್ಧ ಕೃತಿಯೆನಿಸಿದ 'ಡೌಟ್ರಿನಾ ಕ್ರಿಸ್ತಾ'ದ ತಮಿಳು ಆವೃತ್ತಿಯು ಕ್ರಿ.ಶ. ೧೫೭೮ರಷ್ಟು ಹಿಂದೆಯೇ ಪ್ರಕಟವಾಯಿತು. ಇದುವೆ ಹೊಸ ತಮಿಳಿನ ಪ್ರಥಮ ಗ್ರಂಥ. ಆ ಮುಂದೆ ತಮಿಳಿನಲ್ಲಿ ಹೊಸ ಸಾಹಿತ್ಯವನ್ನು ತಂದ ಆದ್ಯ ಮಿಶನರಿಯೆಂದರೆ 'ರಾಬರ್ಟ ದ ನೊಬಿಲಿ' (೧೬೦೦ – ೧೬೫೬). 'ತತ್ತ್ವಬೋಧ ಸ್ವಾಮಿ' ಎಂಬ ದೇಶೀ ಹೆಸರನ್ನೆ ಇಟ್ಟುಕೊಂಡು ಸ್ವಮತ ಪ್ರಚಾರ ಮಾಡಿದನು.

ತಮಿಳಿಗೆ ಪಾಶ್ಚಾತ್ಯ ಸಂಪರ್ಕವನ್ನು ಒದಗಿಸಿದ ಇನ್ನೊಬ್ಬ ಮೊದಲಿಗನೆಂದರೆ ಝೀಗೆನ್‌ಬಾಗ್ (೧೬೬೩ – ೧೭೧೯). ಈತ ಡೇನಿಶ್ ಮಿಶನರಿ. ಟ್ರಾಂಕ್ವೆಬಾರ್‌ನಲ್ಲಿ ಮುದ್ರಣ ಯಂತ್ರವನ್ನು ಸ್ಥಾಪಿಸಿ ಹತ್ತಾರು ಗ್ರಂಥಗಳನ್ನು ಹೊರತಂದನು. ಅನಂತರದವ ಬೆಸ್ಕಿ (೧೬೮೦ – ೧೭೪೭). ಇವನು ಸಾಹಿತ್ಯ ಕಾರ್ಯದಲ್ಲಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತಮಿಳು ಭಾಷೆಯಲ್ಲಿ ಕ್ರೈಸ್ತ ವಿಚಾರದ ತಾತ್ತ್ವಿಕ ಪ್ರಬಂಧಗಳನ್ನೂ, 'ತೆಂಬವಣಿ' ಎಂಬ ದೀರ್ಘ ಕಾವ್ಯವನ್ನೂ ಬರೆದನು. ತಮಿಳಿನ ನವೋದಿತ ಸಾಹಿತ್ಯದ ಪೂರ್ವಾಯಣದಲ್ಲಿ ಈ ಮೂವರು ಮಿಶನರಿಗಳ ಕಾರ್ಯವು ಎದ್ದು ಕಾಣುವಂತಿದೆ.

ಹದಿನೇಳನೆಯ ಶತಮಾನದಲ್ಲಿ ಬಂಗಾಲವೂ ಪೋರ್ತುಗೀಸ ಮಿಶನರಿಗಳ ಆಡುಂಬೊಲವಾಗಿದ್ದಿತು. ಅವರು ಹಲವಾರು ಬಂಗಾಲೀ ಕೃತಿಗಳನ್ನು ಹೊರತಂದರು. ವಂಗದೇಶವು ಆ ಮುಂದೆ ಬ್ರಿಟಿಶರ ಕೈವಶವಾದಾಗ ಬ್ರಿಟಿಶ್ ಮತ್ತು ಸ್ಕಾಟಿಶ್ ಮಿಶನರಿಗಳು ಸಾಹಿತ್ಯಿಕ ಚಟುವಟಿಕೆಗಳನ್ನು ಮುಂದುವರಿಸಿದರು. ಅವರಲ್ಲಿ ಅಗ್ರಗಣ್ಯನೆಂದರೆ **ವಿಲಿಯಮ್ ಕೇರಿ**. ಆರಂಭ ಕಾಲದ ಭಾರತೀಯ ಗ್ರಂಥೋದ್ಯಮದಲ್ಲಿ ಎಲ್ಲ ಮಿಶನರಿಗಳನ್ನು ಮೀರಿಸಿದವನೀತ. ಶ್ರೀರಾಮಪುರದಲ್ಲಿ ೧೭೯೯ರಂದು ತನ್ನ ಮುದ್ರಣ–ಪ್ರಕಟನ

ಕಾರ್ಯವನ್ನು ಕೈಕೊಂಡನು. ಸಂಸ್ಕೃತ ಮತ್ತು ಬಂಗಾಲೀ ಭಾಷೆಗಳಲ್ಲಿ ಪ್ರೌಢಿಮೆಯನ್ನು ಸಂಪಾದಿಸಿದವನಾದ್ದರಿಂದ ಕಲ್ಕತ್ತೆಯ ಫೋರ್ಟ್ ವಿಲಿಯಮ್ ಕಾಲೇಜಿನಲ್ಲಿ ಆ ಭಾಷೆಗಳ ಪ್ರಾಧ್ಯಾಪಕನಾಗಿದ್ದನು. ಇನ್ನೂ ಹತ್ತಾರು ಭಾಷೆಗಳ ವ್ಯಾವಹಾರಿಕ ಜ್ಞಾನವನ್ನು ಪಡೆದುಕೊಂಡು ಸುಮಾರು ಐವತ್ತು ಭಾಷೆಗಳಲ್ಲಿ ಬೈಬಲ್ ಅನುವಾದ, ವ್ಯಾಕರಣ—ಕೋಶಗಳ ರಚನೆ ಮತ್ತು ಮುದ್ರಣ—ಇವನ್ನು ಕೈಕೊಂಡ ಈತನ ಕಾರ್ಯಸಾಮರ್ಥ್ಯ ಸಾಧನೆಗಳು ಅದ್ಭುತವೆನಿಸುತ್ತವೆ.

ಬ್ರಿಟಿಶ್ ಅಧಿಕಾರಿಗಳಿಗೆ ಪೌರ್ವಾತ್ಯ ಶಿಕ್ಷಣವನ್ನು ನೀಡುವ ಮೂಲೋದ್ದೇಶದಿಂದ ಕ್ರಿ.ಶ. ೧೮೦೦ರಂದು ಆರಂಭವಾದ ಫೋರ್ಟ್ ವಿಲಿಯಮ್ ಕಾಲೇಜಿನಲ್ಲಿ ನವೀನ ವಂಗ ಸಾಹಿತ್ಯದ ಕೋನಶಿಲೆಯನ್ನು ನೆಡಲಾಯಿತು. ಅಲ್ಲಿ ವಿಲಿಯಮ್ ಕೇರಿಯ ನೇತೃತ್ವದಲ್ಲಿ ಹಲವರು ಭಾಷಾಂತರ ಹಾಗೂ ಪಠ್ಯಪುಸ್ತಕ ರಚನೆಯಲ್ಲಿ ನಿಯುಕ್ತರಾದರು. ಸ್ವತಂತ್ರ ಗ್ರಂಥಗಳನ್ನು ಬರೆಯಲು ಆಹ್ವಾನಿಸಿದಾಗ ರಾಮರಾಮ ಬಸು ಎಂಬವನು ೧೮೦೧ರಲ್ಲಿ 'ಪ್ರತಾಪಾದಿತ್ಯ ಚರಿತ್ರೆ' ಎಂಬ ಗ್ರಂಥವನ್ನು ಸಾದರಪಡಿಸಿ ಬಹುಮಾನವನ್ನು ಪಡೆದನು. ಇದು ನವೀನ ವಂಗಭಾಷೆಯಲ್ಲಿಯ ಪ್ರಥಮ ಗದ್ಯ ಕೃತಿಯೂ ಹೌದು; ಪ್ರಥಮ ಐತಿಹಾಸಿಕ ಕಥನವೂ ಅಹುದು.

ಆಸಾಮದಲ್ಲಿ ನವೀನ ಸಾಹಿತ್ಯ ರಚನೆಯನ್ನು ಆರಂಭಿಸಿದವರು ಅಮೇರಿಕೆಯ ಬ್ಯಾಪ್ಟಿಸ್ಟ್ ಮಿಶನರಿಗಳು. ಬ್ರಿಟಿಶರು ಆ ಪ್ರದೇಶವನ್ನು ವಶಪಡಿಸಿಕೊಂಡ ಕೆಲವೇ ತಿಂಗಳುಗಳಲ್ಲಿ (೧೮೩೬) ಇವರು ತಮ್ಮ ಧಾರ್ಮಿಕ ವಲಸೆಯನ್ನು ಹೂಡಿದರು. ಜೊತೆಗೆ ಮುದ್ರಣ ಯಂತ್ರವನ್ನು ತಂದೇ ಇದ್ದರು. ಹಾಗೆ ಬಂದ ವರ್ಷಾವಧಿಯಲ್ಲಿ ಆಸಾಮೀ ವಾಚನ ಪುಸ್ತಕವನ್ನು ಹೊರತಂದರು. ಮಿಶನರಿಗಳ ಕಾರ್ಯೋತ್ಸಾಹಕ್ಕೆ ಇದೊಂದು ನಿದರ್ಶನ. ಆಮೇಲೆ 'ಬೈಬಲ್', 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' ಇವುಗಳ ಅನುವಾದಗಳು ಯಥಾಪ್ರಕಾರ ಹೊರಬಂದವು, 'ಅರುಣೋದಯ'ವೆಂಬ ಪತ್ರಿಕೆಯನ್ನು ಅವರು ಹೊರಡಿಸಿದರು. ಆಸಾಮೀ ಗದ್ಯವನ್ನು ಹೊಸ ವಿಚಾರಧಾರೆಗೆ ತಕ್ಕ ವಾಹಿನಿಯಾಗುವಂತೆ ಅಣಿಗೊಳಿಸಿದರು.

ಭಾರತದ ವಿವಿಧ ಪ್ರಾಂತಗಳಲ್ಲಿದ್ದ ಹಲವಾರು ಅಧಿಕಾರಿಗಳು ಸಾಹಿತ್ಯ ಪೋಷಣೆಯ ಕಾರ್ಯವನ್ನು ಕೈಗೊಂಡರು. ಅವರಲ್ಲಿ ಮುಂಬಯಿ ಪ್ರಾಂತದ ಗವರ್ನರನಾಗಿದ್ದ ಎಲ್‌ಫಿನ್‌ಸ್ಟನ್ನನು ಮೊದಲಿಗನು; ಅಗ್ರಗಣ್ಯನೂ ಅಹುದು. ಉದಾರಮತವಾದಿಯಾದ ಇವನು ಹೊಸ ರೀತಿಯ ಶಿಕ್ಷಣ, ವಾಙ್ಮಯಗಳ ಕಾರ್ಯದಲ್ಲಿ ವಿಶೇಷ ಆಸಕ್ತಿಯನ್ನು ವಹಿಸಿದ್ದನು. ಅವನು ಹಾಕಿಕೊಟ್ಟ ಮಾರ್ಗದಲ್ಲಿಯೇ ಆ ಪ್ರಾಂತದ ಇತರ ಅಧಿಕಾರಿಗಳು ನಡೆದರೆನ್ನಬೇಕು. ಅಂದಿನ ಮುಂಬಯಿ ಪ್ರಾಂತದಲ್ಲಿ ಗುಜರಾತೀ, ಸಿಂಧೀ, ಕನ್ನಡ,

ಉರ್ದೂ ಭಾಷೆಗಳಿದ್ದರೂ ಮರಾಠಿಯೇ ಹೆಚ್ಚಿನ ಪ್ರತಿಷ್ಠೆಯನ್ನು ಪಡೆದಿದ್ದಿತು. ಎಲ್‌ಫಿನ್‌ಸ್ಟನ್ನನು ಮರಾಠೀ ಪಂಡಿತರನ್ನು ಕಲೆಹಾಕಿ ಅವರಿಂದ ಗ್ರಂಥಗಳನ್ನು ಬರೆಯಿಸಿದನು. ಮುದ್ರಣ ವ್ಯವಸ್ಥೆಯನ್ನೂ ಮಾಡಿದನು. ಪರಿಣಾಮವಾಗಿ ೧೮೪೫ರ ಹೊತ್ತಿಗೆ ಮರಾಠೀ ವ್ಯಾಕರಣ, ಕೋಶ ಮತ್ತು ಒಂದು ವಿಶ್ವಕೋಶ ಸಹ ಬೆಳಕಿಗೆ ಬಂದವು. ಅನಂತರದ ಜರ್ವಿಸ್, ಮಾಲ್ಕಮ್, ಗ್ರ್ಯಾಂಟ್ ಮೊದಲಾದ ಅಧಿಕಾರಿಗಳು ಮರಾಠೀ ಭಾಷೆಯ ಪೋಷಕರಾದರು. ಜರ್ವಿಸನಂತೂ ಆ ಭಾಷೆಯಲ್ಲಿಯೆ ವಿಜ್ಞಾನ ವಿಷಯಕವಾದ ಮೂರು ಕ್ರಮಿಕ ಪುಸ್ತಕಗಳನ್ನು ರಚಿಸಿದ್ದಾನೆ.

ಈ ಬಗೆಯ ಸಾಹಿತ್ಯ ಪೋಷಣೆಯು ಗುಜರಾತೀ ಸಾಹಿತ್ಯಕ್ಕೆ ಫೋರ್ಬಸ್ ಎಂಬ ಅಧಿಕಾರಿಯಿಂದ ಸಂದಿತು. ಎಲ್‌ಫಿನ್‌ಸ್ಟನ್ನನ ಸಮಕಾಲೀನನಾಗಿದ್ದ ಥಾಮಸ್ ಮನ್ರೋ ತನ್ನ ಮದ್ರಾಸ ಪ್ರಾಂತ್ಯದಲ್ಲಿ ಶೈಕ್ಷಣಿಕ ಹಾಗೂ ವಾಙ್ಮಯ ಕಾರ್ಯಗಳಿಗೆ ಹೆಚ್ಚಿನ ಪ್ರೋತ್ಸಾಹವಿತ್ತದ್ದನ್ನು ಕಾಣಿಸಬೇಕು.

ಈ ಕಾಲದಲ್ಲಿ ಸಾಹಿತ್ಯ ನಿರ್ಮಿತಿಯ ನಿರ್ದಿಷ್ಟ ಉದ್ದೇಶದಿಂದ ಕೆಲವು ಸಂಸ್ಥೆಗಳು ಅಸ್ತಿತ್ವದಲ್ಲಿ ಬಂದುದು ನವೋದಯ ಕಾಲದ ಒಂದು ವೈಶಿಷ್ಟ್ಯವಾಗಿದೆ. ಕಲಕತ್ತ, ಮದ್ರಾಸ, ಬೆಂಗಳೂರು, ಮುಂಬಯಿ ಮುಂತಾದ ಸ್ಥಳಗಳಲ್ಲಿ 'ಆಕ್ಸಿಲಿಯರಿ ಸೊಸೈಟಿ', 'ಸ್ಕೂಲ್ ಎಂಡ್ ಟ್ರ್ಯಾಕ್ಟ್ ಬುಕ್ ಸೊಸೈಟಿ' ಎಂಬವುಗಳನ್ನು ಮಿಶನರಿ ಜನರು ಸ್ಥಾಪಿಸಿದರು. ಇತ್ತ 'ವರ್ನ್ಯಾಕ್ಯುಲರ್ ಸೊಸೈಟಿ', 'ನೇಟಿವ್ ಎಜ್ಯುಕೇಶನ್ ಸೊಸೈಟಿ' ಇತ್ಯಾದಿ ಹೆಸರಿನ ಸಂಸ್ಥೆಗಳನ್ನು ಬ್ರಿಟಿಶ್ ಅಧಿಕಾರಿಗಳು ಅಸ್ತಿತ್ವದಲ್ಲಿ ತಂದರು. ಇಂಥ ಸಂಸ್ಥೆಗಳು ಕ್ರೈಸ್ತ ಸಾಹಿತ್ಯ, ಪಠ್ಯ ಪುಸ್ತಕಗಳು ಪ್ರಾಚೀನ ಗ್ರಂಥಗಳ ಪರಿಷ್ಕೃತ ಮುದ್ರಣ, ಜ್ಞಾನ-ವಿಜ್ಞಾನ ಗ್ರಂಥಗಳ ಅನುವಾದ, ಈ ಕಾರ್ಯಗಳಿಗೆ ಧನಸಹಾಯ ಮಾಡಿವೆ. ಕ್ರಿ.ಶ. ೧೮೧೫ರಷ್ಟು ಹಿಂದೆ ಅಸ್ತಿತ್ವದಲ್ಲಿ ಬಂದ 'ಬಾಂಬೆ ಎಜ್ಯುಕೇಶನ್ ಸೊಸೈಟಿ'ಯು (೧೮೨೭-೨೮) ಮರಾಠೀ ಭಾಷೆ, ಸಾಹಿತ್ಯಗಳ ಅಭಿವೃದ್ಧಿಗೆ ನೆರವಾದುದು ಅಷ್ಟಿಷ್ಟಲ್ಲ.

## ೧.೩ ಸುಧಾರಕ ಪಂಥ

ನವೋದಯ ಸಾಹಿತ್ಯದ ಈ ಕೆಲವು ಆರಂಭದ ಎತ್ತುಗಡೆಗಳನ್ನು ಪರಿಶೀಲಿಸಿದ ಮೇಲೆ, ಇನ್ನೀಗ ನವೋದಯದ 'ಉತ್ತರಾಯಣ' ಕಾಲದ ಸಾಹಿತ್ಯ ರಚನೆಯ ಸ್ವರೂಪವನ್ನು ಗಮನಿಸೋಣ. ಇದು ಭಾರತೀಯ ವಾಙ್ಮಯ ಕಂದನು ತಂತಾನೇ ನಡೆದಾಡತೊಡಗಿದ ಸ್ಥಿತಿಯಷ್ಟೆ. ಧಾರ್ಮಿಕ, ಸಾಮಾಜಿಕ ವಲಯಗಳಲ್ಲಿ ಕಂಡುಬಂದ ಸ್ವತಂತ್ರ ವಿಚಾರ ಸರಣಿಯು ವಾಙ್ಮಯದಲ್ಲಿಯೂ ವ್ಯಕ್ತವಾಯಿತು. ಒಂದೆಡೆ ಪಾಶ್ಚಾತ್ಯ ವಿಷಯಗಳ ಹೊಸ ಬೆಳಕು, ಇನ್ನೊಂದೆಡೆ ಸ್ವಮತ ಪ್ರಚಾರದ ರಭಸದಲ್ಲಿ ಮಿಶನರಿಗಳಿಂದ

ಹಿಂದೂ ಧರ್ಮದ ಮೇಲೆ ಸತತವಾದ ಆಘಾತ. ಈ ಮಧ್ಯೆ ಸ್ವಧರ್ಮ ಹಾಗೂ ಸ್ವದೇಶದ ಕುರಿತ ಜನ್ಮಜಾತ ಅಭಿಮಾನ, ಈ ಮೂರು ಸೆಳೆತಗಳಲ್ಲಿ ಸಿಕ್ಕಿ ಕೆಲವು ಭಾರತೀಯರು ವಿಚಾರಮಂಥನದಲ್ಲಿ ಬಿದ್ದರು. ಬಾಲ್ಯವಿವಾಹ, ವಿಧವಾವಪನ, ಬಹುಪತ್ನೀತ್ವ, ಮೂಢನಂಬಿಕೆಗಳು– ಇವು ತೀವ್ರ ಚರ್ಚೆಗೊಳಗಾದುವು. ಸುಧಾರಕರ ಮನಸ್ಸಿನಲ್ಲಿ ತುಡಿಯುತ್ತಿದ್ದ ಈ ಬಗೆಯ ವಿಚಾರ ತೀವ್ರತೆಗೆ ಲೇಖನಿಯೇ ಪ್ರಮುಖ ವಾಹನವಾಯಿತು. ಸುಧಾರಣಾವಾದಿಗಳು ಮಿಶನರಿಗಳನ್ನೇನೋ ಖಂಡಿಸಿದರು. ಆದರೆ ಈ ಸುಧಾರಣಾವಾದಿಗಳನ್ನು ಸನಾತನಿಗಳು ಖಂಡಿಸತೊಡಗಿದರು! ಹೊಸ ಶಿಕ್ಷಣವು ಅತ್ಯಗತ್ಯವೆಂದು ಸುಧಾರಣಾವಾದಿಗಳು ಪ್ರತಿಪಾದಿಸಿದರಾದರೂ, ಪಾಶ್ಚಾತ್ಯರ ರೀತಿನೀತಿಗಳ ಅಂಧಾನುಕರಣವನ್ನು ಟೀಕಿಸಿದ ಪ್ರಸಂಗಗಳೂ ಆಗಿನ ಬರವಣಿಗೆಯಲ್ಲಿ ತಲೆದೋರಿವೆ. ಆದರೂ ಮಾನವತೆಯ ಹಿನ್ನೆಲೆಯಲ್ಲಿ ಸಾಮಾಜಿಕ ಸುಧಾರಣೆಗಳ ಮಂಡನೆ ಹಾಗೂ ಸ್ವಧರ್ಮ–ಸ್ವಭಾಷೆಗಳಲ್ಲಿ ಆಸಕ್ತಿ–ಇವೆರಡು ಅಂಶಗಳು ಮಾತ್ರ ಆಗಿನ ಸುಧಾರಕರಲ್ಲಿ ದೃಢವಾಗಿ ನೆಲೆಯೂರಿದ್ದುವು ಮತ್ತು ಅವು ಸಾಹಿತ್ಯ ಕ್ಷೇತ್ರದಲ್ಲಿ ಫಲಿತಗೊಂಡವು.

ಇಂಥ ಸುಧಾರಕರು ಮೊದಲು ಕಾಣಿಸಿಕೊಂಡದ್ದು ಬಂಗಾಲದಲ್ಲಿ. ಅವರಿಂದ ಸ್ಫೂರ್ತಿ ಪಡೆದವರು ಇತರ ಭಾರತೀಯ ಪ್ರದೇಶಗಳಲ್ಲಿ ಕಾಣಸಿಗುವರಾದರೂ ಈ ಪ್ರಗತಿಪರ ಮನೋಧರ್ಮವು ಪ್ರತಿಯೊಂದು ಪ್ರದೇಶದಲ್ಲಿಯೂ ಕ್ರಮೇಣ ವ್ಯಕ್ತವಾಗಿ ನವೀನ ಸಮಾಜದ ಹಾಗೂ ನವೋದಯ ಸಾಹಿತ್ಯದ ನಿರ್ಮಾಣವಾಯಿತು.

ನವಭಾರತದ ಕಾರಣಪುರುಷರಲ್ಲಿ **ರಾಜಾ ರಾಮಮೋಹನರಾಯ**ನಿಗೆ ಅಗ್ರಪಟ್ಟ ಸಲ್ಲಬೇಕು. (೧೭೭೪–೧೮೩೩). ತನ್ನ ೧೬ನೆಯ ವಯಸ್ಸಿನಲ್ಲಿಯೆ, ಹಳೆಯ ಧಾರ್ಮಿಕ ಪರಂಪರೆಯ ವಿಚಾರವಾಗಿ ತಂದೆಯೊಡನೆ ಜಗಳವಾಡಿ ಮನೆ ಬಿಟ್ಟು ಹೊರಟವ. ಹಾಗಿದ್ದರೂ ಭಾರತೀಯ ಪುರಾತನ ಕೃತಿಗಳನ್ನು ಅಭ್ಯಾಸ ಮಾಡಿದ್ದನು. ವೇದಾಂತ, ಉಪನಿಷತ್ತುಗಳನ್ನು ಕುರಿತು ವಿವೇಚನಾತ್ಮಕ ಲೇಖನಗಳನ್ನು ಬರೆದು, ಕೆಲವನ್ನು ಅನುವಾದಿಸಿದನು. ಮಿಶನರಿಗಳ ವಿಚಾರ ಪ್ರಣಾಲಿಯನ್ನು ಎದುರಿಸುತ್ತಲೇ ಹಿಂದೂ ಸಮಾಜದ ಮೂಢ ಸಂಪ್ರದಾಯಗಳ ಸಂಕೋಲೆಯನ್ನು ಕಳಚಿಬಿಡಬೇಕೆಂದನು. ಹಳೆಯ ಪರಂಪರೆಗಳಿಗೆ ಹೊಸ ಅರ್ಥವನ್ನು ಹಚ್ಚಿ ಆದ್ಯ ಸುಧಾರಕನಾಗಿ ಮೆರೆದನು. ಸತೀ ಹೋಗುವುದರ ವಿರುದ್ಧ ಇವನು ಸಾಕಷ್ಟು ಜನಜಾಗೃತಿಯನ್ನು ಮಾಡಿದನೆಂದೇ ಆ ವಿಷಯಕವಾದ ಕಾನೂನನ್ನು ಗವರ್ನರ್—ಜನರಲ್‌ನಾದ ಬೆಂಟಿಂಕನು ಜಾರಿಗೆ ತರಲು ಸುಲಭಸಾಧ್ಯವಾಯಿತು. ೧೮೨೮–೩೦ರ ಅವಧಿಯಲ್ಲಿ ಬ್ರಹ್ಮಸಮಾಜವನ್ನು ಸ್ಥಾಪಿಸಿ, ಅವನು ಮಾಡಿದ ಕಾರ್ಯವು ಸರ್ವಶ್ರುತವಿದೆ. ಇಲ್ಲಿ ಪ್ರಸ್ತುತವಾದ ಅಂಶವೆಂದರೆ ತನ್ನೆಲ್ಲ ಸುಧಾರಣಾ ವಿಚಾರಗಳಿಗೆ ಅವನು ಲೇಖನಿಯನ್ನೆ ಹೆಚ್ಚಾಗಿ ಬಳಸಿದುದು.

ಅದರಿಂದ ವಂಗ ಸಾಹಿತ್ಯವು ಪ್ರೌಢ ದೆಸೆಯನ್ನು ಹೊಂದಲು ಮತ್ತು ಇತರ ಎಲ್ಲ ಭಾಷೆಗಳಿಗಿಂತಲೂ ಮುಂದುವರಿಯಲು ಚಾಲನೆ ದೊರೆಯಿತು. ಆ ಭಾಷೆಯಲ್ಲಿ ತನ್ನ ಪುಸ್ತಕ, ಪತ್ರಿಕೆಗಳ ಮೂಲಕ, ಪ್ರಬುದ್ಧ ಸರಣಿಯ ಗದ್ಯವನ್ನು ಬಳಸಿದನು. ಅರುಣೋದಯ ಕಾಲದಲ್ಲಿ ಗದ್ಯದ ನಿಜವಾದ ಶಕ್ತಿಯನ್ನು ಅರಿತವನಾಗಿ, ಅದನ್ನು ವಿಶೇಷ ಕಾರ್ಯದಲ್ಲಿ ತೊಡಗಿಸಿದ ಶ್ರೇಯಸ್ಸಿಗೆ ಅವನು ಭಾಗಿಯಾಗಿದ್ದಾನೆ.

ವಂಗೀಯ ಪುನರುತ್ಥಾನದಲ್ಲಿ ಇನ್ನೊಂದು ದೊಡ್ಡ ಹೆಸರು **ಈಶ್ವರಚಂದ್ರ ವಿದ್ಯಾಸಾಗರನದು** (೧೮೨೦–೧೮೯೧). ಕಾಳಿದಾಸ, ಶೇಕ್ಸ್‌ಪಿಯರ್ ಮುಂತಾದವರ ಕೃತಿಗಳನ್ನು ಶ್ರೇಷ್ಠ ರೀತಿಯಲ್ಲಿ ಅನುವಾದಿಸಿದನು. ಸುಧಾರಣಾವಾದಿತ್ವದಲ್ಲಿ ಇವನು ರಾಮಮೋಹನರಾಯನಿಗೆ ಕಡಿಮೆಯೇನಲ್ಲ. ಸ್ತ್ರೀಶಿಕ್ಷಣ ಚಳುವಳಿ ಮತ್ತು ಬಹುಪತ್ನೀತ್ವ ವಿರೋಧ ಮುಂತಾದ ಇವನ ಚಟುವಟಿಕೆಗಳಲ್ಲಿ ಮಾನವತಾದೃಷ್ಟಿಯು ಒಡೆದು ತೋರುತ್ತದೆ. ಪ್ರಾಚೀನ ಧರ್ಮಶಾಸ್ತ್ರಗಳನ್ನು ಅಭ್ಯಸಿಸುವಾಗ, ಅವನಿಗೆ ವಿಧವೆಯರ ವಪನ, ಇತ್ಯಾದಿ ಸಂಪ್ರದಾಯಗಳಿಗೆ ನಿಶ್ಚಿತ ಆಧಾರ ತೋರಿಬರಲಿಲ್ಲ. ಕೂಡಲೆ ಆ ಕುರಿತು ಚಳುವಳಿ ಹೂಡಿದನು. ಸತೀ ಹೋಗುವ ಪದ್ಧತಿಯ ನಿಲ್ಲುವಿಕೆಗೆ ರಾಮಮೋಹನರಾಯನು ಕಾರಣನಾಗಿದ್ದಂತೆ ಈತನು ವಿಧವಾ–ಪುನರ್ವಿವಾಹದ ಪುರಸ್ಕರ್ತನಾದನು. ಅವನ ಪ್ರಯತ್ನದ ಫಲವಾಗಿ ೧೮೫೬ರಲ್ಲಿ ಆ ಕಾಯಿದೆಯೂ ಸರಕಾರದಿಂದ ಮಂಜೂರಾಯಿತು. ರಾಜಾ ರಾಮಮೋಹನರಾಯನಂತೆಯೇ ಇವನ ಬರವಣಿಗೆಯೂ ಭಾರತದ ಇತರ ಹಲವು ಭಾಷೆಗಳಲ್ಲಿ ಅನುವಾದಗೊಂಡು, ಜನಜಾಗೃತಿಗೆ ಕಾರಣವಾಯಿತು.

ಇವನ ಸಮಕಾಲೀನನಾಗಿದ್ದ **ಮೈಕೇಲ್ ಮಧುಸೂದನ ದತ್ತನ** (೧೮೨೪ – ೧೮೭೩) ದಾರಿಯೇ ಬೇರೆ. ಜಾತಿಯಲ್ಲಿ ಈತ ಕ್ರಿಸ್ತೀಯ. ಸುಧಾರಣಾವಾದಿಯೂ ಅಹುದು. ಆದರೆ ಇವನ ಸಾಹಿತ್ಯ ರಚನೆಯು ಮಾತ್ರ ಪುರಾಣ ಮಾರ್ಗವನ್ನು ಅನುಸರಿಸಿತು! ಪ್ರಾಚೀನ ಮಹಾಕಾವ್ಯಗಳಲ್ಲಿದ್ದ ಇವನ ಆಸಕ್ತಿಯ ಮಾದರಿಗಳೆಂದು 'ತಿಲೋತ್ತಮಾಸಂಭವ', 'ಮೇಘನಾದ ವಧ', 'ವೀರಾಂಗನಾ' ಇವುಗಳನ್ನು ಹೆಸರಿಸಬಹುದು. ಈ ಕಾವ್ಯಗಳಲ್ಲೆಲ್ಲ ಕ್ಷಾತ್ರ ಧರ್ಮವು ಒಡೆದು ತೋರುತ್ತಿದೆ. ಜೊತೆಗೆ ಭಾವಗೀತೆ ಮತ್ತು ಇತರ ಹಲವು ಹೊಸ ಸಾಹಿತ್ಯ ರೂಪಗಳನ್ನು ಮೊದಲ ಬಾರಿಗೆ ಇವನು ವಂಗ ಸಾಹಿತ್ಯದಲ್ಲಿ ಒಡಮೂಡಿಸಿದನು.

ಇಂಥ ಸಾಹಿತ್ಯಿಕ ವೈವಿಧ್ಯವನ್ನು ಈಶ್ವರ ಗುಪ್ತನಲ್ಲಿಯೂ (೧೮೧೨–೫೯) ಕಾಣಬಹುದು. ಶ್ರೇಷ್ಠ ಪತ್ರಿಕಾಕರ್ತನಾದ ಇವನು ಮನುಷ್ಯ ಸ್ವಭಾವದ ಓರೆ ಕೋರೆಗಳು, ಸಾಮಾಜಿಕ ಆಚಾರ ವಿಚಾರಗಳಲ್ಲಿಯ ವಿರೋಧ–ಇವನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾನೆ. ದುರ್ಗಾ ಪೂಜೆಯ ದಿನ ಸಮಕಾಲೀನ ಕವಿ–ಸಾಹಿತಿಗಳ ಸಮ್ಮೇಲನವನ್ನು

ನೆರವೇರಿಸುತ್ತಿದ್ದನಂತೆ. ಹೊಸ ಬರಹಗಳಿಗೆ ಬಹುಮಾನವನ್ನು ಕೊಟ್ಟು ಪ್ರೋತ್ಸಾಹಿಸುವ ಪರಂಪರೆಯನ್ನೂ ಬಳಕೆಗೆ ತಂದನು. ತನ್ನ ಇಡೀ ಪಿತ್ತ ಜೀವಿತಗಳನ್ನು ಸಾಹಿತ್ಯ ಕಾರ್ಯದಲ್ಲಿ ತೊಡಗಿಸಿ, ಮುಂದಿನವರಿಗೆ ಮಾರ್ಗದರ್ಶಿಯಾದನು.

**ಬಂಕಿಮಚಂದ್ರ ಚಟರ್ಜಿಯು** (೧೮೩೮ – ೧೮೯೩) ಅಖಿಲ ಭಾರತ ಪ್ರಖ್ಯಾತಿಯನ್ನು ಪಡೆದ ವ್ಯಕ್ತಿ. ಮಧ್ಯಮಾರ್ಗದ ಪರಂಪರೆಯಲ್ಲಿ ನಿಷ್ಠೆಯನ್ನು ಉಳಿಸಿಕೊಂಡೇ, ಅದರಲ್ಲಿ ಸಹಜಸಾಧ್ಯವಾದ ವಿವಿಧ ಸುಧಾರಣೆಗಳಾಗಬೇಕೆಂಬ ನಿಲುಮೆ ಇವನದು. ಆದರೆ ಮೂಲತಃ ಕ್ರಿಯಾಶೀಲ ಲೇಖಕನಾದ ಈತನು ಕಾದಂಬರಿಗಳ ದೊಡ್ಡ ಪಡೆಯನ್ನೆ ನಿರ್ಮಿಸಿದಾಗ ಅದು ಸಮಗ್ರ ಭಾರತವನ್ನು ಆಕರ್ಷಿಸಿತು. ಅವನ ಐತಿಹಾಸಿಕ ಕಾದಂಬರಿಗಳೆಲ್ಲ ಇತಿಹಾಸದ ಇಸ್ಲಾಮ್ ಯುಗಕ್ಕೆ ಸಂಬಂಧಪಟ್ಟವುಗಳು. ಅವನ ಸಾಮಾಜಿಕ ಕಾದಂಬರಿಗಳಲ್ಲಿ ಕಂಡುಬರುವ ಸ್ತ್ರೀಯರೂ ಸಾಹಸಿಗಳೇ ಸೈ. ಬಂಕಿಮಚಂದ್ರನಲ್ಲಿದ್ದ ಒಂದು ಅಮೂಲ್ಯ ಗುಣವೆಂದರೆ ರಾಷ್ಟ್ರೀಯ ಮನೋಭಾವ. ಅವನಿಗಿಂತ ಹಿಂದಿನ ವಂಗೀಯ ಲೇಖಕರಲ್ಲಿ ಅದು ಇಣುಕುಮಿಣುಕಾಗಿ ಕಂಡು ಬಂದಿದ್ದರೆ, ಇವನಲ್ಲಿ ಅದು ಆಳವಾದ ಆಂತರಿಕ ಸೆಲೆಯಾಗಿದ್ದಿತು. ಬಂಕಿಮನ ಅಂತ್ಯಕಾಲದ ಸಮಯಕ್ಕೆ ಬಂಗಾಲೀ ಸಾಹಿತ್ಯವು ಸಮೃದ್ಧವೂ ಪುರೋಗಾಮಿಯೂ ಆಗಿದ್ದುದರ ಪರಿಣಾಮವಾಗಿ ಅದರ ಅನೇಕ ಗ್ರಂಥಗಳು ಭಾರತದ ಅನ್ಯ ಭಾಷೆಗಳಿಗೆ — ಇಂಗ್ಲಿಷ್ ಸಹಿತ, ಅನುವಾದಗೊಂಡವು.

ವಂಗ ಸಾಹಿತ್ಯದ ಪುರಸ್ಕರ್ತರೆಂದು ಕೆಲವು ಹೆಸರುಗಳನ್ನು ಮೇಲೆ ಹೇಳಿದೆವಷ್ಟೆ. ಇಂಥ ಹಲವು ಸುಧಾರಕರು ಬೇರೆ ಭಾಷಾ ಸಾಹಿತ್ಯಗಳಲ್ಲಿಯೂ ಕಂಡುಬರುತ್ತಾರೆ. ಆಸಾಮೀ ಸಾಹಿತ್ಯದ ಪುರಸ್ಕರ್ತರೆಂದರೆ, ಆನಂದರಾಮ ಪುಖನ್ ಮತ್ತು ಹೇಮಚಂದ್ರ ಬರುವಾ. ಕ್ರಿ.ಶ.೧೮೭೫ರಿಂದ ೧೮೮೬ರವರೆಗಿನ ಗುಜರಾಥೀ ಸಾಹಿತ್ಯವನ್ನು ಬೆಳಗಿಸಿದವರು, ದಲಪತಿರಾಮ ಮತ್ತು ನರ್ಮದಾಶಂಕರರು. ಹಿಂದೀ ಸಾಹಿತ್ಯದಲ್ಲಿ ಆ ಸ್ಥಾನವು ಕಾಶಿಯ ಭಾರತೇಂದು ಹರಿಶ್ಚಂದ್ರನಿಗೆ ಸಲ್ಲತಕ್ಕುದು. ಮಲೆಯಾಳಿಯಲ್ಲಿ ಹೊಸ ಸಾಹಿತ್ಯ ನಿರ್ಮಿತಿಯ ಅಡಿಪಾಯ ಹಾಕಿದವರು ಕೇರಳವರ್ಮ ಮತ್ತು ರಾಜರಾಜವರ್ಮ.

ಆಂಧ್ರದ ರಾಜಾ ರಾಮಮೋಹನರಾಯನೆನಿಸಿದ **ವೀರೇಶಲಿಂಗಂ ಪಂತುಲು** (೧೮೪೮–೧೯೧೯) ನವೋದಯ ಸಾಹಿತ್ಯದ ಎಲ್ಲ ಲಕ್ಷಣಗಳ ಪ್ರತೀಕದಂತಿದ್ದಾನೆ. ಸಮಾಜ ಸುಧಾರಣೆ, ಸ್ತ್ರೀಯರ ಪ್ರಗತಿ — ಇವುಗಳ ಪುರಸ್ಕಾರಕ್ಕಾಗಿ ಸಾಹಿತ್ಯ ಮಾರ್ಗವನ್ನೆ ನೆರೆನಂಬಿದನು. ತೆಲುಗಿನ ಗದ್ಯ ಸಾರ್ವಭೌಮನೆನಿಸಿದ್ದ ಅವನೇ ಆ ಭಾಷೆಯ ಆದ್ಯ ಕಾದಂಬರಿಕಾರ; ವೈಜ್ಞಾನಿಕ ಹಾಗೂ ರಾಜಕೀಯ ವಿಷಯಗಳ ಪ್ರಬಂಧಕಾರ; ಆತ್ಮಚರಿತ್ರ

ಲೇಖಕ; ಸಂಸ್ಕೃತ, ಇಂಗ್ಲಿಷ್‌ನಲ್ಲಿಯ ಶ್ರೇಷ್ಠ ಕೃತಿಗಳ ಅನುವಾದಕ; ನಾಟಕಕಾರ; ಪತ್ರಿಕಾ ವ್ಯವಸಾಯಿ; ಒಟ್ಟಿನಲ್ಲಿ ಅವನು ನವೀನ ತೆಲುಗು ಸಾಹಿತ್ಯದ ಭವ್ಯ ಶಿಲ್ಪಿ.

ಮರಾಠೀ ವಾಙ್ಮಯದ ನವೋದಯದಲ್ಲಿ ಮೊದಲಿಗೆ ಎದ್ದು ಕಾಣುವ ಹೆಸರು **ಬಾಳಶಾಸ್ತ್ರಿ ಜಾಂಭೇಕರನದು** (೧೮೧೨ – ೧೮೪೬). ಅವನು ಶಿಕ್ಷಣರಂಗ ಹಾಗೂ ಪತ್ರಿಕಾರಂಗಗಳ ಮೂಲಕ ಸಾಹಿತ್ಯಕಾರ್ಯವನ್ನು ಕೈಕೊಂಡನು. ಅನಂತರದ ಪ್ರಸಿದ್ಧ ಸಾಹಿತಿಗಳಲ್ಲಿ ವಿಷ್ಣುಶಾಸ್ತ್ರಿ ಚಿಪಳೂಣಕರನ ಕಾರ್ಯವು ವಿಶಿಷ್ಟವಾದುದು. ಇವನ ಸ್ವತಂತ್ರ ವಿವೇಚನಾ ಶಕ್ತಿಯುಳ್ಳ ಪ್ರಬಂಧಗಳ ಸಂಗ್ರಹವಾದ 'ನಿಬಂಧಮಾಲಾ' (೧೮೭೪) ಮರಾಠಿ ಸಾಹಿತ್ಯದಲ್ಲಿ ಹೊಸತನದ ಪ್ರತೀಕವೆನಿಸಿತು. ಅಷ್ಟೇ ಸಾಂಕೇತಿಕ ಮಹತ್ವವುಳ್ಳ ಕೃತಿಯೆನಿಸಿದ 'ಮೋಚನಗಡ' (ಗುಂಜೀಕರ ಕೃತ ಪ್ರಥಮ ಐತಿಹಾಸಿಕ ಕಾದಂಬರಿ) ೧೮೭೧ರಲ್ಲಿ ಪ್ರಕಟವಾಗಿದ್ದಿತು. ಆಮೇಲೆ ೧೫ ವರ್ಷಗಳ ಅನಂತರ ಹ.ನಾ.ಆಪ್ಟೆಯ ಐತಿಹಾಸಿಕ, ಸಾಮಾಜಿಕ ಕಾದಂಬರಿಗಳು ಹೊರಬರತೊಡಗಿದಂದಿನಿಂದ ಮರಾಠೀ ವಾಙ್ಮಯವು ಸಮಕಾಲೀನ ವಂಗ ಸಾಹಿತ್ಯದೊಡನೆ ಸರಿದೂಗುವಷ್ಟು ಸತ್ವಪೂರ್ಣವಾಯಿತು.

ಮೇಲ್ಕಾಣಿಸಿದ ಸುಧಾರಕರ ಬರವಣಿಗೆಯಲ್ಲಿ ಸಮಾನವಾದ ಗುಣಧರ್ಮಗಳಿದ್ದುದನ್ನು ಗಮನಿಸಬೇಕು. ಸಾಹಿತ್ಯರಚನೆಯ ಪ್ರೇರಣೆಗಳು ಮೂಲತಃ ಒಂದೇ ಆಗಿದ್ದುದೇ ಇದಕ್ಕೆ ಕಾರಣ. ಕನ್ನಡಕ್ಕೂ ಈ ಮಾತು ಅನ್ವಯಿಸುತ್ತದೆ.

ಇತರ ಭಾಷಾ ಸಾಹಿತ್ಯಗಳಲ್ಲಿಯಂತೆ ಕನ್ನಡದಲ್ಲಿಯೂ ಬ್ರಿಟಿಶ್ ಅಧಿಕಾರಿಗಳು ಮತ್ತು ಮಿಶನರಿಗಳೇ ಹೊಸ ಸಾಹಿತ್ಯದ ಅಡಿಗಲ್ಲನ್ನು ಇಟ್ಟಿದ್ದಾರೆ. ಅವರ ಸಾಹಿತ್ಯ ಕಾರ್ಯವು ಭಾಷಾಭ್ಯಾಸದ ಸಾಧನಗಳ ಪ್ರಕಟನೆಗಳಿಂದ ಮೊದಲಾಯಿತಷ್ಟೆ. ಆಡಳಿತಕ್ಕಾಗಿಯೂ ಧರ್ಮಪ್ರಸಾರಕ್ಕಾಗಿಯೂ ಕನ್ನಡವನ್ನು ಕಲಿಯುವುದರ ಅನಿವಾರ್ಯತೆಯಿಂದಾಗಿ ಕನ್ನಡ ವ್ಯಾಕರಣ, ಶಬ್ದಕೋಶಗಳು ಹೊರಬಂದುವು. ಹಾಗೆ ಹೊರಬಂದ ಪ್ರಥಮ ಕೃತಿಯೆಂದರೆ ವಿಲಿಯಮ್ ಕೇರಿಯ ವ್ಯಾಕರಣ (೧೮೧೭). ಜೊತೆಗೆ ಕ್ರೈಸ್ತ ಸಾಹಿತ್ಯವೂ ಮೈದಾಳಿತು ಮತ್ತು ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಇವೇ ಹೊಸಗನ್ನಡದ ಮುಖ್ಯ ಬರಹಗಳಾದುವು. ಹೀಗೆ ವಿದೇಶೀಯರ ಸಾಹಿತ್ಯ ಸೇವೆಯು ಕರ್ನಾಟಕದಲ್ಲಿ ಸಾಕಷ್ಟು ಮೊದಲಿಗೇ ಆರಂಭವಾಗಿದ್ದರೂ ದೇಶೀಯರು ಮಾತ್ರ ಮೌನವಾಗಿದ್ದರು. ಅದರ ಮುಖ್ಯ ಕಾರಣವೆಂದರೆ ನಾಡಿನ ಆಡಳಿತವು ಹರಿದು ಹಂಚಿ, ಶೈಕ್ಷಣಿಕ ಪ್ರಗತಿಯು ವಿಶೇಷವಾಗಿ ಕಂಡು ಬಂದಿರಲಿಲ್ಲ. ಆದ್ದರಿಂದ ಭಾಷೆ, ಸಾಹಿತ್ಯಗಳ ಅಭಿವೃದ್ಧಿಗೆ ಆಸ್ಪದ ದೊರೆಯದೇ ಹೋಯಿತು.

ಹಾಗೆ ರಚಿಸಬೇಕಾಗಿ ಬಂದುದರ ಕಾರಣವನ್ನು ಜಾನ್ ಮೆಕ್ಕೆರೆಲ್ ಎಂಬ ಅಧಿಕಾರಿಯು A Grammar of the Carnataca Language ತನ್ನ ವ್ಯಾಕರಣ ಪುಸ್ತಕದ (೧೮೨೦) ಪೀಠಿಕೆಯಲ್ಲಿ ಹೇಳಿದುದನ್ನು ಗಮಿಸುವ ಹಾಗಿದೆ:

Tippoo Sultan although a Mohammedan was well acquainted with this, the Hindu language of his state, and Hyderally.... was quite familiar with it... They knew mankind too well not be aware that unless those who govern be acquainted with the language of the governed, a set of middle men will arise who will the ultimately become the scourges of the country.

ಇನ್ನೊಂದು ಕಾರಣವೆಂದರೆ ಕನ್ನಡಿಗರ, ವಿಶೇಷತಃ ಮೈಸೂರಿನಲ್ಲಿದ್ದವರ ಸಂಪ್ರದಾಯಪ್ರಿಯತೆ. ಆಸ್ಥಾನವೆಂಬ ಕೋಟೆಯಲ್ಲಿ ನೆಲೆನಿಂತ ಮೈಸೂರಿನ ಕವಿ, ಲೇಖಕರು ಭಾರತದಲ್ಲಿ ಆಗ ತೀಡುತ್ತಿದ್ದ ನವೋದಯದ ಹೊಸಗಾಳಿಯನ್ನು ಬರಮಾಡಿಕೊಳ್ಳಲು ಸಮರ್ಥರಾಗದೇ ಸಂಪ್ರದಾಯನಿಷ್ಠ ಸಾಹಿತ್ಯವನ್ನೇ ರಚಿಸಿದರು. ಕರ್ನಾಟಕದ ಉಳಿದ ಭಾಗಗಳಲ್ಲಿ ಸಹ ಹೊಸ ಸಾಹಿತ್ಯ ಹೊರಹೊಮ್ಮುವುದಕ್ಕೆ ವೇಳೆ ಹಿಡಿಯಿತು. ಪರಂಪರೆಯು ಪ್ರಾಬಲ್ಯದಿಂದಾಗಿಯೂ ಹೊಸ ಶಿಕ್ಷಣದ ಮಂದಗತಿಯಿಂದಾಗಿಯೂ ಅಲ್ಲಿಯವರು ಸ್ವತಂತ್ರ ವಿಚಾರ ಸರಣಿಯನ್ನು ಬೆಳೆಸಿಕೊಳ್ಳಲು ಶಕ್ತರಾಗಲಿಲ್ಲ. ಹೀಗಾಗಿ ಸ್ವದೇಶಾಭಿಮಾನ, ಜನಜೀವನದ ವಿಶ್ಲೇಷಣೆ, ಸಾಮಾಜಿಕ ಸುಧಾರಣಾ ಪ್ರಜ್ಞೆ ಮುಂತಾದ ಪುರೋಗಾಮೀ ವಿಚಾರಗಳು ಕನ್ನಡ ಸಾಹಿತ್ಯದಲ್ಲಿ ಬಂಗಾಲಿ, ಮರಾಠಿಗಳಲ್ಲಿಯಂತೆ ಬೇಗ ಕಾಣಿಸಿಕೊಳ್ಳಲಿಲ್ಲ.

ಅರುಣೋದಯ ಸಾಹಿತ್ಯದ ಪೂರ್ವಾಯಣ, ಉತ್ತರಾಯಣಗಳ ಕಾಲಾವಧಿಯನ್ನು ಕನ್ನಡದಲ್ಲಿಯೂ ಗುರುತಿಸಬಹುದು. ಸುರುವಿಗೆ, ಎಂದರೆ ೧೮೧೦ರಿಂದ ೧೮೬೦ರವರೆಗೆ ಮಿಶನರಿ ಜನರ ಸಾಹಿತ್ಯ ಕಾರ್ಯವೇ ಪ್ರಧಾನವಾಗಿದ್ದಿತು. ಆಮೇಲೆ ದೇಶೀಯರೂ ಜೊತೆಗೂಡಿ ವಿವಿಧ ಕೃತಿಗಳ ಅನುವಾದ, ಹಳೆಯ ಗ್ರಂಥಗಳ ಪರಿಷ್ಕರಣ ಹಾಗೂ ಜನಪ್ರಿಯ ಗದ್ಯ ಕಥನ ಇವುಗಳತ್ತ ಮನಸ್ಸುಗೊಟ್ಟರು. ಇದೆಲ್ಲ ಪೂರ್ವಾಯಣಕ್ಕೆ ಸಂಬಂಧಿಸಿದುದು. ಮುಂದೆ ೧೮೮೦ನೆಯ ದಶಕದಿಂದ ನಮಗೆ ಸ್ವತಂತ್ರ ವಿಚಾರಸರಣಿ, ಸ್ವಂತದ ಅಭಿವ್ಯಕ್ತಿಗಳು ಗೋಚರವಾಗುತ್ತವೆ. ಅದು ಮೊದಲಿಗೆ ಕಾಣಿಸಿಕೊಂಡುದು ಬೆಂಗಳೂರಿನ ಕೆಲವು ವಿದ್ಯಾವಂತ ಪತ್ರಿಕೋದ್ಯಮಿಗಳಲ್ಲಿ ಮತ್ತು ಮುಂಬಯಿ ಕರ್ನಾಟಕದ

ಸುಧಾರಕ ಪಂಥದವರಲ್ಲಿ. ಕ್ರಿ.ಶ. ೧೮೮೦ನೆಯ ದಶಕದಲ್ಲಿ ಈ ಸ್ವತಂತ್ರ ಬರವಣಿಗೆಯು ಮಂದಗತಿಯಿಂದಲೇ ಸಾಗಿದ್ದಿತು. ಮುಂದಿನ, ಎಂದರೆ ೧೮೯೦ನೆಯ ದಶಕದಲ್ಲಿ ಸ್ವತಂತ್ರ ಕಥನ ಕಾದಂಬರಿಗಳು ಒಡಮೂಡಿದಾಗ ಅರುಣೋದಯವು ಇನ್ನಷ್ಟು ನಿಚ್ಚಳವಾಯಿತು. ೧೮೯೯ರಲ್ಲಿ ಆದ್ಯ ಸಾಮಾಜಿಕ ಕಾದಂಬರಿ 'ಇಂದಿರಾಬಾಯಿ' ಪ್ರಕಟವಾಯಿತು.

ಆದರೆ ಈ ಅರುಣೋದಯ ಕಾಲದಲ್ಲಿ ಹೊಸ ವಿಚಾರಗಳ ಅಭಿವ್ಯಕ್ತಿಗಿಂತ ಹಳೆಯದರಲ್ಲಿ ಆಸಕ್ತಿಯು ಕುದುರಿದುದೇ ಹೆಚ್ಚಿನ ಅಂಶದಲ್ಲಿ ಕಂಡು ಬರುತ್ತದೆ. ದೀರ್ಘಕಾಲೀನ ಕನ್ನಡ ವಾಙ್ಮಯದಲ್ಲಿ ಅಪಾರ ಕಾವ್ಯರಾಶಿಯೂ ನಾಲ್ಕಾರು ಮತ ಪಂಥಗಳವರ ಧಾರ್ಮಿಕ ಕೃತಿಗಳೂ ಸಾಕಷ್ಟು ಸಂಖ್ಯೆಯಲ್ಲಿದ್ದುವಾದ್ದರಿಂದ, ಅವುಗಳ ಅನುವಾದ, ಪರಿಷ್ಕರಣಗಳೂ ಜೊತೆಗೆ ಪಠ್ಯಪುಸ್ತಕ ರಚನೆಯೂ ಅರುಣೋದಯ ಸಾಹಿತ್ಯದ ಬಹುಪಾಲನ್ನು ಪಡೆದಿವೆ.

ಈ ಸಾಮಾನ್ಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹೊಸಗನ್ನಡ ಸಾಹಿತ್ಯೋದಯದ ಪ್ರೇರಣೆ, ಆಗಿನ ಕವಿ – ಲೇಖಕರ ಕೃತಿ ರಚನೆಯ ಚಾರಿತ್ರಿಕ ಹಿನ್ನೆಲೆ ಮತ್ತು ಅಂದಿನ ಸಾಹಿತ್ಯ ಕೃತಿಗಳಲ್ಲಿ ತೋರಿಬಂದ ಹೊಸತನ, ಈ ಮುಖ್ಯ ಅಂಶಗಳನ್ನು ಮುಂದಿನ ಪ್ರಕರಣಗಳಲ್ಲಿ ವಿವೇಚಿಸ ಬಯಸಿದೆ. ಮುದ್ರಣ ಹಾಗೂ ಹೊಸ ಶಿಕ್ಷಣ ಇವು ಹೊಸಗನ್ನಡ ಸಾಹಿತ್ಯೋದಯಕ್ಕೆ ಪ್ರೇರಕಗಳಾದ್ದರಿಂದ ಮೊದಲಿಗೆ ಅವನ್ನು ವಿಶದಗೊಳಿಸಬೇಕಾಗುವುದು. ಬ್ರಿಟಿಶ್ ಅಧಿಕಾರಿಗಳು, ಮಿಶನರಿಗಳು, ಮುಮ್ಮಡಿ ಕೃಷ್ಣರಾಜರ ಆಸ್ಥಾನ ವಿದ್ವಾಂಸರು, ಹರಿದಾಸರು, ಯಕ್ಷಗಾನ ಕವಿಗಳು, ಮುಖ್ಯತಃ ನೂರಾರು ಜನ ಶಿಕ್ಷಕರು ನವೋದಯ ಕಾಲದಲ್ಲಿ ಸಾಹಿತ್ಯ ರಚನೆ ಮಾಡಿದ್ದಾರೆ. ಅವರು ಆರಂಭಕಾರರಾದ್ದರಿಂದ ಅವರ ವಾಙ್ಮಯ ಕಾರ್ಯದ ಹಿನ್ನೆಲೆಯ ಚಿತ್ರಣ ಅವಶ್ಯವಾಗುತ್ತದೆ. ಅನುಕರಣ, ಪರಿಷ್ಕರಣಗಳೇ ಹೆಚ್ಚಿಗೆ ಇದ್ದರೂ ಅವರ ಕೃತಿಗಳಲ್ಲಿ ಕಂಡುಬರುವ ಹೊಸತನವನ್ನು ಅರಸಿಕೊಂಡು ಹೋಗಬೇಕು. ಆ ಮೂಲಕವೇ ಇಪ್ಪತ್ತನೆಯ ಶತಮಾನದಲ್ಲಿಯ ಹೊಸಗನ್ನಡ ಸಾಹಿತ್ಯದ ಮೂಲ ಲಕ್ಷಣಗಳನ್ನು ಗುರುತಿಸುವುದು ಸಾಧ್ಯ.

## ಸಂದರ್ಭ ಸೂಚಿ


೧. Mysore. A Gazetteer. Vol.1., p.502

೨. Indian Literature, p.165 – 6

೩. Mysore Archaeological Survey Report, 1938. p.77

೪. ಸಾಹಿತ್ಯ – ಸಂಪ್ರದಾಯ ಮತ್ತು ಹೊಸ ಮಾರ್ಗ, ಪು. ೪೧–೨.

೫. Missions of South India, p.1

೬. Dictionary — Marathi and English. Preface.

೭. Literatures in Indian Languages, p.33

೮. Ibid. p.225

ಪ್ರಕರಣ : ೨

# ಮುದ್ರಣ ಮತ್ತು ಗ್ರಂಥೋದ್ಯಮ

## ೨೧ ಮುದ್ರಣ

ಹೊಸಗನ್ನಡ ಸಾಹಿತ್ಯಕ್ಕೂ ಮುದ್ರಣ ಕಲೆಗೂ ಅತ್ಯಂತ ನಿಕಟ ಸಂಬಂಧ. ಅರುಣೋದಯ ಕಾಲದ ಸಾಹಿತ್ಯವು ಆರಂಭವಾಗುವುದಕ್ಕೂ ಅದು ಇಷ್ಟೊಂದು ವ್ಯಾಪಕವಾಗಿ ಹಬ್ಬುವುದಕ್ಕೂ ಮುದ್ರಣವೇ ಮೂಲ ಕಾರಣ. ಅವೆರಡೂ ಒಂದನ್ನೊಂದು ಬಳಸಿಕೊಂಡೇ ಏಕ ಕಾಲಕ್ಕೆ ಮುಂದೆ ಸಾಗಿವೆ. ಕನ್ನಡದಲ್ಲಿ ಮುದ್ರಣವು ಆರಂಭವಾದ ರೀತಿ ಮತ್ತು ಅದು ಸಾಹಿತ್ಯ ಸೃಷ್ಟಿಗೆ ನೆರವಾದ ಬಗೆಯನ್ನು ಅರಿತುಕೊಳ್ಳುವುದು ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಅವಶ್ಯವಾಗಿದೆ.

### ೨೧೧ ಮಿಶನರಿಗಳ ಮುದ್ರಣ ಕಾರ್ಯ

ಯುರೋಪದಲ್ಲಿ ಮುದ್ರಣ ಕಲೆಯ ಮೊದಲ ಶೋಧವಾದುದು ಕ್ರಿ. ಶ. ೧೪೫೦ರಲ್ಲಿ. ಅಂದಿಗೆ ಸರಿಯಾಗಿ ನೂರು ವರ್ಷಕ್ಕೆ ಭಾರತದಲ್ಲಿ ಮುದ್ರಾಯಂತ್ರವು ಬಂದಿತು. ಗೋವೆಯಲ್ಲಿದ್ದ ಪೋರ್ತುಗೀಜ ಪಾದ್ರಿಗಳು ಸಂತ ಝೇವಿಯರ್ ವಿರಚಿತ 'ಡಾಕ್ಟ್ರಿನಾ ಕ್ರಿಸ್ತಾ' ಗ್ರಂಥವನ್ನು ಕ್ರಿ.ಶ. ೧೫೫೭ರಲ್ಲಿ ಹೊರತಂದರು. ಇದುವೆ ಭಾರತದಲ್ಲಿ ಆದ್ಯ ಮುದ್ರಿತ ಕೃತಿ.

ಆದರೆ ಭಾರತದಲ್ಲಿ ತಮ್ಮ ಧರ್ಮದ ಪ್ರಸಾರವಾಗಬೇಕಾದರೆ, ದೇಶ ಭಾಷೆಗಳಲ್ಲಿಯೇ ಗ್ರಂಥಗಳನ್ನು ಬರೆದು ಮುದ್ರಿಸುವುದು ಹೆಚ್ಚು ಸೂಕ್ತ ಎನ್ನುವ ವಿಚಾರದಿಂದ ಗೋವೆಯ ಈ ಜೆಸುಯಿಟ್ ಪಾದ್ರಿಗಳು ಸ್ಥಳೀಯ ಭಾಷೆಯಾದ ಕೊಂಕಣಿಯನ್ನು ಕೈಗೆತ್ತಿಕೊಂಡರು. ಕೊಂಕಣಿಗೆ ಸ್ವಂತ ಲಿಪಿ ಇಲ್ಲದೇ, ಕನ್ನಡದ್ದನ್ನೇ ಬಳಸಲಾಗುತ್ತಿದ್ದುದರಿಂದ ಕನ್ನಡ ಲಿಪಿಯ ಮೊಳೆಗಳ ತಯಾರಿಕೆಗೆ ಗೋನ್ಸಾಲಿಸ್ ಎಂಬವನು ಉದ್ಯುಕ್ತನಾದನು. ಆದರೆ ಕೇವಲ ೫೨ ಸಂಜ್ಞೆಗಳುಳ್ಳ ರೋಮನ್ ಲಿಪಿಯ ಸುಭಗತೆಗೆ ಒಗ್ಗಿದ್ದ ಅವನಿಗೆ ನಮ್ಮ ಲಿಪಿಯ ಸಣ್ಣ ದೊಡ್ಡ ಸಂಜ್ಞೆಗಳೂ ಅನೇಕ ಸಂಜ್ಞೆಗಳ ಅಂಕು ಡೊಂಕುಗಳೂ ತೊಂದರೆ

ಕೊಟ್ಟುವಾದ್ದರಿಂದ ಆ ಕೆಲಸವನ್ನು ನಿಲ್ಲಿಸಿ ಬಿಟ್ಟನು.* ಗೋನ್ಸಾಲಿಸನು ಹಾಗೆ ಧೃತಿಗೆಡದೆ ಕೈಗೆತ್ತಿಕೊಂಡಿದ್ದ ಕೆಲಸವನ್ನು ಮುಗಿಸಿದ್ದರೆ ಭಾರತೀಯ ಭಾಷೆಗಳಲ್ಲಿ ಕನ್ನಡ ಲಿಪಿ ಮುದ್ರಣವೇ ಮೊದಲಿನದಾಗುತ್ತಿತ್ತು. ಆ ಮುಂದಿನ ಗೋವೆಯ ಮುದ್ರಣ ಕಾರ್ಯದಲ್ಲಿ ಕನ್ನಡವು ಪಾಲುಗೊಂಡಿರಬಹುದಾದರೂ ಅಂಥ ಕನ್ನಡ ಪುಸ್ತಕಗಳು ಇದುವರೆಗೆ ದೊರಕಿಲ್ಲ. ಕ್ರಿ.ಶ. ೧೬೭೦ರ ಸುಮಾರಿಗೆ ಪೋರ್ತುಗೀಜ ಮಿಶನರಿಗಳು ಮುದ್ರಣ ಕಾರ್ಯವನ್ನೇ ನಿಲ್ಲಿಸಿಬಿಟ್ಟರು.

ಕನ್ನಡ ಮುದ್ರಣದ ಮೊದಲ ಬಿತ್ತನೆಯು ಕರ್ನಾಟಕದಲ್ಲಿ ಆಗದೇ ಭಾರತದ ಇತರ ಪ್ರದೇಶಗಳಲ್ಲಿ ನಡೆದುದು ವಿಚಿತ್ರ ಸನ್ನಿವೇಶವಾಗಿದೆ. ಈ ಮಾತು ಆಸಾಮೀ, ಮರಾಠೀ ಮೊದಲಾದ ಇತರ ಭಾಷೆಗಳಿಗೂ ಅನ್ವಯಿಸುತ್ತದೆ. ಹೊಸ ಕಾಲದ ಪ್ರಥಮ ಮುದ್ರಿತ ಕನ್ನಡ ಪುಸ್ತಕವೆಂದರೆ **ವಿಲಿಯಮ್ ಕೇರಿಯು** ಬಂಗಾಲದ ಶ್ರೀರಾಮಪುರ ಪ್ರೆಸ್ಸಿನಲ್ಲಿ ಕ್ರಿ.ಶ. ೧೮೧೭ರಲ್ಲಿ ಮುದ್ರಿಸಿದ 'A Grammar of the Kurnata Language'. ಭಾರತೀಯ ಮತ್ತು ಏಶಿಯದ ಕೆಲವು ಭಾಷೆಗಳಲ್ಲಿ ಪುಸ್ತಕಗಳನ್ನು ಬರೆದು ಮುದ್ರಿಸುವ ಬೃಹತ್ ಯೋಜನೆಯನ್ವಯ, ವಿಲಿಯಮ್ ಕೇರಿಯು ಒಬ್ಬ ಮುನಶಿಯನ್ನು ಸಂಬಳಕ್ಕಿಟ್ಟುಕೊಂಡು ಕನ್ನಡವನ್ನು ಕಲಿತನು. ೧೮೦೯ರ ವೇಳೆಗೆ ತನ್ನ ಮುನಶಿಯ ಸಹಾಯದಿಂದ ಅವನು ಬೈಬಲ್ಲಿನ ಕನ್ನಡ ಅನುವಾದವನ್ನು ಮುಗಿಸಿದ್ದನಾದರೂ ಕನ್ನಡ ಮೊಳೆಗಳು ಸಿದ್ಧವಾಗಿರಲಿಲ್ಲ. ಕ್ರಿ.ಶ. ೧೮೧೫ರ ಸುಮಾರಿಗೆ ಅವನ ಕೆಲಸಗಾರರಲ್ಲಿ ಒಬ್ಬನಾದ ಮನೋಹರನೆಂಬ ವಂಗೀಯನು ಕನ್ನಡದ ಮೊಳೆಗಳನ್ನು ಸಿದ್ಧಪಡಿಸಿದಾಗ ಕೇರಿಯು, ತನ್ನ ವ್ಯಾಕರಣ ಗ್ರಂಥವನ್ನು ಮೊದಲಿಗೆ ಮುದ್ರಿಸಿದನು. ಬೈಬಲಿನ ಕನ್ನಡಾನುವಾದ ಪ್ರತಿಯು ೧೮೧೨ರಲ್ಲಾದ ಬೆಂಕಿಯ ಅನಾಹುತದಲ್ಲಿ ಸುಟ್ಟು ಹೋದದ್ದರಿಂದ, ಮತ್ತೊಮ್ಮೆ ಅನುವಾದಿಸಿ, ಸಾವಿರಕ್ಕೆ ಮಿಕ್ಕಿದ ಪುಟಗಳುಳ್ಳ ಆ ಕೃತಿಯನ್ನು ೧೮೨೩ರಲ್ಲಿ ಮುದ್ರಿಸಿ ಹೊರತಂದನು. ಶ್ರೀರಾಮಪುರ ಪ್ರೆಸ್ಸಿನಲ್ಲಿ ಅಚ್ಚಾದ ಕನ್ನಡ ಪುಸ್ತಕಗಳೆಂದರೆ ಇವೆರಡೇ.[೧]

ಇದೇ ಕಾಲಕ್ಕೆ ಮದ್ರಾಸ್ ಮತ್ತು ಬಳ್ಳಾರಿಗಳಲ್ಲಿಯೂ ಕನ್ನಡ ಗ್ರಂಥರಚನೆ. ಮುದ್ರಣಗಳು ಸಾಗಿದ್ದುವು. ಕ್ರಿ.ಶ. ೧೮೦೪ರ ಸುಮಾರಿಗೆ ಸ್ಥಾಪಿತವಾದ ಮದ್ರಾಸಿನ (ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನ) ಅಚ್ಚುಕೂಟದಿಂದ ತಮಿಳು, ತೆಲುಗು ಭಾಷಾ ಪುಸ್ತಕಗಳು ಅದಾಗಲೇ ಹೊರಬಂದಿದ್ದುವು. ಆಗ ಕೆನರಾ ಜಿಲ್ಲೆಯಲ್ಲಿ ಅಧಿಕಾರಿಯಾಗಿದ್ದ ಜಾನ್ ಮೆಕ್ಕರೆಲ್ ಕನ್ನಡ ವ್ಯಾಕರಣ ರಚನೆಯ ಸೂಚನೆಯನ್ನು

* ಪ್ರಥಮ ಪ್ರಯತ್ನದ ಈ ಮೊಳೆಗಳು ದೇವನಾಗರೀ ಲಿಪಿಯಲ್ಲಿದ್ದುವೆಂಬುದಾಗಿ ಹಲವು ವಿದ್ವಾಂಸರ ಅಭಿಪ್ರಾಯವಾಗಿದ್ದಿತು. ಆದರೆ ಅವು ಕನ್ನಡದವೇ ಎಂದು ಆಧಾರಸಹಿತವಾಗಿ ಮಂಡಿಸಿದ್ದಾಗಿವೆ. ('ಪ್ರಜಾವಾಣಿ'ಯ ೧೯೬೩ರ ಆಗಸ್ಟ್ ತಿಂಗಳ ಸಾಪ್ತಾಹಿಕ ಪುರವಣಿಗಳಲ್ಲಿಯ ಲೇಖನಮಾಲೆ)

ಮದ್ರಾಸ ಸರಕಾರದ ಮುಂದೆ ಇರಿಸಿದ್ದನು (೧೮೦೯). ಮುಂದೆ ಕ್ರಿ.ಶ. ೧೮೧೭ರಲ್ಲಿ ಕನ್ನಡ ಭಾಷಾಂತರಕಾರನೆಂದು ಅವನು ನೇಮಕಗೊಂಡಿದ್ದಾಗ ಈ ಸೂಚನೆಗೆ ಮೂರ್ತಸ್ವರೂಪ ಬಂದಿರಬೇಕು. ಅಂತೂ 'A Grammar of the Carnataca Language' ಎಂಬ ಅವನ ಪುಸ್ತಕವು ೧೮೨೦ಗಲ್ಲಿ ಕಾಲೇಜ್ ಪ್ರೆಸ್ಸಿನಿಂದ ಹೊರಬಂದಿತು.

ಇವೆರಡೂ ವ್ಯಾಕರಣ ಪುಸ್ತಕಗಳು ಇಂಗ್ಲಿಷ್‌ನಲ್ಲಿ ಬರೆಯಲ್ಪಟ್ಟಿದ್ದು ಅವುಗಳಲ್ಲಿಯ ಉದಾಹರಣೆಗಳಷ್ಟನ್ನೆ ಕನ್ನಡದಲ್ಲಿ ಕೊಡಲಾಗಿದೆ. ಮದ್ರಾಸಿನ ಕಾಲೇಜ್ ಪ್ರೆಸ್ಸಿನಲ್ಲಿ ಅಚ್ಚಾದ ಅನಂತರದ ಕನ್ನಡ ಗ್ರಂಥವೆಂದರೆ ವಿಲಿಯಮ್ ರೀವ್ ವಿರಚಿತ 'ಇಂಗ್ಲಿಷ್ – ಕನ್ನಡ ಶಬ್ದಕೋಶ' (೧೮೨೪). ಇದುವೆ ಹೊಸಗನ್ನಡ ಕಾಲದ ಮೊತ್ತಮೊದಲಿನ ಕೋಶ ರಚನೆಯ ಪ್ರಯತ್ನವಾಗಿದೆ. ರೀವ್ ಕನ್ನಡ – ಇಂಗ್ಲಿಷಿನ ಶಬ್ದಕೋಶವನ್ನೂ ರಚಿಸಿದನು (೧೮೩೨). ಈ ಕೃತಿಯು ಬೇರೆಡೆ ಅಂದರೆ ಗವರ್ನಮೆಂಟ್ ಗಜೆಟ್ ಪ್ರೆಸ್ಸಿನಲ್ಲಿ ಮುದ್ರಿತವಾಯ್ತು. ಈ ಕೋಶಗಳು ಒಟ್ಟಿಗೆ ಡೆಮಿ ೧/೪ರ ಮೂರು ಸಾವಿರ ಪುಟಗಳನ್ನು ಹೊಂದಿದ್ದು, ನಾಲ್ಕು ಸಂಪುಟಗಳಲ್ಲಿ ಅವನ್ನು ಹೊರತರಲಾಯಿತು. ಈ 'ಭಯಂಕರ' ಗಾತ್ರಕ್ಕೆ ಅವರು ಉಪಯೋಗಿಸಿದ ಕನ್ನಡ ಮೊಳೆಗಳ ದೊಡ್ಡ ಆಕಾರವೇ ಕಾರಣ. ಆದರೆ ಇವೆರಡೂ ಪ್ರೆಸ್ಸುಗಳಲ್ಲಿ ಕನ್ನಡ ಪುಸ್ತಕಗಳ ಮುದ್ರಣ ಹೆಚ್ಚಾಗಿ ನಡೆಯಲಿಲ್ಲ. ಶ್ರೀರಾಮಪುರ ಮತ್ತು ಮದ್ರಾಸದಲ್ಲಿ ಕನ್ನಡ ಮುದ್ರಣ ಕಾರ್ಯವು ಹೀಗೆ ತಡೆದು ನಿಂತರೂ ಬಳ್ಳಾರಿಯಲ್ಲಿ ಮಾತ್ರ ಯಶಸ್ವಿಯಾಯಿತು.

"ಇದುವರೆಗೆ ನೀವು ಉಪದೇಶ ಮಾಡಿದ ವಿಷಯವನ್ನು ಎಲ್ಲಿಯಾದರೂ ಬರೆದದ್ದುಂಟೆ; ಎಂದು ಮಿಶನರಿಗಳಾದ ನಮ್ಮನ್ನು ಜನ ಕೇಳುತ್ತಾರೆ. ಪ್ರವಚನ ಮಾಡಿಯಾದ ಮೇಲೆ ಆ ಮಾತುಗಳನ್ನು ನಿಧಾನವಾಗಿ ಓದಿ ಮನನ ಮಾಡಿಕೊಳ್ಳುವುದಕ್ಕೆಂದು ಪುಸ್ತಕಗಳನ್ನು ಕೊಡದೆ ಹೋದರೆ ಏನು ಪ್ರಯೋಜನ? ಅಂಥ ಪುಸ್ತಕ ಅವನ ಕೈಯಲ್ಲಿದ್ದರೆ, ಅದನ್ನು ಇತರರನೇಕರು ಓದುವರು. ಅಲ್ಲಿಂದ ಅದು ಗ್ರಾಮಾಂತರವನ್ನೂ ಸೇರುವುದು. ಅಷ್ಟು ದೂರದಲ್ಲಿ ಮಿಶನರಿಗಳ ವಾಣಿಯು ಕೇಳ ಬರುವುದು ಸಾಧ್ಯವಿಲ್ಲವಾದರೂ ಪುಸ್ತಕವು ಆ ಕೆಲಸವನ್ನು ಮಾಡುತ್ತಲೇ ಇರುವುದು. ದೊಡ್ಡವರಿಗೂ ಎಳೆಯರಿಗೂ ಉಪಯೋಗ ಬೀಳಬಹುದಾದ ಇಂಥ ಪುಸ್ತಕಗಳ ಪ್ರಕಟನೆಗೆ ಮುದ್ರಣಾಲಯವು ಅತ್ಯಗತ್ಯ". - ಈ ಅರ್ಥದ ಮಾತುಗಳನ್ನು ಓರ್ವ ಮಿಶನರಿಯು ಬರೆದಿದ್ದಾನೆ.[೨] ಮಿಶನರಿ ಜನರಿಗೆ ಮುದ್ರಣವು ಒಂದು ಅನಿವಾರ್ಯದ ಸಾಧನವಾಗಿದ್ದಿತೆಂಬುದನ್ನು ಇದರಿಂದ ಕಂಡುಕೊಳ್ಳುತ್ತೇವೆ. ಅವರ ಕಾರ್ಯತತ್ಪರತೆಯಿಂದಾಗಿ ಮುದ್ರಣೋದ್ಯಮವು ಅವರ ಕೈಯಲ್ಲಿ ಪ್ರಗಲ್ಭ ಸ್ಥಿತಿಯನ್ನು ಹೊಂದಿತು. ಇತರರಿಗೂ ಅದು ವರದಾನವಾಗಿ ಪರಿಣಮಿಸಿತು. ಈ ಹಿನ್ನೆಲೆಯಲ್ಲಿ

ಕರ್ನಾಟಕದ ವಿವಿಧ ಊರುಗಳಲ್ಲಿ ಅವರ ಮುದ್ರಣ ಕಾರ್ಯವು ಹೇಗೆ ನಡೆದುಕೊಂಡು ಬಂದಿತೆಂಬುದನ್ನು ನೋಡುವಾ.

**ಬಳ್ಳಾರಿ : ಜಾನ್ ಹ್ಯಾಂಡ್ಸ್** ಬಳ್ಳಾರಿಗೆ ಬಂದ ೨ – ೩ ವರ್ಷಗಳಲ್ಲಿಯೆ ಕನ್ನಡ ವ್ಯಾಕರಣ, ಶಬ್ದಕೋಶ ಮತ್ತು ಬೈಬಲಿನ ಅನುವಾದ — ಇವು ಮೂರರ ಹಸ್ತಪ್ರತಿಗಳನ್ನು ಸಿದ್ಧಗೊಳಿಸಿದ್ದನು. ಆದರೆ ಮುದ್ರಣದ ಅನುಕೂಲವಿರಲಿಲ್ಲ. ಆದ್ದರಿಂದ ಓರ್ವ ಶಾಲಾ ಮಾಸ್ತರನನ್ನು ಸಂಬಳಕ್ಕಿಟ್ಟುಕೊಂಡು ಅವನಿಂದ ಪ್ರತಿಮಾಡಿಸಿ, ಅವನ್ನು ಹಂಚುತಲಿದ್ದನು. ಪ್ರಚಾರಾರ್ಥವಾಗಿ ಸಾವಿರಾರು ಪ್ರತಿಗಳು ಬೇಕಾದಾಗ ಇದೆಂತು ಸಾಕಾದೀತು? ಆಗ ಮದ್ರಾಸದಲ್ಲಿದ್ದ ಕಮರ್ಶಿಯಲ್ ಪ್ರೆಸ್ ಎಂಬಲ್ಲಿ ಹೊಸ ಒಡಂಬಡಿಕೆಯ ಪೂರ್ವಾರ್ಧವನ್ನು ಮುದ್ರಿಸಲು ಹ್ಯಾಂಡ್ಸ್ ಅಣಿಯಾದನು. ಕ್ರಿ.ಶ. ೧೮೨೦ರಲ್ಲಿ ಮುದ್ರಣ ಮುಗಿದು ಹೊರಬಂದ ಈ ಕೃತಿಯು ಸಂಪೂರ್ಣವಾಗಿ ಕನ್ನಡ ಭಾಷೆ ಮತ್ತು ಲಿಪಿಯಲ್ಲಿರುವ ಆದ್ಯ ಮುದ್ರಿತ ಗ್ರಂಥವಾಗಿದೆ.

ನಮ್ಮ ಜನಕ್ಕೆ ಮುದ್ರಿತ ಗ್ರಂಥ ಸ್ವರೂಪವು ಅತ್ಯಂತ ಹೊಸದು. ಅಲ್ಲದೆ ಪುಕ್ಕಟೆಯಾಗಿ, ಸುಲಭವಾಗಿ ಸಿಗುವ ಪ್ರಮೇಯವು ಅವರ ಸಂಭ್ರಮವನ್ನು ಹೆಚ್ಚಿಸಿತು. ಆ ಪುಸ್ತಕಗಳಲ್ಲಿಯ ವಿಷಯ, ಮತ್ತು ಭಾಷೆ ವಿಚಿತ್ರವಾಗಿ ಕಂಡರೂ ಅವನ್ನು ಓದುವಲ್ಲಿ ಉತ್ಸಾಹವನ್ನು ತೋರಿದರು. ಆ ಮುಂದೆ ಹ್ಯಾಂಡ್ಸ್ ಇದೇ ಪ್ರೆಸ್ಸಿನಲ್ಲಿ ಬೈಬಲ್ಲಿಗೆ ಸಂಬಂಧಿಸಿದ ಒಂದೆರಡು ಸಣ್ಣ ಪುಸ್ತಕಗಳನ್ನು ಹೊರತಂದನು. ಆದರೆ ಬಳ್ಳಾರಿ, ಮದ್ರಾಸಗಳ ನಡುವಿನ ಈ ನಿರಂತರ ಓಡಾಟವು ತೊಂದರೆದಾಯಕವಾಗಿದ್ದಿತು. ಬಳ್ಳಾರಿಯಲ್ಲಿಯೆ ಮುದ್ರಾಯಂತ್ರವನ್ನು ನೆಲೆಗೊಳಿಸಲು ಉದ್ಯುಕ್ತನಾದನು. ದಿ. ೧೪–೭–೧೮೨೩ರಂದು ಅವನು, ಲಂಡನ್ನಿನಲ್ಲಿರುವ ತನ್ನ ಕೇಂದ್ರ ಕಚೇರಿಗೆ ಬರೆದ ಪತ್ರದಲ್ಲಿ[೩] ಒಂದು ಪ್ರೆಸ್ ಹಾಗೂ ಓರ್ವ ಮುದ್ರಕನನ್ನು ಕಳಿಸಬೇಕೆಂದು ಕೇಳಿಕೊಂಡನು. ಆಗೀಗ ನೆನಪೋಲೆಯನ್ನು ಕಳುಹಿಸುತ್ತಿದ್ದನು. ಕೊನೆಗೊಮ್ಮೆ ಕ್ರಿ.ಶ. ೧೮೨೬ರಲ್ಲಿ ಮುದ್ರಾಯಂತ್ರವೊಂದು ಬಳ್ಳಾರಿಯನ್ನು ತಲುಪಿತು. ಅದು ಕಾರ್ಯಗತವಾದ ಕ್ರಿ.ಶ. ೧೮೨೭ನೆಯ ವರ್ಷವು ಐತಿಹಾಸಿಕ ಮಹತ್ವವುಳ್ಳದ್ದು. ಏಕೆಂದರೆ ಕರ್ನಾಟಕದಲ್ಲಿಯೇ ಕನ್ನಡ ಗ್ರಂಥಗಳ ನಿಯಮಿತವಾದ ಮುದ್ರಣವು ಮೊದಲಾದುದು ಆ ವರುಷದಿಂದಲೇ.

ಬಳ್ಳಾರಿಯಲ್ಲಿ ಕ್ರಿ.ಶ. ೧೮೧೨ರಷ್ಟು ಹಿಂದೆಯೇ ಮುದ್ರಣವು ಮೊದಲಾಯಿತೆಂದು ಕೆಲವೆಡೆ ಉಲ್ಲೇಖವಿದೆ. ಆದರೆ ೧೮೧೨ರಿಂದ ೧೮೨೦ರವರೆಗೆ ಹ್ಯಾಂಡ್ಸ್ ಮುದ್ರಿಸಿದ ಇನ್ನಾವುದೇ ಪುಸ್ತಕದ್ದಾಗಲೀ, ಅವುಗಳ ಮುದ್ರಣ ನಡೆದ ಬಗ್ಗೆ ಉಲ್ಲೇಖವಾಗಲೀ ಅವನ ಹಾಗೂ ಲಂಡನ್ ಕಚೇರಿಯ ನಡುವಿನ ಪತ್ರ ವ್ಯವಹಾರದಲ್ಲಿ ತೋರಿಬಂದಿಲ್ಲ. ಬಳ್ಳಾರಿಯಲ್ಲಿ ೧೮೧೨ರಿಂದ ಮುದ್ರಾಯಂತ್ರ ಸ್ಥಾಪನೆಯಾಗಿದ್ದೇ ಆದರೆ. ೧೮೧೮ರ

ಸುಮಾರಿಗೆ ಆರಂಭವಾದ ಹೊಸ ಒಡಂಬಡಿಕೆಯ ಮುದ್ರಣಕ್ಕಾಗಿ ಹ್ಯಾಂಡ್ಸ್ ಮದ್ರಾಸಿಗೆ ಎಡತಾಕುವ ಪ್ರಸಂಗವೇ ಬರುತ್ತಿರಲಿಲ್ಲ.*

ಬಳ್ಳಾರಿಯ ಮಿಶನ್ ಪ್ರೆಸ್ಸಿನಲ್ಲಿ ಕನ್ನಡ, ತೆಲುಗು ಎರಡೂ ಭಾಷೆಗಳಲ್ಲಿ ಪುಸ್ತಕಗಳ ಮುದ್ರಣ ನಡೆದಿದ್ದಿತು. ಆದರೆ ಕನ್ನಡದ ಮೊಳೆಗಳು ಪ್ರತ್ಯೇಕವಾಗಿ ಇರಲಿಲ್ಲವಾದ್ದರಿಂದ ತೆಲುಗು ಲಿಪಿಯಲ್ಲಿಯೇ ಅವನ್ನು ಮುದ್ರಿಸಲಾಗುತ್ತಿತ್ತು. ಕ್ರಿ.ಶ. ೧೮೩೨ರಲ್ಲಿ ಹ್ಯಾಂಡ್ಸ್ ಲಂಡನ್ನಿನಿಂದ, ಕನ್ನಡ ಮೊಳೆಗಳನ್ನು ಮಾಡಿಸಿ ತಂದನು. ಜೊತೆಗೆ ಪೇನ್ ಎಂಬ ಮುದ್ರಕನೂ ಬಂದನು. ಹ್ಯಾಂಡ್ಸನ ಉತ್ತರಾಧಿಕಾರಿಗಳಾದ ಜಾನ್ ರೀಡ್ ಮತ್ತು ಪೇನ್ ಇವರ ನೇತೃತ್ವದಲ್ಲಿ ಮುದ್ರಣ ಕಾರ್ಯವು ಭರದಿಂದ ಮುಂದುವರಿಯಿತು. ಬಳ್ಳಾರಿಯ ಪ್ರೆಸ್ ಕ್ರಿ.ಶ. ೧೮೪೦ ರವರೆಗೆ ಏಕಮೇವಾದ್ವಿತೀಯವಾಗಿ ಮೆರೆಯಿತು. ಪೇನ್ ಕಾಲರಾದಿಂದ ಮಡಿದ ಮೇಲೆ (ಕ್ರಿ.ಶ. ೧೮೪೨) ಅದರ ಗತಿ ಕ್ರಮೇಣ ಕುಂಠಿತಗೊಂಡು, ೧೮೫೪ರ ಸುಮಾರಿಗೆ ನಿಂತುಹೋಯಿತು.

**ಬೆಂಗಳೂರು :** ಕ್ರಿ.ಶ. ೧೮೪೦ಕ್ಕೆ ಮುಂಚೆ ಬೆಂಗಳೂರಲ್ಲಿ ಯಾವ ಕನ್ನಡ ಮುದ್ರಣಾಲಯವೂ ಇರಲಿಲ್ಲ. ತಮಿಳು, ತೆಲುಗು ಪುಸ್ತಕಗಳು ದಂಡಿನ ಪ್ರದೇಶದಲ್ಲಿ ಕಣ್ಣಿಗೆ ಬೀಳುತ್ತಿದ್ದುವು. ಬಳ್ಳಾರಿಯಲ್ಲಿದ್ದ ಪ್ರೆಸ್ಸು ಲಂಡನ್ ಮಿಶನರಿಗೆ ಸೇರಿತ್ತಾದ್ದರಿಂದ, ವೆಸ್ಲಿಯನ್ನರು ಮತಪ್ರಸಾರ, ಶಿಕ್ಷಣ ಮುಂತಾದ ಸ್ವಕಾರ್ಯಗಳಿಗೆಂದು ಪ್ರತ್ಯೇಕ ಮುದ್ರಣಾಲಯವನ್ನು ಸ್ಥಾಪಿಸಿಕೊಂಡರು (ನವೆಂಬರ್ ೧೮೪೦). ಹಾಗೆ ಮೊದಲಿಗೆ ಪ್ರಕಟವಾದ ಕೃತಿ 'ಪ್ರಶ್ನೋತ್ತರ ಶಾಲಾ ಪುಸ್ತಕ' ಎಂಬುದು.

ಮೊಳೆಗಳ ಸುಧಾರಣೆಗೆ ವೆಸ್ಲಿಯನ್ನರು ವಿಶೇಷ ಗಮನವಿತ್ತರು. ಆರಂಭಕ್ಕೆ ಮದ್ರಾಸದಿಂದ ತಂದ ಮೊಳೆಗಳು ಒಟ್ಟಿಗೆ ಏಳು ನೂರು ಸಂಜ್ಞೆಗಳನ್ನು ಒಳಗೊಂಡಿದ್ದವು! ಈ ಸಂಖ್ಯೆಯನ್ನು ಬಹುವಾಗಿ ತಗ್ಗಿಸಲು ಥಾಮಸ್ ಹಾಡ್ಸನ್ ಪಣತೊಟ್ಟನು. ಹಾಡ್ಸನ್ ಕ್ರಿ.ಶ. ೧೮೪೩ರಲ್ಲಿ ಲಂಡನ್ನಿನಿಂದ ಹಿಂತಿರುಗುವಾಗ ಕನ್ನಡ ಮೊಳೆಗಳನ್ನು ಪ್ರತ್ಯೇಕವಾಗಿ ಮಾಡಿಸಿ ತಂದನು. ವ್ಯಾಟ್ಸ್ ಮತ್ತು ಗ್ಯಾರೆಟ್, ಜೊತೆಗೆ ಬಿ. ರಂಗಯ್ಯನೆಂಬ ದೇಶೀಯ — ಇವರು ವೆಸ್ಲಿಯನ್ ಮುದ್ರಣದ ಪ್ರಗತಿಗೆ ಮುಖ್ಯ ಕಾರಣರು. ನಾಲ್ಕು ಬಗೆಯ ಗಾತ್ರಗಳುಳ್ಳ ಅಕ್ಷರಗಳು ಆ ಕಾಲಕ್ಕಿದ್ದುವು. ಅನಂತರ ಡಿ. ಸ್ಯಾಂಡರ್ಸನ್ ಎಂಬವನು ಅಕ್ಷರಗಳ ಸುಧಾರಣೆಗೆ ಮನಸ್ಸುಗೊಟ್ಟನು. ವಿಶೇಷತಃ ರೀವನ ಶಬ್ದಕೋಶದ ಗಾತ್ರವನ್ನು

---

* ಇದೇ ಬಗೆಯ ತಪ್ಪು ಅಭಿಪ್ರಾಯವು ನಾಡಿಗ್ ಕೃಷ್ಣಮೂರ್ತಿಯವರ 'ಭಾರತೀಯ ಪತ್ರಿಕೋದ್ಯಮ'ದ ಕುರಿತಾದ ಮಹಾಪ್ರಬಂಧದಲ್ಲಿ ಬಂದಿದೆ. ಕ್ರಿ.ಶ.೧೮೧೨ರಲ್ಲಿ ಜರ್ಮನ್ ಮಿಶನರಿಗಳಿಗಾಗಿ 'ಕಂನಡ ಸಮಾಚಾರ' ಎಂಬ ಪತ್ರಿಕೆಯು ಬಳ್ಳಾರಿಯಲ್ಲಿ ಅಚ್ಚಾಯಿತೆಂದೂ ಅದು ಕಾರಣ ಅವರೇ ಮೊತ್ತಮೊದಲು ಕನ್ನಡ ಮೊಳೆಗಳನ್ನು ತಯಾರಿಸಿರಬೇಕೆಂದೂ ಅದರಲ್ಲಿ ಹೇಳಲಾಗಿದೆ. ಆದರೆ '**ಕಂನಡ ಸಮಾಚಾರ**'ದ ಪ್ರಕಟಣೆಯು ಕ್ರಿ.ಶ.೧೮೪೪ ಎಂಬುದಾಗಿ ಆ ಪತ್ರಿಕೆಯ ಪ್ರಥಮ ಸಂಚಿಕೆಯಿಂದ ಸ್ವಯಂ ವೇದ್ಯವಾಗುವಂತಿದೆ. 'ಜರ್ಮನ್' ಮಿಶನರಿಗಳು ಭಾರತಕ್ಕೆ ಬಂದುದೇ ಕ್ರಿ.ಶ.೧೮೩೪ರಲ್ಲಿ.

ತಗ್ಗಿಸುವುದಕ್ಕಾಗಿಯೆ ೧೧ ಪೊಯಿಂಟಿನ ಮೊಳೆಗಳನ್ನು ತಯಾರಿಸಲಾಯಿತು. ಪರಿಣಾಮವಾಗಿ ೧೪೬೮ ಪುಟಗಳ ರೀವ್ ಶಬ್ದಕೋಶವು ಆಕಾರದಲ್ಲಿ ಅರ್ಧಕ್ಕಿಳಿದುದಲ್ಲದೆ ಒಂದು ಸಾವಿರ ಪುಟಗಳಿಗೆ ಸೀಮಿತವಾಯಿತು (೧೮೫೮). ಇತ್ತ ಬೈಬಲ್ ಪರಿಷ್ಕರಣದ ಕೆಲಸ ಮುಗಿದಿದ್ದಿತಾಗಿ, ಅದಕ್ಕೆ ಬೇಕಾಗುವ ಮೊಳೆಗಳನ್ನು ಪ್ರತ್ಯೇಕವಾಗಿ ಬೆಂಗಳೂರಲ್ಲಿ ಎರಕ ಹೊಯ್ಯಲಾಯಿತು. ಕ್ರಿಶ ೧೮೬೫ರಲ್ಲಿ ಹೊರಬಂದ ಸಮಗ್ರ ಬೈಬಲಿನ ವೆಸ್ಲಿಯನ್ ಮುದ್ರಣವು ಇಂದಿಗೂ ಸುಂದರವಾಗಿ ತೋರುತ್ತದೆ.

ಕ್ರಿ.ಶ. ೧೮೫೦ – ೧೮೭೦ರ ಅವಧಿಯಲ್ಲಿ ವೆಸ್ಲಿಯನ್ ಮಿಶನ್ ಪ್ರೆಸ್ ಉಚ್ಛ್ರಾಯ ಸ್ಥಿತಿಯಲ್ಲಿದ್ದು, ದಕ್ಷಿಣ ಭಾರತದಲ್ಲಿ ಅತಿ ಶ್ರೇಷ್ಠ ಮುದ್ರಣಾಲಯ ಎಂಬ ಖ್ಯಾತಿಯನ್ನು ಹೊಂದಿದ್ದಿತು. ಸರಕಾರಗಳು, ವಿದ್ಯಾರ್ಥಿಗಳು, ಸಾರ್ವಜನಿಕರು ಇವರೆಲ್ಲ ವೆಸ್ಲಿಯನ್ ಪುಸ್ತಕಗಳನ್ನು ಬಳಸಬೇಕಾಗಿ ಬಂದದ್ದರ ಫಲವಾಗಿ, ವರ್ಷಕ್ಕೆ ೫೦ ಸಾವಿರ ರೂ.ಗಳಿಗೆ ಮೇಲ್ಪಟ್ಟು ಮಾರಾಟದ ಹಣ ಬರುತ್ತಿತ್ತು. ಹೀಗೆ ಮುದ್ರಣಾಲಯವು ಪ್ರಬುದ್ಧ ಸ್ಥಿತಿಯಲ್ಲಿದ್ದುದಾಗಿ ತೋರಿದರೂ, ಲಾಭಾಂಶವಿಲ್ಲವೆಂಬ ಕಾರಣದಿಂದ ೧೮೭೯ರಲ್ಲಿ ಓರ್ವ ಖಾಸಗೀ ವ್ಯಕ್ತಿಗೆ ಅದನ್ನು ಮಾರಾಟ ಮಾಡಲಾಯಿತು! ಇದರಿಂದ ಕನ್ನಡ ಗ್ರಂಥೋದ್ಯಮವು ಇನ್ನಷ್ಟು ವ್ಯಾಪಕವಾಗಿ ಹೊರಹೊಮ್ಮುವ ಅವಕಾಶ ತಪ್ಪಿತೆಂದು ಹೇಳಬಹುದು. ಮುಂದೆ, ಕ್ರಿ.ಶ. ೧೮೯೦ರ ಸುಮಾರಿಗೆ ಹೆನ್ರಿ ಹೇಗ್ ಇವನ ನೇತೃತ್ವದಲ್ಲಿ ವೆಸ್ಲಿಯನ್ ಮುದ್ರಣವು ಮೈಸೂರು ನಗರದಲ್ಲಿ ತಲೆದೋರಿತು. ಸ್ವಮತೀಯ ಪುಸ್ತಕಗಳಲ್ಲದೆ ಹಳಗನ್ನಡ ಕಾವ್ಯಗಳು ಹಾಗೂ ಹೊಸಗನ್ನಡ ಗ್ರಂಥಗಳು ಈ ಅಚ್ಚುಕೂಟದಿಂದ ಹೊರಬಂದಿವೆ. ಇಪ್ಪತ್ತನೆಯ ಶತಮಾನದಲ್ಲೂ ಈ ಪ್ರೆಸ್ಸಿನ ಉತ್ತಮಿಕೆಯು ಸುಪರಿಚಿತವಾದದ್ದು. ಈಚೆಗೆ ನಿಂತಿದೆ.

ಬೆಂಗಳೂರಲ್ಲಿ ಸದ್ದಿಲ್ಲದೆ ಕನ್ನಡ ಮುದ್ರಣವನ್ನು ಕೈಗೊಂಡಿದ್ದ ಇನ್ನೊಂದು ಮಿಶನರಿ ಪ್ರೆಸ್ ಕೆಥಲಿಕರಿಗೆ ಸೇರಿದುದಾಗಿತ್ತು. ಪ್ರೊಟೆಸ್ಟಂಟರಂತೆಯೇ, ಮತಪ್ರಸಾರದ ಹಾಗೂ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸುತ್ತಿದ್ದ ಇವರಿಗೆ ತಮ್ಮದೇ ಮುದ್ರಣಾಲಯ ಇರಬೇಕೆನಿಸಿ, ೧೮೫೭ರ ಸುಮಾರಿಗೆ ಅದನ್ನು ಸ್ಥಾಪಿಸಿದರು. ಹಾಗೆ ಸ್ಥಾಪಿಸಿ ಹಲವಾರು ಗ್ರಂಥಗಳನ್ನು ಹೊರತಂದ ಶ್ರೇಯಸ್ಸು ಇ.ಎಲ್. ಚಾರ್ಬೊನಾ ಮತ್ತು ಎ. ಬೌತೆಲೊ ಇವರಿಗೆ ಸಲ್ಲುತ್ತದೆ.

**ಮಂಗಳೂರು :** ಕನ್ನಡ ಮುದ್ರಣ ವಿಚಾರದಲ್ಲಿ ಮಂಗಳೂರಿನ ಬಾಸೆಲ್ ಮಿಶನ್ನಿನ ಹೆಸರು ಅಪ್ರತಿಮವಾದದ್ದು. ಗ್ರಂಥಪ್ರಕಟನೆಯಲ್ಲಿ ಆಸ್ಥೆಯಿದ್ದ ಜಿ.ಎಚ್. ವೈಗ್ಲೆ ಒಂದು ಇಂಗ್ಲಿಷ್ ಪುಸ್ತಿಕೆಯನ್ನು ಮುದ್ರಿಸಿಕೊಂಡು ಬರಲೆಂದು ಮುಂಬಯಿಗೆ ಹೋಗಿದ್ದರು. ಮರಳಿ ಬರುವಾಗ ಆ ಯಂತ್ರವನ್ನೆ ದಾನವಾಗಿ ಪಡೆದರು. ಅವರ ಆತುರ ಎಷ್ಟೆಂದರೆ, ಮುಂಬಯಿಯಲ್ಲಿಯೇ ಕನ್ನಡ ಬಲ್ಲ ಒಬ್ಬರಿಂದ ಶಿಲೆಯ ಮೇಲೆ 'ಕ್ರೈಸ್ತ ಗೀತೆಗಳು'

ಎಂಬ ಹಾಡಿನ ಚಿಕ್ಕ ಸಂಗ್ರಹವನ್ನು ಬರೆಯಿಸಿ ಅಲ್ಲಿ ಮುದ್ರಿಸಿಕೊಂಡೇ ಮಂಗಳೂರಿಗೆ ಮುದ್ರಾಯಂತ್ರವನ್ನು ತಂದದ್ದು. (೧೮೪೨) 'ಜರ್ಮನ್ ಇವ್ಯಾಂಜೆಲಿಕಲ್ ಮಿಶನ್ ಪ್ರೆಸ್' ಎಂಬ ಅಭಿಧಾನದಿಂದ ಮುಂದುವರಿದ ಈ ಪ್ರೆಸ್ಸಿನಲ್ಲಿ ವೈಗ್ಲೆ ಮುದ್ರಿಸಿದ ಮೊದಲ ಪುಸ್ತಕವೆಂದರೆ 'ತುಳು ಕೀರ್ತನೆಗಳು'. ಸುರುವಿಗೆ ಇಲ್ಲಿಯ ಮುದ್ರಣವೆಲ್ಲ ಕಲ್ಲಚ್ಚಿನಿಂದ ನಡೆಯುತ್ತಿದ್ದಿತು. ಆಗ ಸಣ್ಣಪುಟ್ಟ ಮತಪುಸ್ತಕಗಳು ಮುದ್ರಣಗೊಂಡವು. ಮುಂದೆ, ಕುಮಾರವ್ಯಾಸ ಭಾರತ, ಬಸವಪುರಾಣ, ಚೆನ್ನಬಸವಪುರಾಣ, ಜೈಮಿನಿ ಭಾರತಗಳಂತಹ ದೊಡ್ಡ ಗಾತ್ರದ, ಬಹುಪುಟಸಂಖ್ಯೆಯ ಪುಸ್ತಕಗಳು ಕಲ್ಲಚ್ಚಿನಲ್ಲಿಯೇ ಹೊರಬಂದವು. ಅಲ್ಲದೆ, ಒಂದೇ ಆಕಾರದಲ್ಲಿ ಅತ್ಯಂತ ದುಂಡಗಾಗಿ ಮೂಡಿಸಿದ್ದರಲ್ಲಿ ಅವರ ದಕ್ಷತೆ, ಪರಿಶ್ರಮಗಳು ಒಡೆದು ತೋರುವಂತಿವೆ.

ಮುಂದಿನ ಮಹತ್ವದ ಹೆಜ್ಜೆಯೆಂದರೆ ಕ್ರಿ.ಶ. ೧೮೫೧ರಲ್ಲಿ ಬಿಡಿ ಮೊಳೆಗಳಿಂದ ಮುದ್ರಣವನ್ನು ಕೈಗೊಂಡದ್ದು. ಬಾಸೆಲ್‌ದಲ್ಲಿಯೆ ಅವನ್ನು ತಯಾರಿಸಿ ದೊಡ್ಡ ಮುದ್ರಣ ಯಂತ್ರದೊಡನೆ ಪ್ಲೆಬ್‌ಸ್ತ್ ಮಂಗಳೂರಿಗೆ ಬಂದಂದಿನಿಂದ ಈ ಅಚ್ಚುಕೂಟವು ಭರದಿಂದ ಬೆಳೆಯಿತು.

ಮುದ್ರಣದ ಯಾವ ಅಂಶವನ್ನು ತೆಗೆದುಕೊಂಡರೂ ಬಾಸೆಲ್ ಮಿಶನ್ನಿನವರ ಕಾರ್ಯವು ಮಹೋನ್ನತವಾಗಿದೆ. ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ ಅದು ಕರ್ನಾಟಕದಲ್ಲಿಯ ಯಾವುದೇ ಪ್ರೆಸ್‌ಗಿಂತ ದೊಡ್ಡದಿದ್ದು, ಕನ್ನಡ, ಇಂಗ್ಲಿಷ್ ಮಾತ್ರವಲ್ಲದೆ ತಮಿಳು, ಮಲೆಯಾಳೀ, ಸಂಸ್ಕೃತ, ಜರ್ಮನ್-ಈ ಭಾಷೆಗಳ ಗ್ರಂಥ ಮುದ್ರಣವೂ ಅಲ್ಲಿ ನಡೆಯುತ್ತಿದ್ದಿತು. ಅಚ್ಚಾದ ಪುಸ್ತಕಗಳ ಹೊರನೋಟದ ಚೆಲುವು ಅನುಪಮವಾದುದು. "The Basel Mission Press at Mangalore whose Canerese printing is unequalled for beauty by any other press in India."-ಎಂಬ ಅಖಿಲ ಭಾರತ ಮನ್ನಣೆಯನ್ನು ಅಂದಿನ ಮದ್ರಾಸ ಸರಕಾರವು ಸಲ್ಲಿಸಿದುದು ಯಥಾರ್ಥವಾದದ್ದೇ.[೫] ಅಂತೆಯೇ ಮುಂಬಯಿ, ಮದ್ರಾಸ ಸರಕಾರಗಳು ತಮ್ಮ ಕ್ರಮಿಕ ಪುಸ್ತಕಗಳನ್ನು ಮುದ್ರಣಕ್ಕಾಗಿ ಇಲ್ಲಿಗೇ ಕಳಿಸುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಂತೂ ಸುಮಾರು ಅರ್ಧ ಶತಮಾನದ ವರೆಗೆ (ಕೊಡಿಯಾಲಬೈಲ ಪ್ರೆಸ್ ಒಂದನ್ನು ಬಿಟ್ಟರೆ) ಇದುವೆ ಏಕೈಕ ಜಿಲ್ಲೆಯಲ್ಲಿ ಮುದ್ರಣಾಲಯವಾಗಿದ್ದಿತು. ಆಮೇಲೆ ಸ್ಥಾಪಿತವಾದ ಅಚ್ಚುಕೂಟಗಳಾದರೂ ಇಲ್ಲಿ ಕೆಲಸ ಮಾಡಿ ಅನುಭವ ಪಡೆದಿದ್ದವರ ನೆರವನ್ನೇ ಹೆಚ್ಚಾಗಿ ಪಡೆದುವು.

ಇಲ್ಲಿ ಮುದ್ರಿತವಾದ ಕೃತಿಗಳ ವೈವಿಧ್ಯವೂ ವಿಸ್ಮಯಜನಕವಾಗಿದೆ; ಹಲವಾರು ಅಂಶಗಳಲ್ಲಿ ಹೊಸ ಕ್ರಮವನ್ನು ರೂಢಿಸಿದೆ. ಪಠ್ಯಪುಸ್ತಕ ಹಾಗೂ ಕ್ರೈಸ್ತ ಧರ್ಮದ ಪುಸ್ತಕಗಳಂತೂ ಸರಿಯೇ. ಅನೇಕ ವ್ಯಾವಹಾರಿಕ ಪುಸ್ತಕಗಳು; ಕರಪತ್ರ, ಪಂಚಾಂಗ, ರೇಲ್ವೆ ವೇಳಾಪತ್ರಿಕೆ, ಕೋಷ್ಟಕ — ಇವುಗಳು ಮೊದಲಿಗೆ ಇಲ್ಲಿಂದಲೇ ಹೊರಬಂದವು.

ಬರ್ನೆಲರ ದಕ್ಷಿಣ ಭಾರತ ಲಿಪಿಶಾಸ್ತ್ರದಂಥ ಸಂಶೋಧನ ಗ್ರಂಥಗಳನ್ನು, ಅದರಂತೆ ಕೆಥಲಿಕರ ಕೊಂಕಣಿ ಭಾಷಾ ಗ್ರಂಥಗಳನ್ನು ಸಹ (ಕ್ರಿ.ಶ. ೧೮೮೩ರಿಂದ) ಇಲ್ಲಿ ಮುದ್ರಿಸಲಾಗಿದೆ. ಈ ಮಿಶನ್ನಿನವರು ಪಡಿಯಚ್ಚುಗಳನ್ನು ತಯಾರಿಸಿ ಬಣ್ಣದಿಂದ ಮುದ್ರಿಸುವುದನ್ನು ಮೊದಲಿನಿಂದಲೂ ಬಳಕೆಯಲ್ಲಿ ತಂದಿದ್ದರು. ಭಾರತ ನಕಾಶದ ೩೮೦೦ ಪ್ರತಿಗಳನ್ನು ಬಣ್ಣದಿಂದ ಮುದ್ರಿಸಿದ್ದಾಗಿ ಕ್ರಿ.ಶ. ೧೮೫೯ರ ಮಿಶನ್ನಿನ ವಾರ್ಷಿಕ ವರದಿಯಲ್ಲಿ ಕಾಣಿಸಲಾಗಿದೆ. ೧೭/೧೨ ಇಂಚು ಉದ್ದಗಲವಿರುವ ಈ ನಕಾಶವು ಕನ್ನಡದಲ್ಲಿ ಹೊರಬಂದ ನಕಾಶಗಳಲ್ಲಿ ಮೊದಲಿನದಾಗಿರುವ ಸಂಭವವಿದೆ.

ಕ್ರಿ.ಶ. ೧೮೬೫ರಲ್ಲಿ ವೆಸ್ಲಿಯನ್ನರು ಸಮಗ್ರ ಬೈಬಲನ್ನು ಹೊರ ತಂದಿದ್ದರಷ್ಟೆ. ಕೆಲವು ವರ್ಷಗಳಾದ ಮೇಲೆ ಬಾಸೆಲ್ ಮಿಶನ್ನಿನವರು ಇದಕ್ಕೆಂದೇ ವಿಶಿಷ್ಟವಾದ ಚಿಕ್ಕ ಗಾತ್ರದ ಮೊಳೆಗಳನ್ನು ತಯಾರಿಸಿ ಬೈಬಲನ್ನು ಪುನರ್ಮುದ್ರಿಸಿದರು. ಅದರಿಂದ ಬೈಬಲಿನ ಮಾರಾಟವು ಎಣಿಕೆ ಮೀರಿ ಹೆಚ್ಚಿತು. ಅದರಂತೆ ಕಿಟೆಲ್ ಕೋಶಕ್ಕೆ ಬೇಕಾಗಿದ್ದ ವಿವಿಧ ಬಗೆಯ ಮೊಳೆಗಳನ್ನು ಹೀಗೆಯೇ ಸಿದ್ಧಪಡಿಸಲಾಯಿತು. ಆ ಕೋಶವು ಗಾತ್ರದಲ್ಲಿ ಇಷ್ಟರ ಮಟ್ಟಿಗೆ ಉಳಿದುಕೊಂಡದ್ದಕ್ಕೆ ಇಂಥ ಸಣ್ಣಕ್ಕರಗಳ ಬಳಕೆಯೇ ಕಾರಣ. ಅದರಲ್ಲಿ ಸೂಕ್ತವಾಗಿ ಬಳಸಲಾದ ವಿವಿಧ ಬಗೆಯ ಮೊಳೆಗಳಿಂದಾಗಿ ಅದರ ವಾಚನವು ಎಷ್ಟೊಂದು ಸುಭಗವೂ ಸ್ಪಷ್ಟವೂ ಆಗಿದೆಯೆಂಬುದನ್ನು ಗಮನಿಸಬೇಕು.

ಈ ಮಿಶನ್ನಿನವರು ಮಾಡಹೊರಟ ಇನ್ನೊಂದು ಮಹತ್ಕಾರ್ಯವೆಂದರೆ ಕನ್ನಡ ಲಿಪಿ ಸುಧಾರಣೆ. ಈ=ಇ಼; ಕೂ=ಕು಼; ಅಕ್ಕ=ಅಕ್‌ಕ; ಸೂರ್ಯ=ಸುರ್‌ಯ; ಸ್ವಾತಂತ್ರ್ಯ=ಸ್‌ವಾತಂತ್‌ರ್‌ಯ; ಇತ್ಯಾದಿ. ಇವುಗಳಲ್ಲಿ ಒತ್ತಕ್ಷರಗಳನ್ನು ಕೆಳಗೆ ಬರೆಯದೇ ಒಂದೇ ಸಾಲಿನಲ್ಲಿ ಬರೆಯುವುದು ಎದ್ದು ತೋರುವ ಸುಧಾರಣೆಯಾಗಿದ್ದಿತು. ಮೊವ್‌ಗ್ಲಿಂಗ್ ಸಂಪಾದಿಸಿದ 'ರಾಜೇಂದ್‌ರ ನಾಮೆ'ಯಲ್ಲಿ (ಕ್ರಿ.ಶ. ೧೮೫೭) ಈ ಕ್ರಾಂತಿಕಾರಕ ಬದಲಾವಣೆ ಮೊದಲಿಗೆ ಬಂದಿದ್ದು, ಮೊವ್‌ಗ್ಲಿಂಗ್ ಅದನ್ನು ಈ ರೀತಿಯಾಗಿ ಸಮರ್ಥಿಸಿದ್ದಾರೆ:

"ಸದ್ಯ ಒತ್ತಕ್ಷರಗಳಿಗೂ ಪ್ರತ್ಯೇಕವಾದ ಅಚ್ಚುಮೊಳೆಗಳಿವೆ. ಅವನ್ನು ಬಿಟ್ಟುಕೊಟ್ಟಾಗ ಮೊಳೆಗಳ ಸಂಖ್ಯೆಯು ಸಾಕಷ್ಟು ಕಡಿಮೆಯಾಗುವುದು. ಮೊಳೆ ಜೋಡಿಸುವ ಕೆಲಸದಲ್ಲಿ ವೇಳೆಯ ಉಳಿತಾಯವಾಗುವುದು. ಒತ್ತಕ್ಷರಗಳಿಗಾಗಿ ಎರಡು ಸಾಲುಗಳ ನಡುವೆ ಹೆಚ್ಚು ಜಾಗವನ್ನು ಬಿಡಬೇಕಾಗುವುದಷ್ಟೆ. ಒಂದೇ ಪಂಕ್ತಿಯಲ್ಲಿ ಬರೆದುದಾದರೆ ಕಾಗದ ಉಳಿತಾಯವೂ ಆಗುವುದು. ಹೀಗೆ ಇದರಿಂದ ಮೂರು ಬಗೆಯ ಪ್ರಯೋಜನವಿದೆ."

ಆ ರೀತಿಯ ಮೊಳೆ ಜೋಡಣೆಗೆ ಎರಡು ಆಕ್ಷೇಪಗಳೇಳಬಹುದು. ಒಂದು, ಅದುವರೆಗೆ ಯಾರೂ ಹೀಗೆ ಬರೆದುದಿಲ್ಲವೆಂಬುದು. ಇನ್ನೊಂದು, ಆ ರೀತಿಯ ಬರೆಹದಿಂದ ಓದುವುದಕ್ಕೆ ತೊಂದರೆಯಾಗುತ್ತದೆಂಬುದು. ಇವಕ್ಕೆ ಉತ್ತರವಾಗಿ ಮೊವ್‌ಗ್ಲಿಂಗ್ ಒಂದು ಲಿಪಿಯ ಹಸ್ತಲಿಖಿತ ರೂಪ ಹಾಗೂ ಮುದ್ರಿತರೂಪ ಇವೆರಡೂ

ತದ್ವತ್ ಇರಬೇಕೆಂಬ ತತ್ತ್ವ ಗ್ರಾಹ್ಯವಲ್ಲವೆಂದು ಪ್ರತಿಪಾದಿಸಿ, ಯುರೋಪದಲ್ಲಿ ಮೊಳೆಗಳ ಮುದ್ರಣವು ಮೊದಲಾದಾಗ ಅಲ್ಲಿಯ ಅಕ್ಷರ ಶಿಲ್ಪಿಗಳು ಹಸ್ತಪ್ರತಿಗಳಲ್ಲಿದ್ದ ಸಂಕ್ಷೇಪದ ಹಾಗೂ ಸಾಂಕೇತಿಕ ಅಕ್ಷರಗಳನ್ನು ತ್ಯಜಿಸಿದರು; ಅದರ ಪರಿಣಾಮವಾಗಿ ಅಲ್ಲಿಯ ಮುದ್ರಿತ ಕೃತಿಗಳ–ವಿಶೇಷತಃ ಗ್ರೀಕ್ ಭಾಷೆಯ ಗ್ರಂಥಗಳ ಚೆಲ್ವಿಕೆ ಹೆಚ್ಚಿದ್ದುದು ಮಾತ್ರವಲ್ಲ, ಅವು ಸುವೇದ್ಯವಾದುವು ಎಂಬ ಸಮರ್ಥನೆಯನ್ನು ನೀಡಿದ್ದಾರೆ. ಅದಕ್ಕೂ ಮುಂದೆ ಸಾಗಿ ಆತನು ಸಂಸ್ಕೃತದಲ್ಲಿ mmÉ (ಪ್ಪ) mrÉ (ಪ್ಯ) zqÉ (ಶ್ಮ) ಮುಂತಾದ ಒತ್ತಕ್ಷರಗಳು ಒಂದೇ ಸಾಲಿನಲ್ಲಿರುವುದನ್ನು ಕನ್ನಡಿಗರ ಗಮನಕ್ಕೆ ತಂದಿದ್ದಾನೆ. ತಮಿಳು, ಗುಜರಾಥೀ ಭಾಷೆಗಳು ಅದಾಗಲೇ ಒತ್ತಕ್ಷರಗಳನ್ನು ಕಡಿಮೆಗೊಳಿಸಿದ್ದು, ಅವುಗಳಲ್ಲಿ ಗುಜರಾತಿಗಳಂತೂ ಅಚ್ಚಿನ ಯಂತ್ರಕ್ಕೊಳಗಾಗುವ ಮುನ್ನವೆ ಹೊಸ ಹಾದಿಯನ್ನು ಹಿಡಿದಿದ್ದರು. ಮುದ್ರಣ ಮಿತವ್ಯಯವು ವಿಶೇಷವಾಗಿ ಲಭಿಸುವ ಈ ಸುಸಂದರ್ಭವನ್ನು ಕನ್ನಡಿಗರು ಕಳೆದುಕೊಳ್ಳುವುದು ಸರಿಯೇ? ಎಂದು ಮಾರ್ಮಿಕವಾಗಿ ಪ್ರಶ್ನಿಸಿದ್ದಾರೆ.

ಇನ್ನು 'ಓದುವುದಕ್ಕೆ ತೊಂದರೆ' ಎಂಬ ಎರಡನೆಯ ಆಕ್ಷೇಪಣೆಗೆ ಉತ್ತರ ಕೊಡುತ್ತ, ಸ್ವಲ್ಪ ಅಭ್ಯಾಸವಾದರೆ ಸಾಕು ತಂತಾನೆ ಸರಾಗವಾಗಿ ಓದಬಹುದು ಮತ್ತು ಹೊಸದಾಗಿ ಕನ್ನಡ ಕಲಿಯಲಾರಂಭಿಸಿದ ವಿದೇಶೀಯರಿಗಾಗಲೀ ಕನ್ನಡ ಮಕ್ಕಳಿಗಾಗಲೀ ಎಷ್ಟೊಂದು ಹಗುರಾಗುವುದು! – ಎಂಬುದಾಗಿ ಮೊವ್‌ಗ್ಲಿಂಗ್ ಸಮರ್ಥನೆ ನೀಡಿದ್ದಾರೆ.

ಲಿಪಿಯ ಸುಧಾರಣೆಗಾಗಿ ಮದ್ರಾಸ ಸರಕಾರದ ಅಧಿಕೃತ ಸಮ್ಮತಿಯನ್ನೂ ಪಡೆಯಲಾಗಿದ್ದಿತು. ಆದರೆ ಜನಕ್ಕೆ ಸ್ವೀಕೃತವಾಗಲಿಲ್ಲವೆಂಬ ಕಾರಣದಿಂದ ಬಿಟ್ಟುಕೊಡಲಾಯಿತು. ಇದೇ ಲಿಪಿಸುಧಾರಣೆಯನ್ನು ೮೦ ವರ್ಷಗಳ ಅನಂತರ ಬಿ.ಎಂ.ಶ್ರೀ., ಮಧ್ವರಾವ ಕಬ್ಬೂರ ಮುಂತಾದವರು ಅನುಷ್ಠಾನದಲ್ಲಿ ತರಬಯಸಿದಾಗ ಕೂಡಾ ಅದು ಯಶಸ್ವಿಯಾಗಲಿಲ್ಲ.

ಮಂಗಳೂರಲ್ಲಿಯ ಇನ್ನೊಂದು ಪ್ರಸಿದ್ಧ ಕ್ರೈಸ್ತ ಮುದ್ರಣಾಲಯವೆಂದರೆ ಕೊಡಿಯಾಲಬೈಲ ಪ್ರೆಸ್. ಇದು ರೋಮನ್ ಕೆಥಲಿಕರಿಗೆ ಸೇರಿದುದು. ಬಾಸೆಲ್ ಮಿಶನ್ನಿನ (ಪ್ರೊಟೆಸ್ಟಂಟ್) ಅನುಯಾಯಿಗಳ ಮಾತೃಭಾಷೆ ತುಳು/ಕನ್ನಡವಾಗಿದ್ದರೆ ಇವರದು ಹೆಚ್ಚಾಗಿ ಕೊಂಕಣಿ. ಈ ಪಂಥದ 'ಸೊಸೈಟಿ ಆಫ್ ಜೀಸಸ್' ಸಂಘದವರು ಮಂಗಳೂರಲ್ಲಿ ಕ್ರಿ. ಶ. ೧೮೭೮ರಲ್ಲಿ ಬಿಡಾರ ಹೂಡಿದಾಗ ಅವರಿಗೆ ತಮ್ಮ ಪ್ರವಚನ ಪುಸ್ತಕ, ಪತ್ರಗಳಿಗಾಗಿ ಮುದ್ರಾಯಂತ್ರದ ಅಗತ್ಯ ಬಿದ್ದಿತು. ಸ್ಥಳೀಕವಾದ ಬಾಸೆಲ್ ಮಿಶನ್ ಪ್ರೆಸ್ಸಿನ ದರಗಳು ಇವರಿಗೆ ಹೆಚ್ಚೆಂದು ಕಂಡುಬಂದುವಲ್ಲದೆ ಕೆಲವೊಂದು ಕೆಥಲಿಕ್ ಮತೀಯ ವಿಚಾರಗಳನ್ನು ಮುದ್ರಿಸಲು ಬಾಸೆಲ್‌ದವರು ನಿರಾಕರಿಸಿದರೆಂದೂ ತಿಳಿಯುತ್ತದೆ. ಇದರ ನಿಮಿತ್ತವಾಗಿ ಎಸ್.ಜೆ. ಸಂಘದವರು ಪ್ರತ್ಯೇಕವಾದ ಮುದ್ರಣಾಲಯವನ್ನು ಸ್ಥಾಪಿಸಲುದ್ಯುಕ್ತರಾದರು. ಕ್ರಿ.ಶ. ೧೮೮೨ರಲ್ಲಿ ಪ್ಯಾರಿಸ್‌ನಿಂದ

ಒಂದು ಕೈಯಚ್ಚಿನ ಯಂತ್ರವನ್ನೂ ರೋಮನ್ ಲಿಪಿಗಳನ್ನೂ ತರಿಸಿದರು. ಮರುವರ್ಷ ಬೆಂಗಳೂರಿನಿಂದ ಕನ್ನಡದ ಮೊಳೆಗಳೂ ಬಂದುವು. ಇದರ ಮೇಲ್ವಿಚಾರಕರಾಗಿ ಪರಿಶ್ರಮಿಸಿದ ದೊನದಾ ಮತ್ತು ಸೋರ್ಸ ಈ ಅಚ್ಚುಕೂಟವನ್ನು ಅಭಿವೃದ್ಧಿಗೊಳಿಸಿದರು. ಮುಂಬಯಿ ಸರಕಾರದ ಕೆಲವು ಕ್ರಮಿಕ ಪುಸ್ತಕಗಳೂ ಮದ್ರಾಸ ಪ್ರಾಂತದ ಕೋರ್ಟು ಕಚೇರಿಯ ಕಾಗದ ಪತ್ರಗಳೂ ಈ ಪ್ರೆಸ್ಸಿನಲ್ಲಿ ದೊಡ್ಡ ಪ್ರಮಾಣದಲ್ಲಿ ಅಚ್ಚಾದದ್ದಿದೆ. ಕೊಡಿಯಾಲಬೈಲ ಮುದ್ರಣಾಲಯದ ಒಂದು ಪ್ರಾಶಸ್ತ್ಯವೆಂದರೆ ತಮ್ಮ ಕೊಂಕಣಿ ಭಾಷೆಯ ಪುಸ್ತಕಗಳನ್ನು ಕನ್ನಡ ಲಿಪಿಯಲ್ಲಿ ಮುದ್ರಿಸತೊಡಗಿದುದು.

ಲಿಪಿಸೌಷ್ಟವದ ದೃಷ್ಟಿಯಿಂದ ಇಲ್ಲಿಯ ಮೊಳೆಗಳು ಬಾಸೆಲ್ ಮಿಶನ್ನಿಗೆ ಸರಿಮಿಗಿಲೆನಿಸಿವೆ. ಕ್ರಿ.ಶ. ೧೮೯೦ರ ಸುಮಾರಿಗೆ ತಮ್ಮದೇ ಆದ ಮೊಳೆ ತಯಾರಿಕೆಯ ವಿಭಾಗವನ್ನು ಆರಂಭಿಸಿದಾಗ, ಸುಪ್ರಸಿದ್ಧ ಅಕ್ಷರಶಿಲ್ಪಿಯೆನಿಸಿದ್ದ ಅತ್ತಾವರ ಅನಂತಾಚಾರಿಯು ಕೆಲವು ವರ್ಷ ಕೆಲಸ ಮಾಡಿ, ವಿವಿಧ ಗಾತ್ರಗಳ ಹಾಗೂ ಮೇಲ್ಮಟ್ಟದ ಮೊಳೆಗಳನ್ನು ತಯಾರಿಸಿಕೊಟ್ಟನಲ್ಲದೆ, ಇತರರನ್ನು ಈ ವಿದ್ಯೆಯಲ್ಲಿ ತರಬೇತುಗೊಳಿಸಿದನು. ಆ ಮುಂದೆ ಮುಂಬಯಿಗೆ ಹೋಗಿ ಅಲ್ಲಿಯ ನಿರ್ಣಯಸಾಗರ ಪ್ರೆಸ್ಸಿನಲ್ಲಿ ಕನ್ನಡ ಮೊಳೆಗಳನ್ನೂ ಗುಜರಾಥ ಟೈಪ್ ಫೌಂಡ್ರಿಯವರಿಗೆ ದೇವನಾಗರೀ ಲಿಪಿಯ ಮೊಳೆಗಳನ್ನೂ ವಿವಿಧ ಗಾತ್ರಗಳಲ್ಲಿ ಸಿದ್ಧಪಡಿಸಿದನು.[೬] 'ಅನಂತ ಶೇಡೆಡ್' ಎಂಬುದಾಗಿ ಇವನ ಹೆಸರನ್ನೇ ಹೊಂದುವಷ್ಟು ಆ ದೇವನಾಗರೀ ಮೊಳೆಗಳು ವೈಶಿಷ್ಟ್ಯಪೂರ್ಣವಾಗಿದ್ದುವು. ತನ್ನ ನಿವೃತ್ತಿ ಕಾಲದಲ್ಲಿ, ಎಂದರೆ ಇಪ್ಪತ್ತನೆಯ ಶತಮಾನದ ಆರಂಭಕ್ಕೆ ಮಂಗಳೂರಿಗೆ ಮರಳಿ ಬಂದ ಮೇಲೆಯೂ ಅವನು ಸ್ಥಳೀಯ ಪ್ರೆಸ್ಸುಗಳಿಗೂ ಧಾರವಾಡದ ಒಂದು ಮುದ್ರಣಾಲಯಕ್ಕೂ ಹೊಸ ಹೊಸ ಮೊಳೆಗಳನ್ನು ಸಿದ್ಧಗೊಳಿಸಿಕೊಟ್ಟನೆಂದು ತಿಳಿಯುತ್ತದೆ.[೭] ಇಂದು ಎಲ್ಲೆಡೆ ಕಾಣುವ ಕನ್ನಡ ಮೊಳೆಗಳಿಗೆ ಅನಂತಾಚಾರಿಯ ಕೈವಾಡವೇ ಹಿನ್ನೆಲೆಯಾಗಿದೆಯೆಂದು ಹೇಳುವುದುಂಟು. ಮುದ್ರಣ ಕಾರ್ಯದಲ್ಲಿ ಮಂಗಳೂರು ಅಖಿಲ ಕರ್ನಾಟಕದಲ್ಲಿಯೆ ಉಚ್ಚತಮ ಸ್ಥಾನವನ್ನು ಹೊಂದುವಲ್ಲಿ ಅನಂತಾಚಾರಿಯ ಕಾರ್ಯಭಾಗವೂ ಇದೆ.

### ೨.೧೨ ಸರಕಾರೀ ಅಚ್ಚುಕೂಟಗಳು

ಕರ್ನಾಟಕದಲ್ಲಿಯ ಮದ್ರಾಸ, ಮುಂಬಯಿ ಮತ್ತು ಮೈಸೂರು ಈ ಮೂರು ಆಧಿಪತ್ಯಗಳಲ್ಲಿ ಆಡಳಿತಕ್ಕಾಗಿಯೂ, ಶೈಕ್ಷಣಿಕ ಕಾರ್ಯಕ್ಕಾಗಿಯೂ ಮುದ್ರಣವು ಅನಿವಾರ್ಯವೇ ಆಗಿದ್ದಿತು. ಅದಕ್ಕೂ ಹಿಂದೆ ಮುದ್ರಣ ಪರಂಪರೆ ಇರಲಿಲ್ಲವಾದ್ದರಿಂದ ಆ ಸರಕಾರಗಳು ಮೊಳೆಗಳ ತಯಾರಿಕೆಯಿಂದ ಮೊದಲ್ಗೊಂಡು ಈ ದಿಶೆಯಲ್ಲಿ ಪ್ರಯತ್ನಿಸಬೇಕಾಗಿ ಬಂದಿತು. ಮದ್ರಾಸ ಸರಕಾರವೇ ಮೊದಲು ಮುಂದಡಿ ಇಟ್ಟಿತು.

ಅಧಿಕಾರಿಗಳನ್ನು ತರಬೇತುಗೊಳಿಸುವುದಕ್ಕಾಗಿ ಇದ್ದ ಫೋರ್ಟ ಸೇಂಟ್ ಜಾರ್ಜ್ ಕಾಲೇಜಿನಲ್ಲಿ ಕನ್ನಡ ಮುದ್ರಣವು ನಡೆದ ಬಗೆಯನ್ನು ಈ ಹಿಂದೆ (೨೧೧) ವಿವರಿಸಲಾಗಿದೆ. ಆಮೇಲೆ ಸ್ಥಾಪಿತವಾದ ಗವರ್ನಮೆಂಟ್ ಗಜೆಟ್ ಪ್ರೆಸ್ಸಿನಲ್ಲಿ ಒಂದೆರಡು ಕನ್ನಡ ಪುಸ್ತಕಗಳು ಅಚ್ಚಾಗಿವೆ. ಮುಂದಾದರೂ ಸರಕಾರೀ ವ್ಯವಹಾರಕ್ಕೆ ಅಗತ್ಯವಿರುವ ಮಟ್ಟಿಗೆ ಮದ್ರಾಸದ ಸರಕಾರೀ ಅಚ್ಚುಕೂಟವು ಕನ್ನಡದ ಕೆಲಸವನ್ನು ಕೈಗೊಂಡಿತು. ಕ್ರಮಿಕ ಪುಸ್ತಕಗಳು ಮತ್ತು ಕಾವ್ಯ–ಶಾಸ್ತ್ರ ಗ್ರಂಥಗಳು ಇವನ್ನು ಮಂಗಳೂರಲ್ಲಿಯೇ ಹೆಚ್ಚಾಗಿ ಮುದ್ರಿಸಲಾಗುತ್ತಿತ್ತು.

ಇತ್ತ ಮುಂಬಯಿ ಪ್ರಾಂತವು ಕ್ರಿ.ಶ. ೧೮೨೪ರಷ್ಟು ಹಿಂದೆಯೇ ಒಂದು ಕಲ್ಲಚ್ಚಿನ ಪ್ರೆಸ್ಸನ್ನು ಆರಂಭಿಸಿತ್ತು. ಅದಕ್ಕೆ ಬೇಕಾಗುವ ಕಲ್ಲಿನ ಹಲಗೆಗಳನ್ನು ಕರ್ನೂಲಿನಿಂದ ತರಿಸುತ್ತಿದ್ದರು. ಇಲ್ಲಿ ಅಚ್ಚಾದ, ಮತ್ತು ನಮಗೆ ದೊರೆತ ಮೊದಲ ಕನ್ನಡ ಪುಸ್ತಕವೆಂದರೆ 'ಸಂಣ್ಣ ಹಿತೋಪದೇಶ' (ಕ್ರಿ.ಶ. ೧೮೩೬) ಎಂಬುದು. ತತ್ಪೂರ್ವದಲ್ಲಿ ಬೇಕಾಗಿದ್ದ ಮೂರು ಪ್ರಾಥಮಿಕ ಪುಸ್ತಕಗಳನ್ನು ಬಳ್ಳಾರಿಯ ಮಿಶನ್ ಪ್ರೆಸ್ಸಿನಲ್ಲಿ ಮುದ್ರಿಸಿ ತರಿಸಿಕೊಂಡಿದ್ದರು.

ಸರಕಾರೀ ಅಂಗಸಂಸ್ಥೆಯಾಗಿದ್ದ ಬಾಂಬೆ ಎಜ್ಯುಕೇಶನ್ ಸೊಸೈಟಿಯವರು ಬಾಯಖಳಾ ಉಪನಗರದಲ್ಲಿ ಒಂದು ಪ್ರೆಸ್ ನಡೆಸುತ್ತಿದ್ದರು (ಕ್ರಿ.ಶ. ೧೮೪೮). ಇಲ್ಲಿ ಮರಾಠೀ, ಗುಜರಾಥೀ ಮುಂತಾದ ಪುಸ್ತಕಗಳ ಜೊತೆಗೆ ಕನ್ನಡದಲ್ಲಿ ಕೆಲವು ಪುಸ್ತಕಗಳು ಮುದ್ರಣವಾಗಿವೆ. ವೆಂಕಟ ರಂಗೋ ಕಟ್ಟಿಯವರ ಅರೇಬಿಯನ್ ನೈಟ್ಸ್‌ದ ಅನುವಾದ ಪುಸ್ತಕ (ಕ್ರಿ.ಶ. ೧೮೬೩), ಶಾಕುಂತಲದ ಮೊಟ್ಟ ಮೊದಲಿನ ಕನ್ನಡಾನುವಾದವೆನಿಸಿದ ಚುರಮುರಿ ಶೇಷಗಿರಿರಾಯರ ನಾಟಕ (ಕ್ರಿ.ಶ. ೧೮೬೯) — ಇವು ಆ ಪ್ರೆಸ್ಸಿನಲ್ಲಿ ಅಚ್ಚಾದ ಮಹತ್ವದ ಪುಸ್ತಕಗಳಾಗಿವೆ.

ಕ್ರಿ.ಶ. ೧೮೫೭ರಲ್ಲಿ ಮುಂಬಯಿ, ಮದ್ರಾಸ ಎರಡೂ ಊರುಗಳಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿತವಾದುವಷ್ಟೆ. ಪ್ರಶ್ನೆಪತ್ರಿಕೆ ಮುಂತಾದ ಕಾರ್ಯಗಳಿಗಾಗಿ ತಮ್ಮದೇ ಆದ ಮುದ್ರಣಾಲಯವನ್ನು ಅಣಿಗೊಳಿಸಿಕೊಂಡಾಗ, ಕನ್ನಡಕ್ಕೂ ತುಸು ಸ್ಥಾನ ದೊರಕಿತು.

ಆದರೆ ಇವೆರಡೂ ಪ್ರದೇಶಗಳ ಸರಕಾರದಲ್ಲಿಯೇ ಆಗಲಿ, ವಿಶ್ವವಿದ್ಯಾಲಯಗಳಲ್ಲಿಯೇ ಆಗಲಿ, ಕನ್ನಡಕ್ಕೆ ಪ್ರಾಮುಖ್ಯ ಇರಲೇ ಇಲ್ಲ. ಇತರ ಭಾಷೆಗಳದೇ ಮೇಲುಗೈ ಇದ್ದಾಗ ಕನ್ನಡ ಪುಸ್ತಕ ಪ್ರಕಟನೆಯು ಅನಿವಾರ್ಯವೆಂಬಂತೆ ಹಿಂಬಾಲಿಸಿ ಬಂದಿತು. ಮುಂಬಯಿ ಸರಕಾರದವರು, ದಶಸಹಸ್ರ ಸಂಖ್ಯೆಯಲ್ಲಿ ಕನ್ನಡ ಕ್ರಮಿಕ ಪುಸ್ತಕಗಳ ಪ್ರಕಟನೆಯ ಸಂದರ್ಭ ಬಿದ್ದಾಗ, ತಮ್ಮ ಅಚ್ಚುಕೂಟವನ್ನು ವಿಸ್ತರಿಸಲೊಲ್ಲದೆ ಮಂಗಳೂರು, ಧಾರವಾಡ–ಸ್ವಲ್ಪ ಮಟ್ಟಿಗೆ ಬೆಂಗಳೂರುಗಳತ್ತ ಹೊರಳಿದರು.

ಇತ್ತ ಬೆಂಗಳೂರು ನಗರದಲ್ಲಿ ಓರ್ವ 'ಮೆಜಿಸ್ಟ್ರೇಟ'ನು ಸರಕಾರದ ವತಿಯಿಂದ ಕ್ರಿ.ಶ. ೧೮೪೨–೪೩ರಲ್ಲಿ ಕಲ್ಲಚ್ಚಿನ ಮುದ್ರಣವನ್ನು ಆರಂಭಿಸಿದ್ದುದು ಒಂದು ಮಹತ್ವದ

ಹೆಜ್ಜೆಯಾಗಿದೆ. ಮುಂದಿನ ಎರಡು ವರ್ಷಗಳಲ್ಲಿ ಪ್ರಕಟವಾದ ಕೆಲವು ಗ್ರಂಥಗಳ ಹೆಸರುಗಳು 'ಮಂಗಳೂರು ಸಮಾಚಾರ'ವೆಂಬ ಕನ್ನಡದ ಪ್ರಪ್ರಥಮ ಪತ್ರಿಕೆಯಲ್ಲಿ ಉಲ್ಲೇಖವಾಗಿರುವುದರಿಂದ (ಪುಸ್ತಕ ೧. ಸಂ. ೫. ಪುಟ ೩೫, (ಕ್ರಿ.ಶ. ೧೮೪೩) ಆ ಅಚ್ಚುಕೂಟದಿಂದ ಹೊರಬಂದ ಪುಸ್ತಕಗಳ ಸ್ವರೂಪವನ್ನು ಅರಿಯಬಹುದಾಗಿದೆ. ಆ ಉಲ್ಲೇಖವನ್ನು ಅದರಲ್ಲಿದ್ದಂತೆಯೇ ಕೊಡುತ್ತಿದ್ದೇವೆ:

"'ಬೆಂಗಳೂರು ಸದರು ಮುನಶಿಪರು ಹೋದ ವರ್ಷದಲ್ಲಿ ವೊಂದು ಮೊಳೆ (sic) ಛಾಪಖಾನೆ ಯಾನೆ ವರ್ಣಯಂತ್ರಯಿಟ್ಟು ಅದರಲ್ಲಿ ಕೆಲವು ಕನಡು ಪುಸ್ತಕಗಳಂನು ಸರ್ವರ ವುಪಕಾರಕ್ಕಾಗಿ ಛಾಪಿಸಲಿಕ್ಕೆ ಆರಂಭಮಾಡಿದ್ದಾರೆ. ಯಿದು ಬಹಳ ವುತ್ತಮವಾದ ಕೆಲಸ. ಯಾತಕ್ಕೆಂದರೆ ಹಿಂದು ಜನರಲ್ಲಿ ಮೊಬ್ಬನ ಹತ್ತರ ಮೊಂದು ವಿಧದ ಪುಸ್ತಕಯಿದ್ದರೆ ಮತ್ತೊಬ್ಬನಲ್ಲಿ ಯಿಂನೊಂದು ಪ್ರಕಾರದ ಪುಸ್ತಕ ಯಿರುತ್ತದೆ. ಹೀಗಾಗಿ ಬೇಕಾದ ಪುಸ್ತಕಗಳು ವೊಂದೆ ಕಡೆಯಲ್ಲಿ ಯಿಲ್ಲದೆ ಅವುಗಳು ಸತ್ಯವೊ ಸುಳ್ಳೊಯೆಂಬುದು ವಿಚಾರಿಸಲಿಕ್ಕೆ ಅನುಕೂಲವಿಲ್ಲವಾಗಿದೆ. ಯಿದೇ ಮೇರೆಗೆ ಯಾರಾದರೂ ಛಾಪಖಾನೆ ಯಿಟ್ಟು ಹಿಂದು ಶಾಸ್ತ್ರವಂನು ಛಾಪಿಸಿದರೆ ಬೇಕಾದ ಪುಸ್ತಕಗಳು ಸುಲಭವಾಗಿ ಯಲ್ಲರ ಕೈಯಲೂ ಸೇರಬಹುದಾಗಿರುತ್ತದೆ. ಪೂರ್ವದಲ್ಲಿದ್ದ ಪುರಂದರದಾಸ ಮುಂತಾದವರು ಮಾಡಿದ ಪದಗಳೂ ಯಾ ಅಚ್ಚುಕನಡ ಕಾವ್ಯಗಳೂ ದಿವಸ ಹೋದ್ದಷ್ಟು ಕಡಿಮೆಯಾಗಿ ಕಡೆಗೆ ಪೂರ್ಣವಾಗಿ ಕಾಣದೆ ಹೋದಾವು. ಆದಕಾರಣ ಅವರು ಯಿಂನು ಮುಂದೆ ವೊಳ್ಳೆ ವೊಳ್ಳೆ ಪುಸ್ತಕಗಳು ಛಾಪಸ್ಯಾರು ಯೆಂದು ತಿಳಿದುಕೊಳ್ಳುತ್ತೇವೆ. ಮತ್ತು ಯೀವರೆಗೆ ನಂಮ್ಮ ಹತ್ತರ ಬಂದ ಪುಸ್ತಕಗಳ ಹೆಸರುಗಳನ್ನು ಯಿ ಕೆಳಗೆ ಬರದಿರುತ್ತದೆ.

೧. ಜಗದುತ್ಪತ್ತಿ ಸ್ಥಿತಿಲಯಗಳ ವಿವರಣ. ಮೈಸೂರು ಸಂಸ್ಥಾನದ ವಿವರವು.
೨. ಅನುಭವಾಮೃತವೆಂಬ ಗ್ರಂಥವು.
೩. ಬಾಲಶೀಕ್ಷೆ ಅಂಶಲೆಖ್ಖ ಸಂಕಲಿತ ನಕಲಿತ ಗುಣಕ ಭಾಗಹರಣ ಸಹಾ.
೪. ಠಗರೆಂಬುವ ಫಾಶೀಕಾರರ ಚರಿತ್ರೆಯು.
೫. ವಿದುರ ನೀತಿಯೆಂಬುವ ಗ್ರಂಥವು ಟೀಕು ಸಹಾ.
೬. ಪಾಠಶಾಲೆಯಲ್ಲಿ ವೋದುವ ವಿದ್ಯಾರ್ಥಿಗಳ ವುಪಯೋಗದ ಬಾಲಬೋಧೆ.
೭. ರಾಜಸೇವೆಯ ಲಕ್ಷಣವು.
೮. ಆಸ್ಥಾನ ಜ್ಯೋತಿಯಂಬ ಪದ್ಯಗಳು."

ಹೀಗೆ ಈ ಅಚ್ಚುಕೂಟದಲ್ಲಿ ಶಾಲೋಪಯೋಗಿ, ಮತ್ತಿತರ ಸಾಮಾನ್ಯ ಸ್ವರೂಪದ ಪುಸ್ತಕಗಳು ಮುದ್ರಿತವಾದದ್ದು ಕಂಡುಬರುವುದು. 'ವರ್ಣಯಂತ್ರ' ಎಂಬ ಹೆಸರೇಕೆ? ವರ್ಣ–ಎಂದರೆ ಅಕ್ಷರ. ಈ ಅರ್ಥದಲ್ಲಿ ಹಾಗೆ ಕರೆಯುತ್ತಿದ್ದಿರಬೇಕು. ಬಣ್ಣ ಅಥವಾ ಚಿತ್ರದ್ದಲ್ಲ.

ಮೈಸೂರು ಸಂಸ್ಥಾನದ ಸರಕಾರೀ ಮುದ್ರಣಾಲಯವು ಕ್ರಿ.ಶ. ೧೮೪೦ರ ಸುಮಾರಿಗೆ ಜಾನ್ ಗ್ಯಾರೆಟ್‌ನ ನೇತೃತ್ವದಲ್ಲಿ ಅಧಿಕೃತವಾಗಿ ಅಸ್ತಿತ್ವದಲ್ಲಿ ಬಂದಿತು. ಆಮೇಲೆ ಅದನ್ನು ಕನ್ನಡ ಶಾಸನಗಳ, ಹಳೆಯ ಕಾವ್ಯಗಳ ಮುದ್ರಣಕ್ಕೂ ಅಣಿಗೊಳಿಸಿದುದು ಒಂದು ವಿಶೇಷ. ಸರಕಾರೀ ಕೆಲಸವಲ್ಲದೆ ಹೊರಗಿನವರ ಪುಸ್ತಕಗಳೂ ಇಲ್ಲಿ ಅಚ್ಚಾಗಿವೆ. 'ಹಿತಬೋಧಿನೀ' ಎಂಬ ಸುಪ್ರಸಿದ್ಧ ಪತ್ರಿಕೆಯು ಸರಕಾರೀ ಅಚ್ಚುಕೂಟದಿಂದಲೇ ಹೊರಬಂದಿತು. ಕ್ರಿ.ಶ. ೧೮೯೦ರ ಸುಮಾರಿಗೆ ಮೈಸೂರು ನಗರದಲ್ಲಿ ಈ ಸರಕಾರೀ ಮುದ್ರಣಾಲಯದ ಶಾಖೆಯನ್ನು ತೆರೆಯಲಾಯಿತು.

ಕ್ರಿ.ಶ. ೧೮೫೦ ಮತ್ತು ೧೮೬೦ರ ದಶಕಗಳಲ್ಲಿ ಮುಮ್ಮಡಿ ಕೃಷ್ಣರಾಜರ ಹೆಸರಿನಲ್ಲಿ ಕೆಲವು ಕೃತಿಗಳು ಅಚ್ಚಾಗಿವೆ. ಅವುಗಳಲ್ಲಿ 'ಸಂಖ್ಯಾರತ್ನ ಕೋಶ' ಮತ್ತು ಚತುರಂಗಸಾರಸರ್ವಸ್ವವೆಂಬ ಚದುರಂಗದಾಟದ ಮರಾಠೀ ಪುಸ್ತಕವು ಕ್ರಿ.ಶ. ೧೮೫೨ರಲ್ಲಿ ಅಚ್ಚಾಯಿತೆಂದು ಆ ಪುಸ್ತಕದಿಂದಲೇ ತಿಳಿದು ಬರುತ್ತದೆ.[೮]

> "ಶ್ರೀಕೃಷ್ಣಮಹಾರಾಜ ಕಂಠೀರವ ಯಾಣೇ ಶಾಲಿವಾಹನ ಶಕ ವರ್ಷೇ– ೧೭೬೮ ನಂತರ ವರ್ತಮಾನ ಪರಾಭವ ನಾಮ ಸಂವತ್ಸರ ಕಾರ್ತಿಕ ಶುದ್ಧ ೧೦ ಗುರುವಾರೀ ಲೋಕೋಪಕಾರಾರ್ಥ ರಚಿಲೇಲೆ ೩೨೪ ಘರಾಚೇ ಶ್ರೀ ಚಾಮುಂಡಾ ಪ್ರಶ್ನಚಕ್ರಹಿ ವ ಯಾಚಾ ಅಶ್ವಗತಿ ರೀತೀನೇ ಅಂಕೋತ್ಥಾನ ಶ್ಲೋಕ ಹೀ ಯಾಚಾ ಪ್ರಸ್ತಾರ ಕ್ರಮ ಹೀ ಆಣಿ ಯಾ ಚಕ್ರಾತ ಪ್ರಶ್ನ ಪಹಾಯಾಚಾ ಕ್ರಮ ಸಹಿತ ಶಿಲಾಯಂತ್ರಾನೇ ಪ್ರಕಾಶ ಕೇಲೇ ಆಹೇತ.

"ಶ್ರೀ ಕೃಷ್ಣರಾಜ ಮಹಾರಾಜ ಕಂಠೀರವ ಯಾಣಿ ರಚಿಲೇಲ್ಯಾ ಚತುರಂಗ ಸಾರಸರ್ವಸ್ವ ಗ್ರಂಥ ಜೋ ತ್ಯಾಂತ ಪ್ರತಿಪಾದಿಲೇಲ್ಯಾ ೧೪೪ ಘರಾಚಾ ಆಣಿ ೬೪ ಸಘರಾಚಾ ಹೀ ಬುದ್ಧಿಬಳ ಪಟಾತ ಅನೇಕ ಪ್ರಕಾರೇ ಅಶ್ವಗತಿ ಚಾಲವಿಲೀ ತ್ಯಾತ ಆಶ್ಚರ್ಯಕರ ಅಸಾಯಚೇ ಕಿತ್ಯೇಕ ಮುಖ್ಯ ಚಕ್ರೇ ಶಾಲಿವಾಹನ ಶಕೆ ೧೭೭೪ ನಂತರ ಪರೀಭಾವೀ ಸಂವತ್ಸರ ಕಾರ್ತಿಕ ಶುದ್ಧ ೧೫ ಶುಕ್ರವಾರಿ ಆಪಲ್ಯಾ ಸಂಸ್ಥಾನಚ್ಯಾ ಛಾಪಖಾನ್ಯಾತ ಛಾಪವಿಲೀ ಆಹೇತ."

ಕ್ರಿ.ಶ. ೧೮೬೦ರ ಸುಮಾರಿಗೆ ಮುದ್ರಿತವಾದ ಮುಮ್ಮಡಿಯವರ ಇನ್ನೊಂದು ಕೃತಿ 'ಸೌಗಂಧಿಕಾ ಪರಿಣಯ'ವು ಅರ್ಧ ಫೂಲ್‌ಸ್ಕೇಪ್ ಆಕಾರದಲ್ಲಿ ೧೨೨೦ ಪುಟಗಳನ್ನು ಒಳಗೊಂಡಿದೆ. ಚಿತ್ರಗಳಿಂದ ನಿಬಿಡವಾಗಿದೆ. ಮುದ್ರಣವು ಪ್ರಬುದ್ಧವಾಗಿದ್ದುದರ ನಿದರ್ಶನವಿದು.

'ಶ್ರೀಮನ್ಮಹಾರಾಜರವರ ವಂಶಾವಳಿ'ಯ (Annals of the Mysore Royal Family) ೨ನೆಯ ಭಾಗದಲ್ಲಿ ಒಂದೆಡೆ–

"ಸನ್ ೧೮೪೧–೪೨ನೇ ಇಸವಿಯಲ್ಲಿ ಸರ್ಕಾರಿ ಕೆಲಸಗಳಿಗೆ ಸೌಕರ್ಯವುಂಟಾಗುವಂತೆ ಬೆಂಗಳೂರಲ್ಲಿ ಒಂದು ಅಚ್ಚು ಕಾರ್ಖಾನೆಯು ಸ್ಥಾಪಿತವಾಯಿತು." (ಪು. ೧೧೦)

ಎಂಬುದಾಗಿ ಇದ್ದರೆ, ಇನ್ನೊಂದೆಡೆ, ಮಹಾರಾಜರು ನಿರ್ಮಿಸಿದ ಗ್ರಂಥಗಳ ಯಾದಿಯನ್ನು ಕೊಟ್ಟು,

"ಮೇಲೆ ಬರೆದಿರುವ ಗ್ರಂಥಗಳನ್ನೂ ಭಗವದ್ಗೀತೆ ಮೊದಲಾದ ಅನೇಕ ಪ್ರಾಚೀನ ಗ್ರಂಥಗಳನ್ನೂ ಆಯಾ ದೇವತಾ ಚಿತ್ರಗಳಿಂದ ಒಡಗೂಡಿರುವಂತೆ ಅಂಬಾವಿಲಾಸದ ಮುದ್ರಾಕ್ಷರ ಶಾಲಾ ಶಿಲಾಯಂತ್ರದಲ್ಲಿ ಅಚ್ಚು ಹಾಕಿಸಿ ಸಂಮುಖದ ವಿದ್ವಾಂಸರು ದೇಶಾಂತರಗಳಲ್ಲಿರುವ ವಿದ್ವಾಂಸರು ಅಧಿಕಾರಸ್ಥರು ಮುಂತಾದವರನೇಕರಿಗೆ ಉಚಿತವಾಗಿ ಕೊಟ್ಟು ಸಂತೋಷಪಡಿಸಿದರು" – ಎಂಬುದಾಗಿ ಕಾಣಿಸಲಾಗಿದೆ (ಪು.೧೭೭). ಇಲ್ಲಿ ಬಂದಿರುವ 'ಶಿಲಾಯಂತ್ರ....' ಎಂಬುದು ಕಲ್ಲಚ್ಚಿನ ಮುದ್ರಣವನ್ನು ಸೂಚಿಸುತ್ತದೆ.

## ೨೧೩. ವೈಯಕ್ತಿಕ ಮುದ್ರಣ ಪ್ರಯತ್ನಗಳು

ಮಿಶನರಿ ವಲಯಗಳ ಮತ್ತು ಸರಕಾರೀ ಮುದ್ರಣ ಚಟುವಟಿಕೆಗಳನ್ನು ಕಂಡು ಖಾಸಗೀ ವ್ಯಕ್ತಿಗಳಿಗೂ ಅದರಲ್ಲಿ ಆಸಕ್ತಿ ಹುಟ್ಟಿತು. ಇದನ್ನು ಲಾಭದಾಯಕ ಉದ್ಯಮವೆನ್ನುವಂತೆ ನಡೆಯಿಸುವುದು ಸಾಧ್ಯ ಎಂಬುದಾಗಿ ತೋರಿತು. ಇಂಥ ಮನೋಧರ್ಮವು ಮೊದಲಿಗೆ ವ್ಯಕ್ತವಾದುದು ಮುಂಬಯಿ ಕರ್ನಾಟಕದವರಲ್ಲಿ. ಆ ವೇಳೆಗೆ ಅನೇಕ ಹಳ್ಳಿಗಳಲ್ಲಿಯೂ ಪ್ರಾಥಮಿಕ ಶಾಲೆಗಳು ವ್ಯವಸ್ಥಿತವಾಗಿ ನೆಲೆಗೊಂಡಿದ್ದವು. ಸಾಕ್ಷರತೆಯು ಕ್ರಮೇಣ ಹೆಚ್ಚುತ್ತ ನಡೆದಿದ್ದಿತು. ಸರಕಾರವು ಪಠ್ಯಪುಸ್ತಕಗಳನ್ನು ಒದಗಿಸುವ ವಿಚಾರದಲ್ಲಿ ಆಸ್ಥೆಯನ್ನು ತಾಳಿದ್ದರೂ ಅದು ಪೂರ್ಣವಾಗಿ ಕೈಗೂಡಿರಲಿಲ್ಲ. ಇತ್ತ ನವೀನ ಅಕ್ಷರಸ್ಥರ ಲಘು ವಾಚನಕ್ಕಾಗಿಯೂ ಪುಸ್ತಕಗಳು ಬೇಕೆನಿಸಿದ್ದುವು. ಜನಸಾಮಾನ್ಯರ ಬಾಯಿಯಲ್ಲಿ ನಲಿಯುತ್ತಿದ್ದ ಸರ್ವಜ್ಞನ ವಚನಗಳು ಮತ್ತು ಲಾವಣಿ, ದುಂದುಮೆ ಪದಗಳು, ಅದರಂತೆ ಜೈಮಿನಿ ಭಾರತ, ರಾಜಶೇಖರವಿಳಾಸ, ಕುಮಾರವ್ಯಾಸ ಭಾರತ, ಮೊದಲಾದ ರಸಭರಿತ ಕಾವ್ಯಗಳು, ಧಾರ್ಮಿಕ ಗ್ರಂಥ, ಸ್ತೋತ್ರಗಳು, ಅಲ್ಲದೇ ಶೃಂಗಾರದ ಹಾಗೂ ನೀತಿ ಬೋಧಕವಾದ ಕಥಾ ಪುಸ್ತಕಗಳು–ಇವನ್ನು ಮುದ್ರಿಸಿದರೆ ವ್ಯಾವಹಾರಿಕ ಪ್ರಯೋಜನವುಂಟೆಂಬ ಪ್ರಜ್ಞೆಯೇ ಇಂಥ ವೈಯಕ್ತಿಕ ಪ್ರಯತ್ನಗಳ ಪ್ರೇರಣೆಯಾಗಿದೆ. ಅಲ್ಲದೆ ನೆರೆಯ ಮಹಾರಾಷ್ಟ್ರದಲ್ಲಿ ಆ ಬಗೆಯ ಕೆಲಸವು ಅದಾಗಲೇ ನಡೆದಿದ್ದುದರ ಅರಿವೂ ಸಂಬಂಧಪಟ್ಟವರಿಗೆ ಇದ್ದಿತು.

'ಸುಬುದ್ಧಿ ಪ್ರಕಾಶ'ವೆಂಬ ಕನ್ನಡ ಪತ್ರಿಕೆಯು ೧೮೪೯ರಂದು ಬೆಳಗಾಂವಿಯಲ್ಲಿ ಆರಂಭವಾಯಿತು. ಆ ವರ್ಷಕ್ಕೆ ಮುಂಚೆ, ಯಾವ ದೇಶೀಯನೂ ಮುಂಬಯಿ ಕರ್ನಾಟಕದಲ್ಲಿ ಖಾಸಗಿಯಾಗಿ ಕನ್ನಡ ಪುಸ್ತಕ ಅಥವಾ ಪತ್ರಿಕೆಯನ್ನು ಛಾಪಿಸಿದುದಿಲ್ಲ. ಕಾರಣ ಖಾಸಗೀ ಮುದ್ರಣ ಕಾರ್ಯವು (ಕಲ್ಲಚ್ಚಿನದು) ಬೆಳಗಾಂವಿಯಲ್ಲಿ ಮೊದಲಿಗೆ ಕಂಡುಬಂದಿತೆಂದು ನಿರ್ಧರಿಸಬಹುದು. ಇಲ್ಲಿ ಕನ್ನಡ, ಮರಾಠೀ ಎರಡೂ ಭಾಷೆಗಳಲ್ಲಿ ಮುದ್ರಣ, ಗ್ರಂಥ ಪ್ರಕಟನೆಗಳು ಮುಂದುವರಿದುವು.

ಮುಂದೆ ಕೆಲವೇ ವರ್ಷಗಳ ಅಂತರದಲ್ಲಿ ಧಾರವಾಡ ಜಿಲ್ಲೆಯ ಸವಣೂರ ಗ್ರಾಮದಲ್ಲಿ ಮುದ್ರಣೋದ್ಯಮವು ಮೊದಲಾದುದು ಸೋಜಿಗದ ಸಂಗತಿಯಾಗಿದೆ. ಆ ಊರಲ್ಲಿ ಕ್ರಿ.ಶ. ೧೮೬೦ಕ್ಕೆ ತುಸು ಮುಂಚೆ ಆರಂಭವಾದ ಸವಣೂರ ಪ್ರೆಸ್ ಮತ್ತು ಜ್ಞಾನಬೋಧಕ ಪ್ರೆಸ್-ಇವು ಖಾಸಗೀ ಮುದ್ರಣ ಸಂಸ್ಥೆಗಳು. ಸವಣೂರ ಪ್ರೆಸ್‌ನಲ್ಲಿ ಪರ್ಶಿಯನ್ ಮುದ್ರಣವೂ, ಅಲ್ಲಿಯ ಮುಸ್ಲಿಂ ಸಂಸ್ಥಾನಿಕನ ಆಡಳಿತದ ಬೇಡಿಕೆಯನ್ನು ಗಮನಿಸಿ ನಡೆಯುತ್ತಿದ್ದಿತು. ಜ್ಞಾನಬೋಧಕ ಪ್ರೆಸ್‌ದಿಂದ ಕ್ರಿ.ಶ. ೧೮೬೦-೧೮೬೫ರ ಅವಧಿಯಲ್ಲಿ ಹೊರಬಂದ 'ಶ್ರೀಕೃಷ್ಣಪಾರಿಜಾತ' ಮತ್ತು ದುಂದುಮೆ ಹಾಡಿನ ಪುಸ್ತಕಗಳು. ಜೈಮಿನಿಭಾರತ, ಸರ್ವಜ್ಞ ತ್ರಿಪದಿ, ಬಸವ ಪುರಾಣ ಮೊದಲಾದ ಹಳೆಯ ಕೃತಿಗಳು ಮತ್ತು ಕೆಲವು ಶತಕಗಳು-ಇವನ್ನೆಲ್ಲ ಗಮನಿಸಿದಾಗ ಆ ಅಚ್ಚುಕೂಟದವರಲ್ಲಿ ಮೇಲೆ ಹೇಳಿದ ಜನಸಾಮಾನ್ಯ ದೃಷ್ಟಿ ಎಷ್ಟರಮಟ್ಟಿಗೆ ಇತ್ತೆಂಬುದು ವೇದ್ಯವಾಗುತ್ತದೆ. ಈ ಮುದ್ರಣಾಲಯದಲ್ಲಿಯೇ ನಾಗವರ್ಮನ - 'ಛಂದೋಂಬುಧಿ'ಯು ೧೮೬೨ರಲ್ಲಿ, ಎಂದರೆ ಕಿಟೆಲ್ ಆವೃತ್ತಿ (ಕ್ರಿ.ಶ. ೧೮೭೫) ಗಿಂತಲೂ ಪೂರ್ವದಲ್ಲಿ ಅಚ್ಚಾಯಿತು. ಇಲ್ಲಿ ಅಚ್ಚಾದ ಕೆಲವಾರು ಕೃತಿಗಳ ಲೇಖಕನೆಂದು ಬಸಲಿಂಗಯ್ಯ ಮಡಿವಾಳಯ್ಯ ಕುಂದಗೋಳ ಎಂಬವನ ಹೆಸರಿರುವುದರಿಂದ ಅವನು ಈ ಪ್ರೆಸ್‌ಗೆ ವಿಶೇಷವಾಗಿ ಸಂಬಂಧಿಸಿದವನಾಗಿರಬೇಕು.

ಜ್ಞಾನಬೋಧಕ ಮುದ್ರಣಾಲಯವು ಮುಂದೆ ಕ್ರಿ.ಶ. ೧೮೬೫ರ ಸುಮಾರಿಗೆ ಧಾರವಾಡಕ್ಕೆ ಸ್ಥಳಾಂತರ ಹೊಂದಿತು. ಆಗಿನ ಮುದ್ರಕ ಪ್ರಕಾಶಕನೆಂದು 'ದುರ್ಗಾಪ್ರಸಾದ ಮಿಸರ' ಎಂಬವನ ಹೆಸರು, ಅಲ್ಲಿ ಮುದ್ರಿತವಾದ ಪುಸ್ತಕಗಳಲ್ಲಿ ಉಲ್ಲೇಖಗೊಂಡಿದೆ. ಧಾರವಾಡಕ್ಕೆ ಸ್ಥಾನಾಂತರ ಹೊಂದಿದ್ದಾಗ ಹಿಂದಿನವುಗಳನ್ನೇ ಪುನರ್ಮುದ್ರಿಸಿದ್ದುದೂ ಕಂಡು ಬರುತ್ತದೆ.

ಕ್ರಿ. ಶ. ೧೮೬೦ - ೬೭ರ ಅವಧಿಯಲ್ಲಿ ಧಾರವಾಡದೊಳಗೆ ಸನ್ಮಾರ್ಗದರ್ಶಕ, ಜ್ಞಾನಸಾಗರ ಮತ್ತು ಜ್ಞಾನವರ್ಧಕ ಎಂಬ ಹೆಸರಿನ ಇತರ ಅಚ್ಚುಕೂಟಗಳೂ ಇದ್ದುವು. ಇವೆಲ್ಲವೂ ತಮ್ಮ ತಮ್ಮಲ್ಲಿ ತುಂಬಾ ಸಹಕಾರದಿಂದ ಕೆಲಸ ನಡೆಸಿದುವು. ಸನ್ಮಾರ್ಗ ದರ್ಶಕ ಪ್ರೆಸ್ಸನ್ನು ಗೋವಿಂದ ಪ್ರಭಾಕರ ಜೋಶಿ ಎಂಬವನು ನಡೆಯಿಸುತ್ತಿದ್ದನು. ಅಲ್ಲಿ ಮರಾಠಿ ಪುಸ್ತಕಗಳೂ ಅಚ್ಚಾಗಿವೆ. ಅಚ್ಚಾದ ಪುಸ್ತಕಗಳು ಹೆಚ್ಚಾಗಿ ಪಠ್ಯಗಳೇ ಆಗಿದ್ದುವು. ಮುಂಬಯಿ ಕರ್ನಾಟಕದ ದ್ವಿತೀಯ ಕನ್ನಡ ಪತ್ರಿಕೆಯೆನಿಸಿದ 'ಕನ್ನಡ ಜ್ಞಾನಬೋಧಕ'ವು (೧೮೬೧) ಸುರುವಿಗೆ ಇಲ್ಲಿಯೇ ಅಚ್ಚಾಗುತ್ತಿದ್ದಿತು. ಜ್ಞಾನಸಾಗರ ಪ್ರೆಸ್ಸು ಸುರ್ಜಾನ ಸಿಂಗ್ ಎಂಬವನ ಒಡೆತನದಲ್ಲಿದ್ದಿತು. ಹಿಂದೂ ಪಂಚಾಂಗವು ಮೊತ್ತಮೊದಲು ಪ್ರಸಿದ್ಧವಾದುದು, ಈ ಮುದ್ರಣಾಲಯದಿಂದಲೇ. ಇವುಗಳಿಗಿಂತ ಹೆಚ್ಚು ಪ್ರಸಿದ್ಧಿಯನ್ನು ಪಡೆದದ್ದು ಜ್ಞಾನವರ್ಧಕ ಪ್ರೆಸ್. ಶಿಕ್ಷಣಾಧಿಕಾರಿ ಚೆನ್ನಬಸಪ್ಪನ ಪ್ರೋತ್ಸಾಹ, ಸಹಾಯಗಳನ್ನು ಪಡೆದು ಕಲ್ಯಾಣಪ್ಪ ಮಾದನಶೆಟ್ಟಿ ಎಂಬವನು ೧೮೬೫ರಲ್ಲಿ ಇದನ್ನು ಆರಂಭಿಸಿದನು.

೨೦ನೆಯ ಶತಮಾನದ ಆರಂಭದ ವರೆಗೂ ಅಸ್ತಿತ್ವದಲ್ಲಿದ್ದ ಆ ಅಚ್ಚುಕೂಟದಲ್ಲಿ ಯಥಾಪ್ರಕಾರ ಕ್ರಮಿಕ ಪುಸ್ತಕಗಳೂ ಜನಸಾಮಾನ್ಯರಿಗೆ ಬೇಕಾಗುವಂಥ ಪುಸ್ತಕಗಳೂ ಮುದ್ರಿತವಾಗಿವೆ.

ಕ್ರಿ. ಶ. ೧೮೬೦ನೆಯ ದಶಕದಲ್ಲಿ ಬೆಳಗಾಂವಿಯಲ್ಲಿ ಇನ್ನು ಹಲವು ಅಚ್ಚುಕೂಟಗಳು ಅಸ್ತಿತ್ವದಲ್ಲಿದ್ದುವು. ಕನ್ನಡ ಮತ್ತು ಮರಾಠಿ — ಎರಡೂ ಭಾಷೆಗಳಲ್ಲಿಯ ಸಮಾನ ಮುದ್ರಣವು ಬೆಳಗಾಂವಿಯ ವೈಶಿಷ್ಟ್ಯವಾಗಿದ್ದು, ಉದಾಹರಣೆಯೆಂದು ದೇಶಬಾಂಧವ ಪ್ರೆಸ್ ಮತ್ತು ಸಮಾಚಾರ ಪ್ರೆಸ್ ಇವನ್ನು ಹೆಸರಿಸಬಹುದು. ಕೊನೆಯದು 'ಬೆಳಗಾಂವ ಸಮಾಚಾರ' ಎಂಬ ಪತ್ರಿಕೆಯ ಹೆಸರನ್ನೆ ಇಟ್ಟುಕೊಂಡು ಹಲವು ದಶಕಗಳ ವರೆಗೆ ಬಾಳಿತು. ಅನೇಕ ಕನ್ನಡ ಪುಸ್ತಕಗಳ ಪ್ರಕಟನೆಗೆ ಕಾರಣವಾಯಿತು.

ಇವುಗಳೆಲ್ಲ ಕಲ್ಲಚ್ಚನ್ನೆ ನಂಬಿದ್ದಂಥ ಅಚ್ಚುಕೂಟಗಳು. ಮೊಳೆಗಳನ್ನು ಉಪಯೋಗಿಸಿ ಉತ್ತಮ ರೀತಿಯಲ್ಲಿ ಅಚ್ಚು ಹಾಕಿಸಬೇಕೆನ್ನುವ ಎತ್ತುಗಡೆಯು ನಡೆದದ್ದು ೧೮೬೭ರಲ್ಲಿ. ಮುಂಬಯಿ ಕರ್ನಾಟಕದಲ್ಲಿ ಶಿಕ್ಷಣಾಧಿಕಾರಿಯಾಗಿದ್ದ ವಿಲಿಯಮ್ ರಸೆಲ್ ಮತ್ತು ಸಹಾಯಾಧಿಕಾರಿ ವೆಂಕಟ ರಂಗೋ ಕಟ್ಟಿ, ಇವರಿಬ್ಬರು ಅದರ ಪ್ರವರ್ತಕರು. ಕ್ರಮಿಕ ಪುಸ್ತಕಗಳನ್ನು ಮಂಗಳೂರಲ್ಲಿ ಮುದ್ರಿಸಿ ಪಡೆಯುವಲ್ಲಿನ ಓಡಾಟ, ವಿಳಂಬ ಮೊದಲಾದ ತೊಂದರೆಗಳನ್ನು ತಪ್ಪಿಸಲು, ರಸೆಲ್ ಕನ್ನಡ ಮೊಳೆಗಳನ್ನು ತರಿಸಿಕೊಂಡು, ಧಾರವಾಡ, ಬೆಳಗಾಂವಿಗಳಲ್ಲಿಯೇ ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸಬೇಕೆಂದು ಯೋಜಿಸಿದನು. ಮೊಳೆಗಳು ಎಲ್ಲಿ ದೊರೆಯಬಹುದೆನ್ನುವುದರ ಕುರಿತು ಬೆಂಗಳೂರಿನ ಸರಕಾರೀ ಮುದ್ರಣಾಲಯ ಮತ್ತು ವಿವಿಧ ಮಿಶನ್ ಸಂಸ್ಥೆಗಳೊಂದಿಗೆ ಪತ್ರವ್ಯವಹಾರ ಮಾಡಿದಾಗ ಭಾರತದಲ್ಲಿ ಎಲ್ಲಿಯೂ ಕನ್ನಡ ಮೊಳೆಗಳು ಮಾರಾಟಕ್ಕೆ ದೊರೆಯವೆಂಬುದು ವಿದಿತವಾಯಿತು. ಈ ಬಗ್ಗೆ ವೆಸ್ಲಿಯನ್ ಮಿಶನ್ನಿನ ಡಿ. ಸ್ಯಾಂಡರ್ಸನ್ ಇವನ ಮುಖಾಂತರ ರಸೆಲ್ ಲಂಡನ್ನಿನಲ್ಲಿಯೂ ಪ್ರಯತ್ನಿಸಿದನು.[೯]

ಆದರೆ ಆ ಪ್ರಯತ್ನವು ಫಲಿಸಲಿಲ್ಲ. ಜರ್ಮನಿಯಲ್ಲಿಯೂ ಪ್ರಯತ್ನಿಸಿದಾಗ ಮಿಶನರಿಗಳು ಮೊಳೆಗಳ ಮೇಲಿನ ತಮ್ಮ ಏಕಸ್ವಾಮ್ಯವನ್ನು ಬಿಟ್ಟುಕೊಡಲು ಸಿದ್ಧರಿರಲಿಲ್ಲವೆಂದು ತಿಳಿಯಬಂತು. ಆಗ ವೆಂ. ರಂ. ಕಟ್ಟಿಯು ಓರ್ವ ಕಂಚುಗಾರನ ಸಹಾಯದಿಂದ ಬೆಳಗಾಂವಿಯಲ್ಲಿ ೧೮೭೦ರ ಸುಮಾರಿಗೆ ತನ್ನ ಕೈಯಾರೆ, ಮೊಳೆಗಳ ಮಾತೃಕೆಗಳನ್ನು ತಯಾರಿಸಿದನು. ಅವು ಒರಟಾಗಿ ಸದ್ದುಮುದ್ದಾಗಿದ್ದವಾದ್ದರಿಂದ ಅವನ್ನು ನಯಗೊಳಿಸುವುದಕ್ಕಾಗಿ ಒಬ್ಬ ಕುಶಲ ಕರ್ಮಿಯನ್ನು ಮುಂಬಯಿಗೆ ತರಬೇತಿಗಾಗಿ ಕಳಿಸಲಾಯಿತು. ಆರೇಳು ತಿಂಗಳವರೆಗೆ ಆ ಕರ್ಮಚಾರಿಯು ಅನುಭವವನ್ನು ಪಡೆದ ಮೇಲೆ ಬೆಳಗಾಂವ ಲಿಥೊಗ್ರಾಫಿಕ್ ಪ್ರೆಸ್‌ನವರು ಮೊಳೆಗಳ ತಯಾರಿಕಾ ಕೇಂದ್ರವನ್ನು ಸ್ಥಾಪಿಸ ಬಯಸಿದರು. ಈ ಎತ್ತುಗಡೆಯಿಂದ ಪ್ರೀತನಾದ ರಸೆಲ್ ಒಂದು ಟೈಪ್ ಫೌಂಡ್ರಿಯ ಸ್ಥಾಪನೆಗೆಂದು ಮುಂಬಯಿ ಸರಕಾರದಿಂದ ಎರಡು ಸಾವಿರ ರೂಪಾಯಿಗಳ

ಸಾಲವನ್ನು ಕೊಡಿಸಿದನಲ್ಲದೆ ತಾನು ಸ್ವತಃ ಇನ್ನೆರಡು ಸಾವಿರ ಮೊತ್ತವನ್ನು ಸೇರಿಸಿದನು. ರಸೆಲ್‌ನ ಈ ಔದಾರ್ಯವು ಅತ್ಯಂತ ಸ್ಮರಣೀಯವಾಗಿದೆ. ಹೀಗೆ ಕ್ರಿ.ಶ. ೧೮೭೦ರ ಹೊತ್ತಿಗೆ ಕನ್ನಡದ ಮೊಳೆಗಳು ಸಿದ್ಧವಾಗಿ ಪ್ರೆಸ್ ನಡೆಸಬೇಕೆನ್ನುವ ಯಾರಿಗೇ ಆಗಲಿ ಅವು ಮಾರಾಟಕ್ಕೆ ಬೇಕಾದಷ್ಟು ದೊರೆಯುವಂತಾಗಿ ಮುದ್ರಣ ಕಾರ್ಯವು ಮುಂಬಯಿ ಕರ್ನಾಟಕದಲ್ಲಿ ಭರದಿಂದ ವಿಕಾಸಗೊಂಡಿತು.

ಇನ್ನೀಗ ದೇಶೀಯ ಮುದ್ರಣದ ಎರಡನೆಯ ಘಟ್ಟಕ್ಕೆ ಬರುತ್ತೇವೆ. ಬೆಳಗಾಂವಿಯಲ್ಲಿ ಮೊಳೆಗಳ ಉತ್ಪಾದನಾ ಕೇಂದ್ರವು ಸ್ಥಾಪಿತವಾದಂತೆ, ಅದಕ್ಕಿಂತ ತುಸು ಪೂರ್ವದಲ್ಲಿ ಮದ್ರಾಸ, ಬೆಂಗಳೂರುಗಳಲ್ಲಿ ಇಂಥ ಕೇಂದ್ರಗಳು ಹುಟ್ಟಿದ್ದುವು. ಮಂಗಳೂರಿನಲ್ಲಿದ್ದ ಮುದ್ರಣಾಲಯಗಳನ್ನು ಈ ಮೊದಲು ಪ್ರಸ್ತಾಪಿಸಲಾಗಿದೆ. ಪರಿಣಾಮವಾಗಿ ೧೮೭೦ರ ಅನಂತರ ನಾಡಿನ ಬೇರೆ ಬೇರೆ ಊರುಗಳಲ್ಲಿ ಮುದ್ರಣಾಲಯಗಳು ಕಾಣಿಸಿಕೊಂಡವು. ಮುಂದಿನ ೨೦ ವರ್ಷಗಳಲ್ಲಿ ಕರ್ನಾಟಕದ ತಾಲೂಕು/ತಹಶೀಲು ಮಟ್ಟದ ಎಲ್ಲ ಊರುಗಳಲ್ಲಿಯೂ ಹಬ್ಬಿದುವು. ಬಳ್ಳಾರಿಯ ಮಿಶನ್ ಪ್ರೆಸ್ ನಿಂತುಹೋದರೂ ೧೮೮೦ರ ಸುಮಾರಿಗೆ ಕೋನೇರಿ ಶೆಟ್ರು, ಆದಿನಾರಾಯಣ ಶೆಟ್ರು—ಇವರೇ ಮೊದಲಾದವರು ಆ ಊರಲ್ಲಿ ಪುಸ್ತಕ ವ್ಯವಹಾರದಲ್ಲಿ ನಿರತರಾದರು. ಮದ್ರಾಸ ಪ್ರಾಂತದಲ್ಲಿ ಕನ್ನಡ ಪ್ರದೇಶವಲ್ಲದ ಪುಂಗನೂರು ಮತ್ತು ಕುಂಭಕೋಣಂಗಳಲ್ಲಿ ಕೆಲವು ಕನ್ನಡ ಟೀಕಾ ಗ್ರಂಥಗಳು ಪ್ರಕಟವಾಗಿವೆ. ಮಾಧ್ವ ಸಾಹಿತ್ಯವನ್ನು ಕುರಿತಾದ ಈ ಪುಸ್ತಕಗಳ ಲಿಪಿ ತೆಲುಗು. ಮದ್ರಾಸ ನಗರದಲ್ಲಿ ೧೮೬೦ನೆಯ ದಶಕದಿಂದಲೇ 'ಹಿಂದೂ ಭಾಷಾಸಂಜೀವಿನೀ' ಮುಂತಾದ ಅಚ್ಚುಕೂಟಗಳು ಕಾರ್ಯನಿರತವಾಗಿದ್ದವು. ಅವುಗಳಲ್ಲಿ ತೆಲುಗನ್ನು ಹೋಲುವ ಕನ್ನಡ ಲಿಪಿಯನ್ನೇ ಬಳಸಲಾಗುತ್ತಿತ್ತು; ತೆಲುಗು ಅಲ್ಲ.

ದೇಶೀ ಮುದ್ರಣಾಲಯಗಳಲ್ಲಿ ಹೆಚ್ಚಿನವು ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿಯೇ ಇದ್ದುವು. ಬೆಂಗಳೂರಿನಲ್ಲಿ ೧೮೬೨ರಂದು ವಿಚಾರದರ್ಪಣ ಪ್ರೆಸ್ ಆರಂಭವಾಗಿದ್ದು ಮೈಸೂರು ಸಂಸ್ಥಾನದಲ್ಲಿ ಇದುವೆ ಮೊದಲ ಖಾಸಗಿ ಮುದ್ರಣಾಲಯವಾಗಿ ತೋರುತ್ತದೆ. ಅನಂತರ 'ಹರಿರಾಮ ಮಿಸರ್' (ಮಿಶ್ರ)ನ ಟೌನ ಪ್ರೆಸ್*, ಎಂ. ರುದ್ರಪ್ಪ ಅಂಡ್ ಸನ್ಸ್ ಅವರ ಚಾಮುಂಡೇಶ್ವರೀ ಪ್ರೆಸ್ ಸಾಕಷ್ಟು ಹೆಸರು ಗಳಿಸಿದ್ದವು. ಮೈಸೂರು ಬುಕ್ ಡಿಪೋದ ಮಾಲಕನಾದ ವೆಲನಾಡು ಬಿ. ಸುಬ್ಬಯ್ಯ, ಬೆಂಗಳೂರು ಬುಕ್ ಡಿಪೋದ ವಾಜಪೇಯ ಕೃಷ್ಣಯ್ಯ ತಮ್ಮದೇ ಆದ ಪ್ರೆಸ್ ನಡೆಸುತ್ತಿದ್ದರು. ವಾಗೀಶ್ವರೀ ಪ್ರೆಸ್ ಆಗಿನ ಕಾಲದ ಇನ್ನೊಂದು ದೊಡ್ಡ ಅಚ್ಚುಕೂಟವಾಗಿದ್ದಿತು.

---

* ಈತನೂ ಧಾರವಾಡ ಜಿಲ್ಲೆಯಲ್ಲಿದ್ದ ದುರ್ಗಾಪ್ರಸಾದ ಮಿಸರನೂ ಒಂದೇ ಮನೆತನದವರಿದ್ದಿರಬೇಕು. ಆ ಜಿಲ್ಲೆಯ ಗದಗಿನಲ್ಲಿ ಇನ್ನೊಬ್ಬ – ಗೌರೀಶಂಕರ ಮಿಸರ ಎಂಬವನೂ ಮುದ್ರಣ ವೃತ್ತಿಯಲ್ಲಿ ತೊಡಗಿದ್ದನು.

ಯೋಗವಾಸಿಷ್ಠ, ರಾಮಾಯಣಗಳಲ್ಲದೆ ಹಲವು ವೀರಶೈವ ಗ್ರಂಥಗಳು ಇಲ್ಲಿ ಅಚ್ಚಾಗಿವೆ. ಕ್ಯಾಕ್ಸ್‌ಟನ್, ಆಲ್ಬಿಯನ್ ಎಂಬ ವಿದೇಶೀ ಹೆಸರಿನ ಪ್ರೆಸ್‌ಗಳಲ್ಲಿ ಆಧುನಿಕರ ಕೃತಿಗಳು ಹೆಚ್ಚಾಗಿ ಹೊರಬಂದುವು. ಭಾರತೀ ಭವನ ಪ್ರೆಸ್ ಜೈನ ಕೃತಿಗಳಿಗೂ – ಸತ್ಸಂಪ್ರದಾಯ ಕಲಾನಿಧಿ ಪ್ರೆಸ್ ಶ್ರೀವೈಷ್ಣವ ಗ್ರಂಥಗಳಿಗೂ ಮುದ್ರಣ ಪ್ರಾಶಸ್ತ್ಯವನ್ನಿತ್ತವು.

ಮೈಸೂರು ನಗರದಲ್ಲಿ ದೇಶೀಯರ ಮುದ್ರಣ ಕಾರ್ಯವು ತಡವಾಗಿ ಆರಂಭವಾದರೂ ಆ ಮುಂದೆ ಬೆಂಗಳೂರಿಗೆ ಸಮಾನವಾದ ಸ್ಥಾನವನ್ನೇ ಪಡೆದಿದ್ದಿತು. ಮುಮ್ಮಡಿ ಕೃಷ್ಣರಾಜಾಂಕಿತ ಗದ್ಯ ಗ್ರಂಥಗಳೂ ಹಳಗನ್ನಡ ಕಾವ್ಯಗಳೂ ಬಹ್ವಂಶವಾಗಿ ಆ ನಗರದ ಅಚ್ಚುಕೂಟಗಳಿಂದಲೇ ಹೊರಬಂದಿವೆ. ಕರ್ನಾಟಕ ಕಾವ್ಯಮಂಜರಿ ಮತ್ತು ಕಾವ್ಯಕಲಾನಿಧಿ ಈ ಗ್ರಂಥಮಾಲೆಗಳ ಪುಷ್ಪಗಳು ಸದ್ವಿದ್ಯಾಮಂದಿರ ಮತ್ತು ಸ್ಟಾರ್ ಪ್ರೆಸ್ ಇವುಗಳಲ್ಲಿ ಅರಳಿದವು. ಕರ್ನಾಟಕ ಗ್ರಂಥಮಾಲೆಯವರ ಕೃತಿಗಳು ಗ್ರ್ಯಾಜುಯೇಟ್ ಟ್ರೇಡಿಂಗ್ ಅಸೋಸಿಯೇಶನ್ (ಜಿ.ಟಿ.ಎ.) ಪ್ರೆಸ್‌ನಲ್ಲಿ ಮೈದಾಳಿದವು. ವಾಗೀಶ್ವರಿ ಜಗನ್ಮೋಹಿನೀ ಪ್ರೆಸ್‌ಗಳಲ್ಲಿ ವೀರಶೈವ ಗ್ರಂಥಗಳ ಮುದ್ರಣವು ಪ್ರಾಶಸ್ತ್ಯವನ್ನು ಪಡೆಯಿತು. ಹಾಗೆಯೇ ಅನೇಕ ಸಂಸ್ಕೃತ ಗ್ರಂಥಗಳು ಹೊರಬಂದುದು ಮೈಸೂರು ಮುದ್ರಣಾಲಯಗಳ ಕಾರ್ಯಫಲವಾಗಿದೆ. ಆ ಕಾಲದ ಒಂದು ಪುಸ್ತಕದಲ್ಲಿ 'ಕರ್ನಾಟಕ ಮುದ್ರಣಾಭಿವೃದ್ಧಿ ಕಂಪನಿ' ಎಂಬುದರ ಪ್ರಸ್ತಾಪವಿದೆ!

ಮದ್ರಾಸದಲ್ಲಿಯೂ ಕನ್ನಡ ಮುದ್ರಣವು ಎದ್ದು ಕಾಣುವಂತಿದ್ದಿತು. ಹಿಂದೂ ಭಾಷಾ ಸಂಜೀವಿನಿ, ಸರಸ್ವತೀ ವಿಲಾಸ ಪ್ರೆಸ್, ವಸುಮತಿ ಪ್ರಿಂಟಿಂಗ್ ಪ್ರೆಸ್, ವೀರ ರಾಘವ ಮುದ್ರಣಾಲಯ, ಸ್ಕಾಟಿಶ್ ಪ್ರೆಸ್–ಇವೇ ಮುಂತಾದ ಅಚ್ಚುಕೂಟಗಳನ್ನು, ಆ ಕಾಲಕ್ಕೆ ಪ್ರಕಟವಾದ ಪುಸ್ತಕಗಳಲ್ಲಿ ಗುರುತಿಸಬಹುದು. ಇವುಗಳಿಗೆ ಸಂಬಂಧಿಸಿದ ವ್ಯಕ್ತಿಗಳೆಂದು ಸರ್ವಶ್ರೀ ಎಸ್. ವೆಂಕಟಸುಬ್ಬಶಾಸ್ತ್ರಿ, ನನ್ನೂರು ಬಿ. ಗುಂಡಪ್ಪ, ವಿ.ರಾಮಕೃಷ್ಣ ವಾಜಪೇಯಿ, ವೆಂಕಟೇಶಶಾಸ್ತ್ರಿ ಮೊದಲಾದವರನ್ನು ಹೆಸರಿಸಬಹುದಾಗಿದೆ.

ಮುದ್ರಣ ಪ್ರಸರಣದಲ್ಲಿ ಮಂಗಳೂರು ದೀಪಸ್ತಂಭದಂತಿದ್ದರೂ ದೀಪದ ಕೆಳಗೆ ಕತ್ತಲೆಯೆಂಬಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಿಶನರಿ ಜನರ ಮುದ್ರಣವನ್ನು ಬಿಟ್ಟು ದೇಶೀ ಮುದ್ರಣವು ಬೇಗ ವಿಕಾಸಗೊಳ್ಳಲಿಲ್ಲ. ಕ್ರಿ.ಶ. ೧೮೮೦ರ ದಶಕದಲ್ಲಿ ಉಡುಪಿಯಲ್ಲಿ ಹಿಂದೂ ಮುದ್ರಣಾಲಯವು ಆರಂಭವಾಯಿತು. ಆಮೇಲೆ ಬೇರೆ ಊರುಗಳಲ್ಲಿ ಒಂದೊಂದಾಗಿ ಪ್ರೆಸ್‌ಗಳು ತಲೆಯೆತ್ತಿದವು.

ಕ್ರಿ.ಶ. ೧೮೮೩ರ ಸುಮಾರಿಗೆ ಮುಂಬಯಿ ನಗರದಲ್ಲಿ ಶಾಮರಾವ ವಿಠ್ಠಲ ಕೈಕಿಣಿಯವರ ಪ್ರೋತ್ಸಾಹದಿಂದ ಮತ್ತು ಸೂರಿ ವೆಂಕಟರಮಣಶಾಸ್ತ್ರೀ ಇವರ ಪರಿಶ್ರಮದಿಂದ ಕರ್ನಾಟಕ ಛಾಪಖಾನೆ ಮತ್ತು ಭಾರತೀ ಪ್ರೆಸ್ — ಇವು ಕನ್ನಡ ಮುದ್ರಣವನ್ನು ಕೈಕೊಂಡವು. 'ಹವ್ಯಕ ಸುಬೋಧ', 'ಕನ್ನಡ ಸುವಾರ್ತೆ', 'ಹಿತೋಪದೇಶ'

ಎಂಬ ಪತ್ರಿಕೆಗಳು, ವೆಂಕಟಾಧ್ವರಿಯ ಕಾವ್ಯಾನುವಾದ, ಕನ್ನಡದ ಎರಡು ಆದ್ಯ ಸಾಮಾಜಿಕ ನಾಟಕಗಳು, ತುರಂಗಭಾರತ ಕಾವ್ಯ, ಮನುಸ್ಮೃತಿಯ ಟೀಕೆ ಇವೇ ಮೊದಲಾದ ಮಹತ್ವಪೂರ್ಣ ಕೃತಿಗಳನ್ನು ಆ ಎರಡು ಅಚ್ಚುಕೂಟಗಳು ಕನ್ನಡಕ್ಕೆ ನೀಡಿವೆ. ಕನ್ನಡದ ಮೊಳೆಗಳನ್ನು ಮಾರಾಟ ಮಾಡುತ್ತಿದ್ದ ನಿರ್ಣಯ ಸಾಗರ ಪ್ರೆಸ್ಸಿನವರೂ ಆಗೀಗ ಕನ್ನಡ ಪುಸ್ತಕಗಳನ್ನು ಅಚ್ಚು ಹಾಕಿಸಿದುದಿದೆ.

ಅರುಣೋದಯ ಕಾಲದ ಸಾಹಿತ್ಯ ನಿರ್ಮಿತಿಯಲ್ಲಿ ಮುದ್ರಣವು ಅದೆಷ್ಟು ಬಲವಾದ ಪ್ರೇರಣೆಯನ್ನು ನೀಡಿತೆಂಬುದು ಮೇಲಣ ವಿವೇಚನೆಯಿಂದ ಸ್ಪಷ್ಟವಾಗದಿರದು. ಆಗಿನ ಕಾಲದ ಲೇಖಕ ಪ್ರಕಾಶಕರು ಇದನ್ನು ಚೆನ್ನಾಗಿ ಮನಗಂಡಿದ್ದರು. ತಮ್ಮ ಪುಸ್ತಕಗಳ ಪೀಠಿಕೆಗಳಲ್ಲಿ ಅದನ್ನು ವ್ಯಕ್ತಪಡಿಸಿದವರೂ ಇದ್ದಾರೆ.

ಎಂ.ಎ. ರಾಮಾನುಜಯ್ಯಂಗಾರ್ ವಿರಚಿತ ಒಂದು ಪ್ರಬಂಧದಲ್ಲಿ ಮುದ್ರಣದ ಮಹತ್ವವನ್ನು ಒಂದು ರೂಪಕದಿಂದ ಮನಂಬುಗುವಂತೆ ಬಣ್ಣಿಸಲಾಗಿದೆ. ಲೇಖನಿಯು ಸದಾಕಾಲ ಗೋಳಾಡುತ್ತಿತ್ತಂತೆ! "ಅಯ್ಯೋ ನನ್ನ ಜೀವಾಶ್ರಯ (ಎಂದರೆ ಹಸ್ತ ಪ್ರತಿ) ವನ್ನೆ, ಮುಟ್ಟಿದರೆ ಸಾಯುವ ಗೆದ್ದಲು ಹುಳುವೂ ತಿಂದುಬಿಡುವುದು. ಬಡಿದರೆ ಚದುರುವ ನೀರೂ ತಾರಿಸಿಬಿಡುವುದು. ಉರುಬಿದರೆ ನಂದುವ ದೀಪವೂ ಸುಟ್ಟು ಬಿಡುವುದು. ನಾನು ಇಷ್ಟು ಉಪಕಾರಿಯಾದರೂ ನನ್ನ ಬಾಳು ಇಷ್ಟೆ. ನನ್ನನ್ನು ಕಾಪಾಡುವವರಿಲ್ಲ." ಅದನ್ನು ಕೇಳಿ ಅನುತಾಪಪಟ್ಟು ಅಚ್ಚು (ಮುದ್ರಣ) ಹೀಗೆ ಹೇಳಿತಂತೆ, "ಏಕೆ ಈ ಗೋಳು? ರಾಜನನ್ನು ಭಟರು ಕಾಪಾಡುವಂತೆ ನಿನಗೆ ಸದೃಶರಾದ ಹೊಸಹೊಸ ಭಟರನ್ನು ಸೃಷ್ಟಿಸಿ ಕಾಪಾಡುತ್ತಿರುವೆನು. ಒಬ್ಬ ಭಟನು ಸತ್ತರೆ ಅನೇಕ ಭಟರು ನಿನಗೆ ಬೆಂಬಲವಾಗಿ ನಿಂತೇ ಇರುವರು. ಈ ಭಟರಿಂದ ಪ್ರಪಂಚವೆಲ್ಲಾ ನಿನ್ನ ರಾಜ್ಯವೇ ಆಗುವುದು. ಅವರು ಜ್ಞಾನದ ಬೆಳಕು ಬೀಳುವ ಕಡೆಯಲ್ಲೆಲ್ಲಾ ನಿನ್ನ ಪ್ರಾಬಲ್ಯವನ್ನು ಹೊಗಳುತ್ತ ಬರುವರು. ನಿನ್ನ ಆಜ್ಞೆಗೆ ಎಲ್ಲಿಯೂ ತಡೆಯೇ ಇಲ್ಲದಂತೆ ಆಗುವುದು."[೧೦]

## ೨.೨ ಗ್ರಂಥೋದ್ಯಮ

### ೨.೨.೧ ಗ್ರಂಥ ವಿಷಯಕ ಕಾಯ್ದೆ, ೧೮೬೭

ಮುದ್ರಣಾಲಯಗಳು ಕೇವಲ ಸರಕಾರೀ ಮತ್ತು ಮಿಶನರಿಗಳ ಸ್ವಾಮ್ಯದಲ್ಲಿದ್ದ ಕಾಲದವರೆಗೆ ಸರಕಾರವು ಅವುಗಳ ಕುರಿತು ಯೋಚಿಸಬೇಕಾದದ್ದಿರಲಿಲ್ಲ. ಯಾವಾಗ

ಭಾರತಾದ್ಯಂತ ಮುದ್ರಣಾಲಯಗಳು ದೇಶೀಯರಿಂದ ಸ್ಥಾಪಿಸಲ್ಪಟ್ಟು ಅವುಗಳಿಂದ ದೇಶ ಭಾಷೆಗಳಲ್ಲಿ ಪುಸ್ತಕ ಮತ್ತು ಪತ್ರಿಕೆಗಳು ಹೊರಡತೊಡಗಿದವೊ ಆಗ ಸರಕಾರಕ್ಕೆ ಈ ವಿಷಯದಲ್ಲಿ ನಿಯಂತ್ರಣವನ್ನಿಟ್ಟುಕೊಳ್ಳುವುದು ಅಗತ್ಯವೆಂದು ತೋರಿತು.

ಭಾರತೀಯ ಗ್ರಂಥೋದ್ಯಮದ ಬಗ್ಗೆ ಲಂಡನ್ನಿನ ರಾಯಲ್ ಏಶಿಯಾಟಿಕ್ ಸೊಸೈಟಿ ಅವರು ಮೊದಲು ಆಸ್ಥೆಯನ್ನು ತೋರಿ ೧೮೬೩ರಲ್ಲಿ ಬ್ರಿಟಿಶ್ ಸರಕಾರಕ್ಕೆ ಆ ಕುರಿತು ಮನವಿಯನ್ನು ಅರ್ಪಿಸಿದರು:

'ಈಚೆಗೆ ಹಿಂದೀಯರು ಬಹಳಷ್ಟು ಸಾಹಿತ್ಯಿಕ ಚಟುವಟಿಕೆಗಳಲ್ಲಿ ತೊಡಗಿದ್ದು, ಪ್ರಾಚೀನ ಸಂಸ್ಕೃತ ಕೃತಿಗಳನ್ನು ಸಂಪಾದಿಸಿ ಪ್ರಕಟಿಸತೊಡಗಿದ್ದಾರೆ. ಇಂಗ್ಲಿಷ್ ಮತ್ತು ಸಂಸ್ಕೃತ ಗ್ರಂಥಗಳನ್ನು ದೇಶೀ ಭಾಷೆಗಳಲ್ಲಿ ಅನುವಾದಿಸತೊಡಗಿದ್ದಾರೆ. ಅಲ್ಲದೆ ರಾಜಕೀಯ, ವೈಜ್ಞಾನಿಕ ಹಾಗೂ ಧಾರ್ಮಿಕ ಪ್ರಬಂಧ ಪುಸ್ತಕಗಳನ್ನು ಬರೆದು ಪ್ರಕಟಿಸುತ್ತ ಇದ್ದಾರೆ. ಹಿಂದುಸ್ತಾನದ ಮತ್ತು ಅಲ್ಲಿಯ ಜನರ ಸದ್ಯದ ಪರಿಸ್ಥಿತಿಯನ್ನು ತಿಳಿದಿರಲು ಈ ಕೃತಿಗಳ ಶಾಸ್ತ್ರೀಯ ವಿವೇಚನೆ ನಡೆಯುವುದು ಅತ್ಯವಶ್ಯವಿದೆ. ಇದರಿಂದ ಇಂಗ್ಲಂಡದಲ್ಲಿ ಪೌರ್ವಾತ್ಯ ವಾಙ್ಮಯದ ಅಭ್ಯಾಸಕ್ಕೆ ಅನುವು ದೊರೆಯುವುದು. ಆಡಳಿತಕ್ಕೂ ಸಹಕಾರಿಯಾಗುವುದು' ಎಂಬುದು ಆ ಮನವಿಯ ಸಾರವಾಗಿದ್ದಿತು.

ಅಂದಿನ ಬ್ರಿಟಿಶ್ ಸರಕಾರಕ್ಕೂ ಇದು ಸ್ವಪ್ರಯೋಜನಕಾರಿಯೆಂದೆನಿಸಿದ್ದರಿಂದ, ೧೮೬೭ರಲ್ಲಿ ಮುದ್ರಣ ಹಾಗೂ ಪುಸ್ತಕಗಳ ಕುರಿತ ಕಾಯದೆಯು ಪಾಸಾಯಿತು. ಇದರನ್ವಯ ಭಾರತದಲ್ಲಿ ಅಚ್ಚಾದ ಪ್ರತಿಯೊಂದು ಪುಸ್ತಕ ಮತ್ತು ಪತ್ರಿಕೆಯ ಮೂರು ಪ್ರತಿಗಳನ್ನು ಸರಕಾರದ ತನಿಖೆಗೆ ಒಪ್ಪಿಸಬೇಕೆಂದು ವಿಧಿಸಲಾಯಿತು. ಅದಕ್ಕಾಗಿ ಪ್ರತಿಯೊಂದು ಪ್ರಾಂತದಲ್ಲಿ ಪರಿಶೀಲನಾಧಿಕಾರಿಯು ನೇಮಕವಾದನು. ಆ ಅಧಿಕಾರಿಯು ಅವುಗಳನ್ನು ಪರಿಶೀಲಿಸಿ ಸೂಕ್ತ ವರದಿಯನ್ನು ಸರಕಾರಕ್ಕೆ ಒಪ್ಪಿಸುವುದಲ್ಲದೆ, ಮುದ್ರಿತವಾದ ಪುಸ್ತಗಳ ಒಂದು ತ್ರೈಮಾಸಿಕ ಸೂಚಿಯನ್ನು ಪ್ರಕಟಿಸಬೇಕಾಗುತ್ತಿದ್ದಿತು. ಪ್ರತಿಯೊಂದು ಕೃತಿಯ ಮೂರು ಪ್ರತಿಗಳು ಸಲ್ಲುತ್ತಿದ್ದುದರಲ್ಲಿ, ಒಂದನ್ನು ಪ್ರಾಂತೀಯ ಸರಕಾರವು ತಾನು ಇಟ್ಟುಕೊಂಡು ಇನ್ನೆರಡು ಪ್ರತಿಗಳನ್ನು ಕೇಂದ್ರ ಸರಕಾರಕ್ಕೆ ಹಾಗೂ ಲಂಡನ್ನಿನ ಕೆಲವು ಲೈಬ್ರರಿಗಳಿಗೆ ಕಳಿಸುವ ಕ್ರಮವು ರೂಢಿಯಾಯಿತು. (ಆ ಮುಂದೆ ಐದು ಪ್ರತಿಗಳನ್ನು ಕಳಿಸಬೇಕೆಂದು ಗೊತ್ತು ಮಾಡಲಾಯಿತು.)

ನಮಗೆ ಇಲ್ಲಿ ಪ್ರಸ್ತುತವಾದದ್ದೆಂದರೆ ತ್ರೈಮಾಸಿಕವಾಗಿ ಪ್ರಕಟವಾಗುತ್ತಿದ್ದ ಪುಸ್ತಕ ಸೂಚಿ. ಮೊದಲಿಗೆ, ಈ ಕಾನೂನು ಕಾರ್ಯಾಚರಣೆಗೆ ಬರುವುದಕ್ಕಿಂತ ಎಂದರೆ ೧೮೬೭ಕ್ಕೆ ಮುಂಚೆ ಅಚ್ಚಾಗಿದ್ದ ಪುಸ್ತಕಗಳ ಪಟ್ಟಿಯನ್ನು ಸಿದ್ಧಗೊಳಿಸಲಾಯಿತು. ಆ ಮುಂದೆ, ಅಂದಿನ ಭಾರತ ಸರಕಾರದ ಆದೇಶದನ್ವಯ, ವಿವಿಧ ಪ್ರಾಂತಗಳವರಲ್ಲದೆ,

ಸಂಸ್ಥಾನಗಳವರೂ ಸಹ ತ್ರೈಮಾಸಿಕ ಸೂಚಿಗಳನ್ನು ಪ್ರಕಟಿಸುತ್ತಾ ಬಂದರು.* ಇವುಗಳ ಆಧಾರದ ಮೇಲೆ, ಆಗಿನ ಸರಕಾರವು ಗ್ರಂಥೋದ್ಯಮವನ್ನು ಕುರಿತ ವಾರ್ಷಿಕ ವರದಿಗಳನ್ನು ಸೂಕ್ತವಾದ ಟೀಕೆಗಳೊಡನೆ ಪ್ರಕಟಿಸುತ್ತಾ ಬಂದಿತು. ಪ್ರಾಂತೀಯ ಹಾಗೂ ಕೇಂದ್ರ ಸರಕಾರದ ಈ ನಿಯತಕಾಲಿಕ ವರದಿಗಳು ವಾಚನೀಯವಾಗಿದ್ದು, ಅಂದಿನ ಸಾಹಿತ್ಯ ಸ್ವರೂಪದ ಮತ್ತು ಗ್ರಂಥೋದ್ಯಮದ ಪರಿಚಯವನ್ನು ಚೆನ್ನಾಗಿ ಮಾಡಿಕೊಡುತ್ತವೆ. ಆದರೆ ಕರ್ನಾಟಕವು ಹರಿದು ಹಂಚಿ ಹೋದದ್ದರಿಂದ ಆಗಿನ ಕನ್ನಡ ಸಾರಸ್ವತದ ಸಮಗ್ರ ಚಿತ್ರವು ಈ ವರದಿಗಳಲ್ಲಿ ದೊರೆಯುವಂತೆಯೇ ಇಲ್ಲ.

ಅದೇ ಭಾರತ ಸರಕಾರದವರು ಪ್ರಕಟಿಸಿದ ೧೮೮೪ರಿಂದ ೧೮೯೫ರ ವರೆಗಿನ ವಿವಿಧ ಪ್ರಾಂತೀಯ ವರದಿಗಳನ್ನು (RPIR – Report on publications issued and registered in the several provinces of British India) ಪರಿಶೀಲಿಸಿದಾಗ, ಆ ಕಾಲಕ್ಕೆ ಪ್ರತಿ ವರ್ಷ ಸುಮಾರು ಎರಡು ನೂರು ಕನ್ನಡ ಪುಸ್ತಕಗಳು ಪ್ರಕಟವಾಗುತ್ತಿದ್ದುವೆಂದು ತಿಳಿಯುತ್ತದೆ. ಸರಾಸರಿ ಪ್ರಮಾಣ ಇಂತಿದೆ: ಮೈಸೂರು – ೧೧೦; ಮದ್ರಾಸ ಕರ್ನಾಟಕ – ೬೦; ಮುಂಬಯಿ ಕರ್ನಾಟಕ – ೩೦. ಇವುಗಳಲ್ಲಿ ಪಠ್ಯಪುಸ್ತಕಗಳ ಪುನರ್‌ಮುದ್ರಣಗಳ ಸಂಖ್ಯೆಯೇ ಹೆಚ್ಚು. ಇತರ ಯಾವುದೇ ನೆರೆಯ ಭಾಷೆಗೆ ಹೋಲಿಸಿದಾಗ ಕನ್ನಡ ಸಾರಸ್ವತ ಪ್ರಪಂಚದ ಹಿನ್ನಡೆ ಸ್ಪಷ್ಟವೇ ಆಗಿದ್ದಿತು. ಮುಂಬಯಿಯ ಅಧಿಕಾರಿಗಳು, ಕ್ರಿ.ಶ. ೧೮೮೯ರ ವರದಿಯಲ್ಲಿ 'ಕನ್ನಡ, ಉರ್ದು ಮತ್ತು ಸಿಂಧೀ ಭಾಷಾ ಪುಸ್ತಕಗಳಲ್ಲಿ ಸತ್ವವೇ ತೋರುವುದಿಲ್ಲ' ಎಂದು ಅಭಿಪ್ರಾಯಪಟ್ಟಿದ್ದಾರೆ. ೧೮೯೫ರ ವರದಿಯಲ್ಲಂತೂ "This poverty of literary activity among the Canarese people is not confined only to the year under report but has to be regretted in each year's report" ಎಂದು ಕಟುವಾಗಿ ಹೇಳಿದ್ದಾರೆ. ರಾಜಕೀಯದಲ್ಲಿ ಹಾಗೂ ಶೈಕ್ಷಣಿಕ ಕ್ಷೇತ್ರದಲ್ಲಿ ಕನ್ನಡ ಭಾಗಗಳನ್ನೂ ಭಾಷೆಯನ್ನೂ ಕಡೆಗಣಿಸಿದ್ದಾಗ ಆ ಪ್ರದೇಶದಲ್ಲಿ ಸಾಹಿತ್ಯಿಕ ಪ್ರಗತಿಯು ಕಂಡುಬರುವುದಾದರೂ ಹೇಗೆ?

---

* ಮುಂಬಯಿ ಪ್ರಾಂತಕ್ಕೆ ಸಂಬಂಧಿಸಿದ ಇಂಥ ಪುಸ್ತಕಗಳ, ಎಂದರೆ ೧೮೬೭ರ ಮುನ್ನ ಪ್ರಕಟವಾದವುಗಳ ಪಟ್ಟಿಯ ಪ್ರಕಾರ ಮುಂಬಯಿ ಕರ್ನಾಟಕದಲ್ಲಿ ಪುಸ್ತಕ ಪ್ರಕಟನಾ ಕಾರ್ಯವು ೧೮೪೯ರಿಂದ ಆರಂಭವಾಯಿತೆಂದೂ, ಮುಂದಿನ ೭ ವರ್ಷಗಳ ಅವಧಿಯಲ್ಲಿ ಸುಮಾರು ೬೦ ಕನ್ನಡ ಪುಸ್ತಕಗಳು ಪ್ರಕಟವಾದುವೆಂದೂ ತಿಳಿಯುತ್ತದೆ. (೧೮೬೭ಕ್ಕೆ ಮುಂಚೆ ಅಚ್ಚಾದ ಮರಾಠಿ ಪುಸ್ತಕಗಳ ಸಂಖ್ಯೆ ೬೬). ಈ ಪಟ್ಟಿಯಲ್ಲಿ ಸಮಾವೇಶವಾಗದೆ ಉಳಿದವುಗಳೆಂದು ಸುಮಾರು ೨೦ ಪುಸ್ತಕಗಳನ್ನು ಸೇರಿಸೋಣ. ಗಮನಿಸಬೇಕಾದ ಮಾತೆಂದರೆ ಈ ೮೦ ಪುಸ್ತಕಗಳಲ್ಲಿ ಕೆಲವಾದರೂ ನಮ್ಮ ನಾಡಿನಲ್ಲಿಯ ಯಾವುದೇ ಅಧಿಕೃತ ಪುಸ್ತಕ ಭಂಡಾರ ಅಥವಾ ಕಚೇರಿಯಲ್ಲಿ ಲಭ್ಯವಿಲ್ಲ. ಆಗಿನ ಮೈಸೂರು ಸಂಸ್ಥಾನದ ಪ್ರಕಟನೆಗಳ ವಿವರಗಳನ್ನು 'Register of native publications' ಎಂಬ ತ್ರೈಮಾಸಿಕ ಪ್ರಕಟನೆಯಲ್ಲಿ ಕಾಣಬಹುದು (೧೯೧೮ನೆಯ ವರ್ಷದವರೆಗೆ ಮಾತ್ರ). ಮದ್ರಾಸ್ ಪ್ರಾಂತದಲ್ಲಿಯೂ ಹೆಚ್ಚು ಕಡಿಮೆಯಾಗಿ ಇದೇ ಕ್ರಮವು ನಡೆದುಕೊಂಡು ಬಂದಿದ್ದಿತು.

ಕ್ರಿ.ಶ. ೧೮೬೭ರ ಗ್ರಂಥ ವಿಷಯಕ ಕಾಯ್ದೆ ಪಾಸಾದಾಗ ಮೈಸೂರು ಒಟ್ಟಿನಲ್ಲಿ ಬ್ರಿಟಿಶರ ನೇರ ಆಡಳಿತದಲ್ಲಿಯೆ ಇದ್ದಿತಾದ್ದರಿಂದ ಈ ಕಾಯದೆಯು ಅಲ್ಲಿಯೂ ಕಾರ್ಯಾಚರಣೆಯಲ್ಲಿ ಬಂದಿದ್ದಿತು. ಹೊಸ ಪುಸ್ತಕಗಳ ಕುರಿತ ವರದಿಗಳು ನಿಯತವಾಗಿ ಪ್ರಕಟವಾಗತೊಡಗಿದವು. ಕ್ರಿ.ಶ. ೧೮೮೮ರ ವರೆಗಿನ ವರದಿಗಳನ್ನು ಬಿ.ಎಲ್. ರೈಸ್ ಸಿದ್ಧಪಡಿಸಿದರು. ಅನಂತರ **ಎಚ್.ಜೆ. ಭಾಭಾ** ಶಿಕ್ಷಣಾಧಿಕಾರಿಯಿದ್ದಾಗ ಇಂಥ ವಾರ್ಷಿಕ ವರದಿಗಳಲ್ಲಿ ಹೆಚ್ಚು ವಿವರಗಳು ದೊರೆಯುತ್ತವೆ. ೧೮೯೦ರ ವರದಿಯಲ್ಲಿ ಅತಿರೇಕ ಶೃಂಗಾರದ ಎರಡು ಕವಿತಾ ಪುಸ್ತಕಗಳ ಪ್ರಸ್ತಾಪ ಬಂದಿದ್ದು* ಸಂಬಂಧಪಟ್ಟ ಪ್ರಕಾಶಕರನ್ನು ಕರೆದು ಎಚ್ಚರಿಕೆ ಕೊಡಲಾಯಿತಂತೆ. ಆಗ ಒಬ್ಬ ಪ್ರಕಾಶಕನು ತನ್ನ ಪುಸ್ತಕದ ಎಲ್ಲ ಪ್ರತಿಗಳನ್ನು ಕಚೇರಿಗೆ ಹಾಜರುಪಡಿಸಿದನೆಂದೂ, ಇನ್ನೊಬ್ಬನು ಹಾಗೆ ಮಾಡದ್ದರಿಂದ ಅವನ ಮೇಲೆ ಸರಕಾರೀ ವಕೀಲನ ಮುಖಾಂತರ ಕೇಸು ನಡೆಸಲಾಗಿದೆಯೆಂದೂ ವರದಿಯಲ್ಲಿ ಕಾಣಿಸಲಾಗಿದೆ. ಗ್ರಂಥ ವಿಷಯಕ ಕಾಯ್ದೆಯ ಕಾರ್ಯಾಚರಣೆಗೆ ಇದೊಂದು ನಿದರ್ಶನ.

ಎಚ್.ಜೆ. ಭಾಭಾರವರ ನಿರ್ದೇಶನದಲ್ಲಿ ಮೈಸೂರು ಸರಕಾರದ ಕನ್ನಡ ಭಾಷಾಂತರಕಾರರಾಗಿದ್ದ ಆರ್. ನರಸಿಂಹಾಚಾರ್ಯರು ಇಂಥ ಸಮೀಕ್ಷೆಯ ಕೆಲಸವನ್ನು ಕೈಗೆತ್ತಿಕೊಂಡಂದಿನಿಂದ ನಮಗೆ ಆಗಿನ ಕೃತಿಗಳ ಮೌಲ್ಯಮಾಪನವೂ ದೊರೆಯುತ್ತದೆ. ಹೊಸಗನ್ನಡ ಸಾಹಿತ್ಯದಲ್ಲಿಯ ನವೀನ ಪ್ರಯೋಗಗಳನ್ನು ಕಣ್ಣಿಟ್ಟು ಗುರುತಿಸಿದ ಅವರ ಆಧುನಿಕ ದೃಷ್ಟಿಕೋಣವನ್ನು ೧೮೯೩ರ ಅನಂತರದ ಕೆಲವು ವರ್ಷಗಳ ವರದಿಯಲ್ಲಿ ನಾವು ವಿಶೇಷವಾಗಿ ಕಾಣುತ್ತೇವೆ. ( ಈ ವರದಿಗಳ ಮಾದರಿಯೆಂದು ಅನುಬಂಧ ೨ ನೋಡುವುದು )

## ೨೨೨ ಗ್ರಂಥ ಪ್ರಸಾರ

ಇಂದಿನ ಕನ್ನಡ ಗ್ರಂಥೋದ್ಯಮವನ್ನು ನೂರು ವರ್ಷಗಳ ಹಿಂದಿನದಕ್ಕೆ ಹೋಲಿಸಬಹುದು. ಆವಾಗಲೂ ಒಂದು ಪುಸ್ತಕದ ೫೦೦ ಇಲ್ಲವೆ ಒಂದು ಸಾವಿರ, ಹೆಚ್ಚೆಂದರೆ ಎರಡು ಸಾವಿರ ಪ್ರತಿಗಳನ್ನು ಮುದ್ರಿಸುತ್ತಿದ್ದರು. ಹಿಂದಿನ ಕಲ್ಲಚಿನ ಮುದ್ರಣವು ಮಾತ್ರ ನಿಂತಿದೆ. ಇಂದು ಕ್ರೌನ ೧/೮ ಪುಸ್ತಕಾಕಾರವು ಹೆಚ್ಚು ಜನಪ್ರಿಯವಾಗಿದ್ದರೆ ಆ ಕಾಲಕ್ಕೆ ಡೆಮಿ ೧/೮ ಆಕಾರವನ್ನು ಲೇಖಕ, ಪ್ರಕಾಶಕರು ಹೆಚ್ಚಾಗಿ ನೆಚ್ಚಿದ್ದರು. ಆ ಕಾಲದಲ್ಲಿ ಇಂದಿನಂತೆ ಕಾದಂಬರಿ, ಸಣ್ಣ ಕತೆ, ನಾಟಕ ಪುಸ್ತಕಗಳು ಅಧಿಕವಾಗಿ

---

* ಅವುಗಳ ಹೆಸರನ್ನು ವರದಿಯಲ್ಲಿ ಕೊಟ್ಟಿಲ್ಲ. ಬಹುಶಃ ಅಶ್ಲೀಲವೆನಿಸುವಂಥ ಲಾವಣಿ/ ದುಂದುಮೆ ಪದಗಳಿರಬಹುದೆಂದು ತೋರುತ್ತದೆ.

ಇರಲಿಲ್ಲವಾದರೂ ಧಾರ್ಮಿಕ, ಸಾಹಿತ್ಯಿಕ ಪುಸ್ತಕಗಳಿಗೆ ಆವಾಗ ಇದ್ದ ಮಹತ್ವಕ್ಕೂ ಇಂದಿನದಕ್ಕೂ ಅಂತರವಿಲ್ಲ.

ಅಚ್ಚಿನ ಮೊಳೆಗಳ ಬಳಕೆಯಲ್ಲಿ ಇಂದು ವೈವಿಧ್ಯವೇನೋ ಇದೆ. ಆದರೆ ಆ ಕಾಲದ ಲಿಪಿವಿನ್ಯಾಸದ ಉತ್ತಮಿಕೆಯನ್ನು ಮೀರಿಸುವಂತಹ ಹೊಸ ತರಹದ ಮೊಳೆಗಳು ಇಂದಿಗೂ ನಿರ್ಮಿತವಾಗಿಲ್ಲ. ಮುದ್ರಣದ ಸೊಗಸು, ಅಚುಕಟ್ಟುತನ ಇವುಗಳ ವಿಚಾರದಲ್ಲಿ ೧೯ನೆಯ ಶತಮಾನದ ಅನೇಕ ಪುಸ್ತಕಗಳು ಇಂದಿನವಕ್ಕೆ ಸಾಟಿಯಾಗಿ ನಿಲ್ಲಬಲ್ಲುವಾಗಿವೆ. ಮುಂಬಯಿ ಕರ್ನಾಟಕದ ಅಚ್ಚುಕೂಟಗಳು ಮಾತ್ರ ಹಿಂದುಳಿದಿದ್ದವು. ವಿಶೇಷತಃ ಬಾಸೆಲ್, ವೆಸ್ಲಿಯನ್ ಮಿಶನ್‌ಗಳ ಮುದ್ರಣಕ್ಕೆ ಹೋಲಿಸಿದಾಗ, ಅವುಗಳ ನಿಕೃಷ್ಟ ಸ್ಥಿತಿಯು ಎದ್ದು ಕಾಣುತ್ತಿದ್ದಿತು. ಅಂತೆಯೇ ಕಿಟೆಲ್ "The lithographs from Dharavada simply ruin the eyes" ಎಂದು ಉದ್ಗಾರವೆತ್ತಿದ್ದಾರೆ.[೧೧] ಆ ಪ್ರದೇಶದ ಲೇಖಕರಿಗೂ ಇದರ ಪ್ರಜ್ಞೆ ಇದ್ದಿತು. ಅಂತೆಯೇ ಉತ್ತಮ ಮುದ್ರಣ ಬೇಕೆಂದವರು (ಉದಾ. ವೆಂಕಟ ರಂಗೋ ಕಟ್ಟಿ, ರಾ.ಹ. ದೇಶಪಾಂಡೆ) ಮಂಗಳೂರಿಗೆ, ಕೆಲವು ಸಲ ಬೆಂಗಳೂರಿಗೆ, ಸಹಿತ ಹೋಗುತ್ತಿದ್ದರು. ಅಂಥ ಪರಿಸ್ಥಿತಿಯು ೨೦ನೆಯ ಶತಮಾನದ ಆರಂಭದಲ್ಲಿಯೂ ಮುಂದುವರಿದಾಗ ಧಾರವಾಡದ 'ವಾಗ್ಭೂಷಣ' ಪತ್ರಿಕೆಯ ಸಂಪಾದಕರು ಈ ಕೆಳಗಿನಂತೆ ಬರೆಯಬೇಕಾಗಿ ಬಂದಿತು:

"ಇಲ್ಲಿಯ ಮುದ್ರಣಾಲಯಗಳಿಗೆ ಕೆಲಸವೂ ಇದೆ. ದುಡ್ಡೂ ಬರುತ್ತದೆ. ಆದರೂ ಎಡತಾಕಿಸುತ್ತಾರೆ (ಅಕ್ಕಸಾಲಿ, ಶಿಂಪಿಗರಂತೆ). ಆದರೂ ಅಭಿವೃದ್ಧಿ ಇಲ್ಲ. ಮೈಸೂರು, ಬೆಂಗಳೂರು, ಮಂಗಳೂರುಗಳಲ್ಲಿ ಇದ್ದ ಅಭಿವೃದ್ಧಿ ಇಲ್ಲಿ ಏಕೆ ಇಲ್ಲ? ಪುಸ್ತಕ ಪ್ರಕಾಶಕರಿಗೆ ಉತ್ತಮವಾದ ಕೆಲಸವನ್ನು ಮಾಡಿಸಬೇಕೆಂಬ ವಿಚಾರ ಬಂದಾಗೆಲ್ಲ ಮಂಗಳೂರ ಕಡೆಗೆ ಮನಸ್ಸು ಹೋಗುವ ರೀತಿಯು ಇನ್ನೂ ಎಷ್ಟು ದಿವಸಗಳ ವರೆಗೆ ನಡೆಯಬೇಕು?"[೧೨]

ಇಂದಿನಂತೆಯೇ ಅಚ್ಚಿನ ದೋಷಗಳು ಇಲ್ಲದೇ ಇರುವ, ಅದರಂತೆ ಸಾಕಷ್ಟು ಪ್ರಮಾಣದಲ್ಲಿ ಇದ್ದಿರುವ ಪುಸ್ತಕಗಳು ಆಗೂ ಹೊರಡುತ್ತಿದ್ದುವು. ಒಪ್ಪೋಲೆಯೂ 'ವಾಚಕರು ಸುಧಾರಿಸಿಕೊಂಡು ಓದಬೇಕು' ಎಂಬ ವಿನಂತಿಯೂ ಯಥಾಪ್ರಕಾರ ಇರುತ್ತಿದ್ದುವು. ಧಾರಾವಾಹಿಯಾಗಿ ಪುಸ್ತಕಗಳನ್ನು ಪ್ರಕಟಿಸುತ್ತಿದ್ದ 'ಕರ್ನಾಟಕ ಗ್ರಂಥಮಾಲಾ' ಪತ್ರಿಕೆಯವರು ಅಚ್ಚಿನ ದೋಷಗಳನ್ನು ಕಂಡುಹಿಡಿಯುವ ನೂತನ ಕ್ರಮವೊಂದನ್ನು ರೂಢಿಸಿ ಒಪ್ಪೋಲೆಯನ್ನು ಸಿದ್ಧಪಡಿಸುವ ತಮ್ಮ ಶ್ರಮವನ್ನು ಉಳಿಸಿಕೊಂಡಿದ್ದರು! ತಮ್ಮ ಪತ್ರಿಕೆಯ ಮೊದಲ ವರ್ಷದ ೩ನೆಯ ಸಂಚಿಕೆಯಲ್ಲಿ (ಸೆಪ್ಟೆಂಬರ್ ೧೮೯೩) ಅವರು ಕೊಟ್ಟಿದ್ದ ಪ್ರಕಟನೆ ಇಂತಿದೆ:

"ಕರ್ನಾಟಕ ಗ್ರಂಥಮಾಲೆ,+ಪ್ರೈಜ್‌ಕೂಪನ್ – ಈ ಸಂಚಿಕೆಯಲ್ಲಿರುವ ಅಕ್ಷರ ತಪ್ಪುಗಳನ್ನು ಯಾರು ತೋರಿಸುತ್ತಾರೋ ಅವರಿಗೆ ೨ ರೂಪಾಯಿ ಬಹುಮಾನವನ್ನು

ಕೊಡಲು ನಿಶ್ಚೈಸಿರುತ್ತೇವೆ. ಅಂಥಾ ತಪ್ಪುಗಳನ್ನು ಈ ಕೆಳಗಿನ ಫಾರಮಿನಲ್ಲಿ ಬರೆದು, ಅದನ್ನು ಕತ್ತರಿಸಿ, ಕವರಿನಲ್ಲಿಟ್ಟು ಆ ಕವರಿನಮೇಲೆ 'ಪ್ರೈಜ್' ಎಂದು ಬರೆದು, ಗ್ರಂಥಮಾಲೆಯ ಮ್ಯಾನೇಜರರಿಗೆ ಅಕ್ಟೋಬರ ೫ನೇ ತಾರೀಖಿನ ಒಳಗಾಗಿ ಕಳುಹಿಸಬೇಕು. ೬ನೇ ತಾರೀಖಿನ ದಿವಸ ನಮ್ಮಲ್ಲಿಗೆ ಬಂದ ಕವರುಗಳನ್ನೆಲ್ಲಾ ಸೇರಿಸಿ, ಯಾರ ಕವರನ್ನು ಮೊದಲು ಒಡೆಯುತ್ತೇವೆಯೋ ಅವರಿಗೆ ಮೇಲೆ ಹೇಳಿದ ಬಹುಮಾನವನ್ನು ಕಳುಹಿಸುತ್ತೇವೆ. ತಪ್ಪುಗಳನ್ನು ಕೆಳಗಿರುವ ಫಾರಮಿನಲ್ಲಿ ಬರೆಯಬೇಕು."

ಹಾಗೆ ಬಂದ ಅಚ್ಚಿನ ದೋಷಗಳನ್ನು ಒಟ್ಟುಗೂಡಿಸಿ, ಪಟ್ಟಿಮಾಡಿ, ಪುಸ್ತಕ ರೂಪದಲ್ಲಿ ಆ ಗ್ರಂಥವು ಸಿದ್ಧವಾದಾಗ ಅದಕ್ಕೆ ಒಪ್ಪೋಲೆಯನ್ನು ಜೋಡಿಸಿಬಿಡುವ ಹವಣು ಈ ಉಪಕ್ರಮದ ಹಿಂದೆ ಇತ್ತೆಂದು ಕಾಣುತ್ತದೆ.

ಕಾಗದದ ಬಗ್ಗೆ ಹೇಳುವುದಾದರೆ, ಮಿಶನರಿ ಮತ್ತು ಸರಕಾರೀ ಮುದ್ರಣಾಲಯಗಳು ವಿದೇಶಗಳಿಂದ ಆಯಾತ ಮಾಡಿದ ಕಾಗದವನ್ನು ಬಳಸುತ್ತಿದ್ದರಾದ್ದರಿಂದ ಅವು ಉತ್ತಮವಾಗಿದ್ದು ಬಹು ಕಾಲ ಉಳಿದುಕೊಂಡು ಬಂದಿವೆ. ದೇಶೀ ಅಚ್ಚುಕೂಟದವರು ಬಳಸುತ್ತಿದ್ದುದು ಹೆಚ್ಚಾಗಿ ತೆಳ್ಳನೆಯ, ಉರುಟಾಗಿದ್ದ ಹಳದಿ ಬಣ್ಣದ ಕಾಗದ. ಇದನ್ನು ಕೋರಿ ಚಿಂದಿಗಳಿಂದ ನಾಡಿನಲ್ಲಿಯೇ ತಯಾರಿಸಲಾಗುತ್ತಿತ್ತು. ಉತ್ತರ ಕರ್ನಾಟಕದಲ್ಲಿ ಇದು ಕೋರೀ ಕಾಗದವೆಂದೇ ಪರಿಚಿತವಾಗಿದೆ. ಮುಖಪುಟದಲ್ಲಿ ಬಣ್ಣದ ಚಿತ್ರವಾಗಲೀ ಬಣ್ಣದ ಮುದ್ರಣವಾಗಲೀ ಸಾಮಾನ್ಯವಾಗಿ ಇರುತ್ತಿರಲಿಲ್ಲ. ಒಳಗಿನ ಮೊದಲ ಪುಟವಾದರೂ ಆಕರ್ಷಣೀಯವೇನಲ್ಲ. ಶೀರ್ಷಿಕೆಯು ದೀರ್ಘವಾಗಿರುವ ಸಂದರ್ಭಗಳೂ ಅನೇಕವಾಗಿದ್ದುವು.*

ಗ್ರಂಥಪ್ರಸಾರವು ಇಂದಿನಕ್ಕಿಂತ ಆಗ ಕಡಿಮೆಯದಿತ್ತು ಎಂದೇನಲ್ಲ. ಉತ್ತಮ ಕೃತಿಗಳ ಅಥವಾ ಜನ–ಬೇಡಿಕೆಯ ಕೃತಿಗಳ ೨ನೇ, ೩ನೇ ಮುದ್ರಣಗಳು ಆಗಲೂ ಕಂಡುಬರುತ್ತವೆ. ಸಾಹಿತ್ಯದ ಮೇಲಿನ ಅಭಿರುಚಿಯಿಂದ, ಕನ್ನಡಾಭಿಮಾನದಿಂದ ಪುಸ್ತಕಗಳನ್ನು ಕೊಂಡುಕೊಳ್ಳುವವರು ಗಣನೀಯ ಸಂಖ್ಯೆಯಲ್ಲಿ ಇದ್ದರು.

ಆಗಿನ ಗ್ರಂಥ ಪ್ರಕಾಶನದ ಒಂದು ವೈಶಿಷ್ಟ್ಯವೆಂದರೆ, ಲೇಖಕರು ತಮ್ಮ ಕೃತಿರಚನೆಯಾದ ಮೇಲೆ, ಅದರ ಮುದ್ರಣದ ವೆಚ್ಚವನ್ನು ವಹಿಸಬಹುದಾದ ಸ್ನೇಹಿತರನ್ನೊ ಸಾಹಿತ್ಯ ಪ್ರೇಮಿಗಳನ್ನೊ ಅರಸಿಕೊಂಡು ಹೋಗುತ್ತಿದ್ದ ಪ್ರಸಂಗಗಳು ಅನೇಕವಿವೆ. ಈ ರೀತಿ ಹಣ ಕೊಟ್ಟವರಿಗೆ ಲೇಖಕನು ಆ ಪುಸ್ತಕದ ಕಾಪಿರೈಟನ್ನು ಸಲ್ಲಿಸುತ್ತಿದ್ದನು.

---

* ಇದೊಂದು ಮಾದರಿ:

'ಅಪಘಾತಗಳು ಮತ್ತು ಹಾನಿಗಳು ಇವುಗಳ ವಿಷಯದಲ್ಲಿ ತಾತ್ಕಾಲ ಮತ್ತು ಸಾಧಾರಣವಾಗಿ ಮಾಡತಕ್ಕ ಉಪಾಯಗಳು – ಈ ವಿಷಯದ ಮೇಲೆ ಒಂದು ಚಿಕ್ಕ ಪುಸ್ತಕ.'

'ಶ್ರೀ.....ಇವರಿಗೋಸ್ಕರ ಮುದ್ರಿಸಲ್ಪಟ್ಟಿತು' ಎಂಬುದಾಗಿ ಅವರ ಹೆಸರಿನ ಉಲ್ಲೇಖವಿರುತ್ತಿತ್ತು. ಎ. ನಂಜುಂಡಯ್ಯ ಬರೆದ 'ಹಿಂದೂದೇಶ ಚರಿತ್ರ ಬೋಧಿನಿ' ಪುಸ್ತಕಕ್ಕೆ (೧೮೮೮) ಮ. ಸೂರಶಾಸ್ತ್ರಿ ಎಂಬವನು ಸಹಾಯ ಸಲ್ಲಿಸಿದ್ದರಿಂದ ಶಾಸ್ತ್ರಿಯ ಹೆಸರನ್ನು ಆ ರೀತಿಯಲ್ಲಿ ಹಾಕಲಾಯಿತು. ಇಬ್ಬರೂ ಮೈಸೂರು ಸಂಸ್ಥಾನದಲ್ಲಿ ಸರಕಾರೀ ನೌಕರರಾಗಿದ್ದರು.[೧೩]

ಈ ವ್ಯವಹಾರದಲ್ಲಿ ಎಲ್ಲಿಯೋ ಹೆಚ್ಚು ಕಡಿಮೆಯಾಯಿತೆಂದು ತೋರುತ್ತದೆ. ಏಕೆಂದರೆ ಆ ಪುಸ್ತಕದಲ್ಲಿ ಒಂದೆಡೆ ಇದರಡಿ ಮ. ಸೂರಶಾಸ್ತ್ರಿಗಳ ಕೈ ರುಜುವಿಲ್ಲದ ೨ನೇ ಛಾಪೆ 'ಒಂದೂ ಚರಿತ್ರ ಬೋಧಿನಿ' ಪುಸ್ತಕವನ್ನು ಇಟ್ಟುಕೊಂಡಿರತಕ್ಕವರು[೧೩] ಕಳುವಿನ ಛಾರ್ಜಿಗೆ ಗುರಿಯಾಗುತ್ತಾರೆ' ಎಂಬ ಮುದ್ರಿತ ಉಲ್ಲೇಖವಿದೆ.

ಪುಸ್ತಕಗಳ ಮಾರಾಟದ ಸ್ಥಿತಿ–ಗತಿ? ಇಂದಿನದಕ್ಕೂ ಹಿಂದಿನದಕ್ಕೂ ಕೆಲವೊಂದು ವ್ಯತ್ಯಾಸಗಳಿವೆ. ಅಂದು ಸಾಮಾನ್ಯ ಸ್ವರೂಪದ ಪುಸ್ತಕಗಳನ್ನು ಓದಬೇಕೆಂದು ಕೊಳ್ಳುವವರ ಸಂಖ್ಯೆ ಕಡಿಮೆಯಿದ್ದಿತಾದರೂ, ಸ್ಪಷ್ಟವಾಗಿ ಅವರನ್ನು ಗುರುತಿಸಬಹುದಾಗಿದ್ದಿತು. ತಮ್ಮಲ್ಲಿ ಮಾರಾಟಕ್ಕಿದ್ದ ಇಲ್ಲವೆ ಪ್ರಕಟಪಡಿಸಿದ ಪುಸ್ತಕಗಳ ಬೆಲೆಪಟ್ಟಿ ಬೇಕಿದ್ದರೆ ಅದರ ಅಂಚೆ ವೆಚ್ಚವನ್ನು (ಸ್ಟಾಂಪುಗಳನ್ನು) ಗ್ರಾಹಕರು ಕಳಿಸಬೇಕೆಂಬ ಸೂಚನೆ ಇದ್ದಿತು. ಪುಸ್ತಕಗಳನ್ನು ಒಮ್ಮೆ ಆರ್ಡರ್ ಮಾಡಿದಲ್ಲಿ, ಗ್ರಾಹಕರು ಕೆಲಮೊಂದು ರಕಮನ್ನು (೧/೪ ಬೆಲೆಯನ್ನು) ಮುಂಗಡ ಕಳಿಸಬೇಕೆಂದು, ಧಾರವಾಡದ ಶಂಕರ ಕರ್ನಾಟಕ ಪುಸ್ತಕ ಭಂಡಾರದವರು ಕೇಳಿದ್ದುಂಟು. ಪುಸ್ತಕ ರವಾನೆಗೆ ತಗಲುವ ಅಂಚೆ ವೆಚ್ಚವನ್ನು ಪ್ರತ್ಯೇಕವಾಗಿ ಕಾಣಿಸುವುದು ನಡೆಯಬೇಕಾದದ್ದೇ ಎಂಬ ಗ್ರಹಿಕೆ ಇದ್ದಿತು. ಎಲ್ಲ ಕಡೆಯಲ್ಲಿಯೂ ಮೇಲೆ ವಿವರಿಸಿದ ಮಾರಾಟ ಕ್ರಮ ಇದ್ದಿತೆಂದೇನೂ ತಿಳಿಯಬಾರದು. ಪುಸ್ತಕ ವ್ಯವಸಾಯದಲ್ಲಿಯ ವ್ಯವಹಾರವು ನೇರವೂ ಸರಳವೂ ಆಗಿನ ಕಾಲದಲ್ಲಿ ಇದ್ದಿತೆಂಬುದನ್ನು ಮಾತ್ರ ಒಪ್ಪತಕ್ಕುದು.

ಇತ್ತ ಪ್ರಕಾಶಕರು/ಲೇಖಕರು ಸಲ್ಲಿಸಿದ ಪುಸ್ತಕಗಳನ್ನು ಪರಿಶೀಲಿಸಿ, ಸರಕಾರದ ವಿದ್ಯಾಖಾತೆಯು, ಶಾಲೆಗಳೂ ಲೈಬ್ರರಿಗಳವರೂ ಕೊಳ್ಳಬಹುದೆಂದು ಶಿಫಾರಸು ಮಾಡುವ ಕ್ರಮವಿದ್ದಿತು. ಪ್ರಕಾಶಕರು ಅದನ್ನು ಪುಸ್ತಕದ ಒಂದು ಒಳಪುಟದಲ್ಲಿ ಮುದ್ರಿಸುತ್ತಿದ್ದರು. ಅದರ ಬೆಂಬಲದಿಂದ ಪ್ರಕಾಶಕರೇ ವಿದ್ಯಾ ಸಂಸ್ಥೆಗಳನ್ನು ಸಂಪರ್ಕಿಸುತ್ತಿದ್ದರು. ಮೈಸೂರ ಸರಕಾರದ ೧೯೦೨ – ೧೯೦೩ರ ವರದಿಯಲ್ಲಿ, ಆ ವರ್ಷ ೩೧ ಜನ ಲೇಖಕರನ್ನು ಪೋಷಿಸಿ, ರೂ. ೩೩೫೮ ಗಳನ್ನು ವೆಚ್ಚ ಮಾಡಿತಂತೆ. (ಅದರ ಹಿಂದಿನ ವರ್ಷದ ಮೊತ್ತ (ರೂ. ೨೩೩೪'). ಆ ರೀತಿಯ ಪುಸ್ತಕ ಪ್ರಸರಣಕ್ಕೂ 'ಬಲ್ಕ್ ಪರ್ಚೇಸ್'

* ಈ ವ್ಯವಹಾರದಲ್ಲಿ ಎಲ್ಲಿಯೋ ಹೆಚ್ಚು ಕಡಿಮೆಯಾಯಿತೆಂದು ತೋರುತ್ತದೆ. ಏಕೆಂದರೆ ಆ ಪುಸ್ತಕದಲ್ಲಿ ಒಂದೆಡೆ ಇದರಡಿ ಮ.ಸೂರಶಾಸ್ತ್ರಿಗಳ ಕೈ ರುಜುವಿಲ್ಲದ ೨ನೇ ಛಾಪೆ 'ಹಿಂದೂ ಚರತ್ರ ಬೋಧಿನಿ' ಪುಸ್ತಕವನ್ನು ಇಟ್ಟುಕೊಂಡಿರತಕ್ಕವರು ಕಳುವಿನ ಛಾರ್ಜಿಗೆ ಗುರಿಯಾಗುತ್ತಾರೆ ಎಂದು ಮುದ್ರಿತ ಉಲ್ಲೇಖವಿದೆ.

ಮೂಲಕ ೩೦೦–೪೦೦ ಪ್ರತಿಗಳನ್ನು ಕೊಟ್ಟುಬಿಟ್ಟು ಕೈತೊಳೆದುಕೊಳ್ಳುವುದಕ್ಕೂ ಅಂತರವಿದೆಯಲ್ಲವೆ?

ಇದನ್ನುಳಿದು ಬೇರೆ ಕಡೆಯಿಂದಲೂ ಪುಸ್ತಕಗಳ ಬಹು ಸಂಖ್ಯೆಯ ಮಾರಾಟ ನಡೆಯುತ್ತಿದ್ದಿತು. ವಿಶೇಷತಃ ಸಂತೆ, ಜಾತ್ರೆ, ಮತ್ತಿತರ (ಧಾರ್ಮಿಕ) ಉತ್ಸವ ಕಾಲದಲ್ಲಿ ಪುಸ್ತಕಗಳ ದೊಡ್ಡ ಬಂಡಲ್ ಒಯ್ಯುವುದು; ಹಳ್ಳಿಗಳಿಂದ ಬಂದವರು ೧೦. ೨೦ ಪ್ರತಿಗಳನ್ನು ಕೊಂಡು ಒಯ್ಯುವುದು—ಇನ್ನೊಂದು ಮಾರಾಟದ ರೀತಿ – ಎನ್ನಬೇಕು. ಆದರೆ ಇವೆಲ್ಲ ಪುಸ್ತಕಗಳು ನಿತ್ಯೋಪಯೋಗೀ, ಇಲ್ಲವೆ ಧಾರ್ಮಿಕ ಸ್ವರೂಪದವಿರುತ್ತಿದ್ದವು.

ದೊಡ್ಡ ಮೊತ್ತದ ಪುಸ್ತಕ ವಿಕ್ರಯದ ಒಂದು ವಿನೂತನ, ವಿಶಿಷ್ಟ ಯೋಜನೆ ರೂಪಗೊಂಡದ್ದನ್ನು ಇಲ್ಲಿ ದಾಖಲಿಸುವ ಹಾಗಿದೆ. ಆ ಪುಸ್ತಕದ ಹೆಸರು 'ಮಂಟೂರ ಪದ' ಬರೆದವ ಕಿತ್ತೂರ ಶಾಲೆಯ ಬಸಯ್ಯ (೧೯೦೨). ವಿಷಯ? ಅಂಕಲಗಿಯ ಅಡವೀಸ್ವಾಮಿಗಳನ್ನು ಕುರಿತದ್ದು.

ಒಂದು ದಿನ (ಕ್ರೋಧಿ ಸಂವತ್ಸರದ ಯುಗಾದಿ ದಿನ) ಇಲ್ಲಿಯ (ಮಂಟೂರಿನ) ಸಭ್ಯಗೃಹಸ್ಥರ ಸಮಕ್ಷಮ ಚೀಟಗಳನ್ನು ಎತ್ತಲಾಗುವುದು, ಯಾವ ನಂಬರುಗಳಿಗೆ ಬಹುಮಾನ ಬರುವುದೊ, ಅವರುಗಳಿಗೆ ಒಟ್ಟಿನಲ್ಲಿ ೩ ಸಾವಿರ ರೂ.ಗಳ ವರೆಗೆ ಹಣ ಸಲ್ಲಿಸಲಾಗುವುದು. ಬಹುಮಾನದಲ್ಲಿ ಏಳು ತರಗತಿಗಳಿದ್ದು ೩ ಸಾವಿರ ರೂ.ಗಳನ್ನು ೧೫೨೦ ಚೀಟಗಳಿಗೆ ೧ ರೂ.ನಿಂದ ೫೦೦ ರೂ.ಗಳವರೆಗೂ ಅದರ ಸಲ್ಲಿಕೆ. ಬಹುಮಾನಿತರಿಗೆ ಅಂಚೆ ಮೂಲಕ ತಿಳಿಸುವ ವ್ಯವಸ್ಥೆ. ಟಿಪ್ಪಣಿ: ೧೦ ಪುಸ್ತಕಗಳನ್ನು ಒಮ್ಮೆಲೆ ಕೊಳ್ಳುವವರಿಗೆ ಒಂದು ಪುಸ್ತಕ ಉಚಿತ, ಇತ್ಯಾದಿ. (ಒಟ್ಟಿನಲ್ಲಿ ಇಂದಿನ ಲಾಟರಿಯ ಸ್ವರೂಪವೇ ಇಲ್ಲಿದೆ. ಆದರೇನು, ಅಷ್ಟೊಂದು ಪ್ರತಿಗಳು ಮಾರಾಟವಾಗುವವಲ್ಲವೆ?.)

ಪುಸ್ತಕವೊಂದರ ಮಾರಾಟದಲ್ಲಿ ಎಲ್ಲ ಕಾಲಕ್ಕೂ ಯಶಸಿಗುವುದೆಂದೇನೂ ಅಲ್ಲ. ಮೌಲಿಕ ಗ್ರಂಥ ಇರಬಹುದು; ಆದರೆ ಪ್ರಸರಣದ ಪ್ರಯತ್ನ ಸಾಲದೆ ಹೋಗಬಹುದು ಅಥವಾ ಎರಡನೆಯದ್ದೇ ಮೇಲುಗೈಯಾಗಿ ಸಾಮಾನ್ಯ ಮಟ್ಟದ ಪುಸ್ತಕವೊಂದು ಬೇಗ ಎರಡನೆಯ ಆವೃತ್ತಿಯನ್ನು ಕಾಣಬಹುದು.

ಫಕೀರಪ್ಪ ಕರಡೀಗುಡ್ಡ ಉರ್ಫ ಭೂಮೀಶಕವಿ ಎರಡು ಪುಸ್ತಕಗಳನ್ನು ಬರೆದು, ಹಣ ಹಾಕಿ, ಮುದ್ರಿಸಿದಾಗಿನ ಅವರ ಅನುಭವವನ್ನು ಕೇಳೋಣ: ("ಈ ಭೂತಳದ ಮೇಲಣ ಪ್ರತಿ ಒಬ್ಬ ಮನುಷ್ಯನಲ್ಲಿ ಯಾವದಾದರೊಂದು ವಿಧದ ವ್ಯಸನವು ಇರುತ್ತದೆ.....! ನನ್ನಲ್ಲಿದ್ದಂತೆ! ರಚನಾ ವ್ಯಸನವು ಪೂರ್ಣವಾಗಿ ನೆಲೆಗೊಂಡದ್ದರಿಂದ ನನಗೆ ಭೂಮೀಶನು ಕರುಣೆಯಿಂದ ಕೊಟ್ಟ ಬುದ್ಧಿಯನವಲಂಬಿಸಿ ನಾನು ಈ ಕೃತಿಯನ್ನು (ಹರಲೀಲಾಮೃತಸಾರ) ರಚಿಸಿದ್ದೇನೆ. ಈ ಗ್ರಂಥವು ಪುನರಾವೃತ್ತಿ ಮುದ್ರಿಕೆಯನ್ನು

ಕಾಂಬುವ ಹಣೆಯ ಬರಹವನ್ನುಳ್ಳದ್ದು ಇದ್ದರೆ, ಸೂಜ್ಞರು ತೋರಿಸಿದ ದೋಷಗಳನ್ನೆಲ್ಲ ತ್ಯಜಿಸಿ ಮುದ್ರಿತ ಮಾಡುವೆನು."

"ಈ ಗ್ರಂಥಕ್ಕೆ ವ್ಯಾಳ್ಯದಲ್ಲಿ ಎಷ್ಟು ಆಶ್ರಯ ದೊರಿಯುವದೆಂಬುವದು. ಈ ಮೊದಲೇ ನಾನು ರಚಿಸಿ ಮುದ್ರಿಸಿದ 'ಬರಗಾಲ ವರ್ಣನೆ' ಎಂಬ ಹೆಸರಿನ ಇಪ್ಪತ್ತೈದು ಭಾಮಿನಿ ಷಟ್ಪದಿಗಳುಳ್ಳ ಬರೀ ಒಂಭತ್ತು ಪೈ ಕ್ರಯದ ಐನೂರು ಪ್ರತಿಗಳಲ್ಲಿ ಒಂದು ನೂರು ಪ್ರತಿಗಳು ನನ್ನ ಪೂರ್ವಜರ ಪುಣ್ಯದಿಂದ ಖರ್ಚಾದ ದುಃಖದ ಪರಿಣಾಮದ ಮೇಲಿಂದಲೇ ನಾನು ಶಿದ್ಧ ಮಾಡಿಕೊಂಡಿದ್ದೇನೆ!"

ಅನೇಕ ಲೇಖಕರು ತಮ್ಮ ಕೃತಿಯನ್ನು ಪ್ರಕಟಿಸುವುದಿದ್ದಲ್ಲಿ ತಾವೇ ದುಡ್ಡು ಹಾಕುವುದು ಇಂದಿನ ಕ್ರಮ. ಆಗಣ ದಿನಗಳಲ್ಲಿ ಬಡ ಲೇಖಕರು ಹಣವಂತರ, ಉದಾರಿಗಳ ಸಹಾಯವನ್ನು ಬೇಡುತ್ತಿದ್ದರು. ವಿಶೇಷವೆಂದರೆ ಆ ರೀತಿ ನೆರವಾದವರ ಹೆಸರನ್ನು ಪುಸ್ತಕದ ಶೀರ್ಷಿಕಾ ಪುಟದಲ್ಲಿಯೇ ಹಾಕುತ್ತಿದ್ದರು.

ಇದು ೧೮೯೩ರ ಒಂದು ಪುಸ್ತಕದಲ್ಲಿಯ ಒಕ್ಕಣೆ: 'ಹೊನ್ನಾಳಿ ಎ.ವಿ. ಸ್ಕೂಲ್ ಹೆಡ್‌ಮಾಸ್ಟರ್, ಕೆ. ರಾಮಸ್ವಾಮಯ್ಯಂಗಾರ್‌ರಿಂದ ರಚಿಸಲ್ಪಟ್ಟು, ಪ್ಲೀಡರ್ ಮ.ರಾ. ಹುಚ್ಚರಾಯರ ಸಹಾಯದಿಂದ ಪ್ರಕಟಿಸಲ್ಪಟ್ಟಿತು.'

ಶಾಂತಕವಿಗಳಂತೂ ತಮ್ಮೆಲ್ಲ ಕೃತಿಗಳಿಗೂ ಆರ್ಥಿಕ ಸಹಾಯವನ್ನು ಪಡೆದಿದ್ದರೆಂದರೆ ಸರಿಯಾದೀತು. ಆ ಪುಸ್ತಕಗಳ ಪ್ರಸ್ತಾವನೆಯಲ್ಲಿ ದಾನಿಗಳನ್ನು ತುಸು ಹೆಚ್ಚೇ ಹೊಗಳಿ ತಮ್ಮ ಕೃತಜ್ಞತೆಯನ್ನು ಸೂಚಿಸಿದ್ದಾರೆ. ಸ್ವತಹ ಬಸವಪ್ಪಶಾಸ್ತ್ರಿಗಳ ಕೃತಿಗೆ (ದಮಯಂತೀ ಸ್ವಯಂವರ) ಅಂಬಿಲ್ ನರಸಿಂಹಯ್ಯಂಗಾರರು ಸಹಾಯ ಮಾಡಿದ್ದ ಸ್ಪಷ್ಟ ನಿದರ್ಶನವಿದೆ. ಈ ಸಹಾಯದ ಇನ್ನೊಂದು ಪರಿ ಎಂದರೆ ಪುಸ್ತಕದ ಕಾಪಿರೈಟನ್ನು ಆ ಕೊಡುಗೈಯವರಿಗೇ ಕೊಟ್ಟುಬಿಡುತ್ತಿದ್ದುದು.

ಒಮ್ಮೊಮ್ಮೆ ದಾನಿಗಳು ತಾವಾಗಿಯೇ ಮುಂಬರುವುದುಂಟು. ಸಂದರ್ಭ? ಸ್ವಮತೀಯ ಪುಸ್ತಕಗಳನ್ನು ಬರೆದವರಿಗೆ. ಸೊಲ್ಲಾಪುರದ ವಾರದ ಮನೆತನದವರು 'ವೀರಶೈವ ಲಿಂಗೀ ಬ್ರಾಹ್ಮಣಧರ್ಮ ಗ್ರಂಥಮಾಲೆ'ಯನ್ನು ಆರಂಭಿಸಿ, ವೀರಮಾಹೇಶ್ವರ ಪುರಾಣ, ವಿರಕ್ತೋತ್ಪತ್ತಿ ಕ್ರಿಯಾಲಕ್ಷಣ ಮುಂತಾದ ಗ್ರಂಥಗಳ ಅನುವಾದ/ಸಂಪಾದನ ಮಾಡಲು ಜನಬೇಕು—ಎಂದು ಜಾಹಿರಾತು ಕೊಟ್ಟಿದ್ದರು. ಅದರ ಪ್ರಕಾರ 'ಇಚ್ಛುಕರು ಕನಿಷ್ಟ ಕನ್ನಡ ೬ನೇ ಇಯತ್ತೆ ಪಾಸಾಗಿರಬೇಕು. ಸಂಸ್ಕೃತ ಗೊತ್ತಿರಬೇಕು. ಪರೀಕ್ಷೆ ತಗೊಂಡು ಅವರವರ ಯೋಗ್ಯತಾನುಸಾರ ಸಂಬಳದ ನೇಮಕವಾದೀತು'.

ಪುಸ್ತಕ ವ್ಯವಸಾಯದ ವಿಚಾರವಾಗಿ ಗಣನೆಗೆ ತಂದುಕೊಳ್ಳಬೇಕಾದ ಒಂದು ಮಹತ್ವದ ಅಂಶವೆಂದರೆ ಆಗಿನ ಕಾಲದಲ್ಲಿ ಪ್ರಕಾಶನ/ಕ ಎಂಬುದು ಅಸ್ಪಷ್ಟವಾದ ಇಲ್ಲವೆ ಗೌಣ ವ್ಯವಸ್ಥೆಯಾಗಿದ್ದಿತು. ಎಂದರೆ ಮುದ್ರಣ, ಹಾಗೂ ಮುದ್ರಿತ ಪುಸ್ತಕದ

ಮಾರಾಟ ಇವೆರಡನ್ನು ಒಬ್ಬನೇ ವ್ಯಕ್ತಿ ಕೈಕೊಳ್ಳುವುದು ರೂಢವಾಗಿದ್ದಿತು. ಮತ್ತೆ ಅಂಥವರು ಆ ಕಾಲದಲ್ಲಿ ನೂರಿನ್ನೂರು ಜನರಾದರೂ ಕಂಡುಬರುವರು. ಅವರು ತಮ್ಮ ಸಮಗ್ರ ಜೀವನವನ್ನೇ ಈ ವ್ಯವಸಾಯದಲ್ಲೇ ಕಳೆದವರಾದರೂ, ವ್ಯವಹಾರದೃಷ್ಟಿಯೇ ಅವರಲ್ಲಿ ಪ್ರಧಾನವಾಗಿದ್ದರೂ, ಒಟ್ಟಿನಲ್ಲಿ ಗ್ರಂಥೋದ್ಯಮವನ್ನು ಉಳಿಸಿಕೊಂಡು ಬಂದರಲ್ಲದೆ ಬೆಳೆಯುವುದಕ್ಕೂ ಲೇಖಕ, ವಾಚಕರಿಬ್ಬರನ್ನೂ ಪೋಷಿಸುವುದಕ್ಕೂ ಕಾರಣರಾಗಿದ್ದರು. ಇಂಥವರು ಚರಿತ್ರಾರ್ಹರೇ; ಆದರೇನು ಯಾರೊಬ್ಬರ ಚರಿತ್ರೆಯೂ ದೊರೆಯದು! ಆ ಕಾರಣದಿಂದ, ಕೆಲವರ ಹೆಸರನ್ನಾದರೂ ಇಲ್ಲಿ ದಾಖಲಿಸತಕ್ಕುದು. ಆ ದಿನಗಳಲ್ಲಿಯೂ ಬೆಂಗಳೂರು ನಗರವು ಮುದ್ರಣ, ಅದರಂತೆ ಮಾರಾಟ ವಿಷಯವಾಗಿ, ಪ್ರಮುಖ ಸ್ಥಾನದಲ್ಲಿದ್ದಿತಾದ್ದರಿಂದ, ಪ್ರಾತಿನಿಧಿಕವಾಗಿ ಅಂಥ ಕೆಲವರ ಹೆಸರುಗಳನ್ನು ಈ ಕೆಳಗೆ ಕಾಣಿಸುವೆ. ಇವರೆಲ್ಲ ೧೮೬೦ರಿಂದ ೧೯೦೦ರವರೆಗಿನ ಅವಧಿಯಲ್ಲಿ ಹೆಚ್ಚು ಪ್ರಸಿದ್ಧಿ ಗಳಿಸಿದವರು.

ಹೊಳಕಲ್ಲು ನರಸಿಂಹಯ್ಯ (ವಿಚಾರದರ್ಪಣ ಪ್ರೆಸ್)
ವೆಲನಾಡು ಬಿ. ಸುಬ್ಬಯ್ಯ (ಮೈಸೂರು ಬುಕ್ ಡಿಪೊ ಪ್ರೆಸ್)
ವಾಜಪೇಯಿ ಕೃಷ್ಣಯ್ಯ (ಬೆಂಗಳೂರು ಬುಕ್ ಡಿಪೊ ಪ್ರೆಸ್)
ವಿ. ರಾಮಯ್ಯ (ಕರ್ನಾಟಕ ಬುಕ್ ಡಿಪೊ ಪ್ರೆಸ್)
ಎಂ. ರುದ್ರಪ್ಪ ಅಂಡ್ ಸನ್ಸ್ (ಚಾಮುಂಡೇಶ್ವರಿ ಪ್ರೆಸ್)
ಹರಿರಾಮ ಮಿಸರ (ಟೌನ್ ಪ್ರೆಸ್)

ಬೆಂಗಳೂರಿನ ಅನಂತರ, ಧಾರವಾಡ ಪಟ್ಟಣವೇ ಖಾಸಗೀ ಪುಸ್ತಕ ವ್ಯವಸಾಯದಲ್ಲಿ ಹೆಸರು ಮಾಡಿದ್ದಿತು. ಈ ವ್ಯವಸಾಯದ ಮಾರ್ಗಪ್ರವರ್ತಕನೆಂದು ಅನಾಡ ಚನವೀರಪ್ಪನ ಹೆಸರನ್ನು ಹೇಳಲೇಬೇಕು. ಉತ್ತರ ಕರ್ನಾಟಕದಲ್ಲಿ ಸಂತೆ, ಜಾತ್ರೆಗಳು ನಡೆಯುತ್ತಿದ್ದ ಯಮನೂರು ಉಳವಿ ಮುಂತಾದ ಊರುಗಳಿಗೆ ಹೋಗಿ ಪಂಚಾಂಗ, ಸಣ್ಣ ವಹಿ, ಸ್ತೋತ್ರ ಪುಸ್ತಕಗಳು, ಸರ್ವಜ್ಞನ ವಚನ ಮುಂತಾದವನ್ನು ಮಾರಾಟ ಮಾಡುತ್ತ ಸಾಮಾನ್ಯನಿಗೆ ಮುದ್ರಿತ ಪುಸ್ತಕಗಳ ಸವಿ ಹತ್ತಿಸಿದವನೇ ಈತ. ಮುಂದೆ 'ಕರ್ನಾಟಕ ಬುಕ್–ಡಿಪೊ ಪ್ರೆಸ್' ಎಂಬ ಹೆಸರಿನಿಂದ ೧೮೮೦ನೆಯ ದಶಕದಲ್ಲಿ ತನ್ನದೇ ಆದ ಪ್ರೆಸ್ ಹಾಕಿದ. ಉತ್ತರ ಕರ್ನಾಟಕದಲ್ಲಿ ಮೊಳೆಗಳ ಮುದ್ರಣವನ್ನು ಖಾಸಗಿಯಾಗಿ ಆರಂಭಿಸಿದವರಲ್ಲಿ ಇವನೇ ಮೊದಲಿಗನೆಂದು ತೋರುತ್ತದೆ. ಅವನು ಮುದ್ರಿಸಿ ಪ್ರಕಟಿಸಿದ ಮಹತ್ವದ ಪುಸ್ತಕಗಳಲ್ಲಿ ತುರಮರಿಯವರ 'ಶಬ್ದಮಂಜರಿ'ಯೂ ಒಂದಾಗಿದೆ. ಅದರ ಎರಡನೆಯ ಆವೃತ್ತಿಯಲ್ಲಿ ಕಾಣಿಸಿದ ಪ್ರಕಾರ, ಪ್ರಾಚೀನ ಗ್ರಂಥಗಳಲ್ಲಿನ ಭಾಷಾಸ್ವಾರಸ್ಯವನ್ನು ತಿಳಿದುಕೊಳ್ಳಲಿಕ್ಕೆಂದು ಸುಮಾರು ೪೫೦ ಪುಟಗಳ ಈ ಪುಸ್ತಕವನ್ನು ಪ್ರಕಟಿಸಿದ್ದರಲ್ಲಿ ಕಂಡುಬಂದ ಅವನ ಮೇಲ್ಮಟ್ಟದ ಅಭಿರುಚಿಯನ್ನು ಮೆಚ್ಚಬೇಕು. ಅವನ ಸಮಕಾಲೀನರಾಗಿ ತಂತಮ್ಮ ವ್ಯವಸಾಯವನ್ನು ನಡೆಸಿಕೊಂಡು ಹೋದ ಕಲ್ಯಾಣಪ್ಪ ಮಾದನ ಶೆಟ್ಟಿ,

ವಿಭೂತಿ ಹುಚ್ಚಯ್ಯ, ಗುರುರಾವ ಮಮದಾಪೂರ ಮೊದಲಾದವರನ್ನು ಪ್ರಾಸಂಗಿಕವಾಗಿ ಹೆಸರಿಸುತ್ತಿದ್ದೇವೆ.

ಲಾಭಾಂಶದ ದೃಷ್ಟಿಯಿಲ್ಲದೆ ಸೇವೆ ಎಂಬಂತೆ ಈ ವ್ಯವಸಾಯದಲ್ಲಿ ತೊಡಗಿದ್ದ ಖಾಸಗಿ ಸಂಸ್ಥೆಗಳನ್ನು ಸ್ಮರಿಸತಕ್ಕದ್ದು. ಇವುಗಳಾದರೂ ಮುದ್ರಣ – ಮಾರಾಟ ಎರಡನ್ನೂ ರೂಢಿಸಿಕೊಂಡು, ಮಧ್ಯೆ ಪ್ರಕಾಶನದ ಕಾರ್ಯವನ್ನು ನಡೆಸಿದವುಗಳು. ಕೆಲವು ಸ್ವಮತ ಸೇವಾನಿಷ್ಠೆಯಿಂದ ಶ್ರಮಿಸಿವೆ. ಭಾರತೀಭವನ ಪ್ರೆಸ್ ಜೈನಮತೀಯ ಪುಸ್ತಕಗಳನ್ನೂ, ಜಗನ್ಮೋಹಿನೀ ಪ್ರೆಸ್ ವೀರಶೈವ ಮತದ ಕೃತಿಗಳನ್ನೂ ಅದರಂತೆ ಕಲಾನಿಧಿ ಪ್ರೆಸ್ ಶ್ರೀವೈಷ್ಣವ ಗ್ರಂಥಗಳನ್ನೂ ಪ್ರಚುರಪಡಿಸುವಲ್ಲಿ ಒಲವನ್ನು ತೋರಿವೆ. ೧೮೯೦ರಿಂದ ೧೯೧೦ರವರೆಗಿನ ಅವಧಿಯಲ್ಲಿ ಮೈಸೂರಿನ ಕಾವ್ಯಮಂಜರಿ, ಕಲಾನಿಧಿ ಗ್ರಂಥಮಾಲೆಗಳು ಹಳಗನ್ನಡ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದ್ದುದು ತಿಳಿದ ಮಾತೇ ಆಗಿದೆ. ಹಾಗೆ ನೋಡಿದರೆ ಕನ್ನಡ ನುಡಿಯ ಸೇವೆಗೋಸ್ಕರ ತಾವು ಈ ಉದ್ಯಮದಲ್ಲಿ ಶ್ರಮಿಸುತ್ತಿರುವುದಾಗಿ, ತಮ್ಮ ಹಲವಾರು ಪ್ರಕಟನೆಗಳಲ್ಲಿ ಹೇಳಿಕೊಂಡೇ ಇದ್ದಾರೆ.

ಅವುಗಳಲ್ಲಿ ಎದ್ದು ಕಾಣುವ ಇನ್ನೊಂದು ಹೆಸರು ಮೈಸೂರಿನ ಜಿ.ಟಿ.ಎ. (ಗ್ರಾಜ್ಯುಯೇಟ್ ಟ್ರೇಡಿಂಗ್ ಅಸೋಸಿಯೇಶನ್) ಅವರದು. ಕಾವ್ಯಕಲಾನಿಧಿಯ ಪ್ರಕಟನೆಗಳನ್ನು ಅವರೇ ಮಾರಾಟ ಮಾಡುತ್ತಿದ್ದರು. ಕ್ರಮೇಣ ಪ್ರೆಸ್ಸನ್ನೂ ಇಟ್ಟುಕೊಂಡು ಗ್ರಂಥ ಪ್ರಕಟನೆಗೂ ತೊಡಗಿದರು. ಎಲ್ಲವೂ ಉತ್ತಮ ಸಾಹಿತ್ಯಾಭಿರುಚಿಯ ಕೃತಿಗಳು. ವಿಶೇಷತಃ 'English Classics', 'Books for Beginners' ಎಂಬ ಸದರಿನಲ್ಲಿಯ ಪುಸ್ತಕಗಳಿಗೆ ಆಗಿನ ದಿನಗಳಲ್ಲಿ ಬೇಡಿಕೆ ಬರುವಂತೆ ಶ್ರಮಿಸಿದರು. ಹೊಸ ಬಗೆಯ ವಾಚಕಪಡೆಯನ್ನು ಸೃಷ್ಟಿಸಿದರು.

ಆಗಿನ ಲೇಖಕ ಬಳಗವು ಅನುವಾದಕರು, ವ್ಯಾಖ್ಯಾತರು, ಪಠ್ಯಪುಸ್ತಕ ರಚಯಿತರು, ಪ್ರಬಂಧ, ನಾಟಕಾದಿಗಳ ಸುಶಿಕ್ಷಿತರು ಇವರನ್ನೊಳಗೊಂಡಿದ್ದಿತು. ಸುರುವಾತಿನ ಅನುವಾದಕರಿಗೆ ವಿಶೇಷವಾದ ಮನ್ನಣೆಯ ಸ್ಥಾನವಿದ್ದಿತು. ಮರಾಠಿ ಪುಸ್ತಕವೊಂದನ್ನು ಅನುವಾದಿಸುವುದಕ್ಕೆ ೧೮೩೦ರ ಸುಮಾರಿಗೆ ಒಬ್ಬ ಲೇಖಕನಿಗೆ ಮೂರು ನೂರು ರೂಪಾಯಿಗಳ ಸಂಭಾವನೆಯನ್ನು ಕೊಡಲಾಯಿತಂತೆ. ಧಾರ್ಮಿಕ ಇಲ್ಲವೆ ಇತರ ಪ್ರಾಚೀನ ಕೃತಿಗಳ ಪರಿಷ್ಕರಣ ಮಾಡುವವರು ಸಾಮಾನ್ಯವಾಗಿ ತಮ್ಮ ವಿಷಯಗಳಲ್ಲಿ ಪರಿಣತರಿದ್ದರೆಂಬುದನ್ನು ನೆನೆದಿರಬೇಕು. ಪಠ್ಯಪುಸ್ತಕಗಳನ್ನು ಸರಕಾರವೇ ಬಹುಮಟ್ಟಿಗೆ ಬರೆಯಿಸುತ್ತಿದ್ದಿತು. ಇತರ ಕೆಲವರು ಆ ಉದ್ಯಮದಲ್ಲಿ ತೊಡಗಿ ಸ್ವಪ್ರಯೋಜನ ಪಡೆದುದು ೧೮೮೦ನೆಯ ದಶಕದಿಂದ ಈಚೆಗೆ. ಇತ್ತ ಪಾಶ್ಚಾತ್ಯ ಶಿಕ್ಷಣವನ್ನು ಪಡೆದವರು ಯಾವ ವಿಷಯವನ್ನೇ ತೆಗೆದುಕೊಂಡು ಬರೆಯಲಿ, ಆ ಹಿಂದೆ ಅದಕ್ಕೆ ಪರಂಪರೆ ಇರಲಿಲ್ಲವಾದ್ದರಿಂದ, ಅವರ ಬರವಣಿಗೆಯಲ್ಲಿ ಹೊಸತನ ತೋರಿಬಂದು ಅದು ಗಣನೀಯವಾಯಿತು.

ಇಂತು ಪುಸ್ತಕದ ರಚನೆ, ಮುದ್ರಣ ಮತ್ತು ಪ್ರಸಾರಗಳು ೧೯ನೆಯ ಶತಮಾನದ ಅಂತ್ಯದ ವೇಳೆಗೆ ಒಂದು ವ್ಯವಸ್ಥಿತ ರೂಪವನ್ನು ತಾಳಿದ್ದವು. ಆಗಿನ, ಅದರಂತೆ ಇಪ್ಪತ್ತನೆಯ ಶತಮಾನದ ಸಾಹಿತ್ಯ ನಿರ್ಮಿತಿಗೆ ಸೂಕ್ತವಾದ ಭೂಮಿಕೆಯನ್ನು ಸಿದ್ಧಗೊಳಿಸಿದುವು.

## ಸಂದರ್ಭ ಸೂಚಿ

೧. ಪ್ರಜಾವಾಣಿ, ೧೯೬೬ರ ದೀಪಾವಳಿ ಸಂಚಿಕೆ: ಶ್ರೀನಿವಾಸ ಹಾವನೂರ, ಪು.೮೭

೨. Harvest Field, Vol. 2. (1862): Anon., ಪು.೯೦.

೩. London Missionary Society Records (MSS); South India, Kanerese. Box.I, Folder 2, Jacket A: Letter dt. 14–7–1823

೪. Indian Journalism, pp. 290–291.

೫. Manual of the Administration of the Madras Presidency, (Vol. 1. p. 550).

೬. ವಿವರಗಳಿಗೆ 'ತೆಂಕನಾಡು' (೧೯೪೭ರ ಕಾಸರಗೋಡಿನ ಸಾಹಿತ್ಯ ಸಮ್ಮೇಳನದ ವಿಶೇಷಾಂಕ) ಇದರಲ್ಲಿ ಪ್ರಕಟವಾದ ಬಿ. ದಾಮೋದರ ಬಾಳಿಗಾ ಅವರ ಲೇಖವನ್ನು ನೋಡಬಹುದು.

೭. ಮೈಸೂರಚಾ ತಿಸರಾ ಕೃಷ್ಣರಾಜ ವ ತ್ಯಾಂಚಾ ಮರಾಠಿ ಗ್ರಂಥ – ಸಂಖ್ಯಾರತ್ನಕೋಶ, ಲೇಖಕರು: ಎ.ಕೆ. ಪ್ರಿಯೋಳಕರ ಪು. ೧೪.

೮. W.A. Russell esq...pp. 20 – 21.

೯. Mysore Gazetteer. Vol.4. ಪು. ೬೪೫.

೧೦. ಪ್ರಬಂಧಾವಳಿ, ಪು. ೨೪–೨೫.

೧೧. Nagavarma's Kanerese Prosody, ಪೀಠಿಕೆ, ಪು.೭೮.

೧೨. ವಾಗ್ಭೂಷಣ, ೧೯೧೯, ಪು. ೧೪೨.

ಪ್ರಕರಣ : ೩

# ಶಿಕ್ಷಣ ರಂಗ ಮತ್ತು ಸಾಹಿತ್ಯ ವಿಕಾಸ

ಪಾಶ್ಚಾತ್ಯ ಸಂಪರ್ಕಕ್ಕೆ ಮುಂಚೆ ನಾಡಿನಲ್ಲಿ ಪ್ರಾಥಮಿಕ ಸ್ವರೂಪದ ಶಿಕ್ಷಣವನ್ನು ನೀಡುವ ಶಾಲೆ (ಮಠ) ಗಳು ಬಹುತರ ಎಲ್ಲ ಹಳ್ಳಿಗಳಲ್ಲಿಯೂ ಇದ್ದುವು. ಅಲ್ಲಿ ಪರಂಪರಾಗತ ಪದ್ಧತಿಯ ಪ್ರಕಾರ ಧೂಳಾಕ್ಷರ, ಕಡತ, ಹಸ್ತಪ್ರತಿ ಇವುಗಳ ಮೂಲಕ ಮಕ್ಕಳಿಗೆ ಓದು ಮತ್ತು ಬರಹಗಳ ಪರಿಚಯವನ್ನು ಚೆನ್ನಾಗಿ ಮಾಡಿಕೊಡಲಾಗುತ್ತಿತ್ತು. ಭಾರತೀಯರಿಗೆ ವಿಶಿಷ್ಟವಾದ ಬಾಯಿಲೆಕ್ಕದ ಮೂಲಕ ಗಣಿತದಲ್ಲಿಯೂ ಹುಡುಗರು ಪರಿಣತಿಯನ್ನು ಪಡೆಯಬಲ್ಲವರಾಗಿದ್ದರು. ಹಿರಿಯ ವಿದ್ಯಾರ್ಥಿಗಳು ಕಿರಿಯರಿಗೆ ಪಾಠ ಹೇಳಿಕೊಡುತ್ತಿದ್ದುದು ಈ ಶಾಲೆಗಳ ಇನ್ನೊಂದು ವೈಶಿಷ್ಟ್ಯವಾಗಿದ್ದಿತು. ಎಷ್ಟೋ ಜನ ತಂದೆಯರು ತಮ್ಮ ಮಕ್ಕಳಿಗೆ ಮನೆಯಲ್ಲಿಯೆ ಪ್ರಾಥಮಿಕ ಮಟ್ಟದ ವಿದ್ಯೆಯನ್ನು ಕಲಿಸುತ್ತಿದ್ದರು. ಅಂತೂ ವ್ಯವಹಾರಕ್ಕೆ ಅಗತ್ಯವಿರುವ ಮಟ್ಟಿಗಿನ ಈ ಬಗೆಯ ಮಿತವ್ಯಯದ ಶಿಕ್ಷಣವು ಅನುಕರಣೀಯವಾಗಿದ್ದಿತು. "ಇಲ್ಲಿಯ ಶಾಲೆಗಳಲ್ಲಿ ಓದು, ಬರಹ, ಗಣಿತ – ಈ ಪ್ರಾಥಮಿಕ ವಿಷಯಗಳನ್ನು ಹೆಚ್ಚಿನ ವೆಚ್ಚವಿಲ್ಲದೆ ಕಲಿಸಲಾಗುತ್ತದೆ. ಕಲಿಸುವ ಪದ್ಧತಿಯೂ ಅತ್ಯಂತ ಸರಳ; ಅಷ್ಟೇ ಪರಿಣಾಮಕಾರಿಯೂ ಅಹುದು. ಸಾಮಾನ್ಯ ರೈತರು ಅಥವಾ ವ್ಯಾಪಾರಿಗಳು ಲೆಕ್ಕದಲ್ಲಿ ಇಷ್ಟೊಂದು ಚಾಕಚಕ್ಯತೆಯಿಂದ ವ್ಯವಹರಿಸುತ್ತಾರಲ್ಲ, ಅದೇ ಮಟ್ಟದ ನಮ್ಮ ದೇಶದ ಜನರಿಗಿಂತ ಇವರು ಈ ವಿಷಯದಲ್ಲಿ ಮೇಲ್ಮೆ ಪಡೆದವರೆಂದೇ ಹೇಳಬೇಕು" ಎಂಬುದಾಗಿ, ಮುಂಬಯಿ ಸರಕಾರದ ಹಿರಿಯ ಅಧಿಕಾರಿಗಳಲ್ಲಿ ಒಬ್ಬನಾಗಿದ್ದ ಜಿ.ಎಲ್. ಪೆಂಡರಗಾಸ್ಟ್ (ಕ್ರಿ. ಶ. ೧೮೨೧) ಉದ್ಗಾರವೆತ್ತಿದ್ದಾನೆ.[೧]

ಶೀಲಸಂವರ್ಧನೆಯೆ ವಿದ್ಯಾರ್ಜನೆಯ ಗುರಿಯೆಂದೆಣಿಸಿ ರಾಮಾಯಣ ಭಾರತಾದಿ ಮಹಾಕಾವ್ಯಗಳ ಮೂಲಕ ಇದನ್ನು ಎಳೆವರೆಯದಿಂದಲೇ ಕಲಿಸಲಾಗುತ್ತಿತ್ತು. ಅಂತೆಯೇ ಊರೂರಿನ ಶಾಲೆಗಳಲ್ಲಿಯೂ ಇತರ ಕಡೆಗಳಲ್ಲಿಯೂ ಕುಮಾರವ್ಯಾಸ ಭಾರತ, ಜೈಮಿನಿಭಾರತ, ಬಸವಪುರಾಣ, ರಾಜಶೇಖರ ವಿಳಾಸ, ಹರಿಭಕ್ತಿಸಾರ, ದಾಸರ ಹಾಡುಗಳು, ಸರ್ವಜ್ಞನ ತ್ರಿಪದಿಗಳು ಇವುಗಳ ವಾಚನ ನಡೆದು ಆ ಪದ್ಯಗಳು 'ಅನಕ್ಷರಸ್ಥ' ಜನರ ಬಾಯಿಯಲ್ಲಿಯೂ ನಲಿದಾಡುತ್ತಿದ್ದುವು. ಈ ಬಗೆಯ ಕಾವ್ಯ ಮೂಲಕವಾದ ಶಿಕ್ಷಣವು ಕರ್ನಾಟಕದ ಒಂದು ವೈಶಿಷ್ಟ್ಯವೆಂಬುದಾಗಿ ಮುಂಬಯಿ ಪ್ರಾಂತದ ಅಧಿಕಾರಿಗಳು ಆಗಾಗ ಉಲ್ಲೇಖಿಸಿದುದಿದೆ.

ಆಗಿನ ಮೈಸೂರು ಸಂಸ್ಥಾನದಲ್ಲಿಯ ಪರಂಪರಾಗತ ಶಿಕ್ಷಣ ಕ್ರಮವು ನೆರೆಯ ಕನ್ನಡ ಸೀಮೆಗಳಿಗಿಂತ ಭಿನ್ನವಾಗಿರಲಿಲ್ಲ. ಮುಮ್ಮಡಿ ಕೃಷ್ಣರಾಜರ ಆಳ್ವಿಕೆಯ ಪೂರ್ವಾರ್ಧ (ಎಂದರೆ, ಕ್ರಿ.ಶ. ೧೮೩೧ಕ್ಕೆ ಮುಂಚಿನ) ಕಾಲದ 'ಪಾಠಶಾಲೆಗಳಲ್ಲಿ....ಓದು – ಬರಹ. ಲೆಕ್ಕಾಚಾರ, ಕೈಬರಹದ ಕಾಗದಪತ್ರಗಳನ್ನು ಓದುವುದು, ಕನ್ನಡ ಜೈಮಿನಿ, ರಾಮಾಯಣ. ಭಾರತ, ಭಾಗವತಾದಿ ಪುರಾಣೇತಿಹಾಸ ಕಥಾಗರ್ಭಿತ ಗ್ರಂಥಗಳ ಪಠಣ. ನಿಘಂಟು – ಎಂದರೆ ಅಮರ. ಇವಲ್ಲದೆ – ಕನ್ನಡಿಗರಿಗೆ – ಕಬ್ಬಿಗರ ಕೈಪಿಡಿ. ತೆಲುಗಿನವರಿಗೆ ಆಂಧ್ರನಾಮ ಸಂಗ್ರಹ – ಮುಂತಾದ ಕೋಶಗಳು. ನೀತಿಪಾಠ. ಸ್ತೋತ್ರಪಾಠಗಳು ಪಂಚಾಂಗ ಸಂಬಂಧವಾದ ತಿಥಿ, ವಾರ, ನಕ್ಷತ್ರಾದಿಗಳ ಸಾಮಾನ್ಯ ಲಕ್ಷಣ ಇವುಗಳನ್ನು ಕಲಿಸುತ್ತಿದ್ದರು.'[೨]

ಉಚ್ಚ ಶಿಕ್ಷಣವು ತನ್ನದೇ ಆದ ರೀತಿಯಲ್ಲಿ ನೆಲೆಗೊಂಡಿದ್ದಿತು. ಪ್ರಾಚೀನ ಕಾವ್ಯ ಹಾಗೂ ಧಾರ್ಮಿಕ, ಶಾಸ್ತ್ರ ಗ್ರಂಥಗಳ ಅಧ್ಯಯನವು ವಿವಿಧ ಮತಗಳವರ ಮಠಗಳಲ್ಲಿಯೂ, ಪಂಡಿತರ ಮನೆಗಳಲ್ಲಿಯೂ ನಡೆಯುತ್ತಿದ್ದಿತು. ವಿದ್ಯೆಗಾಗಿ ವಿದ್ಯಾರ್ಜನೆ ಎಂಬ ಪ್ರಮೇಯವು ಇಂಥ ಸಂದರ್ಭಗಳಲ್ಲಿದ್ದು ಜನತೆಯಲ್ಲಿ ಜ್ಞಾನದಾಹವು ಜ್ವಲಂತವಾಗಿಯೆ ತೋರಿಬರುತ್ತಿತ್ತು. ಶಾಸ್ತ್ರ ವಿಷಯಕ ಶಿಕ್ಷಣ ವಿಚಾರದಲ್ಲಿ ಮೈಸೂರು ನಗರವು ಭಾರತದ ಇತರ ಪಟ್ಟಣಗಳಿಗಿಂತ ಹಿರಿಯ ಸ್ಥಾನದಲ್ಲಿದ್ದಿತು. ಅತ್ತ ಪೇಶ್ವೆ ರಾಜ್ಯವು ಕೊನೆಗೊಂಡ ಮೇಲೆ ಕಾವ್ಯಶಾಸ್ತ್ರವೇತ್ತರಿಗೆ ಮೈಸೂರಿನ ಆಸ್ಥಾನವೊಂದೇ ಆಶ್ರಯಸ್ಥಾನವಾಗುಳಿಯಿತು. ಮುಮ್ಮಡಿ ಕೃಷ್ಣರಾಜರು ವಿದ್ವತ್ಪೋಷಕರಾಗಿದ್ದುದರಿಂದ, ಹೊರಗಿನ ವಿದ್ವನ್ಮಣಿಗಳೂ ಅವರಿಂದ ಮನ್ನಣೆ. ಪ್ರೋತ್ಸಾಹವನ್ನು ಧಾರಾಳವಾಗಿ ಪಡೆದರು. 'ಪ್ರೌಢಶಾಸ್ತ್ರಾಭ್ಯಾಸಾಭಿಲಾಷಿಗಳಾದವರು ರಾಜಧಾನಿಯಲ್ಲಾಗಲೀ ಸ್ಥಳಾಂತರಗಳಲ್ಲಾಗಲೀ... ವಿದ್ವಾಂಸರ ಬಳಿಗೆ ಹೋಗಿ ಅವರಿಂದ ಉಪದಿಷ್ಟರಾಗುತ್ತಿದ್ದರು.... ಒಬ್ಬೊಬ್ಬ ಘನ ವಿದ್ವಾಂಸರ ಮನೆಯು ಒಂದೊಂದು ಶಾಸ್ತ್ರ ನಿಲಯವೆನಿಸಿತ್ತು. ಕೆಲವು ಪಂಡಿತರು ವಿದ್ಯಾರ್ಥಿಗಳಿಗೆ ಪಾರಮಾರ್ಥಿಕವಾಗಿ ವಿದ್ಯಾದಾನದೊಂದಿಗೆ ಅನ್ನದಾನವನ್ನು ಸಹ ಮಾಡುತ್ತಿದ್ದರು.'[೩]

## ೩.೧ ಹೊಸ ಶಿಕ್ಷಣದ ನಾಂದಿ

### ೩.೧.೧ ಪ್ರಾಥಮಿಕ ಮಟ್ಟದ ಶಿಕ್ಷಣ

ನಾಡಿನ ಆಡಳಿತ ವಹಿಸಿಕೊಂಡ ಬ್ರಿಟಿಶರ ದೃಷ್ಟಿಯಲ್ಲಿ ಆಗಿನ ದೇಶೀಯ ಶಿಕ್ಷಣ ಪದ್ಧತಿಯಲ್ಲಿದ್ದ ಮುಖ್ಯ ದೋಷಗಳೆಂದರೆ, ಶಿಕ್ಷಣವು ಹೆಚ್ಚು ವ್ಯಾಪಕವಾಗಿರದೆ ಕೆಲವೇ ಜನ ಅದರ ಪ್ರಯೋಜನ ಪಡೆಯುತ್ತಿದ್ದರೆಂಬುದು, ಒಂದು. ಇನ್ನು ಪ್ರಾಥಮಿಕ

ಮಟ್ಟದ ಅಕ್ಷರ – ಲೆಕ್ಕಗಳ ತಿಳುವಳಿಕೆ ಇಲ್ಲವೆ ಕೆಲವೇ ಕಾವ್ಯ–ಶಾಸ್ತ್ರ ಗ್ರಂಥಗಳ ಪಠಣ, ಇಷ್ಟನ್ನು ಬಿಟ್ಟರೆ ಪ್ರಪಂಚದ ಅನೇಕ ಆಗುಹೋಗುಗಳ ಮತ್ತು ಉಪಯುಕ್ತ ವಿಷಯಗಳ ಪರಿಜ್ಞಾನವು ಇಲ್ಲದೇ ಹೋದದ್ದು ಎರಡನೆಯ ಕೊರತೆಯಾಗಿ ಕಂಡಿತು. ಇತರ ಲೋಪಗಳೆಂದರೆ ಉಪಾಧ್ಯಾಯರಿಗೆ ಮೂಲಭೂತವಾದ ತರಬೇತಿಯಾಗಲೀ, ತಕ್ಕ ಯೊಗ್ಯತೆಯಾಗಲೀ ಇಲ್ಲದಿದ್ದುದು. ಅದರಂತೆ ಮಕ್ಕಳು ಕಲಿಯಲು ಯಾವುದೇ ಬಗೆಯ ಪಠ್ಯಪುಸ್ತಕಗಳು ಇಲ್ಲದಿದ್ದುದು.

ಇವುಗಳನ್ನು ಸುಧಾರಿಸುವ ದೃಷ್ಟಿಯನ್ನಿಟ್ಟುಕೊಂಡು, ಕನ್ನಡ ಪ್ರದೇಶಗಳಲ್ಲಿ ಕಾರ್ಯಪ್ರವೃತ್ತರಾದ ಮೊದಲಿಗರೆಂದರೆ, ಮದ್ರಾಸದ ಮನ್ರೋ ಮತ್ತು ಮುಂಬಯಿಯ ಎಲ್‌ಫಿನ್‌ಸ್ಟನ್. ಇಬ್ಬರೂ ಒಂದೇ ಕಾಲಾವಧಿಯಲ್ಲಿ (೧೮೧೯/೨೦ – ೧೮೨೭) ಗವರ್ನರರಾಗಿದ್ದವರು. ಎಲ್‌ಫಿನ್‌ಸ್ಟನ್ ತನ್ನ ಪ್ರಾಂತದಲ್ಲಿ 'ಬಾಂಬೆ ಎಜ್ಯುಕೇಶನ್ ಸೊಸೈಟಿ' ಮತ್ತು 'ನೇಟಿವ್ ಸ್ಕೂಲ್ ಎಂಡ್ ಬುಕ್ ಸೊಸೈಟಿ'ಗಳ ಮೂಲಕ ಶಿಕ್ಷಣದ ಸೂತ್ರಸಪ್ತಕವನ್ನು ಅನುಷ್ಠಾನದಲ್ಲಿ ತಂದನು. ಅವುಗಳಲ್ಲಿ ಪಠ್ಯಪುಸ್ತಕಗಳನ್ನು ಬರೆಯಿಸಿ, ಅನುವಾದಿಸಿ ಮುದ್ರಿಸುವ ಯೋಜನೆಯೂ ಇದ್ದಿತು (ಸೂತ್ರ ೨ ಮತ್ತು ೫). ಮುಂದೆ ದೇಶಭಾಷೆಗಳಲ್ಲಿಯೆ ಶಿಕ್ಷಣವನ್ನು ನೀಡಬೇಕು ಮತ್ತು ಅದಕ್ಕೆ ಪೂರಕವಾಗಿ ದೇಶೀಯ ಪದ್ಯಗಳನ್ನೆ ಅಣಿಗೊಳಿಸಬೇಕು – ಎಂಬ ಪ್ರಣಾಲಿಯನ್ನು ಜರ್ವಿಸ್ ಮುಂತಾದ ಕೆಲವು ಅಧಿಕಾರಿಗಳು ಪ್ರತಿಪಾದಿಸಿದರು.

ಈ ಹಿನ್ನೆಲೆಯಲ್ಲಿ ಮುಂಬಯಿ ಪ್ರಾಂತದಲ್ಲಿ ಆ ಪ್ರದೇಶದ ಭಾಷೆಗಳಾಗಿದ್ದ ಮರಾಠಿ ಇತ್ಯಾದಿ ಪಠ್ಯಪುಸ್ತಕಗಳ ರಚನೆಗೆ ಮೊದಲಾಯಿತು. ಕನ್ನಡ ಕ್ರಮಿಕ ಪುಸ್ತಕಗಳ ಮುದ್ರಣಾರಂಭಕ್ಕೆ ಮುಂದೆ ಹತ್ತು ವರ್ಷಗಳೇ ಸಂದುವು. ಆ ಕುರಿತು ನಿರ್ದಿಷ್ಟವಾದ ಸೂಚನೆಯನ್ನು ಮೊದಲಿಗೆ ಮಾಡಿದವನೆಂದರೆ, ಧಾರವಾಡ ವಿಭಾಗಕ್ಕೆ 'ಅಸಿಸ್ಟಂಟ್ ಟು ದಿ ಕಲೆಕ್ಟರ್ ಆಗಿದ್ದ ವಾಲ್ಟರ್ ಎಲಿಯಟ್. ಅವನ ಕನ್ನಡ ಪ್ರಜ್ಞೆಯು ಈ ಸಂದರ್ಭದಲ್ಲಿ ಸ್ಮರಣೀಯವೆನಿಸಿದೆ. ಧಾರವಾಡದಂತಹ ಸಂಪೂರ್ಣ ಕನ್ನಡ ಪ್ರದೇಶದಲ್ಲಿ ಸರಕಾರವು ಮರಾಠೀ ಶಾಲೆಯೊಂದನ್ನು ಸ್ಥಾಪಿಸಿದ್ದಾಗ (೧೮೨೬) "ಅದು ತಪ್ಪು: ಇಲ್ಲಿಯ ಜನರ ಭಾಷೆ ಕನ್ನಡ. ಮಾತೃಭಾಷೆಯಲ್ಲಿಯೇ ಶಿಕ್ಷಣ ನಡೆಯಬೇಕಾದದ್ದು ನ್ಯಾಯವಾದುದು" ಎಂದು ವರದಿ ಮಾಡಿದ್ದಲ್ಲದೆ ಒಂದು ಕನ್ನಡ ಶಾಲೆಯನ್ನು ಆರಂಭಿಸಿ, ಮೂರು ವರ್ಷ ಕಾಲ (೧೮೩೧ – ೩೩) ಒಬ್ಬನೇ ಅದರ ವೆಚ್ಚವನ್ನು ವಹಿಸಿದ್ದನು.[೪]

ಕನ್ನಡ (ಪಠ್ಯ) ಪುಸ್ತಕಗಳ ರಚನೆಯ ಕುರಿತು ಇದೇ ಪ್ರಸಂಗದಲ್ಲಿ ಮಾಡಿದ ಅವನ ಸೂಚನೆಯು ಸ್ವೀಕೃತವಾಗಿ ಅವನ ನೇತೃತ್ವದಲ್ಲಿಯೇ – 'ಇಸೋಪನ ನೀತಿ ಕತೆಗಳು', 'ಗಣಿತ ಪುಸ್ತಕ – ಪೂರ್ಣಾಂಕ' ಮತ್ತು 'ಶಾಲಾಪದ್ಧತಿ' ಎಂಬ ಮೂರು

ಪುಸ್ತಕಗಳು ಸಿದ್ಧವಾದುವು. ಸರಕಾರೀ ಕಲ್ಲಚ್ಚಿನ ಛಾಪಖಾನೆಯಲ್ಲಿ ಅವನ್ನು ಮುದ್ರಿಸಬೇಕೆಂದರೆ, ಕನ್ನಡವನ್ನು ಬರೆಯುವವರು ಮುಂಬಯಿಯಲ್ಲಿ ಸಿಕ್ಕಲಿಲ್ಲವೇನೊ; ಅಂತೂ ಬಳ್ಳಾರಿಯ ಮಿಶನ್ ಪ್ರೆಸ್‌ನಲ್ಲಿ ಅವನ್ನು ಮುದ್ರಿಸಿದನು (೧೮೩೩). ಇವುಗಳಲ್ಲಿ 'ಶಾಲಾ ಪದ್ಧತಿ'ಯು ಅಂದಿನ ಬ್ರಿಟಿಶ್ ಶಿಕ್ಷಣವಿಧಾನವನ್ನು ಅವಲಂಬಿಸಿದ ಪುಸ್ತಕವಾಗಿದ್ದು, ಮರಾಠಿ, ಗುಜರಾತಿ ಭಾಷೆಗಳಲ್ಲಿ ಅದಾಗಲೇ ಅನುವಾದಗೊಂಡು ಶಿಕ್ಷಕರಿಗೆ ಆವಶ್ಯಕವಾದದ್ದೆಂದು ತಿಳಿಯಲಾಗಿದ್ದಿತು. ಇವು ಮೂರು ಮುಂಬಯಿ ರಾಜ್ಯದಲ್ಲಿ ಪ್ರಕಟವಾದ ಮೊತ್ತಮೊದಲಿನ ಕನ್ನಡ ಪುಸ್ತಕಗಳಾದ್ದರಿಂದ. ಅಪೂರ್ವ ಕೃತಿಗಳೆನಿಸಿವೆ.

ಕ್ರಿ. ಶ. ೧೮೩೫ರಲ್ಲಿ ಮುಂಬಯಿ ಸರಕಾರವು, 'ಸದರ್ನ ಮರಾಠಾ' ಪ್ರದೇಶದ ಎಂದರೆ ಮುಂಬಯಿ ಕರ್ನಾಟಕದಲ್ಲಿರುವ ಜನರ ಭಾಷೆ ಕನ್ನಡ; ಆದ್ದರಿಂದ ಕನ್ನಡದಲ್ಲಿಯೇ ಆಡಳಿತ ಮತ್ತು ಶಿಕ್ಷಣ ಕಾರ್ಯ ನಡೆಯಬೇಕು, ಎಂಬ ಮಹತ್ವಪೂರ್ಣ ನಿರ್ಣಯವನ್ನು ಸ್ವೀಕರಿಸಿತು. ಪರಿಣಾಮವಾಗಿ ಸರಕಾರೀ ಕನ್ನಡ ಶಾಲೆಗಳ ಸಂಖ್ಯೆ ಕ್ರಮೇಣ ಏರತೊಡಗಿತು. ಆದರೆ ಮೇಲೆ ಹೇಳಿದ ಮುದ್ರಣದ ಮತ್ತು ಅನುವಾದದ ಅನುಕೂಲತೆಗಳೂ, ಜೊತೆಗೆ ಪ್ರೋತ್ಸಾಹವೂ ಇಲ್ಲದೆ ಕನ್ನಡ ಪುಸ್ತಕ ನಿರ್ಮಿತಿಯು ಮುಂದುವರಿಯಲಿಲ್ಲ. ಅನಂತರ ೧೮೩೬ರಲ್ಲಿ 'ಸಂಣ್ಣ ಹಿತೋಪದೇಶ'ವೆಂಬ ಕೃತಿಯು ಕಲ್ಲಚಿನಲ್ಲಿ ಹೊರಬಂದಿತು. ಇದು ಲಭ್ಯವಿದ್ದು ಅದರ ಮುಖ ಪುಟದ ಒಕ್ಕಣಿಕೆಯನ್ನು ಅಲ್ಲಿ ಇದ್ದಂತೆಯೇ ಕೊಡುತ್ತಿದ್ದೇವೆ.

**"॥ ಸಂಣ್ಣ ಹಿತೋಪದೇಶ ॥**
**ಯಿ ಗ್ರಂಥ ಕನಡ ಸಾಲೆವಳಗೆ ವೊದುವಂಥಾ ಯೇಳು**
**ಯೆಂಟ್ಟು ವರುಷದ ಹುಡುಗರಿಗೆ ಥೊಡೆ ಕಷ್ಟದಿಂಡಾ**
**ಚೆಲೊ ತನದ ತಿಳವಳಿಕೆ ಅಗಬೇಕೆಂದ್ದು ಬಹ**
**ಪ್ರೀತ್ತೆಯಿಂದ್ದಾ ಕೊಡಲ್ಪಟ್ಟದೆ.**
**॥ ಮುಂಬಯಿ ಹೆಸರು**
**ವುಳ್ಳ ಅರಮನಿಯ**
**ಛಾಪಖಾನೆಯಲ್ಲಿ**
**ಛಾಪಿಶಿದ**
**ಸಂನ್ನು ೧೮೩೬**
**ಶಕೆ ೧೭೫೮."**

ಮುಂಬಯಿ ಪ್ರಾಂತದಲ್ಲಿ, ದೇಶಭಾಷಾ ಪುಸ್ತಕಗಳ ರಚನೆಯು ಹೀಗೆ ಕುಂಟುತ್ತ ಸಾಗಿರುವಾಗ ಶಿಕ್ಷಣಾಧಿಕಾರಿಯಾಗಿದ್ದ ಬಾಳಶಾಸ್ತ್ರೀ ಜಾಂಭೇಕರನು ಆ ಕಾರ್ಯವನ್ನು ತ್ವರಿತಗೊಳಿಸಿದನು. ಆಗಿನ ಕಾಲದ ದೇಶೀಯರಲ್ಲಿ ಅತ್ಯುಚ್ಚವಾದ ಸರಕಾರೀ

ಹುದ್ದೆಯಲ್ಲಿದ್ದವನೂ, ಬಹುಭಾಷಾ ತಜ್ಞನೂ ಆದ ಬಾಳಶಾಸ್ತ್ರಿಯು ಆಧುನಿಕ ಮರಾಠೀ ಸಾಹಿತ್ಯದ ಪುರಸ್ಕರ್ತನೆನಿಸಿದ್ದಾನೆ. ಅವನ ಶಿಕ್ಷಣಾಡಳಿತದಲ್ಲಿ ಮುಂಬಯಿ ಕರ್ನಾಟಕವೂ ಸೇರಿದ್ದರಿಂದ ಅವನು ಕನ್ನಡ ಪುಸ್ತಕಗಳ ನಿರ್ಮಿತಿಗಾಗಿ ಒಂದು ಸಮಿತಿಯನ್ನು ನಿಯಮಿಸಿದನು. ಜಾಂಭೇಕರನು ಅಧ್ಯಕ್ಷನಾಗಿದ್ದ ಆ ಸಮಿತಿಯಲ್ಲಿ ಕೃ. ಬಾ. ಗಾಡಗೀಳ (ಹುಬ್ಬಳ್ಳಿ) ಕಾರ್ಯದರ್ಶಿಯಾಗಿಯೂ, ಶ್ರೀನಿವಾಸ ಸುಬ್ಬಾಜಿ (ಕಿತ್ತೂರ) ಎಂಬವನು ಸದಸ್ಯನಾಗಿಯೂ ಇದ್ದರು.

ಸಮಿತಿಯು 'ಲಘು ವ್ಯಾಕರಣ', 'ಶಾಲಾ ನಿಯಮಾವಳಿ' ಇವನ್ನು ಸಿದ್ಧಗೊಳಿಸಿ ಸರಕಾರದ ಕಲ್ಲಚಿನ ಮುದ್ರಣಾಲಯದಿಂದ ಹೊರತಂದಿತು. ಅಲ್ಲದೇ 'ಅಪೂರ್ಣಾಂಕ', 'ಬೀಜಗಣಿತ', 'ಏಶಿಯಾ ಖಂಡದ ಭೂಗೋಲ', 'ಭೂಗೋಲ ವಿದ್ಯೆ' (ಜ್ಯೋತಿಶ್ಶಾಸ್ತ್ರ ಸಹಿತ) ಮತ್ತು 'ಮಹಾರಾಷ್ಟ್ರದ ಇತಿಹಾಸ' (ಮರಾಠಿಯಲ್ಲಿದ್ದ ಪ್ರಶ್ನೋತ್ತರ ರೂಪವನ್ನು ಬಿಟ್ಟು, ನೇರವಾದ ನಿರೂಪಣೆಯಲ್ಲಿ ಬರೆದದ್ದು), ಇವಿಷ್ಟು ಗ್ರಂಥಗಳನ್ನು ಮುದ್ರಣಕ್ಕೆ ಅಣಿಗೊಳಿಸಲಾಯಿತು.[೫]

ಬಾಳಶಾಸ್ತ್ರಿ ಜಾಂಭೇಕರನು ಮಾಡಿದ ಇನ್ನೊಂದು ಕೆಲಸವೆಂದರೆ ಬೆಂಗಳೂರು, ಮಂಗಳೂರುಗಳೊಡನೆ ಸಂಪರ್ಕವಿರಿಸಿಕೊಂಡು, ಅಲ್ಲಿಂದ ಕನ್ನಡ ಕ್ರಮಿಕ ಪುಸ್ತಕಗಳನ್ನು ತರಿಸಿ ಶಾಲೆಗಳಲ್ಲಿ ವಿತರಣ ಮಾಡಿದುದು. ಲಂಡನ್ ಮಿಶನ್ನಿನವರು ಪ್ರಕಟಿಸಿದ ಪುಸ್ತಕಗಳನ್ನು ಈ ಹಿಂದೆ ಎಲಿಯಟ್ ತರಿಸಿಕೊಂಡಿದ್ದನು. ಅದರಂತೆ ಜಾಂಭೇಕರನೂ ವೆಸ್ಲಿಯನ್ನರ ಪ್ರಾಥಮಿಕ ವ್ಯಾಕರಣ ಪುಸ್ತಕದ ೨೦೦ ಪ್ರತಿಗಳನ್ನು ಕೊಂಡು ವಿವಿಧ ಶಾಲೆಗಳಲ್ಲಿ ಹಂಚಿದನು. ಹೀಗೆ ಹಲವಾರು ಕನ್ನಡ ಪುಸ್ತಕಗಳು ತಮ್ಮ ಕೈಗೆ ಬಂದಾಗ, ಆಗಿನ ಶಿಕ್ಷಕ, ವಿದ್ಯಾರ್ಥಿ ಮತ್ತು ಸಂಬಂಧಿಸಿದ ಅಧಿಕಾರಿಗಳಿಗೆ ಆದ ಸಂಭ್ರಮ ಅಷ್ಟಿಷ್ಟಲ್ಲ. ಮುಂಬಯಿಯ 'ಬೋರ್ಡ್ ಆಫ್ ಎಜ್ಯುಕೇಶನ್' ಇದರ ೧೮೪೩ರ ವರದಿಯಲ್ಲಿ (ಪು.೨೭) ಈ ಭಾಗದ ಶಾಲೆಗಳಲ್ಲಿ ಪ್ರಗತಿಯು ಕಂಡುಬರುತ್ತಿದೆಯೆಂದೂ ಅದರ ಕಾರಣಗಳಲ್ಲಿ ಮುದ್ರಿತ ಪುಸ್ತಕಗಳ ಬಳಕೆಯು ಮುಖ್ಯವೆಂಬುದಾಗಿಯೂ ಉಲ್ಲೇಖಿಸಲಾಗಿದೆ.

ಇವಿಷ್ಟು ಪುಸ್ತಕಗಳ ಪ್ರಭಾವವು ಶೈಕ್ಷಣಿಕ ರಂಗವನ್ನು ದಾಟಿ ಆಡಳಿತ ಕ್ಷೇತ್ರದಲ್ಲಿಯೂ ಕಂಡುಬಂದಿತು. ೧೮೩೫ರ ಸರಕಾರೀ ಶಾಸನದನ್ವಯ ಆಡಳಿತವೂ ಕನ್ನಡದಲ್ಲೇ ನಡೆಯಬೇಕಿದ್ದಿತಲ್ಲವೆ. ಆಗಿನ ಮರಾಠಿ ಸಿಬ್ಬಂದಿಯವರೂ ಕನ್ನಡವನ್ನು ಕಲಿಯಬೇಕೆಂದು ಪರಿಪತ್ರ ಹೊರಡಿಸಿದ್ದಾಗ, ಹಾಗೆ ಕಲಿಯುವ ಅನುಕೂಲತೆ ಇದೆಯೆಲ್ಲಿ? ಎಂಬ ಆತಂಕದ ನುಡಿ ಕೇಳಿಬರುತ್ತಿದ್ದಿತು. ಈ ಆತಂಕವನ್ನು ನೀಗಲು ನವೀನ ಕನ್ನಡ ಪುಸ್ತಕಗಳು ನೆರವಾದುವೆಂಬ ಅಂಶವನ್ನು ಮುಂಬಯಿಯ ದಕ್ಷಿಣ ಭಾಗದಲ್ಲಿ ಶಿಕ್ಷಣಾಧಿಕಾರಿಯಾಗಿದ್ದ ವ್ಹ್ಯಾಕೆ ಎಂಬವನ ವರದಿಯಿಂದ (೧೮೪೬) ತಿಳಿಯಬಹುದಾಗಿದೆ:

"We are happy to say that this prejudice appears to be disappearing, for since it has become obvious that the majority of Government situations cannot be obtained without a knowledge of Canarese ... and more books have been prepared in this language, the objections seem to be subsiding."[೬]

ದುರ್ದೈವಕ್ಕೆ ಜಾಂಭೇಕರನು ಕ್ರಿ.ಶ. ೧೮೪೫ರಲ್ಲಿ ತೀರಿಕೊಂಡದ್ದರಿಂದ ಕನ್ನಡ ಪಠ್ಯಗಳ ರಚನಾ ಕಾರ್ಯವು ಮುಂದಿನ ಎರಡು ದಶಕಗಳವರೆಗೆ ಸ್ಥಗಿತಗೊಂಡಿತು. ಒಟ್ಟಿನಲ್ಲಿ ಮುಂಬಯಿ ಪ್ರಾಂತದ ಮಾನದಿಂದ ಕನ್ನಡದ ಕೆಲಸವು ಮರಾಠಿ, ಗುಜರಾಥಿ ಭಾಷೆಗಳಿಗಿಂತ ಕಡಿಮೆ ಪುರಸ್ಕಾರವನ್ನು ಹೊಂದಿದ್ದರೂ ಪಠ್ಯಪುಸ್ತಕ ರಚನೆಯಲ್ಲಿ ಮದ್ರಾಸ, ಮೈಸೂರು ಸರಕಾರಗಳಿಗಿಂತಲೂ ಮುಂಬಯಿ ಸರಕಾರವು ಮೊದಲಿಗೆ ಕಾರ್ಯಪ್ರವೃತ್ತವಾಯಿತೆಂಬುದನ್ನು ಗಮನಿಸಬೇಕು.

ವಾಙ್ಮಯ ಕಾರ್ಯದ ಸಿದ್ಧತೆಯಲ್ಲಿ ಇಂಗ್ಲಿಷ್ ಅಥವಾ ಮಾಧ್ಯಮಿಕ ಶಾಲೆಗಳೇ ಪ್ರಥಮ ಸೋಪಾನವಾಗಿವೆ. ಆರಂಭ ಕಾಲದಲ್ಲಿ ಇಂಗ್ಲಿಷ್ ಶಾಲೆಗಳ ಸ್ಥಾಪನೆಯನ್ನು ಮಿಶನರಿಗಳು ಕೈಕೊಂಡರು. ಬಳ್ಳಾರಿ, ಬೆಳಗಾಂವಿ, ಬೆಂಗಳೂರುಗಳಲ್ಲಿ ಲಂಡನ್ ಮಿಶನ್ನಿನವರು ಇವನ್ನು ಸ್ಥಾಪಿಸಿದುದು ಸ್ವಮತ ಪ್ರಸಾರದ ದೃಷ್ಟಿಯಿಂದ. ಆದರೆ ಜನತೆಯ ಶೈಕ್ಷಣಿಕ ವಿಕಾಸವನ್ನೆ ಗುರಿಯಾಗಿಟ್ಟುಕೊಂಡು ೧೮೩೩ರಲ್ಲಿ ಮೈಸೂರಲ್ಲಿ ಒಂದು ಇಂಗ್ಲಿಷ್ ಶಾಲೆಯ ಸ್ಥಾಪನೆಯಾಯಿತು. ಕರ್ನಾಟಕದಲ್ಲಿಯ ಮೊತ್ತಮೊದಲಿನ ದೇಶಿಯವರ ಶಿಕ್ಷಣ ಸಂಸ್ಥೆಯಿದು. ಅದನ್ನು ತಮ್ಮ ಸ್ವಂತ ವೆಚ್ಚದಿಂದ ಸ್ಥಾಪಿಸಿ ಮುಮ್ಮಡಿ ಕೃಷ್ಣರಾಜರು ಆ ಕಾಲಕ್ಕೆ ಇನ್ನಾವ ದೇಶೀಯ ರಾಜರಲ್ಲಿ ಇದ್ದಿರದ ಪ್ರಗತಿಪರ ದೃಷ್ಟಿಯನ್ನು ತೋರಿದರು.

ಆ ಮುಂದೆ ಕರ್ನಾಟಕದ ಪ್ರಮುಖ ನಗರಗಳಲ್ಲಿ ಇಂಗ್ಲಿಷ್ ಶಿಕ್ಷಣದ ಶಾಲೆಗಳು ಕ್ರಮೇಣ ತಲೆಯೆತ್ತಿದವು. ಕೊಡಗನ್ನು ವಶಪಡಿಸಿಕೊಂಡ ವರ್ಷವೇ (೧೮೩೪) ಕಂಪನಿ ಸರಕಾರದವರು ಅಲ್ಲೊಂದು ಇಂಗ್ಲಿಷ್ ಶಾಲೆಯನ್ನು ಸ್ಥಾಪಿಸಿದರು. ಮುಂಬಯಿ ಕರ್ನಾಟಕದಲ್ಲಿ ಸರಕಾರದ ಪ್ರೋತ್ಸಾಹದಿಂದ ಉದಯವಾದ ಬೆಳಗಾಂವಿಯ ಸರ್ದಾರ ಹೈಸ್ಕೂಲು ಹಲವು ದಶಕಗಳ ಕಾಲ ಪ್ರಮುಖ ಸಂಸ್ಥೆಯಾಗಿ ಬಾಳಿತು. ಆದರೆ ಅಲ್ಲಿ ಮರಾಠಿಗೆ ಪ್ರಾಧಾನ್ಯ. ಧಾರವಾಡ ನಗರದಲ್ಲಿ ಮಾತ್ರ, ಸರಕಾರದ ವತಿಯಿಂದ ಇಂಗ್ಲಿಷ್ ಶಿಕ್ಷಣದ ಆರಂಭವಾದುದು ೧೮೪೮ರಲ್ಲಿ.

ಇವೆಲ್ಲ ಇಂಗ್ಲಿಷ್ ಶಾಲೆಗಳ ಮೂಲಕ ಪಾಶ್ಚಾತ್ಯ ವಿದ್ಯೆಯ ವ್ಯಾಸಂಗಕ್ಕೆ ಮೊದಲಾಯಿತು. ಪರಿಣಾಮವಾಗಿ ನವೀನ ವಿಚಾರಗಳನ್ನು ಬರಮಾಡಿಕೊಂಡು, ಅದಕ್ಕನುಗುಣವಾದ ಗ್ರಂಥ ರಚನೆಗೆ ನಮ್ಮ ಲೇಖಕರು ತೊಡಗುವಂತಾದುದಕ್ಕೆ ಆ ಶಾಲೆಗಳು ಹಿನ್ನೆಲೆಯಾದುವೆಂಬುದನ್ನು ವಿಶೇಷವಾಗಿ ಸಮರ್ಥಿಸುವ ಅಗತ್ಯವಿಲ್ಲ.

### ೩೧೨ ಮಿಶನರಿ ಜನರ ಶೈಕ್ಷಣಿಕ ಕಾರ್ಯ

ಮುಂಬಯಿ ಕರ್ನಾಟಕದಲ್ಲಿಯ ಶೈಕ್ಷಣಿಕ ಕಾರ್ಯವನ್ನು ಸರಕಾರದವರು ಪ್ರಾರಂಭಮಾಡಿದ್ದರೆ, ಮದ್ರಾಸ ಮತ್ತು ಮೈಸೂರುಗಳಲ್ಲಿ ಮಿಶನರಿಗಳು ಆ ಕೆಲಸಕ್ಕೆ ಮುಂದಾದರು. ಎಂದರೆ ಆ ಸರಕಾರಗಳಿಗಿಂತ ಮೊದಲೆ ಅವರು ಶಿಕ್ಷಣ ರಂಗದಲ್ಲಿ ಪ್ರವೇಶಿಸಿದ್ದರು. ಆಗಿನ ಅವಧಿಯಲ್ಲಿ ಮಿಶನರಿಗಳಿಗೇ ದೇಶೀಯರ ಶಿಕ್ಷಣದ ಅಗತ್ಯ ಹೆಚ್ಚಾಗಿದ್ದಿತು. ಇಲ್ಲಿಯ ಜನತೆಯ ಮೂಢನಂಬಿಕೆಗಳನ್ನೂ ಸ್ವಧರ್ಮದಲ್ಲಿಯ ನಿಷ್ಠೆಯನ್ನೂ ಸಡಿಲಿಸಿ ಕ್ರೈಸ್ತಧರ್ಮದಲ್ಲಿ ಆಸ್ಥೆಯನ್ನು ಕುದುರಿಸುವುದಕ್ಕೆ ಪ್ರಥಮ ಸೋಪಾನವೆಂದರೆ ಪಾಶ್ಚಾತ್ಯ ಶಿಕ್ಷಣ ಕ್ರಮವೇ, ಎಂದು ಅವರು ನಂಬಿದ್ದರು. ಅಲ್ಲದೆ ವಯಸ್ಕರ ಮನಸ್ಸಿನಿಂದ ಅವರ ನಂಬಿಕೆಗಳನ್ನು ಸಡಿಲಿಸುವುದು ಕಷ್ಟದ ಕೆಲಸ. ಬದಲಾಗಿ ಎಳೆಯರ ಮನದಲ್ಲಿ ಬೈಬಲಿನ ನಿತ್ಯ ಪಠಣ; ಕ್ರೈಸ್ತ ತತ್ತ್ವಗಳನ್ನು ಒಳಗೊಂಡ ವಾಚನಪಾಠ ಇವುಗಳಿಂದ ಮಕ್ಕಳ ಮನಸ್ಸನ್ನು ಸುಲಭವಾಗಿ ತಮ್ಮತ್ತ ಸೆಳೆದುಕೊಳ್ಳಬಹುದಲ್ಲವೆ? ಆದ್ಯ ಪ್ರೊಟೆಸ್ಟಂಟ್ ಮಿಶನರಿಯಾದ ಜಾನ್ ಹ್ಯಾಂಡ್ಸ್ ಬಳ್ಳಾರಿಗೆ ಬಂದ ಮರುವರ್ಷವೇ ಪ್ರಾಥಮಿಕ ಶಾಲೆಯೊಂದನ್ನು ಸ್ಥಾಪಿಸಿದನೆಂಬುದು, ಶಿಕ್ಷಣಕ್ಕೆ ಮಿಶನರಿಗಳು ಕೊಡುತ್ತಿದ್ದ ಮಹತ್ವಕ್ಕೆ ನಿದರ್ಶನವಾಗಿದೆ.

ಶಾಲಾಸ್ಥಾಪನೆ ಮತ್ತು ಅಧ್ಯಾಪನ — ಇವು ಮಿಶನರಿಗಳ ಮುಖ್ಯ ಉದ್ಯೋಗಕ್ಕೆ ಪೋಷಕವಾಗುವ ಮಟ್ಟಿಗೆ ನಡೆದುಕೊಂಡು ಬರಬೇಕಿದ್ದಿತು. ಆದರೆ ಮಕ್ಕಳನ್ನು ಶಾಲೆಗೆ ಒತ್ತಾಯದಿಂದ ಬರಮಾಡಿಕೊಳ್ಳುವುದರಿಂದ ಮೊದಲ್ಗೊಂಡು ಪಠ್ಯಪುಸ್ತಕಗಳ ರಚನೆಯ ವರೆಗೂ ಅವರು ಪರಿಶ್ರಮಪಡಬೇಕಾದ್ದರಿಂದ, ಶಿಕ್ಷಣವು ಮಿಶನರಿಗಳ ಸಮಯದ ಬಹುಪಾಲನ್ನು ಪಡೆಯುತ್ತಿದ್ದಿತು. ಏನಿದ್ದರೂ ಇಲ್ಲಿಗೆ ಬಂದ ಮಿಶನರಿಗಳಲ್ಲಿ ಅನೇಕರು ಸ್ವಯಂ ಉಚ್ಚ ಶಿಕ್ಷಣವನ್ನು ಹೊಂದಿ, ಜೀವನದಲ್ಲಿ ವಿದ್ಯಾರ್ಜನೆಯ ಮಹತ್ವವನ್ನು ಅರಿತವರೂ, ಕೈಕೊಂಡ ಕೆಲಸವನ್ನು ಜಿಗುಟಿನಿಂದ ಮುಗಿಸುವವರೂ ಆಗಿದ್ದುದರಿಂದ, ಅವರ ಶೈಕ್ಷಣಿಕ ಕಾರ್ಯವು ಒಟ್ಟಿನಲ್ಲಿ ಜನತೆ ಮತ್ತು ಸರಕಾರಗಳ ಆದರವನ್ನು ಗಳಿಸಿತಲ್ಲದೆ, ಒಂದು ಹೊಸ ಪರಂಪರೆಯನ್ನು ಹಾಕಿಕೊಡುವಷ್ಟು ಮೇಲ್ಮಟ್ಟದ್ದಾಗಿತ್ತು.

ಇತ್ತ ಪಾಶ್ಚಾತ್ಯ ಶಿಕ್ಷಣ ವಿಚಾರದಲ್ಲಿ ಹಿಂದೂ ಜನತೆಯ ಆರಂಭದ ಪ್ರತಿಕ್ರಿಯೆ ನೋಡುವ ಹಾಗಿದೆ. ಶಾಲೆಗಳನ್ನು ತೆರೆದವರು ವಿದೇಶೀಯರು; ಮೇಲಾಗಿ ಮತಾಂತರಗೊಳಿಸಲು ಟೊಂಕ ಕಟ್ಟಿದವರು. ಆದರೂ ಇಂಗ್ಲಿಷ್ ಶಿಕ್ಷಣದ ವ್ಯಾವಹಾರಿಕ ಪ್ರಯೋಜನದ ದೃಷ್ಟಿಯಿಂದ, ಕ್ರೈಸ್ತಮತೀಯವಾದ ಪಾಠಗಳ ಕಹಿಯಂಶಗಳನ್ನು ತಾಳಿಕೊಂಡು, ತಮ್ಮ ಮಕ್ಕಳನ್ನು ಕಳಿಸತೊಡಗಿದರು.

**ಲಂಡನ್ ಮಿಶನ್ :** ಈ ಮಿಶನ್ನಿನ ಮ್ಯಾಸೆ ಮತ್ತು ಲೇಡ್ಲರ್ ಎಂಬವರು ಬೆಂಗಳೂರಲ್ಲಿ ಒಂದು ಕಾಲೇಜನ್ನೇ ಸ್ಥಾಪಿಸುವುದಕ್ಕೆ ಪ್ರಯತ್ನಪಟ್ಟರು (೧೮೨೪).

'ಫೋರ್ಟ್ ವಿಲಿಯಮ್' ಮತ್ತು 'ಫೋರ್ಟ್ ಸೇಂಟ್ ಜಾರ್ಜ್' ಈ ಸರಕಾರೀ ಕಾಲೇಜುಗಳ ಮಾದರಿಯಲ್ಲಿ ಅದನ್ನು ನಡೆಯಿಸಬೇಕು; ತತ್ತ್ವಜ್ಞಾನ, ವಿಜ್ಞಾನ ಮತ್ತು ವಾಙ್ಮಯ- ಈ ವಿಷಯಗಳನ್ನು ಕಲಿಸುವುದಕ್ಕೆ ಯುರೋಪಿಯನ್ ಪ್ರೊಫೆಸರರನ್ನು ನಿಯಮಿಸಬೇಕು; ಹಾಗೂ ಭಾರತೀಯ ವಿಷಯಗಳಿಗಾಗಿ ಇಲ್ಲಿಯ ಪಂಡಿತರನ್ನು ಆಮಂತ್ರಿಸಬೇಕು-ಎಂದೆಲ್ಲ ಅವರ ಯೋಜನೆಯಾಗಿದ್ದಿತು. ಉಚ್ಚಮಟ್ಟದ ಈ ವಿದ್ಯಾದಾನದ ಗುರಿಯು ಎಂದಿನಂತೆ ಕ್ರೈಸ್ತಮತ ಪ್ರಸಾರವೇ ಆಗಿದ್ದಿತು. ಇಲ್ಲಿ ಕಲಿತ ದೇಶೀಯರು ಮತಾಂತರ ಹೊಂದುವರಲ್ಲದೆ, ಅವರಲ್ಲಿ ಕೆಲವರು ಬೋಧಕರಾಗುವುದಕ್ಕೆ ಅರ್ಹರಾಗುವರು —ಎಂಬುದೂ ಸಂಚಾಲಕರ ಅಂತಿಮ ಗುರಿಯಾಗಿದ್ದಿತು.[2] ಆದರೆ ಕಾರಣಾಂತರಗಳಿಂದ ಈ ಯೋಜನೆ ಫಲಿಸಲಿಲ್ಲ (೧೮೨೭). ಈ ಕಾಲೇಜಿನ ಸ್ಥಾಪನೆಯಾಗಿದ್ದರೆ ಅಖಿಲ ಭಾರತಮಟ್ಟದ ಪ್ರೌಢ ವಿದ್ಯಾಲಯವೊಂದು ಬೆಂಗಳೂರಲ್ಲಿ ತಲೆದೋರುತ್ತಿತ್ತು. ಕ್ರಿಶ್ಚಿಯನ್ ಮತ ಪ್ರಸಾರದ ವಿಷಯ ಅಂತಿರಲಿ, ಇದರ ಮೂಲಕ ಕನ್ನಡದ ಅಧ್ಯಯನ ಮತ್ತು ಸಾಹಿತ್ಯ ರಚನೆ-ಇವುಗಳಿಗೂ ಪ್ರಚೋದನೆ ದೊರೆಯಬಹುದಿತ್ತು.

ಕಾಲೇಜು ತಪ್ಪಿಹೋದರೂ ದೇಶೀಯ ಕ್ರಿಶಿಯನ್ನರಿಗೆ ಮತಪ್ರಸಾರದ ತರಬೇತಿಯನ್ನು ಕೊಡಲು 'ಸೆಮಿನರಿ' (ಬೋಧಕ ಶಾಲೆ)ಯೊಂದನ್ನು ಆರಂಭಿಸಲಾಯಿತು. ಇದುವೆ ಕರ್ನಾಟಕದಲ್ಲಿ ಮಿಶನರಿ ಜನರ ಮೊದಲ ಸೆಮಿನರಿಯಾಗಿದೆ. ಕ್ರಿಶ್ಚಿಯನ್ ಮತದ ಹಬ್ಬುಗೆಯ ಮುನ್ಸೂಚನೆಯಿದು. ಸೆಮಿನರಿಯ ಅಧ್ಯಯನವು ಯಾವ ಭಾಷೆಯಲ್ಲಿ ನಡೆಯಬೇಕೆನ್ನುವುದರ ಬಗ್ಗೆ ತಿಕ್ಕಾಟ ನಡೆಯಿತು. ಮ್ಯಾಸೆ, ಲೇಡ್ಲರ್ ಇವರು ಇಂಗ್ಲಿಷ್ ಮಾಧ್ಯಮವಿರಬೇಕು ಎಂದಾಗ ಡಬ್ಲೂ. ಕ್ಯಾಂಬೆಲ್ ಎಂಬವನು ಕನ್ನಡದಲ್ಲಿಯೇ ದೇಶೀಯರ ಶಿಕ್ಷಣ ನಡೆಯಬೇಕೆಂದು ಪ್ರತಿಪಾದಿಸಿದನು. ಈ ಕುರಿತು ಲಂಡನ್ನಿನ ವರಿಷ್ಠರೊಡನೆ ಅವರು ನಡೆಸಿದ ಕಟುತರ ಪತ್ರವ್ಯವಹಾರವು ಈಗಿನ ಭಾಷಾ ಮಾಧ್ಯಮದ ವಿವಾದವನ್ನು ನೆನಪಿಗೆ ತಂದುಕೊಡುತ್ತದೆ. ತನ್ನ ಕನ್ನಡ ಪರವಾದಕ್ಕೆ ಮನ್ನಣೆ ಸಿಕ್ಕದಿದ್ದಾಗ, ಕ್ಯಾಂಬೆಲ್ ಮಿಶನರಿ ಕಾರ್ಯಕ್ಕೆ ರಾಜೀನಾಮೆ ಕೊಡುವ ಮಟ್ಟಿಗೆ ಈ ವಾದವು ತೀವ್ರ ಸ್ವರೂಪವನ್ನು ತಳೆಯಿತು. ವರಿಷ್ಠ ಕೇಂದ್ರದ ಮಧ್ಯಸ್ಥಿಕೆಯಿಂದ ಮುಕ್ತಾಯವಾಗಿ, ಕ್ಯಾಂಬೆಲ್ ಇಲ್ಲಿಯೆ ಉಳಿದನು. ಕ್ಯಾಂಬೆಲ್ಲನ ಮುಂದಿನ ಸೇವೆಯೆಲ್ಲ ಕನ್ನಡ ಮಿಶನ್ ಕ್ಷೇತ್ರಗಳಲ್ಲಿ ಸಂದಿದೆ.

ಲಂಡನ್ ಮಿಶನ್ ಸಂಸ್ಥೆಯ ಶೈಕ್ಷಣಿಕ ಕಾರ್ಯಕರ್ತರಲ್ಲೆಲ್ಲ **ಬೆಂಜಮಿನ್ ಹೋಲ್ಟ್ರೈಸರ** ಹೆಸರು ಎದ್ದು ಕಾಣುವಂತಹದು. ಐವತ್ತು ವರ್ಷಗಳಷ್ಟು ಸುದೀರ್ಘ ಕಾಲ ಶಿಕ್ಷಣ ರಂಗದಲ್ಲಿದ್ದು ಅನೇಕ ಬಗೆಯ ಶಾಲೆಗಳನ್ನು ಆರಂಭಿಸಿದರಲ್ಲದೆ, ವಿದ್ಯಾಭ್ಯಾಸ ಕ್ರಮದ ಸುಧಾರಣೆಗೂ ವಿಶೇಷವಾಗಿ ಗಮನ ಕೊಟ್ಟಿದ್ದಾರೆ. ಪಠ್ಯಪುಸ್ತಕಗಳನ್ನು ರಚಿಸಿದ್ದಾರೆ.

ಕ್ರೈಸ್ತಮತಾನ್ವಯದ ಶೈಕ್ಷಣಿಕ ಕಾರ್ಯದಲ್ಲಿ ಅವನಷ್ಟು ಪರಿಶ್ರಮಿಸಿದ ಮಿಶನರಿಗಳು ತೀರ ವಿರಳ.

ಸ್ತ್ರೀಶಿಕ್ಷಣದತ್ತ ಮಿಶನರಿಗಳು ಮನಸ್ಸುಗೊಟ್ಟುದು ವಿಶೇಷದ ಸಂಗತಿಯಾಗಿದ್ದು, ಆ ದಿಶೆಯಲ್ಲಿ ಲಂಡನ್ ಮಿಶನ್ನಿನವರೇ ಮೊದಲಿಗರಾಗಿದ್ದಾರೆ. ಬಳ್ಳಾರಿಯಲ್ಲಿ ಇಂಥದೊಂದು ಶಾಲೆಯನ್ನು ಆರಂಭಿಸಿದ್ದರು. ಕ್ರಿ.ಶ. ೧೮೪೦ರಲ್ಲಿ ಬೆಂಗಳೂರಲ್ಲಿಯೂ ಸ್ಥಾಪಿಸಿದರು. ಈ ಶಾಲೆಗಳಿಗೆ ಮಧ್ಯಮ ವರ್ಗೀಯ ಸ್ತ್ರೀಯರಾರೂ ಹೋಗುತ್ತಿರಲಿಲ್ಲ. ಅನಾಥರಾದ ಇಲ್ಲವೆ ದೇಶೀ ಕ್ರಿಸ್ತೀಯರ ಹೆಣ್ಣುಮಕ್ಕಳಿಗೆ ಅನ್ನಹಾಕಿ, ಶಿಕ್ಷಣ ಕೊಡಬೇಕಾಗುತ್ತಿದ್ದಿತು. ಆ ಶಾಲೆಗಳನ್ನು ಮಿಶನರಿಗಳ ಹೆಂಡಂದಿರು ನೋಡಿಕೊಳ್ಳುತ್ತಿದ್ದರು. ಇವುಗಳನ್ನು ನಡೆಸುವುದಕ್ಕೆ ಬೇಕಾಗುವ ಹೆಚ್ಚಿನ ಆರ್ಥಿಕ ನೆರವನ್ನು ಈ ಕಾರಣಕ್ಕಾಗಿಯೆ, ಎಂದು ಹೇಳಿ ಬ್ರಿಟನ್ನಿನ ದಾನಿಗಳಿಂದ ಹಣ ಸಂಪಾದಿಸಲಾಗುತ್ತಿತ್ತು.

**ವೆಸ್ಲಿಯನ್ ಮಿಶನ್:** ವೆಸ್ಲಿಯನ್ ಮೆಥಾಡಿಸ್ಟರ ಕಾರ್ಯಕ್ಷೇತ್ರವು ಮೈಸೂರು ಸಂಸ್ಥಾನಕ್ಕೆ ಸೀಮಿತವಿದ್ದರೂ ಶೈಕ್ಷಣಿಕ ಚಟುವಟಿಕೆಗಳು ಮಾತ್ರ ಹೆಚ್ಚು ವ್ಯಾಪಕವಾಗಿದ್ದುವು. ಅವರ ಮುಖಂಡನಾಗಿದ್ದ **ಥಾಮಸ್ ಹಾಡ್ಸನ್** ತಾನು ಬಂದ ಮರುವರ್ಷವೇ ಬೆಂಗಳೂರಿನ ಕ್ಯಾಂಟೋನ್‌ಮೆಂಟಿನಲ್ಲಿ ಇಂಗ್ಲಿಷ್ ಶಾಲೆಯನ್ನು ಸ್ಥಾಪಿಸಿದನು (೧೮೩೪). ವರ್ಷಾಂತ್ಯದಲ್ಲಿ, ಕಮೀಶನರ್ ಕಬ್ಬನ್ನನ ಅಧ್ಯಕ್ಷತೆಯಲ್ಲಿ 'ಪಬ್ಲಿಕ್' ಪರೀಕ್ಷೆ ನಡೆಯಿತು. ವಿದ್ಯಾರ್ಥಿಗಳ ಪ್ರಗತಿಯನ್ನು ಕಂಡು, ಕಬ್ಬನ್ ಐದು ನೂರು ರೂಪಾಯಿಗಳನ್ನಿತ್ತನಲ್ಲದೆ, ಕಾರ್ಯಾರ್ಥಾಂತರದಿಂದ ನಗರಕ್ಕೆ ಬಂದಿದ್ದ ಗವರ್ನರ್ ಜನರಲ್ ಬೆಂಟಿಂಕ್‌ನಿಂದ ೩೦೦ ರೂ.ಗಳ ದೇಣಿಗೆಯನ್ನು ಕೊಡಿಸಿದನು. ಇದುವೆ ಬೆಂಗಳೂರಿನ ಮೊತ್ತಮೊದಲಿನ ಇಂಗ್ಲಿಷ್ ಶಾಲೆ. ಅದರ ಯಶಸ್ವಿತೆಯನ್ನೂ ಹಾಡ್ಸನ್ನನ ಕಾರ್ಯೋತ್ಸಾಹವನ್ನೂ ಕಂಡು, ನಗರದ ಒಳಭಾಗದ ಸಾರ್ವಜನಿಕರು ಅಲ್ಲಿಯೂ ಇಂಥದೊಂದು ಶಾಲೆಯನ್ನು ತೆರೆಯಬೇಕೆಂದು ಹಾಡ್ಸನ್ನನನ್ನು ಕೇಳಿಕೊಂಡರು.

ಮೈಸೂರಿನಲ್ಲಿ ಮುಮ್ಮಡಿ ಕೃಷ್ಣರಾಜರು ಈ ಮೊದಲು ೧೮೩೩ರಲ್ಲಿ ಒಂದು ಇಂಗ್ಲಿಷ್ ಶಾಲೆಯನ್ನು ಸ್ಥಾಪಿಸಿಯೆ ಇದ್ದರು (ರಾಜಾ ಸ್ಕೂಲ್). ಹಾಡ್ಸನ್ ಮೈಸೂರಿಗೆ ಹೋದ ಮರುವರ್ಷ (೧೮೪೦) ರಾಜರ ಅಪೇಕ್ಷೆಯ ಮೇರೆಗೆ ಅದರ ಆಡಳಿತವನ್ನು ವಹಿಸಿಕೊಂಡನು. ಮುಂದೆ ಅರಮನೆಯಲ್ಲಿ ರಾಜರ ಸಮ್ಮುಖದಲ್ಲಿ ಪರೀಕ್ಷೆ ನಡೆದು, ತೇರ್ಗಡೆಯಾದ ಎಲ್ಲ ವಿದ್ಯಾರ್ಥಿಗಳಿಗೂ ಅವರ ಹಸ್ತದಿಂದ ಪಾರಿತೋಷಕಗಳನ್ನು ಕೊಡಿಸಲಾಯಿತು. ಮುಂದಿನ ಹಲವು ವರ್ಷಗಳ ವರೆಗೆ ವೆಸ್ಲಿಯನ್ ಮಿಶನರಿಗಳ ನೇರ ಆಡಳಿತದಲ್ಲಿಯೆ ಮುಂದುವರಿದ ಈ ವಿದ್ಯಾಲಯವು ಮಹಾರಾಜಾ ಕಾಲೇಜಿಗೆ ಬೀಜಸ್ವರೂಪವಾಯಿತು (೧೮೭೩). ರಾಜಾ ಸ್ಕೂಲನ್ನು ನಡೆಸುವ ಸಂದರ್ಭದಲ್ಲಿ ವೆಸ್ಲಿಯನ್ನರ ಆಡಳಿತ ಮತ್ತು ಅಧ್ಯಾಪನ ವಿಷಯಕವಾದ ದಕ್ಷತೆಯನ್ನು ಕಂಡು,

ಪುರಪ್ರಮುಖರೆನಿಸಿದ್ದ ೩೩೪೦ ಜನರು ಸಹಿಮಾಡಿ, ಮೈಸೂರಿನಲ್ಲಿ ಒಂದು ಹೈಸ್ಕೂಲನ್ನು ತೆರೆಯಬೇಕಾಗಿ, ಬ್ರಿಟನ್ನಿನಲ್ಲಿದ್ದ ವೆಸ್ಲಿಯನ್ನರ ವರಿಷ್ಠ ಕೇಂದ್ರಕ್ಕೆ ಕೇಳಿಕೊಂಡರು (೧೮೫೩). ಆ ಶಾಲೆಗೆ ತಗಲುವ ವೆಚ್ಚದಲ್ಲಿ ಅರ್ಧವನ್ನು ತಾವು ಚಂದಾ ಕೂಡಿಸಿ ಕೊಡುವುದಾಗಿಯೂ, ಶಾಲೆಯನ್ನು ನಡೆಸಿಕೊಂಡು ಹೋಗುವ ಹೊಣೆಯು ವೆಸ್ಲಿಯನ್ನರದೆಂದೂ ಈ ಮನವಿಯ ಒಕ್ಕಣಿಕೆಯಾಗಿದ್ದಿತು. ಶಾಲೆಯು ಸ್ಥಾಪಿತವಾದ ಮೇಲೆ, ರಾಜಾ ಸ್ಕೂಲಿನ ಜೊತೆಗೇ ಅದು ಬೆಳೆದು ಬಂದಿತು. ಬಿ. ಮಲ್ಲಪ್ಪ ಮತ್ತಿತರ ಪಂಡಿತರು ಆ ಶಾಲೆಯ ಅಧ್ಯಾಪಕ ಮಂಡಲಿಯಲ್ಲಿದ್ದರು. ಹಾಡ್ಸನ್ನನ ನೇತೃತ್ವದಲ್ಲಿ ಇನ್ನೂ ಹಲವು ಶಾಲೆಗಳು ಸ್ಥಾಪಿತವಾದುವು.

ಅವನ ನಿವೃತ್ತಿಯ ಕಾಲದಲ್ಲಿ (ಕ್ರಿ.ಶ. ೧೮೭೭) ವೆಸ್ಲಿಯನ್ನರು ಅರವತ್ತಕ್ಕೆ ಮೇಲ್ಪಟ್ಟು ಪ್ರಾಥಮಿಕ, ಮಾಧ್ಯಮಿಕ ಶಾಲೆಗಳನ್ನು ನಡೆಸುತ್ತಿದ್ದರೆಂಬುದು ಅಭಿನಂದನೀಯವಾಗಿದೆ. ಪ್ರಕೃತಿಯ ಅಸ್ವಾಸ್ಥ್ಯದ ಮೂಲಕ, ಸ್ವದೇಶಕ್ಕೆ ಹೋದ ಮೇಲೆಯೂ ಕರ್ನಾಟಕದ ಸವಿ ನೆನಪು ಹಾಡ್ಸನ್ನನ ಮನದಲ್ಲಿ ಚೆನ್ನಾಗಿ ನೆಟ್ಟಿದ್ದಿತು. ತನ್ನ ನಿವಾಸಕ್ಕೆ 'ಬೆಂಗಳೂರ್ ಕಾಟೇಜ್' ಎಂದು ನಾಮಕರಣ ಮಾಡಿದ್ದನು.

ಅಂದಿನ ಮಿಶನರಿಗಳ ಹಾಗೂ ಇತರ ವಿದೇಶೀಯರ ಕನ್ನಡ ಅಭ್ಯಾಸಕ್ಕಾಗಿ ಮೆಕ್ಕೆರೆಲ್‌ನ ವ್ಯಾಕರಣವೊಂದೇ ಇದ್ದಿತು. ಹಾಡ್ಸನ್ ಅದನ್ನು ಸಂಕ್ಷೇಪಗೊಳಿಸಿ ಸುಧಾರಿಸಿದ ಬೇರೊಂದು ಆವೃತ್ತಿಯನ್ನು ಹೊರಡಿಸಿದನು (Elementary Grammar of the Kannada Language, 1859). ಇದರಿಂದ ಕನ್ನಡ ವ್ಯಾಕರಣದ ಅಭ್ಯಾಸವು ಹೆಚ್ಚು ಸುಕರವಾಯಿತು. ಕನ್ನಡ ಭಾಷೆಯಲ್ಲಿ ಮೈಸೂರಿನ ದೊಡ್ಡ ನಕಾಶವನ್ನು ಮೊತ್ತಮೊದಲು ಸಿದ್ಧಪಡಿಸಿದ ಶ್ರೇಯಸ್ಸು ಅವನದೇ ಆಗಿದೆ.

ಶಿಕ್ಷಣ ವಿಚಾರದಲ್ಲಿ ಥಾಮಸ್ ಹಾಡ್ಸನ್ನನಿಗೆ ಸರಿಮಿಗಿಲೆನಿಸಿ ಪರಿಶ್ರಮಪಟ್ಟ ಇನ್ನೊಬ್ಬ ವೆಸ್ಲಿಯನ್ ಎಂದರೆ **ಜೋಸಿಯ ಹಡ್ಸನ್** (೧೮೬೪–೧೯೧೬). ತನ್ನ ೩೩ ವರ್ಷಗಳ ಮಿಶನರಿ ಕಾರ್ಯಾವಧಿಯಲ್ಲಿ, ಅವನು ಬೆಂಗಳೂರು, ಮೈಸೂರುಗಳಲ್ಲಿಯ ಇಂಗ್ಲಿಷ್ ಶಾಲೆಗಳಲ್ಲಿ ಅಧ್ಯಾಪಕನಾಗಿದ್ದನು. ಆ ಕಾಲದಲ್ಲಿ ಮೈಸೂರ ಸಂಸ್ಥಾನದ ಇಂಗ್ಲಿಷ್ ವಿದ್ಯಾಸಂಸ್ಥೆಗಳು ಮದ್ರಾಸ ವಿಶ್ವವಿದ್ಯಾನಿಲಯಕ್ಕೆ ಅಧೀನವಾಗಿದ್ದುವು. ಮೈಸೂರ ವಿದ್ಯಾರ್ಥಿಗಳು ಪರೀಕ್ಷೆಗಾಗಿ ಮದ್ರಾಸವರೆಗೆ ಹೋಗುವುದನ್ನು ತಪ್ಪಿಸಿ ಹಡ್ಸನ್, ಅವರು ಮೈಸೂರಲ್ಲಿಯೆ ಪರೀಕ್ಷೆಗೆ ಕಟ್ಟುವ ಏರ್ಪಾಡು ಮಾಡಿದನು. ಇವನು ಮಿಶನ್ನಿನ ಅಧ್ಯಕ್ಷನಿದ್ದ ಕಾಲದಲ್ಲಿ (ಕ್ರಿ.ಶ. ೧೮೭೮–೧೯೧೬) ವೆಸ್ಲಿಯನ್ನರ ಶೈಕ್ಷಣಿಕ ಕಾರ್ಯವು ಇನ್ನಷ್ಟು ವಿಸ್ತಾರಗೊಂಡಿತು. ಹೆಚ್ಚುತ್ತಿದ್ದ ಪ್ರಾಥಮಿಕ ಶಾಲೆಗಳ ಶಿಕ್ಷಕರಿಗೆಂದು, ಅವರ ತರಬೇತಿಯ ಕೇಂದ್ರವನ್ನು (ಟ್ರೇನಿಂಗ್ ಕಾಲೇಜ್) ಶಿವಮೊಗ್ಗೆಯಲ್ಲಿ ಪ್ರಾರಂಭ ಮಾಡಿದನು. ವೆಸ್ಲಿಯನ್ನರ ವಿವಿಧ ಶಾಲೆಗಳಿಗೆ ಮೈಸೂರು ಸರಕಾರದವರು ಬಿಚ್ಚು ಮನದಿಂದ ನೆರವನ್ನು ನೀಡಿದ್ದಾರೆ.

**ಬಾಸೆಲ್ ಮಿಶನ್ :** ಈ ಮಿಶನ್ನಿನವರ ಹಾಗೂ ವೆಸ್ಲಿಯನ್ನರ ಕನ್ನಡ ಚಟುವಟಿಕೆಗಳು ಒಂದೇ ಕಾಲಕ್ಕೆ ಕಂಡುಬಂದವು (ಕ್ರಿ.ಶ. ೧೮೩೪). ಮಿಶನ್ನಿನ ಸಂಸ್ಥಾಪಕ ಸ್ಯಾಮುಯೆಲ್ ಹೆಬಿಕ್ ಕ್ರಿ.ಶ. ೧೮೩೬ರಲ್ಲಿ ಮಂಗಳೂರಲ್ಲಿ ಪ್ರಥಮತಃ ಒಂದು ಶಾಲೆಯನ್ನು ತೆರೆದಾಗ ಕೇವಲ ನಾಲ್ಕು ಹುಡುಗರಿದ್ದರಂತೆ. ಅವರಿಗಾಗಿ ತಿಮ್ಮಪ್ಪನೆಂಬ ದೇಶೀಯ ಶಿಕ್ಷಕನನ್ನೂ ನಿಯುಮಿಸಲಾಯಿತು. ವಿಶೇಷ ಆಸ್ಥೆಯಿಂದ ಮಿಶನರಿಗಳು ಅಧ್ಯಾಪನವನ್ನು ಮುಂದುವರಿಸಿದರು. ಕ್ರಿ. ಶ. ೧೮೪೦ರಲ್ಲಿ ಇಂಗ್ಲಿಷ್ ಶಾಲೆಯನ್ನೂ ಸ್ಥಾಪಿಲಾಯಿತು.

ಧಾರವಾಡವು ಜಿಲ್ಲಾ ಸ್ಥಳವಲ್ಲದೇ ಬೇರೆ ಜಿಲ್ಲೆಗಳು ಸೇರಿದ 'ಸುಭೆ'ಯ ಮುಖ್ಯ ಪಟ್ಟಣವಾಗಿದ್ದಿತು. ಅನೇಕ ಸರಕಾರೀ ನೌಕರರೂ ವತನದಾರರೂ ವಾಸವಾಗಿದ್ದರು. ಧಾರವಾಡದಲ್ಲಿ ಆಗ ಒಂದು ಮರಾಠಿ ಹಾಗೂ ಅದಕ್ಕೆಯೆ ಜೋಡಿಸಲಾದ ಕನ್ನಡ ಶಾಲೆ, ಇಷ್ಟು ಮಾತ್ರ ಇದ್ದುವು. ಅಲ್ಲಿಗೆ ಮತ ಪ್ರಸಾರಕ್ಕೆಂದು ಬಂದ ಮೊವ್‌ಗ್ಲಿಂಗ್, ಕೂಡಲೇ ಒಂದು ಇಂಗ್ಲಿಷ್ ಶಾಲೆಯನ್ನು ಪ್ರಾರಂಭಿಸಿದನು (ಕ್ರಿ. ಶ. ೧೮೩೭). ಅದಕ್ಕೆ ಕೆಲವು ಯುರೋಪಿಯನ್ ಹಾಗೂ ತಮಿಳುನಾಡಿನ ಕ್ರೈಸ್ತ ಮಕ್ಕಳು ಸೇರಿದರು. ಬಲು ಬೇಗ ಅದು ಸ್ಥಳದ ನಾಗರಿಕರ ಗಮನವನ್ನು ಸೆಳೆಯಿತು. ಅದರ ಪ್ರಯೋಜನವು ತಮ್ಮ ಮಕ್ಕಳಿಗೂ ದೊರೆಯಬೇಕು ಎಂಬ ಆಶಯದಿಂದ ಊರ ಪ್ರಮುಖರು ಸೇರಿ ನಿಧಿಯನ್ನು ಸಂಗ್ರಹಿಸಿದರು. ಮರುವರ್ಷ ಶಾಲಾ ಕಟ್ಟಡವನ್ನು ಸಿದ್ಧಗೊಳಿಸಿದರು. ಈ ಎತ್ತುಗಡೆಯಲ್ಲಿ ಆಗ ಧಾರವಾಡದಲ್ಲಿ ಸದರ್ ಅಮೀನ್ ಆಗಿದ್ದ ವೆಂಕಟರಾವ ಎಂಬವನು ಪ್ರಮುಖ ಪಾತ್ರವನ್ನು ವಹಿಸಿದ್ದನೆಂದು ತಿಳಿದುಬಂದಿದೆ. ಧಾರವಾಡದ ಇಂದಿನ ಬಾಸೆಲ್ ಮಿಶನ್ ಹೈಸ್ಕೂಲಿಗೆ ಈ ಶಾಲೆಯೇ ತಳಹದಿ.

ಬಾಸೆಲ್ ಮಿಶನ್‌ದವರು ಸಹ ತಮ್ಮದೇ ಆದ ಬೋಧಕ ಶಾಲೆಯನ್ನು ಮಂಗಳೂರಲ್ಲಿ ಆರಂಭಿಸಿದರು. ಮೊದಲ ತರಬೇತಿಗಾಗಿ ಇದ್ದ ೨೫ ಜನ ವಿದ್ಯಾರ್ಥಿಗಳು ೧೮–೨೦ ವರ್ಷದ ತರುಣರು. ಕೊನೆಯವರೆಗೆ ಉಳಿದವರು ೫–೬ ಜನರು ಮಾತ್ರ. ತರಬೇತಿಯು ೪–೫ ವರ್ಷಗಳ ಅವಧಿಯದಾಗಿತ್ತೆಂಬುದರ ಮೇಲಿಂದ, ಅದರ ಆಳ ಹಾಗೂ ವ್ಯಾಪ್ತಿಗಳನ್ನು ಕಲ್ಪಿಸಬಹುದಾಗಿದೆ. ಮೊವ್‌ಗ್ಲಿಂಗ್ ಕನ್ನಡ ಕಾವ್ಯ, ವ್ಯಾಕರಣ, ಬೈಬಲ್ಲಿನ ತಾತ್ವಿಕ – ತಳಹದಿ ಇವುಗಳನ್ನು ಬೋಧಿಸುತ್ತಿದ್ದನು. ಸಂಸ್ಕೃತ ಭಾಷೆ ಮತ್ತು ಭಾರತೀಯ ತತ್ವಜ್ಞಾನಗಳನ್ನು ಗುಂಡರ್ಟ್ ಕಲಿಸುತ್ತಿದ್ದನು. ಮುಂದೆ ಜರ್ಮನ್, ಲ್ಯಾಟಿನ್, ಗ್ರೀಕ್ ಭಾಷೆಗಳನ್ನೂ ಅಭ್ಯಾಸ ಪಟ್ಟಿಯಲ್ಲಿ ಸೇರಿಸಲಾಯಿತು. ಪ್ರವಚನದ ಕ್ರಮವನ್ನು ತಿಳಿಯಲೋಸುಗ ವಿದ್ಯಾರ್ಥಿಗಳು 'ಬಹಿರಂಗ ಬೋಧನೆ'ಯ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕಾಗುತ್ತಿತ್ತು. ಇವರು ಬೋಧನೆ'ಯ ಆರಂಭ ಹಾಗೂ ಅಂತ್ಯದಲ್ಲಿ

ತಮಿಳು, ಕನ್ನಡ ಪ್ರಾರ್ಥನಾ ಗೀತಗಳನ್ನು ಹಾಡುತ್ತಿದ್ದರು. ಪಾಠ ಕ್ರಮದಲ್ಲಿ ಶೈಕ್ಷಣಿಕ ಪ್ರವಾಸವೂ ಸೇರಿರುತ್ತಿದ್ದಿತು. ಉದ್ದೇಶ — ದೇಶೀಯರ ಸ್ವಭಾವ ಪರಿಚಯ: ಮತ್ತು ಕ್ಷೇತ್ರ ಸ್ಥಳಗಳಲ್ಲಿ ನಡೆಯುವ ಹಿಂದೂ ಆಚಾರಗಳ ಪರಿಶೀಲನೆ. ಈ ತರಬೇತಿ ಕೇಂದ್ರಕ್ಕೆ ಕೆಲವು ಕಾಲ ಅಡೆತಡೆಯುಂಟಾಗಿದ್ದರೂ, ಕ್ರಿ.ಶ. ೧೮೪೪ರಿಂದ ನಾಲ್ಕು ವರ್ಷಗಳ ನಿಶ್ಚಿತ ಅಭ್ಯಾಸ ಕ್ರಮವನ್ನೊಳಗೊಂಡು ನಿಯಮಿತವಾಗಿ ನಡೆಯತೊಡಗಿತು. ವಿದ್ಯಾರ್ಥಿಗಳ ಸಂಖ್ಯೆಯು ಒಟ್ಟಿನಲ್ಲಿ ಕಡಿಮೆಯಾಗಿದ್ದರೂ, ಆಳವಾದ ಅಧ್ಯಯನದಿಂದಾಗಿ ಇಲ್ಲಿ ತರಬೇತಿ ಹೊಂದಿದ್ದ ದೇಶೀಯ ಬೋಧಕರು ಸಾಹಿತ್ಯಿಕ ಕೆಲಸದಲ್ಲಿ ಪಾಲ್ಗೊಂಡಿದ್ದಾರೆ.

ಬಾಸೆಲ್ ಮಿಶನ್ನಿನವರ ವಿದ್ಯಾಕ್ಷೇತ್ರದಲ್ಲಿಯ ಪ್ರಗತಿಯು ಬೆರಗುಗೊಳಿಸುವಂತಿದೆ. ಕ್ರಿ.ಶ. ೧೮೫೩ರ ಹೊತ್ತಿಗೆ ಅವರು ೫೦ ಪ್ರಾಥಮಿಕ ಶಾಲೆಗಳನ್ನೂ ೮ ಹೈಸ್ಕೂಲುಗಳನ್ನೂ ನಡೆಸುತ್ತಿದ್ದರು. ಶಾಲೆಗಳಲ್ಲಿ ಶಿಸ್ತನ್ನು ಚೆನ್ನಾಗಿ ಕಾಯ್ದುಕೊಳ್ಳಲಾಗುತ್ತಿತ್ತು. ಮೇಲಿನ ವರ್ಗದ ವಿದ್ಯಾರ್ಥಿಗಳಿಂದ ಶುಲ್ಕವನ್ನು ವಸೂಲು ಮಾಡುತ್ತಿದ್ದರಲ್ಲದೆ, ಶಾಲೆ ತಪ್ಪಿಸಿದವರಿಗೆ ದಂಡವನ್ನು ವಿಧಿಸಲಾಗುತ್ತಿತ್ತು.[೮] ಶಿಕ್ಷಣ ಕ್ಷೇತ್ರದ ಇನ್ನಿತರ ಅಂಶಗಳಲ್ಲಿಯೂ ಇವರ ಕೊಡುಗೆಯು ಹಿರಿದೆನಿಸಿದೆ. ಔದ್ಯೋಗಿಕ ಶಾಲೆಗಳನ್ನು ನಡೆಸಿದುದು ಇವರದೊಂದು ವೈಶಿಷ್ಟ್ಯವಾಗಿದೆ. ಸ್ತ್ರೀಯರ ಶಿಕ್ಷಣಕ್ಕೂ ಮನಗೊಟ್ಟು ಹಲವಾರು ಬೋರ್ಡಿಂಗ್ ಶಾಲೆಗಳನ್ನು ಆರಂಭಿಸಿದರು. ಇನ್ನೊಂದು ಮಹತ್ವದ ಮಾತೆಂದರೆ, ಕ್ರಿಶ್ಚಿಯನ್ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವು ಉಚಿತವೂ ಕಡ್ಡಾಯವೂ ಆಗುವಂತೆ ನೋಡಿಕೊಂಡರು.

ಇದುವರೆಗಿನ ಶಿಕ್ಷಣ ವಿಕಾಸ ಕಥನವು ಪ್ರೊಟೆಸ್ಟಂಟ್ ಮಿಶನರಿಗಳಿಗೇ ಅನ್ವಯಿಸಿದೆಯಾದರೂ, ರೋಮನ್ ಕೆಥಲಿಕರು ಸಹ ತಕ್ಕಮಟ್ಟಿಗೆ ಕೆಲಸ ಮಾಡಿದ್ದಾರೆ. ಬೆಂಗಳೂರಿನಲ್ಲಿದ್ದ ರೋಮನ್ ಕೆಥಲಿಕ್ ಸಂಘವು ಹಲವು ಶಾಲೆಗಳನ್ನು ನಡೆಸುತ್ತಿದ್ದು, ಅವಕ್ಕೆ ಬೇಕಾಗುವ ಪಠ್ಯಪುಸ್ತಕಗಳನ್ನು ತಮಿಳಿನಿಂದ ಭಾಷಾಂತರಿಸಿ ತನ್ನದೇ ಆದ ಅಚ್ಚುಕೂಟದಲ್ಲಿ ಮುದ್ರಿಸಿದೆ. ಇತ್ತ ಮಂಗಳೂರಿನಲ್ಲಿದ್ದ ಸೊಸೈಟಿ ಆಫ್ ಜೀಸಸ್ ಸಂಸ್ಥೆಯವರಿಗೆ ಬಾಸೆಲ್ ಮಿಶನ್ನಿನವರ ಅವ್ಯಾಹತ ಕಾರ್ಯವನ್ನು ಕಂಡು ಸುಮ್ಮನುಳಿಯುವುದು ಸಾಧ್ಯವಿರಲಿಲ್ಲ. ಬಾಸೆಲ್‌ದವರು ಪ್ರಾಥಮಿಕ, ಮಾಧ್ಯಮಿಕ ಶಾಲೆಗಳನ್ನು ನಡೆಸಿದ್ದಾದರೆ, ಎಸ್. ಜೆ. ಸಂಸ್ಥೆಯ ಕೆಥಲಿಕರು ಮಂಗಳೂರಲ್ಲಿ ಪ್ರಥಮವಾಗಿ ಕಾಲೇಜನ್ನು ತೆರೆದು (ಅಲ್ಲೊಯಿಸಿಯಸ್ ಕಾಲೇಜ್) ಜಿಲ್ಲೆಯ ಶಿಕ್ಷಣ ಪ್ರಗತಿಗೆ ಕಾರಣರಾಗಿದ್ದಾರೆ. ಆದರೂ ಪ್ರೊಟೆಸ್ಟಂಟರು ಶೈಕ್ಷಣಿಕ ಕಾರ್ಯದ ನಿಮಿತ್ತ ಕನ್ನಡ ಸಾಹಿತ್ಯದ ವಿಕಾಸಕ್ಕೆ ನೆರವಾದ ರೀತಿಯಲ್ಲಿ ಕೆಥಲಿಕರ ಕಾರ್ಯವು ಸಾಹಿತ್ಯ ಕ್ಷೇತ್ರದಲ್ಲಿ ಕಂಡುಬರಲಿಲ್ಲ.

## ೩.೨ ಶಿಕ್ಷಣದ ದ್ವಿತೀಯ ಘಟ್ಟ

ನವಭಾರತದ ಶಿಕ್ಷಣದ ದ್ವಿತೀಯ ಘಟ್ಟವು ಕ್ರಿ.ಶ. ೧೮೫೪–೫೫ರಿಂದ ಆರಂಭವಾಯಿತೆಂದು ತಿಳಿಯಲಾಗುತ್ತದೆ. ಅಲ್ಲಿಯವರೆಗಿನ ಸರಕಾರೀ ಶಿಕ್ಷಣ ಧೋರಣೆಯ ವಿವಿಧ ನಿಲುಮೆಗಳನ್ನು ಹೀಗೆ ಸಂಕ್ಷೇಪಿಸಬಹುದು. ಭಾರತಕ್ಕೆ ಯುರೋಪಿಯನ್ನರು ಬಂದ ಆರಂಭ ಕಾಲದಲ್ಲಿ ತಾವೇ ಪೌರ್ವಾತ್ಯ ವಿದ್ಯೆಯನ್ನು ಕಲಿಯುವ ವಾತಾವರಣವು ಮೊದಲಿಗೆ ನಿರ್ಮಾಣವಾಯಿತು. ವಿಲಿಯಮ್ ಜೋನ್ಸ್ ಹಾಗೂ ಅವನ ಸಮಕಾಲೀನರು ಕೈಕೊಂಡ ಸಂಸ್ಕೃತ ವ್ಯಾಸಂಗವು ಇದಕ್ಕೆ ಒಂದು ದೊಡ್ಡ ನಿದರ್ಶನ. ಅನಂತರ ದೇಶೀಯರಿಗೂ ವಿದ್ಯೆಯನ್ನು ಕಲಿಸುವುದಕ್ಕೆ ಏರ್ಪಾಡು ಮಾಡಬೇಕು, ಎಂದಾಗ ಅದು ಪೌರ್ವಾತ್ಯ ವಿದ್ಯೆಯಾಗಬೇಕೆ, ಪಾಶ್ಚಾತ್ಯ ಶಿಕ್ಷಣವಾಗಬೇಕೆ — ಎಂಬ ಬಗ್ಗೆ ಎರಡು ನಿಶ್ಚಿತ ಸ್ವರೂಪದ ವಾದಗಳು ತಲೆಯೆತ್ತಿದವು. ಕೊನೆಗೆ ಭಾರತೀಯರಿಗೆ ಪಾಶ್ಚಾತ್ಯ ವಿದ್ಯೆಯನ್ನೇ ನೀಡಬೇಕು ಎಂಬುದು ಸರಕಾರದ ಒಟ್ಟಿನ ನಿಲುಮೆಯಾಯಿತು (ಕ್ರಿ.ಶ. ೧೮೩೫). ಆಗ ಭಾಷಾ ಮಾಧ್ಯಮದ ಪ್ರಶ್ನೆ ಮುಂದೆ ಬಂದಿತು. ಪಾಶ್ಚಾತ್ಯ ವಿದ್ಯೆಯನ್ನು ದೇಶ ಭಾಷೆಯಲ್ಲಿಯೆ ಕೊಡಬೇಕೆನ್ನುವುದು ಜರ್ವಿಸ್ ಮುಂತಾದವರ ಪ್ರತಿಪಾದನೆಯಾದರೆ, ಇಂಗ್ಲಿಷ್ ಭಾಷೆಯ ಮೂಲಕವೇ ಅದು ನಡೆಯಬೇಕೆಂಬುದು ಅಂತಿಮವಾಗಿ ನೆಲೆಗೊಂಡಿತು. ಇದುವೆ ಇಂಗ್ಲಿಷ್ ಶಾಲೆಗಳ ಪ್ರಾರಂಭಕ್ಕೆ ಪೀಠಿಕೆಯಾಯಿತು.

ಈ ನಿಲುಮೆ ದೇಶದ ಎಲ್ಲ ಪ್ರಾಂತಗಳಲ್ಲಿಯೂ ಸಮಾನವಾಗಿರಲಿಲ್ಲ. ಕ್ರಿ.ಶ. ೧೮೫೪–೫೫ರಿಂದ ಮಾತ್ರ ಇಡೀ ದೇಶಕ್ಕೆ ಅನ್ವಯಿಸುವಂತಹ ಏಕರೂಪವಾದ ಶಿಕ್ಷಣ ಯೋಜನೆಯು ಸಿದ್ಧವಾಯಿತು. ಶಿಕ್ಷಣದ ಆಗು ಹೋಗುಗಳನ್ನು ನೋಡಿಕೊಳ್ಳಲು ಪ್ರತ್ಯೇಕವಾದ ಶಿಕ್ಷಣ ಖಾತೆಯು (Department of Public Instruction) ಪ್ರತಿಯೊಂದು ಪ್ರಾಂತದಲ್ಲಿಯೂ ಅಸ್ತಿತ್ವದಲ್ಲಿ ಬಂದಿತು. ಸರಕಾರೀ ಹಾಗೂ ಖಾಸಗೀ ಸಂಸ್ಥೆಯ ಶಾಲೆಗಳ ಆಡಳಿತದಲ್ಲಿ ಸಮತೋಲನವನ್ನು ಕಾಯ್ದುಕೊಳ್ಳಲು ಖಾಸಗೀ ಶಾಲೆಗಳಿಗೆ ವಾರ್ಷಿಕ ಸಹಾಯಧನ (grant-in-aid) ಕೊಡುವ ಏರ್ಪಾಡಾಯಿತು. ಪ್ರಾಥಮಿಕ, ಮಾಧ್ಯಮಿಕ ಮತ್ತು ಉಚ್ಚ ಎಂಬ ಶಿಕ್ಷಣದ ಹಂತಗಳು ಸ್ಪಷ್ಟವಾಗಿ ರೂಪುಗೊಂಡವು. ಮೊದಲಿನ ಎರಡು ಹಂತಗಳಲ್ಲಿಯ ವಿದ್ಯಾ ಮಂದಿರಗಳ ಸಂಖ್ಯೆಯು ಹೆಚ್ಚಾಯಿತು. ಉಚ್ಚ ಶಿಕ್ಷಣಕ್ಕೆ ಮೂರ್ತಸ್ವರೂಪ ಕೊಡಲೆಂದೇ ಕಲ್ಕತ್ತಾ, ಮದ್ರಾಸ, ಮುಂಬಯಿ ಈ ಮೂರು ಸ್ಥಳಗಳಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿತವಾದವು (ಕ್ರಿ.ಶ.೧೮೫೭). ಪಠ್ಯಪುಸ್ತಕಗಳು ಹೆಚ್ಚು ಸಮರ್ಪಕವಾಗುವಂತೆ ರಚಿಸುವುದರ ಅಗತ್ಯವು ತಲೆದೋರಿತು. ಹೀಗೆಯೇ, ವಿದ್ಯಾಲಯಗಳ ನಿಯಮಿತವಾದ ಪರೀಕ್ಷಣ, ಶಿಕ್ಷಕರ ತರಬೇತಿ ಇವೇ ಮುಂತಾದ ವಿಷಯಗಳಲ್ಲಿ ಕೈಕೊಳ್ಳಬೇಕಾದ ಕ್ರಮಗಳು ಆಚರಣೆಯಲ್ಲಿ ಬಂದುವು. ಇಂತು ಮೇಲ್ಕಂಡ

ಅಂಶಗಳ ಕುರಿತು ಪ್ರತಿಯೊಂದು ಪ್ರಾಂತದವರೂ ವಿವರವಾದ ಯೋಜನೆಗಳನ್ನು ಸಿದ್ಧಗೊಳಿಸಿದರು.

ಮೈಸೂರು ಸಂಸ್ಥಾನವು ಆಗ ಬ್ರಿಟಿಶರ ನೇರ ಆಡಳಿತದಲ್ಲಿಯೇ ಇದ್ದುದರಿಂದ ಅಲ್ಲಿಯೂ ಇಂಥದೊಂದು ಯೋಜನೆಯು ದೇವೆರಾ (Deveraux) ಎಂಬ ಅಧಿಕಾರಿಯಿಂದ ರೂಪಿಸಲ್ಪಟ್ಟಿತು. ಅದರನ್ವಯ ಇಡೀ ರಾಜ್ಯದ ಶಿಕ್ಷಣ ವ್ಯವಸ್ಥೆಯನ್ನು ನೋಡಿಕೊಳ್ಳಲು 'ಡೈರೆಕ್ಟರೇಟ್ ಆಫ್ ಇನ್‌ಸ್ಟ್ರಕ್ಷನ್' ಪ್ರತ್ಯೇಕವಾಗಿ ಅಸ್ತಿತ್ವದಲ್ಲಿ ಬಂದಿತು. ಸ್ಟೀಫನ್ಸ್ ಎಂಬುವವನು ಅದರ ಪ್ರಥಮ ಡೈರೆಕ್ಟರ್ ಆಗಿ ನೇಮಕ ಹೊಂದಿದನು (೧೮೫೮). ಅದೇ ವರ್ಷ ಸರಕಾರವು ಬೆಂಗಳೂರಲ್ಲಿ (ಸೆಂಟ್ರಲ್) ಹೈಸ್ಕೂಲನ್ನು ಆರಂಭಿಸಿತು. ಅದುವರೆಗೆ ಮಿಶನರಿಗಳು ನಡೆಯಿಸುತ್ತಿದ್ದ ಎಲ್ಲ ಶಾಲೆಗಳು ಈ ಹೊಸ ಶಿಕ್ಷಣ ಖಾತೆಯ ಅಧೀನಕ್ಕೆ ಒಳಪಟ್ಟವು.

ಕ್ರಿ.ಶ. ೧೮೬೧ರಲ್ಲಿ ಮೈಸೂರು ಸಂಸ್ಥಾನದ ಮೊತ್ತಮೊದಲಿನ ಶಿಕ್ಷಕ ತರಬೇತಿ ಕೇಂದ್ರದ (ನಾರ್ಮಲ್ ಸ್ಕೂಲ್) ಸ್ಥಾಪನೆಯಾಯಿತು. ಶಿಕ್ಷಣೋದ್ಯಮವು ಭರದಿಂದ ಪ್ರಗತಿಯನ್ನು ಹೊಂದತೊಡಗಿತು. ಮೈಸೂರಿನ ಅಧಿಕಾರಿಗಳು, ಮಿಶನರಿಗಳು ಮತ್ತು ಸ್ವತಃ ಮಹಾರಾಜರು ಶೈಕ್ಷಣಿಕ ಪ್ರಗತಿಯಲ್ಲಿ ತುಂಬಾ ಆಸ್ಥೆಯುಳ್ಳವರಾಗಿದ್ದರು. ಜನತೆಯಲ್ಲಿ ಇಂಗ್ಲಿಷಿನ ಮೂಲಕ ಆಧುನಿಕ ವಿದ್ಯೆಯನ್ನು ಪಡೆಯುವ ಲವಲವಿಕೆಯು ದಿನದಿನಕ್ಕೆ ಬೆಳೆಯತೊಡಗಿತು. ವಿದ್ಯಾರ್ಜನೆಗೆ ಬೇಕಾಗುವ ಕ್ರಮಿಕ ಪುಸ್ತಕಗಳನ್ನು ಒದಗಿಸಲು ಮಿಶನರಿ ಹಾಗೂ ಸರಕಾರೀ ಮುದ್ರಣಾಲಯಗಳು ಸನ್ನದ್ಧವಾಗಿದ್ದವು. ಅಲ್ಲದೆ ಮುಂಬಯಿ, ಮದ್ರಾಸ ಪ್ರಾಂತಗಳಲ್ಲಿಯಂತೆ ಅನ್ಯಭಾಷಿಕರದೇ ಮೇಲುಗೈಯೆಂಬ ಪ್ರಮೇಯವು ಮೈಸೂರಲ್ಲಿ ಇಲ್ಲದ್ದರಿಂದ ಶಿಕ್ಷಣರಂಗದ ಪ್ರಗತಿಯಲ್ಲಿ ಕನ್ನಡವು ಪ್ರಾಶಸ್ತ್ಯವನ್ನು ಪಡೆಯಿತು. ಅದಕ್ಕೆ ಹತ್ತಿರವಾಗಿ ಇಂಗ್ಲಿಷ್ ಮತ್ತು ಸಂಸ್ಕೃತ ಇವುಗಳಿಗೆ ದ್ವಿತೀಯ ಪ್ರಾಶಸ್ತ್ಯವು ದೊರೆಯಿತೆನ್ನಬಹುದು.

ಕನ್ನಡ ನಿಷ್ಠೆಯೇ ಮೂರ್ತಿವೆತ್ತಂತೆ ಇದ್ದ, **ಬಿ. ಲೂಯಿ ರೈಸ್** ಮೈಸೂರಲ್ಲಿಯ ಶಿಕ್ಷಣ ಕಾರ್ಯಕ್ಕೆ ಸಂಬಂಧಿಸಿದ ವ್ಯಾಪಕ ಯೋಜನೆಯೊಂದನ್ನು ೧೮೬೮ರಲ್ಲಿ ತಯಾರಿಸಿದರು. ಇದರನ್ವಯ ಹೋಬಳಿಗೊಂದೊಂದು ಶಾಲೆಯ ಸ್ಥಾಪನೆಯಾಗಬೇಕೆಂಬ ಸೂಚನೆಯು ಕಾರ್ಯಾಚರಣೆಯಲ್ಲಿ ಬಂದು ಶಾಲೆಗಳ ಸಂಖ್ಯೆ ಹೆಚ್ಚಿತು. ಉಚ್ಚ ಶಿಕ್ಷಣ ವಿಚಾರದಲ್ಲಿ ಹೇಳುವುದಾದರೆ, ೧೮೭೫ರಲ್ಲಿ ಬೆಂಗಳೂರಿನ ಹೈಸ್ಕೂಲು ಸೆಂಟ್ರಲ್ ಕಾಲೇಜ್ ಆಗಿ ಮಾರ್ಪಟ್ಟಿತು. ಇದಕ್ಕೆ ಮೊದಲು ಕೂಡ ಕಾಲೇಜ್ ಮಟ್ಟದ ಒಂದೆರಡು ಸಂಸ್ಥೆಗಳಿದ್ದು ಅಲ್ಲಿ ಮದ್ರಾಸ ವಿಶ್ವವಿದ್ಯಾನಿಲಯದ ಬಿ.ಎ. ಪದವಿಯ ವರೆಗೆ ವಿದ್ಯಾರ್ಥಿಗಳನ್ನು ತರಬೇತುಗೊಳಿಸುತ್ತಿದ್ದರು. ಮೆಟ್ರಿಕ್ ಪರೀಕ್ಷೆಗೆ, ಮದ್ರಾಸ ಪ್ರಾಂತದ ದಕ್ಷಿಣ ಕನ್ನಡ, ಬಳ್ಳಾರಿ ಮುಂತಾದ ಪ್ರದೇಶಗಳಲ್ಲಿಯ ವಿದ್ಯಾರ್ಥಿಗಳಂತೂ ಸರಿಯೆ,

ಮೈಸೂರ ವಿದ್ಯಾರ್ಥಿಗಳೂ ಮದ್ರಾಸದಲ್ಲಿಯೇ ಪರೀಕ್ಷೆಗೆ ಕಟ್ಟುತ್ತಿದ್ದರು. ಮೈಸೂರು ವಿಶ್ವವಿದ್ಯಾನಿಲಯವು ಸ್ಥಾಪಿತವಾಗುವವರೆಗೂ (೧೯೧೬) ಮೈಸೂರಿನ ಕನ್ನಡ ಅಭ್ಯಾಸವೆಲ್ಲ ಮದ್ರಾಸ ಯುನಿವರ್ಸಿಟಿಯ ಆಶ್ರಯದಲ್ಲಿಯೆ ಬೆಳೆದು ಬಂತು.

ಕ್ರಿ.ಶ. ೧೮೮೧ರಲ್ಲಿ ಚಾಮರಾಜೇಂದ್ರರು ರಾಜ್ಯ ಸೂತ್ರಗಳನ್ನು ವಹಿಸಿಕೊಂಡ ಮೇಲೆ ಮೈಸೂರಲ್ಲಿ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಇವೆರಡೂ ವಿದ್ಯಾಭ್ಯಾಸಗಳಿಗೆ ಪ್ರೋತ್ಸಾಹ ದೊರೆಯಿತು. ಅವರ ಅಧಿಕಾರ ಸ್ವೀಕಾರದ ಮೊದಲ ವರ್ಷವೇ (ಮಹಾರಾಣಿ) ಗರ್ಲ್ಸ್ ಸ್ಕೂಲ್ ಸ್ಥಾಪಿತವಾಯ್ತು. ಅರಮನೆಯ ಅಧಿಕಾರಿ ಅಂಬಿಲ್ ನರಸಿಂಹಯ್ಯಂಗಾರನ ಆಸ್ಥೆಯಿಂದಾಗಿ ಸ್ತ್ರೀ ವಿದ್ಯಾಭ್ಯಾಸವು ಇನ್ನಷ್ಟು ವೃದ್ಧಿಗೊಂಡಿತು. ಅಲ್ಲದೆ ಬಾಲಿಕೆಯರಿಗಾಗಿ ಹಲವಾರು ಹೊಸ ಪುಸ್ತಕಗಳನ್ನು ಅವನು ಬರೆಯಿಸಿದನು. ಸಂಸ್ಕೃತ, ಕನ್ನಡ ಭಾಷೆಗಳ ಅಭಿವೃದ್ಧಿಯಾಗಬೇಕೆನ್ನುವ ಚಾಮರಾಜೇಂದ್ರರ ಧೋರಣೆಯಿಂದಾಗಿ ಕರ್ಣಾಟಕ ಭಾಷೋಜ್ಜೀವಿನೀ ಸಭಾ (೧೮೮೬–ಮೈಸೂರಲ್ಲಿ) ಮತ್ತು ಸಂಸ್ಕೃತ ವಿದ್ಯಾಲಯ (೧೮೮೯ – ಬೆಂಗಳೂರಲ್ಲಿ) ಅಸ್ತಿತ್ವದಲ್ಲಿ ಬಂದುವು. ಇವೆರಡೂ ಸಂಸ್ಥೆಗಳ ಮೂಲಕ ಕನ್ನಡ, ಸಂಸ್ಕೃತಗಳ ಉಚ್ಚ ಮಟ್ಟದ ವ್ಯಾಸಂಗ, ಪರೀಕ್ಷೆಗಳು ನಡೆಯುವುದು ಸಾಧ್ಯವಾಯಿತು. ಮೈಸೂರಲ್ಲಿ ೧೮೭೬ರಿಂದಲೂ ಇದ್ದ ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಕಾವ್ಯ ಹಾಗೂ ಮತಧರ್ಮಗಳ ಶಾಸ್ತ್ರಾಭ್ಯಾಸವು ನಡೆಯುತ್ತಿದ್ದುದು ಪ್ರಸಿದ್ಧವೇ ಆಗಿದ್ದಿತು. ಅನಂತರ ಅಲ್ಲಿಯ ವ್ಯಾಸಂಗ ವಿಷಯಗಳನ್ನು ಇನ್ನಷ್ಟು ವ್ಯಾಪಕಗೊಳಿಸಿದ್ದರಿಂದ ಅನ್ಯ ಪ್ರಾಂತಗಳಿಂದಲೂ ಪ್ರಾಚ್ಯ ವಿದ್ಯಾಸಕ್ತರು ಮೈಸೂರಿಗೆ ಬರುವಂತಾಯಿತು.

ವಿದ್ಯಾಮಂದಿರಗಳು ಬೆಳೆದಂತೆಲ್ಲ ಪಠ್ಯಪುಸ್ತಕಗಳು ಜತೆಗೂಡಿ ಬರಬೇಕಷ್ಟೆ; ಉತ್ತಮ ಪುಸ್ತಕಗಳನ್ನು ಪಠ್ಯವಾಗಿ ನಿರ್ಧರಿಸಲು ಕ್ರಿ. ಶ. ೧೮೭೩–೭೪ರಷ್ಟು ಹಿಂದೆ ಒಂದು ಪ್ರಯತ್ನ ನಡೆಯಿತು. ಸಿ. ರಂಗಾಚಾರ್ಲು ಮತ್ತು ಬಿ.ಎಲ್. ರೈಸ್ ಒಂದು ಸಮಿತಿಯಾಗಿ ಕೆಲವು ಕಾಲ ಆ ಕೆಲಸವನ್ನು ನಿರ್ವಹಿಸುತ್ತಿದ್ದರು. ಕ್ರಿ. ಶ. ೧೮೯೨ರಿಂದ ಮಾತ್ರ ಒಂದು ಅಧಿಕೃತ ಸಮಿತಿಯ ರಚನೆಯಾಗಿ, ಶಾಲೆಗಳ ಎಲ್ಲ ತರಗತಿಗಳಿಗೂ ಪಠ್ಯಪುಸ್ತಕಗಳನ್ನು ಗೊತ್ತುಪಡಿಸುವ, ರಚಿಸುವ ಕೆಲಸವನ್ನು ಅದಕ್ಕೆ ಒಪ್ಪಿಸಲಾಯಿತು.

ಮೈಸೂರಿನ ವಿದ್ಯಾಭಿವೃದ್ಧಿಯ ಕಾರ್ಯದಲ್ಲಿ ನಡೆದ ಇನ್ನೆರಡು ಮಹತ್ವದ ಘಟನೆಗಳೆಂದರೆ ಮತ್ತು ಕ್ರಿ.ಶ. ೧೮೮೪ರಲ್ಲಿ ಪ್ರಾಚ್ಯವಸ್ತು ಇಲಾಖೆ, ಕ್ರಿ. ಶ. ೧೮೯೧ರಲ್ಲಿ ಓರಿಯಂಟಲ್ ಲೈಬ್ರರಿ ಇವುಗಳ ಸ್ಥಾಪನೆ. ಓರಿಯಂಟಲ್ ಲೈಬ್ರರಿಯು ತನ್ನ ಆರಂಭದ ಏಳು ವರ್ಷಗಳಲ್ಲಿಯೆ ೧೩೫೮ ಹಸ್ತಪ್ರತಿಗಳನ್ನು ಮತ್ತು ೧೬೫೩ ಮುದ್ರಿತ ಕನ್ನಡ, ಸಂಸ್ಕೃತ ಕೃತಿಗಳನ್ನು ಕಲೆ ಹಾಕಿದುದಿದೆ. ಪ್ರಾಚ್ಯ ವಾಙ್ಮಯದ ನಿಧಿಕ್ಷೇಪದಂತಿದ್ದ ಈ ಲೈಬ್ರರಿಯು ಕ್ರಿ.ಶ. ೧೮೯೧ರಿಂದ ಸಾರ್ವಜನಿಕರಿಗೆ ಮುಕ್ತವಾಯಿತು. ಬೇಕೆಂದವರು

ಅವುಗಳ ಪ್ರತಿಗಳನ್ನು ಬರೆದುಕೊಳ್ಳುವ ಸೌಲಭ್ಯವಿದ್ದುದರಿಂದ ವಾಙ್ಮಯದ ಕುರಿತಾದ ಸಂಶೋಧನೆಗೆ ವಿಶೇಷವಾದ ನೆರವು ಸಂದಿತು.

ಇತ್ತ ಪ್ರಾಚ್ಯವಸ್ತು ಇಲಾಖೆಯ ಕೆಲಸ ಬೆಳೆದಂತೆಲ್ಲ ಕ್ರಿ.ಶ. ೧೮೯೦ರಲ್ಲಿ ಅದೊಂದು ಪ್ರತ್ಯೇಕ ಸರಕಾರೀ ಶಾಖೆಯೆಂದೇ ಪರಿಗಣಿಸಲ್ಪಟ್ಟುದು ಆ ಕಾರ್ಯದ ಮಹತಿಗೆ ನಿದರ್ಶನ. ಬಿ.ಎಲ್. ರೈಸರ ನೇತೃತ್ವದಲ್ಲಿ ಈ ಶಾಖೆಯು ಆರಂಭದಿಂದ ಕ್ರಿ.ಶ. ೧೯೦೬ರವರೆಗೆ ಒಂಬತ್ತು ಸಾವಿರದಷ್ಟು ಶಿಲಾಶಾಸನಗಳನ್ನು ಕಂಡುಹಿಡಿದು, ಪರಿಶೋಧಿಸಿ, ಅನುವಾದ ಟೀಕೆ ಟಿಪ್ಪಣಿಗಳೊಡನೆ ಪ್ರಕಟಿಸಿತು. ಅದು ಸಾಧಿಸಿದ ಇನ್ನು ಹಲವು ಪುರಾತತ್ತ್ವ ಅಂಶಗಳ ಶೋಧವೂ ಗಣನೀಯವಾಗಿದೆ.

ಇವೆರಡೂ ಸಂಸ್ಥೆಗಳ ಕಾರ್ಯಫಲವು 'ಎಪಿಗ್ರಾಫಿಯಾ ಕರ್ನಾಟಿಕಾ', 'ಬಿಬ್ಲಿಯಾಥೆಕಾ ಕರ್ನಾಟಿಕಾ', 'ಓರಿಯಂಟಲ್ ಲೈಬ್ರರಿ ಸೀರೀಜ್' — ಈ ಮಾಲಿಕೆಗಳ ಮೂಲಕ ನಮಗೆ ಲಭ್ಯವಾಗಿದ್ದು ಅವು ಸಾಹಿತ್ಯ, ಇತಿಹಾಸ ರಂಗದಲ್ಲಿ ಇಂದಿಗೂ ಅಮೌಲ್ಯ ಸಾಮಗ್ರಿಗಳಾಗಿ ಮೆರೆಯುತ್ತಲಿವೆ.

ಬಿ.ಎಲ್. ರೈಸ್ ಶಿಕ್ಷಣ ಖಾತೆಯಿಂದ ಬಿಡುಗಡೆಯಾದ ಮೇಲೆ, ಎಚ್.ಜೆ. ಭಾಭಾ ಸಂಸ್ಥಾನದ ಶಿಕ್ಷಣ ಸೂತ್ರಗಳನ್ನು ವಹಿಸಿಕೊಂಡರು (ಕ್ರಿ.ಶ. ೧೮೮೮)* ಪಾರಸೀಯರಾದ ಇವರನ್ನು ಮುಂಬಯಿಯಿಂದ ಕರತಂದವರು ದಿವಾನ್ ಶೇಷಾದ್ರಿ ಅಯ್ಯರ್. ಬಂದ ಹೊಸತರಲ್ಲಿ ಭಾಭಾ ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ವ್ಯವಹಾರಕ್ಕೆ ಎಷ್ಟು ಬೇಕೋ, ಅಷ್ಟೇ ಕನ್ನಡ ಕಲಿತವರೇನಲ್ಲ. ಶಾಲೆಗಳಲ್ಲಿಯ ಇನ್‌ಸ್ಪೆಕ್ಷನ್ ಕಾಲಕ್ಕೆ ವಿದ್ಯಾಭ್ಯಾಸದ ಕ್ರಮವನ್ನು ಚೆನ್ನಾಗಿ ತಿಳಿಯುವಷ್ಟು ಕನ್ನಡ ಬಲ್ಲವರಾಗಿದ್ದರು. ಭಾಭಾ ವೃತ್ತಿಪರ ಶಿಕ್ಷಣಕ್ಕೆ ಹೆಚ್ಚು ಗಮನಕೊಟ್ಟರು. ನಿಮ್ನ ವರ್ಗದವರ ಶಿಕ್ಷಣವನ್ನು ಪೋಷಿಸಿದರು. ಉಚ್ಚ ಶಿಕ್ಷಣಕ್ಕಾಗಿ ಸಂಸ್ಥಾನವನ್ನು ಬಿಟ್ಟು ಬೇರೆ ಸಂಸ್ಥೆಗಳಿಗೆ ಹೋಗುವವರಿಗಾಗಿ ಸ್ಕಾಲರ್‌ಶಿಪ್‌ನ ವ್ಯವಸ್ಥೆ ಮಾಡಿದರು. ಶಿಕ್ಷಣದ ಸಣ್ಣ ಸಣ್ಣ ವಿಷಯಗಳಿಗೂ ಗಮನವಿತ್ತರು. ಉದಾಹರಣೆಗೆ ಪ್ರಾಥಮಿಕ ಶಾಲೆಗಳಲ್ಲಿ ಆಡಿಸಲು ಮಕ್ಕಳಿಗಾಗಿ ಸೂಕ್ತವಾದ ಆಟಗಳ ಪರಿಚಯ ಪುಸ್ತಕ ಇರಲಿಲ್ಲ. ತನ್ನ ಸ್ನೇಹಿತರೊಬ್ಬರಿಗೆ ಹೇಳಿ ಅಂಥದೊಂದನ್ನು ಬರೆಯಿಸಿದರು. ('ಹಿಂದೂ ಆಟಗಳು').

ಹಿರಿಯ ಲೇಖಕರೆಂದು ಇಂದಿಗೂ ಮನ್ನಣೆ ಪಡೆದ ಟಿ. ಎಸ್. ವೆಂಕಣ್ಣಯ್ಯ, ಬಿ. ವೆಂಕಟನಾರಣಪ್ಪ, ಡಿ.ವಿ.ಜಿ – ಮೊದಲಾದವರು ಬಾಬಾ ಅವರನ್ನು ಆತ್ಮೀಯವಾದ ಗೌರವದಿಂದ ಕಾಣುತ್ತಿದ್ದರು. ಸುಪ್ರಸಿದ್ಧ ಚ. ವಾಸುದೇವಯ್ಯ ಹಾಗೂ ಭಾಭಾರವರ ಸ್ನೇಹವಂತೂ ಅನಿರ್ವಚನೀಯವೆನಿಸಿದೆ. ಡಿ.ವಿ.ಜಿ. ತಮ್ಮ ಸ್ಮೃತಿಚಿತ್ರಗಳು ಗ್ರಂಥದಲ್ಲಿ

* ಇದೇ ಹೆಸರಿನ ಸುಪ್ರಸಿದ್ಧ ವಿಜ್ಞಾನಿ ಭಾಭಾ ಇವರ ಮೊಮ್ಮಗ.

ಭಾಭಾ ಅವರನ್ನು ಹೊಗಳುತ್ತ 'ಭಾಭಾರವರ ಕನ್ನಡ ಪ್ರೇಮ ಅತಿಶಯವಾದದ್ದು' ಎಂಬ ಉದ್ಗಾರವೆತ್ತಿದ್ದಾರೆ. ಭಾಭಾ ಎಂ.ಎ. ರಾಮಾನುಜಯ್ಯಂಗಾರರ ಹಳಗನ್ನಡ ಕಾವ್ಯ ಪ್ರಕಟನೆಗೆ ಅದರಂತೆ, ಉತ್ತಮ ಮಟ್ಟದ ಪಠ್ಯಗಳು ಹೊರಡುವುದಕ್ಕೆ ಪ್ರೋತ್ಸಾಹವಿತ್ತರು. ಎಂ. ಶಾಮರಾಯ ವಿರಚಿತ 'ಮಹಿಸೂರ ಸಂಸ್ಥಾನದ ಚರಿತ್ರೆ'ಯ ರಚನೆಯಾಗಿದ್ದದ್ದು ಭಾಭಾರ ಸೂಚನೆಯ ಮೇರೆಗೆ. ಅವರ ಔದಾರ್ಯ, ಗುಣಗ್ರಾಹಕ ದೃಷ್ಟಿ ಮತ್ತು ಕನ್ನಡದಲ್ಲಿ ಆಸ್ಥೆ – ಈ ಅಂಶಗಳು ಸಂಸ್ಥಾನದ ಶಿಕ್ಷಣ ಹಾಗೂ ಸಾಹಿತ್ಯಗಳ ವಿಕಾಸಕ್ಕೆ ಪೋಷಕವಾದವು. ದೂರದ ಧಾರವಾಡದಲ್ಲಿದ್ದವರಿಗೂ (ಗು.ಫ.ಹಳಕಟ್ಟಿ ಮತ್ತು ರಾ.ಹ. ದೇಶಪಾಂಡೆ) ಅದು ಪ್ರಯೋಜನಕ್ಕೆ ಒದಗಿ ಬಂದಿತು.

ಮುಂಬಯಿ ಕರ್ನಾಟಕದಲ್ಲಿಯ ಶಿಕ್ಷಣ ರಂಗದ ದ್ವಿತೀಯ ಘಟ್ಟವನ್ನು ಈಗ ಪರಿಶೀಲಿಸೋಣ. 'ಬೋರ್ಡ್ ಆಫ್ ಎಜ್ಯುಕೇಶನ್' ಶಿಕ್ಷಣ ಸೂತ್ರಗಳನ್ನು ನಡೆಸುತ್ತಿದ್ದ ಕಾಲದಲ್ಲಿ (ಕ್ರಿ.ಶ. ೧೮೪೦ – ೧೮೫೫) ಕನ್ನಡಕ್ಕಾಗಿ ಆದ ಕೆಲಸವು ತೀರ ಕಡಿಮೆಯೆಂಬುದನ್ನು ಪರ್ಯಾಯವಾಗಿ ಸೂಚಿಸಿದ್ದಾಗಿದೆ. ದ್ವಿತೀಯ ಘಟ್ಟದ ಕಾಲದಲ್ಲಿ ಮುಂಬಯಿ ಪ್ರಾಂತದಲ್ಲಿಯೂ ಶಿಕ್ಷಣದ ಪುನಸ್ಸಂಘಟನೆಯಾಯಿತು. ಆಡಳಿತದ ಅನುಕೂಲತೆಯ ದೃಷ್ಟಿಯಿಂದ ಪ್ರಾಂತವನ್ನು ಮೂರು ವಿಭಾಗಗಳನ್ನಾಗಿ ಮಾಡಿ ಒಂದೊಂದು ವಿಭಾಗಕ್ಕೆ ಒಬ್ಬೊಬ್ಬ ಇನಸ್ಪೆಕ್ಟರನನ್ನು ನಿಯಮಿಸಲಾಯಿತು.

ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳನ್ನು ಮುಖ್ಯವಾಗಿ ಒಳಗೊಂಡಿದ್ದ 'ಸದರ್ನ್ ಡಿವಿಜನ್'ಗೆ ವಿಲಿಯಮ್ ಅಲೆನ್ ರಸೆಲ್ ಇನ್‌ಸ್ಪೆಕ್ಟರನಾಗಿ ಕ್ರಿ. ಶ. ೧೮೬೪ರಂದು ನೇಮಕವಾದನು. ಆ ಪ್ರದೇಶವು ಮೂಲತಃ ಕನ್ನಡದ್ದೇ ಎಂಬ ಪ್ರಜ್ಞೆಯು ವಾಲ್ಟರ್ ಎಲಿಯಟ್‌ನಂತೆ ಇವನಿಗೂ ಇದ್ದಿತು. ಸುಮಾರು ಇಪ್ಪತ್ತು ವರ್ಷ ಆ ವಿಭಾಗದಲ್ಲಿಯೆ ಇದ್ದನಾದ್ದರಿಂದ ಕನ್ನಡವನ್ನು ಅಲ್ಲಿ ಭದ್ರವಾಗಿ ನೆಲೆಯೂರಿಸುವ ಕಾರ್ಯದಲ್ಲಿ ಅವನು ವಿಶೇಷ ಯಶಸ್ಸನ್ನು ಗಳಿಸಿದನು.

ತಾನು ಅಧಿಕಾರ ವಹಿಸಿದ್ದ ಸುರುವಿಗೆ ಅಲ್ಲಿ ಕನ್ನಡವು ಯಾವ ಸ್ಥಿತಿಯಲ್ಲಿ ಇದ್ದಿತೆಂಬುದನ್ನು ಹೀಗೆ ವರ್ಣಿಸಿದ್ದಾನೆ:

"The Canarese language has never been taught and cultivated in this Division, as the Gujarati and Marathi in theirs... While in the other Divisions the means for a good vernacular education are ample, in this Division, Canarese books (and masters) are only in course of preparation. The vernacular of most of the masters is Canarese and those whose vernacular is Marathi, generally speak Canarese also. Still it is unfortunately true that very few, even the native Canarese

themselves can teach their mother-tongue in a scholarly manner. Most of them cannot even write it respectably to dictation. Many of them even know Marathi better than Canarese at least for school purposes.... this confusion of two languages, and the absence of proficiency in either puts the Southern Division scholars, I fear, some years behind those of the other two Divisions."[೯]

ಮೇಲಿನ ಅವತರಣಿಕೆಯಲ್ಲಿ ಕಾಣಿಸಿದಂತೆ ಸುರಿತ ಹಾಗೂ ಸರಿಯಾಗಿ ಕನ್ನಡವನ್ನರಿತಿದ್ದ ಶಿಕ್ಷಕರ ಅಭಾವ ಮತ್ತು ಪಠ್ಯಪುಸ್ತಕಗಳ ಕೊರತೆ ಇವು ಮುಂಬಯಿ ಕರ್ನಾಟಕದ ಶಿಕ್ಷಣ ಪ್ರಗತಿಗೆ ಅಡ್ಡಿ ಆತಂಕಗಳಾಗಿದ್ದು ಅವನ್ನು ನಿವಾರಿಸಲು ರಸೆಲ್ ಉದ್ಯುಕ್ತನಾದನು.

ಶಿಕ್ಷಣ ಖಾತೆಯ 'ಕೆನರೀಸ್ ಟ್ರಾನ್ಸ್‌ಲೇಟರ್' ಕಚೇರಿಯವರು ಆ ಕೆಲಸವನ್ನು ಕೈಗೊಂಡು ೧೮೬೫ರ ವೇಳೆಗೆ, ಕನ್ನಡ ವಾಚನ ಪುಸ್ತಕದ ಮೊದಲ ನಾಲ್ಕು ಪುಸ್ತಕಗಳನ್ನು ಹೊರತಂದಿದ್ದರು ಮತ್ತು ೫ನೆಯ ವಾಚನ ಪುಸ್ತಕವೂ ಸಿದ್ಧವಾಗಿದ್ದಿತು. ಆ ವೇಳೆಗೆ ಮೈಸೂರಿನ ಶಿಕ್ಷಣ ಖಾತೆಯು 'ಮೂರನೆಯ ಪುಸ್ತಕ'ದ ವರೆಗೆ ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸಿತ್ತೆಂಬುದರಿಂದ, ಮುಂಬಯಿ ಪ್ರಾಂತವು ಆ ದಿಶೆಯಲ್ಲಿ ಕಿಂಚಿತ್ತಾದರೂ ಮುಂದಡಿ ಇಟ್ಟಿದೆ, ಎಂದು ರಸೆಲ್ ಅದೇ ವರದಿಯಲ್ಲಿ ಕಾಣಿಸಿದ್ದಾನೆ.

ಪಠ್ಯಪುಸ್ತಕಗಳ ನಿರ್ಮಿತಿಗಾಗಿ ರಸೆಲ್ಲನ ಮಾರ್ಗದರ್ಶನದಲ್ಲಿ ವೆಂಕಟ ರಂಗೋ ಕಟ್ಟಿ (ಕೆನರೀಸ್ ಟ್ರಾನ್ಸಲೇಟರ್) ಮತ್ತು ಗಂಗಾಧರ ಮಡಿವಾಳೇಶ್ವರ ತುರಮರಿ (ಅಸಿಸ್ಟಂಟ್) ಕಟಿ ಬದ್ಧರಾಗಿದ್ದರೆಂದೇ ಹೇಳಬೇಕು (೧೮೬೭). ವಾಚನ ಪುಸ್ತಕಗಳು ಹೆಚ್ಚಾಗಿ ಮೇಜರ್ ಕ್ಯಾಂಡೀ ವಿರಚಿತ ಮರಾಠಿ ಕೃತಿಗಳ ರೂಪಾಂತರಗಳೇ ಆಗಿದ್ದವು. ಇತಿಹಾಸ, ಗಣಿತ ಮುಂತಾದ ಇತರ ಪಠ್ಯಗಳ ಪರಿಸ್ಥಿತಿಯೂ ಹಾಗೆಯೇ ಇದ್ದಿತು. ಕವಿತೆಯ ಸಂಗ್ರಹಗಳನ್ನು ಮಾತ್ರ ಕನ್ನಡ ಕೃತಿಗಳಿಂದಲೇ ಸಿದ್ಧಪಡಿಸಬೇಕಲ್ಲವೆ. ಆ ಕೆಲಸವನ್ನು ತುರಮರಿಯವರು ಮೊದಲ ಬಾರಿಗೆ (ಕ್ರಿ.ಶ. ೧೮೬೭–೬೮) ಕೈಕೊಂಡುದನ್ನು ಇಲ್ಲಿ ನೆನೆಯಬೇಕು.

ಕ್ರಿ.ಶ. ೧೮೮೦ನೆಯ ದಶಕದಿಂದ ಮಾತ್ರ ಸ್ವತಂತ್ರವಾಗಿಯೇ ಪಾಠಗಳನ್ನು ಬರೆದು, ಬರೆಯಿಸಿ, ಪಠ್ಯ ಪುಸ್ತಕಗಳಲ್ಲಿ ಸೇರಿಸಲಾಯಿತು. ವೆಂಕಟ ರಂಗೋ ಕಟ್ಟಿ ಸಂಪಾದಿತ ಐದನೆಯ ಪುಸ್ತಕದಲ್ಲಿ ಗೋಕಾವಿಯ ತಡಸಲು, ಹಂಪಿ, ಗೆರಸೊಪ್ಪೆ, ಆನೆಗುಂದಿ ಮುಂತಾದ ಕನ್ನಡ ಪ್ರದೇಶಗಳ ಕುರಿತ ಪಾಠಗಳನ್ನು ಕಾಣುತ್ತೇವೆ. ಕನ್ನಡದ ಪ್ರಾಚೀನ ನಿಘಂಟುವಾದ 'ಕರ್ನಾಟಕ ಶಬ್ದಮಂಜರಿ'ಯನ್ನು ಆಧುನಿಕ ಶಬ್ದಕೋಶದ ರೂಪಕ್ಕೆ ಅಳವಡಿಸಿಕೊಳ್ಳುವ ಕಾರ್ಯವನ್ನೂ ತುರಮರಿ ಕ್ರಿ. ಶ. ೧೮೬೭-೬೮ರ ಸುಮಾರಿಗೆ ಕೈಗೊಂಡದ್ದಿದೆ.[೧೦]

ಹೀಗೆ ಸಿದ್ಧವಾದ ಪಠ್ಯಪುಸ್ತಕಗಳು ಸರಕಾರೀ ಡಿಪೋಗಳ ಮೂಲಕ ಮಾರಾಟವಾಗುತ್ತಿದ್ದವು. ಕ್ರಿ.ಶ. ೧೮೬೪–೬೫ರಲ್ಲಿ ಇವುಗಳ ಮಾರಾಟ ಸಂಖ್ಯೆಯು ೫೨೦೦ ಪ್ರತಿಗಳದ್ದಾದರೆ, ಎರಡೇ ವರ್ಷಗಳ ಅಂತರದಲ್ಲಿ ಎಂದರೆ ಕ್ರಿ.ಶ. ೧೮೬೭–೬೮ ರಲ್ಲಿ ಸುಮಾರು ೨೭ ಸಾವಿರ ಕನ್ನಡ ಪಠ್ಯಗಳು ವಿಕ್ರಯವಾದುವೆಂಬುದರಿಂದ ಶಿಕ್ಷಣ ಪ್ರಸಾರವು ಅದೆಷ್ಟು ಭರದಿಂದ ಸಾಗಿದ್ದಿತೆಂಬುದನ್ನು ಕಂಡುಕೊಳ್ಳಬಹುದು. ಪಠ್ಯಗಳಾದ ಕಾರಣದಿಂದ ಅನೇಕ ಹಳೆಯ ಕಾವ್ಯಗಳು, ಕಾವ್ಯಭಾಗಗಳು ಮತ್ತು ವ್ಯಾಕರಣ ಗ್ರಂಥಗಳು ಇವುಗಳ ಅಭ್ಯಾಸವು ಆಗ ನಡೆಯಿತು. ಮುಲ್ಕೀ ಪರೀಕ್ಷೆಯ ಮಟ್ಟದಲ್ಲಿದ್ದವರಿಗಾಗಿ ರಾಜಶೇಖರವಿಳಾಸ, ಜೈಮಿನಿಭಾರತಗಳ ಜೊತೆಗೆ ಶಬ್ದಮಣಿ ದರ್ಪಣ, ಶಬ್ದಸಿದ್ಧಿ ನಿಬಂಧ (Treatise on Etymology) ಇವನ್ನೂ – ಪಠ್ಯವಾಗಿ ನಿಯಮಿಸಿದ್ದನ್ನು (ಉದಾ.ಗೆ ೧೮೮೨ ರಲ್ಲಿ) ಗಮನಿಸಿದರೆ ಆಗಿನ ಕಾಲಕ್ಕೆ ಕನ್ನಡದ ಆಳವಾದ ಅಭ್ಯಾಸ ನಡೆಯುತ್ತಿತ್ತೆಂದು ಹೇಳಬೇಕಾಗುವುದು.

ರಸೆಲ್ ಕಂಡಿದ್ದ ಇನ್ನೊಂದು ಕೊರತೆ, ಶಿಕ್ಷಕರನ್ನು ಕುರಿತದ್ದು. ಶಿಕ್ಷಕರೇನೋ ಬೇಕಾದಷ್ಟು ಜನ ಇದ್ದರು. ಆದರೆ ಕನ್ನಡದಲ್ಲಿ ತಕ್ಕ ಪರಿಶ್ರಮವಿದ್ದು ಕಲಿಸುವಿಕೆಯಲ್ಲಿ ನುರಿತವರಾದ ಶಿಕ್ಷಕರು ಇರಲಿಲ್ಲ. ಇಂತಹವರನ್ನು ತಯಾರಿಸಲು ಕ್ರಿ.ಶ. ೧೮೫೬ರಂದು ಧಾರವಾಡದಲ್ಲಿ ನಾರ್ಮಲ್ ಸ್ಕೂಲಿನ ಸ್ಥಾಪನೆಯಾಗಿದ್ದಿತು. ಇದುವೆ ಕನ್ನಡ ಟ್ರೇನಿಂಗ್ ಕಾಲೇಜಿನ ಉಗಮಸ್ಥಾನ. ಸಾಕಷ್ಟು ವಿದ್ಯಾರ್ಥಿಗಳು ಬರಲಿಲ್ಲ ಎಂಬ ಕಾರಣದಿಂದ ಅದನ್ನು ಕ್ರಿ. ಶ. ೧೮೬೧ರಲ್ಲಿ ಬೆಳಗಾಂವಿಗೆ ಸ್ಥಳಾಂತರಿಸಲಾಯಿತು. ವಿದ್ಯಾರ್ಥಿಗಳೇನೊ ಮುಂಬಂದರು. ಆದರೆ ಅವರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಮರಾಠಿಗರು. ಕ್ರಿ.ಶ. ೧೮೫೬ರಿಂದ ೧೮೬೧ರವರೆಗೆ ನಾರ್ಮಲ್ ಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದ ಚೆನ್ನಬಸಪ್ಪ ಮತ್ತು ಆ ಮುಂದಿನ ಮೂರು ವರ್ಷ ಅಧ್ಯಾಪಕರಾಗಿದ್ದ ವೆಂ. ರಂ. ಕಟ್ಟಿ ಇವರಿಬ್ಬರೂ ಪರಿಸ್ಥಿತಿಯನ್ನು ಸುಧಾರಿಸಲು ಪರಿಶ್ರಮಿಸಿದರು. ಆ ಸಮಯದಲ್ಲೇ ರಸೆಲ್ ವಿದ್ಯಾಧಿಕಾರಿಯಾಗಿ ಬಂದುದು (ಕ್ರಿ. ಶ. ೧೮೬೪) ಮತ್ತು ಅದೇ ವರುಷವೇ ಚೆನ್ನಬಸಪ್ಪ ಈ ಟ್ರೇನಿಂಗ್ ಸ್ಕೂಲಿನ ಪ್ರಿನ್ಸಿಪಾಲರಾದದ್ದು ಒಂದು ಅಪೂರ್ವ ಯೋಗಾಯೋಗವಾಗಿ ಪರಿಣಮಿಸಿತು. ತುರಮರಿಯವರೂ ಅಲ್ಲಿ ಸಹಾಧ್ಯಾಪಕರಿದ್ದುದು ಬಂಗಾರಕ್ಕೆ ಕುಂದಣವನ್ನು ಕೂಡಿಸಿದಂತಾಯಿತು. ಮರಾಠಿ ವಾತಾವರಣವು ಒಂದೆರಡು ವರ್ಷಗಳಲ್ಲಿಯೆ ತಿಳಿಯಾಗುತ್ತ ನಡೆದು, ಅರ್ಧಕ್ಕಿಂತ ಹೆಚ್ಚು ಜನ ಕನ್ನಡ ವಿದ್ಯಾರ್ಥಿಗಳೇ ಮುಂಬಂದರು. ಇದೇ ವೇಳೆಗೆ ರಸೆಲ್ ಸರಕಾರಕ್ಕೆ ಬರೆದು, ಈ ತರಬೇತಿಯ ಶಾಲೆಯನ್ನು ಕಾಲೇಜಿನ ಮಟ್ಟಕ್ಕೆ ಏರಿಸಿದುದು ಒಂದು ದೊಡ್ಡ ಸಾಧನೆಯಾಗಿದೆ.

ಕ್ರಿ. ಶ. ೧೮೬೭ರಲ್ಲಿ ಹುಯಿಲಗೋಳ ಭುಜಂಗರಾಯರು 'ಪ್ರಿನ್ಸಿಪಾಲ್' ಆಗಿ ಬರುವ ವೇಳೆಗೆ ಟ್ರೇನಿಂಗ್ ಕಾಲೇಜಿನಲ್ಲಿ ಕನ್ನಡ ಗಂಟೆಯು ನಿನದಿಸತೊಡಗಿತು.

'ಟ್ರೇನಿಂಗ್ ಕಾಲೇಜು ಕನ್ನಡ ವಾಙ್ಮಯದ ಮಾತೃ ಸ್ಥಾನವು' ಎಂಬ ಪ್ರಜ್ಞೆಯು ೧೮೬೮ರಷ್ಟು ಹಿಂದೆಯೇ ಮೂಡಿದ್ದುದು ಎಷ್ಟೊಂದು ಅರ್ಥಪೂರ್ಣವಾಗಿದೆ![೧೧] ಅಂಥ ಪ್ರಜ್ಞೆಯನ್ನು ಮೂಡಿಸುವಲ್ಲಿ, ಮೇಲ್ಕಾಣಿಸಿದವರ ಜೊತೆಗೆ, ಆರಂಭದ ಶಿಕ್ಷಕ ಮಂಡಲಿಯಲ್ಲಿದ್ದ ಶಾಂತವೀರ ರಾಚಿದೇವ ಕಿತ್ತೂರ ಎಂಬವರನ್ನೂ ಇಲ್ಲಿ ಅವಶ್ಯವಾಗಿ ಸೇರಿಸತಕ್ಕುದು.

ಕ್ರಿ.ಶ. ೧೮೭೫ರಲ್ಲಿ ಟ್ರೇನಿಂಗ್ ಕಾಲೇಜು ಧಾರವಾಡಕ್ಕೆ ಮರಳಿ ಸ್ಥಾನಾಂತರ ಹೊಂದಿದಂದಿನಿಂದ, ಮುಂದೆ ಕರ್ನಾಟಕ ಕಾಲೇಜು ಆರಂಭವಾಗುವವರೆಗೆ (೧೯೧೭), ಉತ್ತರ ಕರ್ನಾಟಕದಲ್ಲಿ ಇದೊಂದೇ ಮಹತ್ವಪೂರ್ಣ ಶಿಕ್ಷಣ ಸಂಸ್ಥೆಯಾಗಿದ್ದಿತು. ಹೀಗೆ ಉಚ್ಚ ಶಿಕ್ಷಣದ ಕಾಲೇಜುಗಳು ಈ ಭಾಗದಲ್ಲಿ ಇಲ್ಲದಾಗ, ಇದ್ದ ಮಾಧ್ಯಮಿಕ ಶಾಲೆಗಳಲ್ಲಿ ಕನ್ನಡಕ್ಕೆ ಅಂತಹ ಸ್ಥಾನವಿಲ್ಲದಾಗ, ಟ್ರೇನಿಂಗ್ ಕಾಲೇಜಿನ ಶಿಕ್ಷಕರೂ, ವಿದ್ಯಾರ್ಥಿಗಳೂ ಕನ್ನಡದ ಪರಂಪರೆಯನ್ನು ಕಾಯ್ದುಕೊಂಡು ಬಂದರು. ಇಲ್ಲದಿದ್ದರೆ ಕನ್ನಡದ ಪುನರುಜ್ಜೀವನಕ್ಕೆ ಇನ್ನೂ ಹೆಚ್ಚು ಕಾಲ ಹಿಡಿಯಬಹುದಾಗಿತ್ತು.[೧೨] ಇಲ್ಲಿಯ ಕನ್ನಡ ನಂದಾದೀಪದಿಂದ ತಮ್ಮ ಕಿರುಸೊಡರನ್ನು ಬೆಳಗಿಸಿಕೊಂಡು 'ಟ್ರೇಂಡ್' ಶಿಕ್ಷಕರು ಕನ್ನಡದ ಬೆಳಕನ್ನು ಹಳ್ಳಿ ಹಳ್ಳಿಗೆ ಕೊಂಡೊಯ್ದರು. ತುರಮರಿ, ಕಟ್ಟಿ, ಕಿತ್ತೂರ ಇವರಂತೂ ಸರಿಯೇ, ಕಾಲೇಜಿಗೆ ಆ ಮುಂದೆ ಪ್ರಿನ್ಸಿಪಾಲರಾಗಿ ಬಂದಿದ್ದವರೆಲ್ಲರೂ ವಿವಿಧ ಪಠ್ಯಪುಸ್ತಕಗಳನ್ನು ಬರೆದಿದ್ದಾರೆ. ಕ್ರಿ.ಶ. ೧೮೭೦ರಿಂದ ೧೯೦೦ರ ವರೆಗಿನ ಮುಂಬಯಿ ಕರ್ನಾಟಕದ ಬಹುಮಟ್ಟಿಗಿನ ಲೇಖಕರಿಗೆ, ಟ್ರೇನಿಂಗ್ ಕಾಲೇಜು ಸ್ಫೂರ್ತಿಯ ಸೆಲೆಯಾಗಿದ್ದಿತು. ಅಂಥ ಲೇಖಕರಲ್ಲಿ ಶಾಂತಕವಿ, ಧೋ. ನ. ಮುಳಬಾಗಲ, ರಾ. ಹ. ದೇಶಪಾಂಡೆ, ಗಳಗನಾಥ ಇವರು ಮುಖ್ಯರು.

ಮುಂಬಯಿ ವಿಶ್ವವಿದ್ಯಾಲಯದ ಮುಖಾಂತರವೂ ಕನ್ನಡಕ್ಕೆ ಪೋಷಣೆ ದೊರೆಯಿತು. ಅದರ ಬಗೆಯು ನೋಡುವಂತಿದೆ. ಆಗಿನ ಕಾಲಕ್ಕೆ ಮೆಟ್ರಿಕ್ ಪರೀಕ್ಷೆಯು ವಿಶ್ವವಿದ್ಯಾಲಯಗಳ ಕಕ್ಷೆಯಲ್ಲಿಯೆ ಇತ್ತು. ಮುಂಬಯಿ ವಿಶ್ವವಿದ್ಯಾಲಯದ ಆರಂಭ ಕಾಲದಿಂದಲೂ (ಕ್ರಿ.ಶ. ೧೮೫೭-೫೮) ಕನ್ನಡವು ಮೆಟ್ರಿಕ್ಯುಲೇಶನ್ ಅಭ್ಯಾಸದ ವಿಷಯಗಳಲ್ಲಿ ಒಂದಾಗಿದ್ದಿತು. ಆದರೆ ಪಠ್ಯಗಳೇ ಇರಲಿಲ್ಲ. ವ್ಯಾಕರಣ, ಪ್ರಬಂಧ, ಲೇಖನ ಭಾಷಾಂತರಗಳಲ್ಲಿ ಮಾತ್ರ ಪರೀಕ್ಷೆ ನಡೆಯುತ್ತಿದ್ದಿತು. ಆರಂಭದ 'ಯುನಿವರ್ಸಿಟಿ ಕೆಲೆಂಡರ್' ಗಳನ್ನು ಪರೀಶೀಲಿಸಿದಾಗ ನಮಗೆ ದೊರೆತ ಪರಿಚಿತ ಕನ್ನಡ ವಿದ್ಯಾರ್ಥಿಯ ಹೆಸರು, ವೀರಭದ್ರಯ್ಯ ಮಡಿವಾಳಯ್ಯ ಪಂಡಿತನದು (ಕ್ರಿ.ಶ. ೧೮೬೧). ಅವನೇ ಕನ್ನಡವನ್ನು ತೆಗೆದುಕೊಂಡು ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾದವರಲ್ಲಿ ಮೊದಲಿಗನಾಗಿರಬಹುದು. ಮುಂದಿನ ಮೂರು ದಶಕಗಳವರೆಗೆ ಮುಂಬಯಿ ಕರ್ನಾಟಕದಲ್ಲಿ ಕೆಲವೇ ಹೈಸ್ಕೂಲುಗಳು ಇದ್ದುದ್ದರಿಂದ, ಕನ್ನಡವನ್ನು ತೆಗೆದುಕೊಳ್ಳುತ್ತಿದ್ದವರ ಸಂಖ್ಯೆಯು ಕಡಿಮೆಯೇ ಇದ್ದಿತು.

ಕಾಲೇಜಿನ ಮಟ್ಟದಲ್ಲಿ ಎಂದರೆ ಎಫ್.ಎ., ಬಿ.ಎ. ವರ್ಗಗಳಲ್ಲಿ ಕನ್ನಡಕ್ಕೆ ಮೊದಲಿನಿಂದಲೂ ಅವಕಾಶವಿದ್ದಿತು. ಆದರೆ ಕಳೆದ ಶತಮಾನದ ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಒಂದಾದರೂ ಕಾಲೇಜು ಇರಲಿಲ್ಲ. ಅಲ್ಲದೆ, ಗೊತ್ತುಪಡಿಸಿದ ಪಠ್ಯಪುಸ್ತಕಗಳೂ ಸಾಕಷ್ಟು ಮುದ್ರಿತವಾಗಿ ಇರಲಿಲ್ಲ. ಆದಕಾರಣ ಮೊದಲ ತರಗತಿಗೆ ಗೊತ್ತುಪಡಿಸಿದ್ದ (ಕ್ರಿ. ಶ. ೧೮೭೨–೧೮೭೬) 'ಕಥಾಮಂಜರಿ', 'ರಾವಣ ದಿಗ್ವಿಜಯ' (ಯಕ್ಷಗಾನ), 'ಚೆನ್ನಬಸವಪುರಾಣ'ದ ಕೆಲವು ಸಂಧಿಗಳು, ಮತ್ತು 'ಕಥಾಸಪ್ತತಿ' ಇವನ್ನೇ ಬಿ.ಎ. ಪರೀಕ್ಷೆಗೆ ಹಚ್ಚಿದ ವಿಚಿತ್ರ ಪರಿಸ್ಥಿತಿ ಇದ್ದಿತು! ವಿದ್ಯಾರ್ಥಿಗಳೇ ಇರಲಿಲ್ಲವಾದ್ದರಿಂದ ವಿಶ್ವವಿದ್ಯಾಲಯವು ಕ್ರಿ.ಶ. ೧೮೭೬ರಿಂದ ಕನ್ನಡವನ್ನು ನಿಲ್ಲಿಸಿಬಿಟ್ಟಿತು! ಮರಾಠಿ, ಗುಜರಾಥಿಗಳಾದರೂ ಆ ಮುಂದೆ ಬಹುಕಾಲ ಉಳಿಯಲಿಲ್ಲ. ಅದರ ಕಾರಣವೆಂದರೆ ದೇಶಭಾಷೆಗಳ ಶಿಕ್ಷಣವು ಕಾಲೇಜ್ ಮಟ್ಟದಲ್ಲಿ ಅನಗತ್ಯ ಎಂಬ ಯುನಿವರ್ಸಿಟಿಯ ಹೊಸ ಭಾಷಾ ಧೋರಣೆ. ಈ ಸ್ಥಿತಿಯು ೨೫ ವರ್ಷಗಳ ವರೆಗೆ ಮುಂದುವರಿದುದು ಒಂದು ವೈಚಿತ್ರ್ಯವೇ. ಸೈ.

ಮುಂದೆ ಮಹಾದೇವ ಗೋವಿಂದ ರಾನಡೆ ಮತ್ತು ಚಿಮಣಲಾಲ ಸೆಟಲ್‌ವಾಡ್ ಸದಸ್ಯರು ಈ ವಿಷಯವನ್ನು ಮತ್ತೆ ಕೈಗೆತ್ತಿಕೊಂಡು ದೇಶಭಾಷೆಗಳನ್ನು ಎಂ. ಎ.ದ ವರೆಗೂ ಕಲಿಸಬೇಕೆಂಬ ಸೂಚನೆಯನ್ನು ಸೆನೆಟ್‌ನಲ್ಲಿ ತಂದರು. ಆ ನಿಲುವಳಿ ಸೂಚನೆಯಲ್ಲಿ, ಮರಾಠಿ, ಗುಜರಾತಿ ಇವೆರಡೇ ಭಾಷೆಗಳಿದ್ದಾಗ ಸೆನೆಟ್ ಸದಸ್ಯರಾದ ಶಾಮರಾವ ವಿಠ್ಠಲ ಕೈಕಿಣಿಯವರು ಕನ್ನಡದಲ್ಲಿಯೂ 'ಪ್ರೌಢ ಸಾಹಿತ್ಯವಿದೆ; ಕಾವ್ಯ, ವ್ಯಾಕರಣ ಅಲಂಕಾರಾದಿ ಗ್ರಂಥಗಳ, ಸಹಸ್ರ ವರ್ಷದ ಪರಂಪರೆ ಇದೆ' ಯೆಂಬುದಾಗಿ ಪ್ರತಿಪಾದಿಸಿದರು. ಆಗ ಸೆಟಲ್‌ವಾಡನು ತನ್ನ ನಿಲುವಳಿಯಲ್ಲಿ ಕನ್ನಡವನ್ನೂ ಸೇರಿಸಿಕೊಂಡುದುದರ ಪರಿಣಾಮವಾಗಿ ೧೯೦೧ರಿಂದ ಕನ್ನಡವು ಎಂ.ಎ. ಮಟ್ಟದಲ್ಲಿ ಅಧ್ಯಯನದ ವಿಷಯವಾಯಿತು. ಕನ್ನಡಕ್ಕೆ ಈ ಮನ್ನಣೆಯನ್ನು ಒದಗಿಸಿದ ಕೈಕಿಣಿಯವರು ಅಭಿನಂದನೀಯರಾಗಿದ್ದಾರೆ.

ಇತ್ತ ಎಂ.ಎ. ಪರೀಕ್ಷೆಗೆ ಪಠ್ಯಗಳನ್ನು ನೇಮಿಸಲು ಸೂಕ್ತವಾದ ಪ್ರಾಚೀನ ಕೃತಿಗಳು ಮುದ್ರಿತವಾಗಿ ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಿರಲಿಲ್ಲ. ಹೀಗಾಗಿ 'ಮಿತ್ರವಿಂದಾಗೋವಿಂದ', 'ಕಲಾವತೀ ಪರಿಣಯ', 'ದಮಯಂತೀ ಸ್ವಯಂವರ', 'ಅದ್ಭುತ ರಾಮಾಯಣ' ಎಂಬ ಹೊಸ ಪುಸ್ತಕಗಳನ್ನು ಪಾಠಕ್ರಮದಲ್ಲಿ ಸೇರಿಸಲಾಗಿದ್ದಿತು. ಆದರೆ ಮೊದಲ ಹತ್ತು ವರ್ಷಗಳಲ್ಲಿ ಒಬ್ಬನಾದರೂ ಕನ್ನಡವನ್ನು ತೆಗೆದುಕೊಂಡು ಎಂ.ಎ. ಮಾಡಿರಲಿಲ್ಲ.* ತಳಪಾಯವನ್ನು ಹಾಕದೇ ಮೇಲಿನ ಸೌಧವನ್ನು ಕಟ್ಟಹೋದುದರ ಪರಿಣಾಮವಿದು!

---

* ಕ್ರಿ. ಶ. ೧೯೦೧–೧೯೧೨ ರ ವರೆಗಿನ 'ಯುನಿವರ್ಸಿಟಿ ಕೆಲೆಂಡರ್'ಗಳನ್ನು ಪರಿಶೀಲಿಸಿ ಈ ಮಾತನ್ನು ಹೇಳುತ್ತಿದ್ದೇವೆ. ಕ್ರಿ. ಶ. ೧೯೧೨ರಲ್ಲಿ ಜಯರಾವ ಮಾಧವರಾವ ದೇಶಪಾಂಡೆ ಇವನು ಕನ್ನಡ ಮತ್ತು ಇಂಗ್ಲಿಷ್ ತೆಗೆದುಕೊಂಡು ಎಂ.ಎ. ದಲ್ಲಿ ಪಾಸಾಗಿದ್ದಾನೆ. ಕನ್ನಡದಲ್ಲಿ ಎಂ.ಎ. ಮಾಡಿದ ಅನಂತರದ ಪ್ರಸಿದ್ಧ ಹೆಸರು ಆರ್. ವಿ. ಜಹಗೀರದಾರರದು.

ಕನ್ನಡವನ್ನು ಕಲಿಸುವುದು ಅಧಿಕೃತವಾಗಿ ಇರದ್ದರಿಂದ ಕನ್ನಡ ಪರೀಕ್ಷಕರನ್ನು ಅನ್ಯ ಕ್ಷೇತ್ರಗಳಿಂದ ನಿಯಮಿಸಬೇಕಾಗಿದ್ದಿತು. ಮೇಲೆ ಹೇಳಿದ ವೀರಭದ್ರಯ್ಯ ಪಂಡಿತನು ಮೆಟ್ರಿಕ್ಕಿಗೆ ಕನ್ನಡ ಪರೀಕ್ಷಕನಾಗಿದ್ದನು. ಆರಂಭ ಕಾಲದ ಇನ್ನೊಬ್ಬ ಪರೀಕ್ಷಕನೆಂದರೆ ಮಿಶನರಿಯಾಗಿದ್ದ ಡಬ್ಲೂ. ಬೆಯ್ಸನ್. ಬಹು ದೀರ್ಘಕಾಲದ ವರೆಗೆ ಪರೀಕ್ಷಕರಾಗಿ ದುಡಿದವರೆಂದರೆ ಶಾಮರಾವ ಕೈಕಿಣಿ (೧೮೭೦–೭೬, ೧೮೯೯–೧೯೦೫), ಮತ್ತು ನ್ಯಾಯ ಖಾತೆಯಲ್ಲಿದ್ದ ಜಯಸತ್ಯಬೋಧ ತಿರುಮಲರಾವ ಇನಾಂದಾರ (೧೮೭೨–೧೮೮೭) ಹಾಗೂ ರಾಮಚಂದ್ರ ಹಣಮಂತ ದೇಶಪಾಂಡೆಯವರು.

ಮದ್ರಾಸ ವಿಶ್ವವಿದ್ಯಾನಿಲಯದಲ್ಲಿ ತೌಲನಿಕವಾಗಿ ಇದಕ್ಕೂ ಹೆಚ್ಚಾಗಿ ಕನ್ನಡ ಪೋಷಣೆಯ ಕಾರ್ಯವು ನಡೆಯಿತು. ಇಡೀ ಮೈಸೂರ ಸಂಸ್ಥಾನದ ಮತ್ತು ದಕ್ಷಿಣ ಕನ್ನಡ, ಬಳ್ಳಾರಿ ಜಿಲ್ಲೆಗಳಲ್ಲಿಯ ಶೈಕ್ಷಣಿಕ ಸಂಸ್ಥೆಗಳೆಲ್ಲ ಅದರ ಅಧೀನದಲ್ಲಿ ಇದ್ದವೆಂಬುದನ್ನು ಗಮನಿಸಬೇಕು. ಅಲ್ಲಿಯಾದರೂ ಪಠ್ಯಪುಸ್ತಕಗಳ ಆಯ್ಕೆಯಲ್ಲಿ ವೈವಿಧ್ಯವಿರದ್ದರಿಂದ 'ಕರ್ನಾಟಕ ಕಾವ್ಯಮಂಜರಿ', 'ಕರ್ನಾಟಕ ಗ್ರಂಥಮಾಲೆ' ಇಲ್ಲವೆ 'ಬಿಬ್ಲಿಯಾಥೆಕಾ ಕರ್ನಾಟಿಕಾ'ದಲ್ಲಿ ಹೊಸ ಪ್ರಕಟಣೆಗಳು ಹೊರಬಂದೊಡನೆಯೇ ಅವನ್ನು ಪಠ್ಯವನ್ನಾಗಿ ಆಯುವ ಆತುರ ತೋರುತ್ತಿದ್ದರು. ಇದರಿಂದಾಗಿ ಲೇಖನ ಕಾರ್ಯದಲ್ಲಿ ತೊಡಗಬಯಸುವವರಿಗೆ ಪ್ರೋತ್ಸಾಹ ದೊರೆಯಿತು.

ಇಂತು ನವೋದಯ ಕಾಲದಲ್ಲಿ ಶಿಕ್ಷಣವು ವ್ಯಾಪಕವಾಗುತ್ತ ನಡೆದಂತೆಲ್ಲ, ಸಾಹಿತ್ಯ ಕೃಷಿಯು ಹೆಚ್ಚಾಯಿತು. ಕನ್ನಡ ಅಧ್ಯಯನದ ಮೂಲಕ ಕನ್ನಡ ನುಡಿ, ನಾಡುಗಳ ಬಗ್ಗೆ ಅಭಿಮಾನವು ಬೆಳೆದು ಇಪ್ಪತನೆಯ ಶತಮಾನದಲ್ಲಿ ಕಂಡು ಬರುವ ವಾಙ್ಮಯ ವಿಕಾಸಕ್ಕೆ ಮಾರ್ಗವನ್ನು ಸಿದ್ಧಗೊಳಿಸಿತು.

ಆದರೆ ಮಾಧ್ಯಮಿಕ ಹಾಗೂ ಕಾಲೇಜು ಶಿಕ್ಷಣಗಳ ಮಟ್ಟದಲ್ಲಿ ಕನ್ನಡಿಗರು ಇತರರಿಗಿಂತ ಹಿಂದುಳಿದಿದ್ದರು. ಕನ್ನಡದ ವಿಚಾರದಲ್ಲಿ ಎರಡೂ ವಿಶ್ವವಿದ್ಯಾಲಯಗಳು ತಮ್ಮ ದ್ವಾರವನ್ನು ತೆರೆದಿದ್ದುವಾದರೂ ಕನ್ನಡ ವಿದ್ಯಾರ್ಥಿಗಳು ಅದರಿಂದ ಪೂರ್ಣ ಪ್ರಯೋಜನ ಹೊಂದುವ ಸ್ಥಿತಿಯಲ್ಲಿರಲ್ಲಿಲ್ಲ. ಉಚ್ಚ ಮಟ್ಟದ ವಿದ್ಯಾಮಂದಿರಗಳು ನಮ್ಮಲ್ಲಿ ಇದ್ದಿದ್ದರೆ ಆಧುನಿಕ ಸಾಹಿತ್ಯ ನಿರ್ಮಿತಿಯು ಇದಕ್ಕೂ ಮುಂಚೆಯೇ ಆರಂಭವಾಗಿ ಇನ್ನಷ್ಟು ಸಮೃದ್ಧಿಯನ್ನು ಹೊಂದುತ್ತಿದ್ದಿತೆಂದು ಹೇಳದೆ ನಿರ್ವಾಹವಿಲ್ಲ.

## ಸಂದರ್ಭ ಸೂಚಿ


೧. Survey of indigenous education in the Province of Bombay. 1820 – 1830. p.21

೨. ಶ್ರೀಮನ್ಮಹಾರಾಜರವರ ವಂಶಾವಳಿ. ಭಾ.೨. ಪು. ೫೨.

೩. ಅದೇ. ಪು. ೫೨–೫೩.

೪. ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ. ೧೯೬೮ ಮೇ: ಶ್ರೀನಿವಾಸ ಹಾವನೂರರ ಲೇಖನ. ಕಂತು ೩.

೫. Report of the Board of Education, Government of Bombay, 1843.

೬. ಅದೇ, ೧೮೪೬ರ ವರದಿ.

೭. Proceedings, South India Missionary Conference, 1858. p.98

೮. ಅದೇ. ಪು. ೮೦.

೯. Report of the Director of Public Instruction, Bombay, 1865–66, Appendix. A. pp.48–49, 62.

೧೦. ಅದೇ. 1867-1868, Appendix C. p.5

೧೧. ಜೀವನ ಶಿಕ್ಷಣ, ೧೯೫೭–೫೮: ರಾ. ಯ. ಧಾರವಾಡಕರ ಪು.೩೩.

೧೨. ಅದೇ. ವಿ. ಕೃ. ಗೋಕಾಕ, ಪು. ೩.

ಪ್ರಕರಣ : ೪

# ಮಿಶನರಿ ಜನರ ಸಾಹಿತ್ಯಕಾರ್ಯ

ಹಿಂದಿನ ಪ್ರಕರಣಗಳಲ್ಲಿ ಮಿಶನರಿಗಳ ಆಗಮನ, ಅವರ ಮತಪ್ರಸಾರ ದೃಷ್ಟಿ; ಆ ಕಾರಣದಿಂದಾಗಿ ಅವರು ಮುದ್ರಣ, ಶಿಕ್ಷಣ ರಂಗಗಳಲ್ಲಿ ಕೈಕೊಂಡ ಕಾರ್ಯ, ಇವನ್ನು ಸಂದರ್ಭಾನುಸಾರ ವಿವರಿಸಿದ್ದಾಯಿತು. ಈ ಪ್ರಕರಣದಲ್ಲಿ ಬೇರೆ ಬೇರೆ ಸಂಸ್ಥೆಗಳಿಂದ ಕರ್ನಾಟಕಕ್ಕೆ ಬಂದಿದ್ದ ಮಿಶನರಿ ಜನರು ಮಾಡಿದ ವಾಙ್ಮಯ ಸೇವೆಯನ್ನು ಅವರ ಬದುಕಿನ ಹಿನ್ನೆಲೆಯಲ್ಲಿ ನೋಡುವ:

## ೪೧ ಕೆಥಲಿಕ್ ಮಿಶನರಿಗಳು

ಭಾರತದಲ್ಲಿ ಕ್ರೈಸ್ತಧರ್ಮದ ಪ್ರಸಾರವಾಗಬೇಕಾದರೆ ಇಲ್ಲಿಯ ಭಾಷೆಗಳಲ್ಲಿಯೆ ಗ್ರಂಥರಚನೆ ಮಾಡಬೇಕೆಂಬುದನ್ನು ಮೊದಲಿಗೆ ಮನಗಂಡವರು ಗೋವೆಯ ಜೆಸುಯಿಟ್ ಪಾದ್ರಿಗಳು. ಅದಕ್ಕಾಗಿ ಹದಿನಾರನೆಯ ಶತಮಾನದಲ್ಲಿ ಮುದ್ರಣಾಲಯದ ಸ್ಥಾಪನೆಯಾದುದನ್ನು ಈ ಹಿಂದೆ ಪ್ರಸ್ತಾಪಿಸಲಾಗಿದೆ<೨೧೧>. ಗೋವೆಯನ್ನು ಕೇಂದ್ರವಾಗಿಟ್ಟುಕೊಂಡು ದಕ್ಷಿಣ ಭಾರತದಲ್ಲಿ ಮುಂದುವರಿದ ಜೆಸುಯಿಟರು ಕೊಂಕಣಿ, ಮರಾಠಿ ಭಾಷೆಗಳಲ್ಲಿ ಅಲ್ಲದೆ ತಮಿಳು, ಮಲೆಯಾಳಗಳಲ್ಲಿಯೂ ಗ್ರಂಥರಚನೆ ಮಾಡಿದ್ದಾರೆ (೧೬–೧೮ನೆಯ ಶತಮಾನಗಳಲ್ಲಿ). ಮತೀಯ ಕೃತಿಗಳು ಹಾಗೂ ಭಾಷಾಭ್ಯಾಸದ ಸಾಧನಗಳು ಎಂಬೀ ದ್ವಿಮುಖ ಗ್ರಂಥರಚನೆಯ ಪರಂಪರೆಯು ಇವರಿಂದಲೇ ಮೊದಲಾಯಿತು. ಈ ಆರಂಭ ಕಾಲದಲ್ಲಿ ಜೆಸುಯಿಟರು ಕನ್ನಡದಲ್ಲಿಯೂ ಕೃಷಿ ಮಾಡಿರಬಹುದೆ — ಎಂಬುದನ್ನು ಪರಿಶೀಲಿಸುವ.

ಆಗಿನ ಮಿಶನರಿಗಳಿಗೆ ಭಾರತದ ವಿವಿಧ ಭಾಷೆಗಳಲ್ಲಿಯ ಅಂತರ ತಿಳಿಯದೆ, ಅವನ್ನು ತಪ್ಪು ತಪ್ಪಾಗಿ ಹೆಸರಿಸುತ್ತಿದ್ದರು. ಗೋವೆಯ ಜೆಸುಯಿಟರು ಹೇಳಿದ್ದ ಮಲಬಾರೀ ಎಂಬುದು ಮಲೆಯಾಳೀ ಭಾಷೆಯಲ್ಲ; ತಮಿಳು. ತೆಲುಗು ಭಾಷೆಯನ್ನು ಕೆಲವರು 'ಬಡಗ' ಎಂಬ ಹೆಸರಿನಿಂದ ಕರೆದುದೂ ಇದೆ. ಹಾಗೆಯೇ ಅವರ 'ಕೆನರೀಜ್' ಎಂಬ ಪದ ಪ್ರಯೋಗವು ಕನ್ನಡವೊಂದೇ ಅಲ್ಲ. ಕೊಂಕಣಿ, ಮರಾಠಿ ಭಾಷೆಗಳಿಗೂ ತಪ್ಪಾಗಿ ಅನ್ವಯಿಸುತ್ತಿದ್ದಿತು. 'ಕೆನರಿಮ್', 'ಕನರಿನಾ', 'ಕನರಿ', 'ಕನಾರಿಸ್' — ಮುಂತಾದ ಪದಗಳು ವಿದೇಶೀಯರ ಈ ಬಗೆಯ ಅಪಪ್ರಯೋಗದ ವಿವಿಧ ರೂಪಗಳು. ಇವುಗಳಿಗೆ ನಮ್ಮ

'ಕನ್ನಡ' ಶಬ್ದವೆ ಮೂಲ ರೂಪವೆಂದು ಹೇಳಬಹುದು. ಆದರೆ 'ಕೆನರಿವ್= ಸಮುದ್ರತೀರದವ', ಎಂಬ ಪರ್ಶಿಯನ್ ಶಬ್ದದಿಂದ ಅದರ ನಿಷ್ಪತ್ತಿಯಿದ್ದು, ಅರಬ್ಬೀ – ವ್ಯಾಪಾರಸ್ಥರಿಂದ ಪೋರ್ತುಗೀಸರು ಅದನ್ನು ಸ್ವೀಕರಿಸಿ, ಪಶಿಮ ಸಮುದ್ರ ತೀರದಲ್ಲಿ ಇದ್ದ ಜನರ ಭಾಷೆಗಳಿಗೂ ಇದನ್ನು ಅನ್ವಯಿಸಿದರೆಂಬ ಅಭಿಪ್ರಾಯವೂ ಇದೆ.[೧] ಆದರೆ ಇದು ಸರಿಯಲ್ಲ. ಮಧ್ಯಯುಗೀನ ಕಾಲದ ಗೋವೆಯಲ್ಲಿ ಕನ್ನಡ ನಾಡು, ನುಡಿಗಳಿಗೆ ಇದ್ದದ್ದರ ಮಹತ್ವವನ್ನು ತಿಳಿಯದೇ ಹೇಳಿದ ಮಾತಿದು.

ಈ ಪರಿಸ್ಥಿತಿಯು ಇನ್ನಷ್ಟು ಸಂದಿಗ್ಧವಾಗುವುದಕ್ಕೆ ನಮ್ಮ ಲಿಪಿಯೂ ಕಾರಣವಾಯ್ತು. ಕನ್ನಡ ಲಿಪಿಯು ಕೊಂಕಣಿ ಮತ್ತು ಮರಾಠಿ ಭಾಷೆಗೆ ಸಹ ಅನ್ವಯಿಸುವಷ್ಟು ವ್ಯಾಪ್ತಿಯನ್ನು ಆಗ ಪಡೆದಿದ್ದಿತು. (ಗೋವೆಯಲ್ಲಿಯ ೧೪–೧೫ನೆಯ ಶತಮಾನದ ಕೆಲವು ಮರಾಠಿ ಶಾಸನಗಳು ಕನ್ನಡ ಲಿಪಿಯಲ್ಲಿವೆ.) ಇದರಿಂದಾಗಿ ಕೊಂಕಣಿ, ಮರಾಠಿ ಮತ್ತು ಕನ್ನಡ ಇವುಗಳಲ್ಲಿಯ ಸ್ಪಷ್ಟ ಅಂತರವನ್ನು ಆಗಿನ ಜೆಸುಯಿಟ್ ಪಾದ್ರಿಗಳು ತಿಳಿಯಲಾರದೆ, ಆ ಭಾಷೆಗಳಲ್ಲಿ ಗ್ರಂಥಗಳನ್ನು ರಚಿಸಿದರೂ ಅವನ್ನು 'ಕೆನರೀಸ್' ಮತ್ತು ತತ್ಸಮಾನ ರೂಪಗಳಿಂದಲೇ ಕರೆದರು.

ಇಂಥ ಪದಗಳಿರುವ ೧೭ನೇ ಶತಮಾನದ ಗ್ರಂಥ ಶೀರ್ಷಿಕೆಗಳು ಕೆಲವು ದೊರೆಯುತ್ತವೆ. ಅಷ್ಟರ ಮೇಲಿಂದ ಅವು ಕನ್ನಡವೇ ಎಂದು ಹೇಳಲು ಬರುವಂತಿಲ್ಲ.

ಉದಾ.ಗೆ Arte de Lingua Canarim– ಥಾಮಸ್ ಸ್ಟೀಫನ್ಸ್ ಕೃತ. (೧೭೮೦). ೧೮೫೮ರಲ್ಲಿ ಪುನರ್ಮುದ್ರಣವಾಗಿದೆ. ಇದು ಕೊಂಕಣಿ ಭಾಷೆಯ ವ್ಯಾಕರಣವಾಗಿದೆ.

ಇನ್ನು ೧೭ನೇ ಶತಮಾನದಲ್ಲಿಯ ಕನ್ನಡ ಗ್ರಂಥರಚನೆಯನ್ನು ಸೂಚಿಸಬಹುದಾದ ಕೆಲವು ಉಲ್ಲೇಖಗಳೂ ಇವೆ. ಅವುಗಳ ಪ್ರಕಾರ ಆಮದೊರ್ ದ ಸಾಂತಾ ಅನ್ನಾ ಎಂಬವನು 'ಫ್ಲೊಸ್ ಸ್ಯಾಂಕ್ಟೋರಮ್' ಎಂಬುದನ್ನು ಕನ್ನಡಕ್ಕೆ ಅನುವಾದಿಸಿದನಂತೆ. ಡಿ. ರೆಬೆರೊ ಎಂಬ ಪಾದ್ರಿಯು ಕೊಂಕಣಿ ಪೋರ್ತುಗೀಸ್ ಕೋಶವಲ್ಲದೆ ಕ್ರೈಸ್ತ ಸಂತರ ಚರಿತ್ರೆಯನ್ನು ಕೆನರೀಸ್‌ದಲ್ಲಿ ಅನುವಾದಿಸಿದ್ದಾನೆಂದು ಹೇಳಲಾಗಿದೆ. ಅದಾವ ಕಾರಣದಿಂದಲೋ ಜೈಲು ವಾಸವನ್ನು ಕೆಲಕಾಲ ಹೊಂದಿದ್ದ ಪ್ರಿಖಿಕ್ರಿಲ್ ಎಂಬ* ಪಾದ್ರಿಯು ಕನ್ನಡ ವ್ಯಾಕರಣ ಕೋಶಗಳನ್ನು ರಚಿಸಿದ್ದನೆಂದೂ ಒಂದೆಡೆ ಉಕ್ತವಾಗಿದೆ.

---

* Among the Franciscan Missionaries, Fathers Banha, Manuel Baptista, Lado, Amadore Santa Anna ae mentioned as having contributed in a special manner to the study of Canarese and Konkani. Amador de Santa Anna translated the devotional treatise "Flos Sanctorum" into Canarese.... Diego Rebeiro to whom is due the publication of Stephen's Grammar, was remarkably conversant with the Konkani and Canarese (....contd)

## ೪೧೧ ಲಿಯಾನಾರ್ದೊ ಸಿನ್ನಾಮಿ ಮತ್ತು ಇತರ ಜೆಸುಯಿಟರು

ಕನ್ನಡ ಪುಸ್ತಕಗಳನ್ನು ಬರೆದಿರಬಹುದಾದ ಜೆಸುಯಿಟ್ ಪಾದ್ರಿಯೆಂದರೆ ಲಿಯಾನಾರ್ದೊ ಸಿನ್ನಾಮಿ (ಕ್ರಿ.ಶ. ೧೬೦೯–೧೬೭೬). ಅವನು ಗೋವೆಗೆ ಬಂದುದು ಕ್ರಿ.ಶ. ೧೬೪೪ರಲ್ಲಿ. ಮರುವರ್ಷವೆ ಅವನನ್ನು ಕೆನರಾಕ್ಕೆ ಕಳುಹಿಸಲಾಯಿತು. ಅಲ್ಲಿ ನಾಲ್ಕು ವರ್ಷ ಕಳೆದರೂ ಅವನಿಗೆ ಯಶಸ್ಸು ಸಿಕ್ಕಲಿಲ್ಲ. ಈ ಕಾರಣದಿಂದ ಅವನು ರಾಬರ್ಟ್-ದ-ನೊಬಿಲಿಯಂತೆ ಹಿಂದೂ ಸನ್ಯಾಸಿಯ ವೇಷ ಧರಿಸಿ ಮೈಸೂರು ಸಂಸ್ಥಾನಕ್ಕೆ ಬಂದನು.

ಮೈಸೂರು ಪ್ರದೇಶಕ್ಕೆ ತಮಿಳುನಾಡಿನಿಂದ ಮಿಶನರಿಗಳು ಆಗೀಗ ಬಂದು ಹೋಗುತ್ತಿದ್ದರೂ, ಅಲ್ಲಿ ಮೊತ್ತಮೊದಲು ಮಿಶನ್ ಕೇಂದ್ರವನ್ನು ಸಿನ್ನಾಮಿಯೇ ಸ್ಥಾಪಿಸಿದನು (ಕ್ರಿ. ಶ. ೧೬೪೯). ಶ್ರೀರಂಗಪಟ್ಟಣ, ಮೈಸೂರುಗಳಲ್ಲಿ ಇದ್ದುಕೊಂಡು ಈತ ಮತಪ್ರಚಾರವನ್ನು ಕೈಕೊಂಡನು. ಪಾಶ್ಚಾತ್ಯ ಪದ್ಧತಿಯ ವೈದ್ಯಕೀಯ ನೆರವನ್ನು ನೀಡುತ್ತಿದ್ದುದರಿಂದ ಇವನಿಗೆ ಜನತೆಯೊಡನೆ ಬೆರೆಯುವುದು ಸುಲಭವಾಯಿತು.

ಇತ್ತ ಅವನ ಮತಪ್ರಸಾರ ಕಾರ್ಯದಲ್ಲಿ ಅನೇಕರು ಹಿಂಸೆ ಕೊಟ್ಟರಾದರೂ, ಆಗ ಮೈಸೂರು ದೊರೆಯಾಗಿದ್ದ ಕಂಠೀರವ ನರಸರಾಜರ ಪರಧರ್ಮ ಸಹಿಷ್ಣುತೆಯು ಅವನನ್ನು ಕಾಪಾಡಿತು. ರಾಜರೊಡನಾದ ಸಿನ್ನಾಮಿಯ ಪ್ರಥಮ ಭೆಟ್ಟಿಯನ್ನು ಅವನ ವರದಿಯನ್ನಾಧರಿಸಿ, ಡಿ. ಫಿರೋಲಿ ಎಂಬವನು ಈ ರೀತಿ ವಿವರಿಸಿದ್ದಾನೆ :

"The Father, after bowing in the manner of the Sanniasi said in Latin – which he called the sacred tounge of the Christians, the king's name (Leo Magnes) and then Speaking Canarese, praised the king who was strong and courageous as the lion. Then he offered the sword and other small presents. The king presented the Father with a silk cloth and invited him to speak further."[೨]

ಹೀಗೆ ಮೈಸೂರು ರಾಜರಿಂದ ರಕ್ಷಣೆಯ ಭರವಸೆ ಹಾಗೂ ಮತ ಪ್ರಸಾರಕ್ಕೆ ಅನುಮತಿಯೂ ದೊರೆಯಿತು. ಮುಂದೆ ದೇವರಾಜರು ಪಟ್ಟವೇರಿದಾಗ ಸಿನ್ನಾಮಿಯು

---

dialects. This masterpiece is a Konkani-Portuguese dictionary. Besides he had translated Ribaderira's Lives of the Saints into Canarese. Fr.Prizikril turned his imprisonment at St.Juliao to good account in working out a grammar and a dictionary of Canarese from materials collected during his missionary career.

ಇಲ್ಲಿ ಮಾತ್ರ ಕೊಂಕಣಿ ಮತ್ತು ಕೆನರೀಸ್ ಎಂದು ಪ್ರತ್ಯೇಕಿಸಿ ಹೇಳಿದುದನ್ನು ಗಮನಿಸಬಹುದು.

ಅನೇಕ ನಿರ್ಬಂಧಗಳಿಗೆ ಒಳಗಾಗಬೇಕಾಯಿತು. ಇಳಿವಯಸ್ಸಿನಲ್ಲಿದ್ದ ಅವನನ್ನು ಹಿಂದೆ ಕರೆಯಿಸಿಕೊಳ್ಳಬೇಕೆಂದು ಗೋವೆಯಲ್ಲಿದ್ದ ವರಿಷ್ಠರು ಯೋಚಿಸಿದರಾದರೂ ಸಿನ್ನಾಮಿಯು 'ಜನಸೇವೆ' ಮಾಡುತ್ತ ಅಲ್ಲಿಯೇ ಇರುವುದಾಗಿ ತಿಳಿಸಿದನು.

ಹದಿನೇಳನೆಯ ಶತಮಾನದ ಸಮಕಾಲೀನ ಗ್ರಂಥಚರಿತ್ರಕಾರರಾದ (Bibliographers) ಸೊಮರ್‌ಫೊಗೆಲ್ ಮತ್ತು ಸೊತ್‌ವೆಲ್ ಇವರು ಸಿನ್ನಾಮಿಯು ಕನ್ನಡದಲ್ಲಿ ಪುಸ್ತಕಗಳನ್ನು ಬರೆದಿದ್ದಾನೆಂದು ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ.[೩]

"ಇದೇ ಫಾದರ್ ಸಿನ್ನಾಮೊ ಈ ಪ್ರದೇಶದ [ಮೈಸೂರಿನ] ಭಾಷೆಯ ಕೋಶ ಹಾಗೂ ವ್ಯಾಕರಣವನ್ನು ರಚಿಸಿದ್ದಾನೆ. ಇದು ಸಾಲ್ಸೆಟ್‌ದ [ಕೊಂಕಣಿ] ಭಾಷೆಗಿಂತ ಭಿನ್ನವಾದುದು. ಇವನು ಕೆಲವು ಪ್ರಶ್ನೋತ್ತರ ಮತಪುಸ್ತಿಕೆಗಳನ್ನು ಅನುವಾದಿಸಿದ್ದು, ದೇಶೀಯರಿಗೆ ಉಪದೇಶ ಮಾಡುವ ಕಾಲಕ್ಕೆ ಅದನ್ನು ಬಳಸುತ್ತಾನೆ." * (ಸಾಟ್‌ವೆಲ್‌ನ ಈ ಉಲ್ಲೇಖವು ಮಾತ್ರ ಲಂಡನ್ನಿನ ಬ್ರಿಟಿಶ್ ಲೈಬ್ರರಿಯಲ್ಲಿದೆ.)

"ಸಿನ್ನಾಮಿಯು ಕೆನರಿನಾ ಇಲ್ಲವೆ ಮಲಬಾರಿಕ್ ಭಾಷೆಯಲ್ಲಿ (ಇದು ಅವನಿಗೆ ಚೆನ್ನಾಗಿ ಗೊತ್ತಿದ್ದ ಭಾಷೆ) ಹೊಸ ಕ್ರಿಸ್ತೀಯರ ಉಪದೇಶಾರ್ಥವಾಗಿ ಪ್ರಶ್ನೋತ್ತರ ರೂಪದಲ್ಲಿ ನಮ್ಮ ಧರ್ಮದ ರಹಸ್ಯ ತತ್ತ್ವಗಳ ಮೇಲೆ ಒಂದು ಕೃತಿಯನ್ನು ರಚಿಸಿದ್ದಾನೆ. ಅದರ ಸಾರವನ್ನೂ ಕೊಟ್ಟಿದ್ದಾನೆ. ಇದೇ ಭಾಷೆಯಲ್ಲಿ ಅವನು ಸಂತರ ಚರಿತ್ರೆಗಳನ್ನೂ ಕ್ರೈಸ್ತ ಮತದ ಸಮರ್ಥನೆಯನ್ನೂ ಮೈಸೂರ ದೇಶದ ಹಿಂದೂಗಳ ಜಾತಿಭೇದ, ಮೂಢನಂಬಿಕೆಗಳನ್ನು ಖಂಡಿಸುವ ಪುಸ್ತಕವನ್ನೂ ಬರೆದಿದ್ದಾನೆ. 'ಕೆನರಿಮ್' ಭಾಷೆಯ ಗಾಢ ಪರಿಚಯದ ಉಪಯೋಗ ಪಡೆದು ಅವನು ಒಂದು ಕೋಶ ಮತ್ತು ವ್ಯಾಕರಣವನ್ನೂ ರಚಿಸಿದನು." **

ಮೇಲಣ ಅವತರಣಿಕೆಗಳನ್ನು ಆಧರಿಸಿ ಸಿನ್ನಾಮಿಯ ಕನ್ನಡ ಬರವಣಿಗೆಯನ್ನು ಹೀಗೆ ಪಟ್ಟಿ ಮಾಡಬಹುದು:

೧. ಕ್ರೈಸ್ತ ಧರ್ಮದ ರಹಸ್ಯ ತತ್ತ್ವಗಳನ್ನು ಕುರಿತ ಸುದೀರ್ಘ ಪ್ರಶ್ನೋತ್ತರ

೨. ಅದರ ಸಾರರೂಪ

---

* Le mesme pere Sinnamo a compose la Grammaire et le Dictionaire de la langue de ce Pais, qui est differente totalment de la Salsetaire. Ila aussi tourne le catechisme, duquel il se sort a instruire le payens – Sommervogel; Bibliotheque de la comp. de Jesus. T II. Col. 1188.

** In India, editur lingua Canarina seu Malabarina (cujus est scientissimus); pro instructione neophytorum ; catechismus Copiosissimus mystriorum principalicum Nostra, Fidei cum brevi compendio ejusdem Cotechismi. Vitae sanctorum in Canadem Linguama Se Conversae. Apologui pro mysteris, et superstitionum gentilium regni Messurensis – Sotwel ; Bilbliotheque Scrip Soc. Jesu. p. 548 – 49

೩. ಕ್ರೈಸ್ತ ಸಂತರ ಜೀವನ ಚರಿತ್ರೆ
೪. ಕ್ರೈಸ್ತ ಮತದ ಸಮರ್ಥನೆ
೫. ಮೈಸೂರ ಜನರ ಜಾತಿಗಳು, ಮೂಢ ನಂಬಿಕೆಗಳು, ಇವುಗಳ ಖಂಡನೆ
೬. ಕನ್ನಡ ವ್ಯಾಕರಣ
೭. ಕನ್ನಡ ಕೋಶ

ಹೀಗೆ ಸಿನ್ನಾಮಿಯ ಕನ್ನಡ ಕೃತಿಗಳ ರಚನೆಯ ಕುರಿತು ನಿಶ್ಚಿತ ಪುರಾವೆ ದೊರೆಯುತ್ತದೆ. ಆದರೆ ಅವು ಎಲ್ಲಿಯಾದರೂ ಲಭ್ಯವಾಗಿದ್ದುದರ ಸುಳಿವು ಇಲ್ಲ.

ಸಿನ್ನಾಮಿಯು ರಚಿಸಿದ ಕನ್ನಡ ವ್ಯಾಕರಣ ಮತ್ತು ಕೋಶಗಳು ನಮಗೆ ವಿಶೇಷ ಮಹತ್ವದವಾಗಿವೆ. 'ಇದೇ ಹೊಸ ಕನ್ನಡದ ಮೊತ್ತಮೊದಲಿನ ವ್ಯಾಕರಣವಾಗಿದ್ದು ಆ ಗೌರವವು ಒಬ್ಬ ಇಟಾಲಿಯನ್ನನಿಗೆ ಸಲ್ಲುತ್ತದೆ.' (Sarebbe allora la prima grammatica Canarese, el' onore d' arula compasta apparterrebe a un Italiano) ಎಂದೆನ್ನುವ ಫೆರೋಲಿಯ ಹೇಳಿಕೆಯನ್ನು ದೃಢೀಕರಿಸುತ್ತೇವೆ. ಇಷ್ಟೇ ಅಲ್ಲ, ಹೊಸಗನ್ನಡದ ಪ್ರಥಮ ಗ್ರಂಥಕಾರ ಸಿನ್ನಾಮಿಯೇ ಎಂದು ಹೇಳಬೇಕೆನಿಸುವುದು. ಮೂರು ನೂರು ವರ್ಷಗಳ ಹಿಂದೆ ರಚಿತವಾದ ಮೊದಲ ಹೊಸಗನ್ನಡ ಗ್ರಂಥಗಳೆಂಬ ಕಾರಣದಿಂದ ಅವುಗಳ ಅಪೂರ್ವತೆ ಗಮನಾರ್ಹವಾದುದು.

ಅನಂತರದ ಕೆಥಲಿಕ್ ಸಾಹಿತ್ಯ ೧೮೫೦ರ ದಶಕದಲ್ಲಿ ತೋರಿಬಂದಿದೆ. ಇದರರ್ಥ ಆ ನಡುವಿನ ಎರಡು ನೂರು ವರ್ಷಗಳಲ್ಲಿ ಯಾವ ಕೆಥಲಿಕನೂ ಗ್ರಂಥರಚಿಸಲಿಲ್ಲವೆ? ನಮ್ಮ ಸುಕೃತವೆಂಬಂತೆ, ಈ ನಡುವಿನ ಕಾಲದ ಎರಡು ಹಸ್ತ ಪ್ರತಿಗಳು ಲಂಡನ್ನಿನ 'ಸ್ಕೂಲ್ ಆಫ್ ಓರಿಯಂಟಲ್ ಎಂಡ್ ಆಫ್ರಿಕನ್ ಸ್ಟಡೀಜ್'ನ ಲೈಬ್ರರಿಯಲ್ಲಿ ನೋಡ ದೊರೆತುವು. ಹೊಸಗನ್ನಡ ಸಾಹಿತ್ಯದ ಆರಂಭವನ್ನು ಸದ್ಯ ೧೮೧೦ನೆಯ ದಶಕ ಎಂದಿದ್ದೇವಷ್ಟೆ. ಈ ಹಸ್ತಪ್ರತಿ ದ್ವಯವು ಆರಂಭದ ಗೆರೆಯನ್ನು ನೂರು ವರ್ಷಗಳಷ್ಟು ಹಿಂದೆ ಒಯ್ಯುವುದಾದ್ದರಿಂದ ಅವುಗಳ ಸ್ವರೂಪವನ್ನು ತಿಳಿದುಕೊಳ್ಳೋಣ.

ಎರಡೂ ಕೃತಿಗಳ ಹಸ್ತಾಕ್ಷರಗಳನ್ನು ಹೋಲಿಸಿದಾಗ, ಅದು ಒಬ್ಬನದೇ ಲಿಖಿತವೆಂದು ತಿಳಿಯಬರುವಂತಿದೆ. ಆ ವ್ಯಕ್ತಿಯ ಹೆಸರು ಸವೆರ್ರಿ ಎಂಬುದು. ಲಂಡನ್ನಿನಿಂದ ನಾನು ತಂದ ಈ ಹಸ್ತ ಪ್ರತಿಗಳನ್ನು ಮಿತ್ರರಾದ ಎಡ್ವರ್ಡ್ ನೊರೊನ್ಹಾ ಕೂಲಂಕಷವಾಗಿ ಅಭ್ಯಸಿಸಿ ಈ ಕೆಳಗಿನ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ:

ಮೊದಲನೆಯದಾಗಿ, ಇವು ಹಲವಾರು ಕೃತಿಗಳ ಸಂಕಲನವಾಗಿದ್ದು ಮೂಲ ರಚನೆ ತಮಿಳಿನಲ್ಲಿ, ರಾಬರ್ಟ್ ದ–ನೋಬಿಲಿ ಹಾಗೂ ಇನ್ನು ಒಬ್ಬಿಬ್ಬರದಾಗಿದೆ. ಅದರಂತೆ ಇವುಗಳ ಕನ್ನಡಾನುವಾದವನ್ನು ಸಿನ್ನಾಮಿ, ದೇವಪುತ್ರ ಹಾಗೂ ಧೈರ್ಯಮ್ — ಎಂಬವರು ಮಾಡಿರುವಂತೆ ತಿಳಿದುಬರುತ್ತಿದ್ದು ಈ ಅನುವಾದಗಳ ಕಾಲವು

೧೬೫೯ ರಿಂದ ೧೭೪೧ರ ವರೆಗಿನದಿರುವುದು. ಕೊನೆಯದಾಗಿ, ಮೇಲೆ ಹೇಳಿದ ಸವೆರ್‍ರಿ (ಝುಪಿಯರ್) ಬರಿಯೆ ಪ್ರತಿ ಮಾಡಿದವ. (J. Karnatak Univ. Humanities. Vol. 30 – 1986. pp 105 – 125).

ಏನಿದ್ದರೂ ೧೭೫೯ ಎಂಬ ವರ್ಷವು ಎದ್ದು ಕಾಣುವಂತೆ, ಎರಡೂ ಹಸ್ತ ಪ್ರತಿಗಳಲ್ಲಿ ಬಂದಿದೆ. (ಅವನ್ನು ಅನುಕೂಲಕ್ಕಾಗಿ ಪುಟಗಳ ಸಂಖ್ಯೆಯಿಂದ ಹಸ್ತಪ್ರತಿ – ೪೦, ಹಸ್ತ ಪ್ರತಿ – ೩೩೭ ಎಂದು ಕರೆದಿದೆ). ತುಸು ವಿವರಗಳನ್ನು ಕೊಡೋಣ: ಹಸ್ತಪ್ರತಿ ೪೦ರಲ್ಲಿ ಬಂದ ವಿಷಯಗಳೆಂದರೆ, ಕ್ರೈಸ್ತರ ಮುಖ್ಯ ಸಂಸ್ಕಾರಗಳಾಗಿರುವ ಜ್ಞಾನೋಪದೇಶ ಹಾಗೂ ಜ್ಞಾನಸ್ನಾನ (Baptism). ಇವಕ್ಕೂ ಮಹತ್ವದ್ದು ಕಾರ್ಲ್ ತೊಮೆ ಎಂಬವನು ಮಾಡಿದ 'ಕಲ್ಪಣೆ'ಗಳು. ಅದರ ಹಿನ್ನೆಲೆ ಗಮನಿಸುವ ಹಾಗಿದೆ. ದಕ್ಷಿಣ ಭಾರತದಲ್ಲಿ ಹಿಂದೂಗಳ ಮತಾಂತರ ನಡೆಯುತ್ತಿದ್ದ ಕಾಲಕ್ಕೆ, ಹಾಗೆ ಮತಾಂತರ ಹೊಂದಿದವರು ಕ್ರೈಸ್ತ ಆಚಾರ – ವಿಚಾರಗಳಿಗೆ ಹೊಂದಿಕೊಳ್ಳಬೇಕಾಗಿತ್ತು. ಆದರೆ ಅಂಥವರು ಹಿಂದಿನ ತಮ್ಮ ಕ್ರಮಗಳನ್ನು ಬಿಟ್ಟುಕೊಡುವುದು ಸಾಧ್ಯವಾಗುತ್ತಿರಲಿಲ್ಲ. ಪೋಪರ ವರೆಗೆ ಈ ಕುರಿತು ದೂರುಗಳು ಹೋದವು. ಅವರು ತೋಮ ಎಂಬವನನ್ನು ಇಲ್ಲಿಗೆ ಕಳಿಸಿಕೊಟ್ಟರು. ಅವನು ಈ ವಿಚಾರವಾಗಿ ೧೬ ಕಟ್ಟಳೆಗಳನ್ನು ವಿಧಿಸಿ ಹೋದನು. ಇವು ಕೆಲವು ಮಾದರಿಗಳು;

ಅ) ಜ್ಞಾನಸ್ನಾನದ ಮಂತ್ರಗಳನ್ನು ಲ್ಯಾಟಿನ್ ಭಾಷೆಯಲ್ಲಿಯೇ ಹೇಳಬೇಕು. ಇಲ್ಲವಾದರೆ ತತ್ಸಮವಾದ ದೇಶೀ ಭಾಷೆಯಲ್ಲಿ ಹೇಳಬಹುದು.

ಆ) ಹೆಂಗಸರು ತಾಳಿಯನ್ನು ಕಟ್ಟಿಕೊಳ್ಳಬಾರದು.

ಇ) ಮದುವೆಯ ಕಾಲಕ್ಕೆ ತೆಂಗಿನಕಾಯಿ ನಿವಾಳಿಸುವುದು, ಮುಂತಾದ ಮೂಢ ನಂಬಿಕೆಯ ಯಾವುದೇ ಆಚಾರಗಳನ್ನು ನಡೆಸಕೂಡದು.

ಈ) ಜ್ಞಾನ ಸ್ನಾನದ ಕಾಲಕ್ಕೆ ಹಿಂದೂ ದೇವತೆಗಳ, ಗುರುಗಳ ಹೆಸರು ಇಡದೇ ರೋಮನ್ ಸಂತರ ಇಲ್ಲವೆ ಹುತಾತ್ಮರ ಹೆಸರುಗಳನ್ನಷ್ಟೇ ಇಡಬೇಕು, ಇತ್ಯಾದಿ.

ಹಸ್ತಪ್ರತಿ – ೩೩೭ರ ವಿಷಯಗಳ ಪರಿವಿಡಿಯು ಅದರ ಸುರುವಿಗೆ ಬಂದಿದೆ. ಅದರಲ್ಲಿ ಬಂದ ೪೦ಕ್ಕೂ ಮೇಲ್ಪಟ್ಟ ವಿಷಯಗಳನ್ನು ಹೀಗೆ ವಿಭಾಗಿಸಬಹುದು:

ಅ) ಯೇಸು ಕ್ರಿಸ್ತನ ಜೀವನಕ್ಕೆ ಸಂಬಂಧಪಟ್ಟವುಗಳು. (ಸ್ವಾಮಿ ಪಟ್ಟ ಪಾಡು, ಮುಂ.)

ಆ) ಕ್ರೈಸ್ತ ಸಂತರ ಚರಿತ್ರೆಗಳು. ಅವರಲ್ಲಿ ಮಹಿಳೆಯರೂ ಇದ್ದಾರೆ. ಉದಾ. ಸೇಂಟ್ ಸೆಸಿಲಿಯಾ, ಸೇಂಟ್ ಎಗ್ನೆಸ್.

ವಿಶೇಷದ ಸಂಗತಿಯೆಂದರೆ ಈ ಸಂತರುಗಳ ಹೆಸರುಗಳ ಭಾರತೀಕರಣ ಮಾಡಿದ್ದಾರೆ. ಹಾಗೆ ಮಾಡುವಾಗ ಮೂಲ ಹೆಸರಿನ ಅರ್ಥವನ್ನು ಶಕ್ಯವಿದ್ದೆಡೆ ಗ್ರಹಿಸಿಕೊಂಡಿದ್ದಾರೆ.

ಈ ಪ್ರಕಾರ Clement=ಶಾಂತಪ್ಪ; Benedict=ಆಶೀರ್ವಾದಪ್ಪ; Felicity=ಸಂತೋಷಮ್ಮ ಎಂಬ ನಾಮಾಂತರಗಳಿವೆ.

ಇ) ಕ್ರೈಸ್ತ ತತ್ವ, ಆಚಾರಗಳಿಗೆ ಸಂಬಂಧಿಸಿದುವು. ಇವುಗಳ ಸಂಖ್ಯೆಯೇ ದೊಡ್ಡದು.

ಎರಡು ನೂರು ವರ್ಷಗಳ ಹಿಂದಿನ, ಆದರೂ ಹೊಸಗನ್ನಡ ಎನಿಸಿಕೊಳ್ಳುವಂಥ ಇವೆರಡರ ಭಾಷೆಯನ್ನು ಗಮನಿಸಬೇಕು. ಇದೊಂದು ಮಾದರಿ:

"ದೇವರ ಸ್ವರೂಪವಂನ್ನು ದೇವರು ಅಲ್ಲದ ಸ್ವರೂಪವಂನ್ನು ವಿಂಗ್ಗಡಿಶಿ ತಿಳಿದುಕೊಂಡ್ಡು ಶರಿರವೆನು ಆತ್ಮವೆನು ಯಂದ್ದು ಸೂದಿಸಿಕೊಂಡ್ಡು ಲೋಕದಲ್ಲಿ ಯಿದ್ದಂಥಾ ಅನಿತ್ಯ ಸುಖವನು ಮೊಕ್ಷದಲ್ಲಿ ಪುಂಣ್ಯದಿಂದ್ದಾ ಬಂದ್ದ ನಿತ್ಯ ಭಾಗ್ಯವಂನ್ನು ಅರುತು ಕೊಂಡ್ಡು ಸತ್ಯವುಪದೆಶದಿಂದ್ದಾ ವಿವೆಕವಾಗಿ ಕೆಳಬೆಕು."

ಇಡೀ ಕೃತಿಯಲ್ಲಿ ಎಲ್ಲಿಯೂ ದೀರ್ಘ ಸಂಜ್ಞೆಯಾದ ೀ ಇಲ್ಲ! ಆಗಿನ ದೇಶೀಯರ ಅನೇಕ ಹಸ್ತಪ್ರತಿಗಳಲ್ಲಿಯೂ ಇದು ಕಾಣಿಸಿಕೊಂಡಿಲ್ಲ.

ಇವೆರಡು ಹಸ್ತಪ್ರತಿಗಳು ಹಲವಾರು ಕಾರಣಗಳಿಂದ ವೈಶಿಷ್ಟ್ಯಪೂರ್ಣವಾಗಿವೆ. ಮೊದಲನೆಯದಾಗಿ, ಸಿಸ್ವಾಮಿಯ ಕೃತಿಗಳು ಲಭ್ಯವಿಲ್ಲದಾಗ, ಇವೇ ಹೊಸಗನ್ನಡದ ಕವಚವನ್ನು ತೊಟ್ಟ ಮೊದಲ ಬರಹಗಳಾಗಿವೆ.

ಎರಡನೆಯದಾಗಿ, ೧೮ನೆಯ ಶತಮಾನದಲ್ಲಿ ಕನ್ನಡ ಗದ್ಯಾವತಾರವಾಗ ತೊಡಗಿದ್ದರೂ, ಇಷ್ಟು ದೊಡ್ಡ ಪ್ರಮಾಣದ ಗದ್ಯ ಬರಹ ಇದ್ದಿರಲಿಲ್ಲ. ಅದೂ ಆ ಶತಮಾನದ ಪೂರ್ವಾರ್ಧದಲ್ಲಿ. ಮೂರನೆಯದಾಗಿ ಕ್ರಿಸ್ತೀಯ ವಿಚಾರಗಳ ಅನುವಾದವೇ ಆಗಿರಲಿಲ್ಲ; ಇಷ್ಟರ ಮಟ್ಟಿಗೆ ಹೊರಹೊಮ್ಮಿರಲಿಲ್ಲ. ಕೊನೆಯದಾಗಿ ಆಗಿನ ಗದ್ಯದ ಭಾಷೆ. ಆ ಹಂತದಿಂದ ಇಂದಿನ ವರೆಗಿನ ಹೊಸಗನ್ನಡ ಗದ್ಯದ ವಿಕಾಸವನ್ನು ತಿಳಿಯಲು ಇದು ಆರಂಭದ ಸೋಪಾನಗಳಲ್ಲಿ ಒಂದು.

## ೪೧೨ ಚಾರ್ಬೋನಾ ಮತ್ತು ಇತರರು

ಬೆಂಗಳೂರಲ್ಲಿ ಕ್ರಿ.ಶ. ೧೮೪೮ರಂದು 'ಕೆಥಲಿಕ್ ಮಿಶನ್ ಪ್ರೆಸ್' ಅಸ್ತಿತ್ವದಲ್ಲಿ ಬಂದಿತು. ಅಂದಿನಿಂದ ಕೆಥಲಿಕರ ಕನ್ನಡ ಗ್ರಂಥೋದ್ಯಮವು ಮತ್ತೆ ಕಾಣಿಸಿಕೊಂಡಿತು. ಈಗಾಗಲೇ ಲಂಡನ್ ಮತ್ತು ವೆಸ್ಲಿಯನ್ ಮಿಶನರಿಗಳು ಈ ದಿಶೆಯಲ್ಲಿ ಮುಂದುವರಿದಿದ್ದರಿಂದ ತಮ್ಮ ಮತೀಯರಿಗಾಗಿ ಪ್ರತ್ಯೇಕವಾದ ಕನ್ನಡ ಗ್ರಂಥಗಳ ರಚನೆ ಅವರಿಗೆ ಅನಿವಾರ್ಯವೇ ಆಗಿ ಪರಿಣಮಿಸಿತು.

ಅದಕ್ಕೆ ಕಾರಣನಾದವನು ಇ.ಎಲ್. ಚಾರ್ಬೊನಾ: ಮೈಸೂರು ಸಂಸ್ಥಾನದ ಕೆಥಲಿಕರ ಪ್ರಥಮ ಸ್ವತಂತ್ರ 'ವಿಕಾರ್ ಎಪಾಸ್ಟಲಿಕ್' ಎಂದು ೧೮೪೫ರಲ್ಲಿ ನಿಯಮಿತನಾದ

ಇವನು ಸ್ವಬಾಂಧವರ ಶೈಕ್ಷಣಿಕ ಪ್ರಗತಿಗೆ ಮನಸ್ಸುಗೊಟ್ಟನು. ಅವನಿಗೆ ಮುಮ್ಮಡಿ ಕೃಷ್ಣರಾಜರಿಂದ ವಿಶೇಷ ಮನ್ನಣೆ ದೊರೆತಿದ್ದಿತು. ಅವನು ಕೆಥಲಿಕ್ ಸಮಾಜದ ಮುಖ್ಯನಾಗಿ ಇದ್ದ ಕಾಲದಲ್ಲಿ ಕೆಥಲಿಕರ ಕನ್ನಡ ಗ್ರಂಥೋದ್ಯಮದ ಕಾರ್ಯವು ಚೆನ್ನಾಗಿ ನಡೆಯಿತು (೧೮೭೩).

ಈ 'ಕೆಥಲಿಕ್ ಪ್ರೆಸ್' ನಿಂದ ೩೦ಕ್ಕೂ ಮೇಲ್ಪಟ್ಟು, ಕನ್ನಡ ಗ್ರಂಥಗಳು ಹೊರಬಂದುವು. ನಮಗೆ ದೊರೆತಿರುವ ಮೊದಲನೆಯ ಕೃತಿ 'ದೈವ ಪರೀಕ್ಷೆ' (೧೮೬೨). ಬೆಸ್ಕಿಯ ಈ ತಮಿಳು ಕೃತಿಯನ್ನು ಚಾರ್ಬೊನಾ ಅನುವಾದಿಸಿದ್ದಾನೆ. ಅನುವಾದಿತ ಪ್ರಕಟನೆಗಳನ್ನೆ ಮುಂದುವರಿಸಿ 'ಸತ್ಯವೇದ ಪರೀಕ್ಷೆ' (೧೮೫೨), 'ದಿವ್ಯ ಮಾತೃಕೆ' (೧೮೬೨), 'ಸುಕೃತ ಮಂತ್ರಗಳು' (೧೮೬೬) ಮೊದಲಾದುವನ್ನು ಈತ ಹೊರತಂದನು. ಇನ್ನೊಂದು ಕೃತಿಯಾದ 'ಜಪದ ಪುಸ್ತಕ'ವು (೧೮೬೩) ರೋಮನ್ ಕೆಥಲಿಕರ ಧಾರ್ಮಿಕ ವಿಧಿ ನಿಯಮಗಳ ದೊಡ್ಡ ಹೊತ್ತಗೆ. 'ವೇದ ಮಾರ್ಪಡಿಸುವಿಕೆಯ ಖಂಡನೆ' ಮತ್ತು 'ಪ್ರೊಟೆಸ್ಟಂಟ್ ಎಂಬ ಪತಿತರ ಮಾರ್ಗ' (೧೮೬೭) — ಈ ಕೃತಿಗಳು ಪ್ರೊಟೆಸ್ಟಂಟರ ಬಗ್ಗೆ ವಿರೋಧಾಭಿಪ್ರಾಯವನ್ನು ಸೂಚಿಸುವಂತಹವು.

ಚಾರ್ಬೊನಾನ ದೊಡ್ಡ ಕೊಡುಗೆಯೆಂದರೆ 'ಕನಾರೀಸ್ – ಲ್ಯಾಟಿನಮ್' (೧೮೫೫) ಮತ್ತು 'ಲ್ಯಾಟಿನೊ–ಕನಾರೀಸ್' (೧೮೬೧) ಎಂಬ ಎರಡು ಕೋಶಗಳ ರಚನೆ. ಕೆಥಲಿಕರ ಇಂಗ್ಲಿಷ್ ಶಾಲೆಗಳಲ್ಲಿಯೂ, ತರಬೇತಿ ಕೇಂದ್ರಗಳಲ್ಲಿಯೂ ಲ್ಯಾಟಿನ್‌ದ ಅಭ್ಯಾಸವು ಒಂದು ಕಡ್ಡಾಯದ ವಿಷಯವಾಗಿದ್ದುದರಿಂದ ಈ ಕೋಶಗಳ ಪ್ರಕಟಣೆಯು ಅವಶ್ಯವೆನಿಸಿತು.

ಇದೇ ಸಂಸ್ಥೆಗೆ ಸೇರಿದ ಜೆ. ಬ್ಯಾರಿಲ್ ಎಂಬವನು ತಮಿಳು ಕೃತಿಯಾದ 'ಪರಮಾರ್ಥ ಗುರುವಿನ ಕತೆ'ಯನ್ನು ಕನ್ನಡಿಸಿದ್ದಾನೆ (ಕ್ರಿ.ಶ. ೧೮೬೭). ಮೂರ್ಖ ಗುರು ಮತ್ತು ಅವನ ಕಡು ಮೂರ್ಖ ಶಿಷ್ಯರೈವರ ಹಾಸ್ಯಾಸ್ಪದ ಮಾತು–ನಡತೆಗಳನ್ನು ಒಳಗೊಂಡ ಈ ಕಥಾನಕವು ಅನೇಕ ಭಾಷೆಗಳಿಗೆ ಅನುವಾದಗೊಂಡ ಜನಪ್ರಿಯ ಕೃತಿಯಾಗಿದೆ.

ಎ. ಬೌತೆಲೊನ (Bouteloup) ಗ್ರಂಥೋದ್ಯಮವೂ ಮನನೀಯವಾಗಿದೆ. ಕೆಥಲಿಕರಿಗೆ ತಮ್ಮದೇ ಆದ ಅಧಿಕೃತ ಕನ್ನಡ ಬೈಬಲ್ ಇರಲಿಲ್ಲ. ಬೌತೆಲೊ ಅದರ ಸಂಕ್ಷೇಪ ರೂಪವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದನು. 'ಸತ್ಯೋಪದೇಶ'ವೆಂಬ ಮಾಲಿಕೆಯಲ್ಲಿ ಕೆಲವು ಪುಸ್ತಿಕೆಗಳನ್ನೂ, ರೋಮನ್ ಕೆಥಲಿಕ್ ಚರ್ಚ್‌ನ ಇತಿಹಾಸವನ್ನೂ ಬೌತೆಲೊ ಅನುವಾದಿಸಿದ್ದಾನೆ. ಹಲವು ಪಠ್ಯಪುಸ್ತಕಗಳೂ ಇವನಿಂದ ರಚಿತವಾಗಿವೆ. ಚಾರ್ಬೊನಾ ಕೈಗೊಂಡಿದ್ದ ಕನ್ನಡ–ಲ್ಯಾಟಿನ್ ಸಾಹಚರ್ಯದ ಕಾರ್ಯವನ್ನು ಬೌತೆಲೊ ಮುಂದುವರಿಸಿದನು. ಅವನ 'ಲತೀನು ವ್ಯಾಕರಣ'ವು ವಿಶಿಷ್ಟ ಕೃತಿಯಾಗಿದೆ (೧೮೬೯).

ಅದೇ ವರ್ಷ ಬೌತೆಲೊ ಕನ್ನಡ ಛಂದಸ್ಸನ್ನು ಕುರಿತು ಲ್ಯಾಟಿನ್ ಭಾಷೆಯಲ್ಲಿ ಸಣ್ಣ ಹೊತ್ತಗೆಯನ್ನು ಹೊರತಂದನು.

ಬೆಂಗಳೂರಿನ ಕೆಥಲಿಕ್ ಸಂಸ್ಥೆಯು ಪ್ರಕಟಿಸಿದ ಇನ್ನೊಂದು ಗಣನೀಯ ಕೃತಿಯೆಂದರೆ 'ಶ್ಲೋಕ ಸಂಗ್ರಹ' (೧೮೬೮). ಅದರಲ್ಲಿ ಸಂಸ್ಕೃತದ ನೀತಿಪರ ಶ್ಲೋಕಗಳನ್ನೂ ಅದಕ್ಕೆ ಸಮಾನವಾದ ಬೈಬಲ್ ವಾಕ್ಯಗಳನ್ನೂ ಅನುವಾದ, ಟಿಪ್ಪಣಿಗಳೊಡನೆ ಕೊಡಲಾಗಿದೆ.

## ೪.೨ ಲಂಡನ್ ಮಿಶನ್ ಸಂಸ್ಥೆಯವರು

### ೪.೨.೧ ಹ್ಯಾಂಡ್ಸ್ ಮತ್ತು ರೀವ್

ಬಳ್ಳಾರಿಗೆ ಬಂದ ಮರುತಿಂಗಳಲ್ಲಿಯೇ **ಜಾನ್ ಹ್ಯಾಂಡ್ಸ್** ಕನ್ನಡವನ್ನು ಕಲಿಯಲಾರಂಭಿಸಿದ್ದನು. ಇವನೇ ಪ್ರೊಟೆಸ್ಟೆಂಟರ ಆದ್ಯ ಮಿಶನರಿಯಾದ್ದರಿಂದ, ಇವನ ಅನಂತರದವರಿಗೆ ಒದಗಿದ್ದ ವ್ಯಾಕರಣಾದಿ ಭಾಷಾ ಸಾಧನಗಳು ಈತನಿಗೆ ಲಭ್ಯವಿರಲಿಲ್ಲ. ಅಂಥದರಲ್ಲಿಯೂ ಅವನು ಕನ್ನಡವನ್ನು ತಕ್ಕಮಟ್ಟಿಗೆ ಕಲಿತನೆನ್ನುವುದು ಅವನ ಪರಿಶ್ರಮಕ್ಕೆ ಸಾಕ್ಷಿಯಾಗಿದೆ. ಮುಂದೆ ಬರಲಿದ್ದ ತನ್ನ ಸಹೋದ್ಯೋಗಿಗಳಿಗೆ ಉಪಯೋಗ ಬೀಳಲೆಂದಿರಬೇಕು, ಅವನು ಕ್ರಿ.ಶ. ೧೮೧೨–೧೩ರ ಸುಮಾರಿಗೆ ಒಂದು ಕನ್ನಡ ವ್ಯಾಕರಣವನ್ನೂ ಶಬ್ದಕೋಶವನ್ನೂ ರಚಿಸಲುದ್ಯುಕ್ತನಾದನೆಂದು ಹೇಳಲಾಗಿದೆ.[೪]

ಬೈಬಲ್ ಅನುವಾದದ ಕೆಲಸವನ್ನು ಅವನು ಕನ್ನಡ ವಾಕ್ಯರಚನೆಯನ್ನು ಕಲಿತ ದಿನದಿಂದಲೇ ಆರಂಭಿಸಿದನೇನೋ. ಕ್ರಿ.ಶ. ೧೮೧೨ನೆಯ ವರ್ಷದಲ್ಲಿ ಅವನು ಮ್ಯಾಥ್ಯೂ, ಮಾರ್ಕ್, ಲ್ಯೂಕ್ ಸುವಾರ್ತೆಗಳು ಮತ್ತು ಡಾ. ಮ್ಯಾಕ್ ಎಂಬವನ ಪ್ರಶ್ನೋತ್ತರರೂಪಿಯಾದ ಮತಪುಸ್ತಕ (Catechism) ಇವುಗಳ ಅನುವಾದವನ್ನೂ ಮುಗಿಸಿಬಿಟ್ಟನು.[೫] ಮುಂದೆ ಕೆಲವು ತಿಂಗಳಲ್ಲಿಯೆ ಹೊಸ ಒಡಂಬಡಿಕೆಯ ಅನುವಾದವೂ ಮುಗಿದಿರಬೇಕು. ಅದರ ಬಿಡಿ ಭಾಗದ ಬೇರೆ ಬೇರೆ ಪ್ರತಿಗಳನ್ನು ಬರೆಯಿಸಿ, ಜನಗಳಲ್ಲಿ ಹಂಚುತ್ತಿದ್ದ ವಿಷಯವನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. <೨೧೧>.

ಮತಪುಸ್ತಕಗಳ ಅನುವಾದ ಕಾರ್ಯವು ಹೀಗೆಯೇ ಸಣ್ಣ ಪ್ರಮಾಣದಲ್ಲಿ ಮುಂದುವರಿಯಿತು. ಕ್ರಿ.ಶ. ೧೮೧೭ರಲ್ಲಿ ಹ್ಯಾಂಡ್ಸ್ ಮತ್ತು ಅವನ ಸಂಗಡಿಗರು ಶ್ರೀರಾಮಪುರದ ದೇಶೀ ಕ್ರಿಸ್ತೀಯನಾಗಿದ್ದ ಪೀತಾಂಬರಸಿಂಹನ 'ನೆನಹುಗಳು', 'ಯೇಸು ಕ್ರಿಸ್ತನ ಅವತಾರ', 'ಪರಿಶುದ್ಧಿಯ ಮಾರ್ಗ ವಿವರಣೆ' (Explanation of the way of Salvation) ಇವುಗಳ ಅನುವಾದಗಳನ್ನು ಸಿದ್ಧಗೊಳಿಸಿದರು. ಮರುವರ್ಷ ಬಳ್ಳಾರಿಯಲ್ಲಿ ಒಂದು ಬೈಬಲ್ ಸಂಘವನ್ನು ಸ್ಥಾಪಿಸಿ, ಪುಸ್ತಕ ಪ್ರಕಟನೆಗೆ ಹಾದಿ ಮಾಡಿಕೊಂಡರು. ಮುಂದೆ, ಮುದ್ರಣದ ಬಗ್ಗೆ ವಿಶೇಷ ಪ್ರಯತ್ನ ನಡೆದು ಬೈಬಲಿನ ಹೊಸ ಒಡಂಬಡಿಕೆಯ

ನಾಲ್ಕು ಸುವಾರ್ತೆಗಳು ಈ ಹಿಂದೆ ಹೇಳಿದಂತೆ ೧೮೨೦ರಲ್ಲಿ, ಮದ್ರಾಸದಲ್ಲಿ ಮುದ್ರಣಗೊಂಡು ಹೊರಬಂದವು.

ಹ್ಯಾಂಡ್ಸ್ ಹೊಸ ಒಡಂಬಡಿಕೆಯ ಮುಂದಿನ ಭಾಗವನ್ನೂ ಮುದ್ರಣಕ್ಕೆ ಅಣಿಗೊಳಿಸಿದನು. ಹಳೆಯ ಒಡಂಬಡಿಕೆಯ ಅನುವಾದವನ್ನು ಕೈಗೆತ್ತಿಕೊಂಡನು. ರೀವ್ ಮೊದಲಾದ ಅವನ ಸಹೋದ್ಯೋಗಿಗಳ ಸಹಾಯವು ಇವೆಲ್ಲ ಕೆಲಸಗಳಲ್ಲಿ ಇದ್ದಿತೆಂಬುದನ್ನು ಗಮನಿಸಬೇಕು. ಹಾಗಿದ್ದರೂ ಸಮಗ್ರ ಬೈಬಲನ್ನು ಕನ್ನಡವಲ್ಲಿ, ಅದರ ಭಾಷೆ ಹೇಗೇ ಇರಲಿ, ಮೊದಲ ಬಾರಿಗೆ ಹೊರತಂದದ್ದರ ಶ್ರೇಯಸ್ಸು ಹ್ಯಾಂಡ್ಸ್‌ನದೇ ಆಗಿದೆ ಮತ್ತು ಈ ಕೆಲಸದಲ್ಲಿ ಆತ ಕೃತಕೃತ್ಯನಾದನೆಂದೇ ಹೇಳಬೇಕು.

ಲಂಡನ್ ಮಿಶನ್ನಿನ ಅನೇಕರು ಇಲ್ಲಿಗೆ ಬಂದಿದ್ದರೂ ಹ್ಯಾಂಡ್ಸ್‌ನೇ ಅವರಿಗೆಲ್ಲ ಮುಖ್ಯಸ್ಥನಾಗಿ ಬಹು ಕಾಲವನ್ನು ಬಳ್ಳಾರಿಯಲ್ಲಿಯೆ ಕಳೆದಿದ್ದನು. ಕ್ರಿ. ಶ. ೧೮೨೯ರಲ್ಲಿ ಈತ ನಿವೃತ್ತನಾಗಿ ಲಂಡನ್ನಿಗೆ ಹಿಂತಿರುಗಿದನು. ಆದರೆ ಭಾರತವು ಇನ್ನೂ ಒಮ್ಮೆ ಅವನನ್ನು ಕರೆಯಿತು. ಕ್ರಿ.ಶ. ೧೮೩೨ರಲ್ಲಿ ಲಂಡನ್ ಮಿಶನ್ನಿನ ಮದ್ರಾಸ ವಿಭಾಗದ ಕಾರ್ಯದರ್ಶಿಯಾಗಿ ಕೆಲವು ಕಾಲ ಸೇವೆ ಸಲ್ಲಿಸಿ ಸ್ವದೇಶಕ್ಕೆ ಹಿಂತಿರುಗಿದನು. ಅಲ್ಲಿ ಸೇಂಟ್ ಪೀಟರ್ಸ್ ಚರ್ಚ್‌ನಲ್ಲಿ ಉಪದೇಶಕನಾಗಿ ಇದ್ದಾಗಲೂ ಕರ್ನಾಟಕದ ಮೋಹ ಅವನನ್ನು ಬಿಟ್ಟಿರಲಿಲ್ಲ. ಅಗತ್ಯ ಬಿದ್ದರೆ ತಾನು ಇನ್ನೂ ಒಮ್ಮೆ ಮಿಶನರಿಯಾಗಿ ಹೋಗಲು ಸಿದ್ಧನೆಂದು ಆತ ತಿಳಿಸಿದ್ದನು. ಆಗ ವರಿಷ್ಠ ಕೇಂದ್ರದವರು ಅವನನ್ನು ೧೮೩೮–೧೮೪೧ರಲ್ಲಿ ಬೆಂಗಳೂರಿಗೆ ಬೇರೊಂದು ಕೆಲಸಕ್ಕಾಗಿ ಕಳುಹಿಸಿಕೊಟ್ಟರು. ಹ್ಯಾಂಡ್ಸ್ ಅದನ್ನು ಮುಗಿಸಿ ಸ್ವದೇಶಕ್ಕೆ ಹಿಂತಿರುಗಿದ ಕೆಲವು ಕಾಲಾನಂತರ ತೀರಿಕೊಂಡನು.

ಹ್ಯಾಂಡ್ಸ್‌ನ ಬದುಕಿನ ಅವಲೋಕನದಿಂದ ಎದ್ದು ತೋರುವ ಅಂಶಗಳೆಂದರೆ ಅವನ ಕಾರ್ಯಶ್ರದ್ಧೆ ಮತ್ತು ಸಹನಗುಣ. ಭಾಷಾಗ್ರಹಣ ವಿಚಾರದಲ್ಲಿ ಅವನು ಪರಿಣತನಿದ್ದಿಲ್ಲವೆಂಬುದು ಅವನ ಅನುವಾದ ಕೃತಿಗಳಿಂದ ವ್ಯಕ್ತವಾಗುತ್ತದೆ. ಆದರೆ ಕರ್ನಾಟಕದಲ್ಲಿ ಪ್ರೊಟೆಸ್ಟಂಟ್ ಮತಪ್ರಸಾರದ ಭದ್ರ ಬುನಾದಿಯನ್ನು ಹಾಕಿ, ಕನ್ನಡ ಮುದ್ರಣದ ಸಸಿಯನ್ನು ನೆಟ್ಟವನು ಇವನೇ.

**ವಿಲಿಯಮ್ ರೀವ್** ಮಾತ್ರ ನಿಸ್ಸಂಶಯವಾಗಿ ಭಾಷಾಕೋವಿದನಿದ್ದನು. ಬಳ್ಳಾರಿಯಲ್ಲಿ ನಡೆದಿದ್ದ ಅನುವಾದ ಕಾರ್ಯದಲ್ಲಿ ನೆರವಾಗಬೇಕೆನ್ನುವ ಸ್ಪಷ್ಟ ಉದ್ದೇಶದಿಂದಲೇ ಅವನನ್ನು ಕಳುಹಿಸಲಾಗಿದ್ದಿತು. ಬೈಬಲ್ ಹಾಗೂ ಇತರ ಮತಪುಸ್ತಿಕೆಗಳ ಅನುವಾದ ಮಾಡುವುದಕ್ಕೆ ಮೂಲತಃ ಅಗತ್ಯವಾದದ್ದು ಇಂಗ್ಲಿಷ್ – ಕನ್ನಡ ಶಬ್ದಕೋಶ ತಾನೇ. ಅದಿಲ್ಲದಿದ್ದುದು ಯಾವುದೇ ಅನುವಾದ ಕಾರ್ಯಕ್ಕೆ ಒಂದು ದೊಡ್ಡ ಕೊರತೆಯಾಗಿ ಕಂಡಿತು. ಕೂಡಲೇ ಇಂಗ್ಲಿಷ್ ಕೋಶದಿಂದ ಆವಶ್ಯಕ ಪದಗಳನ್ನು ಬರೆದುಕೊಂಡು ಅದಕ್ಕೆ ಸಮನಾದ ಕನ್ನಡ ಪದಗಳನ್ನು ಕೊಟ್ಟು, ಒಂದೆರಡು ವರ್ಷದಲ್ಲಿ ಆ ಕೆಲಸವನ್ನು

ಮುಗಿಸಿಬಿಟ್ಟುದಾಗಿ (೧೮೧೭), ಅವನ ಪ್ರಥಮ ಶಬ್ದಕೋಶದ ಪೀಠಿಕೆಯಿಂದ ತಿಳಿಯುತ್ತದೆ.

ತನ್ನ ಬಿಡುವಿನ ವೇಳೆಯಲ್ಲಿ ಆ ಕಚ್ಚಾ ಶಬ್ದಪಟ್ಟಿಯ ತಿದ್ದುಗೆ ಮತ್ತು ವಿಸ್ತರಣೆಯಲ್ಲಿ ತೊಡಗಿದನು. ಕನ್ನಡದಲ್ಲಿ ಅರ್ಥ ಹೇಳುವಾಗ ಸಂಸ್ಕೃತ ಕೋಶದಲ್ಲಿದ್ದ ಶಬ್ದಗಳನ್ನು ಅವು ಕನ್ನಡದಲ್ಲಿ ಬಳಕೆಯಲ್ಲಿರಲಿ ಇಲ್ಲದಿರಲಿ – ಸೇರಿಸಿದ್ದನು. ಕ್ರಮೇಣ ಅವನ್ನು ಕೈಬಿಟ್ಟನು. ಕೆಲವು ಹಳಗನ್ನಡದ ಹಸ್ತಪ್ರತಿಗಳನ್ನು (ಬಹುಶಃ ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನಲ್ಲಿದ್ದವುಗಳನ್ನು) ಪರಿಶೀಲಿಸಿ ಅನೇಕಾನೇಕ ಹೊಸಗನ್ನಡ ಶಬ್ದಗಳನ್ನು ಅರಿತುಕೊಂಡನು. ಕೊನೆಗೊಮ್ಮೆ ೧೮೨೫ರಷ್ಟೊತ್ತಿಗೆ ಅವನ ಹಸ್ತಪ್ರತಿಯು ಸಿದ್ಧವಾಯಿತು.

ಇಂಥದೊಂದು ಕೋಶವು ಬ್ರಿಟಿಶ್ ಆಡಳಿತಗಾರರಿಗೂ ಅಗತ್ಯವಾಗಿದ್ದಿತು. ಮದ್ರಾಸದ ಗವರ್ನರ್ ಮನ್ರೋನ ಸೂಚನೆಯ ಪ್ರಕಾರ, ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನ ಅಧಿಕಾರಿಗಳಿಗೆ ಈ ಕೋಶದ ಕೆಲವು ಮಾದರಿಗಳನ್ನು ಸಾದರಪಡಿಸಲಾಯಿತು. ಅವರ ಒಪ್ಪಿಗೆ ದೊರೆತ ಮೇಲೆ ಕಂಪನಿ ಸರಕಾರವೇ ಮುದ್ರಣ – ಪ್ರಕಟನೆಯನ್ನು ಪೂರೈಸಿತು. ಮನ್ರೋನ ಈ ಸಹಾಯವನ್ನು ನೆನೆದು ರೀವ್ ಅವನಿಗೇ ತನ್ನ ಕೃತಿಯನ್ನು ಅರ್ಪಣ ಮಾಡಿದ್ದಾನೆ.

ಕ್ರಿ.ಶ. ೧೮೨೫ ರಲ್ಲಿ ದೀರ್ಘ ರಜೆಯ ಮೇಲೆ ಸ್ವದೇಶಕ್ಕೆ ಹೋಗಿದ್ದ ರೀವ್ ಮರಳಿ ಬಂದ ಕೂಡಲೇ ತನ್ನ ಇನ್ನೊಂದು ಕೋಶದ (ಕನ್ನಡ – ಇಂಗ್ಲಿಷ್) ರಚನೆಗೆ ತೊಡಗಿದನು. ಅದಕ್ಕೆ ಬೇಕಾದ ಅರ್ಥ ಸಾಮಗ್ರಿಯು ಪ್ರಥಮ ಕೋಶ ರಚನಾಕಾಲದಲ್ಲಿಯೇ ಒದಗಿದ್ದಿತು. ಈ ಕಾರ್ಯದಲ್ಲಿ ಅವನು ಏಳು ಜನ ದೇಶೀಯರನ್ನು ಕೆಲಸಕ್ಕಿಟ್ಟುಕೊಂಡಿದ್ದನು. ಕಾಲೇಜಿನ ಇಲ್ಲವೆ ಸರಕಾರದ ವತಿಯಿಂದಲೇ ಅವರಿಗೆ ಸಂಬಳ ಸಲ್ಲುತ್ತಿದ್ದಿತೆಂದು ಕಾಣುತ್ತದೆ. ಅದರಲ್ಲಿ ಇಬ್ಬರು ಅಮರಕೋಶಾದಿ ನಿಘಂಟುಗಳಲ್ಲಿರುವ ಕನ್ನಡ ಬಳಕೆಯ ಸಂಸ್ಕೃತ ಪದಗಳನ್ನು ಆಯುವುದಕ್ಕೂ ಮತ್ತಿಬ್ಬರು ಸಮಾನಾರ್ಥಕ ಪದಗಳು, ನಾಣ್ನುಡಿಗಳು ಮೊದಲಾದುವನ್ನು ಪಟ್ಟಿ ಮಾಡುವುದಕ್ಕೂ ನಿಯಮಿತರಾಗಿದ್ದರು. ಇನ್ನು ವಿವಿಧ ಉದ್ಯೋಗಗಳಿಗೆ, ಅದರಂತೆ ಆಡಳಿತಕ್ಕೆ ಸಂಬಂಧಪಟ್ಟ ಕನ್ನಡ ಪದಗಳನ್ನು ಸಂಗ್ರಹಿಸಲು ಓರ್ವ ಸಂಚಾರೀ ಸಹಾಯಕನೂ ಇದ್ದನು.

ಬ್ರೌನ್ ವಿರಚಿತ ತೆಲುಗು, ಇಂಗ್ಲಿಷ್ ಕೋಶದ ಮಾದರಿಯಲ್ಲಿ ರೀವ್ ತನ್ನ ಕಾರ್ಯವನ್ನು ಮುಂದುವರಿಸಿದನು. ಹಳಗನ್ನಡ ಕೋಶಗಳಾದ 'ಕರ್ನಾಟಕ ಶಬ್ದಮಂಜರಿ', 'ಚತುರಾಸ್ಯ ನಿಘಂಟು', 'ಕಬ್ಬಿಗರ ಕೈಪಿಡಿ' ಇವನ್ನೂ ರೀವ್ ಪರಿಶೀಲಿಸಿದ್ದನು. ಹಳಗನ್ನಡ ಕಾವ್ಯಗಳೊಂದಾದರೂ ಮುದ್ರಿತವಾಗಿರದಿದ್ದಾಗ ರೀವ್ ಅವುಗಳಲ್ಲಿ ಕೆಲವು ಹಸ್ತಪ್ರತಿಗಳನ್ನು ಪರಿಶೀಲಿಸಿದ್ದನಷ್ಟೆ. ಆ ಮೂಲಕ ಅನೇಕ ಪ್ರಯೋಗ ವಾಕ್ಯಗಳನ್ನು ಆತ ಸಂಗ್ರಹಿಸಿದ್ದನಾದರೂ ಗ್ರಂಥ ವಿಸ್ತಾರ ಭಯದಿಂದ ಅವನ್ನು ಕೋಶದಲ್ಲಿ

ಸೇರಿಸಲಿಲ್ಲ. ಹಳಗನ್ನಡ ಕೃತಿಗಳನ್ನು ವೀಕ್ಷಿಸಿ ಅವುಗಳಲ್ಲಿರುವ ಎಲ್ಲ ಶಬ್ದಗಳನ್ನು ತಾನು ಕೊಟ್ಟಿಲ್ಲವೆಂದೂ ಹಾಗೆ ಮಾಡುವುದಕ್ಕೆ ಒಂದೆರಡು ದಶಕಗಳೇ ಬೇಕಾಗುವವೆಂದೂ ರೀವ್ ತನ್ನ ಪೀಠಿಕೆಯಲ್ಲಿ ಹೇಳಿದ್ದಾನೆ. ಆ ಕೆಲಸವನ್ನು ಮುಂದೆ ಕಿಟೆಲ್ ಬಹುಮಟ್ಟಿಗೆ ಕೈಗೊಂಡರೆಂಬುದನ್ನು ಇಲ್ಲಿ ನೆನೆಯಬಹುದು. ಇದರ ಯೋಜನೆಯನ್ನು ವಿವರವಾಗಿ ನೋಡಿದಾಗ ಆಧುನಿಕವಾದ ಕೋಶರಚನಾ ಕಾರ್ಯಕ್ಕೆ ರೀವ್ ಸೂಕ್ತವಾದ ತಳಹದಿಯನ್ನು ಹಾಕಿಕೊಂಡಿದ್ದನೆಂಬುದು ವೇದ್ಯವಾಗುತ್ತದೆ.

ಕೋಶರಚನೆಯಲ್ಲಿ ಕೆಲವು ಅನಾನುಕೂಲತೆಗಳನ್ನು ತಾನು ಇದಿರಿಸಬೇಕಾಯಿತು, ಎಂಬುದಾಗಿ ಆತ ತನ್ನ ಪೀಠಿಕೆಯಲ್ಲಿ ನಿವೇದಿಸಿದ್ದಾನೆ. ಅವಾವುವೆಂದರೆ–

– ಪ್ರಾಚೀನ ಕೃತಿಗಳು ದೊರೆಯದೆ ಹೋದುದು;

–ಪ್ರತಿ ಮಾಡುವವರ ದಡ್ಡತನದ ಮಹಾ ಪ್ರಮಾದಗಳು;

–ತುಲನೆ ಮಾಡಿ ನೋಡಲು ಇಂಥವೇ ಕೃತಿಗಳು ಇಲ್ಲದಿರುವುದು; ಮತ್ತು

–ಭಾಷಾಶಾಸ್ತ್ರದ ತಿಳುವಳಿಕೆಯೂ, ಸಾಹಿತ್ಯಿಕ ಸಂಶೋಧನ ದೃಷ್ಟಿಯೂ ಇರುವಂಥ ದೇಶೀ ಪಂಡಿತರು ಸಿಕ್ಕದಿದ್ದುದು.

ಅವನೇ ಒಪ್ಪಿಕೊಂಡ ಈ ಲೋಪಗಳಿಂದಾಗಿ ರೀವ್‌ನ ಕೋಶವು ಇಂದಿನವರ ದೃಷ್ಟಿಯಲ್ಲಿ ಅತ್ಯಂತ ಅಸಮರ್ಪಕವೆನಿಸುವುದರಲ್ಲಿ ಸಂದೇಹವಿಲ್ಲ. ಈ ಮಾತನ್ನು ಕಿಟೆಲ್ ಮತ್ತು ಈಚಿನ ಕೆಲವು ಭಾಷಾಭ್ಯಾಸಿಗಳು ಎತ್ತಿ ತೋರಿಸಿದ್ದಾರೆ. ಆದರೆ ಹೊಸಗನ್ನಡದ ಮೊತ್ತಮೊದಲಿನ ಕೋಶಕಾರನಾಗುವ ಹೊಣೆಯನ್ನು ಹೊತ್ತು ಅವನು ಪಟ್ಟ ಶ್ರಮವು ಗೌರವಾನ್ವಿತವಾದುದು. ಕನ್ನಡಕ್ಕೆ ಅವನಿಂದ ಸಂದ ಮಹತ್ವದ ಕಾಣಿಕೆಯೆಂದರೆ ಮುಂದಿನ ಕೋಶಕಾರರಿಗೆ ಅವನು ತಳಹದಿಯನ್ನು ಒದಗಿಸಿದನೆಂಬುದೇ ಆಗಿದೆ.

ಕೋಶಗಳನ್ನಲ್ಲದೆ ರೀವ್ ಈ ಹಿಂದೆ ಕಾಣಿಸಿದ 'ಯೇಸುಕ್ರಿಸ್ತನ ಅವತಾರ' ಎಂಬ ಕೃತಿಯನ್ನೂ ರಚಿಸಿದ್ದಾನೆ (೧೮೨೦). ಹಳೆಯ ಒಡಂಬಡಿಕೆಯ ಅನೇಕ ಪರ್ವಗಳನ್ನು (ಪೆಂಟೆಟ್ಯೂಕ್, ಜೋಶುಆ, ಜಿ.ಎಸ್. ಸ್ಯಾಮ್ಯುಯಲ್ ಇ.) ಆತ ಅನುವಾದಿಸಿದ್ದಾನೆ ಮತ್ತು ಹ್ಯಾಂಡ್ಸ್‌ನ ಬೈಬಲ್ ಭಾಷಾಂತರವನ್ನು ಆದ್ಯಂತವಾಗಿ ತಿದ್ದಿದ್ದಾನೆ.

### ೪.೨೨ ರೀಡ್, ಬೆಯ್ನನ್ ಹಾಗೂ ಕ್ಯಾಂಬೆಲ್

ಇಂಗ್ಲೆಂಡಿನಲ್ಲಿರುವಾಗಲೇ ಜಾನ್ ರೀಡ್, ಹ್ಯಾಂಡ್ಸ್‌ನ ಮುಖಾಂತರ ಕನ್ನಡವನ್ನು ಕಲಿಯತೊಡಗಿದ್ದನು (೧೮೩೦). ಅದು ಐದು ವಾರಗಳ ಅಧ್ಯಯನ ಮಾತ್ರ. ಹ್ಯಾಂಡ್ಸ್ ಆ ಕುರಿತು ಹೀಗೆ ಬರೆದಿದ್ದಾನೆ:

"ಈ ಅವಧಿಯಲ್ಲಿ ಅವನು ಪಟ್ಟ ಶ್ರಮ, ತೋರಿದ ಪ್ರಗತಿ ನನ್ನನ್ನು ಬೆರಗುಗೊಳಿಸಿದವು. ಅಷ್ಟರೊಳಗೆ ಅವನು ಹೊಸ ಒಡಂಬಡಿಕೆಯ ಕನ್ನಡ ರೂಪವನ್ನು ಸುಲಭವಾಗಿ ಓದಬಲ್ಲವನಾಗಿದ್ದನು. ವ್ಯಾಕರಣದ ತೊಡಕಿನ ಅಂಶಗಳನ್ನು ಅರಿತುಕೊಂಡಿದ್ದು ಇಂಗ್ಲಿಷ್ – ಕನ್ನಡ ಕೋಶದಿಂದ (ರೀವ್‌ನದು) ಜನಬಳಕೆಯ ಐದಾರು ಸಾವಿರ ಕನ್ನಡ ಶಬ್ದಗಳನ್ನು ಆಯ್ದು ಕನ್ನಡದಲ್ಲಿ ಬರೆದಿಟ್ಟುಕೊಂಡಿದ್ದನು."[೬]

ಮಿಶನರಿಗಳ ಭಾಷಾಭ್ಯಾಸದ ಶ್ರದ್ಧೆಗೆ ಇದೊಂದು ನಿದರ್ಶನವಾಗಿದೆ. ರೀಡ್ ತನ್ನ ಹಡಗಿನ ಪ್ರಯಾಣದಲ್ಲಿಯೂ ಕನ್ನಡ ಅಭ್ಯಾಸವನ್ನು ಮುಂದುವರಿಸಬೇಕೆಂದನು. ಹ್ಯಾಂಡ್ಸ್‌ನಲ್ಲಿ ಆ ಶಬ್ದಕೋಶದ ಒಂದೇ ಪ್ರತಿಯಿದ್ದುದರಿಂದ ರೀಡ್ ತಾನು ಹಡಗನ್ನು ಏರುವ ಹಿಂದಿನ ರಾತ್ರಿ ಕುಳಿತು ತನಗೆ ಉಪಯುಕ್ತ ಬೀಳುವ ಎಲ್ಲ ಕನ್ನಡ ಶಬ್ದಗಳ ಪಟ್ಟಿಯನ್ನು ಮಾಡಿಕೊಂಡನಂತೆ.[೭]

ಕ್ರಿ.ಶ. ೧೮೩೧ರಲ್ಲಿ ಹ್ಯಾಂಡ್ಸ್ ಮರಳಿ ಬಳ್ಳಾರಿಗೆ ಬಂದಿದ್ದರೂ ರೀಡ್‌ನೇ ಆ ಕೇಂದ್ರದ ಮುಖ್ಯಸ್ಥನಾಗಿ ಮುಂದುವರಿದನು. ಹ್ಯಾಂಡ್ಸ್ ತನ್ನ ಮದ್ರಾಸ, ಬೆಂಗಳೂರುಗಳ ಸಂಚಾರದಲ್ಲಿ ಬಿಡುವು ದೊರೆತಾಗಲೆಲ್ಲ ರೀಡ್‌ನ ಜತೆಗೂಡಿ ಬೈಬಲಿನ ಪರಿಷ್ಕರಣ ಮಾಡುತ್ತ ಅದನ್ನು ಅಣಿಗೊಳಿಸಿದನು. ರೀಡ್ ಬೈಬಲ್ ತತ್ತ್ವವನ್ನು ಚೆನ್ನಾಗಿ ಅಭ್ಯಾಸ ಮಾಡಿದವನಿದ್ದು ಅನುವಾದ ವಿಚಾರದಲ್ಲಿ ಆಳವಾದ ಆಸ್ಥೆ ವಹಿಸಿದ. ಇದರಿಂದ ತನಗೆ ವಿಶೇಷ ನೆರವು ದೊರೆಯಿತೆಂದು ಹ್ಯಾಂಡ್ಸ್ ಮುಕ್ತ ಮನಸ್ಸಿನಿಂದ ಹೇಳಿದ್ದಾನೆ.

ರೀಡ್ ತೆಲುಗು ಭಾಷೆಯನ್ನು ಸಹ ಕಲಿತಿದ್ದನು. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಿಂದ ಕೆಲವು ಮತಪುಸ್ತಕಗಳನ್ನು ಆತ ತೆಲುಗಿಗೂ ಅನುವಾದ ಮಾಡಿದ್ಧಾನೆ. ಕ್ರಿ.ಶ. ೧೮೩೫ ಸುಮಾರಿಗೆ, ಅವನ ಸಾಹಿತ್ಯಿಕ ದಿನಚರಿ ಇಂತಿದ್ದಿತು:

"[ಬೈಬಲಿನ] ಕನ್ನಡ ಅನುವಾದ ಪರಿಷ್ಕರಣವು ಮುಗಿಯುತ್ತ ಬಂದಿತು. ತೆಲುಗಿನದರ ತಿದ್ದುಪಡಿಯನ್ನೂ ನಾನು ಇದೇ ರೀತಿಯಲ್ಲಿ ಮುದ್ರಿಸಿದ್ದೇನೆ. ಸರಕಾರದ ಭಾಷಾಂತರಕಾರನಾದ 'ವಿ.ಸಿ.' ಎಂಬವನ ಉದಾರ ಇಚ್ಛೆಯ ಮೇರೆಗೆ ನಿತ್ಯ ಪ್ರಾರ್ಥನೆಯ ಮಹತ್ವದ ಪದ್ಯಗಳ ಕನ್ನಡ ಅನುವಾದಕ್ಕೂ ತೊಡಗಿದ್ದೇನೆ. ಇದನ್ನೇ ತೆಲುಗಿನಲ್ಲಿಯೂ ಅನುವಾದಿಸುತ್ತ ಇದ್ದೇನೆ. ಅಲ್ಲದೆ, ನಮ್ಮ ಹಲವಾರು ಕನ್ನಡ ಮತಪುಸ್ತಕಗಳನ್ನು ತೆಲುಗಿಗೆ ಈಗಾಗಲೇ ಅನುವಾದ ಮಾಡಿದ್ದಾಗಿದೆ...... ಆದರೆ ನನ್ನ ಹೆಚ್ಚಿನ ವೇಳೆಯೆಲ್ಲ ಎರಡೂ ಭಾಷೆಗಳಲ್ಲಿಯ ಬೈಬಲ್ ಅನುವಾದದ ಪರಿಷ್ಕರಣದಲ್ಲಿಯೆ ಕಳೆಯುತ್ತಲಿದೆ."[೮]

ರೀಡ್‌ನಿಗೆ ಗ್ರಂಥೋದ್ಯಮವು ಹೆಚ್ಚು ಪ್ರಿಯವಾದ ಕೆಲಸವಾಗಿದ್ದಿತು. ಈ ರೀತಿ ಅವನು ಧರ್ಮಗ್ರಂಥಗಳ ಅನುವಾದ, ಮುದ್ರಣಗಳಿಗೆ ಹೆಚ್ಚು ಗಮನ ಕೊಡುತ್ತಿದ್ದುದು ಲಂಡನ್ನಿನ ವರಿಷ್ಠ ಕೇಂದ್ರದವರ ಮನಸ್ಸಿಗೆ ಬಂದಿರಲಿಲ್ಲ. ಪ್ರವಚನ ಕಾರ್ಯಕ್ಕೆ ಪ್ರಾಶಸ್ತ್ಯ ಸಲ್ಲುವುದೇ ನ್ಯಾಯವೆಂದು ಅವರ ಅಭಿಪ್ರಾಯವಾಗಿದ್ದಿತು. ಈ ತೊಳಲಾಟದಲ್ಲಿ ಅವನ ಆತ್ಮನಿವೇದನೆಯನ್ನು ಗಮನಿಸಬೇಕು:

"ಮುದ್ರಣ ಕಾರ್ಯದಲ್ಲಿ ನಾನು ಮೊದಲಿಗಿಂತ ಹೆಚ್ಚು ಗಮನ ಕೊಡುವುದು ಅಗತ್ಯದ್ದಾಗಿದೆ. ನಮ್ಮ ಮಾನ್ಯ ಡೈರೆಕ್ಟರರಿಗೋ ಇದು ಸರಿ ಕಾಣುತ್ತಿಲ್ಲ. ಜರ್ಮನ್ ಮಿಶನರಿಗಳು ಧಾರವಾಡ, ಮಂಗಳೂರುಗಳಲ್ಲಿ, ದೊಡ್ಡ ಮಿಶನ್‌ಗಳನ್ನು ಸ್ಥಾಪಿಸಿದ್ದು ಅವರಿಗೆ ಕನ್ನಡ ಬೈಬಲ್ ಮೊದಲಾದುವು ಅಗತ್ಯವಾಗಿ ಬೇಕಾಗಿವೆ. ನಮ್ಮ ಡೈರೆಕ್ಟರ್ ಜನರು, ಇದೇ ಕೆಲಸಕ್ಕೆ ನನ್ನನ್ನು ಪೂರ್ಣವಾಗಿ ಬಿಟ್ಟರೆ ಎಷ್ಟು ಒಳಿತಾಗುವುದು! ಇದು ನಿಜವಾಗಿಯೂ ಮಹತ್ವದ್ದಾಗಿದ್ದು, ನಾನು ಈ ದಿಶೆಯಲ್ಲಿ ತಜ್ಞತೆಯನ್ನೂ ಹೊಂದಿದ್ದೇನೆ."[೯]

ಧರ್ಮಗ್ರಂಥಗಳ ಅನುವಾದ ಕಾರ್ಯವು ಅವನ ಪಾಲಿಗೆ ಕೇವಲ ಮಾಮೂಲಿಯ ಕೆಲಸವಾಗಿರಲಿಲ್ಲ. ಅದನ್ನು ಆರಂಭಿಸುವುದಕ್ಕೆ ಮುಂಚೆ, ಅನುದಿನವೂ ದೇವರಿಗೆ ಪ್ರಾರ್ಥನೆ ಸಲ್ಲಿಸಿ, ಅತ್ಯಂತ ಭಕ್ತಿಭಾವದಿಂದ ಆತ ಆ ಕೆಲಸಕ್ಕೆ ತೊಡಗುತ್ತಿದ್ದನು. ಸ್ವತಃ ತಾನು ೩–೪ ಬಾರಿ ಪರೀಕ್ಷಿಸಿ ಬೈಬಲಿನ ಮೂಲ ಅರ್ಥವು ಸಮರ್ಪಕವಾಗಿ ಕನ್ನಡದಲ್ಲಿ ವ್ಯಕ್ತವಾಗಿದೆಯೆ, ಇಲ್ಲವೆ – ಎನ್ನುವುದರ ಬಗ್ಗೆ ಇತರರಿಗೆ ತೋರಿಸಿ ಅದನ್ನು ಮುದ್ರಣಕ್ಕೆ ಕೊಡುತ್ತಿದ್ದನು. ಅಚ್ಚಿನ ಕರಡುಗಳನ್ನು ತಿದ್ದುವಾಗಲೂ, ಮೂಲದ ಅರ್ಥವು ಕೆಡಲಾಗದೆನ್ನುವ ಶ್ರದ್ಧೆಯಿಂದ ಜಾಗರೂಕತೆಯನ್ನು ವಹಿಸುತ್ತಿದ್ದನು.[೧೦]

'ಇಂಗ್ಲಿಷ್ ಭಾಷೆಯನ್ನು ಕಲಿಯುವುದಕ್ಕೆ ಸಹಾಯವು' — ಎಂಬುದು ರೀಡ್‌ನ ಒಂದು ವಿಶಿಷ್ಟ ಕೃತಿಯಾಗಿದೆ (ಕ್ರಿ.ಶ. ೧೮೩೫). ಇದನ್ನು ಕನ್ನಡ, ತೆಲುಗು ಎರಡೂ ಭಾಷೆಗಳಲ್ಲಿ ಬರೆದಿದ್ದಾನೆ. 'ಇಂಗ್ಲಿಷ್ ದೊರೆಗಳ ಸಂಗಡ ಸಂಪರ್ಕವಿರುವವರಿಗೆ ತಮ್ಮ ಬುದ್ಧಿ ವೃದ್ಧಿಯಾಗುವುದಕ್ಕೋಸ್ಕರ ಇಂಗ್ಲಿಷ್ ವಿದ್ಯೆಗಳನ್ನೂ ಶಾಸ್ತ್ರಗಳನ್ನೂ ಕಲಿಯುವುದಕ್ಕೆ ಯಿಚ್ಛೆಸುವವರಿಗೂ' ಬಹು ಪ್ರಯೋಜನವಾಗಿರುವುದೆಂಬ ಕಾರಣದಿಂದ ತಾನು ಈ ಪುಸ್ತಕವನ್ನು ರಚಿಸಿದುದಾಗಿ ಹೇಳಿದ್ದಾನೆ. ಕಲ್ಕತ್ತೆಯಲ್ಲಿ ಮಿಶನರಿಯಾಗಿದ್ದ Mundy ಎಂಬವನ ಪ್ರಸಿದ್ಧ ಮತಪುಸ್ತಕ Evidences of the Christian Revelation ಎಂಬುದನ್ನು ರೀಡ್ ಕನ್ನಡ, ತೆಲುಗು – ಎರಡೂ ಭಾಷೆಗಳಲ್ಲಿ ಅನುವಾದಿಸಿದ್ದಾನೆ. ಅವನ ದ್ವಿಭಾಷಾ ಸಾಹಿತ್ಯ ಸೇವೆಯು ಹೀಗೆಯೇ ಮುಂದುವರಿಯಿತು.

ಆ ವರುಷ ಎಂದರೆ ಕ್ರಿ.ಶ. ೧೮೪೦ರಲ್ಲಿ ಲಂಡನ್ ಮಿಶನ್ನಿನ ವರಿಷ್ಠ ಕೇಂದ್ರದವರು, ಬೆಂಗಳೂರಿನಲ್ಲಿ ದೇಶೀಯ ಬೋಧಕರಿಗಾಗಿ ತರಬೇತಿ ಕೇಂದ್ರವನ್ನು ತೆರೆಯಬೇಕೆಂದು ನಿರ್ಧರಿಸಿದರು. ಅದಕ್ಕೆ ರೀಡ್‌ನೇ ಸಂಚಾಲಕನಾಗಬೇಕೆಂದು ಅನೌಪಚಾರಿಕ ಮಾತುಕತೆಗಳು ನಡೆದಿದ್ದುವು. ಇತ್ತ ರೀಡ್‌ನಿಗೆ ತಾನು ಬಳ್ಳಾರಿಯಲ್ಲಿ ಕೈಕೊಂಡಿದ್ದ ಅನುವಾದ, ಪರಿಷ್ಕರಣ, ಮುದ್ರಣ ಕಾರ್ಯಗಳೇ ಹೆಚ್ಚು ಮಹತ್ವದವೆನಿಸಿ, ಹಾಗೇನಾದರೂ ಕರೆ ಬಂದುದಾದರೆ ತಾನು ನಿರಾಕರಿಸುವ ವಿಚಾರದಲ್ಲಿದ್ದುದಾಗಿ ಲಂಡನ್ನಿನ ತನ್ನ ಮಿತ್ರರಿಗೆ ಖಾಸಗಿಯಾಗಿ ಪತ್ರ ಬರೆದಿದ್ದನು.[೧೧] ರೀಡ್ ಅದೇ ವರ್ಷ ತೀವ್ರ ಸ್ವರೂಪದ ಕರುಳಿನ ಬೇನೆಯಿಂದ ಬಳಲುತ್ತಿದ್ದನು. ಅವನ ಬಿಡುವಿಲ್ಲದ ಕಾರ್ಯ ಬಾಹುಳ್ಯವು

ಅವನ ದೇಹ ಸ್ಥಿತಿಯನ್ನು ಇನ್ನಷ್ಟು ಉಲ್ಬಣಗೊಳಿಸಿದ್ದಿತು. ರೀಡ್ ಕ್ರಿ.ಶ. ೧೮೪೪ರ ಜನವರಿ ತಿಂಗಳು. ತನ್ನ ೩೫ನೆಯ ವಯಸ್ಸಿನಲ್ಲಿಯೆ ಬಳ್ಳಾರಿಯಲ್ಲಿ ಅಸುವನ್ನು ನೀಗಿದನು. ಕನ್ನಡ ಕ್ರೈಸ್ತ ಸಾಹಿತ್ಯ ನಿರ್ಮಿತಿಯಲ್ಲಿ ವಿಶೇಷ ಕಳಕಳಿಯಿಂದ ಶ್ರಮಿಸುತ್ತಿದ್ದ ಒಂದು ಜೀವ ಕಣ್ಮರೆಯಾಯಿತು.

**ಡಬ್ಲ್ಯೂ ಬೆಯ್ನನ್:** 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' ಈ ಕೃತಿಯ ಮೊತ್ತಮೊದಲಿನ ಅನುವಾದವು (ದೇಶಾಂತ್ರಿಯ ಪ್ರಯಾಣ) ಬಳ್ಳಾರಿಯಲ್ಲಿ ಮುದ್ರಿತವಾಯಿತು. ಅದರಲ್ಲಿ ಅನುವಾದಕನ ಹೆಸರಿಲ್ಲ. ಆದರೆ ಅದನ್ನು ಅನುವಾದಿಸಿದವನು ಬೆಳಗಾಂವಿಯಲ್ಲಿದ್ದ ಬೆಯ್ನನ್‌ನೇ. ಈಸ್ಟ್ ಇಂಡಿಯಾ ಕಂಪೆನಿಯಲ್ಲಿದ್ದ ಕ್ಯಾಥ್‌ಕರ್ಟ್ ಎಂಬವನು ಅದಕ್ಕೆ ತಗಲಿದ ೯೦೦ ರೂಪಾಯಿಗಳ ಮುದ್ರಣ ವೆಚ್ಚವನ್ನು ವಹಿಸಿದನು.[೧೨] ಬೆಯ್ನನ್ನನು In whom shall we trust ಮತ್ತು On the atonement ಮೊದಲಾದ ಕೆಲವು ಅನುವಾದ. ಪ್ರಕಟನೆಗಳನ್ನು ಟೇಲರ್, ರೀವ್ ಇವರೊಡನೆ ಕೈಗೊಂಡಾಗಲೂ ಇದೇ ರೀತಿ ಅಧಿಕಾರಿಗಳ ನೆರವನ್ನು ಪಡೆಯುವಷ್ಟು ಪ್ರಭಾವಶಾಲಿಯಾಗಿದ್ದನು.

ಸುದೀರ್ಘ ಕಾಲ ಬೆಳಗಾಂವಿ ಜಿಲ್ಲೆಯಲ್ಲಿದ್ದ ಬೆಯ್ನನ್ ಕನ್ನಡವನ್ನು ಚೆನ್ನಾಗಿ ಅಭ್ಯಸಿಸಿದ್ದನು; ಜನತೆ ಹಾಗೂ ಸರಕಾರೀ ಅಧಿಕಾರಿಗಳಿಗೆ ಇವನಲ್ಲಿ ವಿಶೇಷ ಗೌರವವಿದ್ದಿತು. ಮುಂಬಯಿ ವಿಶ್ವವಿದ್ಯಾಲಯದ ಆರಂಭದ ವರ್ಷಗಳಲ್ಲಿ ಅವನು ಪರೀಕ್ಷಕನೂ ಆಗಿದ್ದ ಎಂಬುದನ್ನು ಹಿಂದಿನ ಪ್ರಕರಣದಲ್ಲಿ <೩೧> ಉಲ್ಲೇಖಿಸಲಾಗಿದೆ.

**ಕ್ಯಾಂಬೆಲ್:** ಲಂಡನ್ ಮಿಶನ್‌ಗೆ ಸಂಬಂಧಪಟ್ಟ ಕಾಲಿನ್ ಕ್ಯಾಂಬೆಲ್ ಕನ್ನಡ ಶಿಕ್ಷಣ, ಸಾಹಿತ್ಯ ವಿಷಯಗಳಲ್ಲಿ ವಿಶೇಷ ಆಸ್ಥೆಯಿಂದ ದುಡಿದವರು. ಕ್ರಿ.ಶ. ೧೮೩೫ರಂದು ಮೈಸೂರಿನಲ್ಲಿ ತಮ್ಮ ಸಂಸ್ಥೆಯ ವತಿಯಿಂದ ಮಿಶನ್ ಸ್ಥಾಪಿಸಿ, ಪ್ರಾಥಮಿಕ ಶಾಲೆಯೊಂದನ್ನು ಆರಂಭಿಸಿದರು. ಅಲ್ಲಿಯ ಮಕ್ಕಳಿಗೆಂದು 'ಕನ್ನಡ ವ್ಯಾಕರಣ ಸಾರ'ವನ್ನು ರಚಿಸಿದರು. ಈ ವಿಷಯದಲ್ಲಿ ಮೊಟ್ಟಮೊದಲಿನ ಪಠ್ಯಪುಸ್ತಕವಿದು. ಇದರ ಪ್ರತಿಗಳನ್ನೇ ಮುಂಬಯಿಯ ಶಿಕ್ಷಣಾಧಿಕಾರಿ ಜಾಂಭೇಕರರು ತರಿಸಿಕೊಂಡುದು. ಇದರ ೧೨ನೆಯ ಆವೃತ್ತಿಯು ೧೮೯೪ರಲ್ಲಿ ಪ್ರಕಟವಾದುದನ್ನು ಗಮನಿಸಿದರೆ ಇದು ಹಲವು ದಶಕಗಳ ಕಾಲ ಪ್ರಾಥಮಿಕ ಮಟ್ಟದಲ್ಲಿ ಆವಶ್ಯಕವಾದ ಕ್ರಮಿಕ ಪುಸ್ತಕವಾಗಿ ಮುಂದುವರಿಯಿತೆನ್ನಬೇಕು. ಕ್ಯಾಂಬೆಲ್ ೧೮೫೦ರ ಅನಂತರ ಪುನಃ ಬೆಂಗಳೂರಿಗೆ ಬಂದು ಅಲ್ಲಿಯ ಸೆಮಿನರಿಯಲ್ಲಿ ವಿದ್ಯಾರ್ಥಿಗಳಿಗೆ ಕನ್ನಡವನ್ನು ಕಲಿಸುತ್ತಿದ್ದರು. ಕಾಲಿನ್ ಕ್ಯಾಂಬೆಲ್ ಇನ್ನೂ ಹಲವು ಪಠ್ಯಪುಸ್ತಕಗಳನ್ನು ರಚಿಸಿದ್ದಾರೆ.

## ೪.೨೩ ಬಿ. ಎಚ್. ರೈಸ್

ಜಾನ್ ಹ್ಯಾಂಡ್ಸ್ ಲಂಡನ್ನಿನಲ್ಲಿ ಮಾಡಿದ ಒಂದು ಭಾಷಣವನ್ನು ಕೇಳಿ, ಬೆಂಜಮಿನ್

ಹೋಲ್ಪ್ ರೈಸ್ ತಾನೂ ಮಿಶನರಿಯಾಗಬೇಕು, ದಕ್ಷಿಣ ಭಾರತಕ್ಕೆ ಹೋಗಬೇಕು ಎಂದು ಅಪೇಕ್ಷಿಪಟ್ಟರು.

ಬೆಂಜಮಿನ್ ರೈಸ್ ಬುದ್ಧಿವಂತ; ಜೊತೆಗೆ ಭಾವುಕನೂ ಅಹುದು. ಕವಿತ್ವ ರಚನೆ, ಸಂಗೀತಗಳಲ್ಲಿ ಅವರಿಗೆ ವಿಶೇಷ ಆಸಕ್ತಿ. ಧ್ಯೇಯವಾದಿಯಾಗಿದ್ದ ಅವರು ಜೀವನದಲ್ಲಿ ವಿಶೇಷ ಕಾರ್ಯ ಸಾಧಿಸಲೆಂದೇ ಭಾರತಕ್ಕೆ ಬಂದರು. ತನ್ನ ಗುರುವಿಗೆ ಬರೆದ ಪತ್ರವೊಂದರಲ್ಲಿ (ಡಿಸೆಂಬರ್ ೧೮೩೯), ತಾನು ಬಂದ ಏಳು ತಿಂಗಳಲ್ಲಿಯೇ ಕನ್ನಡವನ್ನು ಕಲಿತು ಜನರೊಡನೆ ಪ್ರಶ್ನೋತ್ತರಗಳನ್ನು ನಡೆಸುತ್ತಿದ್ದುದಾಗಿ ತಿಳಿಸುತ್ತ, ಮುಂದಿನ ಎರಡು ಮೂರು ತಿಂಗಳಲ್ಲಿ ಕನ್ನಡದಲ್ಲಿಯೇ ಪ್ರವಚನವನ್ನು ಮಾಡತೊಡಗಿದುದಾಗಿಯೂ ಬರೆದಿದ್ದಾರೆ.[೧೩] ಅನೇಕ ಪ್ರಾರ್ಥನೆಯ ಹಾಡುಗಳನ್ನು ಇಂಗ್ಲಿಷ್ ಧಾಟಿಯಲ್ಲಿ ರಚಿಸಿದರು ಮತ್ತು ಪ್ರಾರ್ಥನೆಯ ಕಾಲಕ್ಕೆ ಹಾರ್ಮೋನಿಯಮ್ ಬಾರಿಸುತ್ತ ಅವನ್ನು ಹಾಡುತ್ತಿದ್ದರು. ಅಲ್ಲದೆ 'ಕನ್ನಡ ಸಂಗೀತಗಳು' ಎಂಬ ಪ್ರಾರ್ಥನಾ ಪುಸ್ತಕದಲ್ಲಿ ರೈಸರ ಸ್ವತಂತ್ರ ಹಾಗೂ ಅನುವಾದಿತ ಕೃತಿಗಳೇ ಹೆಚ್ಚಾಗಿ ಇವೆ.

ಬಿ. ಎಚ್. ರೈಸ್ ಕರ್ನಾಟಕದಲ್ಲಿಯ ಮಿಶನರಿ ಕಾರ್ಯದ ಕುಂದು ಕೊರತೆಗಳನ್ನು ಅರಿತುಕೊಂಡು, ತನ್ನ ಮುಂದಿನ ಗುರಿಯೇನೆಂಬುದರ ಹೊಳಹನ್ನು ಹಾಕಿಕೊಂಡಿದ್ದರು. "Knowledge is power and especially so when based upon the word of God and imbibed in early life" ಎಂಬುದು ಅವರ ಕಾರ್ಯನಿರ್ದೇಶನದ ಸೂತ್ರವಾಗಿದ್ದಿತು.[೧೪] ಕ್ರೈಸ್ತ ಶಿಕ್ಷಣವನ್ನು ಎಳೆಯರಲ್ಲಿ ರೂಢಿಸಿ ಜ್ಞಾನವಂತರನ್ನಾಗಿ ಮಾಡಬೇಕೆನ್ನುವ ಅವರ ವಿಚಾರದಿಂದಾಗಿ, ಶಿಕ್ಷಣ, ಪಠ್ಯಪುಸ್ತಕ ರಚನೆ ಮತ್ತು ಮತೀಯ ಗ್ರಂಥ ನಿರ್ಮಿತಿಗಳು ವಿಶೇಷವಾಗಿ ತೋರಿಬಂದುವು.

ಬೆಂಜಮಿನ್ ರೈಸ್ ಅಧ್ಯಾಪನ ಕಾರ್ಯಕ್ಕೆ ತೊಡಗಿದಾಗ, ಶಾಲೆಗಳಲ್ಲಿ ಕಲಿಸುವುದಕ್ಕೆ 'ದೇವರು ಒಬ್ಬನೇ', 'ದೇವರು ಪವಿತ್ರಾತ್ಮನು' ಮೊದಲಾದ ವಾಕ್ಯಗಳುಳ್ಳ ಬಿಡಿ ಹಾಳೆಗಳಷ್ಟೇ ಮಕ್ಕಳ ವಾಚನಕ್ಕಾಗಿ ಇದ್ದುವಂತೆ.[೧೫] ರೈಸರು ಮೊದಲಿಗೆ ಕನ್ನಡ ವಾಚನ ಪುಸ್ತಕದಿಂದ ಆರಂಭಿಸಿ, ಮೊದಲಿನ ಮೂರು ವರ್ಗಗಳಿಗಾಗಿ ಪುಸ್ತಕಗಳನ್ನು ಹೊರತಂದನು (೧೮೩೯–೧೮೪೧). ಗಣಿತ, ಭೂಗೋಲಗಳ ಪ್ರಾರಂಭಿಕ ಪುಸ್ತಕಗಳೂ ಇವರಿಂದ ರಚಿತವಾದವು (೧೮೪೬–೧೮೪೭). 'ಚಿಕ್ಕವರಿಗೆ ತಕ್ಕ ಪಾಠಗಳು' ಎಂಬುದು ಅವರು ಸಂಪಾದಿಸಿದ ಇನ್ನೊಂದು 'ವಾಚನ ಮಾಲೆ'ಯಾಗಿದೆ. ಇವೆಲ್ಲ ಪಠ್ಯಗಳ ರಚನೆಯಲ್ಲಿ ಅವನು ತಮಿಳು ಭಾಷಾ ಪುಸ್ತಕಗಳ ನೆರವನ್ನು ಹೆಚ್ಚಾಗಿ ಪಡೆದಿದ್ದಾರೆ. ಇವುಗಳ ಮುದ್ರಣ ವೆಚ್ಚ, ವಿತರಣ ಕಾರ್ಯಕ್ಕಾಗಿ ಬೆಂಗಳೂರಿನಲ್ಲಿದ್ದ ಸ್ಕೂಲ್–ಬುಕ್ ಸೊಸೈಟಿಯನ್ನು ಪುನರುಜ್ಜೀವಿಸಲು ಆತ ಪ್ರಯತ್ನಪಟ್ಟರು (೧೮೪೦). ಅಂದಿನಿಂದ ಕೊನೆಯವರೆಗೂ ಆತ ಅದರಲ್ಲಿ ಆಸ್ಥೆ ವಹಿಸಿ ದುಡಿದರು.

ಮತೀಯ ಸಾಹಿತ್ಯ ನಿರ್ಮಿತಿಯಲ್ಲಿ ಬೆಂಜಮಿನ್ ರೈಸ್ ಹೊಸ ದೃಷ್ಟಿಯನ್ನಿಟ್ಟುಕೊಂಡಿದ್ದರು. ಅದುವರೆಗಿನ ಕ್ರೈಸ್ತಮತೀಯ ಕನ್ನಡ ಪುಸ್ತಕಗಳೆಲ್ಲ ಹೆಚ್ಚಾಗಿ ಇಂಗ್ಲಿಷ್‌ನಿಂದ, ಇನ್ನು ಕೆಲವು ತಮಿಳಿನಿಂದ ಅನುವಾದಿತವಾಗಿದ್ದವು. ಇದ್ದಕ್ಕಿದ್ದಂತೆ ಅನುವಾದಿಸಿದ ಆ ಪುಸ್ತಕಗಳ ನಿಜವಾದ ಪ್ರಯೋಜನ ಆಗಿದೆಯೇ? ಎಷ್ಟು ಜನರ ಮನಸ್ಸನ್ನು ಪರಿವರ್ತಿಸಲು ಅವು ಸಮರ್ಥವಾಗಿವೆ? ಎಂಬುದಾಗಿ ಅವುಗಳ ಸಾರ್ಥಕ್ಯವನ್ನು ಪ್ರಶ್ನಿಸಿದವರಲ್ಲಿ ಇವರೇ ಮೊದಲಿಗರೆನ್ನಬಹುದು. ದೇಶ ಭಾಷೆಯಲ್ಲಿಯ ಮತಪುಸ್ತಕಗಳು ದೇಶೀಯರ ವಿಚಾರ ಪ್ರವೃತ್ತಿಗೆ ಅನುಗುಣವಾಗಿರಬೇಕು ಎಂಬುದು ಅವನ ದೃಷ್ಟಿಕೋಣವಾಗಿದ್ದಿತು. ಕ್ರಿ.ಶ. ೧೮೫೮ರಲ್ಲಿ ಅವನು ಇತರ ಪ್ರೊಟೆಸ್ಟಂಟ್ ಮಿಶನರಿಗಳ ಮುಂದೆ ಇರಿಸಿದ ಈ ಕೆಳಗಿನ ವಿಚಾರಗಳು ಅವರ ಪ್ರಗತಿಪರ ಧೋರಣೆಗೆ ನಿದರ್ಶನಗಳಾಗಿವೆ:

"ದೇಶೀಯರಲ್ಲಿ ಜಿಜ್ಞಾಸಾಭಾವ ಬೆಳೆಯುತ್ತಲಿದೆ. ಅದನ್ನು ತಣಿಸುವಂತಹ ಪುಸ್ತಕಗಳನ್ನು ಹೊರಡಿಸಬೇಕು. ಆ ದಿಶೆಯಲ್ಲಿ ದೇಶೀಯ ಮತಪ್ರಸಾರಕರು ಉಪಯುಕ್ತ ಸಾಹಿತ್ಯವನ್ನು ರಚಿಸಬಲ್ಲರಾದ್ದರಿಂದ ಅವರಿಗೆ ಹೆಚ್ಚು ಅವಕಾಶವನ್ನು ಕಲ್ಪಿಸಿಕೊಡಬೇಕು. ವಿಸ್ತಾರವಾದ ಬೈಬಲಿನ ಸಾರವನ್ನೊಳಗೊಂಡ ಮತ್ತು ಅದರ ಸತ್ಯಗಳನ್ನು ನೇರವಾಗಿ ಎತ್ತಿ ತೋರಿಸುವ ಅಧಿಕೃತ ಸಂಕ್ಷಿಪ್ತ ಕೃತಿಯೊಂದು ದೇಶೀಯ ಭಾಷೆಯಲ್ಲಿ ಸಿದ್ಧವಾಗಬೇಕು. ಹಿಂದೂ ಧರ್ಮದೊಂದಿಗೆ ಹೋಲಿಸಿ, ಕ್ರೈಸ್ತ ತತ್ತ್ವಗಳನ್ನು ಪ್ರಕಾಶಿಸಬೇಕು. ಮಹಿಳೆಯರಿಗಾಗಿ ಕ್ರಿಸ್ತೀಯ ಸಾಹಿತ್ಯವು ಇದುವರೆಗೆ ರಚಿತವಾಗಿಲ್ಲ. ಒಂದು ದೇಶ ಭಾಷೆಯಿಂದ ಇನ್ನೊಂದಕ್ಕೆ ಉತ್ತಮ ಕೃತಿಗಳ ಅನುವಾದ ಕಾರ್ಯವು ನಡೆಯಬೇಕಾಗಿದೆ. ಕವಿತೆಯು ದೇಶೀಯರ ನೆಚ್ಚಿನ ಸಾಹಿತ್ಯ ಪ್ರಕಾರವಾಗಿದ್ದು ಅದರ ಮೂಲಕ ನಾವು ಸ್ವಮತ ತತ್ತ್ವಗಳನ್ನು ಹರಡಬಹುದಲ್ಲವೆ? ಅಲ್ಲದೆ ಕ್ರಿಶ್ಚಿಯನ್ ತತ್ತ್ವದ ಪ್ರಸಾರಕ್ಕಾಗಿ, ಸೂಕ್ತವಾದ ಪತ್ರಿಕೆಯನ್ನು ಹೊರಡಿಸಬೇಕು" ಎಂದು ಮುಂತಾಗಿ ದಕ್ಷಿಣ ಭಾರತದ ಎಲ್ಲ ಮಿಶನರಿಗಳಿಗೂ ಅನ್ವಯಿಸುವಂತಹ ಮಾತುಗಳನ್ನು ರೈಸ್ ಹೇಳಿದ್ದಾರೆ.[೧೬]

ಇವುಗಳಲ್ಲಿ ಕೆಲವನ್ನು ರೈಸ್ ಆಗಲೇ ಅನುಷ್ಠಾನದಲ್ಲಿ ತಂದಿದ್ದರು. ಬಳ್ಳಾರಿಯ ಅಚ್ಚುಕೂಟದಿಂದ ಹೊರಬಂದಿದ್ದ ಆಗಿನ ಸಮಗ್ರ ಬೈಬಲ್ ಗಾತ್ರದಲ್ಲಿ ಬಲು ದೊಡ್ಡದಾಗಿದ್ದಿತು. ವಾಚನ ದೃಷ್ಟಿಯಿಂದ ಮುದ್ರಣವು ಸುಖಕರವಾಗಿರಲಿಲ್ಲ. ಜೊತೆಗೆ ಕೊಂಡೊಯ್ಯುವವರಿಗೆ ಅಥವಾ ಗುಟ್ಟಾಗಿ ಓದಬೇಕೆನ್ನುವವರಿಗೆ ಪ್ರಯೋಜನಕಾರಿಯಾಗಿರಲಿಲ್ಲ. ರೈಸರು ತಮ್ಮ ಸಹೋದ್ಯೋಗಿಯಾದ ಸಿವೆಲ್‌ನೊಂದಿಗೆ, ಬೈಬಲಿನ ಒಂದು ನೂರು ಪ್ರಮುಖ ಅಂಶಗಳನ್ನು ಆಯ್ದು ಟಿಪ್ಪಣಿಗಳೊಡನೆ ಪ್ರಕಟಿಸಿದರು (ವೇದ ಸಂಗ್ರಹ, ೧೮೫೫). ಈ ಕೃತಿಯೇ ಮೂಲ ಪ್ರಕಟನೆಗಿಂತ ಹೆಚ್ಚು ಪ್ರಸಾರ ಹೊಂದಿ ಹಲವು ಮುದ್ರಣಗಳನ್ನು ಕಂಡಿತು.

ಕ್ರೈಸ್ತತತ್ತ್ವ ಪ್ರಸಾರದ ದೃಷ್ಟಿಯಿಂದ 'ಅರುಣೋದಯ' ವೆಂಬ ಆಂಗ್ಲ–ಕನ್ನಡ ಸಚಿತ್ರ ಮಾಸಪತ್ರಿಕೆಯನ್ನು ರೈಸ್ ೧೮೬೧ರಿಂದ ಆರೇಳು ವರ್ಷಗಳ ವರೆಗೆ ನಡೆಸಿಕೊಂಡು ಬಂದರು. ಬೋಧಕರ ತರಬೇತಿ ಕೇಂದ್ರದಲ್ಲಿ ಅವರು ಕೊಡುತ್ತಿದ್ದ ಭಾಷಣಗಳನ್ನು ಅದರಲ್ಲಿ ಪ್ರಕಟಿಸಿದಾರೆ. ತಮ್ಮ ಬೋಧನೆಯ ಸರಸ ಶೈಲಿಯಿಂದಾಗಿ ದಕ್ಷಿಣ ಭಾರತದ ಯುರೋಪಿಯನ್ ಸಮಾಜದಲ್ಲಿಯೂ ಅವರು ಮನ್ನಣೆ ಗಳಿಸಿದ್ದರು. ಈ ಬೋಧನೆಗಳು ಆಮೇಲೆ ಕನ್ನಡ, ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಪುಸ್ತಕ ರೂಪವಾಗಿ ಪ್ರಕಟವಾಗಿವೆ (Elements of Church History, Outlines of Bible History, ಇತ್ಯಾದಿ).

ರೈಸ್ ಬೇರೆ ಮಿಶನರಿಗಳ ಕೃತಿಗಳನ್ನು ಪರಿಷ್ಕರಿಸಿ ಪ್ರಕಟಿಸಿದುದೂ ಇದೆ. ಬಾಸೆಲ್ ಮಿಶನ್ನಿನ ವೈಗ್ಲೆ, ಮೊಗ್ಲಿಂಗರ ಬಗ್ಗೆ ಅವರು ಅದರ ಭಾವವನ್ನು ತಳೆದಿದ್ದನು. ಅವರು ಪ್ರತ್ಯೇಕವಾಗಿ ಸಿದ್ಧಗೊಳಿಸಿದ್ದ ಬನ್ಯನ್‌ನ 'ಯಾತ್ರಿಕನ ಸಂಚಾರ'ವನ್ನು ಪರಿಷ್ಕರಿಸಿ, ಬೆಂಗಳೂರು ಬೈಬಲ್ ಸೊಸೈಟಿಯ ವತಿಯಿಂದ ಹೊರತಂದರು. ಕ್ರಿ.ಶ. ೧೮೪೦ರಲ್ಲಿ ಅಸ್ತಿತ್ವದಲ್ಲಿ ಬಂದ ಕನ್ನಡ ಬೈಬಲಿನ ಪರಿಷ್ಕರಣ ಸಮಿತಿಯ ಸದಸ್ಯನಾಗಿ ಬೆಂಜಮಿನ್ ಪ್ರಮುಖ ಪಾತ್ರವನ್ನು ವಹಿಸಿದ್ದರು. ವೈಗ್ಲೆನಿಗೆ ಹಳೆಯ ಒಡಂಬಡಿಕೆಯ ಪುನರ್ಲೇಖನದ ಕೆಲಸವನ್ನು ಒಪ್ಪಿಸಲಾಗಿದ್ದು, ೧೮೫೫ರಲ್ಲಿ ಅವನು ಅಕಸ್ಮಾತ್ತಾಗಿ ತೀರಿಕೊಂಡದ್ದರಿಂದ ಆ ಹೊಣೆಯೆಲ್ಲ ಬೆಂಜಮಿನ್‌ರ ಮೇಲೆ ಬಿದ್ದಿತು. ಕ್ರಿ.ಶ. ೧೮೬೦ರಲ್ಲಿ ಹೊರಬಂದ ಬೈಬಲಿನ ಅಧಿಕೃತ ಆವೃತ್ತಿಯು ಸಿದ್ಧಗೊಳ್ಳುವಲ್ಲಿಯೂ ವಿಶೇಷವಾಗಿ ಪರಿಶ್ರಮಿಸಿದ್ದಾರೆ.

ಈ ಮಧ್ಯೆ ಬೆಂಜಮಿನ್ ರೈಸ್ ಮೂರು ವರ್ಷಗಳ ದೀರ್ಘ ರಜೆ ಪಡೆದು (೧೮೫೩–೫೬) ಇಂಗ್ಲೆಂಡಿಗೆ ಹೋಗಿಬಂದರು. ತನ್ನ ಮಕ್ಕಳ* ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಮಾಡಿ ತಿರುಗಿ ಬಂದ ಮೇಲೆ, ಅವರು ಬೆಂಗಳೂರಿನ ಸಾರ್ವಜನಿಕ ಜೀವನದಲ್ಲಿ ಹೆಚ್ಚಾಗಿ ಬೆರೆತರು. ಕ್ರಿ.ಶ. ೧೮೭೬–೭೭ರ ಬರಗಾಲ ಸಮಯದಲ್ಲಿ ಪರಿಹಾರ ಸಮಿತಿಯ ಸದಸ್ಯರಾಗಿ ಜನತೆಗೆ ಸೇವೆ ಸಲ್ಲಿಸಿದ್ದಾರೆ. ಅವರ ಯೋಗ್ಯತೆ, ಕಾರ್ಯಸಾಧನೆಗಳ ವಿಚಾರದಲ್ಲಿ ಲಂಡನ್ನಿನ ವರಿಷ್ಠ ಸಮಿತಿಯವರು ಗೌರವ ದೃಷ್ಟಿಯನ್ನಿರಿಸಿಕೊಂಡಿದ್ದರು; ಮಿಶನರಿ ಕಾರ್ಯದಿಂದ ನಿವೃತ್ತನಾಗಿ ಲಂಡನ್ನಿಗೆ ಮರಳಿ ಬರಬೇಕೆಂದು ತಾವಾಗಿ ಸೂಚಿಸಿದರು. ಆದರೆ ಕೈಗೊಂಡ ಕೆಲಸಗಳ ಅಪೂರ್ಣತೆಯ ಕಾರಣ ಕೊಟ್ಟು ರೈಸ್ ಇಲ್ಲಿಯೇ ಉಳಿದರು.

---

* ಅವರ ಆರು ಜನ ಗಂಡಸು ಮಕ್ಕಳಲ್ಲಿ ಮೂವರು ಪ್ರಸಿದ್ಧರು. ಕರ್ನಾಟಕ ಶಾಸನ ಪಿತಾಮಹನೆನಿಸಿದ ಬಿ.ಲೂಯಿ ರೈಸ್ ಒಬ್ಬನಾದರೆ, ಇನ್ನೊಬ್ಬನು ಕನ್ನಡ ಸಾಹಿತ್ಯ ಚರಿತ್ರೆಯ ಇಂಗ್ಲಿಷ್ ಲೇಖಕ ಎಡ್ವರ್ಡ್ ಪಿ. ರೈಸ್. ಎಡ್ವರ್ಡನು ಮೈಸೂರು ಸಂಸ್ಥಾನದಲ್ಲಿ ಅನೇಕ ವರ್ಷ ಮಿಶನರಿಯಾಗಿ ಸೇವೆ ಸಲ್ಲಿಸಿದ್ದಾನೆ. ಆತ ತಂದೆಯ ಜೀವನ ಚರಿತ್ರೆಯನ್ನೂ ಬರೆದಿದ್ದಾನೆ. ಇನ್ನೊಬ್ಬ ಮಗನು ಹೆನ್ರಿ ಸ್ಕಾಟಿಶ್ ಮಿಶನ್ ಸಂಸ್ಥೆಯನ್ನು ಸೇರಿ ಉತ್ತಮ ಬೋಧಕನೆಂದು ಹೆಸರು ಪಡೆದಿದ್ದನು. ಬೆಂಜಮಿನ್‌ನ ಪ್ರಥಮ ಪತ್ನಿಯು ಕನ್ನಡವನ್ನು ಚೆನ್ನಾಗಿ ರೂಢಿಸಿಕೊಂಡಿದ್ದು ಗಂಡನ ಕಾರ್ಯಗಳಲ್ಲಿ ಸಂಪೂರ್ಣ ಸಹಭಾಗಿಯಾಗಿದ್ದಳು.

ಮಿಶನರಿ ಕಾರ್ಯದಲ್ಲಿ ದೀರ್ಘಕಾಲೀನ ಸೇವೆಯನ್ನು ಸಲ್ಲಿಸಿದ ಬೆಂಜಮಿನ್ ರೈಸರನ್ನು ಎರಡು ಬಾರಿ ಸಾರ್ವಜನಿಕವಾಗಿ ಸತ್ಕರಿಸಲಾಯಿತು. ಕ್ರಿ.ಶ. ೧೮೭೯ರಲ್ಲಿ ದಕ್ಷಿಣ ಭಾರತದ ಎಲ್ಲ ಪ್ರೊಟೆಸ್ಟಂಟ್ ಮಿಶನರಿಗಳು ಸಭೆ ಸೇರಿದ್ದಾಗ ತಮಗೆಲ್ಲರಿಗೆ ಹಿರಿಯ ಸ್ಥಾನದಲ್ಲಿದ್ದ ಅವರನ್ನು ಬಹಿರಂಗ ಸಭೆಯಲ್ಲಿ ಅಭಿನಂದಿಸಿದರು. ಮುಂದೆ ೧೮೮೭ರ ಜನವರಿಗೆ ಅವರ ಸೇವಾದೀಕ್ಷೆಗೆ ೫೦ ವರ್ಷಗಳು ಸಂದವೆಂಬ ಕಾರಣದಿಂದ ಸುವರ್ಣ ಮಹೋತ್ಸವವನ್ನೂ ಆಚರಿಸಲಾಯಿತು. ಅಭಿನಂದನೆಗಳಿಗೆ ಉತ್ತರ ಕೊಡುತ್ತ, ರೈಸ್ ಅರ್ಧ ಶತಮಾನದ ಹಿಂದಿನ ಮತ್ತು ಅಂದಿನ ಶೈಕ್ಷಣಿಕ ಹಾಗೂ ಸಾಹಿತ್ಯಿಕ ಸ್ಥಿತಿಗತಿಯ ಬಗ್ಗೆ ಹೇಳಿದ ಮಾತುಗಳು ಗಮನಾರ್ಹವಾಗಿವೆ:

"ಆಗ, ಹಿಂದೂಗಳು ತಮ್ಮ ಮಕ್ಕಳನ್ನು ಕ್ರಿಶ್ಚಿಯನ್ ಶಾಲೆಗಳಿಗೆ ಕಳುಹಿಸುವಂತೆ ಅವರ ಮನಮೊಲಿಸುವುದು ಬಹಳ ಕಷ್ಟಕರವಾಗಿದ್ದಿತು. ಈಗ, ಅವರ ಮಕ್ಕಳು ಸಾವಿರಾರು ಸಂಖ್ಯೆಯಲ್ಲಿ ಬರುತ್ತಿದ್ದಾರೆ. ಅಂದು ಉಚಿತವಾಗಿ ಕೊಟ್ಟರೂ ಕ್ರಿಶಿಯನ್ ಪುಸ್ತಕಗಳನ್ನು ಪಡೆಯಲು ಜನ ಹಿಂದೆ ಮುಂದೆ ನೋಡುತ್ತಿದ್ದರು. ಈಗ, ಅವು ಅಸಂಖ್ಯವಾಗಿ ಮಾರಾಟವಾಗುತ್ತಲಿವೆ. ಸ್ತ್ರೀಯರಿಗೆ ಶಿಕ್ಷಣ ಕೊಡುವ ವಿಚಾರವೇ ಆಗ ಹೀನಾಯವೆನಿಸಿದ್ದಿತು. ನಾಲ್ವತ್ತು ವರ್ಷಗಳ ಹಿಂದೆ ಗಂಡು ಮಕ್ಕಳ ಶಿಕ್ಷಣಕ್ಕೆ ಇದ್ದ ಮಹತ್ವಕ್ಕೆ ಮಿಗಿಲಾಗಿ ಇಂದು ಸ್ತ್ರೀಯರ ವಿದ್ಯಾರ್ಜನೆಗೆ ಪ್ರಾಶಸ್ತ್ಯ ಬಂದಿದೆ."[೧೭]

ಬೆಂಜಮಿನ್ ರೈಸ್ ಮರು ತಿಂಗಳಲ್ಲಿಯೇ ಬೆಂಗಳೂರಲ್ಲಿ ಗತಿಸಿದರು. ಅವರ ಮಕ್ಕಳಲ್ಲಿ ಲೂಯಿ ಮತ್ತು ಎಡ್ವರ್ಡ್ ರೈಸರು ಅವರ ಕನ್ನಡ ಕಾರ್ಯವನ್ನು ಮುಂದುವರಿಸಿದರು. ರೈಸ್ ಮನೆತನದ ಸೇವೆಯು ಹೊಸಗನ್ನಡದ ಇತಿಹಾಸದಲ್ಲಿ ಅವಿಸ್ಮರಣೀಯವಾದುದು.

## ೪೩. ವೆಸ್ಲಿಯನ್ ಮೆಥಾಡಿಸ್ಟರು

ವೆಸ್ಲಿಯನ್ ಮಿಶನರಿಗಳು ಶಿಕ್ಷಣ ಹಾಗೂ ಮುದ್ರಣ ರಂಗಗಳಲ್ಲಿ ಕೆಲಸ ಮಾಡಿದಷ್ಟು ಸ್ವಯಂ ಗ್ರಂಥ ರಚನೆಗೆ ಹೆಚ್ಚು ಗಮನ ಕೊಟ್ಟವರಲ್ಲ. ಆದರೂ ಅವರು ಅನುವಾದಿಸಿದ ಇಲ್ಲವೆ ಸಂಪಾದಿಸಿದ ಹಲವಾರು ಕೃತಿಗಳು ಮೇಲ್ಮಟ್ಟದವೆನಿಸಿವೆ; ಅನೇಕ ಆವೃತ್ತಿಗಳನ್ನು ಕಂಡಿವೆ. ಕ್ರಿ.ಶ. ೧೮೩೩ರಿಂದ ೧೯ನೇ ಶತಮಾನದ ಅಂತ್ಯದವರೆಗಿನ ಅವರ ಕಾರ್ಯಾಚರಣೆಯಲ್ಲಿ ನಾಲ್ವರು ವಿದ್ವಾಂಸ ಮಿಶನರಿಗಳು ಕನ್ನಡದಲ್ಲಿ ಪುಸ್ತಕಗಳನ್ನು ಹೊರತಂದಿದ್ದಾರೆ. ಅವರು ಯಾರೆಂದರೆ ಜಾನ್ ಗ್ಯಾರೆಟ್, ಡ್ಯಾನಿಯಲ್ ಸ್ಯಾಂಡರ್ಸನ್, ಜಾನ್ ಸ್ಟೀವೆನ್ಸನ್ ಮತ್ತು ಹೆನ್ರಿ ಹೇಗ್. ಜೊತೆಗೆ ಈ ಮಿಶನ್ನಿನ ದೇಶೀಯ ಸಾಹಿತಿಗಳ ಸಾಧನೆಯನ್ನೂ ನಾವು ಕಾಣುತ್ತೇವೆ.

೪೩೧ ಜಾನ್ ಗ್ಯಾರೆಟ್

ಬೆಂಗಳೂರಲ್ಲಿ ಕನ್ನಡ ಮಿಶನ್ ಆರಂಭವಾದ ಸ್ವಲ್ಪ ಕಾಲದಲ್ಲಿಯೆ ಗ್ಯಾರೆಟ್ ಇಲ್ಲಿಗೆ ಬಂದನು. ವೆಸ್ಲಿಯನ್ ಅಚುಕೂಟದ ಪ್ರಾರಂಭದಿಂದಲೂ ಅವನು ಅದರ 'ಮೆನೇಜರ್' ಎಂದು ಕೆಲಸ ಮಾಡಿದನು. ಆದರೆ ಅವನಿಗೆ ಹೆಚ್ಚು ಪ್ರಿಯವಾದುದು ಶೈಕ್ಷಣಿಕ ಕೆಲಸ. ಬೆಂಗಳೂರು ನಗರದಲ್ಲಿ ವೆಸ್ಲಿಯನ್‌ರಿಂದ ಸ್ಥಾಪಿತವಾದ ಇಂಗ್ಲಿಷ್ ಶಾಲೆಯ ಉತ್ಕರ್ಷಕ್ಕಾಗಿ ಪರಿಶ್ರಮಿಸಿದವರಲ್ಲಿ ಅವನೂ ಒಬ್ಬನು. ಪರಿಣಾಮವಾಗಿ ೧೮೩೨ರ ಸುಮಾರಿಗೆ ಆ ಶಾಲೆಯಲ್ಲಿ ವಿದ್ಯಾರ್ಥಿಗಳ ಸಂಖ್ಯೆಯು ೨೭೬ಕ್ಕೆ ಏರಿತು. ಅಂದಿನ ದಿನಗಳಲ್ಲಿ ಇಷ್ಟು ಹುಡುಗರಿದ್ದುದು ಪ್ರಗತಿಯ ಚಿಹ್ನೆಯೇ ಸೈ. ಆ ವರ್ಷ ಮೈಸೂರು ಸರಕಾರದ ಕಮೀಶನರ್ ಕಬ್ಬನ್ ಶಾಲೆಯನ್ನು ಸಂದರ್ಶಿಸಿದಾಗ, ಇಡೀ ಸಂಸ್ಥಾನದ ಶೈಕ್ಷಣಿಕ ಯೋಜನೆಯನ್ನು ಕುರಿತು ಸೂಚನೆ ಕೊಡಲು ಗ್ಯಾರೆಟ್‌ನನ್ನು ಕೇಳಿಕೊಂಡನಂತೆ.[೧೮] ಗ್ಯಾರೆಟ್ ಸಾದರಪಡಿಸಿದ ಯೋಜನೆಯಿಂದ ಪ್ರೀತನಾಗಿಯೆ ಕಬ್ಬನ್ ಅವನನ್ನು ಶಿಕ್ಷಣಾಧಿಕಾರಿಯೆಂದು ಆಮಂತ್ರಿಸಿರಬೇಕು (೧೮೩೬).

ಗ್ಯಾರೆಟ್‌ನ ಗ್ರಂಥರಚನೆಯು ಪಠ್ಯ ಮತ್ತು ಪ್ರಾಚೀನ ಕೃತಿ ಸಂಪಾದನೆ, ಎಂದು ಎರಡು ದಿಶೆಗಳಲ್ಲಿ ಸಾಗಿ ಬಂದಿತು. ಶಿಕ್ಷಣಾಧಿಕಾರಿಯಾಗುವುದಕ್ಕೆ ಮೊದಲೆ ಆತ ಹಲವು ಪುಸ್ತಕಗಳನ್ನು ಹೊರತಂದಿದ್ದನು. 'ಚಿಕ್ಕವರಿಗೆ ತಕ್ಕಂಥ ಪಾಠಗಳು' ಎಂಬುದು ಅವನ ಕ್ರಮಿಕ ಪುಸ್ತಕ ಮಾಲಿಕೆಯಲ್ಲಿ ಬರುವಂತಹದು. ಇಂಗ್ಲಿಷ್ ಕಲಿಯುವ ಮಕ್ಕಳ ಅಭ್ಯಾಸಕ್ಕೆಂದು ಅವನು ಕೈಗೊಂಡ ಮೊತ್ತಮೊದಲಿನ ಕಾರ್ಯವೆಂದರೆ ಇಂಗ್ಲಿಷ್ ಮತ್ತು ಕನ್ನಡ ಕೋಶಗಳ ಪರಿಷ್ಕರಣ. ಬೆಂಗಳೂರು ಸ್ಕೂಲ್ ಬುಕ್ ಸೊಸೈಟಿಯ ನಿರ್ಣಯದ ಮೇರೆಗೆ ಸಾರ್ವತ್ರಿಕವಾಗಿ ಉಪಯೋಗವಾಗುವಂತಹ ಇಂಗ್ಲಿಷ್–ಕನ್ನಡ ನಿಘಂಟನ್ನು ತಯಾರಿಸಲು ಕೆಲವು ಮಿಶನರಿಗಳು ನಿಯುಕ್ತರಾಗಿದ್ದರು (೧೮೪೦). ಎರಡು ವರ್ಷಗಳಾದರೂ ಕೆಲಸದಲ್ಲಿ ಪ್ರಗತಿಯು ಕಂಡುಬರದಿದ್ದಾಗ ಗ್ಯಾರೆಟ್‌ನು ಇತರರು ಅರ್ಧಕ್ಕೆ ನಿಲ್ಲಿಸಿದ್ದ ಭಾಗವನ್ನೆಲ್ಲ ಪೂರ್ತಿಗೊಳಿಸಿದನು. ಸಾಮಾನ್ಯ ಬಳಕೆಯ ಸುಮಾರು ಹನ್ನೊಂದು ಸಾವಿರ ಇಂಗ್ಲಿಷ್ ಶಬ್ದಗಳಿಗೆ ಚುಟುಕಿನ ಅರ್ಥಗಳನ್ನು ಕೊಡಲಾದ ಈ ಕೋಶದಲ್ಲಿ ರೀವ್‌ನ ದೊಡ್ಡ ಕೋಶದ ಪ್ರಸ್ತಾಪವಿಲ್ಲ.

ಮರುವರ್ಷವೆ ಗ್ಯಾರೆಟ್ 'ಕನ್ನಡ – ಇಂಗ್ಲಿಷ್' ಕೋಶವನ್ನು ಹೊರತಂದನು. ಈ ಕೃತಿಯು ಮಾತ್ರ ರೀವ್‌ನ ನಿಘಂಟನ್ನು ಆಧರಿಸಿದೆ. ಮುಖ್ಯ ವ್ಯತ್ಯಾಸವೆಂದರೆ, ರೀವ್ ಕೋಶವು ಅನೇಕ ಹಳಗನ್ನಡ, ಸಂಸ್ಕೃತ ಶಬ್ದಗಳಿಂದ ನಿಬಿಡವಾಗಿದ್ದುದನ್ನು ಕಂಡು ಗ್ಯಾರೆಟ್ ಪ್ರಚಲಿತವಿರುವ ಕನ್ನಡ ಶಬ್ದಗಳನ್ನಷ್ಟೇ ಆಯ್ದುಕೊಂಡಿದ್ದಾನೆ; ಹೆಚ್ಚಿನವನ್ನು ಸೇರಿಸಿದ್ದಾನೆ. ರೀವ್ ಕೊಟ್ಟಿದ್ದ ರೂಢಿಯ ಹಿಂದುಸ್ತಾನೀ ಶಬ್ದಗಳನ್ನು ಉಳಿಸಿಕೊಂಡನಲ್ಲದೆ ಕೋಶದ ಉಪಯುಕ್ತತೆಯನ್ನು ಹೆಚ್ಚಿಸುವ ದೃಷ್ಟಿಯಿಂದ ಜನಬಳಕೆಯ ಕನ್ನಡ ಶಬ್ದಗಳನ್ನು

ಬರೆದು ಕಳುಹಿಸಲು ಇತರ ಮಿಶನರಿಗಳಿಗೆ ಕೇಳಿಕೊಂಡಿದ್ದನು. ಆದರೆ ಅದಕ್ಕೆ ವಿಶೇಷ ಪುರಸ್ಕಾರ ದೊರೆಯಲಿಲ್ಲವಂತೆ. ಏನಿದ್ದರೂ ಈ ಕೋಶವು ಹದಿನಾರು ಸಾವಿರಕ್ಕೆ ಮೇಲ್ಪಟ್ಟು ಪ್ರಚಲಿತವಾಗಿದ್ದ ಕನ್ನಡ ಶಬ್ದಗಳನ್ನು ಒಳಗೊಂಡು ಹೊಸಗನ್ನಡದ ಜನಪ್ರಿಯ ಕನ್ನಡ–ಇಂಗ್ಲಿಷ್ ಕೋಶವಾಗಿದ್ದಿತು.

ಹಿಂದೆ ಉಲ್ಲೇಖಿಸಲಾದ <೨೧೧> ಬಹುಭಾಷಾ ಆವೃತ್ತಿಯ ಭಗವದ್ಗೀತೆಯು (೧೮೪೬–೪೮) ಗ್ಯಾರೆಟ್‌ನಿಗೆ ಅಖಿಲ ಭಾರತ ಕೀರ್ತಿಯನ್ನು ತಂದಿತು. ಅದರ ಹೊಳಹು ಸಂಪೂರ್ಣವಾಗಿ ಅವನದೇ ಆಗಿದ್ದಿತು. ಭಗವದ್ಗೀತೆಯ ಕುರಿತು ಅದುವರೆಗೆ ಇದ್ದ ಸಾಧನಗಳನ್ನು ಬಳಸಿಕೊಂಡು ಅಭ್ಯಾಸ ಮಾಡುವವರಿಗೆ ಉಪಯುಕ್ತ ಆವೃತ್ತಿಯನ್ನು ಆತ ಹೊರಡಿಸಿದನು. ಇದರಲ್ಲಿ ಭಗವದ್ಗೀತೆಯ ಅನುವಾದ ಕನ್ನಡ, ಇಂಗ್ಲಿಷ್ ಮತ್ತು ಲ್ಯಾಟಿನ್ ಈ ಮೂರು ಭಾಷೆಗಳಲ್ಲಿ ಬಂದಿದೆ. ಕನ್ನಡದ್ದಂತೂ ಅವನೇ ಮಾಡಿಸಿದ್ದಾನೆ. ಇಂಗ್ಲಿಷ್ ಭಾಷಾಂತರ ಸುಪ್ರಸಿದ್ಧ ಚಾರ್ಲ್‌ಸ್ ವಿಲ್ಕಿನ್ಸ್‌ದನ್ನು ಎತ್ತಿಕೊಂಡಿದ್ದಾದರೆ ಲ್ಯಾಟಿನ್ ಅನುವಾದ ಶ್ಲೆಗೆಲ್ ಎಂಬವನದು. ಅನುವಾದ ಮಾತ್ರವಲ್ಲದೆ ಜರ್ಮನ್ ತತ್ತ್ವವೇತ್ತನಾದ ಬ್ಯಾರನ್ ಹಂಬೋಲ್ಟ್‌ನ ಅದರಂತೆ ಗ್ರಿಫಿಥ್ಸ್ ಎಂಬ ಆಂಗ್ಲೇಯನ ವಿಮರ್ಶಾತ್ಮಕ ಪ್ರಬಂಧಗಳಿವೆ. ವಾರನ್ ಹೇಸ್ಟಿಂಗ್ಸ್‌ನ ಮುನ್ನುಡಿಯೂ ಅದಕ್ಕೆ ಸೇರಿ ಒಟ್ಟಿನಲ್ಲಿ ಅದೊಂದು ಅಪೂರ್ವ ಗ್ರಂಥವಾಗಿದೆ. ಮುಂದೆ ೧೮೭೦ರಲ್ಲಿ ಭಗವದ್ಗೀತೆಯ ಕನ್ನಡಾನುವಾದ ಅದಷ್ಟನ್ನೆ ಸಂಸ್ಕೃತ ಮೂಲದೊಡನೆ ಪ್ರಕಟಿಸಲಾಯಿತು. ವಿಶೇಷವೆಂದರೆ ಅದು ಕನ್ನಡ ಆನರ್ಸ್ ಪರೀಕ್ಷೆಗೆ ಪಠ್ಯವಾಗಿದ್ದಿತು. ಈ ಪಠ್ಯದ ಆವೃತ್ತಿಯಿಂದ ತಿಳಿದು ಬಂದ ಹೊಸ ಸಂಗತಿಯೆಂದರೆ ಅದರ ಅನುವಾದಕ ಮುನ್ಶಿ ಶ್ರೀನಿವಾಸಯ್ಯ ಎಂಬುವನು. ಈತ ವೆಸ್ಲಿಯನ್ನರಲ್ಲಿ ಕನ್ನಡ ಶಿಕ್ಷಕನಾಗಿ ಕೆಲಸಕ್ಕಿದ್ದ. (ಇದನ್ನು ನನ್ನ ಗಮನಕ್ಕೆ ತಂದವರು ಶ್ರೀ ಎಸ್.ಜಿ. ರಾಮು).

ಮೈಸೂರು ಸಂಸ್ಥಾನದ ಶಿಕ್ಷಣಾಧಿಕಾರಿಯಾದ ಮೇಲೆ ಗ್ಯಾರೆಟ್‌ನ-ಬರವಣಿಗೆಯು ಹೊಸ ಜಾಡನ್ನು ಹಿಡಿದು ಸಾಗಿತು. ಶಾಲೆಗಳಲ್ಲಿ ಕಲಿಸಲು ಭಾರತ ಹಾಗೂ ಬ್ರಿಟನ್ ಇವುಗಳ ಅಧಿಕೃತವಾದ ಚರಿತ್ರೆಗಳ ಅಗತ್ಯವಿದ್ದಿತು. ಗ್ಯಾರೆಟ್ ಅವನ್ನು ಮೊದಲು ಇಂಗ್ಲಿಷ್‌ನಲ್ಲಿ ರಚಿಸಿದನು. ಅವು ಅನುಕ್ರಮವಾಗಿ ಎಂ. ಡಿ. ಸಿಂಗರಾಚಾರ್ಯ ಮತ್ತು ಎಸ್.ಬಿ. ಕೃಷ್ಣಸ್ವಾಮಿ ಅಯ್ಯಂಗಾರರಿಂದ ಅನುವಾದಗೊಂಡು ಹಲವು ದಶಕಗಳ ವರೆಗೆ ಪಠ್ಯಪುಸ್ತಕಗಳಾಗಿದ್ದವು. ಪಠ್ಯವಾಗಬೇಕೆನ್ನುವ ದೃಷ್ಟಿಯಿಂದಲೇ ಗ್ಯಾರೆಟ್ 'ಪಂಚತಂತ್ರ'ವನ್ನು ತಿಳಿಯಾದ ಗದ್ಯದಲ್ಲಿ ಹೊರತಂದನು (೧೮೬೫). ಮತ್ತು ಬಿ. ರಾಮರಾವ್ ಎಂಬುವನು ಬರೆದ 'ರೇಖಾಗಣಿತ'ವನ್ನು ಸಂಪಾದಿಸಿ ವಿದ್ಯಾಖಾತೆಯ ವತಿಯಿಂದ ಪ್ರಕಟಿಸಿದನು (೧೮೬೬).

ಹತ್ತೊಂಬತ್ತನೆಯ ಶತಮಾನದಲ್ಲಿ ಶಬ್ದಮಣಿದರ್ಪಣವು ಗಣನೀಯ ಸ್ಥಾನವನ್ನು ಗಳಿಸಿದ್ದಿತು. ಕನ್ನಡವನ್ನು ಅಭ್ಯಾಸ ಮಾಡಬೇಕೆನ್ನುವ ಸಕಲರಿಗೂ ಅದು ಅವಶ್ಯವಾದ

ಗ್ರಂಥವೆಂದು ತೋರುತ್ತಿದ್ದಿತು. ಮಿಶನರಿಗಳು ಮತ್ತು ಸರಕಾರೀ ಅಧಿಕಾರಿಗಳು ಅದರ ಪ್ರತಿ ಮಾಡಿಕೊಂಡು ಅಭ್ಯಾಸ ಮಾಡುತ್ತಿದ್ದರು. ಗ್ಯಾರೆಟ್ ಅದರ ಈ ಮಹತ್ವವನ್ನು ಗಮನಿಸಿ ಅದನ್ನು ಪ್ರಕಟಿಸಿದನು (೧೮೬೮).

ಗ್ಯಾರೆಟ್‌ನ ಕೊನೆಯ, ಆದರೆ ವಿಶೇಷ ಮಹತ್ವದ ಗ್ರಂಥವೆಂದರೆ ಅವನ Classical Dictionary of India (ಹಿಂದೂ ನಾಮಕೋಶ). ಇದರಲ್ಲಿ ಭಾರತೀಯ ಪುರಾಣಗಳು, ಧರ್ಮ ಗ್ರಂಥಗಳು, ಕಾವ್ಯಗಳು, ಕಲೆಗಳು, ಆಚಾರ–ವಿಚಾರಗಳು ಇವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಅಕಾರಾದಿಯಾಗಿ ಹೊಂದಿಸಿ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಭಾರತೀಯ ಪರಂಪರೆಗೆ ಸಂಬಂಧಿಸಿದ ವಿಷಯಗಳ ಮೇಲೆ ನಿರ್ದಿಷ್ಟವಾದ ವಿವರವನ್ನು ಕೊಡಲು ಇದರಲ್ಲಿ ಪ್ರಯತ್ನಿಸಲಾಗಿದೆ. ಅವನ ಕನ್ನಡ ಕಾವ್ಯಗಳ ಅಭ್ಯಾಸವು ಇದನ್ನು ಬರೆಯಲು ಪ್ರೇರಣೆಯಿತ್ತಿತೆಂಬುದು ಇಲ್ಲಿ ಮಹತ್ವದ್ದಾಗಿದೆ. ಅಲ್ಲದೆ ಆರಂಭದ ಸಾಮಗ್ರಿಯನ್ನು ಆತ ಹಳಗನ್ನಡ ಕೃತಿಗಳಿಂದಲೇ ಆಯ್ದುಕೊಂಡನು.

ಈ ಕೃತಿಯು ಭಾರತೀಯ ಸಂಸ್ಕೃತಿಯ ಅಭ್ಯಾಸಿಗೆ ಖಚಿತವಾದ ನೆರವನ್ನು ನೀಡುವಂತಾಗಬೇಕೆಂದು ಗ್ಯಾರೆಟ್ ಹಾರೈಸಿದ್ದನು. ಆಗಿನ ಭಾರತೀಯ ವಿಶ್ವವಿದ್ಯಾಲಯಗಳಲ್ಲಿ ಸಂಸ್ಕೃತ ಮತ್ತು ಇತರ ದೇಶ ಭಾಷೆಗಳನ್ನು ಗ್ರೀಕ್ ಲ್ಯಾಟಿನ್‌ಗಳ ಮಟ್ಟದಲ್ಲಿ ಕಲಿಸುತ್ತಲಿದ್ದಾಗ ಹಾಗೆ ಅಧ್ಯಯನ ಮಾಡುವವರಿಗೆ ಇಂಥದೊಂದು ಸಂದರ್ಭ ಗ್ರಂಥವು ಅಗತ್ಯವೆಂಬುದಾಗಿ ಗ್ಯಾರೆಟ್ ಮನಗಂಡಿದ್ದನು. ಇಂದಿನ ಮಾನದಿಂದ ಈ ಕೃತಿಯು ಅಸಮರ್ಪಕವೆನಿಸಿದರೂ ಹಿಂದೆ ಇಂಥ ಕೃತಿಯನ್ನು ಇನ್ನಾರೂ ರಚಿಸಿರಲಿಲ್ಲವಾಗಿ ಗ್ಯಾರೆಟ್‌ನ ಹೆಸರು ಭಾರತೀಯ ಮಟ್ಟದಲ್ಲಿ ನೆಲೆನಿಂತಿತು. ಅರುಣೋದಯ ಕಾಲದಲ್ಲಿ ವಿದೇಶೀಯರು ಭಾರತೀಯರಿಗೆ ಇತ್ತ ಗ್ರಂಥ ಕಾಣಿಕೆಗಳಲ್ಲಿ ಇದು ಒಂದಾಗಿದೆ.

### ೪೬.೨ ಡ್ಯಾನಿಯಲ್ ಸ್ಯಾಂಡರ್ಸನ್

ಕನ್ನಡ ಬೈಬಲಿನ ಅಧಿಕೃತ ಪರಿಷ್ಕರಣ ಸಮಿತಿಯಲ್ಲಿದ್ದ ಸ್ಯಾಂಡರ್ಸನ್ನನು ಸಿ. ಎಸ್. ಹಾಲ್ ವಿರಚಿತ 'Come to Jesus' ಎಂಬ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ಆದರೆ ಅವನ ಜನಪ್ರಿಯ ಕೃತಿಯೆಂದರೆ 'ಕನ್ನಡ ಕಥಾ ಸಂಗ್ರಹ' (೧೮೬೩). ಯುರೋಪಿಯನ್ ಜನರಿಗೆ ಕನ್ನಡ ಭಾಷೆಯ ಪರಿಚಯವನ್ನು ಹಂತ ಹಂತವಾಗಿ ಮಾಡಿಕೊಡುವ ಉದ್ದೇಶದಿಂದ ಸ್ಯಾಂಡರ್ಸನ್ ಒಟ್ಟು ನಾಲ್ಕು ಕಥಾ ಸಂಗ್ರಹಗಳ ಹೊಳಹನ್ನು ಹಾಕಿಕೊಂಡಿದ್ದನು.

೧. ಸುಲಭ ಗದ್ಯದ ಕಥೆಗಳು
೨. ಸುಲಭ ಪದ್ಯದ ಕಥೆಗಳು

೩. ಪ್ರೌಢ ಗದ್ಯ ಬರವಣಿಗೆಯ ಕಥಾಸಂಗ್ರಹ

೪. ಹಳಗನ್ನಡ ಶೈಲಿಯ ಪದ್ಯ ಕಥನಗಳು.

ಮೊದಲನೆಯ ಸಂಪುಟದಲ್ಲಿ ಪಂಚತಂತ್ರ, ಶಿವಪುರಾಣ, ಮಹಾಭಾರತ, ರಾಮಾಯಣ, ದಶಾವತಾರ ಮತ್ತು ಗಾದೆಗಳು — ಇವುಗಳನ್ನು ತಿಳಿಯಾದ ಗದ್ಯದಲ್ಲಿ ಕೊಡಮಾಡಿದೆ. ಅದರ ಮುನ್ನುಡಿಯಲ್ಲಿ, ಅಂದು ಲಭ್ಯವಿದ್ದ ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳ ಬಗ್ಗೆ ಬರೆದ ಕಟು ಮಾತುಗಳು ಇಂತಿವೆ:

"European students of Canarese are baffled and dis- heartened by the bulkiness of native works, the inconvenient form in which they are written, the errors that abound in all, the immense difficulty of procuring copies and the expense of transcription, and disgusted with the revolting obscenity that taints the writing of even the best authors. It may justly be questioned whether there exhists any native work, except a grammar or vocabulary that could be published as a whole, without a violent outrage to common decency."*

ವಿದೇಶೀಯರಿಗೆ ವಾಚನ ಸುಕರವಾದ ಕೃತಿಗಳು ಅವನ ಕಾಲಕ್ಕೆ ದೊರೆಯುತ್ತಿರಲಿಲ್ಲ-ವೆಂಬುದಂತೂ ನಿಜ. ಆದರೆ ಅಶ್ಲೀಲವಲ್ಲದ, ರುಚಿ ಶುದ್ಧಿಯಿರುವ ಕನ್ನಡ ಗ್ರಂಥಗಳೇ ಇಲ್ಲ ಎನ್ನುವ ಮಾತು ಅನುಚಿತವೂ ಮಹತ್ವದ ಕೃತಿಗಳನ್ನು ವಿವರವಾಗಿ ಪರಿಶೀಲಿಸದೆ ದುಡುಕಿನಿಂದ ಹೇಳಿದುದೂ ಆಗಿದೆ. ಹತ್ತೊಂಬತ್ತನೇ ಶತಮಾನದ ಇಂಗ್ಲಿಷ್ ಲೇಖಕರಲ್ಲಿ ಕಂಡುಬಂದ ಕಡು ನೀತಿಮತ್ತೆ (Puritanism) ಮತ್ತು ಮಿಶನರಿ ವೃತ್ತಿ — ಇವುಗಳಿಂದಾಗಿ ಸ್ಯಾಂಡರ್ಸನ್‌ನಲ್ಲಿ ಸೌಂದರ್ಯ ಹಾಗೂ ಶೃಂಗಾರ ದೃಷ್ಟಿಯು ಗೌಣವಾಗಿದ್ದಿತು.

ಅವನ ಪರಿಷ್ಕೃತ 'ಕನ್ನಡ – ಇಂಗ್ಲಿಷ್ ಕೋಶ'ವು ಮಹತ್ವದ ಕೃತಿ (ಮೂಲವು ಗ್ಯಾರೆಟ್‌ನದು). ಕಮೀಶನರ್ ಕಬ್ಬನ್ ಇದರ ೫೦೦ ಪ್ರತಿಗಳನ್ನೂ, ಮುಂಬಯಿ ಸರಕಾರದವರು ೧೦೦ ಪ್ರತಿಗಳನ್ನೂ ಮುಂಗಡವಾಗಿ ಕೊಂಡು ಆರ್ಥಿಕ ನೆರವನ್ನು ಒದಗಿಸಿದರು. ಶಬ್ದಾರ್ಥ ವಿಚಾರದಲ್ಲಿ ಸ್ಯಾಂಡರ್ಸನ್ ಮಾಡಿದ ಸುಧಾರಣೆಗಳೆಂದರೆ— ಸಾವಿರಕ್ಕೆ ಮಿಕ್ಕಿದ ಹೆಚ್ಚಿನ ಶಬ್ದಗಳನ್ನು ಸೇರಿಸಿದುದು; ಇಂಗ್ಲಿಷ್‌ನಲ್ಲಿ ಶಬ್ದದ ಉಚ್ಚಾರವನ್ನು ಕೊಟ್ಟುದು; ಮತ್ತು ಕೆಲವು ಶಬ್ದಗಳ ವ್ಯುತ್ಪತ್ತಿಯನ್ನು ಹೇಳಿದುದು. ಅರ್ಥವನ್ನು ವಿವರಿಸುವಲ್ಲಿಯೂ ಅನೇಕ ವ್ಯತ್ಯಾಸಗಳು ಕಂಡುಬರುತ್ತವೆ. ಅಂತೂ ಇವೆಲ್ಲವುಗಳಿಂದ ಪುಸ್ತಕದ ಉಪಯುಕ್ತತೆ ಹೆಚ್ಚಿತು. ಗಾತ್ರ ಮತ್ತು ಬೆಲೆ ತಗ್ಗಿದುವು; ಶಬ್ದಾರ್ಥವನ್ನು

---

* ಕಿಟೆಲ್‌ನ ಅಭಿಪ್ರಾಯವು ಇದೇ ರೀತಿಯಿದ್ದಿತು. (Essay on Canarese Literature ಪು. ೪೭)

ಕಂಡುಕೊಳ್ಳುವುದು ಸುಲಭವಾಯಿತು. ಈ ಕೃತಿಯನ್ನು ಸಂಗ್ರಹಿಸಿದ ಇನ್ನೊಂದು ಆವೃತ್ತಿಯು ಪ್ರಾಯಶಃ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಹೊರಬಂದಿತು. ವಿದ್ಯಾರ್ಥಿಗಳಿಗಾಗಿ ಸ್ಯಾಂಡರ್ಸನ್‌ನಿಂದ ಸಿದ್ಧವಾದ ಇನ್ನೊಂದು ಕೃತಿಯೆಂದರೆ, ಜೈಮಿನಿಭಾರತ. ಅದರ ಮೊದಲಿನ ಆರು ಸಂಧಿಗಳನ್ನು ಟಿಪ್ಪಣಿ ಹಾಗೂ ಇಂಗ್ಲಿಷ್ ಅನುವಾದದೊಡನೆ ಅವನು ಪ್ರಕಟಿಸಿದ್ದಾನೆ (೧೮೫೨). ಅದೇ ವರ್ಷ ಆರ್.ಜೆ. ಹಾಡ್ಸನ್ ವಿರಚಿತ 'ಕನ್ನಡ ಸಂಭಾಷಣೆ ಸರಣಿ' ಯ ಪುಸ್ತಕವನ್ನು ಸ್ಯಾಂಡರ್ಸನ್ ತಿದ್ದಿ ಹೊರತಂದಿದ್ದಾನೆ.

**೪೩.೩ ಜೆ. ಸ್ಟೀವೆನ್ಸನ್**

ಸ್ಟೀವೆನ್ಸನ್ನನ ಕೃತಿ ರಚನೆಯೂ ಇದೇ ರೀತಿಯಾಗಿದೆ. 'ಸತ್ಯವೇದ ಚರಿತ್ರೆ'ಯ ಪ್ರಶ್ನೋತ್ತರ ರೂಪ, ಭೂಗೋಳದ ಕ್ರಮಿಕ ಪುಸ್ತಕ, ಸೋಮೇಶ್ವರ ಶತಕದ ಸಂಪಾದನೆ — ಇವು ಅವನ ಹೆಸರಿನ ಕೃತಿಗಳಾಗಿವೆ. ಅವನ ಅತ್ಯಂತ ಜನಪ್ರಿಯ ಕೃತಿಯೆಂದರೆ ಕೆಂಪುನಾರಾಯಣನ 'ಮುದ್ರಾಮಂಜೂಷ'ದ ಪರಿಷ್ಕೃತ ಆವೃತ್ತಿ (೧೮೭೩). ವಿಶ್ವವಿದ್ಯಾಲಯದಲ್ಲಿ ಕನ್ನಡವನ್ನು ಕುರಿತೋದುವವರಿಗೆ ಪಠ್ಯಪುಸ್ತಕವಾಗಿ ಸರಕಾರದ ಸೂಚನೆಗನುಸಾರವಾಗಿ ಉಪಯುಕ್ತವಾದ ಕಥನ ಕಾವ್ಯವನ್ನು ಮೂಡಿಸಬೇಕೆಂಬ ದೃಷ್ಟಿಯಿಂದ 'ಹಿತವಲ್ಲದ ಭಾಗಗಳನ್ನು ಬಿಟ್ಟು, ವೈಪರೀತ್ಯಗಳನ್ನು ಕಡಿಮೆ ಮಾಡಿ ಅತಿಯಾಗಿರುವ ವಿವರಗಳನ್ನು ಸಂಕ್ಷೇಪಿಸಿ' ಇದನ್ನು ಮುದ್ರಿಸಿದುದಾಗಿ ಪೀಠಿಕೆಯಲ್ಲಿ ಹೇಳಿದ್ದಾನೆ. ಹಾಗೆ ಸಂಪಾದಿಸುವಾಗ, ವಿದೇಶೀಯರಿಗೆ ಇದರ ವಾಚನದಿಂದ ಪ್ರಯೋಜನ ದೊರೆಯಲೆಂಬುದು ಅವನ ಗಮನದಲ್ಲಿದ್ದಿತು. (ಹೆಚ್ಚಿನ ವಿವರಗಳಿಗೆ ೩೦ನೆಯ ವಿಭಾಗ ನೋಡಿರಿ)

ವೆಸ್ಲಿಯನ್ ಮಿಶನ್ನಿನ ದೇಶೀಯ ಬೋಧಕರಲ್ಲಿ ಕೆಲವರು ಕನ್ನಡದಲ್ಲಿ ಪುಸ್ತಕ ಬರೆದಿದ್ದಾರೆ. ಮೊತ್ತಮೊದಲು ಮತಾಂತರ ಹೊಂದಿದ (೧೮೪೮) ಬೋಧಕನೆಂದರೆ ಅಲೆಕ್ಸಾಂಡರ್ ಎರ್ಘ್ರಾ (ಪೂರ್ವದ ಹೆಸರು — ಕೃಷ್ಣಯ್ಯಂಗಾರ್). ಮೈಸೂರಲ್ಲಿ ಹೆಚ್ಚು ಕಾಲ ವಾಸವಾಗಿದ್ದ ಈತನು 'ಸತ್ಯವೇದ ಗ್ರಂಥ ದೀಪಿಕೆ' ಯನ್ನು ಬರೆದಿದ್ದಾನೆ. ಹೊಸ ಒಡಂಬಡಿಕೆಗೆ ಸಂಬಂಧಿಸಿದ 'ರೋಮ್ಯರ ಪತ್ರಿಕೆ' ಯು ಇವನ ಇನ್ನೊಂದು ಕೃತಿ. ಜೋಸಿಯ ಹಡ್ಸನ್ ೧೮೯೦ರಲ್ಲಿ ತೀರಿಕೊಂಡ ಮೇಲೆ ಅವನ ಚರಿತ್ರೆಯನ್ನು ಬರೆದಿದ್ದಾನೆ.

**೪೩.೪ ಹೆನ್ರಿ ಹೇಗ್**

ಹತ್ತೊಂಬತ್ತನೇ ಶತಮಾನದ ಕಡೆಯ ಮಹತ್ವದ ವೆಸ್ಲಿಯನ್ ಮಿಶನರಿಯೆಂದರೆ

ಹೆನ್ರಿ ಹೇಗ್. 'ವೃತ್ತಾಂತ ಪತ್ರಿಕೆ' ಎಂಬ ಪತ್ರಿಕೆಯನ್ನು ಈತ ಆರಂಭಿಸಿದನು. ಹಿತಮಿತ ಬರವಣಿಗೆಯಿಂದ ವಿವಿಧ ವಿಷಯಗಳಿಂದ ಜನಾದರವನ್ನು ಪಡೆದ ಈ ಪತ್ರಿಕೆಯು ದ್ವಿತೀಯ ಮಹಾಯುದ್ಧ ಕಾಲದ ವರೆಗೂ ಮುಂದುವರಿಯಿತು. ಹೇಗ್ ವಿರಚಿತ ಪುಸ್ತಕಗಳಲ್ಲಿ 'ವೆಸ್ಲಿ ಸಭೆಯ ಸಂಸ್ಕಾರಗಳು', 'ವೆಸ್ಲಿ ಅಯ್ಯನವರ ಚರಿತ್ರೆ' ಇವು ವೆಸ್ಲಿಯನ್ ಮತಕ್ಕೆ ಸಂಬಂಧಿಸಿದವುಗಳು. 'ಕ್ರೈಸ್ತ ಜೀವನ್ಮುಕ್ತಿ ವಿವೇಕ' ಹಾಗೂ 'ಯಾಕೋಬನ ಪತ್ರಿಕೆ' ಇವು ಹೊಸ **ಒಡಂಬಡಿಕೆಯ ರೋಮ್** ಮತ್ತು ಯಾಕೋಬ್ ಪ್ರಕರಣಗಳ ಮೇಲಿನ ವ್ಯಾಖ್ಯಾನಗಳಾಗಿವೆ.

ಕ್ರಿ.ಶ. ೧೮೯೦ರಲ್ಲಿ ರಚಿತವಾದ ಬೈಬಲಿನ ದ್ವಿತೀಯ ಪರಿಷ್ಕರಣ ಸಮಿತಿಯಲ್ಲಿ ಜೆ.ಎ. ವೇನ್ಸ್‌ನೊಂದಿಗೆ ಹೇಗ್ ವೆಸ್ಲಿಯನ್- ಪ್ರತಿನಿಧಿಯಾಗಿ ಇದ್ದನು. ಆಗ ಸಮಿತಿಯ ಅಧ್ಯಕ್ಷನಾಗಿದ್ದ ಇ. ಲೆವಿಸ್ ತೀರಿಕೊಂಡ ಮೇಲೆ (೧೮೯೭) ಹೇಗ್ ಮುಂದಿನ ಆರು ವರ್ಷಗಳ ಕಾಲ ಅದರ ಅಧ್ಯಕ್ಷತೆ ವಹಿಸಿ, ಇಂದು ಪ್ರಚಲಿತವಿರುವ ಕನ್ನಡ ಬೈಬಲಿನ ಸ್ವರೂಪಕ್ಕೆ ಕಾರಣನಾದನು.

ಹೇಗ್– ಇವನ ಇನ್ನೊಂದು ಮಹತ್ವದ ಕೆಲಸವೆಂದರೆ Pice Papers on Indian Reforms – ಈ ಮಾಲಿಕೆಯಲ್ಲಿ ವಿವಿಧ ವಿಷಯಗಳ ಮೇಲೆ ಉಪಯುಕ್ತವಾದ ಚಿಕ್ಕ ಪುಸ್ತಿಕೆಗಳನ್ನು ಪ್ರಕಟಿಸಿದುದು. ಒಂದೆರಡು ಆಣೆ ಬೆಲೆಯ ಇಂಥ ಪುಸ್ತಿಕೆಗಳು ಐವತ್ತಕ್ಕೆ ಮೇಲ್ಪಟ್ಟು ಪ್ರಕಟವಾದುವು. ಮತೀಯ ವಿಷಯಗಳಂತಿರಲಿ, ನಿತ್ಯ ಬದುಕಿಗೆ ಸಂಬಂಧಸಿದ ಹಾಗೂ ಪ್ರಪಂಚ ಪರಿಚಯ ಮಾಡಿಕೊಡುವ ವಿಷಯಗಳ ತಿಳಿಯಾದ ವಿವೇಚನೆಯು – ಈ ಕೃತಿಗಳಲ್ಲಿ ಕಂಡು ಬರುತ್ತದೆ.

## ೪೪ ಬಾಸೆಲ್ ಮಿಶನ್‌ದವರು

ಹೊಸಗನ್ನಡ ಸಾಹಿತ್ಯ ರಂಗದಲ್ಲಿ ಇತರ ಯಾವುದೇ ಮಿಶನರಿ ಸಂಸ್ಥೆಗಳಿಗಿಂತ ಬಾಸೆಲ್ ಮಿಶನ್ನಿನ ಪಾತ್ರವು ಹಿರಿದಾಗಿದೆ. ಗ್ರಂಥರಚನೆಯ ಗುಣ, ಗಾತ್ರಗಳೆರಡರಲ್ಲಿಯೂ ಅದನ್ನು ಮೀರಿಸಿದ ಬೇರೆ ಮಿಶನ್ ಸಂಸ್ಥೆಯಿಲ್ಲ. ಕ್ರಿ.ಶ. ೧೮೩೪ರಿಂದ ಇಪ್ಪತ್ತನೆಯ ಶತಮಾನದ ಆರಂಭದ ವರೆಗೆ ನೂರಕ್ಕೆ ಮೇಲ್ಪಟ್ಟು ಮಿಶನರಿಗಳು ಜರ್ಮನಿಯಿಂದ ಬಂದಿದ್ದಾರೆ. ಅವರಲ್ಲಿ ಎದ್ದು ಕಾಣುವ ಹೆಸರುಗಳೆಂದರೆ, ಹರ್ಮನ್ ಮೊವ್‌ಗ್ಲಿಂಗ್, ಎಚ್.ಜೆ. ವೈಗ್ಲೆ, ಫರ್ಡಿನಾಂಡ್ ಕಿಟೆಲ್, ಜಿ. ವುರ್ತ್ ಮತ್ತು ಎಫ್. ತ್ಸಿಗ್ಲರ್.

### ೪೪೧ ಹರ್ಮನ್ ಮೊವ್‌ಗ್ಲಿಂಗ್

ಕ್ರಿ.ಶ. ೧೮೧೧ರಲ್ಲಿ ಜರ್ಮನಿಯ ಫ್ರಾಕೆನ್‌ಹೈಮ್‌ನಲ್ಲಿ ಜನಿಸಿದ ಹರ್ಮನ್ ಮೊವ್‌ಗ್ಲಿಂಗ್ ಮೂರು ವರ್ಷದವನಿದ್ದಾಗಲೇ ತಾಯಿಯನ್ನು ಕಳೆದುಕೊಂಡನು.

ಆದರೆ ಆಕೆ ಕಲಿಸಿಕೊಟ್ಟಿದ್ದ ಚಿಕ್ಕ ಪ್ರಾರ್ಥನೆಗಳು ಅವನ ಚಿತ್ತಭಿತ್ತಿಯಲ್ಲಿ ಚೆನ್ನಾಗಿ ನೆಲೆಗೊಂಡಿದ್ದುವು. ಪಾದ್ರಿಯಾಗಿದ್ದ ತಂದೆಯು ಅಷ್ಟೇ ಭಾವುಕನು. ಹರ್ಮನ್ನನ ಎಳವರೆಯದಲ್ಲಿ ಕಂಡುಬಂದ ಇನ್ನೊಂದು ಅಂಶವೆಂದರೆ ಅವನ ಭಾಷಾಪ್ರಭುತ್ವ. ಶಾಲೆಯಲ್ಲಿದ್ದಾಗ ಉಪಾಧ್ಯಾಯರು ಒಂದು ಪದ್ಯ ಭಾಗವನ್ನು ಲ್ಯಾಟಿನ್ ಭಾಷೆಗೆ ಪರಿವರ್ತಿಸಲು ವಿದ್ಯಾರ್ಥಿಗಳಿಗೆ ಬರೆದುಕೊಳ್ಳಲೆಂದು ಹೇಳತೊಡಗಿದರು. ಅವರು ಹೇಳುತ್ತಿದ್ದಂತೆಯೇ ಮೊಗ್ಲಿಂಗ್ ಅದನ್ನು ಲ್ಯಾಟಿನ್ ಭಾಷೆಗೆ ಪರಿವರ್ತಿಸಿಬಿಟ್ಟನಂತೆ.[೧೯] ಶಾಲಾಭ್ಯಾಸ ಮುಗಿದ ಮೇಲೆ ಅವನು ಕ್ರಿ.ಶ. ೧೮೨೯ರಲ್ಲಿ ಟ್ಯೂಬಿಂಗೆನ್ ವಿಶ್ವವಿದ್ಯಾಲಯವನ್ನು ಸೇರಿ, ಐದು ವರ್ಷ ವ್ಯಾಸಂಗ ಮಾಡಿದನು.

ತರುಣ ವಯಸ್ಸಿನಲ್ಲಿಯೆ ಅವನಲ್ಲಿ ಮಿಶನರಿ ಪ್ರವೃತ್ತಿಗಳು ವ್ಯಕ್ತವಾದುವು. ಒಂದು ರವಿವಾರದ ಪ್ರವಚನವನ್ನು ಭಾವಪೂರ್ಣವಾಗಿ ನಡೆಸಿದಾಗ, ಅವನ ತಂದೆಯು ಅವನನ್ನು ತಬ್ಬಿಕೊಂಡು ಕಣ್ಣೀರನ್ನೆ ಹರಿಯಿಸಿದನಂತೆ. ನಿಶ್ಚಿತ ಬುದ್ಧಿಮತ್ತೆಯ ಜೊತೆಗೆ, ಮೊಗ್ಲಿಂಗನಲ್ಲಿ ಸೇವಾಧರ್ಮ, ಕಷ್ಟ ಸಹಿಷ್ಣುತೆಗಳೂ ಸೇರಿದ್ದುವು. ಅಲ್ಲದೆ ಸರಳತೆ, ಭಾವನೋದ್ವೇಗಗಳು ದೋಷಗಳೆನಿಸುವಷ್ಟು ಅವನಲ್ಲಿ ಅತಿಯಾಗಿದ್ದುವು. ಮೊಗ್ಲಿಂಗ್ ಬಾಸೆಲ್‌ಗೆ ತಾನಾಗಿ ಹೋಗಿ ಸುವಾರ್ತಿಕನಾಗುವ ಅಪೇಕ್ಷೆಯನ್ನು ತೋರಿದನು. ತನ್ನ ಸಹಪಾಠಿಗಳಿಗೇ ಪಾಠ ಹೇಳುವಷ್ಟು ಮತಿವಂತನಾದ ಅವನನ್ನು ತರಬೇತಿಗೆಂದು ಹೆಚ್ಚು ಕಾಲ ನಿಲ್ಲಿಸಿಕೊಳ್ಳದೇ ಕೇಂದ್ರ ಸಂಸ್ಥೆಯವರು ಅವನನ್ನು ಭಾರತಕ್ಕೆ ಕಳಿಸಿಕೊಟ್ಟರು. ಕ್ರಿ.ಶ. ೧೮೩೬ರ ಕೊನೆಯಲ್ಲಿ ಮೊಗ್ಲಿಂಗ್ ಇನ್ನಿಬ್ಬರು ಜೊತೆಗಾರರೊಡನೆ ಮಂಗಳೂರಿಗೆ ತಲುಪಿದನು. ಮುಂದೆ, ಧಾರವಾಡ, ಹುಬ್ಬಳ್ಳಿಗಳಲ್ಲಿ ಮೊಗ್ಲಿಂಗನೇ ಸುವಾರ್ತಾ ಪ್ರಸಾರವನ್ನು ಕೈಗೊಳ್ಳಬೇಕೆಂದು ನಿರ್ಣಯವಾದ ಪ್ರಕಾರ ೧೮೩೭ರ ಜನೆವರಿಯಲ್ಲಿ ಅವನು ಗೋವಾ ಮಾರ್ಗವಾಗಿ ಧಾರವಾಡದತ್ತ ಹೊರಟನು.

ಬಾಸೆಲ್ ಮಿಶನ್ನಿನ ಸ್ಥಾಪಕನಾದ ಹೆಬಿಕ್, ಮೊಗ್ಲಿಂಗರ ಒಡನಾಟದಲ್ಲಿ 'ಹೃದಯದರ್ಪಣ'ವೆಂಬ ಚಿಕ್ಕ ಕೃತಿಯ ರಚನೆಯಾಯ್ತು. ಯುರೋಪಿಯನ್ ಸೈನಿಕರಿಬ್ಬರು, ಹೆಬಿಕ್‌ನನ್ನು ಇಸ್ಪೀಟು ಆಡಲೆಂದು ಆಮಂತ್ರಿಸಿದರಂತೆ. ಆಗ ಹೆಬಿಕ್ ತನ್ನಲ್ಲಿದ್ದ ಬೇರೆ ಕಾರ್ಡುಗಳನ್ನು ಹೊರತೆಗೆದು ಅದರಲ್ಲಿ ತಾನು ಅಂಟಿಸಿದ್ದ ಹೃದಯದ ವಿವಿಧ ಚಿತ್ರಗಳನ್ನು ಒಂದೊಂದಾಗಿ ತೋರಿಸುತ್ತ ಹೃದಯಗಳಲ್ಲಿ ಪ್ರಕೃತಿ ಸಹಜವಾದದ್ದು, ಹಾಳಾಗಿ ಹೋದದ್ದು, ಪಶ್ಚಾತ್ತಾಪದಿಂದ ಪ್ರೇರಿತವಾದದ್ದು, ದೇವರಿಂದ ರಕ್ಷಿಸಲ್ಪಟ್ಟದ್ದು –ಎಂಬ ವಿವಿಧ ರೂಪಗಳನ್ನು ವಿವರಿಸಿ ಅವರ ಮನಸ್ಸನ್ನು ದೇವರತ್ತ ತಿರುಗಿಸಿದನಂತೆ. ಇದು ಹೆಬಿಕ್‌ನ ಸ್ವಂತ ಕಲ್ಪನೆಯೊ ಅಥವಾ ಇದಕ್ಕೆ ಬೇರೊಂದು ಜರ್ಮನ್ ಮೂಲವಿದೆಯೊ, ತಿಳಿಯದು. ಮೊಗ್ಲಿಂಗ್ ಅವನ ವಿವರಣೆಯನ್ನೆ ಆಧರಿಸಿ 'ಹೃದಯದರ್ಪಣ' ಪುಸ್ತಕವನ್ನು ಸಿದ್ಧಗೊಳಿಸಿದನು. ಇದು ಅನ್ಯ ಭಾಷೆಗಳಲ್ಲಿಯೂ ಅನುವಾದಗೊಂಡ ಮಹತ್ವದ ಕೃತಿಯಾಗಿದೆ.

ನಮ್ಮ ನಾಡಿನೊಳಗೆ ಮೊಗ್ಲಿಂಗ್ ನೆಲಸಿದ್ದ ೨೪ ವರ್ಷಗಳಲ್ಲಿ ಅವರು ಒಂದೆಡೆ ನಿಲ್ಲದೆ ಸುತ್ತಾಡಿದನಾದರೂ ಅವರ ಕಾರ್ಯಸಾಧನೆಯ ದೃಷ್ಟಿಯಿಂದ —

೧೮೩೭ – ೧೮೩೮ ಧಾರವಾಡ.

೧೮೩೯ – ೧೮೫೧ ಮಂಗಳೂರು.

೧೮೫೨ – ೧೮೬೦ ಕೊಡಗು;

ಎಂಬುದಾಗಿ ಕಾಲವಿಭಾಗವನ್ನು ಮಾಡಬಹುದು. ಧರ್ಮಪ್ರಸಾರ, ಶಿಕ್ಷಣ ಮತ್ತು ಸಾಹಿತ್ಯ – ಮೂರೂ ರಂಗಗಳಲ್ಲಿ ಅನುಪಮ ಕಾರ್ಯವನ್ನೆಸಗಿದ ಅವರು ಬಾಸೆಲ್ ಮಿಶನ್ನಿನ ನೇತಾರನಾಗಿದ್ದುದರಲ್ಲಿ ಸಂದೇಹವಿಲ್ಲ.

ಧಾರವಾಡದಿಂದ ಹಿಂತಿರುಗಿ (೧೮೩೮) ಮಂಗಳೂರಿಗೆ ಬಂದು, ದೈವಜ್ಞಾನ ಶಾಲೆಯ (ಬೋಧಕರ ಶಾಲೆ) ಅಧ್ಯಾಪನದಲ್ಲಿ ತೊಡಗಿದಂದಿನಿಂದ ಅವರ ನಿಜವಾದ ಕಾರ್ಯವು ಆರಂಭವಾಯಿತೆನ್ನಬೇಕು.

ಕ್ರಿ.ಶ. ೧೮೪೨ರಲ್ಲಿ, ಮೊಗ್ಲಿಂಗರ ಜೀವನದಲ್ಲಿಯ ಮಹತ್ವದ ಸಾಧನೆ ಎನ್ನಬಹುದಾದ ಘಟನೆಯೊಂದು ನಡೆಯಿತು. ಅದುವೆ ಆನಂದರಾಯ ಕೌಂಡಿಣ್ಯನ ಮತಾಂತರ.* ಬ್ರಾಹ್ಮಣನಾದ ಆನಂದರಾಯನು ಕ್ರೈಸ್ತ ಧರ್ಮವನ್ನು ಸ್ವೀಕರಿಸಿದ ವಿಷಯವು ಆಗಿನ ಕಾಲದಲ್ಲಿ ಕೋಲಾಹಲವನ್ನೆಬ್ಬಿಸಿತು. ಇದೇ ಸಮಯಕ್ಕೆ ಮೊಗ್ಲಿಂಗರ ಪ್ರಭಾವದಿಂದಾಗಿ ಉಚ್ಚ ಜಾತಿಯವರ ಇನ್ನೆರಡು ಮತಾಂತರಗಳು ನಡೆದವು. ಶಾಂತಪ್ಪಯ್ಯನ ಮಗ ಭಗವಂತರಾವ (ಕೌಶಿಕ) ಮತ್ತು ಲಕ್ಷ್ಮಣಪ್ಪನ ಮಗ ಮುಕುಂದರಾವ (ಕೌಶಿಕ) ಎಂಬ ಸಾರಸ್ವತ ಬ್ರಾಹ್ಮಣರು ಕ್ರೈಸ್ತದೀಕ್ಷೆಯನ್ನು ಹೊಂದಿದರು (ಒಬ್ಬನು

---

* 'ಈರಾರು ಪತ್ರಿಕೆ' ಎಂಬ ಮೊಗ್ಲಿಂಗನ ಪುಸ್ತಕದಲ್ಲಿ ಈ ಮತಾಂತರದ ಕಥೆಯನ್ನು ೧೨ ಪತ್ರ-ಉತ್ತರಗಳ ಮೂಲಕ ಹೇಳಿದಂತಿದೆ. ಕೃಷ್ಣಾಪುರದಲ್ಲಿ ವಾಸವಾಗಿದ್ದ ಆನಂದನು ರೆವಿನ್ಯೂ ಕಚೇರಿಯಲ್ಲಿ ಕೆಲಸಕ್ಕಿದ್ದನು. ಇವನ ತಂಗಿಯನ್ನು ರಾಮಚಂದ್ರನೆಂಬ ಬಾಲ್ಯ ಸ್ನೇಹಿತನಿಗೆ ಮದುವೆ ಮಾಡಿ ಕೊಟ್ಟಿದ್ದಿತು. ರಾಮಚಂದ್ರನ ತಂಗಿ ಭಾಗಮ್ಮನನ್ನೇ ಆನಂದರಾಯನು ಮದುವೆಯಾಗಿದ್ದು, ತಾನು ಮಾಡಿದ ಯಾವುದೋ ಪಾಪಕ್ಕಾಗಿ ಅವನು ಕ್ರಿಸ್ತನ ಕ್ಷಮಾಗುಣಗಳನ್ನೆ ನೆನೆದು ಅದನ್ನು ಉಪದೇಶಿಸಿದ್ದ ಮೊಗ್ಲಿಂಗನ ಬಳಿಗೆ ಬಂದುಬಿಟ್ಟನು. ಇತ್ತ ಬಹಳ ದಿನಗಳವರೆಗೂ ಅವನು ಮನೆಗೆ ಬರಲಿಲ್ಲವೆಂದು ಅವನ ತಂದೆ ತಾಯಿ ಮತ್ತು ಹೆಂಡತಿ ಯೋಚನೆಯಲ್ಲಿದ್ದಾಗ ಭಾವಮೈದ ರಾಮಚಂದ್ರನಿಗೆ ಬಂದ ಪತ್ರದಿಂದ ಅವನು ಮತಾಂತರ ಹೊಂದಿದ್ದು ತಿಳಿಯಿತು. ತಾಯಿಯು ಅನ್ನ ನೀರು ಬಿಟ್ಟು ಹಾಸಿಗೆ ಹಿಡಿದಳು. ಹೆಂಡತಿ ಭಾಗಮ್ಮನಂತೂ ಮಂಗಳಸೂತ್ರವನ್ನು ಹರಿದು ಗಂಡನಿಗೆ ಕಳುಹಿಸಿಕೊಟ್ಟಳಂತೆ (ಬ್ರಾಹ್ಮಣ ವೈದಿಕರು ಅವನ ಘಟಶ್ರಾದ್ಧವನ್ನೂ ಮುಗಿಸಿಬಿಟ್ಟರು!) ದೊಡ್ಡಪ್ಪನಾದ ಶಾಂತಯ್ಯನು ಆಸ್ತಿಯ ಆಮಿಷ ತೋರಿಸಿದನು. ಆನಂದರಾಯನು ಇದಾವುದಕ್ಕೂ ಮಣಿಯಲಿಲ್ಲ. ಅವನ ಹೆಂಡತಿ ಆತ್ಮಹತ್ಯೆ ಮಾಡಿಕೊಳ್ಳಲುದ್ಯುಕ್ತಳಾದಾಗ ಮನೆಯ ರೈತ ಕರಪೀರನು ಅವಳನ್ನು ಬದುಕಿಸಿ [illegible] ಆನಂದರಾಯನ ಹತ್ತಿರ ತಂದು ಬಿಡುವಲ್ಲಿಗೆ ಆನಂದ ರಾಮಚಂದ್ರರ ಈ ಪತ್ರೋತ್ತರ ಮುಗಿಯುತ್ತವೆ. ನಡೆದ ಘಟನೆಯೊಂದಕ್ಕೆ ಕಥನ ಸ್ವರೂಪವನ್ನು ಕೊಟ್ಟು ಬರೆಯಲಾದ ಈ ಪುಸ್ತಿಕೆಯು ಆಧುನಿಕ ಕಾದಂಬರಿಗೆ ಸಮೀಪವರ್ತಿಯಾಗಿದೆ ಹಾಗೂ ಕನ್ನಡದ ಮೊತ್ತಮೊದಲಿನ 'ಪತ್ರಸಾಹಿತ್ಯ'ವಾಗಿದೆ.

ಪಾಲ್ ಕೌಶಿಕ, ಇನ್ನೊಬ್ಬನು ಜೇಕಬ್ ಕೌಶಿಕ). ಕೌಶಿಕ ಬಂಧುಗಳೂ ಕೌಂಡಿಣ್ಯನೂ ಬುದ್ಧಿವಂತರಾದ್ದರಿಂದ ಅವರಿಗೆ ದೈವಜ್ಞಾನ ಶಾಲೆಯಲ್ಲಿ ವಿಶೇಷ ಶಿಕ್ಷಣವನ್ನು ಕೊಡಲಾಯಿತು. ಮೂವರೂ ಬಾಸೆಲ್ ಮಿಶನ್ನಿಗೆ ಕೊನೆಯ ವರೆಗೆ ನಿಷ್ಠರಾಗಿ ಉಳಿದು, ಧರ್ಮ ಪ್ರಸಾರ, ಶಿಕ್ಷಣ, ಗ್ರಂಥರಚನೆ — ಈ ಮೂರೂ ಅಂಗಗಳಲ್ಲಿ ಸೇವೆ ಸಲ್ಲಿಸಿದರು.

ಕ್ರಿ.ಶ. ೧೮೫೨ರ ಅನಂತರ ಕೊಡಗು ಮೊಗ್ಲಿಂಗರ ಕಾರ್ಯಕ್ಷೇತ್ರವಾಯಿತು. ಅವರು ಅಲ್ಲಿಗೆ ಬಂದುದು ಒಂದು ಆಕಸ್ಮಿಕ. ತನ್ನ ರೋಗ ನಿವಾರಣೆಗಾಗಿ ಸ್ವದೇಶಕ್ಕೆ ಹೊರಟು ನಿಂತಿದ್ದಾಗ, ಮತಾಂತರದ ಪ್ರಕರಣವೊಂದು ಒದಗಿ ಬಂತು. 'ದೇವರ ಮೇಲೆ ತನ್ನ ಪ್ರಕೃತಿಯ ಭಾರ ಹಾಕಿ' ಇಲ್ಲಿಯೆ ನಿಂತುಬಿಟ್ಟರು; ಕೊಡಗಿನ ವಾಸ್ತವ್ಯದ ಫಲವಾಗಿ, ಅವರ ಜೀವನ, ಪುರಾಣೇತಿಹಾಸ, ಹಬ್ಬ – ಉತ್ಸವಾದಿಗಳು, ಹುತ್ತರಿ ಹಾಡು, ಇವುಗಳನ್ನು ಪರಿಚಯಿಸುವ ಲೇಖನಮಾಲೆಯನ್ನು ಮದ್ರಾಸದ ಇಂಗ್ಲಿಷ್ ಪತ್ರಿಕೆಯೊಂದರಲ್ಲಿ ಪ್ರಕಟಿಸಿದರು. ಅದುವೆ ಮುಂದೆ Coorg Memoires ಪುಸ್ತಕ ರೂಪವಾಗಿ ಹೊರಬಂದಿತು (೧೮೫೫). ಅದರಲ್ಲಿ ವೀರರಾಜೇಂದ್ರನ 'ರಾಜೇಂದ್ರ ನಾಮೆ'ಯ ಬಗ್ಗೆ ವಿವರಗಳನ್ನು ಕೊಡುವ ನಿಮಿತ್ತದಿಂದ ಕೊಡಗಿನ ಸಮಗ್ರ ಇತಿಹಾಸವು ಚಿತ್ರಿತವಾಗಿದೆ. ಕೊಡಗಿನ ಕ್ರಿ. ಶ. ೧೮೦೦–೧೮೩೪ ರ ವರೆಗಿನ ಸಂಧಿಕಾಲದ ಇತಿಹಾಸ ನಿರೂಪಣೆಯಲ್ಲಿ ಮೊಗ್ಲಿಂಗರದೇ ಮೊದಲ ಹೆಜ್ಜೆಯಾಗಿದೆ.

ಮೊಗ್ಲಿಂಗ್ ಕೊಡವರ ಶಿಕ್ಷಣದ ಬಗ್ಗೆ ವಿಶೇಷವಾಗಿ ಪರಿಶ್ರಮಿಸಿದರು. ಸರಕಾರದ ಧನಸಹಾಯ ಒದಗಿ ಬರುವ ಮೊದಲೇ ಅಲ್ಲಿಯ ಏಕಮೇವ ಇಂಗ್ಲಿಷ್ ಶಾಲೆಯನ್ನು ತನ್ನ ಕೈಗೆ ತೆಗೆದುಕೊಂಡು, ನಡೆಯಿಸಿದರು. ಅವರ ಉತ್ಸಾಹ ಎಷ್ಟೆಂದರೆ, ತಾವಾಗಿ ಮದ್ರಾಸದ ವರೆಗೆ ಹೋಗಿ ಕೊಡಗಿನ ಶೈಕ್ಷಣಿಕ ಅಭಿವೃದ್ಧಿಯ ಯೋಜನೆಯನ್ನು ಮಂಜೂರು ಮಾಡಿಸಿಕೊಂಡು ಬಂದರು. ಸರಕಾರವು ಅವರಿಗೆ ೨೫೦ ರೂ.ಗಳ ಮಾಸಿಕ ವೇತನವನ್ನು ಕೊಡುತ್ತಿದ್ದಾಗ, ಬಹು ಪಾಲು ಹಣವು ಕೊಡಗಿನ ಶಾಲೆಗಳಿಗಾಗಿಯೇ ವೆಚ್ಚವಾಗುತ್ತಿದ್ದಿತು.

ಮೊಗ್ಲಿಂಗರ ಯಾವ ಕೆಲಸವನ್ನು ತೆಗೆದುಕೊಂಡರೂ, ಅದು ಕನ್ನಡಕ್ಕೆ ಸಂಬಂಧಪಟ್ಟದ್ದೇ ಆಗಿದ್ದಿತೆನ್ನಬಹುದು. ಎದ್ದು ಕಾಣುವ ಸಂಗತಿಯೆಂದರೆ ಅವರ ಕನ್ನಡ ಭಾಷಾ ಪರಿಣತಿ. ರೀವನ ಕೋಶ, ಕೃಷ್ಣಮಾಚಾರಿಯ ವ್ಯಾಕರಣ — ಇಷ್ಟರ ಮೇಲಿಂದಲೇ ಅವರು ಕನ್ನಡ ಭಾಷೆಯನ್ನು ಆಳವಾಗಿ ಅಭ್ಯಸಿಸಿದರು. ಕನ್ನಡ ವಾಙ್ಮಯವನ್ನು ಇನ್ನೂ ಚೆನ್ನಾಗಿ ವ್ಯಾಸಂಗ ಮಾಡಬೇಕೆನ್ನುವುದು ಸದೈವ ಅವರ ಆಶಯವಾಗಿದ್ದಿತು. ಕ್ರಿ.ಶ.೧೮೫೬ರಲ್ಲಿ ಕೊಡಗಿನಲ್ಲಿದ್ದಾಗ, ಅವರು ತಮ್ಮ ಮಿಶನ್ನಿನ ವಾರ್ಷಿಕ ವರದಿಯಲ್ಲಿ ಕಾಣಿಸಿದ ಈ ಮಾತುಗಳನ್ನು ಗಮನಿಸಬೇಕು:

"ನನ್ನೊಡನೆ ಈ ಕಾಡು ಪ್ರದೇಶದಲ್ಲಿ ಇರುವುದಕ್ಕೆ ಕನ್ನಡ ಮುನ್ಷಿಯೊಬ್ಬನೂ

ಒಪ್ಪುವುದಿಲ್ಲವಾದರೂ ಉತ್ತಮವಾದ ಕನ್ನಡ ಪುಸ್ತಕಗಳನ್ನು ತಯಾರಿಸುವ ಕೆಲಸದಲ್ಲಿ ನಾನು ಮಗ್ನನಾಗಿರುವೆನು."[೨೦]

ಮುಂಬಯಿ ಕರ್ನಾಟಕವನ್ನು 'ಸದರ್ನ ಮರಾಠಾ' ಎಂದು ತಪ್ಪಾಗಿ ತಿಳಿಯುತ್ತಿದ್ದುದನ್ನು ಸರಿಪಡಿಸುವ ಎತ್ತುಗಡೆಯು ೧೯ನೆಯ ಶತಮಾನದ ಕೊನೆಕೊನೆಯಲ್ಲಿ ನಡೆಯಿತಷ್ಟೆ. ಆದರೆ ಮೊಗ್ಲಿಂಗ್ ೧೮೪೮ರ ತಮ್ಮ ಮಿಶನ್ ವರದಿಯಲ್ಲಿ 'ದಕ್ಷಿಣ ಮಹಾರಾಷ್ಟ್ರವೆನ್ನುವ ಪ್ರದೇಶವೆಲ್ಲ ಕನ್ನಡ ನಾಡೇ ಆಗಿದೆ' ಎಂಬುದಾಗಿ ಬರೆದು ಕನ್ನಡದ ವಿಸ್ತಾರವನ್ನು ಎತ್ತಿ ಹೇಳಿದ್ದಾರೆ.

ಮೊಗ್ಲಿಂಗನ ಕೃತಿಗಳಾದ 'ಜಾತಿ ವಿಚಾರಣೆ' (೧೮೪೫), 'ದೇವ ವಿಚಾರಣೆ' (೧೮೫೭) ಎಂಬೆರಡು ಸಣ್ಣ ಪುಸ್ತಕಗಳು ಯಾವುದೇ ಮಿಶನರಿ ಕೃತಿಯ ಭಾಷಾಂತರ-ವಾಗಿರದೆ, ಹೊಸಗನ್ನಡದ ಆದ್ಯ ಪ್ರಬಂಧಗಳಾಗಿವೆಯೆನ್ನಬಹುದು. 'ಯಾತ್ರಿಕನ ಸಂಚಾರ' (ವೈಗ್ಲೆಯೊಡನೆ) 'ಚಿಕ್ಕವನಾದ ಹೆನ್ರಿಯೂ ಅವನ ಬೋಯಿಯೂ' (೧೮೪೯), 'ದೇವವಾಕ್ಯ ವ್ಯಾಖ್ಯಾನ', 'ಬಾಸೆಲ್ ಮಿಶನ್ನಿನ ಸಭಾಕ್ರಮ'—ಇವು ಅವರ ಇತರ ಕೃತಿಗಳು. ಕನ್ನಡ ಪತ್ರಿಕಾ ಪ್ರಪಂಚಕ್ಕೂ ಅವರೇ ಮೊದಲಿಗರು. ಕ್ರಿ.ಶ. ೧೮೪೩–೪೪ರ 'ಮಂಗಳೂರ ಸಮಾಚಾರ', ದ ಸಂಪಾದನೆ–ಪ್ರಕಟನೆ ಅವರದೇ. ಕನ್ನಡದ ಮೂರನೇ ಪತ್ರಿಕೆಯೆನಿಸಿದ 'ಕನ್ನಡ ಸುವಾರ್ತಿಕ'ವನ್ನೂ ಅವರೇ ಸಂಪಾದಿಸಿದರು (೧೮೫೨). ಇದೇ ಕಾಲಕ್ಕೆ 'ರಾಜೇಂದ್ರ ನಾಮೆ'ಯ ಮುದ್ರಣದ ನಿಮಿತ್ತದಿಂದ ನಡೆದ, ಕನ್ನಡ ಲಿಪಿಸುಧಾರಣೆಯ ಯತ್ನವನ್ನು ಈಗಾಗಲೇ ವಿವರಿಸಿದ್ದೇವೆ.

ಜನತೆಯೊಡನೆ ನಿಕಟ ಸಂಪರ್ಕವನ್ನಿಟ್ಟುಕೊಂಡು, ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ಸುತ್ತಾಡುತ್ತಿದ್ದಾಗ ಜನತೆಯ ಬಾಯಲ್ಲಿಯ ಪಡೆನುಡಿಗಳು ಅವರನ್ನು ಆಕರ್ಷಿ-ಸಿದುವು. ಸರಿ, ತಮ್ಮ ಬಿಡುವಿನ ವೇಳೆಯಲ್ಲಿ ಅವನ್ನೆಲ್ಲ ಕಲೆಹಾಕಿದರು. ಕನ್ನಡ ಲೋಕೋಕ್ತಿಗಳ ಸಾಮಾಜಿಕ ಮಹತ್ವವನ್ನು ಅರಿತವರಲ್ಲಿ ಮೊದಲಿಗರಾಗಿ, ಮೂರು ಸಾವಿರದಷ್ಟು ಗಾದೆಗಳನ್ನು ೧೮೪೨ರಷ್ಟು ಹಿಂದೆಯೇ ಪ್ರಕಟಿಸಿದರು. ಇಂದು ಗಾದೆಗಳ ವಿವಿಧ ಸಂಗ್ರಹಗಳು ನಾನಾ ರೀತಿಯಲ್ಲಿ ಹೊರಬರುತ್ತಲಿವೆ. ಆದರೆ ಮೊಗ್ಲಿಂಗನಂತೆ ಜನಪದ-ದಿಂದ ನೇರವಾಗಿ, ಅವುಗಳನ್ನು ಸಂಗ್ರಹಿಸಿದವರು ಎಷ್ಟು ಜನ?

ಶುದ್ಧ ಸಾಹಿತ್ಯಿಕ ದೃಷ್ಟಿಯಿಂದ, ಮೊಗ್ಲಿಂಗ್ ಸಲ್ಲಿಸಿದ ಸೇವೆಯಂತೂ ಅನುಪಮವಾಗಿದೆ. ಅದು ಆರಂಭವಾದುದು 'ಬಿಬ್ಲಿಯಾಥೆಕಾ ಕರ್ನಾಟಿಕಾ'ದ ಮೂಲಕ. ಮದ್ರಾಸ ಪ್ರಾಂತದಲ್ಲಿ ನ್ಯಾಯಧೀಶರಾಗಿದ್ದು ನಿವೃತ್ತನಾಗಿ ಕೇಟೆಯಲ್ಲಿ ವಾಸಿಸುತ್ತಿದ್ದ

* ಬಿ.ಎಲ್. ರೈಸ್ ಆರಂಭಿಸಿದ ನಿಜವಾದ ಬಿಬ್ಲಿಯಾಥೆಕಾ ಕರ್ನಾಟಿಕಾ–ಮಾಲಿಕೆಯು ೧೮೮೪ರಲ್ಲಿ ಮೊದಲಾಯಿತು. ಮೊಗ್ಲಿಂಗ್ ಸಂಪಾದಿಸಿದ ಹಳಗನ್ನಡ ಗ್ರಂಥಗಳ ಮೇಲೆ ಎಲ್ಲಿಯೂ ಬಿಬ್ಲಿಯಾಥೆಕಾ ಕರ್ನಾಟಿಕಾ ಎಂಬ ಶೀರ್ಷಿಕೆ ಇಲ್ಲ. ಆದರೆ ಡಾಕ್ಟರೇಟ್ ಕೊಡುವ ಕಾಲಕ್ಕೆ ಹಾಗೆ ಹೆಸರಿಸಿದ್ದಿದೆ

ಕೆಸಮ್ಮೆಜರ ಸೂಚನೆಯ ಮೇರೆಗೆ ಮೊವ್‌ಗ್ಲಿಂಗ್ ಇದರ ನಾಂದಿಯನ್ನು ಹಾಕಿದರು.* ಕೆಸಮ್ಮೆಜರ್ ಎಂಬುವರ ಹಾಗೂ ಮೊಗ್ಲಿಂಗರ ಈ ಪ್ರಸ್ತಾಪವನ್ನು ರೈಸರು ತಮ್ಮ 'ಮೈಸೂರ್ ಗೆಜೆಟಿಯರ್'ನಲ್ಲಿ ಮಾಡಿದ್ದು ಸಹಜವಾಗಿ ನನ್ನ ಗಮನಕ್ಕೆ ಬಂತು. ಆಶ್ಚರ್ಯವೂ ಆಯಿತು. ಈ ಎಳೆಯನ್ನು ಎತ್ತಿಕೊಂಡು Basel Archivesನಲ್ಲಿ ತಡಕಾಡಿದಾಗ ಅವರಿಬ್ಬರ. ಜುಲೈ ೧೮೪೮ರಿಂದ ಜನವರಿ ೧೮೪೯ರ ವರೆಗಿನ ಪತ್ರವ್ಯವಹಾರವೇ ದೊರಕಿತು. ಶುದ್ಧ ಅಕಡೆಮಿಕ್ ಸ್ವರೂಪದ ಎತ್ತುಗಡೆ ಅಲ್ಲಿದೆ. ವಿವರಗಳಿಗೆ ಅನುಬಂಧ (೩) ನೋಡತಕ್ಕುದು.

ಈ ಮಾಲಿಕೆಯಲ್ಲಿ ಮೊದಲು ಪ್ರಕಟವಾದದ್ದು 'ಜೈಮಿನಿ ಭಾರತ' (೧೮೪೮). ಆದರೆ ಅದರಲ್ಲಿ ಎಲ್ಲ ಸಂಧಿಗಳೂ ಅಡಕವಾಗಿರಲಿಲ್ಲ. ಮರುವರ್ಷ 'ತೊರವೆ ರಾಮಾಯಣ'ವನ್ನು ಎತ್ತಿಕೊಳ್ಳಲಾಯಿತು. ಅದರ ೨೦೪ ಪುಟಗಳನ್ನು (ಅರಣ್ಯ ಕಾಂಡ-೬ ಸಂಧಿಗಳ ವರೆಗೆ) ಮುದ್ರಿಸಿಯೂ ಆಗಿತ್ತು. ಆದರೆ ಮದ್ರಾಸ ಸರಕಾರದ ವಶದಲ್ಲಿದ್ದ ಹಸ್ತಪ್ರತಿಗಳ ಸಂಗ್ರಹವೊಂದು ಬರಲಿದ್ದು ಆ ಮೂಲಕ ಇದನ್ನು ಪರಿಷ್ಕರಿಸಲೆಂದಿಟ್ಟುಕೊಂಡದ್ದರಿಂದ ಇದರ ಮುದ್ರಣವು ಅಷ್ಟಕ್ಕೇ ನಿಂತಿತು. ಕ್ರಿ.ಶ. ೧೮೫೦ರಲ್ಲಿ 'ದಾಸರ ಪದಗಳು' ಎಂಬ ಹಾಡುಗಳ ಸಂಕಲನವು ಹೊರಬಂದಿತು.+ ಕನ್ನಡದಲ್ಲಿ ದಾಸರ ಹಾಡುಗಳ ಸಂಕಲನವು ಪ್ರಥಮತಃ ಅಚ್ಚಾದುದು. ವಿದೇಶೀ ಮಿಶನರಿಗಳಿಂದ. ಜೊತೆಗೆ ಕನಕದಾಸರ 'ಹರಿಭಕ್ತಿಸಾರ'ವನ್ನು ಈ ಮಾಲಿಕೆಯಲ್ಲೇ ಹೊರತರಲಾಯಿತು. ಆ ಮುಂದಿನ ಕೃತಿಗಳೆಂದರೆ 'ಕುಮಾರವ್ಯಾಸ ಭಾರತ', 'ಬಸವ ಪುರಾಣ' ಮತ್ತು 'ಚೆನ್ನಬಸವ ಪುರಾಣ' (೧೮೫೮).* ಕೈಸಮೆಜರ್ ತೀರಿಕೊಂಡಿದ್ದರಿಂದ ೧೮೪೯ರಲ್ಲಿ ಅದು ನಿಂತಿತೆಂಬುದು ಸ್ಪಷ್ಟವಿದೆ. ಮೊವ್‌ಗ್ಲಿಂಗ್‌ನ ಈ ಮಾಲಿಕೆಯ ಸಂಪಾದನ ಪ್ರಕಟನೆಗಳಿಗಾಗಿ ಟ್ಯೂಟಿಂಗೆನ್ ವಿಶ್ವವಿದ್ಯಾಲಯವು ೧೮೫೮ರಲ್ಲಿ ಅವನಿಗೆ ಗೌರವ ಡಾಕ್ಟರೇಟ್ ದಯಪಾಲಿಸಿತು. ಕನ್ನಡದ ಕೆಲಸಕ್ಕಾಗಿ ದೊರೆತ ಮೊತ್ತಮೊದಲ ಡಾಕ್ಟರೇಟ್. ಅದೂ ಒಂದು ವಿದೇಶೀಯ ವಿಶ್ವವಿದ್ಯಾಲಯದಿಂದ!

'ದಾಸರ ಪದಗಳು' ಪುಸ್ತಕದಿಂದ ಆಯ್ದು ಮೊಗ್ಲಿಂಗನು ಪುರಂದರದಾಸ ಹಾಗೂ ಕನಕದಾಸ ಇವರ ೨೪ ಪದ್ಯಗಳನ್ನು ಜರ್ಮನ್ ಭಾಷೆಗೆ ಪದ್ಯರೂಪದಲ್ಲಿಯೆ ಅನುವಾದಿಸಿ. ಪೀಠಿಕೆಯೊಡನೆ. ಜರ್ಮನಿಯ ಪ್ರಾಚ್ಯ ವಿದ್ಯಾ ವಿಷಯಕವಾದ ZDMGಪತ್ರಿಕೆಯಲ್ಲಿ

---

+ ಇದರ ಮೊದಲ ಮುದ್ರಣದಲ್ಲಿ ಇದ್ದದ್ದು ನೂರು ಹಾಡುಗಳೇ. ವರಾಹ ತಿಮ್ಮಪ್ಪನ ಹಾಡುಗಳು ಉತ್ತಮವೆಂದು ಅವಕ್ಕೀಗ ೭೦ ಹಾಡುಗಳನ್ನು ಸೇರಿಸಿ ಮರು-ಬೈಂಡಿಂಗ್ ಮಾಡಲಾಯಿತು. ಲಂಡನ್ನಿನ ಬ್ರಿಟಿಷ್ ಮ್ಯೂಸಿಯಮ್ ಲೈಬ್ರರಿಯಲ್ಲಿ ಈ ನೂರೇ ಹಾಡುಗಳ ಪ್ರತಿಯಿದೆ. ಈಚೆಗೆ (೧೯೯೭) ಶ್ರೀನಿವಾಸ ಕುಲಕರ್ಣಿಯವರು ಇದರ ಮರುಮುದ್ರಣ ಮಾಡಿದ್ದು, ಈ ಕುರಿತ ಸಂಶಯ ವ್ಯಕ್ತಪಡಿಸಿದ್ದಕ್ಕೆ ಇದು ಉತ್ತರ

* ಚೆನ್ನಬಸವ ಪುರಾಣದ ಪ್ರಕಟಣೆಯಲ್ಲಿ ಇನ್ನೊಬ್ಬ ಬಾಸೆಲ್ ಮಿಶನರಿಯಾದ ಜಿ. ವುರ್ತ್‌ನ ಸಹಾಯವಿದ್ದಿತೆಂದು ತೋರುತ್ತದೆ.

ಪ್ರಕಟಿಸಿದ್ದಾನೆ (೧೮೪೪) ವರ್ಷಗಳ ಅನಂತರ, ಜೈಮಿನಿ ಭಾರತದ ಹಲವು ಸರ್ಗಗಳನ್ನೂ ಹೀಗೆಯೇ ಪ್ರಕಟಿಸಿದನು-- ತನ್ನ ಇಳಿಗಾಲದಲ್ಲಿ (೧೮೭೧–೧೮೭೩ರ ZDMG). ಕನ್ನಡ ಕವಿತೆಯ ಮೇಲಣ ನಿಜವಾದ ಪ್ರೇಮಾಸಕ್ತಿಯನ್ನು ಬಿಟ್ಟರೆ ಇದರ ಹಿಂದೆ ಬೇರಾವ ಪ್ರೇರಣೆ ಇದ್ದೀತು! ಕನ್ನಡ ವಾಙ್ಮಯದ ಹಿರಿಮೆಯನ್ನು, ಮೊಗ್ಲಿಂಗ್ ಯುರೋಪಿಯನ್ನರ ಗಮನಕ್ಕೆ ತಂದುಕೊಟ್ಟಿದ್ದಾರೆ.

ಮೊಗ್ಲಿಂಗ್ 'ಬಿಬ್ಲಿಯಾಥೆಕಾ ಕರ್ನಾಟಿಕಾ' ಮಾಲಿಕೆಯನ್ನು ಆರಂಭಿಸಿದುದೇಕೆ? ೧೯ನೆಯ ಶತಮಾನದ ಮಧ್ಯದಲ್ಲಿ ಭಾರತದಲ್ಲಿದ್ದ ಪ್ರೊಟೆಸ್ಟಂಟ್ ಮಿಶನರಿಗಳ ಕಾರ್ಯವೀಕ್ಷಣೆ ಮಾಡಿ, Missions of South India ಗ್ರಂಥವನ್ನು ರಚಿಸಿದ ಮುಲೆನ್ಸ್ ಈ ಯೋಜನೆಯ ಬಗ್ಗೆ ಹೀಗೆ ಬರೆಯುತ್ತಾನೆ:

"Besides Christian publications, the missionaries have been printing for a considerable time numerous selections from the classical Canarese literature. The object of this little library called Bibliotheca Carnatica is to furnish the Missionaries, the catechists and scholars with complete materials for mastering the language and for meeting idolatry, on its own ground."

ಈ ಮಾತು ಒಟ್ಟಿನಲ್ಲಿ ಸರಿಯೇ. ಆದರೆ ಭಾಷೆ–ವಾಙ್ಮಯಗಳ ವಿಚಾರದಲ್ಲಿ ಜನ್ಮಜಾತ ಆಸ್ಥೆಯಿಟ್ಟುಕೊಂಡಿದ್ದ ಮೊಗ್ಲಿಂಗ್‌ರಿಗೆ ಕನ್ನಡದ ಸಂಪರ್ಕ ಬಂದಂತೆಲ್ಲ ಅದರಲ್ಲಿ ಅವರ ಆತ್ಮೀಯತೆಯು ಹೆಚ್ಚುತ್ತ ಹೋಯಿತು.+ ಕನ್ನಡ ಲಿಪಿ ಸುಧಾರಣೆ; ಕನ್ನಡ ಪತ್ರಿಕಾರಥ, ಕನ್ನಡ ಕಾವ್ಯಗಳ ಜರ್ಮನ್ ಭಾಷಾನುವಾದ—ಮೊದಲಾದ ಕೆಲಸಗಳಲ್ಲಿ ಮತ ಪ್ರಸಾರದ ಉದ್ದೇಶವು ಅವನಲ್ಲಿ ಗೌಣವಾಗಿದ್ದಿತೆಂದೇ ಹೇಳಬಹುದು.

ಹರ್ಮನ್ ಮೊಗ್ಲಿಂಗ್ ಕ್ರಿ.ಶ. ೧೮೬೦ರಲ್ಲಿ ಸ್ವದೇಶಕ್ಕೆ (ವುರ್ಟೆಂಬರ್ಗ್) ಹಿಂತಿರುಗಿದರು.* ಅಲ್ಲಿ ಬೇರೆ ಸ್ವಧರ್ಮ ಕಾರ್ಯದಲ್ಲಿ ತೊಡಗಿದ್ದನು. ಕ್ರಿ.ಶ. ೧೮೬೮ರಲ್ಲಿ ಪ್ಯಾಸ್ಟರ್ ಹುದ್ದೆಯಿಂದ ಆತ ನಿವೃತ್ತನಾದರೂ ಕನ್ನಡದ ಕೆಲಸವನ್ನು ನಿಲ್ಲಿಸಲಿಲ್ಲ. ಬೈಬಲ್ ತತ್ತ್ವಜ್ಞಾನಕ್ಕೆ ಸಂಬಂಧಿಸಿದ ವ್ಯಾಖ್ಯಾನವನ್ನು ಅವನು ಪರಿವರ್ತಿಸುತ್ತಲಿದ್ದು ಮಂಗಳೂರಲ್ಲಿ ಅದರ ಮುದ್ರಣವೂ ಮುಂದೆ ಸಾಗಿದ್ದಿತು. ಸುದೀರ್ಘವಾದ ಈ ಗ್ರಂಥವು Proverbs ಪ್ರಕರಣದ ವರೆಗೆ ಮಾತ್ರ ಮುಂದುವರಿದಿದ್ದಾಗ, ಮೊಗ್ಲಿಂಗ್ ತೀರಿಕೊಂಡರು (೧೮೮೧).

---

+ ಇದೇ ಮನೋಭಾವವನ್ನು ನಾವು ಜೆ.ಎಫ್.ಫ್ಲೀಟ್, ಬಿ.ಎಲ್.ರೈಸ್, ಎಫ್.ಕಿಟೆಲ್ ಮತ್ತು [illegible] ಕಾಣುತ್ತೇವೆ.

*ಮೊಗ್ಲಿಂಗ್ ಮರಳಿ ಧಾರವಾಡಕ್ಕೆ ಬಂದು [illegible] ಕೆಲವು ಕಡೆ ಉಕ್ತವಾಗಿದೆ. ಅದಕ್ಕೆ ಆಧಾರವಿಲ್ಲ. [illegible]

ಹೀಗೆ ಮೊವ್‌ಗ್ಲಿಂಗ್ ಹೊಸಗನ್ನಡ ಗದ್ಯ ಹಾಗೂ ಪದ್ಯ ಮಾರ್ಗದ ಹೊಳಹನ್ನು ಹಾಕಿದನು. ಹಳಗನ್ನಡ ಕೃತಿಗಳನ್ನು ಪ್ರಥಮತಃ ಸಂಪಾದಿಸಿದನಲ್ಲದೆ ಕೆಲವನ್ನು ಜರ್ಮನ್ ಭಾಷೆಗೆ ಅನುವಾದಿಸಿದನು. ಲಿಪಿ ಸುಧಾರಣೆಯ ಮಾರ್ಗವನ್ನು ತೋರಿಸಿದನು. ಆದ್ಯ ಪತ್ರಿಕಾಕರ್ತನಾಗಿ ಮೆರೆದನು. ಎಲ್ಲಿಯೊ ಹುಟ್ಟಿ ಆಕಸ್ಮಿಕವಾಗಿ ನಮ್ಮ ನಾಡಿಗೆ ಬಂದು ಓನಾಮದಿಂದ ಹಳಗನ್ನಡ ಕಾವ್ಯದ ವರೆಗೆ ಕನ್ನಡವನ್ನು ಅಭ್ಯಾಸಮಾಡಿ, ಇಂದಿನ ಕನ್ನಡ ಸಾಹಿತ್ಯದ ಅಸ್ತಿವಾರವನ್ನು ಹಾಕಿದ ಆದ್ಯರಲ್ಲಿ ಪ್ರಮುಖನಾದನು.[೨೧]

### ೪.೪.೨ ಗಾಡ್‌ಫ್ರೆ ವೈಗ್ಲೆ

ಮಂಗಳೂರ ಮಿಶನ್ನಿನ ಇದುವರೆಗಿನ ಕಾರ್ಯ ಸಾಧನೆಯಲ್ಲಿ ವೈಗ್ಲೆರಿಗೂ ದೊಡ್ಡ ಪಾಲು ಸಲ್ಲಬೇಕು. ಅವರು ಮೊವ್‌ಗ್ಲಿಂಗನಿಂತಲೂ ಮಿಗಿಲಾಗಿ ಸೂಕ್ಷ್ಮದರ್ಶಿಯೂ ಸಾರಾಸಾರ ವಿವೇಚನೆಯುಳ್ಳವರೂ ಆಗಿದ್ದರು. ಭಾರತೀಯ ತತ್ತ್ವಜ್ಞಾನ ಮತ್ತು ಕನ್ನಡ ಭಾಷಾ ಪರಿಣತಿಯಲ್ಲಿ ಇವರಿಗೆ ಸಮಾನರಾದವರು ಆ ಕಾಲಾವಧಿಯಲ್ಲಿ ಲಂಡನ್, ವೆಸ್ಲಿಯನ್ ಮಿಶನ್‌ಗಳಲ್ಲಿಯೂ ಇರಲಿಲ್ಲವೆನ್ನಬಹುದು. ಗ್ಯಾರೆಟ್, ಮೊವ್‌ಗ್ಲಿಂಗ್, ಸ್ಯಾಂಡರ್ಸನ್ ಪ್ರಭೃತಿಗಳಿಗಿಂತ ಆಮೇಲೆ ಬಂದವರಾದರೂ (೧೮೪೦) ಬಲು ಬೇಗ ಪೌರ್ವಾತ್ಯ ಶಾಸ್ತ್ರ, ವಾಙ್ಮಯಗಳನ್ನು ಆಳವಾಗಿ ಅಭ್ಯಸಿಸಿದನು. ಗ್ಯಾರೆಟ್‌ನ ಭಗ-ವದ್ಗೀತೆಯ ಸಂಪಾದನ ಕಾರ್ಯದಲ್ಲಿ (೧೮೪೬–೪೮) ವೈಗಲ್ ಸಲಹೆಯಿತ್ತುದಲ್ಲದೆ ಗೀತೆಯ ಶ್ಲೋಕಗಳ ಅನುವಾದದಲ್ಲಿಯೂ ನೆರವಾದರು. ಹಾಗೆ ಅನುವಾದಿಸಿದ ಭಾಗಗಳು ತಡವಾಗಿ ತನ್ನ ಕೈ ಸೇರಿದುದರಿಂದ ಅದನ್ನು ಸೇರಿಸಿಕೊಳ್ಳಲಾಗದಿದ್ದುದಕ್ಕೆ ಗ್ಯಾರೆಟ್ ವಿಷಾದಿಸಿ ಅವುಗಳಲ್ಲಿ ಕೆಲವನ್ನು ಅನುಬಂಧದಲ್ಲಿ ಕೊಟ್ಟಿದ್ದಾನೆ.

ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿದ್ದ ಬ್ಯಾರನ್ ಹಂಬೋಲ್ಟ್ ಎಂಬ ಯುರೋಪಿಯನ್ ತತ್ತ್ವವೇತ್ತನು ಭಗವದ್ಗೀತೆಯ ಕುರಿತು ಪ್ರೌಢವಾದ ಉಪನ್ಯಾಸವನ್ನು ಬರೆದಿದ್ದಾನೆ. ಅದನ್ನು ವೈಗ್ಲೆ ಇಂಗ್ಲಿಷ್‌ಗೆ ಅನುವಾದಿಸಿ ಅನುಬಂಧವಾಗಿ ಸೇರಿಸಲು ಗ್ಯಾರೆಟ್‌ನಿಗೆ ಕಳುಹಿಸಿಕೊಟ್ಟರು. ವೈಗ್ಲೆ ಆ ಪ್ರಬಂಧದ ಭಾಷಾಂತರದ ಮಟ್ಟಿಗೆ ತೃಪ್ತನಾಗದೇ ಪೂರಕ ವಿಷಯಗಳನ್ನು ಅದರಲ್ಲಿ ಸೇರಿಸಿದರು. "this interpretation of the learned Baron is very doubtful"— ಎಂದು ಅಭಿಪ್ರಾಯಪಡುವಷ್ಟು ವೈಗ್ಲೆಯವರ ಆರ್ಷೇಯ ವ್ಯಾಸಂಗವು ಪ್ರಬುದ್ಧವಾಗಿದ್ದಿತು.

ಇದೇ ಸುಮಾರಿಗೆ ವೈಗ್ಲೆ ಕನ್ನಡಕ್ಕಾಗಿ ಮಾಡಿದ ಒಂದು ಮಹತ್ವಪೂರ್ಣ ಕೆಲಸವೆಂದರೆ ZDMG ಪತ್ರಿಕೆಯಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಕುರಿತು ಸವಿವರ ಲೇಖವನ್ನು ಬರೆದುದು (೧೮೪೬ರಲ್ಲಿ). ಪ್ರಕಟಣೆ: ಸಂಪುಟ ೨. ೨೫೭–೨೮೪, ೧೮೪೮). ಕನ್ನಡ ಭಾಷೆ ಯಾವ ವರ್ಗಕ್ಕೆ ಸೇರಿದುದೆಂಬ ವಿವೇಚನೆ ಮಾಡಿದ ಮೇಲೆ

ಅದರ ವ್ಯಾಕರಣ ವಿಷಯಗಳನ್ನು ಸಂಸ್ಕೃತ, ಪ್ರಾಕೃತ ಮತ್ತು ದ್ರಾವಿಡ ಭಾಷೆಗಳೊಡನೆ ಹೋಲಿಸುತ್ತಾ ವಿವರಣೆ ಕೊಟ್ಟಿದ್ದಾರೆ. ಕನ್ನಡ ಸಾಹಿತ್ಯವು ವಿಶಾಲವೂ ಪ್ರೌಢವೂ ಆಗಿದ್ದು ಮಿಶನರಿಗಳಿಗೆ ತಮ್ಮ ಪ್ರಚಾರ ಕಾರ್ಯಾವಸರದಲ್ಲಿ ಅದನ್ನು ಅಭ್ಯಾಸ ಮಾಡಲು ವೇಳೆ ಸಿಗುತ್ತಿಲ್ಲವೆಂಬ ಕಾರಣದಿಂದ ಅದರ ಸಾಹಿತ್ಯ ಚರಿತ್ರೆಯನ್ನು ತಾನು ಕೊಡುತ್ತಿರುವುದಾಗಿ ಆ ಲೇಖದಲ್ಲಿ ಹೇಳಿಕೊಂಡಿದ್ದಾರೆ. ಮುಂದೆ ಹಲವಾರು ಕವಿ, ಕೃತಿಗಳ ಉಲ್ಲೇಖ ಮಾಡಿದ್ದಾರೆ. ಕ್ರಿ.ಶ. ೧೮೭೫ರಲ್ಲಿ ಕಿಟೆಲ್ ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಧಿಕೃತವಾಗಿ ಬರೆದದ್ದಕ್ಕಿಂತ ಮೂವತ್ತು ವರ್ಷಗಳಷ್ಟು ಹಿಂದೆಯೇ ವೈಗ್ಲೆ ಆ ಕುರಿತು ಆಸ್ಥೆಯನ್ನು ತೋರಿದುದನ್ನು ಗಮನಿಸಬೇಕು.

ವೈಗ್ಲೆ ಮಾಡಿದ ಇನ್ನೊಂದು ಸಾಹಿತ್ಯಿಕ ಕಾರ್ಯವೆಂದರೆ ಬನ್ಯನ್‌ನ Pilgrims Progressದ ಮೊದಲ ಭಾಗದ ಅನುವಾದ (ಯಾತ್ರಿಕನ ಸಂಚಾರ). ಬಳ್ಳಾರಿ ಮಿಶನ್ನಿ-ನವರ ಅನುವಾದವು ಅಸಮರ್ಪಕವಾಗಿರುವುದನ್ನು ಕಂಡು ವೈಗಲ್ ಅದನ್ನು ಬೇರೆ-ಯಾಗಿಯೇ ಕೈಗೆತ್ತಿಕೊಂಡರೆಂದು ಕಾಣುತ್ತದೆ. ವೈಗ್ಲೆ ಕವಿಯೂ ಅಹುದು. ಪ್ರವಚನಕ್ಕೆ ಬೇಕಾಗುವ ಕ್ರೈಸ್ತ ಗೀತೆಗಳನ್ನು ಅನುವಾದಿಸಿದ ಆರಂಭಕಾರರಲ್ಲಿ ಅವರೂ ಒಬ್ಬರು.

ಮದ್ರಾಸ ಸಹಾಯಕ ಬೈಬಲ್ ಸಂಘವು ೧೮೪೪ರಲ್ಲಿ ಕರ್ನಾಟಕದ ಎಲ್ಲ ಪ್ರೊಟೆಸ್ಟಂಟ್ ಮಿಶನ್ ಸಂಸ್ಥೆಗಳ ಪ್ರತಿನಿಧಿಗಳಿರುವ ಒಂದು ಸಮಿತಿಯನ್ನು ರಚಿಸಿ, ಆಗಿನ ಬೈಬಲ್ ಆವೃತ್ತಿಯ ಪರಿಷ್ಕರಣದ ಕೆಲಸವನ್ನು ಒಪ್ಪಿಸಿತು. ಈ ಸಮಿತಿಗೆ ವೈಗ್ಲೆಯರೇ ಮುಖ್ಯಸ್ಥರಿದ್ದರೆಂಬುದು ಅವರ ಭಾಷಾಂತರದ ಕ್ರತುಶಕ್ತಿಗೆ ನಿದರ್ಶನ-ವಾಗಿದೆ. ವೈಗ್ಲೆ ಮೊದಲಿಗೆ ಹೊಸ ಒಡಂಬಡಿಕೆಯನ್ನು ಪರಿಷ್ಕರಿಸಿಕೊಟ್ಟರು. ಆ ಕೆಲ-ಸವು ಅತ್ಯಂತ ಸಮರ್ಪಕವಾದುದನ್ನು ಗಮನಿಸಿ, ಮದ್ರಾಸ ಸಂಘದವರು ಹಳೆಯ ಒಡಂಬಡಿಕೆಯ ತಿದ್ದುಗೆಯನ್ನು ಅವರಿಗೇ ಒಪ್ಪಿಸಿದರು. ಕ್ರಿ. ಶ. ೧೮೫೪ರಲ್ಲಿ ಪ್ರಕಟ-ವಾದ ಹೊಸ ಒಡಂಬಡಿಕೆಯ ಆವೃತ್ತಿಯು ವೈಗ್ಲೆ ಕೈವಾಡದ್ದೇ ಆಗಿದೆ. ಹಳೆ ಒಡಂ-ಬಡಿಕೆಯ ತಿದ್ದುಗೆ ಮುಗಿಯುತ್ತ ಬಂದಾಗ ವೈಗ್ಲೆ ಅಕಸ್ಮಾತ್ ತೀರಿಕೊಂಡರು (೧೮೫೫).

ಮೊವ್‌ಗ್ಲಿಂಗರಿಗೆ ಹೋಲಿಸಿ, ವೈಗ್ಲೆ ಬಗ್ಗೆ ಇನ್ನೂ ಒಂದೆರಡು ಅಂಶಗಳನ್ನು ಹೇಳಬಹುದಾಗಿದೆ. ಇಬ್ಬರೂ ಕೂಡಿಯೇ ಮಂಗಳೂರಲ್ಲಿ ಕೆಲಸ ಮಾಡುತ್ತಿದ್ದರು. ಆತ್ಮೀಯ ಸ್ನೇಹಿತರು. ಜ್ಞಾತಿ ಬಂಧುಗಳೂ ಕೂಡ. ಮೊವ್‌ಗ್ಲಿಂಗರಿಗಿಂತ ವೈಗ್ಲೆ ಹೆಚ್ಚು ಕುಶಾಗ್ರಬುದ್ಧಿಯವರು. ಅವರ ಮರಣಾನಂತರ ಮೊವ್‌ಗ್ಲಿಂಗರೇ ಹೇಳಿದಂತೆ, ಆಹಾರವನ್ನು ಬಾಯಿಯಲ್ಲಿ ಹಾಕಿಕೊಂಡಾದ ಮೇಲೆ, ಅದು ಕರಗಿದ ಮೇಲೆ ಹೇಗೆ ನಮ್ಮದೇ ಆಗುವುದೊ ಹಾಗೆಯೇ ವೈಗ್ಲೆಯವರ ವಿಷಯಗ್ರಹಣ ಇತ್ತಂತೆ. ಆದರೆ ವೈಗ್ಲೆ ಅತ್ಯಂತ ಸಂಕೋಚ ಪ್ರವೃತ್ತಿಯವರು. ಅತೀವ ಹೆಂಗರುಳಿನವರು. ಅವರು ಅಕಾಲ ಮರಣಕ್ಕೆ ತುತ್ತಾದಾಗ, ಹೆಂಡತಿ ಪಾಲಿನಾಳನ್ನು ಬ್ರಹ್ಮಚಾರಿ ಮೊವ್‌ಗ್ಲಿಂಗ್ ಮದುವೆಯಾದುದಲ್ಲದೆ

ಮಿತ್ರನ ನಾಲ್ಕು ಎಳೆಯ ಮಕ್ಕಳ ಯೋಗಕ್ಷೇಮವನ್ನೂ ನೋಡಿಕೊಂಡರು. ವೈಗ್ಲೆಯ ಅಕಾಲ ಮರಣವು ಕನ್ನಡದ ದೃಷ್ಟಿಯಿಂದಲೂ ತುಸು ಹಾನಿಕರ. ಏಕೆಂದರೆ ಕನ್ನಡ ಕವಿತಾರಚನೆ, ಭಾಷಾಂತರ ಇವೆರಡರಲ್ಲಿಯೂ ಅವರ ಪರಿಣತಿ ಅಗಾಧವಾದದ್ದಿತ್ತು. ಅದಕ್ಕೆ ಹೆಚ್ಚಿನ ಅವಕಾಶ ದೊರೆಯಲಿಲ್ಲ- ಮರಣದಿಂಬಾಗಿ.

## ೪೪೩. ಡಬ್ಲ್ಯೂ. ಜಿ. ವುರ್ತ್ ಮತ್ತು ಇತರರು

ಕನ್ನಡವನ್ನು ಆಳವಾಗಿ ಅಭ್ಯಸಿಸಿದ ಬಾಸೆಲ್ ಮಿಶನರಿಗಳಲ್ಲಿ ಡಬ್ಲ್ಯೂ ಜಿ. ವುರ್ತ್ (೧೮೨೦–೬೯) ಇನ್ನೊಬ್ಬನಾಗಿದ್ದಾನೆ. ಅವನು ಸಂಸ್ಕೃತವನ್ನೂ ಚೆನ್ನಾಗಿ ಅಭ್ಯಸಿ-ಸಿದ್ದನು. ಕ್ರಿ.ಶ. ೧೮೪೫ರಲ್ಲಿ ಕನ್ನಡ ನಾಡಿಗೆ ಆಗಮಿಸಿ ತನ್ನ ವಾಸ್ತವ್ಯದ ಹೆಚ್ಚಿನ ಕಾಲವನ್ನು ಅವನು ಧಾರವಾಡ ಜಿಲ್ಲೆಯಲ್ಲಿ ಕಳೆದನು. ಅಲ್ಲಿಯ ವೀರಶೈವರೊಡನೆ ಆತ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದನು.

ಇವನ ಹೆಸರು ಉತ್ತರ ಕರ್ನಾಟಕದ ಶೈಕ್ಷಣಿಕ ವಲಯಗಳಲ್ಲಿ ಹೆಚ್ಚು ಪರಿಚಿತ-ವಾದದ್ದಿದೆ. ಇದರ ಕಾರಣ ಅವನ 'ಪ್ರಾಕ್ಕಾವ್ಯಮಾಲಿಕೆ' ಎಂಬ ಗ್ರಂಥ (೧೮೬೬, ಪ್ರಕಟಣೆ ೧೮೬೮). ಕನ್ನಡ ಸಾಹಿತ್ಯದ ಆರಂಭದಿಂದ ೧೯ನೆಯ ಶತಮಾನದ ಆರಂಭಿಕ ಕಾವ್ಯಗಳಿಂದ ಆಯ್ದ ಪದ್ಯಭಾಗಗಳನ್ನು ಇದು ಒಳಗೊಂಡಿದೆ. ಕೆಲವು ಕ್ರಿಶ್ಚಿಯನ್ ಗೀತಗಳನ್ನೂ ಸೇರಿಸಿದೆಯಾದ್ದರಿಂದ ಇದರಲ್ಲಿ ಹೊಸಗನ್ನಡಕ್ಕೂ ಪ್ರಾತಿನಿಧ್ಯ ದೊರಕಿದೆ.* 'ಹಳಗನ್ನಡ ವ್ಯಾಕರಣ ಸೂತ್ರಗಳು,' ಈತನ ರಚನೆ. ಇದು ಕಿಟ್ಟೆಲರ ಕೃತಿಯೆಂದು ತಪ್ಪಾಗಿ ತಿಳಿಯಲಾಗಿತ್ತು.

ವಿಶೇಷ ಬೆಳಕಿಗೆ ಬಾರದ ಅವನ ಸಾಹಿತ್ಯಿಕ ಕಾರ್ಯವೆಂದರೆ 'ಬಸವಪುರಾಣ' ಮತ್ತು 'ಚೆನ್ನಬಸವ ಪುರಾಣ' ಇವುಗಳ ಸುದೀರ್ಘ ಕಥಾಸಾರವನ್ನು ಇಂಗ್ಲಿಷ್‌ನಲ್ಲಿ ಬರೆದು (೧೮೬೫) ರಾಯಲ್ ಏಶಿಯಾಟಿಕ್ ಸೊಸೈಟಿಯ ಮುಂಬಯಿ ಪತ್ರಿಕೆಯಲ್ಲಿ ಪ್ರಕಟಿಸಿದ್ದುದು. ವೀರಶೈವ ಜನತೆಯ ಹಾಗೂ ಸಾಹಿತ್ಯದ ಸಂಪರ್ಕವೇ ಇದಕ್ಕೆ ಪ್ರೇರ-ಕವಾಯಿತು. ಮೊದಲಿಗೆ ಈ ಕೃತಿಗಳ ಸವಿವರ ಅನುವಾದಕ್ಕೆ ಕೈಹಾಕಿದರೂ ಮುಂದೆ ವಿಸ್ತಾರ ಭಯದಿಂದ ಇದನ್ನು ಸಂಗ್ರಹಿಸುತ್ತ ಹೋಗಿದ್ದಾನೆ. ವುರ್ತ್‌ನಿಗೆ ಸ್ವಯಂ ಕವಿತಾ ರಚನೆಯಲ್ಲಿಯೂ ಆಸಕ್ತಿಯಿದ್ದಿತು.[S] 'ಇಸೋಪನ ನೀತಿಕತೆ' ಎಂಬುದಲ್ಲದೆ,

---

* ಈ ಕೃತಿಯು ಮುಂಬಯಿ ಕರ್ನಾಟಕದ ಟ್ರೇನಿಂಗ್ ಕಾಲೇಜಿನಲ್ಲಿ ಪಠ್ಯವಾಗಿದ್ದಿತು. ಮುಂದೆ ವುರ್ತ್‌ನ ಹೆಸರಿನಲ್ಲಿ ಒಂದು ನಿಧಿಯನ್ನು ಇರಿಸಿ, ಪ್ರತಿ ವರ್ಷ ಪಾರಿತೋಷಕವನ್ನು ಕೊಡುವ ಕ್ರಮವು ಅನೇಕ ವರ್ಷ ನಡೆದು ಬಂದಿದ್ದಿತು. ಅದರಲ್ಲಿ ಒಂದು ಪೇಪರು 'ಪ್ರಾಕ್ಕಾವ್ಯ ಮಾಲಿಕೆ'ಯ ಅಭ್ಯಾಸಕ್ಕೆ ಮೀಸಲು. ಇದಕ್ಕೆ ಶಿಕ್ಷಣಾಧಿಕಾರಿ ರಸೆಲ್ಲನ ಒತ್ತಾಸೆ ಕಾರಣವಾಯ್ತು.

ಲಿಂಗಾಯತ ಹಾಗೂ ಕ್ರಿಶ್ಚಿಯನ್ ಮತಗಳನ್ನು ಹೋಲಿಸಿ ವುರ್ತ್ ಒಂದು ಪುಸ್ತಕವನ್ನು ಬರೆದಿದ್ದಾನೆ. ಅಲ್ಲದೆ ಜರ್ಮನ್ ಭಾಷೆಯಲ್ಲಿ (೧೮೫೬) ಬರೆದ ಸುಮಾರು ೧೪೦ ಪುಟಗಳ ಹಸ್ತಪ್ರತಿಯೊಂದು ಬಾಸೆಲ್‌ನಲ್ಲಿ ಇದೆ: 'Basava der Weltlichte Begrunder (Worldly foundation) des modernen Lingaitism'. ಸುದೀರ್ಘ ಹಾಗೂ ಸಮಗ್ರ ವಿವರಣೆ; ಟೀಕಾಂಶ ಕಡಿಮೆ.

ಮೊವ್‌ಗ್ಲಿಂಗನ ಕಾಲದಲ್ಲಿ ಸಾಹಿತ್ಯ ರಚನೆ ಮಾಡಿದ ಇನ್ನು ಕೆಲವರನ್ನು ಇಲ್ಲಿ ಹೆಸರಿಸಬೇಕು. **ಡಬ್ಲ್ಯೂ ಹಾಕ್** ಮೊವ್‌ಗ್ಲಿಂಗನ ಜೊತೆಯಲ್ಲಿಯೆ ಪ್ರಾರ್ಥನಾ ಗೀತಗಳನ್ನು ರಚಿಸಿದವನಾಗಿದ್ದಾನೆ. ಅಧಿಕೃತವಾದ 'ಗೀತಗಳು' ಸಂಗ್ರಹ ಹೊರಬರುವುದಕ್ಕೆ ಮುನ್ನ ಅವನ ಕೆಲವು ಪದ್ಯಗಳ ಸಂಗ್ರಹದ ಚಿಕ್ಕ ಕೃತಿಯು ಬಳಕೆಯಲ್ಲಿದ್ದುದಾಗಿ ತಿಳಿದು ಬರುತ್ತದೆ. ಹಾಕ್‌ನ ವಿಶೇಷ ಪರಿಶ್ರಮವು ಒಂದು ಸಾವಿರ 'ದೇವರ ವಾಕ್ಯ'ಗಳನ್ನು ಸಂಕಲಿಸಿ ಹೊರತಂದುದರಲ್ಲಿ ವ್ಯಕ್ತವಾಗಿದೆ (ದೇವವಾಕ್ಯದ್ವಿಪಂಚಾಶತೌ). ಇವನ ಪುಸ್ತಕಗಳು ಕಲ್ಲಚಿನಲ್ಲಿ ಮೂಡಿದ ಆರಂಭದ ಕೃತಿಗಳು.

**ಗಾಟ್‌ಲೀಬ್** (ಗುಸ್ತಾವ್) **ಕೀಸ್** ೧೮೪೫ರಿಂದ ೧೮೬೬ರ ವರೆಗೆ ಮುಂಬಯಿ ಕರ್ನಾಟಕದ ಬೆಟಗೇರಿ, ಗುಳೇದಗುಡ್ಡಗಳಲ್ಲಿ ಮಿಶನರಿ ವೃತ್ತಿಯಲ್ಲಿದ್ದನು. ೧೮೬೬ರಲ್ಲಿ ಸ್ವದೇಶಕ್ಕೆ ಹೋದವನು ತಿರುಗಿ ಬರಲಿಲ್ಲ. ೧೮೭೭ರಲ್ಲಿ ತೀರಿಕೊಂಡ. ಬಾಸೆಲ್ ಮಿಶನ್ನಿನ ವತಿಯಿಂದ ಪಠ್ಯಪುಸ್ತಕ ರಚಿಸಿದ ಆರಂಭಕಾರರಲ್ಲಿ ಇವನೂ ಒಬ್ಬ. ಭೂಗೋಲವು ಅವನ ನೆಚ್ಚಿನ ವಿಷಯವಾಗಿದ್ದಿತು. ಮತೀಯ ಪುಸ್ತಕಗಳಲ್ಲಿ ಬಾಬಾ ಪದಮಂಜಿಯ 'ಜೀವಾಂತ್ಯ ಸ್ಮರಣೆ'ಯ ಅನುವಾದವೂ ಒಂದು. ಮತಾಂತರಿತ ದೇಶೀಯರ ನವ ಶಿಶುಗಳಿಗಾಗಿ ಹೆಸರು ಇಡಲು ಅನುಕೂಲವಾಗಲೆಂದು ಅಂಥ ಕ್ರೈಸ್ತ ಹೆಸರುಗಳನ್ನು ಕನ್ನಡದಲ್ಲಿ ಅಕಾರಾದಿಯಾಗಿ ಕೊಟ್ಟ ಪುಸ್ತಕ ಅವನಿಂದ ರಚಿತವಾಯ್ತು.*

---

$ ಬಸವಪುರಾಣದ ಅನುವಾದದಲ್ಲಿ ಬಸವೇಶ್ವರನ ಅಂತ್ಯದ ವಿಚಾರವಾಗಿದ್ದ ಈ ಪದ್ಯರೂಪೀ ಅನುವಾದವನ್ನು ಗಮನಿಸಬೇಕು.

As the whirlwind arises from the earth and is lost in it
As the froth is produced in the churned milk and subsides into it
As the forked lightning has its origin in the sky and retires into it
As hail is produced by water and resolved into it.
So Basava arose out of the Guru; grew by his assistance and last,
was united into Him in everlasting rest.[22]

* ಅವನ ಮರಣಾನಂತರದ ಒಂದು ವಿಶಿಷ್ಟ ಘಟನೆ ಮುಂಬಯಿ ಸರಕಾರದ ಆರ್ಕೈವ್ಸ್‌ನ ಜಿ.ಡಿ.ಸಂ. ೪೩ (೧೮೭೬) ಫೈಲ್ ಮೂಲಕ ನನ್ನ ಗಮನಕ್ಕೆ ಬಂತು. ಆಗಿನ ಮುಂಬಯಿ ಗವರ್ನರ್ ಫ್ರಿಯರ್‌ನಿಗೆ ಈ ಮಿಶನರಿಯ ವೈದುಷ್ಯ ಮತ್ತು ವ್ಯಕ್ತಿತ್ವದ ಅರಿವಾಗಿ ಮುಂಬಯಿ ಕರ್ನಾಟಕದ ಚರಿತ್ರೆ ಬರೆಯಲು ಸೂಚಿಸಿದ. ಶಿಕ್ಷಣಾಧಿಕಾರಿ ರಸೆಲ್ ಅನುಮೋದಿಸಿದ್ದಲ್ಲದೆ ಶಾಲಾ ಮಾಸ್ತರರಿಗೆ ತಂತಮ್ಮ ಭಾಗದ/

ಇನ್ನಿಬ್ಬರು ಬಾಸೆಲ್ ಮಿಶನರಿಗಳನ್ನು, 'ಪ್ರಾಸಂಗಿಕ'ವಾಗಿ ಹೆಸರಿಸಬೇಕು. ಪ್ರಾಸಂಗಿಕವಾಗಿ ಏಕೆಂದರೆ ಅವರು ಮತೀಯ ಇಲ್ಲವೆ ಶಾಲಾ ಪಠ್ಯದ ಪುಸ್ತಕಗಳನ್ನೇನು ಹೆಚ್ಚಾಗಿ ಬರೆದವರಲ್ಲ. ಅವರಲ್ಲಿ **ಜೇಕಬ್ ಹುನ್ಸಿಕರ್** (೧೮೫೬–೧೮೭೩) ಕೈಗಾರಿಕಾ ಕರ್ಮಿಯಾಗಿದ್ದನು. ಮುದ್ರಣ ತಂತ್ರದಲ್ಲಿ ಜರ್ಮನಿಯ ಕೌಶಲ್ಯವನ್ನು ತಂದನು. ಅವನು ಇಲ್ಲಿದ್ದಾಗ, ನಮ್ಮಲ್ಲಿಯ ಅದರಂತೆ ದಕ್ಷಿಣ ಭಾರತದಲ್ಲಿಯ ವಿಶಿಷ್ಟ ಎಲೆಗಳನ್ನು, ಹೂಗಳನ್ನು ಆಯ್ದು, ಅವಕ್ಕೆ ಅವುಗಳದೇ ತದ್ವತ್ ಬಣ್ಣವನ್ನು ಲೇಪಿಸಿ ಮುದ್ರಿಸಿದನು. ಆ ಪ್ರತಿಯನ್ನು Nature's Selfprinting; Botanautography ಎಂದು ಕರೆದನು. ಔಡಲ, ಹುಣಿಸೆ ಮತ್ತಿತರ ಎಲೆಗಳಿವೆ. ಸೂಕ್ಷ್ಮಾತಿಸೂಕ್ಷ್ಮ ದಳಗಳಿರುವ ಹೂಗಳ ಗೊಂಚಲು ಇವೆ. ಕೇವಲ ೧೩ ಪ್ರತಿಗಳನ್ನು ಮಾತ್ರ ಮುದ್ರಿಸಿದ್ದು, ಅದರ ಮೊದಲ ಪ್ರತಿಯನ್ನು ಬಾಸೆಲ್‌ಗೆ ಕಳಿಸಿದ್ದಾನೆ. ಅಲ್ಲಿ ಅದನ್ನು ನೋಡಿ ತುಂಬಾ ವಿಸ್ಮಯಪಟ್ಟೆ. ಕೊಡಗಿನಲ್ಲಿ ಕೆಲವು ಕಾಲ ಇದ್ದಾಗ. ಅಲ್ಲಿಯ ಸುಂದರ ದೃಶ್ಯಗಳನ್ನು ಬಿಡಿಸಿದ್ದಾನೆ. ನಕಾಶರಚನೆಯನ್ನೂ ಮಾಡಿದ್ದಾನೆ.

ಇನ್ನೊಬ್ಬವ **ಜೆ. ಹೂಬರ್** (೧೮೪೨–೧೮೫೫) ಭಾರತೀಯ ತತ್ವಜ್ಞಾನವನ್ನು ಚೆನ್ನಾಗಿ ಓದಿಕೊಂಡಿದ್ದ. ಹಿಂದೂ ದೇವ–ದೇವತೆಗಳು ನೋಡುವುದಕ್ಕೆ ಹೇಗಿದ್ದರು? ಅವರಿವರನ್ನು ಕೇಳಿ, ಕೆಲ ಚಿತ್ರಗಳನ್ನೂ ನೋಡಿ ಸುಮಾರು ೩೦ ದೇವತೆಗಳ ರೇಖಾಚಿತ್ರ ಬಿಡಿಸಿದ್ದಾನೆ: ವಿಷ್ಣುವಿನ ದಶಾವತಾರಗಳು, ಗಣೇಶ, ಏನೆಲ್ಲ. ಅಗ್ನಿ, ವರುಣ, ಇಂದ್ರ, ಅದರಂತೆ ನೈಋತ್ಯ ಮುಂತಾದ ದಿಕ್ಪಾಲಕರು ಮೊದಲಾದವರು ಹೇಗಿದ್ದರೆಂದು ಕೇಳಿದರೆ ನಮ್ಮಲ್ಲಿ ಯಾರೂ ಹೇಳಲಾಗುವುದಿಲ್ಲ. (ಈ ಕುರಿತ ಲೇಖನಕ್ಕಾಗಿ, 'ಸುಧಾ' ಯುಗಾದಿ ವಿಶೇಷಾಂಕ, ೧೯೯೯ರಲ್ಲಿಯ ಲೇಖನ ನೋಡಬಹುದು.)

---

ಊರಿನ ವಿವರಗಳನ್ನು ಕಳಿಸ ಹೇಳಿದ. 'ಶಾಲಾಪತ್ರಕ'ದಲ್ಲಿ ಪ್ರಕಟನೆಯನ್ನೂ ಕೊಟ್ಟಾಯಿತು. ಅವೆಲ್ಲವನ್ನೂ ಕೆಲವು ಸರಕಾರೀ ವರದಿಗಳನ್ನೂ ಕೀಸ್‌ನಿಗೆ ಕಳಿಸಲಾಯಿತು.

ಈ ಚರಿತ್ರೆ ಮೂರು ಭಾಗಗಳಲ್ಲಿ ಸಿದ್ಧವಾಗಬೇಕಿತ್ತು : ೧. ಭೂಗೋಲ ೨. ಇತಿಹಾಸ ೩. ಆಡಳಿತ ಮತ್ತು ಉದ್ಯಮ. ಕೀಸ್ ಕೆಲವೇ ತಿಂಗಳಲ್ಲಿ ೧ನೆಯ ಭಾಗವನ್ನು ಸಾದರಪಡಿಸಿದ– ಮಾದರಿಯೆಂದು, ಸರಕಾರವು ಅದರ ಪರಿಶೀಲನೆಗಾಗಿ ರೇಮಂಡ್ ವೆಸ್ಟ್ ಮತ್ತು ವಿಲ್ಸನ್ ಎಂಬವರಿಗೆ ಕಳಿಸಿದಾಗ ಇಬ್ಬರೂ ಅದನ್ನು ಕೊಂಡಾಡಿದರಲ್ಲದೆ, ಇಡೀ ಕೃತಿಗೆ ೫ ಸಾವಿರ ರೂ. ಸಂಭಾವನೆ ಕೊಡಬೇಕೆಂದೂ ಸೂಚಿಸಿದರು.

ಆದರೆ ಕೀಸ್ ಸ್ವದೇಶಕ್ಕೆ ಹೋದವ ಮರಳಿ ಬರಲೇ ಇಲ್ಲವಲ್ಲ. ಅವನು ಮರಣಹೊಂದಿದ ಮೇಲೆ ಅವನ ಬಳಗದವರು ೧೮೭೫ರಲ್ಲಿ ಪ್ರಥಮ ಬರಹದ ಸಂಭಾವನೆ ಯಾಚಿಸಿದರು, ಮೊವ್‌ಗ್ಲಿಂಗನ ಮುಖಾಂತರ. ಅವರ ಸೂಚನೆಯ ಮೇರೆಗೆ ಆ ೧ನೆಯ ಭಾಗಕ್ಕೆ ೧೫೦೦ ರೂ. ಸಲ್ಲಿಸಿತಲ್ಲದೆ, ಸರಕಾರವು ಬಾಂಬೆ ಗಜೆಟಿಯರ್‌ನ ೧೮೭೬ರ ಒಂದು ಸಂಚಿಕೆಯಲ್ಲಿ ಅದನ್ನು ಪ್ರಕಟಿಸಿದೆ. ಅದರಲ್ಲಿಯ ಹಲವೇ ವಿವರಗಳು ಈಗ ಅಪ್ರಕೃತವೆನಿಸಿವೆ. ಆದರೆ ವಿಷಯದ ಮಂಡನೆಯ ದೃಷ್ಟಿಯಿಂದ ಅದೊಂದು ಮೌಲಿಕ ಬರಹವಾಗಿದೆ.

ಇವರೆಲ್ಲರ ಕಾರ್ಯದ ಫಲವಾಗಿ ಕಳೆದ ಶತಮಾನದ ಮಧ್ಯಕಾಲದಲ್ಲಿ ಮಂಗಳೂರ ಕೇಂದ್ರವು ಪ್ರವರ್ಧಮಾನ ಸ್ಥಿತಿಯಲ್ಲಿದ್ದಿತು. ಅದರ ಮೂಲಕ ಕನ್ನಡಕ್ಕೆ ಸ್ವಾಭಾವಿಕವಾಗಿಯೆ ಮನ್ನಣೆ ಸಂದಿತು. ಜರ್ಮನ್, ಫ್ರೆಂಚ್, ಇಂಗ್ಲಿಷ್, ಆಫ್ರಿಕನ್ ಮತ್ತು ಭಾರತದ ಅನ್ಯ ಕೆಲವು ಭಾಷೆಗಳಲ್ಲಿ ಬಾಸೆಲ್ ಮಿಶನ್ನಿನವರು ಗ್ರಂಥ ರಚನೆಯನ್ನು ಕೈಕೊಂಡಿದ್ದರೂ, ಕನ್ನಡ ಕೃತಿಗಳ ಸಂಖ್ಯೆಯೇ ದೊಡ್ಡದಿತ್ತೆಂಬುದು ಮಿಶನ್ನಿನ ೧೮೫೮ರ ವರದಿಯಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಇಷ್ಟೇ ಅಲ್ಲದೆ ಮಂಗಳೂರು ವಿದ್ವತ್ತಿನ ಕೇಂದ್ರವೆಂಬುದಾಗಿ ಕನ್ನಡೇತರರ ಗಮನವನ್ನು ಸೆಳೆದಿದ್ದಿತು. ವಿದೇಶೀಯರು ಕೈಕೊಂಡ ಭಾರತೀಯ ಪ್ರಾಚ್ಯ ಸಂಶೋಧನ ಕಾರ್ಯವು ೧೯ನೆಯ ಶತಮಾನದ ಆರಂಭದಲ್ಲಿ ನಿಂತು ಹೋಗಿದ್ದಾಗ ಬಾಸೆಲ್ ಮಿಶನ್ನಿನವರು ಅದನ್ನು ವಿಶೇಷವಾಗಿ ಕೈಗೆತ್ತಿಕೊಂಡರೆಂಬುದಾಗಿ, ಪ್ರಾಚ್ಯವಿದ್ವಾಂಸರಲ್ಲಿ ಒಬ್ಬನೆಂದು ಗಣ್ಯನಾಗಿದ್ದ ಎ.ಸಿ. ಬರ್ನೆಲ್ ಅಭಿಪ್ರಾಯಪಟ್ಟಿದ್ದಾನೆ.[೨೩]

## ೪೪೪ ತುಳು ಸಾಹಿತ್ಯಕಾರರು

ಬಾಸೆಲ್ ಮಿಶನ್ನಿನ ಕೊಡುಗೆಗಳಲ್ಲಿ ತುಳು ಸಾಹಿತ್ಯವೂ ಒಂದಾಗಿದೆ. ಬಾಸೆಲ್ ಮಿಶನ್ನಿನ ಜೆ. ಅಮ್ಮಾನ್, ಜಿ. ಕೆಮರರ್ ಮತ್ತು ಬೂರ್ರರ್ ಇವರು ಈ ಕೆಲಸವನ್ನು ಕೈಗೆತ್ತಿಕೊಂಡರು. ತುಳು ಪುಸ್ತಕ ಪ್ರಕಟನೆಯು 'ಮತ್ತಾಯನ ಸುವಾರ್ತೆ'ಯಿಂದ ಮೊದಲಾಯಿತು (೧೮೪೭). ಕೆಲವು ತುಳು ಕೀರ್ತನೆಗಳುಳ್ಳ ಚಿಕ್ಕ ಪುಸ್ತಕವೂ ಕಲ್ಲಚ್ಚಿನ ರೂಪದಲ್ಲಿ ಅದೇ ವರ್ಷ ಹೊರಬಂದಿರಬೇಕು. ಪ್ರಥಮ ಸುವಾರ್ತೆಯಿಂದ ಪ್ರಾರಂಭವಾದ ಬೈಬಲ್ ಅನುವಾದವು ಮುಂದುವರಿದು, ೧೮೫೯ರಲ್ಲಿ ತುಳು ಭಾಷೆಯ ಬೈಬಲಿನ ಹೊಸ ಒಡಂಬಡಿಕೆ ಭಾಗವು ಕನ್ನಡ ಲಿಪಿಯಲ್ಲಿ ಮುದ್ರಣವಾಯ್ತು. ಅದುವೆ ತುಳು ಭಾಷೆಯ ಮೊತ್ತಮೊದಲಿನ ದೊಡ್ಡ ಗ್ರಂಥವಾಗಿದೆ. ಅಧಿಕೃತ ತುಳು ಗೀತಗಳ ಸಂಕ-ಲನವು ೧೮೬೪ರಲ್ಲಿ ಪ್ರಕಟವಾಯಿತು. ಇದರಲ್ಲಿಯ ಹೆಚ್ಚಿನ ಹಾಡುಗಳು ಅಮ್ಮಾನ್, ಕೆಮರರ್ ಇವರಿಂದ ರಚಿತವಾದವುಗಳು. ಆಮೇಲಿನ ಆವೃತ್ತಿಯಲ್ಲಿ ಎ. ಮೆನರ್‌ನ ಹಾಡುಗಳೂ ಸೇರಿವೆ. ಇಂದು ಪ್ರಚಲಿತವಿರುವ ಆವೃತ್ತಿಯು ಆರ್. ಬುಂಝ್ ಎಂಬವನ ಪರಿಷ್ಕರಣದ ಫಲವಾಗಿದೆ. ಮೆನರ್ ತುಳು ಭಾಷೆಗೆ ಪ್ರತ್ಯೇಕವಾದ ಶಬ್ದಕೋಶವನ್ನು ಸಿದ್ಧಪಡಿಸಿದ ಸಾಹಸಿ (೧೮೮೬). ತುಳು ಜನರ ಭೂತಾರಾಧನೆಯ ಕುರಿತು (ಕನ್ನಡದಲ್ಲಿ) ಆತನ ಪುಸ್ತಕವೊಂದಿದೆ. ಇಂತು ತುಳು ಭಾಷೆಗೆ ಗ್ರಂಥಸ್ಥ ರೂಪವನ್ನಿತ್ತು ಸಾಹಿತ್ಯಿಕ ಮನ್ನಣೆಯನ್ನು ಒದಗಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನವರದಾಗಿದೆ.

## ೪೪೫ ಫರ್ಡಿನಾಂಡ್ ಕಿಟೆಲ್

ಜರ್ಮನ್ ದೇಶದ ರಾಸ್ಟರ್‌ಹಾಫ್ ಎಂಬಲ್ಲಿ ದಿ.೭-೪-೧೮೩೨ರಂದು ಹುಟ್ಟಿದ ಕಿಟೆಲ್, ಮೋವ್‌ಗ್ಲಿಂಗರಂತೆ ಮತಪ್ರಚಾರಕರ ಮನೆತನಕ್ಕೆ ಸೇರಿದವರು. ಆರಿಕ್ ನಗರದ ಶಾಲೆಯಲ್ಲಿದ್ದಾಗಲೇ ತಂದೆಯು ಅವರನ್ನು ಮಿಶನರಿಯನ್ನಾಗಿ ಮಾಡಬೇಕೆಂದು ನಿರ್ಧ-ರಿಸಿದ್ದರು. ಹೆಚ್ಚಿನ ವ್ಯಾಸಂಗಕ್ಕೆಂದು ಯಾವ ವಿಶ್ವವಿದ್ಯಾಲಯವನ್ನೂ ಸೇರದೆ, ಕಿಟೆಲ್ ಮೂರು ವರ್ಷ ಕಾಲ ಮತ ಪ್ರಚಾರ ವಿಷಯದ ಅಧ್ಯಯನವನ್ನು ಕೈಕೊಂಡು ದಿನಾಂಕ ೨೦-೧೦-೧೮೫೩ರಂದು ಬಂದಾಗ ಅವರನ್ನು ಧಾರವಾಡ–ಹುಬ್ಬಳ್ಳಿಗಳ ಕೇಂದ್ರಕ್ಕೆ ಕಳಿಸಿದರು. ಕಿಟೆಲ್ ಕನ್ನಡವನ್ನು ಅಲ್ಲಿಯೆ ಕಲಿತರು. ಆ ಮುಂದೆ ಕಿಟೆಲ್ ಆಳವಾಗಿ ಕನ್ನಡದ ಅಭ್ಯಾಸವನ್ನು ಕೈಕೊಂಡದ್ದಲ್ಲದೆ ಆಗಿನ ಕಾಲದಲ್ಲಿ ಲಭ್ಯವಿದ್ದ ಹಿಂದೂ ಧರ್ಮ, ಇತಿಹಾಸಗಳಿಗೆ ಸಂಬಂಧಿಸಿದ ಇಂಗ್ಲಿಷ್, ಸಂಸ್ಕೃತ ಕೃತಿಗಳನ್ನು ಅಭ್ಯಸಿಸಿದರು. ಹಳಗನ್ನಡ ಕಾವ್ಯಗಳ ವ್ಯಾಸಂಗಕ್ಕೆ ಬಾಸೆಲ್ ಮಿಶನ್ನಿನವರೇ ಪ್ರಕಟಿಸಿದ್ದ 'ಬಿಬ್ಲಿಯಾಥೆಕಾ' ಮಾಲಿಕೆಯ ಎಂಟು ಗ್ರಂಥಗಳು ಮಾತ್ರ ಮುದ್ರಣರೂಪದಲ್ಲಿದ್ದುವಲ್ಲದೆ, ಉಳಿದವುಗಳೆಲ್ಲ ಹಸ್ತಪ್ರತಿಗಳೇ. ಈಚಿನವರು ಬರೆದು ತೆಗೆದ ಪ್ರತಿಗಳ ಅಶುದ್ಧತೆಯನ್ನು ಕಂಡು ಕಿಟೆಲ್ ತಾವೇ ಅವುಗಳ ಪ್ರತಿಗಳನ್ನು ತಯಾರಿಸಿಕೊಳ್ಳುತ್ತಿದ್ದರು.* ಜೊತೆಗೆ ಸೂಕ್ತ ಟಿಪ್ಪಣಿಗಳನ್ನೂ ಮಾಡಿಕೊಳ್ಳುತ್ತಿದ್ದಿರಬೇಕು. ಭಾಷಾ ವಿಷಯದಲ್ಲಿ ಸೂಕ್ಷ್ಮ ದೃಷ್ಟಿ, ಕಾವ್ಯ ಮತ್ತು ತತ್ತ್ವಜ್ಞಾನಗಳಲ್ಲಿ ಅಪಾರ ಶ್ರದ್ಧೆ, ಇವಕ್ಕೆ ಕಳಸವಿಡುವಂತೆ ಅದ್ಭುತ ಮೇಧಾಶಕ್ತಿ—ಇವುಗಳ ಸಂಯೋಗದಿಂದ ಕಿಟೆಲ್ ವಿದ್ವಾಂಸ ಮಂಡಲಿಯಲ್ಲಿ ಗಣಿ-ಸಲ್ಪಟ್ಟರು.

ಕಿಟೆಲ್‌ರ ನಿಜವಾದ ಸಾಹಿತ್ಯ ಕೃಷಿಯು ನಡೆದುದು ಮಡಿಕೇರಿಯಲ್ಲಿ. ಕ್ರಿ.ಶ. ೧೮೬೬–೬೭ರಲ್ಲಿ ಸ್ವದೇಶಕ್ಕೆ ಹೋಗಿ ಬಂದ ಮೇಲೆ ಅವರನ್ನು ಮಡಿಕೇರಿಯಲ್ಲಿ ಪ್ರಚಾರಕಾರ್ಯಕ್ಕೆಂದು ನೇಮಿಸಲಾಯಿತು. ಮುಂದೆ ೧೮೭೭–೮೩ರ ಅವಧಿಯಲ್ಲಿ ಇನ್ನೊಮ್ಮೆ ಯುರೋಪಕ್ಕೆ ಹೋಗಿ ಬಂದ ಮೇಲೆ ಅವರನ್ನು ಧಾರವಾಡದ ಬಾಸೆಲ್ ಮಿಶನ್ ಹೈಸ್ಕೂಲಿನ ಮುಖ್ಯಾಧ್ಯಾಪಕರೆಂದು ನೇಮಿಸಲಾಗಿದ್ದರೂ (೧೮೮೩–೧೮೮೪) ಪುನಃ ಅವರನ್ನು ಮಡಿಕೇರಿಗೇ ವರ್ಗ ಮಾಡಲಾಯ್ತು. ಹೀಗೆ ಕೊಡಗು ಪ್ರದೇಶವೇ ಅವರ ಸಾಹಿತ್ಯಕ ತಪೋಭೂಮಿಯೆನಿಸಿತು.**

---

* The west coast of India has been for nearly three centuries the seat of a very considerable literary activity. By the end of the sixteenth century, the Goa Jesuits and the Carmalites continued the work of research chiefly in the Cochin Territory. At the end of the 18th and the beginning of the 19th centuries all enquiry seems to have died out, but since 1835 the Basel

ಕಿಟೆಲರ ವಾಙ್ಮಯ ಕಾರ್ಯವು ಕವಿತಾರಚನೆಯಿಂದ ಮೊದಲಾಯಿತು. ಅವರು ಓರ್ವ ಶ್ರೇಷ್ಠ ಮಿಶನರಿ ಕವಿಯೆಂಬ ಮಾತು ಅಷ್ಟಾಗಿ ಬೆಳಕಿಗೆ ಬಂದಿಲ್ಲ. ನಡುಗನ್ನಡ ಕಾವ್ಯದ ಅಭ್ಯಾಸ ಮತ್ತು ಆ ಕವಿತಾರಚನೆಯು ನಮ್ಮ ಧಾರ್ಮಿಕ ವರ್ತುಲದಲ್ಲಿ ಪಡೆದಿದ್ದ ಪ್ರಾಶಸ್ತ್ಯ—ಇವು ಅವರನ್ನು ಕವಿತೆಯತ್ತ ಎಳೆದುವು. ಅದಕ್ಕೂ ಮುಂದೆ ಹೋಗಿ ಅವರು, ಕ್ರೈಸ್ತಮತ ಪ್ರಸಾರ ಮಾಡುವ ಮಿಶನರಿಗಳು ಕನ್ನಡ ಕಾವ್ಯಗಳನ್ನು ಅಭ್ಯಸಿಸಬೇಕು ಮತ್ತು ಈ ವಿಷಯವು ದೈವಜ್ಞಾನ ಶಾಲೆಯಲ್ಲಿ ಓದುವವರಿಗೆ ಕಡ್ಡಾಯವಾಗಿರಬೇಕು, ಎಂದು ಕೇಂದ್ರ ಸಂಸ್ಥೆಗೆ ಸೂಚಿಸಿದನು. ಹೀಗೆ ಕಲಿತವರು ಮುಂದೆ ಕನ್ನಡದಲ್ಲಿ, ಅದೂ ದೇಶೀಯ ರಾಗಗಳಲ್ಲಿ ಪದ್ಯಗಳನ್ನು ರಚಿಸಬೇಕು ಎಂದೂ ಹೇಳಿದರು. ಈ ಬಗೆಯ ಸಂಕೀರ್ತನೆಯಿಂದ ಮತಪ್ರಸಾರವು ಯಾವ ರೀತಿಯಲ್ಲಿ ಪರಿಣಾಮಕಾರಿಯಾಗುತ್ತದೆನ್ನುವುದಕ್ಕೆ ಕಿಟೆಲ್ ಅಶ್ವಘೋಷ, ಚೈತನ್ಯರು ಬೌದ್ಧ ಮತ ಹಾಗೂ ಕೃಷ್ಣಭಕ್ತಿಗಳತ್ತ ಜನರ ಮನಸ್ಸನ್ನು ಹೇಗೆ ಆಕರ್ಷಿಸಿದರೆಂಬುದನ್ನು ವಿವರವಾಗಿ ತಿಳಿಸಿದ್ದಾರೆ. ಈಚೆಗೆ ಬ್ರಹ್ಮಸಮಾಜದವರೂ ಹಾಗೆ ಮಾಡಿದರೆಂಬುದರ ಕಡೆಗೆ ಬಾಸೆಲ್ ಕೇಂದ್ರದ ಗಮನವನ್ನು ಸೆಳೆದರು.

ಮೇಲಿನ ಅವರ ಅಭಿಪ್ರಾಯವು ೧೮೭೦ನೆಯ ವರ್ಷದಲ್ಲಿ ಬಾಸೆಲ್‌ಗೆ ಕಳಿಸಿದ ತ್ರೈಮಾಸಿಕ ವರದಿಯಲ್ಲಿ ವ್ಯಕ್ತವಾಗಿದ್ದರೂ, ತತ್ಪೂರ್ವದಲ್ಲಿಯೇ ಅದನ್ನು ಅವರು

---

missionaries have amply made up for previous deficiency and also by the number of their works, they have surpassed already all that had been done before.[೨೩]

The author's principle when preparing Kesiraja's Sabdamanidarpana and Nagavarma's Chandus for the press had been not to employ any scribes but to examine and write every word himself– ಎಂಬುದಾಗಿ ಕಿಟೆಲ್ ತನ್ನ ಕನ್ನಡ ಕೋಶದ ಪೀಠಿಕೆಯಲ್ಲಿ ಹೇಳಿದ್ದಾರೆ (ಪು. VIII). ಜೊತೆಗೆ ಈ ಕೆಳಗಿನ ಅವರ ಹೇಳಿಕೆಯನ್ನೂ ಗಮನಿಸಬೇಕು:

"Last year when searching after certain Canarese manuscripts in the Raja's Library at Maisur, I happened to meet with 'Manga Raja's Nighantu....' I had never seen such a work before and anxious to get a copy (by the kind permission of J.D. Gordon Esq. C.S.I.). I took the MSS with me to Mercara, where I copied it, as it was with its thousands of mistakes."[೨೪]

** ಕೊಡಗಿನ ವಾಸ್ತವ್ಯದ ಫಲವಾಗಿ ಕಿಟೆಲ್, ಕೊಡವರ ಭಾವುಕ ಕಲ್ಪನೆಗಳು, ಅವರ ಬಹುಪತ್ನಿತ್ವ ಅಲ್ಲಿಯ ಹಲವು ಶಾಸನಗಳು ಮತ್ತು ಕೆಲವು ಕೊಡಗು ಶಬ್ದಗಳ ಕುರಿತು ಲೇಖನಗಳನ್ನು ಬರೆದಿದ್ದಾರೆ. ದಕ್ಷಿಣ ಭಾರತದ ಭಾಷೆಗಳ ಮಾದರಿಯನ್ನು ಕೊಡುವ ಉದ್ದೇಶದಿಂದ ಬರ್ನೆಲ್ ಸಂಕಲಿಸಿದ Parable of the Sower (ಮತ್ತಾಯನ ಸುವಾರ್ತೆಯ ಒಂದು ಭಾಗ) ಇದರ ಕೊಡಗು ಭಾಷಾನುವಾದವು ಕಿಟೆಲರದೇ ಆಗಿದೆ.

ಕಾರ್ಯಾಚರಣೆಗೆ ತಂದಿದ್ದರು. ಅದರ ಫಲವೇ 'ಕಥಾಮಾಲೆ' ಎಂಬ ಪದ್ಯ ಕೃತಿ (೧೮೬೨). ಇದರಲ್ಲಿ ಬೈಬಲಿನ ಹೊಸ ಒಡಂಬಡಿಕೆಯಲ್ಲಿಯ ಯೇಸುವಿನ ಚರಿತ್ರೆಯೇ ಕಥನರೂಪವಾಗಿ ಮೂಡಿದೆ. ಇದರಲ್ಲಿಯ ೪೭೫ ಪದ್ಯಗಳು ಭಾಮಿನಿ (೨೭೮), ವಾರ್ಧಿಕ (೭೩) ಹಾಗೂ ಪೂರ್ವೀರಾಗದ ಹಾಡುಗಳ (೧೭೪) ರೂಪದಲ್ಲಿವೆ. ಇಷ್ಟೊಂದು ಕನ್ನಡ ಪದ್ಯಗಳನ್ನು ಏಕಕಾಲಕ್ಕೆ ರಚಿಸಿದ ಬೇರಾವ ಮಿಶನರಿಯೂ ಇಲ್ಲ.

ಮೇಲೆ ಕಾಣಿಸಿದ ವರದಿಯಲ್ಲಿ ಅವರು ಮಾಡಿದ ಇನ್ನೊಂದು ಸೂಚನೆಯೆಂದರೆ, ಮಿಶನ್ನಿನವರು ಒಂದು ಸುದ್ದಿ ಪತ್ರಿಕೆಯನ್ನು ಹೊರಡಿಸಬೇಕೆಂಬುದು. ಪತ್ರಿಕಾ ಸಂಪಾದನದ ಈ ಆಸ್ಥೆಯು ೧೮೬೨ನೆಯ ವರ್ಷದಲ್ಲಿಯೆ ಒಡಮೂಡಿದ್ದಿತು. ಜೆ. ಮ್ಯಾಕ್ ಎಂಬವನ ಜೊತೆಗೆ 'ಇಂಡಿಯ ಮತ್ತು ಅನ್ಯದೇಶದ ವಾರ್ತಿಕ' (ಮತ್ತು ವಿಚಿತ್ರ ವರ್ತಮಾನ ಸಂಗ್ರಹ) ಎಂಬ ಪತ್ರಿಕೆಯನ್ನು ಹೊರಡಿಸಿದ್ದರು. ಈ ಪತ್ರಿಕೆ ಬಹಳ ದಿನ ಬಾಳಲಿಲ್ಲ.

ಮರುವರ್ಷ ದೇವರನ್ನು ಕುರಿತ ತಾತ್ವಿಕ ವಿವೇಚನೆಯುಳ್ಳ ಕೃತಿಯೊಂದನ್ನು ಪ್ರಕಟಿಸಿದರು. ಈ 'ಪರಮಾತ್ಮಜ್ಞಾನ'ದಲ್ಲಿ ಹಿಂದೂ ಧರ್ಮ, ದೇವತೆಗಳ ಟೀಕೆಯಿದೆ. ಮುಂದಿನ ಮಹತ್ವದ ಕೃತಿಯೆಂದರೆ 'ಯೇಸುಕ್ರಿಸ್ತನ ಶ್ರಮೇ ಚರಿತ್ರ'— ಯೇಸುವಿನ ಕಡೆಯ ದಿನಗಳ ಗದ್ಯ ಚಿತ್ರಣ. ಬಾಸೆಲ್ ಮಿಶನ್ನಿನ ಬೋಧನಾಕ್ರಮದ (ಲಿಟರ್ಜಿ) ಕೈಪಿಡಿಯಲ್ಲಿ ಸೇರ್ಪಡೆಯಾಗುವಷ್ಟು ಇದು ಜನಪ್ರಿಯವಾಯಿತು. ಇದು ಸ್ವತಂತ್ರ ಕೃತಿಯಾದರೆ, 'ಕ್ರೈಸ್ತ ಸಭಾ ಚರಿತ್ರೆ'ಯು ೭೬೬ ಪುಟಗಳ ಮಹಾ ಗ್ರಂಥವಾಗಿದೆ. ಕ್ರಿ.ಶ. ೧೮೭೫ರಲ್ಲಿ Bible doctrine of reconciliation ಇದರ ಕುರಿತು ಮಲೆಯಾಳಿ ಭಾಷೆಯಲ್ಲಿಯೂ ಬರೆದಿದ್ದಾರೆ. ಆರಂಭದಲ್ಲಿ ಕಂಡು ಬಂದ ಇಂಥ ಮತೀಯ ಗ್ರಂಥ ನಿರ್ಮಿತಿಯಾಗಲೀ, ಕವಿತಾರಚನೆ ಅಥವಾ ಪತ್ರಿಕೋದ್ಯಮವಾಗಲೀ ಮುಂದುವರಿಯಲಿಲ್ಲ.

ಮಿಶನರಿಗಳು ಮಾಡಬೇಕಾಗುತ್ತಿದ್ದ ಗ್ರಂಥಸೇವೆಯಲ್ಲಿ ಪಠ್ಯಪುಸ್ತಕ ರಚನೆಯೂ ಒಂದು. ಕಿಟೆಲ್ 'ಪಂಚತಂತ್ರ'ವನ್ನೂ ಮಾರಿಸ್ ಕೃತ 'ಇಂಗ್ಲೆಂಡದ ಇತಿಹಾಸ'ವನ್ನೂ (೧೮೬೪) ಅನುವಾದಿಸಿ ಕೊಟ್ಟರು. ಕ್ರಮಿಕ ಪುಸ್ತಕವೆಂದು ರಚಿತವಾದ ಇನ್ನೆರಡು ಕೃತಿಗಳು ಹಳಗನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟವುಗಳು. 'ಸಂಣ ಕರ್ನಾಟಕ ಕಾವ್ಯ-ಮಾಲೆ' (೧೮೬೬) ಎಂಬೀ ಕೃತಿಯು ಮುಂದಿನ ಆವೃತ್ತಿಯ, ಹೊಸ ಪಾಠಗಳು, ಶಬ್ದಕೋಶ—ಇವುಗಳಿಂದ ಯುಕ್ತವಾಗಿ ವಿಸ್ತಾರಗೊಂಡಿತು. ವಾಚನ ಪಾಠಮಾಲೆಗಳನ್ನೂ ಅವರು ಸಿದ್ಧಗೊಳಿಸಿದರು. ಪ್ರಾಥಮಿಕ ವರ್ಗದ ಮಕ್ಕಳಿಗಾಗಿ 'ಕಾವ್ಯಮಂಜರಿ' (೧೮೭೭) ಎಂಬುದನ್ನೂ ಅವರು ಸಂಕಲಿಸಿದರು. ಇವೆಲ್ಲ ಕ್ರಮಿಕ ಪುಸ್ತಕಗಳ ಕೆಲಸವನ್ನು ಮದ್ರಾಸ ಸರಕಾರದ ಶಿಕ್ಷಣ ಖಾತೆಯು ಅವರಿಗೆ ಒಪ್ಪಿಸಿಕೊಟ್ಟಿತ್ತೆಂಬುದನ್ನು ಗಮನಿಸಬೇಕು.

ಕ್ರಿ.ಶ. ೧೮೭೨ನೆಯ ಇಸವಿಯು ಕಿಟೆಲರ ಸಾಹಿತ್ಯ ಜೀವನದಲ್ಲಿ ಮಹತ್ವದ್ದು.

ಆ ವರ್ಷ ಅವರು 'ಶಬ್ದಮಣಿದರ್ಪಣ'ವನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಹೊರತಂದರು. ಅವರ ಕೋಶ, ವ್ಯಾಕರಣದ ಅಧ್ಯಯನ, ಸಂಶೋಧನೆಗಳಿಗೆ ಇದುವೆ ತಾಯಿಬೇರಿ-ನಂತಿದೆ. ಆ ಅರ್ಥದಲ್ಲಿ ಕೇಶಿರಾಜನೇ ಕಿಟೆಲರ ಗುರು!

ಕ್ರಿ.ಶ. ೧೮೭೨ಕ್ಕೆ ಮೊದಲು ಕೆಲವು ಹಳಗನ್ನಡ ಕೃತಿಗಳು ಪ್ರಕಟವಾಗಿದ್ದರೂ ಶಾಸ್ತ್ರೀಯ ದೃಷ್ಟಿಯನ್ನಿಟ್ಟುಕೊಂಡು, ಆಧುನಿಕ ರೀತಿಯಲ್ಲಿ ಸಂಪಾದಿತವಾದ ಮೊತ್ತಮೊದ-ಲಿನ ಪ್ರಕಟನೆಯೆಂದರೆ ಶಬ್ದಮಣಿದರ್ಪಣದ ಈ ಆವೃತ್ತಿಯೇ ಸೈ. ವಿವಿಧ ಹಸ್ತಪ್ರತಿಗಳ ಕೂಲಂಕಷ ಪರಿಶೀಲನೆ, ಪಾಠಾಂತರಗಳ ಅಡಿಟಿಪ್ಪಣಿ, ಪದ್ಯಭಾಗದ ಸುಸ್ಪಷ್ಟ ರೂಪ, ಸವಿವರ ಪೀಠಿಕೆ, ಅನುಬಂಧ ಈ ಬಗೆಯ ಗ್ರಂಥ ಸಂಪಾದನೆಯ ಮಾರ್ಗವನ್ನು ಕಿಟೆಲ್ ಕನ್ನಡಿಗರಿಗೆ ಪ್ರಥಮತಃ ತೋರಿಸಿಕೊಟ್ಟರು.

ಮೂರು ವರ್ಷಗಳ ಅನಂತರ ಹೊರಬಂದ (ಕ್ರಿ.ಶ. ೧೮೭೫) ನಾಗವರ್ಮನ 'ಛಂದೋಂಬುಧಿ'ಯ ಪರಿಷ್ಕರಣವಾದರೂ ಇದೇ ಮಾದರಿಯದಿದ್ದಿತು. ಆ ಪ್ರಕ-ಟನೆಯ ಇನ್ನೊಂದು ಹೆಚ್ಚಳವೆಂದರೆ ಕನ್ನಡ ಸಾಹಿತ್ಯ ಚರಿತ್ರೆಯ ಕುರಿತ ದೀರ್ಘ ಪ್ರಬಂಧ (Essay on Canarese Literature). ವೈಗ್ಲೆಯ ಇದೇ ವಿಷಯಕವಾದ ಬರಹಕ್ಕಿಂತ ಇದು ಹೆಚ್ಚು ವಿಷಯಗಳನ್ನೊಳಗೊಂಡಿದ್ದು, ಕನ್ನಡ ಸಾಹಿತ್ಯದ ಸಮಷ್ಟಿ-ರೂಪದ ಚಿತ್ರಣವನ್ನು ಕೊಡುತ್ತದೆ.

ಕಿಟೆಲ್ ದ್ರಾವಿಡ ಭಾಷಾ ಲಿಪಿಗಳ ಅಕ್ಷರೀಕರಣಕ್ಕೆ (transcription) ಸಂಬಂ-ಧಿಸಿದ ಚಿಕ್ಕ ಆದರೆ ಮಹತ್ವಪೂರ್ಣ ಲೇಖವೊಂದನ್ನು ಜರ್ಮನ್ ಭಾಷೆಯಲ್ಲಿ ಬರೆದಿದ್ದಾರೆ (Umschreibung der Sogennanten drabida Alphabete – 1875). ಅದರಂತೆ ದ್ರಾವಿಡ ಅಂಕಿಗಳು, ಸಂಸ್ಕೃತ ಧಾತು ಪಾಠಗಳಲ್ಲಿಯ ದ್ರಾವಿಡ ಅಂಶಗಳು– ಇವನ್ನೂ ವಿವಿಧ ಇಂಗ್ಲಿಷ್, ಜರ್ಮನ್, ಲೇಖಗಳ ಮೂಲಕ ಕಿಟೆಲ್ ವಿಶದಗೊಳಿ-ಸಿದ್ದಾರೆ.

ಕ್ರಿ.ಶ. ೧೮೭೨ನೆಯ ಇಸವಿಯಲ್ಲಿ 'ಇಂಡಿಯನ್ ಎಂಟಿಕ್ವೆರಿ' ಪತ್ರಿಕೆಯು ಜನ್ಮ ತಾಳಿತು. ಅದರಿಂದ ಕಿಟೆಲರ ಸಂಶೋಧನೆಗೆ ಚಾಲನೆ ದೊರೆಯಿತು. ಅದರಲ್ಲಿ ಅವರ ಹಲವು ಸಣ್ಣ—ದೊಡ್ಡ ಬರೆಹಗಳು ಪ್ರಕಟವಾಗಿದ್ದು, ಅವು ದ್ರಾವಿಡ—ಆರ್ಯನ್ ಶಬ್ದಗಳ ತುಲನೆ, ಕೊಡಗಿನ ಜೀವನ ಮತ್ತು ಕನ್ನಡ ವಾಙ್ಮಯದ ಕೆಲ ವಿಚಾರಗಳಿಗೆ ಸಂಬಂಧಿಸಿವೆ. ವಾಙ್ಮಯ ವಿಚಾರದ ಬರಹಗಳು ಹೆಚ್ಚಾಗಿ ಅನುವಾದಗಳು: ಸರ್ವಜ್ಞ ವಚನ, ವೀರಶೈವ ಶರಣರು, ವೈಷ್ಣವ ದಾಸರ ಪರಿಚಯ ಇತ್ಯಾದಿ. ನಿಜಗುಣ ಶಿವಯೋಗಿಗಳು ತಮ್ಮ 'ವಿವೇಕ ಚಿಂತಾಮಣಿ'ಯಲ್ಲಿ ಸಂಗೀತದ ಬಗ್ಗೆ ವ್ಯಕ್ತಪಡಿಸಿದ ವಿಚಾರಗಳನ್ನು ಕಿಟೆಲ್ ಅನುವಾದಿಸಿದ್ದುದು ಮಹತ್ವದ ಕೆಲಸವಾಗಿದೆ. ಅಷ್ಟೇ ಗಣನೀಯವಾದ ಇನ್ನೊಂದು ಲೇಖದಲ್ಲಿ ರೈಸ್ ಹೊರತಂದಿದ್ದ 'ಬೆಳತೂರು ಶಾಸನ'ವನ್ನು

ಪುನಃ ಪ್ರಕಟಿಸಿ, ಭಾಷಾಶಾಸ್ತ್ರ, ಛಂದಸ್ಸುಗಳ ದೃಷ್ಟಿಯಿಂದ ಕಿಟೆಲ್ ವಿವೇಚಿಸಿದ್ದಾರೆ. ಶಾಸನಗಳ ಅಭ್ಯಾಸದಲ್ಲಿ ಇದೊಂದು ಹೊಸ ಉಪಕ್ರಮವಾಗಿದೆ.

ಭಾರತೀಯ ತತ್ತ್ವಜ್ಞಾನಕ್ಕೆ ಸಂಬಂಧಿಸಿದ ಕಿಟೆಲರ ಮೂರು ಗ್ರಂಥಗಳು ಯುರೋಪಿಯನ್ ಭಾಷೆಗಳಲ್ಲಿದ್ದ ಮೂಲಕ ಕನ್ನಡಿಗರ ಗಮನಕ್ಕೆ ವಿಶೇಷವಾಗಿ ಬಂದುದಿಲ್ಲ. ಹಿಂದೂ ದೇವರ ಸರ್ವಜ್ಞತ್ವ ಮತ್ತು ಬಹುರೂಪತ್ವಗಳ ಕುರಿತು ಒಂದೆಡೆ ಅವರು ಮಾಡಿದ ಭಾಷಣವು ಪುಸ್ತಕ ರೂಪದಲ್ಲಿ ಪ್ರಕಟವಾಯಿತು (Short survey on the Vedic polytheism and pantheism).ಇವೆರಡನ್ನೂ ಟೀಕಿಸಿದ್ದಾರೆಂದು ಬೇರೆ ಹೇಳಬೇಕಿಲ್ಲ.

ಇದಕ್ಕಿಂತ ಪಾಂಡಿತ್ಯಪೂರ್ಣವಾದ ಕೃತಿಯೆಂದರೆ Tract on Sacrifice ('ಯಜ್ಞ ಸುಧಾನಿಧಿ') ಎಂಬುದು (೧೮೭೨). ಯಜ್ಞಗಳನ್ನೇ ಗಮನದಲ್ಲಿಟ್ಟುಕೊಂಡು ಇದಕ್ಕಿಂತ ಹಿಂದೆ ಯಾರೂ ಸಮಷ್ಟಿಯಾಗಿ ಬರೆದಿರಲಿಲ್ಲ. ಈ ಕುರಿತು ಅಲ್ಲಲ್ಲಿ ಪ್ರಕಟವಾಗಿದ್ದ ಪತ್ರಿಕಾ ಲೇಖನಗಳನ್ನೂ ಕೆಲವು ಮೂಲ ಸಂಸ್ಕೃತ ಗ್ರಂಥಗಳನ್ನೂ ಕಿಟೆಲ್ ಅಭ್ಯಸಿಸಿ ಈ ಗ್ರಂಥವನ್ನು ರಚಿಸಿದ್ದಾರೆ. ಪಾಪಕ್ಷಾಲನೆಗಾಗಿ ಹುಟ್ಟಿದ ಯಜನ ಪದ್ಧತಿಯು ಆರ್ಯ ಹಾಗೂ ಯೆಹೂದ್ಯ ಜನಾಂಗದವರಲ್ಲಿ ಹೇಗೆ ವಿಕಾಸ ಹೊಂದುತ್ತ ಬಂದಿತೆಂಬುದನ್ನು ವಿವೇಚಿಸಿ, ಆಮೇಲೆ ಪ್ರಮುಖವೆನ್ನಬಹುದಾದ ೨೧ ಭಾರತೀಯ ಯಜ್ಞಗ್ಗಳ ಸ್ವರೂಪ, ಸಾಧನೆಗಳನ್ನು ವಿವರಿಸಿ, ಶ್ರೌತ, ಸೂತ್ರ, ಬ್ರಾಹ್ಮಣ, ಸಂಹಿತೆಗಳಿಂದ ಅವನ್ನು ವಿಶದೀಕರಿಸಿದ್ದಾನೆ. ನಿಬಿಡವಾದ ಅಡಿಟಿಪ್ಪಣಿಗಳಿಂದಾಗಿ ವಿಷಯ ವಿವೇಚನೆಯು ಮತ್ತಷ್ಟು ಪರಿಪುಷ್ಟವಾಗಿದೆ. ಇದರ ಮೂಲ ಉದ್ದೇಶವು ಕ್ರೈಸ್ತಮತ ಪ್ರಚಾರಕರಿಗೆ ಯಜ್ಞಕರ್ಮವನ್ನು ಪರಿಚಯ ಮಾಡಿಕೊಡುವುದಾದರೂ ಈ ಕೃತಿಯು ಆಳವಾದ ವ್ಯಾಸಂಗ, ನಿರ್ದುಷ್ಟ ನಿರೂಪಣೆಗಳಿಂದ ಪ್ರಾಮಾಣ್ಯ ಗ್ರಂಥವೆನಿಸಿತಲ್ಲದೆ ಆಗಿನ ಕಾಲದ ವಿದ್ವಾಂಸರ ಪ್ರಶಂಸೆಗೆ ಪಾತ್ರವಾಯಿತು.* ಇವುಗಳಲ್ಲಿ ಹಿಂದೂ ಧರ್ಮದ ವಿಮರ್ಶನವಿದ್ದರೂ ಅವಹೇಳನ ಕಂಡು ಬಂದಿಲ್ಲವೆಂಬುದನ್ನು ಗಮನಿಸಬೇಕು.

ಕಿಟೆಲರ ಇನ್ನೊಂದು ವಿದೇಶೀ ಕೃತಿ ಲಿಂಗಪೂಜೆಯ ಮೂಲವನ್ನು ಕುರಿತದ್ದು (Ueberden Ursprung des Lingakultus in Indien. ೧೮೭೬). ಜೆ. ಸ್ಟೀವೆನ್ಸನ್, ಲಾಸ್ಸೆನ್, ಡಬ್ಲ್ಯೂ. ಜರ್ಮನ್ ಮೊದಲಾದವರು ಲಿಂಗಪೂಜೆಯು ಅನಾರ್ಯರಿಂದ

---

* Though essentially a missionary work, it deserves to be brought to the attention of all interested in India, on account of the mass of information it contains on the ancient Vedic sacrifices... The Indian sacrificial rites are very numerous and often exceedingly complex, they therefore form a very uninviting object of study ... Mr. Kittel's tract will, I think be found the most useful aid to be had at present.—*A.C. Burnell.* ೨೫

ಬಂದದ್ದೆಂದು ಅಭಿಪ್ರಾಯಪಟ್ಟಿದ್ದರು. ದಕ್ಷಿಣ ಭಾರತದಲ್ಲಿ ವಿಶೇಷತಃ ಕರ್ನಾಟಕದಲ್ಲಿ ಶೈವಮತಕ್ಕೂ ಲಿಂಗಪೂಜೆಗೂ ಅನ್ಯೋನ್ಯತೆ ಇರುವುದನ್ನು ಗಮನಿಸಿ, ಕಿಟೆಲ್ ಅದು ಆರ್ಯರಿಂದಲೇ ಉತ್ತರ ಭಾರತದಿಂದ ದಕ್ಷಿಣಕ್ಕೆ ಬಂದುದೆಂದು ತೀರ್ಮಾನಿಸಿದರು. ಮೊದಲು ಸ್ಟೀವೆನ್ಸನ್ ಮೊದಲಾದವರು ಕೊಟ್ಟಿದ್ದ ಕಾರಣಗಳು ದುರ್ಬಲವಾಗಿ-ವೆಯೆಂಬುದನ್ನು ತೋರಿಸಿ ಆಮೇಲೆ ವೇದ ಕಾಲದಿಂದ ಐತಿಹಾಸಿಕ ಕಾಲದ ವರೆಗೆ ಲಿಂಗಪೂಜೆಯ ಪರಂಪರೆಯನ್ನು ವಿವರಿಸಿದ್ದಾರೆ. ಕೊನೆಯಲ್ಲಿ ಅದು ಆರ್ಯರಿಂದಲೇ ಬಂದುದೆಂಬ ಬಗ್ಗೆ ನೇರವಾದ ಪ್ರಮಾಣಗಳನ್ನು ಕೊಟ್ಟಿದ್ದಾರೆ. ಕಿಟೆಲರ ಪ್ರಗಲ್ಭವಾದ ವಿದ್ವತ್ತನ್ನು ನಾವು ಈ ಗ್ರಂಥದಲ್ಲಿ ಕಾಣಬಹುದು.

ಶಬ್ದಾರ್ಥ ವಿಹಾರವು ಕಿಟೆಲರಿಗೆ ಅತ್ಯಂತ ಪ್ರಿಯವಾದ ಅಂಶವಾಗಿದ್ದಿತು. ಕನ್ನಡ ಅಭ್ಯಾಸದ ಆರಂಭದ ದಿನಗಳಲ್ಲಿ ರೀವ್‌ನ ಕೋಶವನ್ನು ಪರಿಶೀಲಿಸಿದಾಗಲೇ ಅದರ ಅಸಮರ್ಪಕತೆಯು ಅವರಿಗೆ ಅವಗತವಾಗಿದ್ದಿತು. ಕನ್ನಡ ಕಾವ್ಯಗಳ ಹಸ್ತಪ್ರತಿಕಾರರು ಶಾಬ್ದಿಕ ತಪ್ಪುಗಳನ್ನು ಮಾಡಿದ್ದಾಗ, ಅದರಿಂದ ಅರ್ಥ ನಿಷ್ಪತ್ತಿಗೆ ಒದಗಿದ್ದ ತೊಡಕುಗಳು ಕಿಟೆಲರಿಗೆ ತಲೆನೋವು ಬರಿಸಿದ್ದವು.

ಇಷ್ಟಲ್ಲದೆ ಹಳಗನ್ನಡ ಕೋಶಕಾರರೂ ವೈಯಾಕರಣಿಗಳೂ ಕನ್ನಡವು ಸಂಸ್ಕೃತ ಜನ್ಯವೆಂದು ಗ್ರಹಿಸಿ ಅನೇಕ ಶಬ್ದಗಳ ಮೂಲವನ್ನು ವಿಪರ್ಯಯವಾಗಿ ಹೇಳಿದ್ದುದನ್ನು ಕಿಟೆಲ್ ಗಮನಿಸಿ ಅದನ್ನು ಸರಿಪಡಿಸಬೇಕೆಂದುಕೊಂಡರು.[೨೬] ಆ ವೇಳೆಗೆ ಕಾಲ್ಡ್-ವೆಲ್‌ನ ದ್ರಾವಿಡ ಭಾಷಾ ಸಿದ್ಧಾಂತವು ನೆಲೆಗೊಂಡಿದ್ದಿತು. ಕಿಟೆಲ್ ಇದೇ ಜಾಡನ್ನು ಹಿಡಿದು ಕನ್ನಡ ದೇಶ್ಯ ಶಬ್ದಗಳ ಸತ್ಯ ಸಂಶೋಧನೆಯನ್ನು ತಮ್ಮ ಕನ್ನಡ ಅಧ್ಯಯನದ ಆರಂಭದ ದಿನಗಳಲ್ಲಿಯೇ ಕೈಕೊಂಡಿದ್ದರೆನ್ನಬಹುದು. ಅದರ ಪ್ರಥಮ ಫಲವು ಅವರ 'ಸಂಣ ಕರ್ನಾಟಕ ಕಾವ್ಯಮಾಲೆ' ಸಂಕಲನದಲ್ಲಿ ಕಂಡು ಬಂದಿತು. ತಮಗೆ ಬಂದ ಸಂದೇಹವನ್ನೂ ಹೊಳೆದ ವಿಚಾರಗಳನ್ನೂ ವ್ಯಕ್ತಪಡಿಸಲು ಇಂಡಿಯನ್ ಎಂಟಿಕ್ವೆರಿ ಪತ್ರಿಕೆಯ ಮೊದಲ ವರ್ಷವೇ ತೊಡಗಿದರು. ಅದರ ಮೇ ೧೮೭೨ರ ಸಂಚಿಕೆಯಲ್ಲಿ ಕಿಟೆಲ್ ವಿದ್ವಾಂಸರ ಮುಂದೆ ಇಟ್ಟ ಸಂದೇಹ ಇಂತಿದೆ:

Query 7: "Can any of the readers of the Antiquary supply information as to when Gunpowder is first used in India and in what native literary work it is first alluded to or mentioned? In old Kanarese dictionaries it bears the partly thadbhava names; balamard, strong powder and ankadaushada; drug of mark."

ಅದೇ ವರ್ಷ ಜುಲೈ ಸಂಚಿಕೆಯಲ್ಲಿ ಇಂಗ್ಲಿಷಿನ elephant ಶಬ್ದದ ಪೂರ್ವಾರ್ಧವು ಕನ್ನಡ (ದ್ರಾವಿಡ) ಶಬ್ದವಾದ 'ಆನೆ' ಎಂಬುದರಿಂದ ಬಂದಿರಬಹುದೆ? 'ಆನೆ'ಯೇ ಸಂಸ್ಕೃತದಲ್ಲಿ ಐರಾವತ ಆಗಿ ಮಾರ್ಪಟ್ಟು ಸಂಸ್ಕೃತದ ಐರಾವತವು ele-phant ಆಗಿರಬಾರದೇಕೆ? ಎಂಬ ಊಹೆಯನ್ನು ಮಂಡಿಸಿದ್ದಾರೆ.

ಸಂಸ್ಕೃತದಲ್ಲಿ ಹೀಗೆ ಸೇರಿರಬಹುದಾದ ನೂರಾರು ದ್ರಾವಿಡ (ಕನ್ನಡ) ಶಬ್ದಗಳ ಪಟ್ಟಿಯನ್ನು ಕಿಟೆಲ್ ಮಾಡಿಕೊಂಡಿರಬೇಕು. ಏಕೆಂದರೆ ಸಂಸ್ಕೃತ ಶಬ್ದಗಳಲ್ಲಿ ಕಂಡು ಬರುವ ಇಂಥ ಶಬ್ದಗಳಲ್ಲಿ ಅ ಮತ್ತು ಆ ಅಕ್ಷರಗಳಿಂದ ಆರಂಭವಾದವುಗಳನ್ನು ಮಾತ್ರ ಕಿಟೆಲ್ I.A. ಪತ್ರಿಕೆಯ ಆಗಸ್ಟ್ ೧೮೭೨ರ ಸಂಚಿಕೆಯಲ್ಲಿ ವಿವರಿಸಿದ್ದಾರೆ. ಅದರ ಮುಂದಿನ ಎಂದರೆ ಇ, ಈ,..... ಕ ಇತ್ಯಾದಿ ಅಕ್ಷರಾರಂಭದ ಶಬ್ದಗಳನ್ನು ಕಿಟೆಲ್ ಪ್ರಕಟಿಸಲಿಲ್ಲ. ಆ ಲೇಖನಾವಳಿಯನ್ನು ಹೀಗೆ ನಿಲ್ಲಿಸಿದುದರ ಮುಖ್ಯ ಕಾರಣವೆಂದರೆ ೧೮೭೩ರ ಸುಮಾರಿಗೆ ಒಂದು ಅಧಿಕೃತ ಕನ್ನಡ-ಇಂಗ್ಲಿಷ್ ಶಬ್ದಕೋಶವನ್ನು ಸಿದ್ಧಪಡಿಸುವುದಕ್ಕೆ ಕಿಟೆಲರಿಗೆ ಆಹ್ವಾನ ಬಂದಿತು.* ಈ ಮಹಾ ಯೋಜನೆಗೆ ಮುಂದಾಗಲು ಆಗ ಸ್ವದೇಶದಲ್ಲಿದ್ದ ವೃದ್ಧ ಮೊವ್‌ಗ್ಲಿಂಗ್ ಪ್ರೇರಕರಾಗಿದ್ದರು. ಇಂಗ್ಲೆಂಡಿನಲ್ಲಿದ್ದ ವಾಲ್ಟರ್‌ಎಲಿಯೆಟ್ ಬೆಂಬಲ ನೀಡಿದ್ದರು.

ತನ್ನ ಕಾರ್ಯವನ್ನು ಆರಂಭಿಸಲು ಕಿಟೆಲರಿಗೆ ಗುಂಡರ್ಟರ ಮಲೆಯಾಳೀ ಶಬ್ದಕೋಶದ ಮಾದರಿಯು ಹೇಗೂ ಇದ್ದಿತು. ಮೊದಲಿಗೆ ಸುಮಾರು ೩೬ ಹಳಗನ್ನಡ ಕೃತಿಗಳನ್ನು ಪರಿಶೀಲಿಸಿ ಅದರಲ್ಲಿಯ ಅನೇಕಾನೇಕ ಶಬ್ದಗಳನ್ನು ಅವುಗಳ ಪ್ರಯೋಗ ಸಹಿತವಾಗಿ ಬರೆದು ತೆಗೆದರು. ಜೊತೆಗೆ ರೀವ್ ಕೊಟ್ಟಿದ್ದ ಎಲ್ಲ ಶಬ್ದಗಳನ್ನೂ ಬೇರೆ ಕನ್ನಡ ಕೋಶಗಳಲ್ಲಿರುವವುಗಳನ್ನೂ ಸಂಕಲಿಸಿದರು. ಈ ಹಿಂದೆ ಸ್ವಂತವಾಗಿ ಸಂಗ್ರಹಿ-ಸಿದ್ದವುಗಳನ್ನು ಸೇರಿಸಿದರು. ಸಹೋದ್ಯೋಗಿಯಾದ ತ್ರಿಗ್ಲರ್ ಮತ್ತು ವಸ್ತ್ರದ ಶಿವ-ಲಿಂಗಯ್ಯ (ಹುಬ್ಬಳ್ಳಿಯಲ್ಲಿ ಶಾಲಾ ಶಿಕ್ಷಕ) ಇವರು ಉತ್ತರ ಕರ್ನಾಟಕದ ಅನೇಕ ಶಬ್ದಗಳ ಪಟ್ಟಿಯನ್ನು ಪೂರೈಸಿದರು. ಇಂತು ಹಳಗನ್ನಡ ಗ್ರಂಥಸ್ಥ ಶಬ್ದಗಳಲ್ಲದೆ ಜನಬಳಕೆಯ ಹಾಗೂ ಶಾಸ್ತ್ರ ವಿಷಯಗಳಿಗೆ ಸಂಬಂಧಪಟ್ಟ ಶಬ್ದಗಳೂ ಒಂದೆಡೆ ಸಮುದಾಯಗೊಂಡವು.

ಈ ಮಧ್ಯೆ ೧೮೭೮ರಲ್ಲಿ ಕಿಟೆಲರ ಪ್ರಕೃತಿ ಅಸ್ವಸ್ಥಗೊಳ್ಳಲು, ಸ್ವದೇಶಕ್ಕೆ ಹೋದರು. ಆಗಲೂ ಅವರು ಕೋಶದ ಕಾರ್ಯವನ್ನು ಮುಂದುವರಿಸಿದರು. ಆದರೆ ಅನೇಕ ಶಬ್ದಾರ್ಥಗಳ ಸತ್ಯತೆಯನ್ನು ನಿರ್ಧರಿಸಲು ಪಂಡಿತರೊಡನೆ ಚರ್ಚಿಸುವುದಕ್ಕಾಗಿ ಭಾರತಕ್ಕೆ ಬರುವುದು ಅವಶ್ಯವೆನಿಸಿತಾದ್ದರಿಂದ ೧೮೮೩ರಲ್ಲಿ ಮರಳಿ ಮಂಗಳೂರಿಗೆ ಬಂದರು.

---

* ತನ್ನ ಕೋಶದ ಪೀಠಿಕೆಯಲ್ಲಿ ಕಿಟೆಲ್ ಬಾಸೆಲ್ ಮಿಶನ್‌ನ ಆದೇಶದ ಮೇರೆಗೆ ಇದು ರಚಿತವಾಯಿತು ಎನ್ನುತ್ತಾರೆ. ಆದರೆ ಎ.ಎನ್. ನರಸಿಂಹಯ್ಯನವರು, ''ಬ್ರಿಟಿಶ್ ಸರಕಾರದ ಅಧಿಕಾ-ರಿಗಳು ಅವರ ಸಾಮರ್ಥ್ಯವನ್ನರಿತು ತಾವು ಬರೆಸಬೇಕಾಗಿದ್ದ ನಿಘಂಟನ್ನು ರಚಿಸಲು ಅವರೇ ಅರ್ಹರೆಂದು ತೀರ್ಮಾನಿಸಿದರು. ..... ಕಿಟೆಲ್‌ರವರನ್ನು ತಮ್ಮಲ್ಲೇ ಅಧಿಕಾರಕ್ಕೆ ತೆಗೆದುಕೊಳ್ಳುವುದಾಗಿ ಹೇಳಿದರು. ಅವರು ಒಪ್ಪಲಿಲ್ಲ'' ಎಂದು ಬರೆದಿದ್ದಾರೆ.[೨೩] ಇದೇನಿದ್ದರೂ ಬ್ರಿಟಿಶ್ ಸರಕಾರದವರು ಇದರಲ್ಲಿ ಸಕ್ರಿಯ ಆಸ್ಥೆಯನ್ನು ವಹಿಸಿದ್ದರಲ್ಲದೆ ವ್ಯಾಸಂಗಕ್ಕಾಗಿ ಗ್ರಂಥ ಸಹಾಯವನ್ನೂ, ಮುದ್ರಣಕ್ಕಾಗಿ ಆರ್ಥಿಕ ನೆರವನ್ನೂ ಒದಗಿಸಿದ್ದಾರೆ. ಈ ಕುರಿತ ಅಧಿಕೃತ ವಿವರಗಳಿಗಾಗಿ ಕೆ.ಎಂ. ಮ್ಯಾಥ್ಯೂ ಅವರ 'ರೆ. ಎಫ್. ಕಿಟೆಲ್' ಗ್ರಂಥವನ್ನು ನೋಡಬಹುದು.

ಸಂಗ್ರಹಿಸಿದ ಅನೇಕ ಹೊಸ ಶಬ್ದಗಳು ಕನ್ನಡದಲ್ಲಿ ಹಿಂದೆ ಆಗಲೀ, ಇಂದಾಗಲೀ ಬಳಕೆಯಲ್ಲಿದ್ದವುಗಳೆ, ಎಂಬುದನ್ನು ತಿಳಿಯಲೋಸುಗ ಪ್ರಯೋಗಗಳನ್ನು ಹುಡುಕಿಕೊಂಡು ಹೋಗುವ ಪ್ರಯತ್ನ ನಡೆಯಿತು. ಉತ್ತರ ಕರ್ನಾಟಕದ ಇತರ ಭಾಗಗಳಿಂದ ಇನ್ನೂ ಹೆಚ್ಚಿನ ಪ್ರಯೋಗಗಳನ್ನು ಸಂಗ್ರಹಿಸಲಾಯಿತು. ಆದರೆ ಮೈಸೂರು ಸಂಸ್ಥಾನದಲ್ಲಿಯ ಬಳಕೆಯ ದೃಷ್ಟಿಯಿಂದ ಅದುವರೆಗಿನ ಶಬ್ದಸಂಗ್ರಹವನ್ನು ಒರೆಗೆ ಹಚ್ಚಲು ಸಾಧ್ಯವಾಗ-ಲಿಲ್ಲ. ಬಾಸೆಲ್ ಮಿಶನ್ನಿನ ಕೇಂದ್ರಗಳಾವುವೂ ಆ ಭಾಗದಲ್ಲಿ ಇರಲಿಲ್ಲ ತಾನೆ. ಹೀಗಾಗಿ ಕಿಟೆಲ್ ಮಡಿಕೇರಿಯಲ್ಲಿದ್ದಾಗ ಮೈಸೂರು ಕಡೆಯ ಓರ್ವ ಶಾಸ್ತ್ರಿಯನ್ನು ಇದಕ್ಕಾಗಿ ನಿಯಮಿಸಿಕೊಂಡನು. ಅವನೋ "ಹೌದು ಸ್ವಾಮೀ, ಇದು ನಮ್ಮ ಭಾಗದಲ್ಲಿ ಇದೆ" ಎಂದು ಹೇಳಿಬಿಡುವ ಯುಕ್ತಾಯುಕ್ತ ಜ್ಞಾನವಿಲ್ಲದವನೆಂದು ಕಂಡು ಬಂದಿತು. ಮಂಗಳೂ-ರಿಗೆ ಬಂದು ಮುದ್ರಣಕ್ಕೆಂದು ಹಸ್ತಪ್ರತಿಯನ್ನು ಕೈಗೆತ್ತಿಕೊಂಡಾಗ ಮಾತ್ರ ಮೈಸೂರಿನ ಯೋಗ್ಯ ವಿದ್ವಾಂಸನೊಬ್ಬ ಕಿಟೆಲರಿಗೆ ದೊರಕಿದ. ಅವನ ಹೆಸರು ಎಂ.ಸಿ. ಶ್ರೀನಿವಾ-ಸಾಚಾರ್ಯ. ಅವನ ಸಲಹೆಯ ಮೇರೆಗೆ ಅಪ್ರಯೋಜಕ ಪದಗಳನ್ನೆಲ್ಲ ತೆಗೆದುಹಾ-ಕುವ ಕೆಲಸ ನಡೆಯಿತಾದ್ದರಿಂದ ಮುದ್ರಣ ಕಾರ್ಯವು ತುಸು ತಡೆಯಿತು. ಇವರ ಮಧ್ಯದಲ್ಲಿಯೆ ತೀರಿಕೊಂಡ ಶ್ರೀನಿವಾಸಾಚಾರ್ಯನ ನೆರವನ್ನು ಕಿಟೆಲ್ ಬಹುವಾಗಿ ನೆನೆದಿದ್ದಾರೆ.

ಶಬ್ದಗಳ ಸಂಗ್ರಹದಲ್ಲಿ ಯಾರೇ ನೆರವಾಗಿರಲಿ ಅವುಗಳ ಅರ್ಥನಿರ್ಣಯ, ಪ್ರಯೋಗಗಳು, ವ್ಯುತ್ಪತ್ತಿ, ದ್ರಾವಿಡ ಸಮಾನಪದ ಸೂಚನೆ ಮುಂತಾದ ಅಂಶಗಳು ಕಿಟೆಲ್‌ರಿಂದಲೇ ನಿರ್ಣೀತವಾದುವು. ಒಟ್ಟಿನ ಕೆಲಸವೆಲ್ಲ ಮುಗಿದು ಹಸ್ತಪ್ರತಿಯು ಸಿದ್ಧವಾಗಲು ೧೫ ವರ್ಷಗಳು ಹಿಡಿದುವು (೧೮೭೩–೧೮೮೮). ಈ ಅವಧಿಯಲ್ಲಿ ನಿತ್ಯ ನೈಮಿತ್ತಿಕ ಮಿಶನರಿ ಕಾರ್ಯದಿಂದ ಅವರನ್ನು ಬಹುಮಟ್ಟಿಗೆ ಬಿಡುಗಡೆ ಮಾಡಲಾ-ಗಿದ್ದಿತು. ಹಸ್ತಪ್ರತಿಯು ಸಿದ್ಧವಾದಾಗಲೂ ಅದನ್ನು ತಿದ್ದುವ ಕೆಲಸವು ನಡೆಯಿತು. ಇಷ್ಟಾಗುವಾಗ ಕಿಟೆಲ್‌ರ ಕಣ್ಣಿನ ನರಗಳ ಶಕ್ತಿಯು ಕುಂಠಿತವಾಗತೊಡಗಿತ್ತಾದರೂ ಅಚ್ಚಿನ ಕರಡನ್ನು ತಿದ್ದಿ ಗ್ರಂಥವನ್ನು ಮುಗಿಸಿಯೇ ತಾನು ನಿವೃತ್ತನಾಗಬೇಕೆಂದು ನಿಶ್ಚಯಿಸಿದರು.

ಅಚ್ಚಿನ ವಿಚಾರದಲ್ಲಿಯೂ ಅತ್ಯಂತ ಸೂಕ್ಷ್ಮ ಕುಸುರಿಯ ಕೆಲಸ ನಡೆದಿದ್ದಿತು. ಶಬ್ದದ ವಿವಿಧ ವಿವರಣೆಗಳಿಗಾಗಿ ಬೇರೆ ಬೇರೆ ಗಾತ್ರದ ಮೊಳೆಗಳ ಬಳಕೆಯಾಗಬೇಕಷ್ಟೆ. ಸಂಕ್ಷಿಪ್ತಾಕ್ಷರ ಸಂಜ್ಞೆ, ಪೂರ್ಣ ವಿರಾಮಾದಿ ಅವಗ್ರಹ ಚಿಹ್ನೆ—ಇವುಗಳ ಉಪಯೋಗದಲ್ಲಿಯೂ ನಿರ್ದುಷ್ಟತೆಯನ್ನು ಕಾಯ್ದುಕೊಳ್ಳಬೇಕಿದ್ದಿತು. ಇಂಥ ವಿಚಾರದಲ್ಲಿ ಕಿಟೆಲ್ ಎಷ್ಟೊಂದು ಸೂಕ್ಷ್ಮದೃಷ್ಟಿಯುಳ್ಳವನಾಗಿ ಪರಿಶ್ರಮ ಪಡುತ್ತಿದ್ದರೆಂಬುದಕ್ಕೆ ಇದೊಂದು ನಿದರ್ಶನ:

ಅಕ್ಷೋಭ a- Kshobha. Freedom from agitation.

2, unagitated. (My).

ವಿಸ್ಫುಲಿಂಗ vi- sphulinga. A spark of fire.

2, a sort of poison (Bp. 53, 52)

ಮೇಲಿನ ಅಕ್ಷೋಭ ಎಂಬ ಸಂಸ್ಕೃತ ಶಬ್ದದ ೨ನೇ ಅರ್ಥ ಹೇಳಿದ ಮೇಲೆ ಪೂರ್ಣವಿರಾಮ ಕೊಟ್ಟು, ಮುಂದೆ ಮೈಸೂರು ಭಾಗದಲ್ಲಿ ಪ್ರಯೋಗದಲ್ಲಿದೆ ಎಂದು ಸೂಚಿತವಾಗಿದೆಯಷ್ಟೆ. ಅದು ಸರಿ. ಆದರೆ ಅದೇ ವಿಸ್ಫುಲಿಂಗದ ವಿಚಾರದಲ್ಲಿ poison ಇದರ ಮುಂದೆ ಪೂರ್ಣ ವಿರಾಮ ಕೊಡುವುದರಲ್ಲಿ 'ಪ್ರೆಸ್ಸಿನವರು ತಪ್ಪಿದ್ದರಿಂದ' ಬಸವಪುರಾಣದಲ್ಲಿ ಅದರ ಎರಡನೇ ಅರ್ಥದಲ್ಲಿ ಮಾತ್ರ ಪ್ರಯೋಗವಾಗಿದೆ ಎಂಬ ತಪ್ಪು ಅರ್ಥ ಹೊರಡುತ್ತದೆ—ಎಂದು ಕಿಟೆಲ್ ತನ್ನ ಪೀಠಿಕೆಯಲ್ಲಿ ವಿಷಾದ ವ್ಯಕ್ತ ಮಾಡಿದ್ದಾರೆ.

ಕಿಟೆಲ್ ೧೨೭೮ ಪುಟದ ವರೆಗೆ ಎಂದರೆ ಪುಸ್ತಕದ ಮುಕ್ಕಾಲು ಭಾಗದ ವರೆಗೂ ಅಚ್ಚಿನ ಕರಡನ್ನು ತಿದ್ದಿದರು. ದೃಷ್ಟಿಮಾಂದ್ಯವು ಹೆಚ್ಚುತ್ತ ನಡೆಯಿತೆಂಬ ಕಾರಣದಿಂದ ೧೮೯೨ರಲ್ಲಿ ಸ್ವದೇಶಕ್ಕೆ ಹಿಂದಿರುಗಿ ಟ್ಯೂಬಿಂಗೆನ್‌ನಲ್ಲಿ ನೆಲಸಿದರು. ಕರಡನ್ನು ತಿದ್ದುವ ಕಾರ್ಯದಲ್ಲಿ ಶಿವರಾಮ ಭಾರದ್ವಾಜನೆಂಬವನ ನೆರವು ವಿಶೇಷವಾಗಿ ಸಂದಿದೆ. ಮುದ್ರಣವು ಮುಗಿಯುತ್ತ ಬಂದಾಗ ಕಿಟೆಲರ ಪೀಠಿಕೆಯೂ ಪುರವಣಿಯೂ ಬಂದು ತಲುಪಿದವು.

ಮುದ್ರಣ ವೆಚ್ಚದಲ್ಲಿ ಮೈಸೂರು ಸಂಸ್ಥಾನದ ಸರಕಾರವೂ ಪಾಲುಗೊಂಡಿದ್ದಿತು. ಇಂಡಿಯಾ ಸರಕಾರವು ಮುಂಬಯಿ, ಮದ್ರಾಸ ಸರಕಾರಗಳಿಗೂ, ಹೈದರಾಬಾದ್ ಸಂಸ್ಥಾನಕ್ಕೂ ಈ ಕೋಶದ ಹೆಚ್ಚಿನ ಪ್ರತಿಗಳನ್ನು ಕೊಳ್ಳಬೇಕೆಂದು ಆದೇಶವಿತ್ತಿತು.

ಕೋಶವು ಪ್ರಕಟವಾದ ಒಂದೆರಡು ವರ್ಷಗಳಲ್ಲಿಯೇ ಅದು ಕನ್ನಡೇತರರಲ್ಲಿ ವಿಶೇಷ ಮನ್ನಣೆಯನ್ನು ಗಳಿಸಿತು. ಟ್ಯೂಬಿಂಗೆನ್ ವಿಶ್ವವಿದ್ಯಾಲಯವು ೧೮೯೬ರಲ್ಲಿ ಕಿಟೆಲರಿಗೆ 'ಡಾಕ್ಟರ್ ಆಫ್ ಫಿಲಾಸಫಿ' ಎಂಬ ಗೌರವ ಪದವಿಯನ್ನು ಸಲ್ಲಿಸಿತು. ಕನ್ನಡದ ಕಾರ್ಯಕ್ಕೆ ಸಂದ ಎರಡನೆಯ ಡಾಕ್ಟರೇಟ್ ಪದವಿಯಿದು! (ಮೊದಲನೆಯವರು ಹರ್ಮನ್ ಮೊಗ್ಲಿಂಗ್‌ರು) ಅಲ್ಲದೆ ಅದನ್ನು ವಿದೇಶದ ವಿಶ್ವವಿದ್ಯಾಲಯಮೊಂದು ಕೊಡಮಾಡಿತೆಂದರೆ ಅಭಿಮಾನದ ಸಂಗತಿಯಾಗಿದೆ.* ಇದು ಜರ್ಮನ್–ಕನ್ನಡ ಭಾಷಾ ಬಾಂಧವ್ಯದ ಪ್ರತೀಕವೂ ಆಗಿದೆ ಎಂದು ಹೇಳಬಹುದು.

---

* ಕನ್ನಡಕ್ಕಾಗಿ ದುಡಿದ ಮೊಗ್ಲಿಂಗ್, ವೈಗ್ಲೆ ಮತ್ತು ಸ್ವಲ್ಪಮಟ್ಟಿಗೆ ಗುಂಡರ್ಟ್ ಈ ಮೂವರು ಟ್ಯೂಬಿಂಗೆನ್‌ನ ಪದವೀಧರರೇ. ಆ ನಿಮಿತ್ತದಿಂದ ಈ ವಿಶ್ವವಿದ್ಯಾಲಯಕ್ಕೆ ಕನ್ನಡ ಸಂಪರ್ಕ ಬಂದುದಾಗಿದೆ. ಕನ್ನಡ ಸಾಹಿತ್ಯದ ಕುರಿತಾದ ಲೇಖನವನ್ನು ವೈಗ್ಲೆ ಮೊದಲಿಗೆ, ಟ್ಯೂಬಿಂಗೆನ್‌ನ ತನ್ನ ಪ್ರೊಫೆಸರರಿಗೆ ಕಳಿಸಿಕೊಟ್ಟಿದ್ದು, ಅವರ ಮುಖಾಂತರವೆ. ZDMGಯಲ್ಲಿ ಆ ಲೇಖ ಪ್ರಕಟವಾಯಿತು.

ಆ ದೇಶದ ಪ್ರಾಚ್ಯ ವಿಷಯದಲ್ಲಿಯ ಲೇಖಕರು ಭಾರತದ ಸಂಸ್ಕೃತದ ಅನಂತರ ಕನ್ನಡವನ್ನೇ ಹೆಚ್ಚಾಗಿ ಅಭ್ಯಾಸ ಮಾಡಿದ್ದರೆಂದು ಹೇಳಬಹುದು.

ಭಾರತದಲ್ಲಿಯೂ ಕಿಟೆಲ್ ಕೋಶವು ಕ್ರಮೇಣ ಮೆಚ್ಚುಗೆಯನ್ನು ಪಡೆಯಿತು. 'ಇಷ್ಟು ಖಚಿತವೂ ಶಾಸ್ತ್ರೀಯವೂ ನಿಯಮಬದ್ಧವೂ ಆದ ನಿಘಂಟು ಭರತಖಂಡದ ಯಾವ ದೇಶಭಾಷೆಗೂ ಇಲ್ಲ ಎಂದು ಬಲ್ಲವರು ಹೇಳುತ್ತಾರೆ.[೨೮] "It will remain a monumentum aere perennius of a noble life devoted to incessant earnest labour"— ಎಂದಿದ್ದಾನೆ ಹಲ್ಷ್.[೨೯] ಈ ಕೋಶದ ವಿಮರ್ಶೆಯನ್ನು ಬರೆಯುತ್ತ ಫ್ಲೀಟ್ ಕೆಲವು ನ್ಯೂನತೆಗಳನ್ನು ತೋರಿಸಿರುವರಾದರೂ...... "Every page of it and of its preface, bears witness to the constant care; earnestness and thoroughness with which Mr. Kittel devoted himself to the task that lay before him. It would have been difficult to find any one more competent to undertake that task"— ಎಂಬುದಾಗಿ ಮುಕ್ತಕಂಠದಿಂದ ಹೊಗಳಿದ್ದಾರೆ.[೩೦]

ಟ್ಯೂಬಿಂಗೆನ್ ವಿಶ್ವವಿದ್ಯಾಲಯದ ಗೌರವ ಸಂದಾಗ ಕಿಟೆಲರಿಗೆ ೭೫ ವರ್ಷ. ಕಣ್ಣಿನ ನಿಶ್ಶಕ್ತಿಯಿಂದ ಹೆಚ್ಚಿನ ಕೆಲಸ ಮಾಡಲಾಗದಿದ್ದರೂ ಸುಮ್ಮನೆ ಕೂಡ್ರುವ ಜೀವವಲ್ಲ. ಆಗೀಗ ಮತಪ್ರಚಾರಕ್ಕೆ ಸಂಬಂಧಿಸಿದ ಲೇಖನಗಳನ್ನು ಜರ್ಮನ್ ಪತ್ರಿಕೆಗಳಲ್ಲಿ ಬರೆಯುತ್ತಿದ್ದರು. ಈ ವೇಳೆಗೆ ಕನ್ನಡ ಬೈಬಲಿನ ದ್ವಿತೀಯ ಪರಿಷ್ಕರಣ ಕಾರ್ಯ ಆರಂಭವಾಗಿದ್ದಿತು. ಕಿಟೆಲ್ ಆಗ ಭಾರತದಲ್ಲಿ ಇದ್ದಿರಲಿಲ್ಲವಾದ್ದರಿಂದ ಸೂಚಿತವಾದ ಕರಡನ್ನು ಅವರಿದ್ದಲ್ಲಿಗೇ ಕಳಿಸಿಕೊಡಲಾಯಿತು (ಸು. ೧೯೦೦). ಆಗ ಅವರು ಮಾಡಿದ್ದ ಸೂಚನೆ, ತಿದ್ದುಪಡಿಗಳ ಹಸ್ತಪ್ರತಿಯ ಕೆಲವೊಂದು ಭಾಗವು ಈಚೆಗೆ ಬಾಸೆಲ್‌ನಲ್ಲಿ ದೊರೆತಿದೆ. ಕನ್ನಡ ಶಬ್ದ ಹಾಗೂ ವ್ಯಾಕರಣ ವಿಷಯಕವಾದ ಅವರ ಪರಿಣತ ಜ್ಞಾನವು ಅವರು ಮಾಡಿದ ಸಲಹೆಗಳಲ್ಲಿ ಎದ್ದು ತೋರುತ್ತದೆ.

ನಿಘಂಟು ರಚನೆಯ ಪೂರ್ವದಲ್ಲಿಯೇ ಎಂದರೆ ಕೇಶಿರಾಜನ ಶಬ್ದಮಣಿದರ್ಪಣದ ಅಧ್ಯಯನ, ಸಂಪಾದನೆಯ ಸಮಯದಲ್ಲಿ ಕಿಟೆಲ್ ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದಂತೆ ಇಂಗ್ಲಿಷಿನಲ್ಲಿ ವಿವರವಾದ ಟಿಪ್ಪಣಿಗಳನ್ನು ಮಾಡಿಟ್ಟುಕೊಂಡಿದ್ದರು. ಮಿಶನರಿ ಸಹೋದ್ಯೋಗಿಗಳ ಪ್ರಯೋಜನಕ್ಕೆ ಅದು ಒದಗಬೇಕೆಂಬುದೂ ಅವರ ಆಶಯವಾಗಿದ್ದಿತು. ಅದನ್ನು ಪರಿಷ್ಕರಿಸಿ ೧೯೦೨ರಲ್ಲಿ ಪ್ರಕಟನೆಗೆ ಕೊಡಲಾಯಿತು. ಹಾಗೆ ಮಾಡುವಲ್ಲಿ ಫ್ಲೀಟ್ ಕಿಟೆಲ್ ಕೋಶದ ವಿಮರ್ಶೆ ಮಾಡುತ್ತ ಹೇಳಿದ ಈ ಮಾತುಗಳೂ ಕಾರಣವಾಗಿರಬಹುದು:

"We now have available for the study of Kanarese in its ancient and mediaeval forms, a dictionary of the most exhaustive and useful kind. We

still require a complete and critical grammar in English for the same periods and also with the exceptional forms which sometimes are met with in our epigraphic records. It is to be hoped that Mr. Kittel may find himself able now to take such a grammar in hand and supply the want that has so long been felt in this direction." [೩೧]

ಈ ಗ್ರಂಥದಲ್ಲಿ ಕಿಟೆಲ್ ಹಳಗನ್ನಡ, ನಡುಗನ್ನಡ, ಮತ್ತು ಹೊಸಗನ್ನಡ ಈ ಮೂರು ಘಟ್ಟಗಳಲ್ಲಿ ವ್ಯಾಕರಣ ನಿಯಮಗಳು ಅದೆಂತು ಮಾರ್ಪಟ್ಟಿವೆಯೆಂಬುದನ್ನು ಅಸಂಖ್ಯ ಉದಾಹರಣೆಗಳೊಂದಿಗೆ ತೋರಿಸಿದ್ದಾರೆ. ಸಾಧಿತ ರೂಪಗಳ ಪ್ರಾದೇಶಿಕ ಭೇದಗಳನ್ನು ಗುರುತಿಸಿದ್ದಾರೆ. ಫ್ಲೀಟ್ ಅಪೇಕ್ಷಿಸಿದ ಶಾಸನ ಶಬ್ದಗಳ ಪ್ರಕ್ರಿಯೆಗಳೂ ಇದರಲ್ಲಿ ವಿವೇಚಿಸಲ್ಪಟ್ಟಿವೆ. ದ್ರಾವಿಡ ಭಾಷಾ ವಿಚಾರಗಳೂ ತೌಲನಿಕವಾಗಿ ವ್ಯಕ್ತವಾ-ಗಿವೆ. ಅಲ್ಲಲ್ಲಿ ಅವರ ಸ್ವತಂತ್ರ ವಿಚಾರ ಸರಣಿಯನ್ನು ನಾವು ಕಾಣುತ್ತೇವೆ. ಇಷ್ಟರ ಮಟ್ಟಿಗಿನ ಸವಿಸ್ತಾರದ ಪ್ರತಿಪಾದನೆಯು ಈ ಹಿಂದಿನ ಯಾವ ವ್ಯಾಕರಣದಲ್ಲಿಯೂ ಇರಲಿಲ್ಲ. ಕನ್ನಡದ ಮಟ್ಟಿಗೆ ಇಂದಿಗೂ ಇದೊಂದು ಸರ್ವಾಂಗೀಣ ವ್ಯಾಕರಣ ಗ್ರಂಥ-ವೆನಿಸಿದೆ.

ಇದರ ಮುದ್ರಣ ಮುಗಿದ ಮೇಲೆ ಅದರ ಒಂದು ಪ್ರತಿಯನ್ನು ಕಿಟೆಲರ ವಿಳಾಸಕ್ಕೆ ಹಡಗಿನ ಮೂಲಕ ಕಳುಹಿಸಲಾಯಿತು. ಅದು ತಲುಪಿದ ಸಂಜೆ ಅವನ ಪರಿವಾರದವರು ಸುತ್ತುವರಿದು ಈ ಹೊಸ ಕೃತಿಯನ್ನು ನೋಡಿ ಸಂತೋಷಪಟ್ಟರು. ಕಿಟೆಲ್ ಈ ಪ್ರಕಟನೆಯ ಸುದ್ದಿಯನ್ನು ಬಾಸೆಲ್‌ನ ವರಿಷ್ಠ ಕೇಂದ್ರಕ್ಕೆ ತಿಳಿಸುತ್ತ ಅಂದೇ ಪತ್ರ ಬರೆದರು. ಅದರಲ್ಲಿ ಅವರು ಕನ್ನಡ ಬೈಬಲಿನ ನವೀಕರಣದ ಬಗ್ಗೆ ಕೆಲವು ಸಲಹೆಗಳನ್ನು ಮಾಡಿದ್ದರಂತೆ.[೩೨] ಮರುದಿನ ತಿರುಗಾಡಿಕೊಂಡು ಬಂದಾಗ ದೇಹಾಲಸ್ಯವುಂಟಾಯಿತಂತೆ. ಅಂದೇ ಇಹಲೋಕವನ್ನು ತ್ಯಜಿಸಿದರು.

ಹಳಗನ್ನಡ ಕಾವ್ಯ ವ್ಯಾಸಂಗಕ್ಕೆ ನೆರವಾಗಬೇಕಾದ ಎಲ್ಲ ಬಗೆಯ ಕೃತಿಗಳನ್ನು (ಕೋಶ, ವ್ಯಾಕರಣ, ಛಂದಸ್ಸು, ಅಲಂಕಾರ) ರಚಿಸಿದ ಇಮ್ಮಡಿ ನಾಗವರ್ಮನ ಕಾರ್ಯವನ್ನೆ ಕಿಟೆಲ್ ಹೊಸಗನ್ನಡ ಕಾಲದಲ್ಲಿ ಮಾಡಿದರೆಂದು ಹೇಳಬಹುದು. ಕನ್ನಡ ಭಾಷೆಯ ಪುನರುಜ್ಜೀವನ ಕಾರ್ಯವನ್ನು ಕೈಕೊಳ್ಳಲೆಂದು ದೇವರಿಂದ ಅನುಜ್ಞೆಯನ್ನು ಪಡೆದವರಂತೆ, ಇಲ್ಲಿಗೆ ತರುಣ ವಯಸಿನಲ್ಲಿ ಬಂದು ನಾಲ್ಕು ದಶಕಗಳ ಕಾಲ ಅದಕ್ಕಾಗಿ ಶ್ರಮಿಸಿ ಕೃತಕೃತ್ಯರಾದರು. ಕಿಟೆಲರ ಕಾರ್ಯವು ಪ್ರಪಂಚದಲ್ಲಿ ಕನ್ನಡದ ಸೊಲ್ಲು ಕೇಳಬರುವ ಪರ್ಯಂತ ಸ್ಥಿರವಾಗಿ ಉಳಿಯುವಂತಹದಾಗಿದೆ.

'ಅರುಣೋದಯ'ದಲ್ಲಿ ಕಿಟೆಲ್ ಬಗ್ಗೆ ಮೇಲಣ ಅಂಶಗಳನ್ನು ಬರೆದಾದ ಮೇಲೆ (೧೯೭೫) ನಾಲ್ಕು ಬಾರಿ ನಾನು ಬಾಸೆಲ್‌ಗೆ ಹೋಗಿದ್ದೆ. ಆಗೆಲ್ಲ ಅಷ್ಟಿಷ್ಟು ದಾಖಲೆಗಳನ್ನು

ತಂದದ್ದನ್ನು, ಕಿಟೆಲ್ ಕುರಿತು ಪಿಎಚ್.ಡಿ ಮಟ್ಟದಲ್ಲಿ ವ್ಯಾಸಂಗ ನಡೆಸಿದ್ದ ನನ್ನ ತರುಣ ಮಿತ್ರ ಡಾ|| ಕೆ.ಎಂ. ಮ್ಯಾಥ್ಯೂರಿಗೆ ಕೊಟ್ಟಿದ್ದೆ. ಆಕರ ಸಾಮಗ್ರಿ ನನ್ನದು; ಅದನ್ನು ಸಮರ್ಥವಾಗಿ ಬಳಸಿಕೊಂಡ ಯಶಸ್ಸು ಅವರದು. (ಉದಾಹರಣೆಗೆ ಕಿಟೆಲ್ ಕೋಶದ ಆರ್ಥಿಕ ವಿಚಾರ) ಈಚೆಗೆ ದೊರೆತ ಇನ್ನೂ ಅಷ್ಟು ಅಪೂರ್ವ ವಿವರಗಳಿದ್ದು ಅವನ್ನು ಇಲ್ಲಿಯ ಅನುಬಂಧ (೪)ರಲ್ಲಿ ಕೊಟ್ಟಿದೆ. ಇದಲ್ಲದೆ ಇನ್ನೂ ಹೆಚ್ಚು ಪರಿಪೂರ್ಣವಾದ ಅದರ ಚರಿತ್ರೆಯನ್ನು ಕೇಂದ್ರ ಸಾಹಿತ್ಯ ಅಕಾಡೆಮಿಯು ನನ್ನಿಂದ ಬರೆಯಿಸಿ ಪ್ರಕಟಿಸಿದೆ. (೨೦೦೯)

## ೪೪೬ ಬಾಸೆಲ್ ಮಿಶನ್ನಿನ ದೇಶೀಯರು, ಇತರರು

ವೆಸ್ಲಿಯನ್ ಮಿಶನ್ನಿನವರಂತೆ ಬಾಸೆಲ್ ಮಿಶನ್ನಿನಲ್ಲಿಯೂ ಹಲವಾರು ದೇಶೀಯ ಬೋಧಕರು ಪುಸ್ತಕಗಳನ್ನು ಬರೆದು, ಕನ್ನಡ ಸಾರಸ್ವತದ ಹೆಚ್ಚುಗೆಗೆ ಕಾರಣರಾಗಿದ್ದಾರೆ. ಮೊವ್‌ಗ್ಲಿಂಗನಿಂದ ಮತಾಂತರ ಹೊಂದಿದ ಹರ್ಮನ್ ಕೌಂಡಿಣ್ಯನೂ ಕೌಶಿಕ ಬಂಧುಗಳೂ ಕನ್ನಡದಲ್ಲಿ ಪುಸ್ತಕಗಳನ್ನು ಬರೆದ ದೇಶೀಯ ಮಿಶನರಿಗಳಲ್ಲಿ ಮೊದಲಿಗರು. ಕೌಂಡಿಣ್ಯನನ್ನು ತನ್ನ ಮಾನಸಪುತ್ರನೆಂದು ಕರೆದುಕೊಳ್ಳುತ್ತಿದ್ದ ಮೊವ್‌ಗ್ಲಿಂಗ್ ಅವನನ್ನು ಉಚ್ಚ ಶಿಕ್ಷಣ-ಕ್ಕೆಂದು ಜರ್ಮನಿಗೆ ಕಳಿಸಿಕೊಟ್ಟರು. (೧೮೪೬-೫೧). ರೆವರೆಂಡ್ ಅಭಿಧಾನವನ್ನು ಹೊಂದಿದ ಕನ್ನಡ ದೇಶೀಯರಲ್ಲಿ ಇವನೇ ಮೊದಲಿಗನು. ಮರಳಿ ಬಂದ ಮೇಲೆ ಮುಂದಿನ ತನ್ನ ಜೀವನದಲ್ಲಿ ಪ್ರಮುಖ ಮಿಶನರಿಯಾಗಿ ದೈವಜ್ಞಾನ ಶಾಲೆಯ ಅಧ್ಯಾಪಕರಾಗಿ ದೀರ್ಘಕಾಲೀನ ಸೇವೆಯನ್ನು ಸಲ್ಲಿಸಿದ್ದಾನೆ. ಮಿಶನರಿ ಕಾರ್ಯದಲ್ಲಿಯ ಅವನ ಪರಿಣತಿ ಎಷ್ಟರ ಮಟ್ಟಿಗೆ ಎಂದರೆ, ಜರ್ಮನಿಗೇ (ವುರ್ಟೆನ್‌ಬರ್ಗ್) ಅವನನ್ನು ಕಳಿಸಲಾಯಿತು. ಮದುವೆಯಾದದ್ದು ಅಲ್ಲಿಯ ಕನ್ಯೆಯನ್ನು.* ಅವರ ಪೀಳಿಗೆಯವರು ಈಗಲೂ ಅಲ್ಲಿ ಇದ್ದಾರೆ. ಮತಾಂತರದ ಪ್ರಭಾವ ಇಷ್ಟರ ಮಟ್ಟಿಗೆ ಮುಂದುವರಿದ ಪ್ರಸಂಗವಿದು.

**ಕೌಂಡಿಣ್ಯ**ನ ಗ್ರಂಥಗಳಲ್ಲಿ ಬೈಬಲ್ ವ್ಯಾಖ್ಯಾನದ ಅನುವಾದವು (೧೮೬೧) ಮಹತ್ವದ್ದಾಗಿದೆ (ಮೂಲ; ಬಾರ್ಥ್). ಕರ್ಝ್ ಎಂಬವನ ಎರಡು ಜರ್ಮನ್ ಕೃತಿಗಳನ್ನು ಕೌಂಡಿಣ್ಯನು ಅನುವಾದಿಸಿದ್ದಾನೆ. 'ಕ್ರೈಸ್ತ ಧರ್ಮಬೋಧನೆ' (೧೮೫೯) ಮತ್ತು 'ಪರಿಶುದ್ಧ ಚರಿತ್ರೆ' (೧೮೬೩) ಮೊವ್‌ಗ್ಲಿಂಗ್-ವೈಗಲರು ಆ ಮೊದಲು ದೈವಜ್ಞಾನದ ಶಾಲೆಯ

---

* ಈಕೆ ಅವರ ಎರಡನೆಯ ಹೆಂಡತಿ. ಮೊದಲನೆಯವಳು ಕೃಷ್ಣ. ಮತಾಂತರ ಹೊಂದಲು ಒಪ್ಪಲಿಲ್ಲ. ಮಂಗಳೂರಿನ ಮಿಶನ್ ಹೌಸ್‌ನಲ್ಲಿಯೇ ಪ್ರತ್ಯೇಕವಾಗಿ ಇದ್ದಳು. ಕೆಲವು ತಿಂಗಳಲ್ಲಿಯೇ ಯಾವುದೋ ಜಡ್ಡಿನಿಂದ ತೀರಿಕೊಂಡಳು.

ಪಾಠಗಳಿಗಾಗಿ ಸಿದ್ಧಪಡಿಸಿದ ಪ್ರವಚನಗಳನ್ನು ಸುಧಾರಿಸಿ ಕೌಂಡಿಣ್ಯನು ಪ್ರಕಟಪಡಿ-
ಸಿದನು ಮತ್ತು ಕೊಲೆನ್ಸೊನ ಗಣಿತ ಪಠ್ಯವನ್ನೂ ಅನುವಾದಿಸಿದ್ದಾನೆ.

**'ಕೌಶಿಕ'** ಬಂಧುಗಳು (ಜೈಕಬ್ ಮತ್ತು ಪಾಲ್) ಬಾಬಾ ಪದಮಂಜಿಯ ಮರಾಠೀ-
ಕನ್ನಡ ಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿದ ಕೆಲಸದಲ್ಲಿ ಆಸಕ್ತಿ ತೋರಿದರು. ಇವರು
ಹೊರತಂದ 'ಜೀವಾಂತ್ಯ ಸ್ಮರಣೆ'ಯ (ತಿದ್ದಿದ) ಆವೃತ್ತಿಯೂ, ಕ್ರೈಸ್ತ ಮಂಡಳಿಯ
ಧಾರ್ಮಿಕ ವೆಚ್ಚದ ಕುರಿತ ಪುಸ್ತಕವೂ, ಕೃಷ್ಣ-ಕ್ರಿಸ್ತ ಇವರ ಹೆಚ್ಚು ಕಡಿಮೆಯ ಬಗ್ಗೆ
ವಿವೇಚನೆಯೂ ಮೂಲತಃ ಪದಮಂಜಿಯ ಕೃತಿಗಳಾಗಿವೆ. ಕ್ರಿ.ಶ. ೧೮೫೦ರ ಸುಮಾರಿಗೆ
ಮಡಗಾಸ್ಕರ್‌ನಲ್ಲಿ ಪ್ರೊಟೆಸ್ಟಂಟ್ ಮಿಶನರಿಗಳ ಕೊಲೆ ಸುಲಿಗೆಗಳು ನಡೆದುವು. ಆ
ಕುರಿತ ಕನ್ನಡ ಪುಸ್ತಕವು ಪಾಲ್ ಕೌಶಿಕನ ಅನುವಾದವೇ ಆಗಿದೆ. ಅದರಂತೆ ಪದಮಂಜಿಯ
'ಯಮುನಾಬಾಯಿಯ ಸಂಚಾರ' (೧೮೬೯), ಮತ್ತು ಬೇರೊಬ್ಬನ ಕೃತಿಯಾದ
'ದಾಂಪತ್ಯ ವಿಚಾರ' (೧೮೭೯) ಇವುಗಳನ್ನು ಕನ್ನಡಕ್ಕೆ ತಂದವರು ಸೊಲೋಮನ್
ಭಾಸ್ಕರ್.

ಕ್ರಿಶಿಯನ್ ಚಿನ್ನಪ್ಪ ಲಿಂಗಾಯತ ಮತವನ್ನು ವಿಮರ್ಶೆ ಮಾಡಿದ್ದಾನೆ. ದೇವಧರ
ಸೋಲಮೋನಪ್ಪರು ದೈವಜ್ಞಾನ ಶಾಲೆಯಲ್ಲಿ ಶಿಕ್ಷಣವನ್ನು ಪೂರೈಸಿ ಸುವಾರ್ತಾ
ಪ್ರಸಾರದಲ್ಲಿ ನಿರತರಾಗಿದ್ದನು. ಅವನ 'ವೇದಾಂತ-ವಾದ ನಿರ್ಣಯ'ವು ಹಿಂದಿನವರ
ವಾದಸರಣಿಯ ಮೇಲೆ ಆಧಾರಗೊಂಡ ಕೃತಿಯಾಗಿದೆ. 'ಜಹಂಗೀರನ ಚರಿತ್ರೆ'ಯನ್ನು
ಬರೆದ 'ಗಣೇಶ್ ಪಾಲ್' ಮೂಲತಃ ಮಂಗಳೂರಿನವನಾದರೂ ಮುಂಬಯಿ ಕರ್ನಾ-
ಟಕದಲ್ಲಿ ಶಿಕ್ಷಕ ವೃತ್ತಿಯಲ್ಲಿದ್ದು, ಕಾರವಾರ, ಹೊನ್ನಾವರ, ಸವಣೂರುಗಳಲ್ಲಿ ಹೆಚ್ಚು
ಕಾಲ ವಾಸವಾಗಿದ್ದನೆಂದು ತಿಳಿಯುತ್ತದೆ. ಟಿ.ಜಿ. ಮಾಬೆನ್ 'ವ್ಯವಹಾರಬೋಧಿನಿ'
ಮತ್ತು 'ಕನ್ನಡ ವ್ಯಾಕರಣ ಬೋಧಿನಿಗಳನ್ನು' ಕೊಡಮಾಡಿದ್ದಾರೆ (೧೮೯೬). ಅವರಿಗಿಂತ
ಈಚಿನವರಾದ ಇ.ಪಿ. ಕೆರಟ್, ಎಂ. ಆರನ್ಸ್ ಇವರು ಬರೆದ ಹಾಡುಗಳನ್ನು 'ಕ್ರೈಸ್ತ
ಗೀತಗಳು' ಸಂಕಲನದಲ್ಲಿ ಕಾಣಬಹುದು.

ದೇಶೀಯ ಮಿಶನರಿಗಳಲ್ಲೆಲ್ಲ **ಕ್ರಿಸ್ತಾನುಜವಾತ್ಸನ** ಹೆಸರು ಎದ್ದುಕಾಣುವಂತಹದು
(೧೮೪೦—೧೯೧೯). ಮೂಲತಃ ಉತ್ತರ ಕನ್ನಡ ಜಿಲ್ಲೆಯ ಕರ್ಕಿಯವನು. ಅಮ್ಮಾನ್
ಎಂಬ ಮಿಶನರಿಯ ಪ್ರವಚನ ಪ್ರಭಾವದಿಂದ ತಂದೆ ಮತಾಂತರ ಹೊಂದಿ
ಸುವಾರ್ತಪ್ಪನಾದಾಗ ಮತಾಂತರ ಹೊಂದಿದಾಗ ಬಾಲಕ ಕ್ರಿಸ್ತಾನುಜನೂ ಸೇರಿಕೊಂಡನು.
ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲ ಮಂಗಳೂರಿನ ದೈವಜ್ಞಾನ ಶಾಲೆಯಲ್ಲಿ ಬೋಧ-
ಕನಾಗಿದ್ದನು. ಮಹತ್ವದ್ದೆಂದರೆ ಅವನ ಬಹುಭಾಷಾ ಪರಿಜ್ಞಾನ. ಸ್ಥಳೀಯ ಭಾಷೆಗಳಲ್ಲದೆ
ಸಂಸ್ಕೃತ, ಗ್ರೀಕ್ ಭಾಷೆಯನ್ನು ಕೂಡಾ ಅರಿತಿದ್ದನು. ಪರಿಣಾಮವಾಗಿ ಕನ್ನಡದಲ್ಲಿ
ಸಂಸ್ಕೃತ ವ್ಯಾಕರಣವನ್ನು ಬರೆದನು. ವಿದ್ಯಾರ್ಥಿಗಳನ್ನು ಗಮನದಲ್ಲಿರಿಸಿಕೊಂಡು ಹಲವಾರು

ಮತೀಯ ಗ್ರಂಥಗಳನ್ನು ಅನುವಾದಿಸಿದನು. ಇಂಗ್ಲಿಷ್–ಕನ್ನಡ 'ಲಘುಕೋಶ'ವನ್ನು ಇವನೇ ರಚಿಸಿದ್ದು. (೧೯೩೩ರಲ್ಲಿ ಪಂಜೆ ಮಂಗೇಶರಾಯರು ಅದರ ಸುಧಾರಿತ ಆವೃತ್ತಿಯನ್ನು ಹೊರತಂದಿದ್ದಾರೆ) ಸಂಗ್ರಾಹ್ಯ ಶಬ್ದಕೋಶವಿದು.

ಮಿಶನ್‌ಗೆ ಅವನಿಂದ ಸಂದ ವಿಶೇಷ ಸೇವೆಯೆಂದರೆ 'ಸಭಾಪತ್ರ' ಪತ್ರಿಕೆಯ ಸಂಪಾದಕತ್ವ, ಹಾಗೂ ಅವರ ವಾರ್ಷಿಕ ಪಂಚಾಂಗ. ಇದರಲ್ಲಿ ಅವನು ರಸವತ್ತಾದ ಉಕ್ತಿ, ಚಿಂತನೆಗಳನ್ನೂ, ನೀತಿಕತೆಗಳನ್ನೂ ಕೊಟ್ಟು ವಾಚನೀಯವಾಗಿ ಮಾಡಿದ್ದನು.

ಅವನ ವಿಶೇಷವಾದ ಮೌಲಿಕ ಕೃತಿ 'ವಿಕೀರ್ಣ ಸುಭಾಷಿತ ಶತಕ' ಎಂಬುದು. ಇದರಲ್ಲಿ ನಮ್ಮವೇ ಸಂಸ್ಕೃತ ಸುಭಾಷಿತಗಳನ್ನು ಎತ್ತಿಕೊಂಡು ವಿವರಿಸುತ್ತ, ಕ್ರಮೇಣ ಅವು ಕ್ರೈಸ್ತ ತತ್ವಗಳಿಗೂ ಅನ್ವಯಿಸುತ್ತವೆಂದು ಹೇಳಿ, ಕೊನೆಯಲ್ಲಿ ಹಿಂದೂ ಧರ್ಮಕ್ಕಿಂತ ಕ್ರೈಸ್ತ ಧರ್ಮ ಮೇಲ್ಮಟ್ಟದ್ದೆಂಬುದನ್ನು ಅವನು ಮಾರ್ಮಿಕವಾಗಿ ತೋರಿಸಿದ ಜಾಣ್ಮೆ ಗಮನಿಸುವಂತಿದೆ (೧೮೭೩).

ಕಿಟೆಲರ ಕಾಲದಲ್ಲಿ ಜರ್ಮನಿಯಿಂದ ಬಂದು ಕೃತಿರಚನೆ ಮಾಡಿದ ಅನ್ಯ ಮಿಶನರಿಗಳನ್ನು ಉಲ್ಲೇಖಿಸಬೇಕಾಗಿದೆ. ಗ್ರೇಟರ್ ಕವಿತಾ ರಚನೆಯಲ್ಲಿ ಒಲವಿದ್ದವನು; ಸ್ತೋತ್ರದ ಪುಸ್ತಕವನ್ನು ಹೊರತಂದಿದ್ದಾನೆ. ಒಂದೆರಡು ಪಠ್ಯಪುಸ್ತಕಗಳಲ್ಲದೆ ಕೊಡಗಿನ ಚರಿತ್ರೆಯನ್ನು ಬರೆದಿದ್ದಾನೆ (೧೮೬೯). ಜೆ. ವ್ಯಾಕ್ ಕಿಟೆಲ್‌ನ ಆರಂಭಿಕ ಸಾಹಿತ್ಯಕಾರ್ಯದಲ್ಲಿ ಸಹಭಾಗಿಯಾಗಿದ್ದನು. 'ಕಾವ್ಯಪುಂಜ' ಎಂಬ ಕವನ ಸಂಕಲನವನ್ನು ಹೊರತಂದನು. ಬಾಲಕರಿಗಾಗಿ ಹೊಸ ಕವಿತೆಗಳನ್ನು ಕಟ್ಟಿದನು. ಇದೇ ರೀತಿ ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ಥಿಯೊಡೊರ್ ವಾಲ್ಜ್ ಮತಪ್ರಸಾರದ ಕತೆಗಳನ್ನು ಬೆಳಕಿಗೆ ತಂದನು. 'ಮಹಮ್ಮದನ ಚರಿತ್ರೆಯು' ವಾಲ್ಜ್‌ನ ಇನ್ನೊಂದು ಪುಸ್ತಕವಾಗಿದೆ. ಜೆ. ಬೂಕರ್ ಕಿಟೆಲ್ ಕೋಶದ ಸಂಕ್ಷಿಪ್ತ ಆವೃತ್ತಿಯನ್ನು ವಿದ್ಯಾರ್ಥಿಗಳಿಗಾಗಿ ಸಿದ್ಧಗೊಳಿಸಿದನು (೧೯೧೯). ಕೊಡಗಿನ ಗಾದೆಗಳನ್ನು ಸಂಗ್ರಹಿಸಿದ (೧೮೮೬) ಜೆ. ಎಫ್ ವೈಲನನ್ನೂ ಇಲ್ಲಿ ಹೆಸರಿಸಬೇಕು.

### ೪೪೭ ಎಫ್. ತ್ಸಿಗ್ಲರ್

ಕನ್ನಡ ಗ್ರಂಥ ನಿರ್ಮಿತಿಯಲ್ಲಿ ಆಸ್ಥೆ ವಹಿಸಿದ ೧೯ನೆಯ ಶತಮಾನದ ಜರ್ಮನ್ ಮಿಶನರಿಗಳಲ್ಲಿ ತ್ಸಿಗ್ಲರನದೇ ಕೊನೆಯ ದೊಡ್ಡ ಹೆಸರು (೧೮೩೨–೧೯೦೬). ಅವನ ಜನ್ಮವೆಲ್ಲ ಶಿಕ್ಷಣ ಕಾರ್ಯಕ್ಕೆಯೆ ವಿನಿಯೋಗವಾಯಿತು. ಕರ್ನಾಟಕಕ್ಕೆ ಬರುವ ಮುನ್ನ, ಬಂದ ಮೇಲೆ, ಮರಳಿಹೋದ ಮೇಲೆಯೂ ಸಹ ಶಿಕ್ಷಕನಾಗಿಯೆ ದುಡಿದನು. ಅವನು ಬಾಸೆಲ್ ಮಿಶನ್ ವರಿಷ್ಠ ಕೇಂದ್ರಕ್ಕೆ ಹೋದದ್ದು ಮಿಶನರಿ ತರಬೇತಿಗಾಗಿ. ಅಲ್ಲಿ ಇತರರಿಗೆ ಆ ತರಬೇತಿಯನ್ನು ಕೊಡುವ ಶಿಕ್ಷಕರಲ್ಲಿ ಒಬ್ಬನಾಗಿ ಅಲ್ಲಿ ಇದ್ದನು. ಕೊನೆಗೆ

ಸ್ವಯಂ ಮಿಶನರಿಯಾದನು. ಕ್ರಿ.ಶ. ೧೮೬೨ರಲ್ಲಿ ಮಂಗಳೂರಿಗೆ ಬಂದ ಮೇಲೆ ಮಿಶನ್ನಿನ ಮಾಧ್ಯಮಿಕ ಶಾಲೆಯಲ್ಲಿ ಇಂಗ್ಲಿಷ್ ಮತ್ತಿತರ ವಿಷಯಗಳನ್ನು ಬೋಧಿಸುತ್ತಿದ್ದನು.

ಕ್ರಿ. ಶ. ೧೮೬೭ರಲ್ಲಿ ಆ ಶಾಲೆಯನ್ನು ಮುಚ್ಚಬೇಕಾಗಿ ಬಂದಾಗ ಊರಿನ ಜನರು ಹಾಗೆ ಮಾಡಬಾರದೆಂದೂ, ತ್ಸಿಗ್ಲರನೇ ಅಲ್ಲಿ ಪುನಃ ಶಿಕ್ಷಕನಾಗಿ ಮುಂದುವ-ರಿಯಬೇಕೆಂದು ಕೇಳಿಕೊಂಡರಂತೆ.

ತ್ಸಿಗ್ಲರ್ ಮುಂದಿನ ವರ್ಷಗಳನ್ನು ಹುಬ್ಬಳ್ಳಿ (೧೮೬೮– ೭೬), ಧಾರವಾಡ (೧೮೭೮–೧೮೯೫) ಗಳಲ್ಲಿ ಶಿಕ್ಷಕನಾಗಿ ಕಳೆದನು. ಧಾರವಾಡದ ಬಾಸೆಲ್ ಮಿಶನ್ ಶಾಲೆಯ ಮುಖ್ಯಾಧ್ಯಾಪಕನಾಗಿ ಅದನ್ನು ಬಹುವಾಗಿ ಬೆಳೆಯಿಸಿದನು. ಜಿಲ್ಲೆಯ ಇನ್ನುಳಿದ ಶಾಲೆಗಳ ಮೇಲ್ವಿಚಾರಣೆಯೂ ಅವನ ಪಾಲಿಗಿದ್ದಿತು. ಅವನದು ಬಿಡುವಿಲ್ಲದ ಜೀವನ. ಉತ್ತರ ಕರ್ನಾಟಕದ ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸರಕಾರೀ ವಲಯದಲ್ಲಿ ಅವನು ಚಿರಪರಿಚಿತನಾಗಿದ್ದನು. ಇಲ್ಲಿಯ ಶಿಕ್ಷಣಾಧಿಕಾರಿಗಳು ಮಹತ್ವದ ವಿಷಯಗಳಲ್ಲಿ ಆಗೀಗ ಅವನ ಸಲಹೆಯನ್ನು ಪಡೆಯುತ್ತಿದ್ದರು; ಸಾಹಿತ್ಯಿಕರು ಅವನೊಂದಿಗೆ ಕಾವ್ಯ ಶಾಸ್ತ್ರ ವಿನೋದದಲ್ಲಿ ತೊಡಗಿರುತ್ತಿದ್ದರು. ಅವನ ಕನ್ನಡ ಪ್ರೇಮ, ಹಾಗೂ ವಿದ್ವತ್ತೆ ಇವನ್ನು ಮನದಂದು ಕರ್ನಾಟಕ ವಿದ್ಯಾವರ್ಧಕ ಸಂಘದವರು ಅವನನ್ನು ಸಂಘದ ಅಧ್ಯಕ್ಷನನ್ನಾಗಿ ಆಯ್ಕೆ ಮಾಡಿ ಗೌರವಿಸಿದರು (೧೮೯೩, ೧೮೯೪).

ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳು, ಗಣಿತ, ಭೂಗೋಲ ಮತ್ತು ಸಸ್ಯಶಾಸ್ತ್ರ— ಇವು ತ್ಸಿಗ್ಲರನ ಮೆಚ್ಚಿನ ವಿಷಯಗಳು. ನಾನಾ ಬಗೆಯ ಸಸ್ಯಗಳನ್ನು ಕೈಯಲ್ಲಿ ಹಿಡಿದುಕೊಂಡು, ಅವುಗಳ ಹೆಸರೇನು ಎಂಬುದಾಗಿ ತನ್ನ ಸಂಚಾರ ಕಾಲದಲ್ಲಿ ಅವರಿ-ವರನ್ನು ಪ್ರಶ್ನಿಸುತ್ತಿದ್ದನಂತೆ. ಕಿಟೆಲರಿಗೆ ಸಸ್ಯಶಾಸ್ತ್ರದ ಶಬ್ದಗಳನ್ನು ಅವನು ಪೂರೈ-ಸಿದ್ದಾನೆ. ಅವನ ಬರವಣಿಗೆ ಹೆಚ್ಚಾಗಿ ಶೈಕ್ಷಣಿಕ ರಂಗಕ್ಕೆ ಮೀಸಲು. ಗಣಿತದ ಪಠ್ಯಗಳನ್ನು ಸ್ವತಂತ್ರವಾಗಿ ರಚಿಸಿದನು. ಅವನ, 'ಗಣಿತನ್ಯಾಯ' ಎಂದರೆ ಗಣಿತ ಶಿಕ್ಷಣ ವಿಧಾನದ ಪುಸ್ತಕವು ಟ್ರೇನಿಂಗ್ ಕಾಲೇಜಿನ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಗೆ ತುಂಬ ಪ್ರಯೋಜನಕಾ-ರಿಯಾಗಿದ್ದಿತು. ಇದನ್ನು ಮತ್ತು 'ಶಾಲಾ ವ್ಯಾಕರಣ' ಎಂಬ ಪುಸ್ತಕವನ್ನು ಬರೆಯುವುದಕ್ಕೆ ಮುಂಬಯಿ ಸರಕಾರದ ವಿದ್ಯಾಖಾತೆಯವರ ಸೂಚನೆ ನಿಮಿತ್ತವಾಯ್ತು. A Practical key to Kannada Language (೧೮೮೮) ಎಂಬುದು ಅವನ ವಿಶಿಷ್ಟ ಗ್ರಂಥವಾಗಿದೆ; ಹೊಸದಾಗಿ ಕನ್ನಡ ಕಲಿಯುವವರಿಗಾಗಿ ನೂತನ ವಿಧಾನವನ್ನೊಳಗೊಂಡಿದೆ. ತ್ಸಿಗ್ಲರನ 'ಇಂಗ್ಲಿಷ್–ಕನ್ನಡ ಕೋಶ'ವು (೧೮೮೮) ಅರ್ಧ ಶತಮಾನದ ವರೆಗೆ ಮುಂಬಯಿ ಕರ್ನಾಟಕ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿದ್ಯಾರ್ಥಿಪ್ರಿಯವಾಗಿ ಬಾಳಿತು. ಅನೇಕ ಮತಪುಸ್ತಕಗಳನ್ನು ಅವನು ಪರಿಷ್ಕರಿಸಿ, ಮರು ಮುದ್ರಣಕ್ಕೆ ಅನುವು ಮಾಡಿಕೊಟ್ಟದ್ದೂ ಇದೆ. ಅವನು ಕವಿಯೂ ಆಗಿದ್ದು ಕ್ರೈಸ್ತಗೀತಗಳನ್ನು ಕನ್ನಡಕ್ಕೆ

ಅನುವಾದಿಸಿದ್ದಾನೆ. ಹೀಗೆ ಮತೀಯ, ಶೈಕ್ಷಣಿಕ ಹಾಗೂ ಭಾಷಾಭ್ಯಾಸದ ಮೂರೂ ರಂಗಗಳಲ್ಲಿ ಅವನ ಗ್ರಂಥರಚನೆಯು ಸಾಗಿ ಬಂದಿದೆ.

ನಿವೃತ್ತನಾಗಿ ಹೋದ ಮೇಲೂ ತ್ಸಿಗ್ಲರ್ ಕರ್ನಾಟಕದಲ್ಲಿಯ ಶೈಕ್ಷಣಿಕ ಚಟುವಟಿಕೆಗಳನ್ನು ಕುರಿತು ಆಗೀಗ ಬರೆಯುತ್ತ ಇದ್ದನು. ಈ ವೇಳೆಗೆ, 'ಮಿಶನರಿಗಳು ಅಗತ್ಯಕ್ಕಿಂತ ಹೆಚ್ಚಾಗಿ ಶೈಕ್ಷಣಿಕ ರಂಗದಲ್ಲಿ ತಮ್ಮ ವೇಳೆಯನ್ನು ವ್ಯಯಿಸುತ್ತಿದ್ದಾರೆ. ಅದಕ್ಕಿಂತ ಅವರು ನೇರವಾದ ಮತ ಪ್ರಚಾರದಲ್ಲಿ ತೊಡಗಬೇಕು. ಶಿಕ್ಷಣ ಸಂಸ್ಥೆಗಳನ್ನು ತೆರೆದರೂ ಬೈಬಲ್ ಮುಂತಾದವುಗಳನ್ನೇ ಮುಖ್ಯವಾಗಿ ಕಲಿಸಬೇಕಲ್ಲದೆ ಗಣಿತ ಮೊದಲಾದ ವಿಷಯಗಳನ್ನು ಅವರು ಏಕೆ ಕಲಿಸಬೇಕು' ಎಂಬೀ ದನಿಯು ಜರ್ಮನಿಯಲ್ಲಿ ಕೇಳಬರುತ್ತಿತ್ತು. ತ್ಸಿಗ್ಲರ್ ಮತಪ್ರಸಾರದ ದೃಷ್ಟಿಯಿಂದಲೇ ಮಿಶನರಿಗಳ ಶೈಕ್ಷಣಿಕ ಚಟುವಟಿಕೆಗಳನ್ನು ಸಮರ್ಥಿಸಿ, ಕೊನೆಯಲ್ಲಿ 'I cannot see why arithmetic teaching should be of lesser value in the mission work' ಎಂದು ಉತ್ತರ ಕೊಟ್ಟಿದ್ದಾನೆ.[೩೩]

ಇಂತಿದು ಬಾಸೆಲ್ ಮಿಶನ್ನಿನವರ ಸಾಹಿತ್ಯಿಕ ಚರಿತ್ರೆ. ಮೇಧಾವಿಗಳಾಗಿದ್ದ ಅನೇಕ ಮಿಶನರಿ ಜನರು ಇಲ್ಲಿಗೆ ಬಂದು ಗ್ರಂಥರಚನೆ, ಮುದ್ರಣ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಶ್ರದ್ಧೆಯಿಂದ ದುಡಿದರು. ಅದರಿಂದಾಗಿ ಕೆಲವು ದೇಶೀಯ ಮಿಶನರಿಗಳೂ ಸಾಹಿತ್ಯ ರಂಗದಲ್ಲಿ ಶ್ರಮಿಸುವಂತಾಯಿತು. ಬಾಸೆಲ್ ಮಿಶನ್‌ದವರು ತಮ್ಮ ಅರುವತ್ತು ವರ್ಷಗಳ ಕಾಲಾವಧಿಯಲ್ಲಿ ಅನೇಕ ಹೊಸ ವಿಚಾರಗಳನ್ನೂ, ನವೀನ ರೂಪಗಳನ್ನು ಸಾಹಿತ್ಯ ರಂಗದಲ್ಲಿ ಪ್ರತಿಷ್ಠಾಪಿಸಿದ್ದಾರೆ; ಹೊಸಗನ್ನಡ ಚರಿತ್ರೆಯಲ್ಲಿ ಶಾಶ್ವತ ಸ್ಥಾನವನ್ನು ಪಡೆದಿದ್ದಾರೆ.

## ಸಂದರ್ಭ ಸೂಚಿ


೧. Missionary pioneers and Indian Languages, ಪು. ೨೨–೩.
೨. Jesuits in Mysore, ಪು. ೩೫.
೩. Earliest printing in India and bibliographical notes on early works mostly vernacular, by Catholic Mission, ಪು. ೨೪.
೪. Memoir of the Rev. J. Reid, ಪು. ೧೩೦.
೫. Madras Missionary Register, Vol. 1 (1834), ಪು. ೩೨.
೬. Memoir of the Rev. J. Reid, ಪು. ೯೪.
೭. ಅದೇ, ಪು. ೧೦೫.
೮. ಅದೇ, ಪು. ೨೫೧.
೯. ಅದೇ, ಪು. ೩೦೬.

೧೦. ಅದೇ, ಪು. ೩೪೧.

೧೧. ಅದೇ, ಪು. ೪೨೮.

೧೨. Proceedings. South India Mission Conference, 1858 ಪು.೧೧೦.

೧೩. Benjamin Rice, ಪು. ೩೮.

೧೪. Proceedings. South India Mission Conference, 1858. ಪು. ೨೬೮.

೧೫. Address and Presentations to Rev. B. Rice, July 1879; Reply by B. Rice.

೧೬. Proceedings. South India Mission Conference, 1858. ಪು. ೨೬೬.

೧೭. Benjamin Rice, ಪು. ೧೭೮.

೧೮. Wesleyan Methodist Notices, New Series, No. 168 (1852).

೧೯. ಕ್ರೈಸ್ತ ಸಭಾಪತ್ರ, ೧೮೮೨.

೨೦. ಪಂಚಕಜ್ಜಾಯ, ೧೯೨೭; ಎಂ.ಎನ್. ಕಾಮತ, ಪು. ೧೬೬.

೨೧. ಪ್ರಜಾಮತ–ದೀಪಾವಳಿ ಸಂಚಿಕೆ ೧೯೬೬; ಶ್ರೀನಿವಾಸ ಹಾವನೂರ, ಪು. ೧೧೨.

೨೨. Journal, Bombay Branch of the Royal Asiatic Society,1865.

೨೩. Indian Antiquary, Vol. 1 (1872), ಪು. ೩೫೧.

೨೪. ಅದೇ, ಪು. ೩೪೫–೪೬.

೨೫. ಅದೇ, ಪು. ೩೫೨.

೨೬. ಅದೇ, ಪು. ೨೩೫.

೨೭. ಪ್ರಬುದ್ಧ ಕರ್ಣಾಟಕ. ೨೧ (೧೯೩೯), ಪು. ೬೩–೬೬.

೨೮. ಅದೇ, ೪೦ (೧೯೫೮), ಪು. ೧೮೪–೮೮.

೨೯. Indian Antiquary, Vol. 35 (1906), ಪು. ೬೪.

೩೦. ಅದೇ, Vol. 24 (1895), ಪು. ೮೪.

೩೧. ಅದೇ, ಪು. ೮೪.

೩೨. Sixty–fifth Report of the Basel German Evangelical Mission in South–Western India for the year 1904. ಪು.೨೨.

೩೩. Correspondenz–Blatt der Basler Missionare in Indien, China unt Afrika, July 1892; F.Zeigler.

ಪ್ರಕರಣ . ೫

# ಬ್ರಿಟಿಶ್ ಅಧಿಕಾರಿಗಳ ಕನ್ನಡ ಕಾರ್ಯ

## ೫೧ ಇತಿಹಾಸದ ಅಭ್ಯಾಸಿಗಳು

ಕನ್ನಡಕ್ಕಾಗಿ ದುಡಿದ ವಿದೇಶೀಯರಲ್ಲಿ ಮಿಶನರಿಗಳ ಸಾಹಿತ್ಯರಚನೆಯೇ ಹಿರಿದಾಗಿ ಕಂಡರೂ, ಇಲ್ಲಿಗೆ ಬಂದಿದ್ದ ಬ್ರಿಟಿಶ್ ಅಧಿಕಾರಿಗಳ ಕೊಡುಗೆಯು ಕಡಿಮೆಯದೇನಲ್ಲ. ಅವರು ಕನ್ನಡವನ್ನು ಕಲಿತುದು ಆಡಳಿತಕ್ಕಾಗಿ ಎಂಬುದು ನಿಜ. ಆದರೆ ಜ್ಞಾನತೃಷೆಯಿಂದ ಪ್ರೇರಿತರಾಗಿ, ಅವರಲ್ಲಿ ಹಲವರು ಅಗತ್ಯಕ್ಕಿಂತ ಹೆಚ್ಚಾಗಿ ಕನ್ನಡ ವ್ಯಾಸಂಗವನ್ನು ಕೈಗೊಂಡರು. ತಾವು ಮನನ ಮಾಡಿದ ಹೊಸ ಅಂಶಗಳನ್ನು ಅಚ್ಚುಕಟ್ಟಾಗಿ ಶಾಸ್ತ್ರಬದ್ಧವಾಗಿ ಬರೆಹದಲ್ಲಿ ಮೂಡಿಸಿದರು. ಇನ್ನು ಕೆಲವು ಅಧಿಕಾರಿಗಳು ನಮ್ಮ ನಾಡಿನ ಪುರಾತನ ಅವಶೇಷಗಳತ್ತ ತಮ್ಮ ಗಮನವನ್ನು ಹರಿಯಿಸಿದರು. ಅವುಗಳನ್ನು ಅವರು ವೈಜ್ಞಾನಿಕ ರೀತಿಯಲ್ಲಿ ಅಭ್ಯಸಿಸಿ ಕರ್ನಾಟಕ ಮತ್ತು ಭಾರತ ಇತಿಹಾಸಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳನ್ನು ಹೊರತಂದರು. ಜೊತೆಗೆ, ಇತರರ ಗ್ರಂಥೋದ್ಯಮಕ್ಕೆ ಪ್ರೋತ್ಸಾಹವಿತ್ತರು. ಮುದ್ರಣ ಕಾರ್ಯಕ್ಕೂ ನೆರವಾದರು.

### ೫೧೧ ಮೆಕೆಂಝಿ, ಬುಕನನ್ನರ ಸಂಚಾರ

ಇಂಥವರೊಳಗೆ ಕಾಲಕ್ರಮದಲ್ಲಿ ಮೊದಲ ಹೆಸರೆಂದರೆ ಕಾಲಿನ್ ಮೆಕೆಂಝಿಯದು. ಕ್ರಿ.ಶ. ೧೭೮೩ರಲ್ಲಿ ಪ್ರದೇಶ ವೀಕ್ಷಣೆಯ ಅಧಿಕಾರಿಯೆಂದು ಮದ್ರಾಸ ಪ್ರಾಂತದಲ್ಲಿ ಕೆಲಸಕ್ಕೆ ಸೇರಿ, ಕೊನೆಯಲ್ಲಿ ಹಿಂದುಸ್ತಾನದ ಸರ್ವೆಯರ್ ಜನರಲ್ ಆಗಿ ಮೆಕೆಂಝಿ ನಿವೃತ್ತನಾದನು. ಟೀಪೂವಿನಿಂದ ಮೈಸೂರು ಪ್ರದೇಶವನ್ನು ಪಡೆದುಕೊಂಡ ವರ್ಷವೇ ಕಂಪೆನಿಯವರು ಅವನನ್ನು ಅಲ್ಲಿಯ ಸರ್ವೆ ಕೆಲಸಕ್ಕೆಂದು ನಿಯಮಿಸಿದರು. ಕ್ರಿ.ಶ. ೧೮೦೭ನೆಯ ಇಸವಿಯಲ್ಲಿ ಅದು ಮುಗಿದಾಗ, ಅವನು ಅದುವರೆಗೆ ದಕ್ಷಿಣ ಭಾರತದ ೪೦ ಸಾವಿರ ಮೈಲು ಪ್ರದೇಶವನ್ನು ಸುತ್ತಿದುದಾಗಿತ್ತು. ಈ ಕಾರ್ಯದಲ್ಲಿ ತೊಡಗಿದ್ದಾಗಲೇ ಮೆಕೆಂಝಿಯು ದಕ್ಷಿಣ ಭಾರತದ ಶಾಸನ, ಹಸ್ತಪ್ರತಿ ಹಾಗೂ ಪುರಾತನ ವಸ್ತುಗಳನ್ನು, ಜೊತೆಗೆ ಐತಿಹ್ಯ, ಸ್ಥಳಪುರಾಣ ಮೊದಲಾದವುಗಳನ್ನು ಕಲೆಹಾಕಿದ್ದನು. ಅಲ್ಲದೆ ತಾನು ಕಂಡದ್ದನ್ನು ಮತ್ತು ಜನರ ಬಾಯಿಯಿಂದ ಕೇಳಿದ್ದನ್ನು ದಿನಚರಿಯಲ್ಲಿ ವಿವರವಾಗಿ ಬರೆದುಕೊಳ್ಳುತ್ತಿದ್ದನು. ಇದು ಅವನ ಕಚೇರಿಯ ಕಾರ್ಯವೇನೂ ಆಗಿರಲಿಲ್ಲ. ಸುರುವಿಗೆ

ಕಂಪೆನಿ ಸರಕಾರದಿಂದ ಅದಕ್ಕೆ ಪ್ರೋತ್ಸಾಹವೂ ಇರಲಿಲ್ಲ. ಮೇಲಾಗಿ ಅವನ ಸರ್ವೆ ಕೆಲಸವೇ ಅವನ ದಿನಚರಿಯ ಬಹು ಪಾಲನ್ನು ಪಡೆಯುತ್ತಿದ್ದಿತು. ಇಂಥ ಸ್ಥಿತಿಯಲ್ಲಿ ತನಗೆ ಪೂರ್ವಪರಿಚಯ ಎಳ್ಳಷ್ಟೂ ಇರದ ಜನರೊಡನೆ ಬೆರೆತು ನಾನಾ ವಿಷಯಕವಾದ ಸಾಮಗ್ರಿಯನ್ನು ಕಲೆಹಾಕಿದುದು ಅವನ ಜ್ಞಾನತೃಷೆಗೆ ನಿದರ್ಶನವಾಗಿದೆ. ದಿನ ಹೋದಂತೆ ಈ ಕಾರ್ಯವು ಅವನನ್ನು ಸಂಪೂರ್ಣವಾಗಿ ಸೆಳೆದುಕೊಂಡಿತು. ಒಮ್ಮೆಯೂ ಸ್ವದೇಶಕ್ಕೆ ಹೋಗದೆ ಅವನು ೩೮ ವರ್ಷಗಳ ದೀರ್ಘಾವಧಿಯನ್ನು ಇದಕ್ಕಾಗಿ ಮೀಸಲಿರಿಸಿದನು.

ಅವನ ಕೆಲಸಕ್ಕಾಗಿ ದೇಶೀಯ ಪಂಡಿತರ ಒಂದು ಕಛೇರಿಯೇ ಸ್ಥಾಪಿತವಾಗಿದ್ದಿತು. ಅವರು ಹಳೆಯ ಕಾವ್ಯ, ಶಾಸನಾದಿಗಳನ್ನು ಓದಿ, ಕಾಗದದ ಮೇಲೆ ಬರೆದು ತೆಗೆಯಲು ಮತ್ತು ಅವುಗಳ ಅರ್ಥವನ್ನು ತನಗೆ ವಿವರಿಸಲೆಂದು, ಈ ಸಿಬ್ಬಂದಿಯನ್ನು ಸಂಬಳದ ಮೇಲೆ ನೇಮಿಸಿಕೊಂಡಿದ್ದನು. ಅವರು ಕೂಡಾ ಮೆಕೆಂಝಿಯ ವತಿಯಿಂದ ದೇಶದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಪ್ರಾಚೀನ ವಸ್ತು, ವಿಚಾರಗಳನ್ನು ಸಂಗ್ರಹಿಸುತ್ತಿದ್ದರು.*

ಮೈಸೂರಿನ ಸರ್ವೆ ಕಾಲದಲ್ಲಿ ಮೆಕೆಂಝಿಯು ೧೭೦೦ ಶಿಲಾಲೇಖ ಮತ್ತು ತಾಮ್ರ ಶಾಸನಗಳನ್ನೂ ೬೦೦ ಹಸ್ತ ಪ್ರತಿಗಳನ್ನೂ ಸಂಗ್ರಹಿಸಿದ್ದನು.[೧] ಅವೆಲ್ಲವನ್ನು ಅವನು ಸರಕಾರಕ್ಕೆ ಒಪ್ಪಿಸಿದ್ದಾನೆ. ಅವನು ಸಂಗ್ರಹಿಸಿದ್ದ ೨೦೦ಕ್ಕೆ ಮಿಕ್ಕಿದ ಕನ್ನಡ ಹಸ್ತಪ್ರತಿಗಳ ವಿವರಗಳನ್ನು ರೆವರೆಂಡ್ ವಿಲ್ಸನ್ ಸಂಪಾದಿತ "ಮೆಕೆಂಝಿ ಸಂಗ್ರಹ" ಪುಸ್ತಕದಲ್ಲಿ ಕೊಡಲಾಗಿದೆ. ಮೆಕೆಂಝಿಯು ತನಗೆ ದೊರೆತಿದ್ದ ಕನ್ನಡ ಕೃತಿಗಳನ್ನು ಪುರಾಣ, ಇತಿಹಾಸ, ಕಾವ್ಯ, ಕಥನ, ಶಾಸ್ತ್ರಗಳು, ಜೈನ ವಾಙ್ಮಯ ಎಂಬುದಾಗಿ ವಿಂಗಡಿಸಿದ್ದಾನೆ. ಈ ವಿಂಗಡಣ ಅಥವಾ ವರ್ಗೀಕರಣವು ವ್ಯವಸ್ಥಿತವಾಗಿಲ್ಲವೆಂಬುದು ಸ್ಪಷ್ಟವೇ ಇದೆಯಾದರೂ, ಮುದ್ರಣವಿಲ್ಲದ ಕಾಲದಲ್ಲಿ ಜನರಲ್ಲಿ ಪ್ರಚಲಿತವಾಗಿದ್ದ ಕನ್ನಡ ಕೃತಿಗಳಾವುವೆಂಬುದರ ಸ್ಥೂಲ ಕಲ್ಪನೆಯನ್ನು ಅದು ತಂದುಕೊಡುತ್ತದೆ.

ಕನ್ನಡ ಕೃತಿಗಳಲ್ಲದೆ ಬೇರೆ ಬೇರೆ ಸ್ಥಳ ಪುರಾಣ ಐತಿಹ್ಯಗಳಿಗೆ ಸಂಬಂಧಿಸಿದ ವಿವಿಧ ಬರಹಗಳು ಮೆಕೆಂಝಿಯ ಸಂಗ್ರಹದಲ್ಲಿದ್ದವು. ಅದರಲ್ಲಿಯ 'ಬಾಣ ಬಿರುಸು ಕ್ರಮ' ಮತ್ತು 'ಸೂಪ ಶಾಸ್ತ್ರ' ಎಂಬ ಕೃತಿಗಳು ಭಾರತದ ಇನ್ನಾವ ಭಾಷಾ ಸಾಹಿತ್ಯಗಳಲ್ಲಿ ಕಂಡುಬಂದಿಲ್ಲವೆಂದು, ಸಂಪಾದಕ ವಿಲ್ಸನ್ ಪ್ರಾಸಂಗಿಕವಾಗಿ ಕಾಣಿಸಿದ್ದಾನೆ. ಮೆಕೆಂಝಿಯ ಇತರ ಪುರಾತನ ಅಂಶಗಳ ಸಂಗ್ರಹವು ವ್ಯಾಪಕವೂ, ವೈವಿಧ್ಯಮಯವೂ ಆಗಿದ್ದಿತು. ನಾಡಿನ ಇತಿಹಾಸ ರಚನೆಗೆ ಕಚ್ಚಾ ಸಾಮಗ್ರಿಯನ್ನು ಒದಗಿಸಲು ಅದು ಸಮರ್ಥವಾಯಿತು.

---

* ಈ ಸಿಬ್ಬಂದಿಯಲ್ಲಿದ್ದವರ ಪೈಕಿ ತೆಲುಗು ಸೀಮೆಯ ಕವೆಲ್ಲಿ ವೆಂಕಟಸುಬ್ಬಯ್ಯನ ಮಕ್ಕಳಾದ ವೆಂಕಟನಾರಾಯಣ, ವೆಂಕರಾಮಯ್ಯ, ವೆಂಕಟಬೋರೆಯ್ಯ ಮತ್ತು ವೆಂಕಟಕೃಷ್ಣಯ್ಯ ಹಾಗೂ ಮೈಸೂರಿನ ಲಕ್ಷ್ಮಣರಾಯ ಎಂಬವರ ಹೆಸರುಗಳು ತಿಳಿದುಬಂದಿವೆ.

ಮೆಕೆಂಝಿಯ ಬದುಕೆಲ್ಲ ಸಂಗ್ರಹ ಕಾರ್ಯದಲ್ಲಿಯೇ ಕಳೆಯಿತಲ್ಲದೆ ಅದರ ಆಧಾರದ ಮೇಲೆ ಲೇಖನಗಳನ್ನು ಹೆಚ್ಚಾಗಿ ಬರೆದುದಿಲ್ಲ. ಹಾಗೆ ಬರೆಯುವುದಕ್ಕೆ ಅವನಿಗೆ ಬಿಡುವೂ ಇರಲಿಲ್ಲ. ಪ್ರಕಟವಾದ ಅವನ ಕೆಲವೇ ಲೇಖನಗಳಲ್ಲಿ ಜೈನಧರ್ಮವನ್ನು ಕುರಿತಾದ ಬರಹಗಳು ಆಗಿನ ವಿದ್ವಾಂಸರ ಗಮನವನ್ನು ಸೆಳೆದುವು. ಬೌದ್ಧ ಮತ್ತು ಜೈನ ಧರ್ಮಗಳು ಬೇರೆ ಎಂಬ ಸ್ಪಷ್ಟ ಕಲ್ಪನೆಯು ಆ ಹಿಂದಿನವರಿಗೆ ಇದ್ದಿರಲಿಲ್ಲ. ಸ್ವತಃ ಮೆಕೆಂಝಿಗೆ ಅದರ ಅರಿವಾದುದು ಕರ್ನಾಟಕದಲ್ಲಿಯ ಜೈನ ಕಾವ್ಯ ಮತ್ತು ಶಾಸನಗಳನ್ನು ಪರಿಶೀಲಿಸಿದಾಗಲೇ. ಮೆಕೆಂಝಿಯ ಇನ್ನು ಕೆಲವು ಬಿಡಿ ಬರಹಗಳಲ್ಲಿ ಮಾಧ್ವ ಗುರುಪರಂಪರೆಯನ್ನು ವಿವರಿಸಿದ ಲೇಖವೊಂದಿದೆ. ತಾನು ಸಂಗ್ರಹಿಸಿದ ವಿಷಯಗಳ ಸತ್ಯಾಸತ್ಯತೆಯ ಗೊಡವೆಗೆ ಅವನು ಹೋಗಲೇ ಇಲ್ಲವೆಂಬುದು ಆ ಲೇಖದಿಂದ ದೃಢಪಡುತ್ತದೆ.

ಮೆಕೆಂಝಿಗೂ ಕನ್ನಡ ಸಾಹಿತ್ಯಕ್ಕೂ ಮರೆಯಲಾಗದ ಒಂದು ನಂಟು ಇದೆ. ಎಂದರೆ ದೇವಚಂದ್ರನ ರಾಜಾವಳೀ ಕಥೆಯ ರಚನೆಗೆ ಅವನೇ ನಿಮಿತ್ತನಾಗಿದ್ದಾನೆ. ಕ್ರಿ. ಶ. ೧೮೦೪ ರಂದು ಮೆಕೆಂಝಿಯು ಮೇಲೆ ಹೇಳಿದ ಲಕ್ಷ್ಮಣರಾಯನೊಡನೆ ಸೀಮೆ ಪೈಮಾಸಿಗೆಂದು ಕನಕಗಿರಿಗೆ ಬಂದು ಸ್ಥಳಪುರಾಣಮುಂಟೆ ಎಂದು ಕೇಳಿದನಂತೆ. ಅದಕ್ಕೆ ದೇವಚಂದ್ರನು ತಾನು ಹಿಂದೆ ರಚಿಸಿದ್ದ ಪೂಜ್ಯಪಾದ ಚರಿತೆಯನ್ನು ಓದಿ ಹೇಳಿದಾಗ ಮೆಕೆಂಝಿಯು ಕಮರಹಳ್ಳಿಯಲ್ಲಿ ಒಡ್ಡಿದ್ದ ತನ್ನ ಗೂಡಾರದ ಬಳಿಗೆ ದೇವಚಂದ್ರನನ್ನು ಕರೆದುಕೊಂಡು ಹೋಗಿ ಪೂರ್ವದ ವಾರ್ತೆಗಳನ್ನು ಮೂರು ರಾತ್ರಿ ಚೆನ್ನಾಗಿ ಲಾಲಿಸಿದನಂತೆ. ಮುಂದೆ ಎರಡು ತಿಂಗಳು ಪರ್ಯಂತ ಬಿಡದೆ ದಿನ ಒಂದಕ್ಕೆ, ಗ್ರಾಸಕ್ಕೆ ಒಂದು ಹಣಮಂ ಕೊಡುತ್ತ, ರಾತ್ರಿ ಕಾಲದೊಳು, ಪೂರ್ವದ ಪ್ರಪಂಚಗಳು, ಜಾತಿ ಭೇದಗಳು ಮೊದಲಾದ ವಿವರಗಳೆಲ್ಲವನ್ನು ಕೇಳಿಕೊಂಡನಂತೆ. ಅಲ್ಲಿಗೂ ದೇವಚಂದ್ರನನ್ನು ಬಿಡದೆ ಬಂಗಾಲಕ್ಕೆ ಒಯ್ಯಬೇಕೆಂದಿದ್ದ! ಆದರೆ ಅವನು ಬಹು ವಿಧವಾಗಿ ಹೇಳಿಕೊಂಡಿದ್ದರಿಂದಲೂ, ಅವನ ಧರ್ಮೋಪಾಧ್ಯಾಯರು ಸಹ ಅಡ್ಡಿ ಮಾಡಿದ್ದರಿಂದಲೂ ದೇವಚಂದ್ರನ ಬಂಗಾಲ ಪ್ರಯಾಣವು ತಡೆದು ನಿಂತಿತು. ಆದರೆ ಕರ್ಣಾಟ ದೇಶದೊಳು ನಡೆದ ಪ್ರಪಂಚಗಳನ್ನೆಲ್ಲ ಕ್ರೋಡೀಕರಿಸಿ ಬರೆದು ತೆಗದುಕೊಂಡು ತಿಂಗಳೊಳಗೆ ಬಂದರೆ ಭಾರಿ ಸಂಬಳವನ್ನು ಮಾಡಿಸಿ ಕೊಡುತ್ತೇನೆಂದು ಹೇಳಿ, ಮೆಕೆಂಝಿಯು ಲಕ್ಷ್ಮಣರಾಯನ ಮೂಲಕ ೨೫ ಕುಂಪಣಿ ರೂಪಾಯಿಗಳನ್ನು ಕೊಡಿಸಿದನು.[೩] ಆ ಪ್ರಕಾರ ದೇವಚಂದ್ರನು ಬರೆಯಲುಪಕ್ರಮಿಸಿ, ಮುಗಿಸಲಿದ್ದಾಗ ಮೆಕೆಂಝಿಯು ಮೈಸೂರನ್ನು ಬಿಟ್ಟು ದೂರ ಹೋಗಿಬಿಟ್ಟಿದ್ದನು. ಇದುವೆ ರಾಜಾವಳೀ ಕಥೆಯ ಉದಯ. ಕರ್ನಾಟಕ ಕೋಶವೊಂದನ್ನು (ವಿಶ್ವಕೋಶ) ಸಿದ್ಧಪಡಿಸಲು ಮೆಕೆಂಝಿಯು ದೇವಚಂದ್ರನನ್ನು ಹುರಿದುಂಬಿಸಿದನಾದರೂ ಆ ಎಣಿಕೆಯಲ್ಲಿ ರಾಜಾವಳೀ

ಕಥೆಯು ಸಿದ್ಧವಾಗಲಿಲ್ಲ. ಅದಿರಲಿ, ಕನ್ನಡ ಸಾಹಿತ್ಯ ಕೃತಿಯಲ್ಲಿ ಮೊತ್ತಮೊದಲಿಗೆ ಕಾಣಿಸಿಕೊಂಡ ಯುರೋಪಿಯನ್ ವ್ಯಕ್ತಿಯೆಂದರೆ ಮೆಕೆಂಝಿಯೆ ಇರಬೇಕು.

ಮೆಕೆಂಝಿಯ ಸಹಾಯಕರಲ್ಲಿ ಕವೆಲ್ಲಿ ವೆಂಕಟಬೋರ್ರೈಯ್ಯನ ಹೆಸರು ಎದ್ದು ಕಾಣುವಂತಹದು. ಅರವೇಲು ನಿಯೋಗಿ ಬ್ರಾಹ್ಮಣ ಮನೆತನಕ್ಕೆ ಸೇರಿದ ಈತನು ಕವೆಲ್ಲಿ ಬಂಧುಗಳಲ್ಲೆಲ್ಲ ಹೆಚ್ಚು ಬುದ್ಧಿವಂತನಾಗಿದ್ದನು. ತನ್ನ ೧೮ನೆಯ ವಯಸ್ಸಿನಲ್ಲಿಯೇ ಮೆಕೆಂಝಿಯ ಕಡೆಗೆ ಬಂದಿದ್ದ ಇವನು ಸಂಸ್ಕೃತ, ತೆಲುಗು, ಹಿಂದುಸ್ತಾನೀ ಭಾಷೆಗಳಲ್ಲಿ ಪರಿಣತಿ ಹೊಂದಿದ್ದನು. ಜ್ಯೋತಿಶ್ಶಾಸ್ತ್ರವನ್ನೂ, ಪಾಶ್ಚಾತ್ಯ ವಿಜ್ಞಾನಗಳನ್ನೂ ಮೆಕೆಂಝಿಯ ನೇತೃತ್ವದಲ್ಲಿ ಕಲಿತವನಾಗಿ ಅವನ ಪ್ರಮುಖ ಸಹಾಯಕನಾದನು. ಶ್ರೀರಂಗಪಟ್ಟಣದ ಮುತ್ತಿಗೆಯ ಕಾಲಕ್ಕೆ ಬ್ರಿಟಿಶರ ಜೊತೆಗೆ ಇದ್ದುಕೊಂಡು ಆ ಘಟನೆಯನ್ನೂ, ಮೈಸೂರರಸರ ಚರಿತ್ರೆಯನ್ನೂ ತೆಲುಗಿನಲ್ಲಿ ಕವಿತಾರೂಪವಾಗಿ ರಚಿಸಿದ್ದಾನೆ (ಶ್ರೀರಂಗರಾಜ ಚರಿತು).

ಮೆಕೆಂಝಿಯ ಮೈಸೂರ ಸಂಚಾರದ ಕಾಲದಲ್ಲಿ ಕನ್ನಡ ದಾಖಲೆಗಳನ್ನು ಓದುವುದಕ್ಕೆ ಯಾರೂ ಇರದಿದ್ದಾಗ ಬೋರ್ರೈಯ್ಯನೇ ಆ ಕೆಲಸವನ್ನು ಕೈಕೊಂಡನು. ತನ್ನ ಒಡೆಯನೊಡನೆ ಚಿತ್ರದುರ್ಗ, ಬೆಂಗಳೂರು, ನಿಜಗುಣಿ, ಸೀರಾಗಳಲ್ಲಿ ಸಂಚರಿಸಿದನು. ಮಾತಿನಲ್ಲಿ ಚತುರನಾಗಿದ್ದರಿಂದ ಹಳೆಯ ನಾಣ್ಯ ಮತ್ತು ಪ್ರಾಚೀನ ಕನ್ನಡ ಹಸ್ತಪ್ರತಿಗಳನ್ನು ಹೊರತೆಗೆಸುವಲ್ಲಿ ಅವನು ಪಳಗಿದ್ದನು. ಮೈಸೂರಿನಲ್ಲಿ ಹೀಗೆ ಕಾರ್ಯಪ್ರವೃತ್ತನಾಗಿದ್ದ ಮಧ್ಯದಲ್ಲಿಯೆ (೧೮೦೩) ಬೋರ್ರೈಯ್ಯನು ತೀರಿಕೊಂಡನು. ಮೆಕೆಂಝಿಯು ಅವನನ್ನು ಬಹಳವಾಗಿ ಮೆಚ್ಚಿಕೊಂಡಿದ್ದನು. ಮತ್ತು ಅವನ ಹೆಸರನ್ನು ಒಂದು ಶಾಸನದ ಪ್ರತಿಯಲ್ಲಿ ಕಾಣಿಸಿದುದಾಗಿ ತಿಳಿದುಬರುತ್ತದೆ.*

ಕೈಫಿಯತ್ತು, ಶಾಸನ, ಹಸ್ತಪ್ರತಿಗಳು ಮುಂತಾದ ಮೆಕೆಂಝಿಯ ಸಂಗ್ರಹ ಕಾರ್ಯದ ಬಗ್ಗೆ ಈಗಾಗಲೇ ಸಾಕಷ್ಟು ವಿವರಗಳು ಪ್ರಕಟವಾದದ್ದೇ ಇದೆ. ದಕ್ಷಿಣ ಭಾರತದ ಭಾಷೆಗಳಿದ್ದ ಕಾವ್ಯದ ಹಸ್ತ ಪ್ರತಿಗಳು ಮದ್ರಾಸದ ಓರಿಯಂಟಲ್ ಲೈಬ್ರರಿಯಲ್ಲಿ ಉಳಿದದ್ದು ಗೊತ್ತಿದ್ದ ವಿಷಯವೇ. ಆದರೆ ದಕ್ಷಿಣ ಭಾರತಕ್ಕೆ ಸಂಬಂಧಿಸಿದ ದಾಖಲೆಗಳು ಇಂಗ್ಲಿಷ್ ಭಾಷೆಯಲ್ಲಿ ಅನುವಾದಗೊಂಡು ಲಂಡನ್ನಿನ ಇಂಡಿಯಾ ಆಫೀಸಿನ ಲೈಬ್ರರಿಯಲ್ಲಿವೆ. ಅವು Mackenzie Collection, part II ಎಂಬೊಂದು ಕೆಟಲಾಗ್‌ನಲ್ಲಿ ಸೇರ್ಪಡೆಯಾಗಿವೆ. ಇದು ೧೯೫೦ರ ಸುಮಾರಿಗೆ ಮುದ್ರಣಗೊಂಡಿದ್ದರೂ ಅದಕ್ಕೊಂದು ವಿಷಯ ಸೂಚಿಯನ್ನು (Index) ಸಿದ್ಧಪಡಿಸಲಿಲ್ಲವಾದ್ದರಿಂದ ಪ್ರಕಟವಾಗದೇ ಉಳಿದುಬಿಟ್ಟಿತು.

---

* He [Venkata Boraiyya] disovered various ancient coins and facsimilies of inscriptions in obsolute Hala-Kannada charecters inscribed on a tablet found at Dodare [?], which is now deposited in the Museum of the Asiatic Society, His master was highly gratified and put his name on it.[4]

ಇದರಲ್ಲಿ ಒಟ್ಟು ೬೫ ದ.ಭಾ.ವಿಷಯಕ ಕಟ್ಟುಗಳಿದ್ದು, ಅವುಗಳಲ್ಲಿಯ ಹನ್ನೆರಡರಲ್ಲಿ, ಕರ್ನಾಟಕಕ್ಕೆ ಸಂಬಂಧಪಟ್ಟ, ಅಲ್ಲಲ್ಲಿ ಅಪೂರ್ವವೆನಿಸುವ ದಾಖಲೆಗಳಿವೆ. ಕ್ರಿ.ಶ. ೯ರಿಂದ ೧೮ನೆಯ ಶತಮಾನದ ಅಂತ್ಯದ ವರೆಗೆ ಅದರ ಹರಹು. ಅದರಲ್ಲಿಯೂ ವಿಜಯನಗರ ಹಾಗೂ ಮೈಸೂರೊಡೆಯರ ಕಾಲದವು ಹೆಚ್ಚಿನ ಸಂಖ್ಯೆಯಲ್ಲಿವೆ. ಕಟ್ಟು ಕತೆ ಹಾಗೂ ಅತಿರಂಜಿತವೆನ್ನಬಹುದಾದ ಅಂಶಗಳನ್ನು ಬಿಟ್ಟರೆ ಆ ಕಾಲದ ಶಿಲ್ಪ, ಇತರ ನಕ್ಷೆಗಳು, ಇವನ್ನು ಬಿಡಿಸಿದ ಚಿತ್ರಗಳು ಇವೆ. ಅದರಲ್ಲಿಯೂ ಕೃಷ್ಣದೇವರಾಯನ ಸಿಂಹಾಸನ, ಆನೆಗಳ ಲಾಯ, ಹೈದರ್, ಟೀಪೂ ಸುಲ್ತಾನ ಇವರಿಗೆ ಸಂಬಂಧಿಸಿದ ಅನೇಕಾನೇಕ ದಾಖಲೆಗಳು ಗಣನೀಯವಾಗಿವೆ. ಟೀಪೂ ಮತ್ತು ಜಾನ್ ಕೆನ್‌ವೇ ಎಂಬ ಬ್ರಿಟಿಶ್ ಅಧಿಕಾರಿಯ ನಡುವೆ ನಡೆದ ಸುದೀರ್ಘ ಸಂಭಾಷಣೆಯ ಒಂದು ದಾಖಲೆ ಇದೆ. ಪ್ರಾಸಂಗಿಕವಾಗಿ ಹೇಳುವುದಾದರೂ ಮಹತ್ವದ ಒಂದು ಅಂಶವೆಂದರೆ ವಿಜಯನಗರೋತ್ತರ ಕಾಲದ ಕರ್ನಾಟಕ ಮರಾಠಾ ಸಂಬಂಧವನ್ನು ಬೆಳಕಿಗೆ ತರುವಂತಹ ದಾಖಲೆಗಳು ಇದ್ದದ್ದು ಈ ಕೆಟಲಾಗ್‌ನಿಂದ ತಿಳಿದು ಬರುತ್ತದೆ.* ಹೀಗೆ ಸಾಮಗ್ರಿಯೇನೋ ವಿಪುಲವಾಗಿದೆ. ಆದರೆ ವಿಶ್ವಸನೀಯವಾಗಿರುವ ಅಂಶಗಳನ್ನು, ಪ್ರಮಾಣಿಸಿಯೇ ಕಂಡುಕೊಳ್ಳಬೇಕು!

ಇದೇ ಅವಧಿಯಲ್ಲಿ ಪಿ. **ಬುಕನನ್** ಎಂಬವನು ಮೈಸೂರು ಪ್ರದೇಶದ ವೀಕ್ಷಣೆಗೆಂದು ಬಂದು ಹೋದನು. ಈತನು ವೃತ್ತಿಯಲ್ಲಿ ಡಾಕ್ಟರ್. ಪ್ರಾಕೃತಿಕ ಶಾಸ್ತ್ರಗಳಲ್ಲಿ ಹಾಗೂ ಸಾಮಾಜಿಕ ವಿಷಯಗಳಲ್ಲಿ ಕೂಡ ಆತನಿಗೆ ಅಭಿರುಚಿ ಇದ್ದಿತು. ಉತ್ತರದ ನೇಪಾಳ, ಆಸಾಮ ಮೊದಲಾದ ಕಡೆಗಳಲ್ಲಿ ಈ ಬಗೆಯ ವೀಕ್ಷಣೆಯನ್ನು ಕೈಕೊಂಡು ವಿಶೇಷ ವರದಿಗಳನ್ನು ಒಪ್ಪಿಸಿದ್ದನಾದ್ದರಿಂದ ಅವನನ್ನು, ಟೀಪೂವಿನ ವಶದಲ್ಲಿ ಅದುವರೆಗೆ ಇದ್ದ ಕೆನರಾ, ಮಲಬಾರ, ಮೈಸೂರು ಪ್ರದೇಶಗಳ ಪರಿಶೀಲನೆಗೆಂದು ಕಳಿಸಿಕೊಡಲಾಗಿತ್ತು. ಅವನು ಮುಖ್ಯತಃ ವರದಿಮಾಡಬೇಕಾದದ್ದು ಕೃಷಿ ಪದ್ಧತಿಯನ್ನು. ಜೊತೆಗೆ ಜನತೆಯ ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಜೀವನದ ಬಗೆಯನ್ನು ತನ್ನ ದಿನಚರಿಯಲ್ಲಿ ಬರೆಯುತ್ತ ಹೋದನು. ತನ್ನ ಸಂಚಾರ ಕಾಲದಲ್ಲಿ ಕೃಷಿ ಸಾಧನಗಳ ಮಾದರಿಗಳಿಂದ ಹಿಡಿದು ಅನೇಕ ವಸ್ತುಗಳನ್ನು ಸಂಗ್ರಹಿಸಿ ಕಲ್ಕತ್ತೆಗೆ ಕಳಿಸಿಕೊಟ್ಟನು. ಸೂಕ್ಷ್ಮದೃಷ್ಟಿಯವನಾದ್ದರಿಂದ ಕನ್ನಡಿಗರ ಜೀವನದ ಬಗೆಗೆ ಅವನು ಹೇಳಿದ ಮಾತುಗಳಲ್ಲಿ ಮಾರ್ಮಿಕತೆ ತಲೆದೋರಿದೆ.

ಅವನ ಪ್ರವಾಸ ದಿನಚರಿಯಲ್ಲಿ ಹುದುಗಿಕೊಂಡ ಪುರಾತನ ಐತಿಹ್ಯಗಳ ಮಹತ್ವವು ಕನ್ನಡಿಗರಿಗೆ ಇದುವರೆಗೆ ಮನದಟ್ಟಾದಂತಿಲ್ಲ. ಬುಕನನ್ ಅನೇಕ ಶಿಲಾಶಾಸನ ಹಾಗೂ ತಾಮ್ರಶಾಸನಗಳ ಪ್ರತಿ ತೆಗೆಯಿಸಿ ಕಲ್ಕತ್ತೆಗೆ ಕಳಿಸಿಕೊಟ್ಟಿರುವ ಉಲ್ಲೇಖಗಳು ಅವನ

* ಮೆಕೆಂಝಿಯ ಬಗ್ಗೆ ಇನ್ನಷ್ಟು ವಿವರಗಳಿಗಾಗಿ ಪ್ರಬುದ್ಧ ಕರ್ನಾಟಕದ ಸಂಪುಟ ೮೭ ಸಂಚಿಕೆ ೩೩೯/೪೦ (೨೦೦೮) ರಲ್ಲಿನ ಲೇಖವನ್ನು ನೋಡಬಹುದು.

ಪುಸ್ತಕದಲ್ಲಿ ಅಲ್ಲಲ್ಲಿ ಹರಡಿಕೊಂಡಿವೆ. (ಉದಾ.ಗೆ ೨ನೇ ಸಂಪುಟದ ಪುಟ ೨೭೮, ೩೭೮ ನೋಡಬಹುದು). ನಾಡಿನ ಚರಿತ್ರೆಗೆ ಸಂಬಂಧಪಟ್ಟ ಕಡತಗಳೂ ಅವನಿಗೆ ದೊರೆತಿದ್ದವು. ಕುಂದಾಪುರದಲ್ಲಿ ರಾಮಪ್ಪ ಮತ್ತು ಕೆಳದಿಯ ಪ್ರದೇಶದಲ್ಲಿ ಬೈಲೂರು ದ್ಯಾವಪ್ಪ ಎಂಬವರು ತುಳುನಾಡವರ ಹಾಗೂ ಕೆಳದಿಯರಸರ ವಂಶವೃತ್ತಾಂತವುಳ್ಳ ಕಡತಗಳನ್ನು ಕೊಟ್ಟದ್ದನ್ನು ಬುಕನನ್ ಹೇಳಿ ಅವುಗಳಲ್ಲಿಯ ಐತಿಹಾಸಿಕ ಸಂಗತಿಗಳನ್ನು ಪರಾಮರ್ಶಿಸಿ ನೋಡಿದ್ದಾನೆ.**

ಬುಕನನ್ ಮೆಕೆಂಝಿಗಿಂತಲೂ ಮಿಗಿಲಾದ ಐತಿಹಾಸಿಕ ಪ್ರಜ್ಞೆಯುಳ್ಳವನಾಗಿದ್ದನು. ತನಗೆ ದೊರಕಿದ್ದ ಶಾಸನ, ಕಡತಗಳಲ್ಲಿಯ ಚಾರಿತ್ರಿಕ ಅಂಶಗಳ ಸತ್ಯತೆಯನ್ನು ಒರೆಗೆ ಹಚ್ಚಿ ನೋಡುವ ಪ್ರವೃತ್ತಿಯು ಅವನಲ್ಲಿ ಇದ್ದಿತು. ಇಂತು ಮೆಕೆಂಝಿ, ಬುಕನನ್ನರು ೧೯ನೇ ಶತಮಾನದ ಆರಂಭದಲ್ಲಿ, ನಾಡಿನಲ್ಲೆಲ್ಲ ಸಂಚರಿಸಿ ಇತಿಹಾಸ ರಚನೆಗೆ ಬೇಕಾಗಿದ್ದ ಕಚ್ಚಾ ಸಾಮಗ್ರಿಯನ್ನು ಸಂಕಲಿಸಿ ಕೊಟ್ಟರು.

### ೫೧೨ ನಾಡಿನ ಇತಿಹಾಸ ರಚನೆ ಮತ್ತು ವಿಲ್ಕ್ಸ್

ಭಾರತೀಯರಲ್ಲಿ ಗತೇತಿಹಾಸವನ್ನು ಬರೆದಿಡಬೇಕೆನ್ನುವ ಪ್ರಜ್ಞೆ ಇದ್ದಿಲ್ಲವೆಂದೂ, ಹಾಗೆ ಬರೆದಿದ್ದರೂ ಐತಿಹಾಸಿಕ ಸತ್ಯತೆಯ ಬಗ್ಗೆ ಅವರಿಗೆ ಅಲಕ್ಷ್ಯವೆಂದೂ ಸಾಮಾನ್ಯವಾಗಿ ತಿಳಿಯಲಾಗುತ್ತದೆ. ಇದರ ಸಾಮಂಜಸ್ಯ ಏನೇ ಇರಲಿ, ಕನ್ನಡದ ಮಟ್ಟಿಗೆ ಹೇಳುವುದಾದರೆ ಹದಿನಾರನೆಯ ಶತಮಾನದ ಮಧ್ಯಕಾಲದಿಂದ ಪುರಾತನ ಸಂಗತಿಗಳನ್ನು, ವಿಶೇಷತಃ ವಂಶಾವಳಿಗಳನ್ನು ಬರೆದಿಡುವ ಪ್ರವೃತ್ತಿಯು ತಲೆದೋರಿದ್ದಿತು. ವಿಜಯನಗರದ ಅಂತಿಮ ಯುದ್ಧವನ್ನು ವರ್ಣಿಸುವ ರಾಮರಾಯನ ಬಖೈರು ಇದಕ್ಕೆ ಸ್ಪಷ್ಟ ನಿದರ್ಶನವಾಗಿದೆ. ಇಂಥ ಪ್ರವೃತ್ತಿಗೆ ಮುಸಲ್ಮಾನ್ ರಾಜರು ಹಾಗೂ ಬಖೈರುಕಾರರು ಪ್ರೇರಣೆಯಿತ್ತಿರಬಹುದು. ಮುಂದೆ ಹದಿನಾರನೆಯ ಶತಮಾನದಿಂದ ಕನ್ನಡ ಸಾಹಿತ್ಯದಲ್ಲಿ ಇತಿಹಾಸ ಕಾವ್ಯಗಳು (ಕುಮಾರರಾಮನ ಸಾಂಗತ್ಯ, ಕಂಠೀರವನರಸರಾಜ ವಿಜಯ, ಚಿಕ್ಕದೇವರಾಯ ವಂಶಾವಳಿ, ಕೆಳದಿ ನೃಪವಿಜಯ ಇತ್ಯಾದಿ) ತಲೆದೋರಿದುದನ್ನು ಇಲ್ಲಿ ಪ್ರಸ್ತಾಪಿಸಬೇಕು.

---

** Ramappa has a book in Sanskrit called Vidiyarayana Sicca and from thence and his family papers he has made out a Raya Paditti or succession of Rajas who had governed Toulava, (Vol 2, p.278)

I have found a Brahman named Bayluru Dyawuppa whose ancestors have been the hereditary writers of the chronicles of Kildi famiy. He engaged to give me the family book called Kildi Raya Paditti. He afterwards forwarded a copy of the work to Purnea who was so good as to add a translation into the modern longuage and character and both of them have been delivered to Bengal Government [i.e. Central Govt.] (Vol. 3, p. 378)

ಚಿಕ್ಕದೇವರಾಯನು ಮೈಸೂರ ಸೀಮೆಯಲ್ಲಿದ್ದ ಎಲ್ಲ ಕಡತ, ಶಾಸನಗಳ ವಿಷಯವನ್ನು ಸಂಗ್ರಹಿಸುವ ಎತ್ತುಗಡೆಯಲ್ಲಿದ್ದುದಾಗಿ ತಿಳಿಯುತ್ತದೆ. ಆದರೆ ಅವನ ಜೀವಿತ ಕಾಲದಲ್ಲಿ ಅದು ಮುಗಿಯಲಿಲ್ಲ. ಅಲ್ಲದೆ ಅದು ಮೂಲ ಉದ್ದೇಶಕ್ಕೆ ತಕ್ಕಂತೆ ವಿಸ್ತಾರವನ್ನು ಹೊಂದದೆ, ಮೈಸೂರು ದೊರೆಗಳ ಚರಿತ್ರೆಗೆ ಸೀಮಿತವಾದಂತೆ ತೋರುತ್ತದೆ. ಒಡೆಯರರ ಮನೆತನಕ್ಕೆ ಜ್ಞಾತಿಗಳಾಗಿದ್ದ ದಳವಾಯಿ ಹಾಗೂ ಅರಸು ಮನೆತನಗಳ ನಡವಳಿಕೆಗೆ ಸಂಬಂಧಿಸಿದ ಅಂಶಗಳನ್ನು ನಿರ್ಣಯಿಸುವ ದೃಷ್ಟಿಯಿಂದ ಚಿಕ್ಕದೇವರಾಜನು ಅವುಗಳ ವಂಶಾವಳಿಗಳನ್ನು ಬರೆಯಿಸಿದನಂತೆ.

ಇಂತು ೧೬ನೆಯ ಶತಮಾನದ ಉತ್ತರಾರ್ಧದಿಂದ ಕನ್ನಡಿಗರಲ್ಲೂ ಇತಿಹಾಸ ಪ್ರಜ್ಞೆಯು ತಲೆದೋರುತ್ತ ನಡೆದು, ಬ್ರಿಟಿಶರ ಆಳಿಕೆಯ ಆರಂಭದಷ್ಟೊತ್ತಿಗೆ ವಿವಿಧ ರಾಜ ಮನೆತನಗಳ, ಪಾಳೆಯಗಾರರ ವಂಶಾವಳಿಗಳು, ಹಾಗೂ ಇತರ ವೃತ್ತಾಂತಗಳು ನಾಡಿನಲ್ಲಿ ಲಭ್ಯವಿದ್ದವು. ಇವುಗಳನ್ನು ಹೆಚ್ಚಾಗಿ ಕಡತಗಳ ಮೇಲೆ ಬರೆದಿಡಲಾಗುತ್ತಿತ್ತು. ಕಲಿಯುಗಾರಂಭದಿಂದ ಮುಂದುವರಿಸಿ ಅನಂತರ ವಿಜಯನಗರದ ರಾಜರ ವಂಶಕ್ರಮವನ್ನು ಹೇಳಿ, ಅಲ್ಲಿಂದ ತಮ್ಮ ಪ್ರದೇಶದ ದೊರೆಯ ವಂಶಾವಳಿಯನ್ನು ಅವು ಸಾಮಾನ್ಯವಾಗಿ ಒಳಗೊಂಡಿರುತ್ತಿದ್ದವು.

ಈ ಹಿನ್ನೆಲೆಯಲ್ಲಿ ಮಾರ್ಕ್ ವಿಲ್ಕ್ಸ್ ಮೈಸೂರಿನ ಇತಿಹಾಸವನ್ನು ಅಧಿಕೃತವಾಗಿ ಬರೆಯಲು ಉಪಕ್ರಮಿಸಿದುದನ್ನು ಗಮನಿಸಬೇಕು. ಕ್ರಿ. ಶ. ೧೮೦೩-೧೮೦೮ರ ಅವಧಿಯಲ್ಲಿ ಮೈಸೂರು ಸಂಸ್ಥಾನದ ರೆಸಿಡೆಂಟ್ ಆಗಿದ್ದ ವಿಲ್ಕ್ಸ್ ಚಾರಿತ್ರಿಕ ದಾಖಲೆಗಳನ್ನು ಇಟ್ಟುಕೊಂಡಿದ್ದ ಕರಣಿಕರನ್ನು ಕರೆಯಿಸಿಕೊಂಡು ಅವರಲ್ಲಿದ್ದ ವಿವರಗಳನ್ನು ಕ್ರೋಢೀಕರಿಸಿದನು. ಈ ಕೆಲಸದಲ್ಲಿ ದಿವಾನ್ ಪೂರ್ಣಯ್ಯನೂ ಅವನ ಹಸ್ತಕನಾದ ಬಚ್ಚೇರಾಯನೂ ನೆರವಾದರು. ಅವನು ಬಳಸಿಕೊಂಡ ಆಕರಗಳಲ್ಲಿ (ಅ) ಚಿಕ್ಕದೇವರಾಯನ ಕಾಲದಿಂದ ಸಂಗ್ರಹಿಸಿದ್ದ ಕಡತ, ಹಸ್ತಪ್ರತಿಗಳ ಪರ್ಶಿಯನ್ ಅನುವಾದದ ಪ್ರತಿ ಮತ್ತು (ಆ) ಮದ್ರಾಸದ ಫೋರ್ಟ್ ಸೇಂಟ್ ಜಾರ್ಜನಲ್ಲಿದ್ದ ಸರಕಾರೀ ಕಾಗದ ಪತ್ರಗಳು ಹೆಚ್ಚು ಪ್ರಯೋಜನಕ್ಕೆ ಒದಗಿದುವು. ಜೊತೆಗೆ ಮೆಕೆಂಝಿಯು ಇದಕ್ಕಾಗಿಯೇ ಒದಗಿಸಿದ್ದ ಟಿಪ್ಪಣಿಗಳ ಆಧಾರದ ಮೇಲೆ ವಿಲ್ಕ್ಸ್ ಆಧುನಿಕ ರೀತಿಯಲ್ಲಿ ಮೈಸೂರು ನಾಡಿನ ಚರಿತ್ರೆಯನ್ನು ಬರೆದು ಮುಗಿಸಿದನು.

ವಿಲ್ಕ್ಸ್‌ನ ಗ್ರಂಥವು ಕರ್ನಾಟಕದ ನವೋದಯ ಚರಿತ್ರೆಯಲ್ಲಿ ಒಂದು ಮಹತ್ವದ ಘಟ್ಟವಾಗಿದೆ. ಮೈಸೂರಿನ ಒಡೆಯರ ಮನೆತನದ ಚರಿತ್ರೆಯ ಜೊತೆಗೆ, ಕದಂಬ, ಚಾಲುಕ್ಯ, ರಾಷ್ಟ್ರಕೂಟ ಮುಂತಾದ ರಾಜಮನೆತನಗಳ ಇತಿಹಾಸವು ಬಂದಿದೆ. ಅದು ಮುಂದಿನ ಇತಿಹಾಸ ಸಂಶೋಧನೆಗೆ ತಳಹದಿಯಾಗಿ ನಿಂತಿತು.

ವಿಲ್ಕ್ಸ್‌ನ ಕೃತಿಯ ವೈಶಿಷ್ಟ್ಯವೆಂದರೆ ಅದು ಬರಿಯೆ ರಾಜಮನೆತನಗಳ

ಘಟನಾವಳಿಯಾಗಿರದೇ, ನಾಡಿನ ಸಾಂಸ್ಕೃತಿಕ ಇತಿಹಾಸಕ್ಕೆ ಸಂಬಂಧಿಸಿದ ಅನೇಕ ಅಂಶಗಳನ್ನು ಒಳಗೊಂಡಿದ್ದುದು. ಸಾಹಿತ್ಯಿಕ ವಿಚಾರಗಳೂ ಅದರಲ್ಲಿ ಪಾಲುಗೊಂಡಿವೆ. ಉದಾಹರಣೆಗೆ ಕದಂಬರ ಚರಿತ್ರೆಯನ್ನು ಹೇಳುವಾಗ ವಿಲ್ಕ್ಸ್, ಅವರ ಭಾಷೆಯು ಹಳಗನ್ನಡಕ್ಕಿಂತಲೂ ಪೂರ್ವದ ಭಾಷೆಯಾಗಿತ್ತೆಂಬುದನ್ನು ಈ ರೀತಿಯಾಗಿ ಹೇಳುತ್ತಾನೆ.

The Hala Canara or Ancient Canara now nearly obsolete is the language of ancient authors; and a still more ancient language and character. Poorvada Hala Canara may be considered on the verge of final extinction, being known at present to a very few persons, indeed, to none that I could trace, excepting two persons, in the employment of Major Mackenzie, this was the language of Banawasi. (Vol.1 p. 12. fn.)

ಈ ಮಾತಿಗೆ ಇನ್ನು ಹಲವು ನಿದರ್ಶನಗಳನ್ನು ಕೊಡಬಹುದು. ವಿಲ್ಕ್ಸ್ ಪ್ರಾಸಂಗಿಕವಾಗಿ ನಮ್ಮ ಗ್ರಾಮಗಳು, ರಾಜರು ಯಾರೇ ಬರಲಿ ಸ್ವಾಯತ್ತವಾಗಿದ್ದುದನ್ನು, ಮತ್ತು ನಮ್ಮ ರೈತರು ಕಷ್ಟಾಳುಗಳು ಮತ್ತು ಬುದ್ಧಿವಂತರು ಎಂಬುದನ್ನು ಪ್ರಸ್ತಾಪಿಸಿದ್ದಾನೆ.

ಇತ್ತ ಹೈದರ್-ಟೀಪೂ ಇವರ ವಿಷಯ ವಿವರವಾಗಿ ಬಂದದ್ದು ಕ್ರಮಪ್ರಾಪ್ತವೇ ಆಗಿದೆ. ಅಷ್ಟರ ಮಟ್ಟಿಗೆ ಅದು ಅವನ ಪರಿಚಿತ ವಿಷಯವಾಗಿತ್ತು. ಅವರಿಬ್ಬರ ಕಾರ್ಯಪದ್ಧತಿಯನ್ನು ಹೋಲಿಸುತ್ತ ಹೈದರ್ ಸುಧಾರಣೆಗಳನ್ನು ಮಾಡಿದ, ಬದಲಾವಣೆ ಮಾಡಿದ್ದು ಕಡಿಮೆ. ಅದೇ ಟೀಪೂ ಬದಲಾವಣೆಗಳನ್ನು ಬೇಕಾದಷ್ಟು ಮಾಡಹೊರಟು ಸುಧಾರಣೆಗೆ ಗಮನ ಕೊಟ್ಟಿಲ್ಲ ಎಂದಿದ್ದಾನೆ. ಅತ್ಯಂತ ಸೂಕ್ತವಾದ ಹೋಲಿಕೆ.

ವಿಲ್ಕ್ಸ್ ಆಗಿನ ಕಾಲದ ಮೈಸೂರ ಆಡಳಿತದ ಬಗ್ಗೆ ೧೮೦೫ರಲ್ಲಿ ಬರೆದ ಒಂದು ವರದಿಯನ್ನು ಸರಕಾರವೇ ಪ್ರಕಟಿಸಿತ್ತೆಂದು ಡಾ. ಜಿ. ಎಸ್. ದೀಕ್ಷಿತರು ಹೇಳಿದ್ದಾರೆ. ವಿಲ್ಕ್ಸ್‌ನನ್ನು ಕುರಿತ ಹೆಚ್ಚಿನ ವಿವರಗಳಿಗೆ ಅವರ ಲೇಖನವನ್ನು 'ಇತಿಹಾಸ ದರ್ಶನ'೮ (೧೯೯೩) ಲ್ಲಿ ನೋಡಬಹುದು.

### ೫೧೩ ಫಿಲಿಪ್ ಮೆಡೋಜ್ ಟೇಲರ್

ಭಾರತಕ್ಕೆ ಬರುವ ಮುನ್ನ ಮೆಡೋಜ್-ಟೇಲರ್ ಉಚ್ಚ ಶಿಕ್ಷಣವನ್ನೇನೂ ಹೊಂದಿರಲಿಲ್ಲ. ಅವನು ಆಡಳಿತಗಾರ-ಅಧಿಕಾರಿ ಇದ್ದದ್ದು ಸುರಪುರದಂತಹ ಸಣ್ಣ ಸಂಸ್ಥಾನದಲ್ಲಿ. ಅಲ್ಲಿಯ ಆಡಳಿತ ಹದಗೆಟ್ಟಿತ್ತೆಂದು ೧೮೪೧ರಲ್ಲಿ ಅವನನ್ನು ಅಲ್ಲಿಗೆ ಕಳಿಸಲಾಯಿತು. ಮುಂದಿನ ೧೨ ವರ್ಷಗಳಲ್ಲಿ ಆರ್ಥಿಕ ಸ್ಥಿತಿ ಸುಧಾರಿಸಿದನಲ್ಲದೆ, ಅತ್ಯಂತ ಜನಪ್ರಿಯನಾಗಿ ಬಾಳಿದ.

ಅವನ ಕರ್ನಾಟಕ ಇತಿಹಾಸದ ಕಾರ್ಯ ಮೂರು ತೆರನಾಗಿದ್ದಿತು. ಸುರಪುರದ ಸುತ್ತಮುತ್ತ ಇದ್ದ ಶಿಲಾಗೋರಿ ಮುಂತಾದ ಪ್ರಾಚೀನ ಅವಶೇಷಗಳನ್ನು ಕಂಡು ಹಿಡಿದದ್ದು,

ಕರ್ನಾಟಕದ ಹಲವಾರು ಊರುಗಳಲ್ಲಿ ಸಂಚರಿಸಿ ಅಲ್ಲಲ್ಲಿಯ ವಾಸ್ತುಶಿಲ್ಪ, ಮೂರ್ತಿಶಿಲ್ಪಗಳನ್ನು ಅಭ್ಯಸಿಸಿದ್ದುದು. ಹಾಗೂ ತನ್ನ ಕೆಲವು ಐತಿಹಾಸಿಕ ಕಾದಂಬರಿಗಳಲ್ಲಿ ಕರ್ನಾಟಕದ ಮಧ್ಯಕಾಲೀನ ರಾಜರು, ಮತ್ತು ಜನಜೀವನ, ಇವನ್ನು ಚಿತ್ರಿಸಿದ್ದುದು.

ಅವನ ಸುಪ್ರಸಿದ್ಧ, ಕಾದಂಬರಿ Confessions of a Thug ಎಂಬುದು. ಅನಂತರದ ಕೃತಿಗಳಲ್ಲಿ ಚಾಂದ್‌ಬೀಬಿ (Noble Queen) ಮತ್ತು ಟಿಪ್ಪು ಸುಲ್ತಾನ (ಅದೇ ಹೆಸರಿನ ಕಾದಂಬರಿ) ಇವರನ್ನು ಬಣ್ಣಿಸಿದ್ದಾನೆ. ಆದರೆ ಟಿಪ್ಪುವನ್ನು ಮನಸಾರೆ ತೆಗಳಿದ್ದಾನೆ. ಇತ್ತ ಚಾಂದ್‌ಬೀಬಿಯನ್ನು ತುಂಬಾ ಹೊಗಳಿದ್ದಾನೆ. ಆ ಕಾಲದ (೧೬ನೆಯ ಶತಮಾನ) ಇಂಗ್ಲೆಂಡಿನ ರಾಣಿಗೆ ಅವಳನ್ನು ಹೋಲಿಸುತ್ತ ಯೋಗ್ಯತೆಯಲ್ಲಿ ಆಕೆಗೆ ಸಮಾನಳು ಎಂದಿದ್ದಾನೆ.

ಮೆಡೋಜ್-ಟೇಲರ್ ಉತ್ತರ ಕರ್ನಾಟಕದ ವಿಜಾಪುರ, ಆನೆಗೊಂದಿ, ಹಂಪಿ, ಲಕ್ಕುಂಡಿ, ಗದಗ, ಬಾದಾಮಿ, ಐಹೊಳೆ ಮುಂತಾದ ಊರುಗಳಲ್ಲಿಯ ವಾಸ್ತುಶಿಲ್ಪಗಳನ್ನು ಅಭ್ಯಸಿಸಿ ಆ ಬಗ್ಗೆ ಬರೆದಿದ್ದಾನೆ. ಆಗಿನ್ನೂ ಛಾಯಾಚಿತ್ರ ವಿಧಾನ ಭಾರತಕ್ಕೆ ಬಂದಿರಲಿಲ್ಲ. ತಾನೇ ಚಿತ್ರಗಳನ್ನು ಬಿಡಿಸಿ Sketches in the Deccan ಪುಸ್ತಕವನ್ನು ಹೊರತಂದನು (೧೮೩೭). ಅವನ ಇನ್ನೆರಡು ಗಣನೀಯ ಪುಸ್ತಕಗಳೆಂದರೆ Architecture at Bijapur ಮತ್ತು Architecture in Dharwar and Mysore, ೧೮೬೬ ರಲ್ಲಿ ಪ್ರಕಟವಾದ ಇವೆರಡೂ ದೊಡ್ಡ ಆಕಾರದ ಸೊಗಸಾದ ಚಿತ್ರ, ನಕ್ಷೆಗಳಿಂದ ಕೂಡಿದ ಗ್ರಂಥಗಳು. ಮೆಡೋಜ್-ಟೇಲರ್ ಮೇಲ್ಮಟ್ಟದ ಇತಿಹಾಸಕಾರನೇನೂ ಅಲ್ಲ. ಆದರೆ ನಾಡಿನ ಔತ್ತರೇಯ ಭಾಗದ ವಾಸ್ತುಶಿಲ್ಪವನ್ನು ಅಭ್ಯಸಿಸಿ, ಬೆಳಕಿಗೆ ತಂದವರಲ್ಲಿ ಅವನೇ ಮೊದಲಿಗ.

ಮೆಡೋಜ್-ಟೇಲರನಿಗೆ ಬೇಡ ಜನಾಂಗದ ವಿಶೇಷ ಸಂಪರ್ಕ ಬಂದಿತಾದ್ದರಿಂದ ಅವರ ಬಗ್ಗೆ ತನ್ನ 'Story of My Life' ಆತ್ಮಕಥನದಲ್ಲಿ ಆತ್ಮೀಯತೆಯನ್ನು ತೋರಿದ್ದಾನೆ.

ಇನ್ನೊಂದು ದಿಕ್ಕಿನ ಇತಿಹಾಸ ಶೋಧದಲ್ಲಿ ಅವನದು ಅಗ್ರಗಣ್ಯ ಪಾತ್ರ. ಅದುವೆ ಕರ್ನಾಟಕದ ಬೃಹತ್ ಶಿಲಾಯುಗದ ಅವಶೇಷಗಳ ಶೋಧ. ೧೮೫೦ರ ಸುಮಾರಿಗೆ ಸುರಪುರದ ಆಚೀಚೆ ಇರುವ ಜೇವರಗಿ, ಹರಟಗಿ, ಮಾಲಗತ್ತಿ, ಹಲಸೋಗಿ, ರಾಜನಕೋಳೂರು ಮುಂತಾದ ಕಡೆಗಳಲ್ಲಿ ಕಲ್ಲಿನ ಚಪ್ಪಡಿಗಳನ್ನೂ, ಅವುಗಳ ಕೆಳಗಿನ ಶವಕುಣಿಗಳನ್ನೂ (Cists, Kistvaens) ಮತ್ತು ಗುಪ್ಪೆಗಳನ್ನೂ (Cairns) ಕಂಡುಹಿಡಿದು ಅವಕ್ಕೂ ಯುರೋಪದಲ್ಲಿದ್ದ ಕೆಲ್ಟಿಕ್, ಮತ್ತು ಇಂಡೋಸಿಥಿಯನ್ ಜನಾಂಗದವರ ಇಂಥದೇ ಶವಸಂಸ್ಕಾರ ಪದ್ಧತಿಗೂ ಇರುವ ಸಾಮ್ಯವನ್ನು ಕುರಿತು ಲೇಖನಗಳನ್ನು ಬರೆದ. ೧೯೩೦ರ ದಶಕದಲ್ಲಿ ಅವೆಲ್ಲ ಲೇಖನಗಳನ್ನು ಹೈದರಾಬಾದಿನ ಪ್ರಾಚ್ಯವಿದ್ಯಾ ಇಲಾಖೆಯವರು ಸಂಗ್ರಹಿಸಿ Magnelithic tombs ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಅಂತೂ ನಾಡಿನ ಬೃಹತ್ ಶಿಲಾಯುಗದ ಹರಹುಗಳನ್ನು ಮೊದಲ ಬಾರಿಗೆ ಕಂಡುಹಿಡಿದ ಶ್ರೇಯಸ್ಸಿಗೂ ಇವನು ಪಾತ್ರನಾಗಿದ್ದಾನೆ.

ಅವನಿಗೆ ಭಾರತದ, ಇಲ್ಲಿಯ ಜನತೆಯ ಬಗ್ಗೆ ಅಪಾರ ಗೌರವವಿದ್ದಿತೆನ್ನುವುದಕ್ಕೆ Outlines of Inidan History ಎಂಬ ತನ್ನ ಗ್ರಂಥದ ಪೀಠಿಕೆಯಲ್ಲಿ ಬರೆದ ಈ ಮಾತುಗಳೇ ಸಾಕ್ಷಿ: 'When Europe, now so highly civilised was wrapt in the darkest gloom of barbarism and its people were savages, India was the seat of the highest intellectual sciences' ಮುಂದುವರಿದು ಈಗೇನೊ ಹಿಂದುಸ್ತಾನವು ಪಾರತಂತ್ರ್ಯ, ಬಡತನ, ಅಜ್ಞಾನಗಳಲ್ಲಿ ತೊಳಲಾಡುತ್ತಿರುವುದು ದುರದೃಷ್ಟದ ಸಂಗತಿ ಎಂದಿದ್ದಾನೆ.

### ೫.೨ ಭಾಷಾಭ್ಯಾಸಿಗಳು

ಮೆಕೆಂಝಿ ಮೊದಲಾದವರ ಒಲವು ಕರ್ನಾಟಕದ ಇತಿಹಾಸದ ಕಡೆಗೆ ಇದ್ದರೆ, ಎಲಿಸ್ ಮತ್ತು ಮೆಕ್ಕೆರೆಲ್ ಕನ್ನಡ ಭಾಷೆಯಲ್ಲಿ ಆಸ್ಥೆಯನ್ನು ತೋರಿಸಿದರು. ಕ್ರಿ.ಶ. ೧೭೯೬ರಲ್ಲಿ ಮದ್ರಾಸಿಗೆ ಬಂದಿದ್ದ ಎಫ್. ಡಬ್ಲ್ಯೂ. ಎಲಿಸ್ ಒಬ್ಬ ಮೇಧಾವಿ. ೧೯ನೆಯ ಶತಮಾನದ ಆರಂಭದಲ್ಲಿ ಅವನ ಹಾಗೆ ಸಂಸ್ಕೃತವನ್ನು ಚೆನ್ನಾಗಿ ತಿಳಿದಿದ್ದ ವಿದೇಶೀಯರು ದಕ್ಷಿಣ ಭಾರತದಲ್ಲಿ ಇನ್ನಾರೂ ಇರಲಿಲ್ಲ. ಆ ಮೂಲಕ ಅವನು ಹಿಂದೂ ಧರ್ಮಶಾಸ್ತ್ರಗಳನ್ನು ಅಭ್ಯಸಿಸಿದನು. ತಮಿಳು, ತೆಲುಗು ಭಾಷೆಗಳನ್ನು ಅವನು ಬಲ್ಲವನಾಗಿದ್ದನು. ಅವನು ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನ ಸ್ಥಾಪನೆಗೆ ಕಾರಣನಾದನಲ್ಲದೆ ತನ್ನ ಜೀವಿತದ ಕೊನೆಯ ವರೆಗೆ ಕಾಲೇಜಿನ ಹಿರಿಯ ಪ್ರಾಧ್ಯಾಪಕನಾಗಿದ್ದನು. ಕ್ರಿ.ಶ. ೧೮೧೨ರಲ್ಲಿ ಮಿರಾಸಿ ಜಮೀನುದಾರಿಕೆಯ ಬಗ್ಗೆ ಅವನು ಸರಕಾರಕ್ಕೆ ಸಾದರಪಡಿಸಿದ ವರದಿಯು ನಿಖರವೂ, ವಿದ್ವತ್ಪೂರ್ಣವೂ ಎನಿಸಿ ಮನ್ನಣೆ ಪಡೆಯಿತು.

ದಕ್ಷಿಣ ಭಾರತದ ಭಾಷೆಗಳ ಬಗೆಗೆ ಎಲಿಸ್ ಅನೇಕ ಬಿಡಿ ಲೇಖನಗಳನ್ನು ಬರೆದಿದ್ದನು. ಅವುಗಳಲ್ಲಿ ಕೆಲವು ಮಾತ್ರ ಮುದ್ರಣಗೊಂಡಿವೆ. ಉತ್ತರ ಭಾರತದ ವಿದೇಶೀ ವಿದ್ವಾಂಸರೆನಿಸಿದ್ದ ಡಾ. ವಿಲ್ಸನ್, ಕೋಲ್‌ಬ್ರುಕ್ ಮೊದಲಾದವರು ಭಾರತದ ಎಲ್ಲ ಭಾಷೆಗಳಿಗೂ ಸಂಸ್ಕೃತವೇ ತಳಹದಿಯೆಂದು ತಿಳಿದಿದ್ದಾಗ ಎಲಿಸ್ ದ್ರಾವಿಡ ಭಾಷಾ ವರ್ಗದ ಪ್ರತ್ಯೇಕತೆಯನ್ನು ಎತ್ತಿ ತೋರಿದನು. ಅವನಿಗಿಂತ ಪೂರ್ವದಲ್ಲಿ ತಮಿಳು, ತೆಲುಗು ಮೊದಲಾದ ದಕ್ಷಿಣ ಭಾರತದ ಭಾಷೆಗಳು ಪ್ರತ್ಯೇಕವಾಗಿವೆ ಎಂಬುದು ಬರೀ ಊಹೆಯಾಗಿದ್ದಿತು. ಎಲಿಸ್ ಆ ದೃಷ್ಟಿಯಿಂದ ಅವುಗಳ ವ್ಯಾಕರಣವನ್ನು ಅಭ್ಯಾಸ ಮಾಡಿ, ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಭಿನ್ನವಾದವು, ಮಾತ್ರವಲ್ಲದೆ ಅವು ಮೂಲತಃ ಒಂದೇ ಭಾಷೆಯ ಬುಡಕಟ್ಟಿನವು ಎಂಬುದನ್ನು ಆಧಾರ ಸಹಿತ ಪ್ರತಿಪಾದಿಸಿದನು. ಕಾಲ್ಡ್‌ವೆಲ್ ದ್ರಾವಿಡ ಭಾಷಾಸಿದ್ಧಾಂತವನ್ನು ಮಂಡಿಸುವುದಕ್ಕೆ ನಲ್ವತ್ತು

ವರ್ಷಗಳ ಪೂರ್ವದಲ್ಲಿ ಅದರ ರೂಪರೇಷೆಗಳನ್ನು ಎಲಿಸ್ ಸಿದ್ಧಪಡಿಸಿದ್ದನೆಂಬುದನ್ನು ನೆನೆದಿರಬೇಕು. ಈ ಕುರಿತ ಅವನ ಲೇಖವು ಕ್ಯಾಂಬೆಲ್ ಕೃತ ತೆಲುಗು ವ್ಯಾಕರಣಕ್ಕೆ (೧೮೧೬) ಪೀಠಿಕೆಯಾಗಿ ಪ್ರಕಟವಾಗಿದ್ದು, ಕನ್ನಡ ವ್ಯಾಕರಣ ವಿಚಾರಗಳೂ ಅದರಲ್ಲಿ ವ್ಯಕ್ತವಾಗಿವೆ. ಶಬ್ದಗಳ ಮತ್ತು ವಾಕ್ಯಗಳ ಮೂಲಕ ಎಲಿಸ್ ಅದರಲ್ಲಿ ಸಂಸ್ಕೃತ ಹಾಗೂ ತಮಿಳು–ತೆಲುಗು–ಕನ್ನಡ ಭಾಷೆಗಳ ಸಾಮ್ಯ, ವೈಷಮ್ಯಗಳನ್ನು ತೋರಿಸಿದ್ದಾನೆ. ಕನ್ನಡ ಶಬ್ದಗಳನ್ನು ಕನ್ನಡ–ಸಂಸ್ಕೃತ ನಿಘಂಟುವಿನಿಂದ (ಅದರ ಹೆಸರು ಹೇಳಿಲ್ಲ) ಆಯ್ದುಕೊಂಡದ್ದಾಗಿ ಹೇಳಿದ್ದಾನೆ. ಅಕ್ಕರೆ, ಅಗಲು, ಅಂಜು–ಈ ಶಬ್ದಗಳು ಇವೆಯಾದ್ದರಿಂದ ಅದು ನಡುಗನ್ನಡ ಕಾಲದಲ್ಲಿ ರಚಿತವಾದ ಒಂದು ಶಬ್ದಕೋಶವಾಗಿರಬೇಕು.

ಕನ್ನಡ ವ್ಯಾಕರಣಕಾರನಾದ **ಜಾನ್ ಮೆಕ್ಕೆರಲ್** ೧೮೦೪ರಲ್ಲಿ ಮದ್ರಾಸಿಗೆ ಬಂದನು. ಸುರುವಿಗೆ ಕಲಿತದ್ದು ತೆಲುಗು ಭಾಷೆಯನ್ನು. ಕ್ರಿ. ಶ. ೧೮೦೬–೧೮೧೧ರ ಅವಧಿಯಲ್ಲಿ ಕೆನರಾ ಜಿಲ್ಲೆಯಲ್ಲಿ ಸಬ್ ಕಲೆಕ್ಟರನಿದ್ದಾಗ ಕನ್ನಡವನ್ನು ಕಲಿತನು. ಮದ್ರಾಸಿಗೆ ಹಿಂತಿರುಗಿ ಕೆಲವು ಕಾಲ ತೆಲುಗಿನ, ಅನಂತರ ೧೮೧೭–೧೮೨೦ರ ವರೆಗೆ ಕನ್ನಡದ ಭಾಷಾಂತರಕಾರನಾಗಿ ಕೆಲಸ ಮಾಡಿದನು.

ಮೆಕ್ಕೆರಲ್ ಕೆನರಾದಲ್ಲಿ ಇದ್ದಾಗಲೇ ಕನ್ನಡ ವ್ಯಾಕರಣ ರಚನೆಯ ಸೂಚನೆಯನ್ನು ಮದ್ರಾಸ್ ಕಾಲೇಜಿನ ಅಧಿಕಾರಿಗಳ ಮುಂದೆ ಇರಿಸಿದ್ದನು. ಅವರು ಆ ಕೆಲಸವನ್ನು ಅವನಿಗೇ ಒಪ್ಪಿಸಿದರು. ವಿಲಿಯಮ್ ಕೇರಿಗಿಂತ ಮಿಗಿಲಾಗಿ ಇವನು ಕನ್ನಡದಲ್ಲಿ ನೈಪುಣ್ಯವನ್ನು ಹೊಂದಿದ್ದನು. ಶಬ್ದಮಣಿದರ್ಪಣದ ಹಸ್ತಪ್ರತಿಯನ್ನು ದೊರಕಿಸಿ, ಓದಿಸಿಕೊಂಡು ಅದನ್ನನುಸರಿಸಿ ತನ್ನ ಕೃತಿಯನ್ನು ರಚಿಸಿದ್ದಾನೆ. ಅವನ ಕಾರ್ಯದಲ್ಲಿ ಶಂಭಂಪತಿ ಮೀನಾಕ್ಷಯ್ಯ, ಕಡಾಂಬಿ ರಂಗಾಚಾರಿ ಮತ್ತು ಮೂಡಂಬಿ ಶ್ರೀನಿವಾಸಾಚಾರಿ ಎಂಬ ದೇಶೀಯರು ನೆರವಾಗಿದ್ದರು. ಮೆಕ್ಕೆರಲ್‌ನ ಹಸ್ತಪ್ರತಿಯನ್ನು ಎಲಿಸನೂ ಪರಿಶೀಲಿಸಿದ್ದಾನೆ. ಆಧುನಿಕರಲ್ಲಿ ಕನ್ನಡದ ಮೊತ್ತಮೊದಲಿನ ವ್ಯಾಕರಣಕಾರನೆನಿಸಿದ ವಿಲಿಯಂ ಕೇರಿಯ ಪುಸ್ತಕವು ಪ್ರಸಾರ ಹೊಂದದೆ ಅಜ್ಞಾತವಾಗಿ ಉಳಿದಿದ್ದಾಗ ಮೆಕ್ಕೆರೆಲ್‌ನ ವ್ಯಾಕರಣವೇ ಆಗಿನ ದಿನಗಳಲ್ಲಿ ಏಕೈಕವಾಗಿದ್ದಿತು. ವಿದೇಶಿಯರಿಗೆಂದೇ ಬರೆಯಲಾಗಿದ್ದ ಇದನ್ನು ಅಭ್ಯಾಸ ಮಾಡಿದ ಅಧಿಕಾರಿಗಳೂ ಮಿಶನರಿಗಳೂ ಅದೆಷ್ಟೋ ಜನ. ಮುಂದಿನ ವ್ಯಾಕರಣಗಳ ರಚನೆಗೆ ಇದುವೇ ತಳಹದಿಯಾಯಿತು.

### ೫.೨.೧ ವಾಲ್ಟರ್ ಎಲಿಯಟ್

ಶಿಕ್ಷಣ, ಪಠ್ಯಪುಸ್ತಕ ರಚನೆ, ಶಾಸನಗಳ ಸಂಗ್ರಹ, ಇತಿಹಾಸ ಲೇಖನ, ಕನ್ನಡ ಕೃತಿಗಳ ಸಂಪಾದನೆ – ಈ ರಂಗಗಳಲ್ಲಿ ಪರಿಶ್ರಮಿಸಿದ ಎಲಿಯಟ್‌ನ ಕನ್ನಡ ಸೇವೆಯು ಅಪ್ರತಿಮವಾಗಿದೆ. ಮೆಕೆಂಝಿ ಮೊದಲಾದವರು ಪ್ರಾಸಂಗಿಕವಾಗಿ ಇಲ್ಲವೆ ಒಂದು

ವಿಶಿಷ್ಟ ಸಂದರ್ಭದಲ್ಲಿ ಅಷ್ಟಿಷ್ಟು ಕನ್ನಡದ ಕೆಲಸವನ್ನು ಮಾಡಿದ್ದಾರೆ, ಎಲಿಯಟ್ ತನ್ನ ವಾಸ್ತವದ ಬಹು ಕಾಲವನ್ನು ಇದಕ್ಕಾಗಿ ವಿನಿಯೋಗಿಸಿದ್ದಾರೆ. ಎಳವರೆಯದಲ್ಲಿಯೆ ದಕ್ಷಿಣ ಭಾರತಕ್ಕೆ ಬಂದ ಅವರು (೧೮೨೧) ಮದ್ರಾಸದ ಸೈನ್ಯ ಖಾತೆಯನ್ನು ಸೇರಿದರು. ಕಿತ್ತೂರ ದೇಸಗತಿಯ ವಿರುದ್ಧ ಹೋರಾಟ ನಡೆದಿದ್ದಾಗ ಇವರನ್ನು ಸೆರೆಹಿಡಿಯಲಾಗಿತ್ತು (೧೮೨೪). ಅಲ್ಲಿಂದ ಬಿಡುಗಡೆ ಹೊಂದಿದ ಮೇಲೆ ಎಲಿಯಟ್ ಧಾರವಾಡದಲ್ಲಿ ಪ್ರಥಮತಃ ಕನ್ನಡ ಶಾಲೆಯನ್ನು ಸ್ಥಾಪಿಸಿ, ಆ ಶಿಕ್ಷಕನಿಗೆ ತಮ್ಮ ಕೈಯಾರೆ ಸಂಬಳವಿತ್ತು ಹಲವಾರು ವರ್ಷ ಅದನ್ನು ನಡೆಸಿಕೊಂಡು ಬಂದುದನ್ನು ಈ ಹಿಂದೆ <೩೧೧> ಪ್ರಸ್ತಾಪಿಸಿದ್ದೇವೆ. ಆ ಪ್ರದೇಶದ ಆಡಳಿತ ರಂಗದಲ್ಲಿ ಕನ್ನಡವೇ ಮಾಧ್ಯಮವಾಗಬೇಕೆಂಬುದಕ್ಕೆ ಸರಕಾರದ ಮೇಲೆ ಪರ್ಯಾಯವಾಗಿ ಒತ್ತಾಯವನ್ನು ತಂದು ಮುಂಬೈ ಕರ್ನಾಟಕದ ಅನೇಕ ಕಡೆಗಳಲ್ಲಿ ಸರಕಾರೀ ಕನ್ನಡ ಶಾಲೆಗಳು ಕ್ರಮೇಣ ತಲೆದೋರುವುದಕ್ಕೆ ಕಾರಣರಾದರು. ಎಲಿಯಟ್ ಕನ್ನಡದ ಪ್ರಪ್ರಥಮ ಪಠ್ಯಪುಸ್ತಕಗಳ ರಚನೆಗೆ (೧೮೩೩) ಹೇಗೆ ಪ್ರಯತ್ನಿಸಿದರೆಂಬುದನ್ನೂ ನೋಡಿದ್ದೇವೆ.

ಮುಂಬಯಿ ಕರ್ನಾಟಕದಲ್ಲಿ ನೌಕರಿಯಲ್ಲಿದ್ದ ಎಂಟು ವರ್ಷಗಳ ಅವಧಿಯಲ್ಲಿ ಎಲಿಯಟ್ ಇಲ್ಲಿಯ ಶಾಸನಗಳನ್ನು ಕಲೆ ಹಾಕಿದುದು ಒಂದು ಮಹತ್ವದ ಸಾಧನೆಯಾಗಿದೆ. ಮೆಕೆಂಝಿಯಿಂದ ಸಂಗ್ರಹಿತವಾದ ಶಾಸನಗಳು ಮೈಸೂರು ಸಂಸ್ಥಾನ ಹಾಗೂ ಮದ್ರಾಸದ ಪಶ್ಚಿಮ ಭಾಗಕ್ಕೆ ಸಂಬಂಧಿಸಿದ್ದವು. ಎಲಿಯಟ್ ಸಂಗ್ರಹವು ಧಾರವಾಡ ಸುಭಾ, ನಿಜಾಮ ರಾಜ್ಯದ ಪಶ್ಚಿಮ ಭಾಗ ಹಾಗೂ ಸೋಂದಾ ಪ್ರದೇಶ (ಉತ್ತರ ಕನ್ನಡ ಜಿಲ್ಲೆ) ಈ ಪ್ರದೇಶಗಳಲ್ಲಿ ದೊರೆತ ೧೩೦೦ ಶಿಲಾಶಾಸನಗಳನ್ನೂ, ಹಲವಾರು (ಸಂಸ್ಕೃತ) ತಾಮ್ರಶಾಸನಗಳನ್ನೂ ಒಳಗೊಂಡಿದ್ದಿತು. ಮೆಕೆಂಝಿ ಮತ್ತು ಇತರರು ತಾವು ಸಂಗ್ರಹಿಸಿದ ಶಾಸನಗಳಿಂದ ದೊರೆಯುವ ಐತಿಹಾಸಿಕ ವೃತ್ತಾಂತಗಳನ್ನು ಅಷ್ಟಿಷ್ಟು ತೋರಿಸಿಕೊಟ್ಟಿದ್ದಾದರೆ, ಎಲಿಯಟ್ ಆಧುನಿಕ ಸಂಶೋಧನಾ ಮಾರ್ಗವನ್ನವಲಂಬಿಸಿ ಶಾಸನಗಳಿಂದ ದೊರೆತ ವಿವರಗಳ ಸತ್ಯಾಸತ್ಯತೆಯನ್ನು ನಿರ್ಧರಿಸಲು ಪ್ರಯತ್ನಿಸಿದ್ದಾರೆ.

ಆಗಿನ ಸಂಶೋಧಕರಿಗೆ ಶಾಸನಗಳ ಹಳಗನ್ನಡ ಲಿಪಿಯನ್ನು ಚೆನ್ನಾಗಿ ಅರಿತುಕೊಳ್ಳುವುದು ಆರಂಭದ ತೊಡಕಾದರೆ, ಯಾವುದೊಂದು ರಾಜಮನೆತನದ ವಂಶಾವಳಿ ಮತ್ತು ಘಟನೆಗಳನ್ನು ಸಿದ್ಧಪಡಿಸುವಲ್ಲಿ, ಶಕವರ್ಷ, ಬಿರುದು, ಹೆಸರುಗಳ ಉಲ್ಲೇಖದಲ್ಲಿಯ ಅಸ್ಪಷ್ಟತೆಗಳು ಇನ್ನಷ್ಟು ತೊಂದರೆಗಳನ್ನು ಮುಂದೊಡ್ಡಿದುವು.

ಯಾವುದೊಂದರ ವಿಚಾರದಲ್ಲಿ ಈ ರೀತಿ ಸಂದೇಹವುಂಟಾದಾಗ ತುಲನೆ ಮಾಡಿ ನೋಡಬೇಕೆಂದರೆ, ಸಮಗ್ರ ಕರ್ನಾಟಕದ ಸಮರ್ಪಕವಾದ ಇತಿಹಾಸ ರಚನೆಯು ಇನ್ನೂ ಆಗಿರಲಿಲ್ಲ. ಇಂಥ ಸ್ಥಿತಿಯಲ್ಲಿ ಕರ್ನಾಟಕದ ಶಾಸನಗಳಿಂದ ಹೊರಡುವ ಇತಿಹಾಸದ ಒಂದೊಂದೇ ಎಳೆಗಳನ್ನು ಬಿಡಿಸಿ, ಜೋಡಿಸಿ ನೇಯುವ ಪರಿಶ್ರಮದ

ಕೆಲಸವನ್ನು ಎಲಿಯಟ್ ಕೈಗೊಂಡರು. ಅದರ ಫಲಶ್ರುತಿಯೇ ಅವರು ರಾಯಲ್ ಏಶಿಯಾಟಿಕ್ ಸೊಸೈಟಿಗೆ ಸಾದರಪಡಿಸಿದ Hindu Inscriptions ಎಂಬ ವಿಸ್ತೃತ ಪ್ರಬಂಧ (೧೮೩೭)

ಈ ಪ್ರಬಂಧದಲ್ಲಿ ಶಕವರ್ಷ ೮೯೫ ರಿಂದ ೧೨೩೪ರ ವರೆಗಿನ ೫೯೫ ಶಾಸನಗಳ ಪರಿವೀಕ್ಷಣೆಯಿದ್ದು ಚಾಳುಕ್ಯ (ಕಲ್ಯಾಣ), ಕಳಚುರಿ, ಹೊಯ್ಸಳ ಮತ್ತು ಯಾದವ ಈ ನಾಲ್ಕು ರಾಜಮನೆತನಗಳ ವಂಶಾವಳಿಯನ್ನು ಎಲಿಯಟ್ ರೂಪಿಸಿದ್ದಾರೆ. ಜೊತೆಗೆ ಕೊಲ್ಲಾಪುರದ ಶಿಲಾಹಾರರು, ಉತ್ತರಕಾಲೀನ ಕದಂಬರು, ಸವದತ್ತಿ ರಟ್ಟರು ಮೊದಲಾದವರನ್ನು ಕುರಿತ ಚಾರಿತ್ರಿಕ ಅಂಶಗಳನ್ನೂ ಕೊಟ್ಟಿದ್ದಾರೆ. ಕೇವಲ ಶಾಸನಗಳ ಆಧಾರದ ಮೇಲೆ ಕರ್ನಾಟಕದ ೫೦೦ ವರ್ಷಗಳ ಇತಿಹಾಸವನ್ನು ರಚಿಸಿದುದು ಸಣ್ಣ ಮಾತೇನಲ್ಲ.*

ಜೊತೆಗೆ ಬೇರೆ ಚರಿತ್ರೆಯ ಗ್ರಂಥಗಳಲ್ಲಿ ಬಂದ ಕರ್ನಾಟಕದ ಅಂಶಗಳ ವಿಮರ್ಶೆ ಮಾಡಿದ್ದಾರೆ. ಉದಾ.ಗೆ ಚಾಳುಕ್ಯ ಹಾಗೂ ಸೋಳುಂಕೆ ಈ ಹೆಸರುಗಳು ಸಮಾನಾರ್ಥಕವೆಂದು ಹೇಳಿದ ಗ್ರ್ಯಾಂಟ್ ಡಫ್ ಎಂಬ ಮರಾಠಾ ಇತಿಹಾಸಕಾರನನ್ನು ಅಲ್ಲಗಳೆದಿದ್ದಾರೆ. ಅದಕ್ಕೆ ಪುರಾವೆಯಾಗಿ ಎಲಿಯಟ್ ಗುಜರಾಥದಲ್ಲಿರುವ ಚಾಲುಕ್ಯರ ಶಾಸನಗಳಲ್ಲಿ ಎಲ್ಲಿಯೂ ಹಾಗೆ ಪ್ರಸ್ತಾಪ ಬಂದಿಲ್ಲವೆಂದಿದ್ದಾರೆ. ಅಲ್ಲದೆ ಸೋಳುಂಕೆಯವರು ಸೂರ್ಯವಂಶದವರು, ಚಾಲುಕ್ಯರು ಚಂದ್ರವಂಶೀಯರೆಂಬುದನ್ನೂ ಪುರಾವೆಯಾಗಿ ಕೊಟ್ಟಿದ್ದಾರೆ.

ಶಾಸನಾಧಾರಿತ ಕರ್ನಾಟಕ ಇತಿಹಾಸವು ನಿರ್ಮಾಣವಾಗಿರದ ಕಾಲದಲ್ಲಿ, ಶಾಸನಗಳಿಂದ ಇತಿಹಾಸದ ಎಳೆಗಳನ್ನು ಹೊರತೆಗೆಯುವಲ್ಲಿ ಇದು ಪ್ರಥಮ ಯಶಸ್ವೀ ಪ್ರಯತ್ನವಾಗಿದೆ.

ಮಹತ್ವದ್ದೆಂದರೆ ಶಾಸನಗಳ ಅಧ್ಯಯನಕ್ಕೆ ಅವರು ಹಿಡಿದ ಹಾದಿಯು ಮುಂದಣವರಿಗೂ ಅನುಕೂಲ ಮಾರ್ಗವಾಗಿ ಪರಿಣಮಿಸಿತು. ಶಾಸನ ಧುರಂಧರರಾದ ಫ್ಲೀಟ್ ಹಾಗೆಂದು ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾರೆ:

The present paper [i.e. Dynasties of the Canarese Districts of the Bombay Presidency] is written upon much the same lines. No better method than Sir Water Elliot's dealing with the subject could well be devised.[೬]

---

* ಶಾಸನಗಳ ಅಧ್ಯಯನದ ಕಾಲಕ್ಕೆ ಎಲಿಯೆಟ್ ಕನ್ನಡ ಲಿಪಿಯ ವಿಕಾಸವನ್ನು ತಕ್ಕಮಟ್ಟಿಗೆ ಗುರುತಿಸಿ ಆ ಕುರಿತ ಪಟವೊಂದನ್ನು ತಯಾರಿಸಿ ಮುಂಬಯಿ ಸರಕಾರದ ಶಿಲಾ ಮುದ್ರಣ ಯಂತ್ರದಲ್ಲಿ ಮುದ್ರಿಸಿದ್ದಾರೆ.

ಎಲಿಯಟ್ ೧೮೩೭ರಿಂದ ಮುಂದೆ ಮದ್ರಾಸ ಪ್ರಾಂತ್ಯದ ಗವರ್ನರನ ಕಾರ್ಯದರ್ಶಿಯಾಗಿಯೂ ಕನ್ನಡ ಭಾಷಾಂತಕಾರನಾಗಿಯೂ ಕೆಲಸ ಮಾಡಿದರು. ಕೆಲವು ಕಾಲ ಪರ್ಶಿಯನ್‌ದ ಅಧಿಕೃತ ಭಾಷಾಂತರಕಾರರೂ ಆಗಿದ್ದರು. ತಮ್ಮ ಯೋಗ್ಯತೆಯಿಂದ ಮೇಲೇರುತ್ತ ೧೮೫೪-೫೯ರ ಅವಧಿಯಲ್ಲಿ ಮದ್ರಾಸದ ಹಿರಿಯ ಆಡಳಿತಗಾರರಾಗಿ ಹೆಸರು ಹೊಂದಿದರು.

ಮದ್ರಾಸಿನಲ್ಲಿದ್ದಾಗ ಎಲಿಯಟ್ ಕೆಲವು ಕನ್ನಡ ಪುಸ್ತಕಗಳ ಪ್ರಕಟಣೆಗೆ ಕಾರಣರಾದರು. ಇಸೋಪನ ನೀತಿಕತೆಗಳ ಅನುವಾದವನ್ನು ಪರಿಷ್ಕರಿಸಿ ಪ್ರಕಟಿಸಿದರು. ಆಡಳಿತಗಾರರ ಉಪಯೋಗಾರ್ಥವಾಗಿ ಅಡಕ್ಕಿ ಸುಬ್ಬರಾಯನೆಂಬ ದೇಶೀಯನಿಂದ ರಚಿತವಾದ ಕೆಲವು ಕನ್ನಡ ಕತೆಗಳು ಮತ್ತು ರೆವಿನ್ಯೂ ಕಾಗದಗಳ ಸಂಗ್ರಹದ ಪುಸ್ತಕವನ್ನು ಸಹ ಪರಿಷ್ಕರಿಸಿ ಹೊರತಂದಿದ್ದಾರೆ A selection of stories and revenue papers in Kannada language, 1846. ಎಲಿಯಟ್‌ರ ಒಂದು ಮಹತ್ವದ ಲೇಖವು ಗೋಂಡ್ ಭಾಷೆಯಲ್ಲಿ ಕಂಡುಬರುವ ದ್ರಾವಿಡ ಅಂಶಗಳನ್ನು ಕುರಿತದ್ದಾಗಿದೆ.

ನಿವೃತ್ತನಾಗಿ ಇಂಗ್ಲೆಂಡಿನಲ್ಲಿದ್ದುಕೊಂಡೇ ಎಲಿಯಟ್ ಗತಕಾಲದ ದಕ್ಷಿಣ ಭಾರತದ ಕುರಿತಾದ ಸಂಶೋಧನೆಯನ್ನು ಮುಂದುವರಿಸಿ ರಾಯಲ್ ಏಶಿಯಾಟಿಕ್ ಸೊಸೈಟಿಯ ಪತ್ರಿಕೆಯಲ್ಲಿ ಲೇಖನಗಳನ್ನು ಬರೆಯುತ್ತಿದ್ದರು.

ಎಲಿಯಟ್ಟರ ಇನ್ನೊಂದು ಗಣನೀಯ ಕಾರ್ಯವೆಂದರೆ ಆಗಿನ ಉತ್ತರ ಕರ್ನಾಟಕದ ಜನಜೀವನವನ್ನು, Miscellaneous Notes ಪುಸ್ತಕದಲ್ಲಿ ಚಿತ್ರಿಸುತ್ತಿದ್ದುದು. (ಸಂಪಾದಿಸಿದವರು: ರಾಬರ್ಟ್ ಸಿವೆಲ್). ಅದರಲ್ಲಿ ತಳ್ಳಿಕೋರರೆಂಬ ವಿಶಿಷ್ಟ ವೃತ್ತಿಯವರಿದ್ದಾರೆ, ಮಡಿವಂತ ಬ್ರಾಹ್ಮಣರಿದ್ದಾರೆ, ಸ್ವಾಮಿನಿಷ್ಠೆ, ಪ್ರಾಮಾಣಿಕತೆಯ ಪರಾಕಾಷ್ಠೆಯನ್ನು ತೋರಿದವರಿದ್ದಾರೆ, ೧೮ನೆಯ ಶತಮಾನದಷ್ಟು ಹಿಂದೆ ಇಲ್ಲಿ ನೆಲಸಿದ ಮಾರವಾಡಿಗಳಿದ್ದಾರೆ.

ಇನ್ನೊಂದು ಸಂಗತಿಯೆಂದರೆ ಪಶು-ಪ್ರಾಣಿಗಳ ಬಗೆಗಿನ ಅವರ ತಿಳುವಳಿಕೆ. ವಾಲ್ಟರ್ ಕ್ಯಾಂಬೆಲ್ ಎಂಬಾತ My Indian Jopurnal ಎಂಬ ತನ್ನ ಪುಸ್ತಕದಲ್ಲಿ ಎಲಿಯಟ್ಟನ ಬೇಟೆಯ ಪರಿಣತಿಯನ್ನು ಹೊಗಳಿ ಬರೆದಿದ್ದಾನೆ. ವಿಕಾಸವಾದದ ಪ್ರವರ್ತಕನಾದ (Theory of evolution) ಚಾರ್ಲ್ಸ್ ಡಾರ್ವಿನ್ನನು ಎಲಿಯಟ್‌ನ ಸ್ನೇಹಿತ. ಹೀಗಾಗಿ ಡಾರ್ವಿನ್ ಇವರಿಗೆ ಪತ್ರ ಬರೆದು ವಿವಿಧ ಪ್ರಾಣಿಗಳ ಆಕಾರ, ವರ್ತನೆ ಇವುಗಳ ಬಗ್ಗೆ ವಿವರಗಳನ್ನು ತರಿಸಿಕೊಂಡಿದ್ದಾನೆ. (ಅವರ ಈ ಪತ್ರವ್ಯವಹಾರವನ್ನು ಕೇಂಬ್ರಿಜ್ ವಿಶ್ವವಿದ್ಯಾಲಯದ ಲೈಬ್ರರಿಯಲ್ಲಿ ಕಾಯ್ದಿಡಲಾಗಿದೆ ಮತ್ತು ಈಗ ಅದು ಅಂತರ್ಜಾಲದಲ್ಲಿಯೂ ಲಭ್ಯವಿದೆ. ವಿವರಗಳಿಗೆ ನೋಡಿ:www.darwinproject.ac.uk)

ಅವನ ಮೌಲಿಕವೆನ್ನಬಹುದಾದ ಗ್ರಂಥವು ದಕ್ಷಿಣ ಭಾರತದ ನಾಣ್ಯ ಶಾಸ್ತ್ರಕ್ಕೆ ಸಂಬಂಧಿಸಿದುದು. ಅದನ್ನು ಬರೆಯುವಾಗ ಕರ್ನಾಟಕದ ನಾಣ್ಯಗಳ ಪ್ರಸ್ತಾಪ ಬಂದೇ ಇದೆ (Coins of South India, Numismata Orientalia Series, 1886)

ಅವರು ತೀರಿಕೊಂಡ ಮೇಲೆ ಬರೆಯಲಾದ ಶೋಕ ಲೇಖನದಲ್ಲಿ–

With Indians he had througout his service maintained a free and friendly intercourse, with Indiands recognising the many good qualities they possess. (J.of R. A. S. 1887, p. 253) ಅದು ಅಕ್ಷರಶಃ ನಿಜ. ಬೇಕಾದಷ್ಟು ನಿದರ್ಶನಗಳೂ ಇವೆ. ಇದೊಂದನ್ನು ದೃಷ್ಟಾಂತವಾಗಿ ಉಲ್ಲೇಖಿಸುವೆವು. ಇದನ್ನು ಹೇಳಿದವ ಹೊಸಗನ್ನಡದ ಮೊತ್ತಮೊದಲಿನ ವ್ಯಾಕರಣವನ್ನು ರಚಿಸಿದ ಎಸ್. ಕೃಷ್ಣಮಾಚಾರಿ. ವೃತ್ತಿಯಲ್ಲಿ ವಕೀಲರು. ತಮ್ಮ ಪುಸ್ತಕದ ಒಂದು ಪ್ರತಿಯನ್ನು ಎಲಿಯಟ್‌ಗೆ ಕಾಣಿಕೆಯಾಗಿ ಕೊಡುತ್ತ ಹೀಗೆ ಕಾಣಿಸಿದ್ದಾರೆ:

As your Honour's kind and liberal consideration and treatment of the Natives is a theme of universal gratification. . .I have felt an ardent desire to pay my respects. . .I do not propose to trouble your honour with any request for public employ. My sole object is to enjoy the acquitance of your honour as a learned Oriental Scholar, as a gentleman of liberality and greatness of heart.*

## ೫.೨೨ ಕೆಲವು ದೇಶೀಯರು, ಇತರರು

ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನಲ್ಲಿ ನಡೆಯುತ್ತಿದ್ದ ಕನ್ನಡ ಅಧ್ಯಯನದಿಂದಾಗಿ, ಇಬ್ಬರು ದೇಶೀಯರು ಕನ್ನಡ ಭಾಷಾಭ್ಯಾಸದ ಬಗ್ಗೆ ಪುಸ್ತಕಗಳನ್ನು ಬರೆದಿದ್ದಾರೆ. ಅವರೆಂದರೆ, ಮೇಲೆ ಕಾಣಿಸಿದ **ಎಸ್. ಕೃಷ್ಣಮಾಚಾರಿ** ಮತ್ತು **ಅಡಕ್ಕಿ ಸುಬ್ಬರಾಯ**. ಕೃಷ್ಣಮಾಚಾರಿಯು ಮೂಲತಃ ಶ್ರೀರಂಗಪಟ್ಟಣದವನಾದರೂ ಮದ್ರಾಸದ (ಚೆನ್ನಪಟ್ಟಣ) ಸದರ ಅದಾಲತ್ ಕೋರ್ಟಿನಲ್ಲಿ ವಕೀಲನಾಗಿದ್ದನು. ಆ ಮುಂಚೆ ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನಲ್ಲಿ ಅಭ್ಯಾಸಮಾಡಿ ಪಂಡಿತೋದ್ಯೋಗಕ್ಕೆ ಯೋಗ್ಯತಾ ಪತ್ರಿಕೆಯನ್ನು ಪಡೆದಿದ್ದುದಾಗಿ ತನ್ನ ವ್ಯಾಕರಣ ಪುಸ್ತಕದ ಪೀಠಿಕೆಯಲ್ಲಿ ಹೇಳಿದ್ದಾನೆ. ಈ ಸಮಯದಲ್ಲಿ ಅವನು ರೀವ್‌ನಿಗೆ ಕೋಶವನ್ನು ಸಿದ್ಧಪಡಿಸುವಲ್ಲಿ ನೆರವಾಗಿದ್ದಾನೆ.

---

* ವಾಲ್ಟರ್ ಎಲಿಯೆಟ್ ಕನ್ನಡ ನಾಡನ್ನೂ, ಕನ್ನಡ ಜನತೆಯನ್ನೂ ಆತ್ಮಸಾತ್ ಮಾಡಿಕೊಂಡಿದ್ದರು. ಅವರ ಬಗ್ಗೆ ಹೇಳಬೇಕಾದ ಮಹತ್ತ್ವಪೂರ್ಣ ಅಂಶಗಳು ಇನ್ನೂ ಹಲವಾರು ಇವೆ. ವಿವರಗಳಿಗಾಗಿ ಅನುಬಂಧ – ೫ ನೋಡುವುದು.

ಕಾಲೇಜ್ ಬೋರ್ಡಿನ ಕಾರ್ಯದರ್ಶಿಯಾಗಿದ್ದ ಹಾರ್ಕನೆಸ್‌ನ ಸೂಚನೆಯ ಮೇರೆಗೆ, ಕೃಷ್ಣಮಾಚಾರಿಯು ತಾನು ವಿದ್ಯಾರ್ಥಿಯಿದ್ದಾಗಲೇ, ಹೊಸಗನ್ನಡ ವ್ಯಾಕರಣವನ್ನು ಪ್ರಶ್ನೋತ್ತರ ರೂಪದಲ್ಲಿ ಸಿದ್ಧಗೊಳಿಸಿದ್ದನು. ಜಾನ್ ವಾಕರ್ ಎಂಬ ಇನ್ನೊಬ್ಬ ಅಧಿಕಾರಿಯು ಅದರ ಮುದ್ರಣ ವೆಚ್ಚವನ್ನು ವಹಿಸಿಕೊಂಡದ್ದರಿಂದ, ಅದರ ಪ್ರಕಟಣೆಯು ಸಾಧ್ಯವಾಯಿತು. ಹೊಸಗನ್ನಡ ನುಡಿಗನ್ನಡಿ–ಎಂಬ ಹೊಸಗನ್ನಡ ವ್ಯಾಕರಣವು ೧೯೩೮, ೨ನೇ ಮುದ್ರಣ, ಬಾಸಲ್ ಮಿಶನ್ ಕ್ರಿ.ಶ.೧೮೮೨) ಕೃಷ್ಣಮಾಚಾರಿಯು ತನ್ನ ಪುಸ್ತಕವನ್ನು ಆ ದಾತೃವಿಗೆ ಅರ್ಪಣ ಮಾಡಿದ್ದಾನೆ. ಇದು ಪ್ರಕಟವಾಗುವುದಕ್ಕೆ ಮುಂಚೆ, ಇಂಗ್ಲಿಷ್ ಭಾಷೆಯಲ್ಲಿಯ ಮೆಕ್ಕೆರೆಲ್ ವ್ಯಾಕರಣವೊಂದೇ ಪ್ರಚುರವಾಗಿದ್ದಿತು. ಕೃಷ್ಣಮಾಚಾರಿಯು ಕನ್ನಡ ಭಾಷಿಕರಿಗಾಗಿ ಮತ್ತು ಹೊಸಗನ್ನಡ ಭಾಷೆಯನ್ನು ಗಮನದಲ್ಲಿಟ್ಟುಕೊಂಡು ತನ್ನ ವ್ಯಾಕರಣವನ್ನು ರಚಿಸಿದನು. ಮೆಕ್ಕೆರಲ್ ಕನ್ನಡದಲ್ಲಿ ಪ್ರಚಲಿತವಿರುವ ಸಂಸ್ಕೃತ ವ್ಯಾಕರಣ ಪ್ರಕ್ರಿಯೆಗಳನ್ನು ಹೇಳಿರಲಿಲ್ಲ. ಸಂಸ್ಕೃತವನ್ನು ಅರಿತಿದ್ದ ಕೃಷ್ಣಮಾಚಾರಿಯು ಅವುಗಳನ್ನು ಸ್ವಲ್ಪ ಮಟ್ಟಿಗೆ ವಿವರಿಸಿದ್ದಾನೆ.

ಕೆಲವೊಂದು ವ್ಯಾಕರಣ ವಿಷಯಗಳನ್ನು ತಾನು ಹೇಳಿಲ್ಲವಾಗಿಯೂ ಅವುಗಳನ್ನು ಮುಂಬರುವ ಹಳಗನ್ನಡ ವ್ಯಾಕರಣ, ಶಬ್ದಮಂಜರಿ, ಮತ್ತು ಧಾತುಮಂಜರಿ ಎಂಬ ಗ್ರಂಥಗಳಲ್ಲಿ ವಿವರಿಸುವುದಾಗಿಯೂ ಪ್ರಸ್ತುತ ವ್ಯಾಕರಣದಲ್ಲಿ ಕಾಣಿಸಿದ್ದಾನೆ. ಆದರೆ ಅವುಗಳು ಮುದ್ರಣವಾದದ್ದರ ಉಲ್ಲೇಖವು ದೊರೆತಿಲ್ಲ.

ಅಡಕ್ಕಿ ಸುಬ್ಬರಾಯನೂ ಸೇಂಟ್ ಜಾರ್ಜ್ ಕಾಲೇಜಿಗೆ ಸಂಬಂಧಿಸಿದವನೇ. ಒಂದು ಭಾಷೆಯ ಅಭ್ಯಾಸ ಮಾಡುವವನಿಗೆ ವ್ಯಾಕರಣ, ಕೋಶಗಳಷ್ಟೇ ಸಾಲದು. ವಾಕ್ಯರಚನೆ, ಸಂಭಾಷಣೆಗಳನ್ನು ರೂಢಿಸಿಕೊಳ್ಳಲು ವಿಶಿಷ್ಟ ವಾಚನ ಪುಸ್ತಕಗಳು ಬೇಕಾಗುತ್ತವೆ. ಕಾಲೇಜಿನಲ್ಲಿ ಕಲಿಯುತ್ತಿದ್ದ ಕಿರಿಯ ಅಧಿಕಾರಿಗಳ ಉಪಯೋಗಕ್ಕೆಂದು ಸುಬ್ಬರಾಯನು ಇಂಥದೊಂದು ಪುಸ್ತಕವನ್ನು ಸಿದ್ಧಪಡಿಸಿದನು. ಎಲಿಯಟ್ ತಿದ್ದಿದ ಈ ಕೃತಿಯಲ್ಲಿ ಜನ ಬಳಕೆಯಲ್ಲಿದ್ದ ಕೆಲವು ಚಿಕ್ಕ ಕತೆಗಳೂ, ರೆವಿನ್ಯೂ ಆಡಳಿತಕ್ಕೆ ಸಂಬಂಧಿಸಿದ ಕೆಲವು ಕನ್ನಡ ಕಾಗದಪತ್ರಗಳೂ ಇವೆ. ಅವುಗಳ ಇಂಗ್ಲಿಷ್ ಭಾಷಾಂತರ, ವ್ಯಾಕರಣದ ಟಿಪ್ಪಣಿಗಳನ್ನೂ ಕೊಡಲಾಗಿದೆ. ಜೊತೆಗೆ ಸಂಭಾಷಣೆಗಳೂ ಇವೆ. ಸುಬ್ಬರಾಯನು ತನ್ನ ಕೃತಿಯನ್ನು ವಿದ್ಯಾಗುರುವಾದ ಎಲಿಸ್‌ನಿಗೆ ಅರ್ಪಿಸಿದ್ದಾನೆ.** ಭಾಷಾಭ್ಯಾಸಕ್ಕೆ ನೆರವಾಗುವ Easy lessons in English and Canerese ಎಂಬ ಇನ್ನೊಂದು ಕೃತಿಯನ್ನು ಅವನು ಇದೇ ಕಾಲಕ್ಕೆ ಹೊರತಂದನು. (ಬಳ್ಳಾರಿ, ೧೮೪೬). ಇವರಿಬ್ಬರ ರಚನೆಗೆ ಬ್ರಿಟಿಶ್ ಅಧಿಕಾರಿಗಳ ಪ್ರೋತ್ಸಾಹವೇ ಕಾರಣವಾಗಿತ್ತು.

---

** ಈ ಪುಸ್ತಕದ ಉಪಯುಕ್ತತೆಯನ್ನು ಮನಗಂಡು ಬಾಸೆಲ್ ಮಿಶನ್ನಿನವರು ಅದನ್ನು ಮತ್ತೆ ಹೊರತಂದರು. ಈಚೆಗೆ ಅದರ ಕಥಾಭಾಗವನ್ನು ಮಾತ್ರ ಮದ್ರಾಸ್ ವಿಶ್ವವಿದ್ಯಾಲಯದ Annals of Oriental Research ಪತ್ರಿಕೆಯಲ್ಲಿ ಪುನರ್ಮುದ್ರಿಸಲಾಗಿದೆ. (Vol. 16, p.2.1960)

ಆ ಅವಧಿಯಲ್ಲಿ ಇನ್ನು ಕೆಲವು ವಿದೇಶೀಯರು ಕನ್ನಡ ನುಡಿಗೆ ಸಂಬಂಧಿಸಿದ ಲೇಖನಗಳನ್ನು ಪ್ರಾಸಂಗಿಕವಾಗಿ ಬರೆದಿದ್ದಾರೆ. ಮಹತ್ವದವನ್ನು ಇಲ್ಲಿ ಕಾಣಿಸಬಹುದು. ಜೆ. ಸ್ಟೀವನ್‌ಸನ್ ಎಂಬವನು ಮರಾಠೀ ವಾಙ್ಮಯದ ಕುರಿತಾಗಿ ಕೆಲಸ ಮಾಡಿದವನು. ಅವನಿಗೆ ಕನ್ನಡವೂ ಚೆನ್ನಾಗಿ ಬರುತ್ತಿದ್ದಿತು. ತನ್ನೊಂದು ಲೇಖದಲ್ಲಿ, ಸಂಸ್ಕೃತ ಭಾಷೆಯಲ್ಲಿ ಸೇರ್ಪಡೆಯಾದ ಸಂಸ್ಕೃತೇತರ ಶಬ್ದಗಳ ವಿವೇಚನೆ ಮಾಡುವಾಗ ಕನ್ನಡವನ್ನು ತಳಹದಿಯನ್ನಾಗಿ ಇಟ್ಟುಕೊಂಡಿದ್ದಾನೆ. ಮೈಸೂರು ಕಮೀಶನ್ನಿನ ಅಧಿಕಾರಿಯಾಗಿದ್ದ ಜೆ.ಎಸ್.ಎಫ್. ಮೆಕೆಂಝಿಯು ಕನ್ನಡ ಛಂದಸ್ಸನ್ನು ಕುರಿತು ಇಂಡಿಯನ್ ಎಂಟಕ್ವೆರಿ ಪತ್ರಿಕೆಯಲ್ಲಿ ಚಿಕ್ಕ ಲೇಖವನ್ನು ಪ್ರಕಟಿಸಿದ್ದಾನೆ.

**ಚಾರ್ಲ್ಸ್ ಗೋವರ್** ಎಂಬ ಮದ್ರಾಸ ಪ್ರಾಂತದ ಅಧಿಕಾರಿಯು ದ್ರಾವಿಡ ಭಾಷೆಗಳಲ್ಲಿಯ ಜನಪದ ಗೀತಗಳನ್ನು ಸಂಕಲಿಸಿ ಇಂಗ್ಲಿಷ್‌ನಲ್ಲಿ ಒಂದು ವಿಶಿಷ್ಟ ಗ್ರಂಥವನ್ನು ಹೊರತಂದಿದ್ದಾನೆ (Folk Songs of Southern India, 1872) ದ್ರಾವಿಡ ಜನಪದ ಹಾಡುಗಳಲ್ಲಿ ಅವನಿಗೆ ಆಸಕ್ತಿ ಹುಟ್ಟುವುದಕ್ಕೆ ಮೊಘ್ಲಿಂಗರ ದಾಸರ ಹಾಡುಗಳ ಸಂಗ್ರಹವೇ ಕಾರಣವಾಯ್ತೆಂದು ಅದರಲ್ಲಿ ಹೇಳಿದ್ದಾನೆ. ಆ ಹಾಡುಗಳನ್ನು ಇವನು ಎ.ಜೆ.ಓ. ಲೈಲ್ ಮತ್ತು ಎಸ್. ಡಾಲ್ಟನ್ ಎಂಬ ಮಿಶನರಿಗಳ ನೆರವಿನಿಂದ ಇಂಗ್ಲಿಷ್‌ಗೆ ಪರಿವರ್ತಿಸಿ ಟಿಪ್ಪಣಿಗಳೊಡನೆ ತನ್ನ ಗ್ರಂಥದಲ್ಲಿ ಸೇರಿಸಿಕೊಂಡಿದ್ದಾನೆ. ಅವುಗಳ ಕಾವ್ಯ ಸತ್ವವನ್ನೂ, ಅಧ್ಯಾತ್ಮದ ಆಳವನ್ನೂ ಕಂಡುಕೊಳ್ಳುವ ರಸಜ್ಞತೆ ಅವನಲ್ಲಿದ್ದಿತು. ಟಿಪ್ಪಣಿ, ವ್ಯಾಖ್ಯೆಗಳಲ್ಲಿ ಹರಿದಾಸರ ಹಾಡುಗಳ ಬಗ್ಗೆ ಅವನಿಗಿದ್ದ ಮೆಚ್ಚುಗೆಯು ಎದ್ದು ಕಾಣುತ್ತದೆ.

Elements of South Indian Paleography ಗ್ರಂಥದಿಂದ ಪ್ರಸಿದ್ಧಿ ಪಡೆದ ಎ. ಸಿ. **ಬರ್ನೆಲ್** ದಕ್ಷಿಣ ಭಾರತದಲ್ಲಿದ್ದದ್ದು ೨೨ ವರ್ಷ ಮಾತ್ರ (೧೮೬೦–೧೮೮೨). ಇಂಗ್ಲೆಂಡಿನಲ್ಲಿದ್ದಾಗಲೇ ಸಂಸ್ಕೃತದಲ್ಲಿ ಪಾಂಡಿತ್ಯ ಹೊಂದಿ, ಐ.ಸಿ.ಎಸ್ ಪದವೀಧರನಾಗಿದ್ದು ಮದ್ರಾಸ ಪ್ರಾಂತದಲ್ಲಿ ನ್ಯಾಯಾಧೀಶನಾಗಿ ಕೆಲಸದಲ್ಲಿದ್ದ. ಎಲ್ಲಿಯಾದರೂ ವಿದ್ವತ್ ಕಾರ್ಯ ಕಂಡುಬಂದರೆ ಅದನ್ನು ಮೆಚ್ಚಿ, ಪ್ರಸಂಗ ಬಂದರೆ ನೆರವಾಗುವ ಪ್ರವೃತ್ತಿಯನ್ನು ಹೊಂದಿದ್ದ. ಸಂಸ್ಕೃತ ಸಾಹಿತ್ಯ, ಶಾಸ್ತ್ರ ವಿಚಾರದಲ್ಲಿ ಮೌಲಿಕ ಸ್ವರೂಪದ ಸಂಶೋಧನೆ ಮಾಡಿದ. ಅವನಿಗಿಂತ ಪೂರ್ವದಲ್ಲಿ ಇವನ ಮಟ್ಟದಲ್ಲಿ ಸಂಸ್ಕೃತಾಧ್ಯಯನ ಮಾಡಿದ ಬ್ರಿಟಿಶರು ಪ್ರಾಯಶಃ ಭಾರತದಲ್ಲಿ ಇನ್ನಾರೂ ಇರಲಿಲ್ಲ.

ಕನ್ನಡದ ಮಟ್ಟಿಗೆ ಹೇಳುವುದಾದರೆ ತುಳುವರ ಭೂತಾರಾಧನೆಯ ಬಗ್ಗೆ Ind.Ant ಪತ್ರಿಕೆಯಲ್ಲಿ ಪ್ರಾಮಾಣ್ಯವೆನಿಸುವ ವಿವೇಚನೆ ಮಾಡಿದ್ದಾನೆ. ಅಳಿಯ ಸಂತಾನದ ಕಟ್ಟು – ಈ ಹಸ್ತಪ್ರತಿಯ ಕೂಲಂಕಷ ಅಭ್ಯಾಸ ಮಾಡಿ, ಅದೊಂದು ಅಪದ್ಧ ಕೃತಿ ಹಾಗೂ ಈಚಿನ ಕಾಲದ್ದು – ಎಂದು ಸಾರಿದ್ದಾನೆ. ತನ್ನಂತೆಯೇ ಕನ್ನಡ ಅಧ್ಯಯನದಲ್ಲಿ ತೊಡಗಿದ್ದ ಕಿಟೆಲರೊಟ್ಟಿಗೆ ಅಕಡಮಿಕ್ ಸ್ವರೂಪದ ಒಡನಾಟ ಇದ್ದಿತು. ಮೂಡಬಿದರೆಯಲ್ಲಿ

ಶಬ್ದಮಣಿದರ್ಪಣದ ಒಂದು ಹಸ್ತಪ್ರತಿ ಸಿಕ್ಕಿದ್ದನ್ನು ಕಿಟೆಲರಿಗೆ ಕಳಿಸಿದ. ಕಿಟೆಲ್, ತನ್ನ ಶ.ಮ.ದ. ಕೃತಿಯ ಎರಡನೆಯ ಆವೃತ್ತಿಯಲ್ಲಿ ಅದರನ್ವಯ ಕೆಲ ತಿದ್ದುಪಡಿ ಮಾಡಿದುದಾಗಿ ಹೇಳಿದ್ದಾರೆ. ಅದಕ್ಕಿಂತ ಹೆಚ್ಚಾಗಿ ಕಿಟೆಲ್ ಕನ್ನಡ ಕೋಶದ ಕಾರ್ಯ ಆರಂಭಿಸಿದಾಗ, ಬರ್ನೆಲ್ ತಂಜಾವೂರಿನಿಂದ ಅವರಿಗೆ ಸ್ವಯಂ ಮಾಸಾಶನ ಕೊಡಲು ಆರಂಭಿಸಿದ.

(ದಿ. ೩-೬-೧೮೭೭ರ ಅವನ ಪತ್ರ). ಅದಾಗಿ ಅಸ್ವಸ್ಥನಾದ ಕಾರಣದಿಂದ ಸ್ವದೇಶಕ್ಕೆ ಹಿಂತಿರುಗಿದವ ಅಲ್ಲಿಯೇ ತೀರಿಕೊಂಡ.

ಮೇಲ್ಕಂಡ ಪ್ರಯತ್ನಗಳು ಬ್ರಿಟಿಶ್ ಅಧಿಕಾರಿಗಳ ಭಾರತೀಯ ವಿಷಯಕ ಆಸ್ಥೆಯ ದ್ಯೋತಕವಾಗಿದ್ದು ಅವರ ಲೇಖನ ಕಾರ್ಯವು ಕನ್ನಡದ ಬಗ್ಗೆ ಇತರ ವಿದೇಶೀ ವಿದ್ವಾಂಸರ ಗಮನ ಸೆಳೆಯುವಂತೆ ಮಾಡಿತು.

## ೫೩. ಶಾಸನ ಪರಿಶೋಧಕರು

### ೫೩.೧ ಬಿ. ಲೂಯಿ ರೈಸ್

ವಿದೇಶೀಯನಾದರೂ ಲೂಯಿ ರೈಸ್ ಕನ್ನಡನಾಡಿನಲ್ಲಿಯೆ ಹುಟ್ಟಿದವರು (೧೮೩೭, ಬೆಂಗಳೂರು) ಮತ್ತು ಬಾಲ್ಯ ಕಾಲದಲ್ಲಿ ತಂದೆ ಬೆಂಜಮಿನ್ನನ ಹಾಗೂ ದೇಶೀಯ ಮಿಶನರಿಗಳ ಸಂಭಾಷಣೆಯ ಮೂಲಕ ಕನ್ನಡವನ್ನು ಕೇಳಿ ಅದನ್ನು ಬಲ್ಲವನಾಗಿದ್ದರು. ವಿದ್ಯಾರ್ಥಿದೆಸೆಯಲ್ಲಿ ಮಾತ್ರ ಅವರು ಇಲ್ಲಿ ಇರಲಿಲ್ಲ. ಹ್ಯಾರೋದಲ್ಲಿ* ಉಚ್ಚ ಶಿಕ್ಷಣವನ್ನು ಮುಗಿಸಿಕೊಂಡು, ೧೮೬೦ರಲ್ಲಿ ಬೆಂಗಳೂರಿಗೆ ಬಂದರು. ಅವರು ಇಂಗ್ಲೆಂಡ್ ಬಿಡುವುದಕ್ಕೆ ಮುಂಚೆಯೇ, ಬೆಂಗಳೂರು ಸೆಂಟ್ರಲ್ ಹೈಸ್ಕೂಲಿನ ಮುಖ್ಯಾಧ್ಯಾಪಕನೆಂದು ನೇಮಕವಾಗಿದ್ದುದಕ್ಕೆ ಮಿಶನರಿಯಾಗಿದ್ದ ತಂದೆಯ ಪ್ರಸಿದ್ಧಿಯೇ ಕಾರಣವಾಗಿರಬೇಕು. ಅಧಿಕಾರ ವಹಿಸಿದ ಮರುವರ್ಷ, ತಾನೂ ಒಬ್ಬ ವಿದ್ಯಾರ್ಥಿಯಂತೆ ಕನ್ನಡ ಹೈಯರ್ ಸೆಕಂಡರಿ ಪರೀಕ್ಷೆಗೆ ಕುಳಿತು ಪಾಸಾದರು.

ಮುಂದೆ ಮೈಸೂರು, ಕೊಡಗುಗಳ ಶಾಲಾ ಇನ್ಸ್‌ಪೆಕ್ಟರನಾಗಿ ಅಲ್ಲಲ್ಲಿ ಸಂಚರಿಸುತ್ತಿದ್ದಾಗ ಕನ್ನಡ ನಾಡು, ನುಡಿ ಮತ್ತು ಅದರ ಸಂಸ್ಕೃತಿ – ಇವುಗಳ ನಿಕಟ ಪರಿಚಯವಾಯಿತು. ಮುಂದಿನ ಎಲ್ಲ ಕಾರ್ಯಗಳಿಗೆ ಇದುವೇ ತಳಹದಿಯಾಯಿತು. ಕನ್ನಡ ನಿಷ್ಠೆಯು ಮೊಳೆತುದು ಆ ಕಾಲದಲ್ಲಿಯೇ. ಅವರ ಮುಂದಿನ ಚಟುವಟಿಕೆಗಳು ಶಿಕ್ಷಣ, ಆಡಳಿತ ಮತ್ತು ಶಾಸನ – ಈ ಮೂರು ರಂಗಗಳಲ್ಲಿ ಕಾಣಿಸಿಕೊಂಡವು. ಕೊಡಗಿನ ಪ್ರದೇಶಕ್ಕೂ ಶಿಕ್ಷಣಾಧಿಕಾರಿಯಾಗಿದ್ದ ನಿಮಿತ್ತದಿಂದ ರೈಸ್, ಕೊಡಗಿನ ಶೈಕ್ಷಣಿಕ

* ಹ್ಯಾರೋದಲ್ಲಿಯ ವಿದ್ಯಾ ಸಂಸ್ಥೆಯು ೧೩ನೆಯ ಶತಮಾನದಿಂದಲೇ ಹೆಸರುವಾಸಿಯಾದದ್ದು. ಗ್ಲ್ಯಾಡ್‌ಸ್ಟನ್, ಚರ್ಚಿಲ್ ಮುಂತಾದ ಪ್ರಧಾನಿಗಳಲ್ಲದೆ, ಜವಾಹರಲಾಲ ನೆಹ್ರೂ, ಇಂದಿರಾ ಗಾಂಧಿ ಇವರುಗಳು ಇಲ್ಲಿಯೇ ಕಲಿತದ್ದು.

ಇತಿಹಾಸ ಮತ್ತು ಅದರ ಭಾವೀ ಯೋಜನೆಗಳನ್ನು ಕುರಿತು ವರದಿಯೊಂದನ್ನು ಸಿದ್ಧಪಡಿಸಬೇಕಾಗಿ ಬಂದಿತು (೧೮೮೪)

ಸರಕಾರೀ ಆಡಳಿತದ ಕಾರ್ಯಭಾರವೂ ರೈಸರ ಮೇಲೆ ಸಾಕಷ್ಟಿದ್ದಿತು. ಮೈಸೂರಿನ ಜನಗಣತಿಯ (೧೮೮೧) ಹೊಣೆ ಹೊತ್ತು, ಮೂರು ವರ್ಷಗಳ ಅನಂತರ ಅದರ ವರದಿಯನ್ನು ಹೊರಹಾಕುವವರೆಗೂ ಅದರದೇ ಕೆಲಸ. ಆ ಮುನ್ನ ಮೈಸೂರಿನ (ಕೊಡಗು ಸಹಿತ) ಗಝೆಟಿಯರ್ ರಚನೆಗಾಗಿ ಸಾಮಗ್ರಿಯನ್ನು ಕಲೆಹಾಕುವ ಕೆಲಸವು ೮-೧೦ ವರ್ಷಗಳಿಂದ ನಡೆದಿದ್ದಿತು. ಅದರ ಎರಡು ಸಂಪುಟಗಳು ಪ್ರಕಟವಾದಾಗ ಲೂಯಿ ರೈಸ್ ಅಖಿಲ ಭಾರತ ಪ್ರಶಸ್ತಿ ಪಡೆಯುವಂತಾಯ್ತು. ಆ ಮುನ್ನಿನ ಯಾವುದೇ ಭಾರತ ಪ್ರದೇಶದ ಗಝೆಟಿಯರ್ ಇಷ್ಟೊಂದು ಖಚಿತ ರೀತಿಯಲ್ಲಿ ಹಾಗೂ ಸತ್ಯನಿಷ್ಠವಾಗಿ ಹೊರಬಂದಿರಲಿಲ್ಲ. ಹೀಗಾಗಿ ಮುಂದಿನ ಗಝೆಟಿಯರ್ ರಚನೆಗೆ ಇದುವೇ ಮಾದರಿಯಾಗಿ ಉಳಿಯಿತು. ಕೇಂದ್ರ ಸರಕಾರದಲ್ಲಿ ಹಿರಿಯ ಅಧಿಕಾರಿಯಾಗಿದ್ದ ಡಬ್ಲ್ಯೂ. ಡಬ್ಲ್ಯೂ. ಹಂಟರ್ ರೈಸರ ಬಗ್ಗೆ ವಿಶೇಷ ಆದರವನ್ನು ತಳೆದುದಕ್ಕೆ ಈ ಸಂಪುಟದ್ವಯವು ಕಾರಣವಾಯ್ತು. ಇಪ್ಪತ್ತು ವರ್ಷಗಳಾದ ಮೇಲೆ ಅದನ್ನು ಪರಿಷ್ಕರಿಸಿ ಅದ್ಯಾವತ್ತಾಗಿ ಮಾಡುವ ಕೆಲಸವನ್ನು ರೈಸರೇ ಮಾಡಬೇಕಾಗಿ ಬಂದು, ಅದರ ಉತ್ಕೃಷ್ಟತೆಯು ಇನ್ನಷ್ಟು ಮಿಗಿಲಾಯಿತು.

ಶಾಲಾ ಇನ್‌ಸ್ಪೆಕ್ಟರ್ ಆಗಿ ಬೇರೆ ಬೇರೆ ನಗರ, ಗ್ರಾಮವನ್ನು ಸುತ್ತುತ್ತಿದ್ದ ಕಾಲದಲ್ಲಿ ಶಾಸನಗಳು, ಹಳೆಯ ಹಸ್ತಪ್ರತಿಗಳು ರೈಸರ ಗಮನವನ್ನು ಸೆಳೆದಿದ್ದುವು. ಜೊತೆಗೆ ಕಮೀಶನರ್ ಬೌರಿಂಗನ ಆದೇಶದ ಮೇರೆಗೆ ಮೇಜರ್ ಡಿಕ್ಸನ್ ಎಂಬವನು ಸಂಗ್ರಹಿಸಿದ್ದ ಅನೇಕ ಶಾಸನಗಳ ಪ್ರತಿಗಳು ದೊರೆತು (೧೮೬೫) ಅವರ ಮುಂದಿನ ಶಾಸನಕಾರ್ಯಕ್ಕೆ ಚಾಲನೆಯಿತ್ತಂತಾಯ್ತು. ಅವುಗಳಿಗೆ ತಾನು ಸಂಗ್ರಹಿಸಿದವುಗಳನ್ನೂ ಸೇರಿಸಿ, ಮೈಸೂರು ಶಾಸನ ಸಂಪುಟವನ್ನು ಸಿದ್ಧಪಡಿಸಿದರು (೧೮೭೯): ಇದು ಕೇಂದ್ರ ಸರಕಾರದ ಯೋಜನೆಯಾಗಿದ್ದು, ಅವರಿಂದಲೇ ಅದು ಪ್ರಕಟವಾಯಿತು. ಕರ್ನಾಟಕದ ಶಾಸನಗಳ ಕುರಿತು, ಪ್ರತ್ಯೇಕವಾಗಿ ಗ್ರಂಥರೂಪದಲ್ಲಿ ಬಂದ ಮೊದಲ ಸಂಪುಟವೆಂದರೆ ಇದೇ.

ಶಿಕ್ಷಣ ಶಾಖೆಯ ಜೊತೆಗೆ ಹೊಸದಾಗಿ ಆರಂಭವಾದ ಪುರಾತತ್ತ್ವ ವಿಭಾಗದ ಕೆಲಸವನ್ನು ರೈಸ್ ನೋಡಿಕೊಳ್ಳಬೇಕೆಂದು ಗೊತ್ತಾಯಿತು (೧೮೮೫). ತನ್ನ ಆಡಳಿತ ಕ್ಷೇತ್ರದಲ್ಲಿರುವ ಜಿಲ್ಲೆಗಳಲ್ಲಿಯ ಸಮಸ್ತ ಶಾಸನಗಳನ್ನು ಕ್ರಮಬದ್ಧವಾಗಿ ಪ್ರಕಟಿಸಬೇಕೆಂದು ರೈಸರು ಎಪಿಗ್ರಾಫಿಯಾ ಕರ್ನಾಟಿಕಾದ ಹೊಳಹನ್ನು ಹಾಕಿಕೊಂಡರು. ಕೊಡಗು ಶಾಸನಗಳ ಸಂಪುಟವನ್ನು ಮೊದಲನೆಯದಾಗಿ ಹೊರತಂದರು. ಕ್ರಿ. ಶ. ೧೮೮೮ ರಿಂದ ಪುರಾತನ ಶಾಖೆಯು ಪ್ರತ್ಯೇಕ ಸಿಬ್ಬಂದಿಯೊಡಗೂಡಿ ಕಾರ್ಯೋನ್ಮುಖವಾಯಿತು. ಆಗ ದಿವಾನರಾಗಿದ್ದ ಕೆ. ಶೇಷಾದ್ರಿ ಅಯ್ಯರರ ವಿಶೇಷ ಆಸ್ಥೆಯಿಂದಾಗಿ, ರೈಸರು ಶೈಕ್ಷಣಿಕ

ಕಾರ್ಯದಿಂದ ಬಿಡುಗಡೆ ಹೊಂದಿ ಪುರಾತತ್ತ್ವ ಶಾಖೆಯ ಸಂಪೂರ್ಣ ಅಧಿಕಾರವನ್ನು ವಹಿಸಿದಾಗ, ಜಿಲ್ಲೆಗೊಂದರಂತೆ ಶಾಸನ ಸಂಪುಟಗಳು ಭರದಿಂದ ಹೊರಬರತೊಡಗಿದವು.

ಅವೆಲ್ಲ ಸಂಪುಟಗಳನ್ನು (ಒಟ್ಟಿಗೆ ಹನ್ನೆರಡು) ಹೊರತಂದ ಮೇಲೆಯೇ ಬಿ.ಎಲ್. ರೈಸರು ಸೇವಾನಿವೃತ್ತನಾಗಬಯಸಿದುದು ಅವರ ಕಾರ್ಯನಿಷ್ಠೆಗೆ ಸಾಕ್ಷಿಯಾಗಿದೆ. ಅವುಗಳಲ್ಲಿ ಸಂಗ್ರಹಿತವಾದ ಒಂಬತ್ತು ಸಾವಿರದಷ್ಟು ಶಾಸನಗಳಲ್ಲಿ ಅದಕ್ಕೂ ಮೊದಲಿಗೆ ದೊರೆತವುಗಳು ಕೆಲವು ನೂರು ಮಾತ್ರ. ರೈಸರು ಸಾವಿರಾರು ಶಾಸನಗಳನ್ನು ಹುಡುಕಿ ತೆಗೆದುದೇ ಒಂದು ಮಹಾ ಸಾಧನೆ. ಬೇರಾವ ಭಾರತೀಯ ಸಂಶೋಧಕನೂ ಇವರಷ್ಟು ಶಾಸನಗಳನ್ನು ಕಂಡು ಹಿಡಿದಿಲ್ಲ. ಜೊತೆಗೆ ಅವುಗಳ ಅನುವಾದ, ಅವುಗಳಿಂದ ಹೊರಡುವ ರಾಜಮನೆತನಗಳ ಚರಿತ್ರೆ, ಇತರ ಐತಿಹಾಸಿಕ ಘಟನೆಗಳು ಮತ್ತು ಸಾಂಸ್ಕೃತಿಕ ಅಂಶಗಳು – ಇವನ್ನು ರೈಸರು ಪರಾಮರ್ಶಿಸಿದ್ದಾರೆ. ಮೆಕೆಂಝಿ, ಬುಕನನ್ ಮತ್ತು ಡಿಕ್ಸನ್‌ರು ಬರಿಯ ಶಾಸನಗಳನ್ನು ಸಂಗ್ರಹಿಸಿದ್ದರು. ಎಲಿಯಟ್‌ನಿಗೆ ಔತ್ತರೇಯ ಕನ್ನಡ ನಾಡಿನ ಶಾಸನಗಳಷ್ಟೆ ದೊರೆತಿದ್ದುವಲ್ಲದೆ, ಆರಂಭದಿಂದ ಈಚಿನ ವರೆಗಿನ ಸಮಗ್ರ ಇತಿಹಾಸವನ್ನು ನಿರೂಪಿಸುವುದಾಗಿದ್ದಿಲ್ಲ. ರೈಸ್, ತನ್ನ ಸಾಮಗ್ರಿಯ ಬಲದಿಂದ ಕರ್ನಾಟಕದ ಸಮಗ್ರ ಹಾಗೂ ಸರ್ವಾಂಗೀಣ ಇತಿಹಾಸವನ್ನು ರಚಿಸಿದ್ದಾರೆ.

ಭಾರತೀಯ ಇತಿಹಾಸ ಕಥನದ ದೃಷ್ಟಿಯಿಂದಲೂ ಅನೇಕ ಹೊಸ ಪ್ರಣಾಲಿಗಳು ರೈಸರಿಂದಾಗಿ ನೆಲೆಗೊಂಡುವು. ಮುಖ್ಯವಾಗಿ ಅಶೋಕನ ಕಿರುಶಾಸನಗಳು ದೊರೆತು (೧೮೯೨) ಅವನ ಸಾಮ್ರಾಜ್ಯವು ದಕ್ಷಿಣದವರೆಗೂ ಹಬ್ಬಿತ್ತೆಂಬುದರ ಸ್ಪಷ್ಟ ಕಲ್ಪನೆ ಉಂಟಾಯಿತು. ಈ ಅಂಶವನ್ನು ರೈಸರು ಪ್ರಕಟಿಸಿದಾಗ, ಅಂದಿನ ಏಶಿಯಾಟಿಕ್ ಸೊಸೈಟಿಯ ಅಧ್ಯಕ್ಷನು ತನ್ನ ವಾರ್ಷಿಕ ಭಾಷಣದಲ್ಲಿ The most Important epigraphic discovery made in India in 1892 ಎಂದು ಪ್ರಶಂಶಿಸಿದ್ದಾನೆ.

ಅದರ ಹಿಂದಿನ ವರ್ಷವೆ ಬೆಂಗಳೂರ ಬಳಿ ರೋಮನ್ ನಾಣ್ಯಗಳು ದೊರೆತಾಗ ರೈಸರು ಆ ಕುರಿತು ಪುಸ್ತಕವೊಂದನ್ನು ಪ್ರಕಟಿಸಿದ್ದರು. ಅದರ ಮೂಲಕ ಕನ್ನಡ ಹಾಗೂ ರೋಮನ್ ಜನಾಂಗಗಳ ಪ್ರಾಚೀನ ಒಡನಾಟವು ಬೆಳಕಿಗೆ ಬಂದಿತು. ಅದರಂತೆ ಕರ್ನಾಟಕದೊಡನೆ ಸಾತವಾಹನರ ಸಂಬಂಧ, ಶ್ರವಣಬೆಳಗೊಳದಲ್ಲಿ ಜೈನಪರಂಪರೆ, ಮಹಾಬಲಿ, ಬಾಣ, ನೊಳಂಬ ಮುಂತಾದ ಸಣ್ಣ ರಾಜಮನೆತನಗಳ ವಿವರಗಳು – ಇವು ಒಂದೊಂದೂ ರೈಸರ ಸಂಶೋಧನ ಕಾರ್ಯದ ಹಿರಿಮೆಯನ್ನು ಹೇಳುವಂತಹವಾಗಿವೆ.

ಈ ಮಧ್ಯೆ ರೈಸರು ಶಾಸನಗಳನ್ನು ಮುಖ್ಯವಾಗಿ ಆಧರಿಸಿ ಇಂಡಿಯನ್ ಎಂಟಿಕ್ವೆರಿ, ಜರ್ನಲ್ ಆಫ್ ರಾಯಲ್ ಏಶಿಯಾಟಿಕ್ ಸೊಸೈಟಿ ಮೊದಲಾದವುಗಳಲ್ಲಿ ಐವತ್ತಕ್ಕೆ ಮಿಕ್ಕಿ ಲೇಖನಗಳನ್ನು ಬರೆದಿದ್ದಾರೆ. ಅವರ ಅಂತಿಮ ಕೃತಿಯಾದ Mysore and

Coorg from inscriptions ನಲ್ಲಿ ಅವರ ಶಾಸನ ಸಂಶೋಧನೆಯ ಸಮಗ್ರ ಸಾರವನ್ನು ಕಾಣುತ್ತೇವೆ. ಭಾರತ ಚರಿತ್ರೆಯಲ್ಲಿಯ ಮಹತ್ವದ ಕಾಲವನ್ನು ಸಾಧಾರವಾಗಿ ಬರೆಯಬೇಕಾದ ಯಾವುದೇ ಸಂದರ್ಭದಲ್ಲಿ ಎಪಿಗ್ರಾಫಿಯಾ ಕರ್ನಾಟಿಕಾದ ಒಂದಿಲ್ಲೊಂದು ಸಂಪುಟವನ್ನಾಗಲೀ, ರೈಸರ ಇತರ ಲೇಖನವನ್ನಾಗಲೀ ಸಂಬಂಧಪಟ್ಟ ಇತಿಹಾಸಕಾರನು ತಪ್ಪದೇ ಗಮನಿಸಬೇಕಾಗುವುದು.

ಬಿ. ಲೂಯಿ ರೈಸರು ಸಂಸ್ಕೃತದ ಪುನರುಜ್ಜೀವನ ಹಾಗೂ ಹಳಗನ್ನಡ ಕಾವ್ಯ ಸಾಹಿತ್ಯ ಇವುಗಳಲ್ಲಿಯೂ ಮಹತ್ವಪೂರ್ಣ ಕಾರ್ಯವನ್ನು ಕೈಗೊಂಡಿದ್ದಾರೆ. ತಿರುನಗರಿ ರಾಮಾನುಜಯ್ಯ ಸಂಗ್ರಹಿಸಿದ್ದ ರಾಮಾಯಣವನ್ನು ಪರಿಷ್ಕರಿಸಿ ಅದನ್ನು ಕನ್ನಡ – ಇಂಗ್ಲಿಷ್ ಶಬ್ದಾರ್ಥಗಳೊಂದಿಗೆ ಪ್ರಕಟಿಸಿದರು (೧೮೬೮). ಅದೇ ದೃಷ್ಟಿಯಿಂದ ಮತ್ತು ವ್ಯವಸ್ಥಿತವಾಗಿ ಪರಿಷ್ಕೃತಗೊಂಡ ಇನ್ನೊಂದು ಕೃತಿಯೆಂದರೆ ಅಮರಕೋಶ (೧೮೭೩) ಇತ್ತ ಸಂಸ್ಕೃತದ ಪುನರುಜ್ಜೀವನದ ದೃಷ್ಟಿಯಿಂದ ಅವರು ಮಾಡಿದ ಕಾರ್ಯವೆಂದರೆ ಮೈಸೂರು ಸಂಸ್ಥಾನ ಮತ್ತು ಕೊಡಗುಗಳಲ್ಲಿ ದೊರೆಯುವ ಹಸ್ತಪ್ರತಿಗಳ ಸೂಚಿಯನ್ನು ತಯಾರಿಸಿದುದು. ಸಂಸ್ಕೃತ ಕೃತಿಗಳ ಅನ್ವೇಷಣೆ ಮತ್ತು ರಕ್ಷಣೆಯ ಬಗ್ಗೆ ಇದ್ದ ಭಾರತ ಸರಕಾರದ ಯೋಜನೆಯನ್ವಯ ರೈಸ್ ಆ ಕೆಲಸವನ್ನು ಮಾಡಬೇಕಾಗಿ ಬಂದಿತು. ಮೈಸೂರಿನ ಅರಮನೆಯಲ್ಲಿದ್ದ ಸರಸ್ವತೀ ಭಂಡಾರದ ಸಂಸ್ಕೃತ ಹಸ್ತಪ್ರತಿಗಳ ಪಟ್ಟಿಯನ್ನು ಜಿ.ಬಿ. ಮೆಲಿಸನ್ ಎಂಬುವವನು ಸಿದ್ಧಪಡಿಸಿದ್ದ. ಕ್ರಿ. ಶ. ೧೮೮೦ರಲ್ಲಿ ರೈಸ್, ಸಂಸ್ಥಾನದಲ್ಲಿರುವ ಎಲ್ಲ ವಿದ್ವಾಂಸರಿಗೆ ಪರಿಪತ್ರ ಕಳಿಸಿ ಇನ್ನಷ್ಟು ಸಂಸ್ಕೃತ ಹಸ್ತಪ್ರತಿಗಳ ವಿವರಗಳನ್ನು ತರಿಸಿಕೊಂಡರು. ಹಾಗೆ ದೊರೆತ ಹಲವಾರು ಸಾವಿರಾರು ಕೃತಿಗಳನ್ನು ಉಪಯುಕ್ತ ರೀತಿಯಲ್ಲಿ ವರ್ಗೀಕರಿಸಿ (ವೇದ. ಕಾವ್ಯ, ನಾಟಕ, ಜೈನಧರ್ಮ. ವೀರಶೈವ ಮತ ಇತ್ಯಾದಿ) ಹೊರತಂದಿದ್ದಾರೆ ಹಾಗೂ ಯಾರ ಬಳಿಯಲ್ಲಿವೆ ಎಂಬುದರ ಸೂಚನೆಯೂ ಅದರಲ್ಲಿದೆ.

ಬಿಬ್ಲಿಯಾಥೆಕಾ ಕರ್ನಾಟಿಕಾ ಮಾಲೆಯನ್ನು ಆರಂಭಿಸಿ ಹಲವು ಅಪೂರ್ವ ಕೃತಿಗಳನ್ನು ಬೆಳಕಿಗೆ ತಂದ ರೈಸರ ಕಾರ್ಯವು ಹೆಚ್ಚು ಪರಿಚಿತವಾದುದು. ಕನ್ನಡ ಸಾಹಿತ್ಯದ ಪ್ರಪ್ರಥಮ ಗ್ರಂಥವಾದ ಕವಿರಾಜಮಾರ್ಗವು ಮೊದಲ ಸಲ ಬೆಳಕು ಕಂಡದ್ದು ಈ ಮಾಲಿಕೆಯಲ್ಲಿ. (ಇದರ ಸಂಪಾದಕರು. ಕೆ.ಬಿ. ಪಾಠಕರು) ಸಂಸ್ಥಾನದ ವಿವಿಧ ಊರುಗಳಲ್ಲಿ ದೊರೆತ ಹಳಗನ್ನಡ ಹಸ್ತಪ್ರತಿಗಳನ್ನು ರೈಸ್ ಸಂಗ್ರಹಿಸುತ್ತಲೇ ಇದ್ದರು ಮತ್ತು ಅಮೌಲ್ಯವಾದ ಕೆಲವು ಕಾವ್ಯಗಳನ್ನು ಪ್ರಕಟಿಸಿದರು. ಅವುಗಳಲ್ಲಿ ಮೊದಲಿನ ನಾಲ್ಕು (ಎಂದರೆ ಭಾಷಾಭೂಷಣ, ಶಬ್ದಾನುಶಾಸನ, ಪಂಪರಾಮಾಯಣ ಮತ್ತು ಪಂಪಭಾರತಗಳು) ಅವರಿಂದ ಆಧುನಿಕ ರೀತಿಯಲ್ಲಿ ಪರಿಷ್ಕೃತಗೊಂಡು ಪೀಠಿಕೆ.

ಟಿಪ್ಪಣಿಗಳೊಡನೆ ಪ್ರಕಟವಾಗಿವೆ. ರೈಸರ ಹೆಚ್ಚಿನ ಸಮಯವು ಶಾಸನ ಸಂಪುಟಗಳ ರಚನೆ, ಪ್ರಕಟಣೆಗಳಲ್ಲಿ ವಿನಿಯೋಗವಾದ್ದರಿಂದ ಬಿಬ್ಲಿಯಾಥೆಕಾ ಕರ್ನಾಟಿಕಾ ಮಾಲಿಕೆಯಲ್ಲಿ ಇನ್ನು ಕೆಲವು ಕಾವ್ಯಗಳನ್ನು ಪೋಣಿಸುವುದು ಸಾಧ್ಯವಾಗಲಿಲ್ಲ.

ರೈಸರ ಬಹು ದೊಡ್ಡ ಕೊಡುಗೆ ಎಂದರೆ ಆರ್. ನರಸಿಂಹಾಚಾರ್ಯರನ್ನು ಕಂಡುಹಿಡಿದು ತಮ್ಮ ಇಲಾಖೆಯಲ್ಲಿ ಸೇರಿಸಿಕೊಂಡುದು. ಅವರ ಸಾಹಿತ್ಯಿಕ ಗೈಮೆಯ ಇನ್ನರ್ಧವನ್ನು ಆಚಾರ್ಯರು ತುಂಬಿಕೊಟ್ಟರೆನ್ನಬೇಕು. ಶಾಸನ ಇಲಾಖೆಯಲ್ಲಿ ಉಳಿದುಕೊಂಡೇ, ನೂರಾರು ಕನ್ನಡ ಕಾವ್ಯಗಳ ಹಸ್ತಪ್ರತಿಗಳನ್ನು ಕಣ್ಣಿಟ್ಟು ಓದಿ ಕರ್ಣಾಟಕ ಕವಿಚರಿತೆಯ ಮೂರು ಸಂಪುಟಗಳ ಮೂಲಕ ಅವರು ಹಳಗನ್ನಡ ವಾಙ್ಮಯದ ಪುನರುಜ್ಜೀವನಕ್ಕೆ ಕಾರಣರಾದ ವಿಷಯವನ್ನು ಹೆಚ್ಚು ವಿಸ್ತರಿಸಬೇಕಿಲ್ಲ. ಅವರ ಕೆಲಸವು ರೈಸರಿಗೂ ಬಹು ಮೆಚ್ಚಿಗೆಯದಾಗಿತ್ತು. ತನ್ನ ಎಪ್ಪತ್ತನೆಯ ವಯಸ್ಸಿನಲ್ಲಿ ನಿವೃತ್ತನಾಗಿ ಸ್ವದೇಶದಲ್ಲಿ ವಿಶ್ರಾಂತಿ ಹೊಂದುತ್ತಿದ್ದಾಗಲೂ ಕವಿಚರಿತೆಯ ಸಂಪುಟಗಳನ್ನು ಇಂಗ್ಲಿಷ್‌ಗೆ ತಾನು ಅನುವಾದಿಸಬೇಕು ಎಂಬ ಅಪೇಕ್ಷೆಯನ್ನು ತೋರಿದ್ದುದು ರೈಸರ ಶಾಲೀನತೆ ಹಾಗೂ ಕನ್ನಡ ವಿಷಯದ ಕಳಕಳಿಯ ದ್ಯೋತಕವಾಗಿದೆ. ಅವರ ಮರಣಕ್ಕೆ ಮೂರು ವರ್ಷ ಮೊದಲು ಎಸ್.ಜಿ. ಶಾಸ್ತ್ರಿಗಳು ಅವರನ್ನು ಇಂಗ್ಲೆಂಡ್‌ನಲ್ಲಿ ಸಂಧಿಸಿದಾಗ, 'ಆಹಾ! ಕನ್ನಡ ಎಷ್ಟು ಚೆಂದ! ಎಷ್ಟು ಮಧುರ! ಕನ್ನಡದಲ್ಲಿಯೇ ಮಾತಾಡುವಾ' ಎಂದರಂತೆ. ಕನ್ನಡಿಗರಲ್ಲಿಯೆ* ಎಷ್ಟು ಜನಕ್ಕೆ ತಮ್ಮ ತಾಯ್ನುಡಿಯ ಬಗ್ಗೆ ಇಂಥ ಆತ್ಮೀಯ ಭಾವನೆ ಇದ್ದೀತು?

### ೫೩.೨ ಜೆ.ಎಫ್. ಫ್ಲೀಟ್

ನಾಡಿನ ಇತಿಹಾಸ ಸಂಶೋಧನೆಯ ರಂಗದಲ್ಲಿ ರೈಸ್ ಮತ್ತು ಫ್ಲೀಟ್ ಅಶ್ವಿನೀ ದೇವತೆಗಳಿದ್ದಂತೆ. ಇಬ್ಬರೂ ಶಾಸನಗಳನ್ನೇ ತಮ್ಮ ಸಂಶೋಧನೆಯ ಪ್ರಮುಖ ಸಾಮಗ್ರಿಯಾಗಿಟ್ಟುಕೊಂಡು ಸುಮಾರು ಒಂದೇ ಕಾಲಾವಧಿಯಲ್ಲಿ (ಸು. ೧೮೭೦-೧೯೦೦) ಕಾರ್ಯಪ್ರವೃತ್ತರಾದರು. ರೈಸರು ೧೮೮೪ರಿಂದ, ನಿವೃತ್ತನಾಗುವವರೆಗೂ ಶಾಸನ ಸಂಶೋಧನೆ, ಪ್ರಕಟನೆಯಲ್ಲಿಯೆ ಕಳೆದರಾದರೆ, ಫ್ಲೀಟರಿಗೆ ಆ ಅನುಕೂಲತೆ ಯಿರಲಿಲ್ಲ. ರೈಸರಿಗಿಂತ ತುಸು ಮುಂಚೆ ಶಾಸನಾನ್ವೇಷಣೆಯಲ್ಲಿ ತೊಡಗಿದ್ದರಾದರೂ ಮುಂಬಯಿ ಸರಕಾರದ ಆಡಳಿತದ ವಿವಿಧ ಜವಾಬ್ದಾರಿಗಳನ್ನು ಹೊತ್ತು (೧೮೬೭-

---

* ಈಚೆಗೆ ಡಾ.ಎಸ್.ಎಲ್.ಶ್ರೀನಿವಾಸಮೂರ್ತಿ ರೈಸ್ ಅವರನ್ನು ಕುರಿತು ಪಿಎಚ್.ಡಿ ಮಟ್ಟದಲ್ಲಿ ವ್ಯಾಸಂಗ ಮಾಡಿದ್ದಾರೆ.

೧೮೯೬) ಬಿಡುವಿನ ವೇಳೆಯಲ್ಲಿ ಮಾತ್ರ ಈ ಕೆಲಸವನ್ನು ನಿರ್ವಹಿಸಬೇಕಾಗಿದ್ದಿತು. ರೈಸರ ಸಂಶೋಧನಾ ಕಾರ್ಯವು ಎಪಿಗ್ರಾಫಿಯಾ ಕರ್ನಾಟಿಕಾದ ಸಂಪುಟಗಳಲ್ಲಿ ಒಟ್ಟುಗೂಡಿದ್ದರೆ ಫ್ಲೀಟರ ಶಾಸನ ಸಂಶೋಧನೆಯು ನಾನ್ನೂರಕ್ಕೆ ಮಿಕ್ಕಿದ ಬಿಡಿ ಲೇಖನಗಳಲ್ಲಿ ಚದುರಿದೆ.* ಅಂತೂ ಇವರಿಬ್ಬರೂ ಹಾಕಿಕೊಟ್ಟ ಸುಭದ್ರ ಅಸ್ತಿವಾರದ ಮೇಲೆಯೆ ನಾಡಿನ ಚರಿತ್ರೆಯು ರೂಪುಗೊಂಡಿದೆಯೆಂಬುದರಲ್ಲಿ ಸಂದೇಹವಿಲ್ಲ.

ಭಾರತಕ್ಕೆ ಬರುವ ಮೊದಲೇ ಜೆ.ಎಫ್. ಫ್ಲೀಟ್ ಸಂಸ್ಕೃತವನ್ನು ಚೆನ್ನಾಗಿ ಅಭ್ಯಸಿಸಿದರು. ಅವರೇ ಬೇರೊಂದು ಸಂದರ್ಭದಲ್ಲಿ ಹೇಳಿದಂತೆ ಯಾವುದೇ ಭಾರತೀಯ ಭಾಷೆಯ ಶಾಸನಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಸಂಸ್ಕೃತ ಭಾಷಾಜ್ಞಾನವು ಅವಶ್ಯವಾದುದು. ಮುಂಬಯಿ ಸರಕಾರದಲ್ಲಿ ರೆವಿನ್ಯೂ ಅಧಿಕಾರಿಯಾಗಿ ಸೇರಿದ (೧೮೬೭) ಒಂದೆರಡು ವರ್ಷಗಳ ಅವಧಿಯಲ್ಲಿ ಅವರು ಸಂಸ್ಕೃತ, ಕನ್ನಡ ಶಾಸನಗಳನ್ನು ಓದಬಲ್ಲವರಾಗಿದ್ದರಲ್ಲದೆ ನಾಡಿನ ಚರಿತ್ರೆಯ ಮುಖ್ಯಾಂಶಗಳನ್ನು ಮನನ ಮಾಡಿದ್ದರು. ಶಾಸನ ವಾಚನದಲ್ಲಿ ಕಟ್ಟಿ, ತುರಮರಿ, ಕಿತ್ತೂರ ಮೊದಲಾದವರು ಆರಂಭದಲ್ಲಿ ಅವರಿಗೆ ನೆರವಾಗಿದ್ದಾರೆ. ಶಾಸನಗಳ ಪ್ರತಿ ತೆಗೆಯುವಲ್ಲಿ ಗ್ರಿಗ್ಸ್ ಎಂಬ ಅಧಿಕಾರಿಯ ಸಹಾಯವಿದ್ದಿತು. ಶಾಸನ ಪರಿವೀಕ್ಷಣೆಯ ರಂಗದಲ್ಲಿ ಫ್ಲೀಟರಿಗಿಂತ ಮುಂಚೆ ಪ್ರಿನ್ಸೆಪ್. ಕನಿಂಗ್‌ಹ್ಯಾಮ್. ಡಿಕ್ಸನ್. ಹೋಪ್, ಎಲಿಯಟ್ – ಇವು ಕೆಲವೇ ಹೆಸರುಗಳು ಕೇಳಬರುತ್ತಿದ್ದವು. ಡಿಕ್ಸನ್ ಮೈಸೂರ ಸೀಮೆಯ ಅನೇಕ ಶಾಸನಗಳನ್ನು ಹುಡುಕಿ ಪ್ರತಿ ತೆಗೆದುದು ರೈಸರಿಗೆ ಅನುಕೂಲವಾಯಿತು. ಅದರಂತೆ ಉತ್ತರ ಕರ್ನಾಟಕದಲ್ಲಿ ಎಲಿಯಟ್ ಸಂಗ್ರಹಿಸಿದ್ದ ಶಾಸನಗಳು ಫ್ಲೀಟರ ಪ್ರಯೋಜನಕ್ಕೊದಗಿದವು. ಜೊತೆಗೆ, ಶಾಸನಗಳಿಂದ ಇತಿಹಾಸದ ಅಂಶಗಳ ಆಯ್ಕೆ ಮತ್ತು ಸತ್ಯ ನಿರ್ಣಯದ ಕ್ರಮ – ಇವನ್ನು ಫ್ಲೀಟ್ ಎಲಿಯಟ್‌ರಿಂದ ಕಲಿತರೆಂಬುದನ್ನು ನೋಡಿದ್ದೇವೆ. ಹೀಗೆ ಆ ಮೊದಲು ಸಂಗ್ರಹಿಸಲಾದ ಶಾಸನಗಳ ಮರು ಸಂಪಾದನೆ, ಅವುಗಳಿಂದ ಇತಿಹಾಸ ರಚನೆ ಫ್ಲೀಟರ ಆರಂಭದ ಕಾರ್ಯರಂಗವಾಯಿತು.

ಭಾರತಕ್ಕೆ ಬಂದ ಒಂದೆರಡು ವರ್ಷಗಳಲ್ಲಿಯೆ ಫ್ಲೀಟ್ ಬೆಳಗಾಂವಿ ಜಿಲ್ಲೆಯಲ್ಲಿ ತಮಗೆ ದೊರೆತಿದ್ದ ಸಂಸ್ಕೃತ, ಕನ್ನಡ ಶಾಸನಗಳ ಬಗ್ಗೆ ರಾಯಲ್ ಏಶಿಯಾಟಿಕ್ ಸೊಸೈಟಿಯ ಮುಂಬಯಿ ಪತ್ರಿಕೆಯಲ್ಲಿ ಎರಡು ಲೇಖಗಳನ್ನು ಬರೆದರು. ಇವುಗಳಿಂದ ಗೋವೆಯ ಕದಂಬರ ಕಾಲದ ಮೇಲೆ ವಿಶೇಷ ಬೆಳಕು ಬಿದ್ದಿದೆ. ಅವರ ಬರವಣಿಗೆಗೆ ವಿಶೇಷ ಚಾಲನೆಯಿತ್ತ ಪತ್ರಿಕೆಯೆಂದರೆ ಇಂಡಿಯನ್ ಎಂಟಿಕ್ವೆರಿ. ಅದರ ಪ್ರಥಮ

* ಹೆಚ್ಚಿನ ಲೇಖಗಳು Ind.Atiquary ಮತ್ತು J.R.A.S. (London) ನಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಕರ್ನಾಟಕದ ಶಾಸನಗಳಿಗೆ ಪ್ರಾಶಸ್ತ್ಯವಿದ್ದರೂ, ತೆಲುಗು, ತಮಿಳು ಹಾಗೂ ಮಹಾರಾಷ್ಟ್ರದ ಶಾಸನಗಳನ್ನು ಕುರಿತೂ ಲೇಖಗಳಿವೆ.

ಸಂಪುಟದಲ್ಲಿ ಬಂದ ಅವರ ಮೊದಲ ಬರಹವು, ಎಣ್ಣೆಯ ಜಿಡ್ಡಿನಿಂದ ಲೇಪಿತವಾದ ಶಾಸನಗಳನ್ನು ತೊಳೆಯುವ ಬಗ್ಗೆ ಇದ್ದ ಒಂದು ವಾಚಕ ಪ್ರಶ್ನೆಯಾಗಿದೆ. ಫ್ಲೀಟರು ಅದೇ ಸಂಪುಟದಿಂದ ಆರಂಭಿಸಿ (೧೮೭೨) ತಮಗೆ ದೊರೆತಿದ್ದ ಹಳಗನ್ನಡ ಹಾಗೂ ಸಂಸ್ಕೃತ ಭಾಷಾ ಶಾಸನಗಳನ್ನು ಒಂದೊಂದಾಗಿ ಪ್ರಕಟಿಸತೊಡಗಿದರು. ಶಾಸನಗಳ ಪ್ರಕಟನೆಯೇ ಆ ಪತ್ರಿಕೆಯ ಮುಖ್ಯ ಉದ್ದೇಶ ಎನ್ನುವ ಮಟ್ಟಿಗೆ ಫ್ಲೀಟ್ ಹಾಗೂ ಇನ್ನೂ ಒಬ್ಬಿಬ್ಬರಿಂದ ವಿವಿಧ ಶಾಸನಗಳು ಅದರಲ್ಲಿ ಬೆಳಕಿಗೆ ಬರತೊಡಗಿದುವು. ಕ್ರಿ.ಶ. ೧೮೯೧ರ ಅನಂತರ ಫ್ಲೀಟರ ಶಾಸನ ಪ್ರಕಾಶನ ಕಾರ್ಯವು ಎಪಿಗ್ರಾಫಿಯಾ ಇಂಡಿಕಾದಲ್ಲಿ ಮುಂದುವರಿಯಿತು. ದಕ್ಷಿಣ ಮುಂಬಯಿಯ ತಮ್ಮ ವಾಸ್ತವ್ಯದಲ್ಲಿ ಫ್ಲೀಟರು ಒಂದು ಸಾವಿರದಷ್ಟು ಶಿಲಾ ಹಾಗೂ ತಾಮ್ರ ಶಾಸನಗಳನ್ನು ಪರಿಶೀಲನೆ ಮಾಡಿದ್ದಾರೆ.

ಇಂಡಿಯನ್ ಎಂಟಿಕ್ವೆರಿಯು ಖಾಸಗಿ ಪತ್ರಿಕೆಯಾಗಿದ್ದಿತು. ಅದರ ಸಂಪಾದಕ, ಪ್ರಕಾಶಕನಾಗಿದ್ದ ಜೇಮ್ಸ್ ಬರ್ಗೆಸ್ ಬೇರೊಂದು ಅಧಿಕಾರ ಸ್ಥಾನವನ್ನು ವಹಿಸಿದ್ದನಾದ್ದರಿಂದ, ಫ್ಲೀಟರು, ಆರ್.ಸಿ. ಟೆಂಪಲ್‌ನ ಜೊತೆಗೆ ಅದರ ಆರ್ಥಿಕ ಹೊಣೆಯನ್ನು ಹೊತ್ತು ಏಳು ವರ್ಷ ಪತ್ರಿಕೆಯನ್ನು ನಡೆಸಿದರು. ತನ್ನ ಸಂಪಾದಕತ್ವದ ಅವಧಿಯಲ್ಲಿ ಒಂದು ಪ್ರಕಟಣೆಯನ್ನು ಹೊರಡಿಸಿ, ಯಾರದೇ ಬಳಿಯಲ್ಲಿ ೧೨ನೆಯ ಶತಮಾನಕ್ಕೆ ಮುಂಚಿನ ತಾಮ್ರಶಾಸನಗಳಿದ್ದರೆ ಅವನ್ನು ಕಳಿಸಿಕೊಡಬೇಕಾಗಿಯೂ, ಅದರ ಅಂಚೆವೆಚ್ಚವನ್ನು ಕೊಡುವುದಲ್ಲದೆ ಸಂಭಾವನೆಯನ್ನೂ ಕೊಡುವುದಾಗಿ ಫ್ಲೀಟ್ ಕೇಳಿಕೊಂಡಿದ್ದರು.

ಶಾಸನಗಳಿಗೆ ಅವರು ಕೊಟ್ಟಿದ್ದ ಪ್ರಾಶಸ್ತ್ಯಕ್ಕೆ ಇದೊಂದು ನಿದರ್ಶನವಾದರೆ ಇಂಡಿಯನ್ ಎಂಟಿಕ್ವೆರಿ (ಸಂ. ೩೦, ೧೯೦೧) ಪತ್ರಿಕೆಯಲ್ಲಿ ಅವರು ಭಾರತೀಯ ಇತಿಹಾಸ ಸಂಶೋಧನದ ಆಗಿನ ಸ್ಥಿತಿಯ ಬಗ್ಗೆ, ಬರೆದ ಒಂದು ಲೇಖವು ಈ ಅಂಶವನ್ನು ವಿಶದೀಕರಿಸುವಂತಿದೆ. ಪ್ರಾಚೀನ ಕಾವ್ಯ, ಪುರಾಣಗಳು, ಸ್ಥಳಿಕ ಐತಿಹ್ಯಗಳು, ನಾಣ್ಯ ಮುಂತಾದವುಗಳು ಈ ದಿಶೆಯಲ್ಲಿ ನೆರವಾಗಬಲ್ಲವಾದರೂ ಐತಿಹಾಸಿಕ ಸತ್ಯ ಸಂಗತಿಗಳು ದೊರೆಯುವ, ಮತ್ತು ಇತರ ಆಕರಗಳಿಂದ ದೊರೆತವುಗಳನ್ನು ಒರೆಗೆ ಹಚ್ಚುವ ಪ್ರಮುಖ ಸಾಧನಗಳೆಂದರೆ ಶಾಸನಗಳೇ ಎಂಬ ಅವರ ದೃಢ ನಂಬುಗೆಯು ಆ ಲೇಖದಲ್ಲಿ ವ್ಯಕ್ತವಾಗಿದೆ. ಪ್ರಾಚೀನ ಭಾರತದ ಭಾಷೆ, ಲಿಪಿ, ವಾಙ್ಮಯ, ಧರ್ಮ, ಆಡಳಿತ ಇತ್ಯಾದಿ ಅಂಶಗಳ ವಿಕಾಸವನ್ನು ಗುರುತಿಸಲು ಶಾಸನಗಳು ಅದೆಂತು ನೆರವಾಗಬಲ್ಲವೆಂಬುದನ್ನು ಸೋದಾಹರಣವಾಗಿ ವಿವರಿಸಿದ್ದಾರೆ. ವಿಕ್ರಮಾಂಕರಾಜನ ಆಸ್ಥಾನದಲ್ಲಿದ್ದರೆಂದು ಐತಿಹ್ಯವಿದ್ದ ಕಾಳಿದಾಸ, ವರಾಹಮಿಹಿರ ಮೊದಲಾದ ನವರತ್ನಗಳು ಬೇರೆ ಬೇರೆ ಶತಮಾನಗಳಲ್ಲಿದ್ದುದನ್ನು ಶಾಸನಗಳಿಂದಲೇ ದೃಢೀಕರಿಸಿದ್ದಾರೆ. ಈ ಆಧಾರವಿಲ್ಲದಿದ್ದಾಗ ಕನಿಂಗ್‌ಹ್ಯಾಮ್‌ನಂತಹ ವಿದ್ವಾಂಸರೂ ನವರತ್ನಗಳ ಕಾಲನಿರ್ಣಯ ವಿಚಾರದಲ್ಲಿ ತಪ್ಪು ಮಾಡಿದ್ದರೆಂಬುದನ್ನು ಫ್ಲೀಟ್ ತೋರಿಸಿದ್ದಾರೆ. ಬಸವೇಶ್ವರನ ಚರಿತ್ರೆಯ

ಬಸವಪುರಾಣದಲ್ಲಿ ಬಂದಿದ್ದರೂ ಧಾರವಾಡ ಜಿಲ್ಲೆಯ ಅಬ್ಬಲೂರು ಶಾಸನದಿಂದ ಅದರ ಐತಿಹಾಸಿಕ ಹಿನ್ನೆಲೆ ಮತ್ತು ಸತ್ಯಾಂಶಗಳು ನೆಲೆಗೊಂಡವು. ಅದಿಲ್ಲದಿದ್ದರೆ ಬಸವಪುರಾಣವು ಪುರಾಣವಾಗಿಯೇ ಉಳಿಯುತ್ತಿದ್ದಿತು. ಅಲ್ಲದೆ. ನಿಜಾಮ ಸಂಸ್ಥಾನದ ಅಳಂದಿಯ ಶಾಸನವು ಏಕಾಂತದ ರಾಮಯ್ಯನ ಕಾರ್ಯದ ಹಿನ್ನೆಲೆಯನ್ನು ಒದಗಿಸಿದ್ದರಿಂದ ೧೨ನೆಯ ಶತಮಾನದಲ್ಲಿ ವೀರಶೈವ ಸಿದ್ಧಾಂತವು ಹೇಗೆ ಪುನರುತ್ಥಾನಗೊಂಡಿತು ಎಂಬುದನ್ನು ನಿಚ್ಚಳವಾಗಿ ತಿಳಿಯುವಂತಾಯ್ತು. ಇಂಥ ಉದಾಹರಣೆಗಳ ಮೂಲಕ ಶಾಸನಗಳ ಮಹತ್ವವನ್ನು ಪ್ರಸ್ತಾಪಿಸುತ್ತ, ಅನೇಕ ಜನ ಪ್ರಸಿದ್ಧ ಶಾಸನ ಸಂಶೋಧಕರು, ಆ ಲೇಖವನ್ನು ಬರೆಯುವ ಕಾಲಕ್ಕೆ, ಗತಿಸಿದ್ದರಿಂದ ಫ್ಲೀಟ್, ಹೊಸಬರು ಮುಂದೆ ಬರಬೇಕೆಂಬ ಕಳಕಳಿಯ ಕರೆಯನ್ನಿತ್ತಿದ್ದಾರೆ.

ಯಾವುದೇ ಒಂದು ಶಾಸನದಿಂದ ನೇರವಾದ ಇತಿಹಾಸ ಸಾಮಗ್ರಿಯು ಸಿಕ್ಕುವುದು ಕಡಮೆ. ಅವನ್ನು ಇತರ ಶಾಸನಗಳೊಂದಿಗೆ ಹೋಲಿಸಿ ನೋಡಬೇಕಾಗುತ್ತದೆ. ಅನೇಕ ಶಾಸನಗಳಿಂದ ವಿಶೇಷ ಸಂಗತಿ ಹೊರಡಲಿಕ್ಕೂ ಇಲ್ಲ. ಇವನ್ನುಳಿದು ಕೆಲವು ಖೊಟ್ಟಿ ಶಾಸನಗಳೂ ಇರುತ್ತವೆ ಎಂಬುದರ ಕುರಿತು ಫ್ಲೀಟ್ ೧೮೯೯ರಂದು ರೋಮ್‌ದಲ್ಲಿ ನಡೆದ ಪ್ರಾಚ್ಯವಿಷಯಕ ಸಮ್ಮೇಳನದಲ್ಲಿ ಪ್ರಬಂಧವನ್ನು ಓದಿ ಸಂಶೋಧಕರಿಗೆ ಎಚ್ಚರಿಕೆಯನ್ನಿತ್ತಿದ್ದಾರೆ. ಇಂಥ ಶಾಸನಗಳ ಖೊಟ್ಟಿತನವನ್ನು ಕಂಡು ಹಿಡಿಯಲು ಅನುಕೂಲವಾಗುವಂತೆ ಕೆಲವು ಮಾದರಿಗಳನ್ನೂ ಅದರಲ್ಲಿ ಕೊಟ್ಟಿದ್ದಾರೆ.

'ಎಂಟಿಕ್ವೆರಿ' ಪತ್ರಿಕೆಯಲ್ಲಿ ಬರತೊಡಗಿದ್ದ ಇವರ ಲೇಖನಮಾಲೆಯನ್ನು ಕಂಡು ಭಾರತ ಸರಕಾರದವರು, ಅದುವರೆಗೆ ದೊರೆತಿದ್ದ ಮಹತ್ವದ ಶಾಸನಗಳನ್ನು ಒಂದೆಡೆ ಸಂಕಲಿಸಿ ಪೀಠಿಕೆ, ಟಿಪ್ಪಣಿಗಳೊಡನೆ ಶಾಸ್ತ್ರೀಯವಾಗಿ ಸಂಪಾದಿಸುವ ಕೆಲಸವನ್ನು ಫ್ಲೀಟರಿಗೆ ಒಪ್ಪಿಸಿದರು. ಅದರ ಫಲವಾಗಿ Some Sanskrit, Pali and Hala Kannada Inscriptions ಎಂಬ ಕೃತಿಯು ೧೮೭೮ರಲ್ಲಿ ಹೊರಬಂದಿತು. ಅದರಲ್ಲಿ ಫ್ಲೀಟರು ತಮಗೆ ದೊರೆತಿದ್ದ ಶಾಸನಗಳನ್ನೂ ಸೇರಿಸಿದ್ದಾರೆ. ಭಾರತದ ಇತಿಹಾಸ ರಚನೆಯಲ್ಲಿ ಕನ್ನಡ ನಾಡಿನ ಶಾಸನಗಳ ಪಾತ್ರವು ಹಿರಿದೆಂಬ ಕಲ್ಪನೆಯನ್ನು ಈ ಕೃತಿಯು ಕನ್ನಡೇತರ ವಿದ್ವಾಂಸರಲ್ಲಿ ನೆಲೆಗೊಳಿಸುವಂತಹದಾಗಿದೆ.

ಅವರ ಇನ್ನೊಂದು ಗ್ರಂಥವು ಪ್ರಾಚೀನ ಕನ್ನಡ ರಾಜಮನೆತನಗಳಿಗೆ ಸಂಬಂಧಪಟ್ಟುದು. ಮೂಲತಃ 'ಬಾಂಬೆ ಗೆಝೆಟಿಯರ್'ಗೆ ಬರೆಯಲಾದ (೧೮೮೨) ಈ ಕೃತಿಯು (Dynasties of Canerese Districts) ಚಿಕ್ಕದಾದರೂ ಮೌಲಿಕವಾದುದು. ಶಾಸನಗಳ ಆಧಾರದ ಮೇಲೆ ಔತ್ತರೇಯ ಕನ್ನಡ ರಾಜರ (ಕದಂಬ, ಬದಾಮಿ, ಚಾಳುಕ್ಯ, ರಾಷ್ಟ್ರಕೂಟ, ಕಳಚುರಿ, ಹೊಯ್ಸಳ, ರಟ್ಟ, ಯಾದವ, ಶಿಲಾಹಾರ ಮುಂತಾದ,

ಆದರೆ ಮುಸ್ಲಿಮರ ಆಗಮನಪೂರ್ವದ ರಾಜಮನೆತನಗಳ ಇತಿಹಾಸವನ್ನು ನಿರ್ದುಷ್ಟವಾಗಿ ವರ್ಣಿಸಲಾಗಿದೆ. ಕರ್ನಾಟಕವೆಂಬುದು ಪ್ರತ್ಯೇಕ ಅಸ್ತಿತ್ವವುಳ್ಳ ನಾಡು, ಸದರ್ನ್ ಮರಾಠಾ ಕಂಟ್ರಿ ಅಲ್ಲ ಎಂಬ ಫ್ಲೀಟರ ಸಮರ್ಥಯುತ ಪ್ರತಿಪಾದನೆಯು ಇದರಲ್ಲಿಯೇ ಬಂದಿದೆ.

ಶಾಸನಗಳಿಗೆ ಅನ್ವಯಿಸಿದ ಅವರ ಒಂದು ಮಹತ್ವದ ವಿಧಾಯಕ ಸೂಚನೆಯೆಂದರೆ, ವಿವಿಧ ರಾಜ ಮನೆತನಗಳಿಗೆ ಸಂಬಂಧಿಸಿದ ಪ್ರಮುಖ ಶಾಸನಗಳನ್ನು ಒಂದೊಂದು ಸಂಪುಟದಲ್ಲಿ ಸಂಕಲಿಸಿ ವಿಮರ್ಶಾತ್ಮಕ ಟಿಪ್ಪಣಿಗಳೊಡನೆ ಪ್ರಕಟಿಸುವುದು. Corpus Inscriptionum Indiarum ಮಾಲಿಕೆಯಲ್ಲಿ ಅದಾಗಲೇ ಅಶೋಕನ ಶಾಸನಗಳ ಸಂಪುಟವು ಹೊರಬಂದಿದ್ದಿತು. ಅದರ ಮೂರನೆಯ ಸಂಪುಟವೇ ಫ್ಲೀಟ್ ಸಂಪಾದಿತ ಗುಪ್ತಕಾಲೀನ ಶಾಸನ ಸಂಗ್ರಹ. ಶಾಸನಗಳ ವೈಜ್ಞಾನಿಕ ವಿವೇಚನೆಗೆ ಹಾಗೂ ಫ್ಲೀಟರ ವೈದುಷ್ಯಕ್ಕೆ ಕನ್ನಡಿ ಹಿಡಿದಂತಿದ್ದು ಈ ಕೃತಿಯು ಭಾರತೀಯ ವಿದ್ವತ್ಪರಂಪರೆಯಲ್ಲಿ ಅವರ ಹೆಸರನ್ನು ಶಾಶ್ವತವಾಗಿ ಉಳಿಸುವಂತಹದಾಗಿದೆ.

ಫ್ಲೀಟರ ಶಾಸನ ಪರಿವೀಕ್ಷಣೆಗೆ ಆನುಷಂಗಿಕವಾಗಿ ನೆರವಾದ ಅಂಶವೆಂದರೆ ಅವರ ಜ್ಯೋತಿಷ ಶಾಸ್ತ್ರದ ಹಾಗೂ ಕಾಲಗಣನೆಯ ಪರಿಜ್ಞಾನ. ಶಾಸನಗಳಲ್ಲಿ ಉಲ್ಲೇಖವಾದ ಶಕವರ್ಷ, ಸಂವತ್ಸರ, ತಿಥಿಗಳನ್ನು ಹೊಂದಿಸಿಕೊಂಡು ಕ್ರಿಸ್ತೀಯ ಕಾಲ ಗಣನೆಗೆ ಅನುಗುಣವಾಗಿ ಹೇಳುವ ಸುಲಭ ಹಾಗೂ ಖಚಿತವಾದ ಪದ್ಧತಿಯು ಅದುವರೆಗೂ ನೆಲೆಗೊಂಡಿರಲಿಲ್ಲ. ಕೇ.ಲ. ಛತ್ರೆ ಮತ್ತು ಶಂ.ಬಾ. ದೀಕ್ಷಿತ ಎಂಬ ವಿದ್ವಾಂಸರ ಸಹಾಯದಿಂದ ಅದನ್ನು ನಿರ್ದಿಷ್ಟಪಡಿಸಿದುದು ಫ್ಲೀಟರ ಒಂದು ಸಾಧನೆ ಎನ್ನಬಹುದು. ಪ್ರಾಚೀನ ಭಾರತದಲ್ಲಿ ಹಲವಾರು ಶಕ, ಯುಗಗಳು ಆರಂಭವಾಗಿದ್ದು ಅವುಗಳ ಕಾಲವನ್ನು ಖಚಿತಗೊಳಿಸಲು ಫ್ಲೀಟ್ ಬಹುಮುಖವಾಗಿ ಶ್ರಮಿಸಿ ಕೆಲವು ಹೊಸ ಸಿದ್ಧಾಂತಗಳನ್ನು ಪ್ರತಿಪಾದಿಸಿದರು. ಈಚಿನ ಪುನರ್ವಿಮರ್ಶನದಿಂದ ಅವುಗಳಲ್ಲಿ ತುಸು ವ್ಯತ್ಯಾಸ ತೋರಿ ಬಂದರೂ ಆ ದಿಶೆಯಲ್ಲಿ ಫ್ಲೀಟ್ ಇತರರಿಗಿಂತ ಹೆಚ್ಚು ಮುಂದುವರಿದಿದ್ದಾರೆ.

ನಿವೃತ್ತರಾಗಿ ಇಂಗ್ಲೆಂಡಿಗೆ ಮರಳಿ ಹೋದ ಮೇಲೆ ಫ್ಲೀಟರು ಲಂಡನ್ನಿನ ರಾಯಲ್ ಏಶಿಯಾಟಿಕ್ ಸೊಸೈಟಿಯ ಪ್ರಮುಖ ಕಾರ್ಯಕರ್ತರಾಗಿ ನಿಂತರು. ಹನ್ನೊಂದು ವರ್ಷಗಳ ಕಾಲ ಅದರ ಗೌರವ ಕಾರ್ಯದರ್ಶಿಯಾಗಿದ್ದರು. ಸಂಸ್ಥೆಯ ಪತ್ರಿಕೆಯ ಆಗಿನ ಪ್ರತಿ ಸಂಚಿಕೆಯಲ್ಲಿಯೂ ಇವರ ಲೇಖನಗಳು ಪ್ರಕಟವಾಗಿವೆ. ಅವೆಲ್ಲ ಪ್ರಾಚೀನ ಭಾರತಕ್ಕೆ ಸಂಬಂಧಪಟ್ಟವಾಗಿದ್ದು, ವಿಷಯ ವಿವೇಚನೆಯಲ್ಲಿ ನಾಣ್ಯಶಾಸ್ತ್ರ, ಕಾವ್ಯ, ಪುರಾಣ ಹಾಗೂ ಭಾಷಾಶಾಸ್ತ್ರ ಇವುಗಳ ಆಧಾರವನ್ನೂ ಪಡೆಯಲಾಗಿದೆ.

ಸಮಕಾಲೀನ ವಿದ್ವನ್ಮಂಡಲಿಯಲ್ಲಿ ಫ್ಲೀಟ್ ಮಹಾ ಮೇಧಾವಿಯೆನಿಸಿದ್ದರೂ ತನ್ನ ಮಾತೇ ಸರಿಯೆಂದು ಸಾಧಿಸುವ ಹಟವಾದಿಯಿರಲಿಲ್ಲ. ಶಾಸನಗಳಿಂದ ಮಥಿತವಾದ

ಹೊಸ ವಿಚಾರವನ್ನು ಕೂಡಲೆ ಬರೆದು ಪ್ರಕಟಣೆಗೆ ಕಳಿಸುತ್ತಿದ್ದರೂ ಅದನ್ನು ಮುಂದೊಮ್ಮೆ ಪರಿಷ್ಕರಿಸಿ ಪ್ರಕಟಿಸಬೇಕೆಂಬ ವಿಚಾರ ಅವರಲ್ಲಿ ಸದೈವ ಇದ್ದಿತು. ತಮ್ಮ ಸಾಧನೆಯ ಬಗ್ಗೆ ಅವರ ಈ ಹೇಳಿಕೆಯು ವಿದ್ಯಾ ದದಾತಿ ವಿನಯಂ ಎಂಬ ಉಕ್ತಿಗೆ ನಿದರ್ಶನವಾಗಿದೆ:

I have written much that I should like to correct and something which I should like to cancel altogether. However, I doubt if I shall ever see my way to doing much in that direction; new points of urgent inerest arise so constantly, it is difficult to go back on past ground. . . .I can only express the hope that writers who may wish to qute me will look to my later writings in preference to earlier ones [6]

ಇದರ ಫಲವೇ ರೈಸ್ ಫ್ಲೀಟರ ನಡುವೆ ಆಗೀಗ ನಡೆಯುತ್ತಿದ್ದ ಲೇಖಕೀಯ ವಾದ! ರೈಸನ ಅನೇಕ ವಿಧಾನಗಳನ್ನು ಫ್ಲೀಟ್ ಖಂಡಿಸಿದ್ದಾಗ, ರೈಸ್ ಸಮರ್ಥಿಸಿಕೊಂಡದ್ದನ್ನು ಪತ್ರಿಕೆಗಳಲ್ಲಿ, E.C.ಸಂಪುಟಗಳಲ್ಲಿ ಆಗೀಗ ಕಾಣುತ್ತೇವೆ. (ಉದಾಹರಣೆ : I. A. 21 p. 156 ಮತ್ತು E. C. Vol.3, p.5) ತನ್ನ ಅಭಿಪ್ರಾಯವನ್ನು ತಪ್ಪೆಂದು ತೋರಿಸಿದರೆ ಫ್ಲೀಟ್ ಅದನ್ನು ಪ್ರಾಂಜಲವಾಗಿ ಒಪ್ಪಿಕೊಂಡ ಸಂದರ್ಭಗಳೂ ಇಲ್ಲದಿಲ್ಲ. (E. C., 6, p.79) ಇದಂತಿರಲಿ, ಅವರು ಪರಸ್ಪರರಲ್ಲಿ ತೋರುತ್ತಿದ್ದ ಸೌಹಾರ್ದವೂ ಸಹಾಯ ತತ್ಪರತೆಯೂ ಗಣನೀಯವಾಗಿದೆ. ಸಂದೇಹವು ತಲೆದೋರಿದಾಗ ಪತ್ರವ್ಯವಹಾರ ನಡೆಸಿ ಸ್ಪಷ್ಟೀಕರಣವನ್ನು ಪಡೆದುದೂ, ಅಂಥ ಸಹಾಯವನ್ನು ಕೃತಜ್ಞತೆಯಿಂದ ನೆನೆದುದೂ ಅದೆಷ್ಟು ಸಲವೊ! ಸತ್ಯಾನ್ವೇಷಣೆಯಲ್ಲಿ ನಿರತರೂ, ನಿಷ್ಠರೂ ಆದ ವಿದ್ವಾಂಸದ್ವಯರ ಈ ಬಗೆಯ ಬಿಚ್ಚುಮನದ ವಾದ ಹಾಗೂ ಸಾಹಚರ್ಯಗಳು ಅನುಕರಣೀಯವಾಗಿವೆ.

ಹೀಗೆ ರೈಸ್ ಮತ್ತು ಫ್ಲೀಟ್ ಇಬ್ಬರೂ ಕರ್ನಾಟಕದ ಶಾಸನಗಳನ್ನು ಮೂಲವಾಗಿ ಇಟ್ಟುಕೊಂಡು ಭಾರತೀಯ ಇತಿಹಾಸ ಸಂಶೋಧನೆಗೆ ಮಹತ್ತರ ಕೊಡುಗೆಯನ್ನು ಸಲ್ಲಿಸಿದರು. ಮತ್ತು ಆ ರಂಗದಲ್ಲಿ ಅಖಿಲ ಭಾರತದ ಮುಂದಾಳ್ತನವನ್ನು ವಹಿಸಿದ್ದರೆನ್ನುವುದು ಹೆಮ್ಮೆಪಡತಕ್ಕ ಮಾತಾಗಿದೆ.

ಫ್ಲೀಟರ ಇನ್ನೊಂದು ಮಹತ್ವಪೂರ್ಣ ಕನ್ನಡ ಕಾರ್ಯವೆಂದರೆ ಕೆಲವು ಜಾನಪದ ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿದುದು. ಈ ಲಾವಣಿ ಅಥವಾ ಕಥನ ಕವನಗಳು ತತ್ಕಾಲೀನ ವಿದ್ಯಮಾನಗಳಿಗೆ, ವಿಶೇಷತಃ ಬ್ರಿಟಿಶರ ಚಟುವಟಿಕೆಗಳಿಗೆ ಸಂಬಂಧ ಪಟ್ಟವುಗಳಾಗಿವೆ. ಕಿತ್ತೂರ ದೇಸಗತಿಯ ಈರವ್ವ (ಚೆನ್ನಮ್ಮ ರಾಣಿಯ ಹಿರಿಯ ಸೊಸೆ). ಸಂಗೊಳ್ಳಿ ರಾಯಣ್ಣ, ನರಗುಂದದ ಬಂಡಾಯ ಬದಾಮಿ ಕೋಟೆಯ ಪತನ-ಇವು ಬ್ರಿಟಿಶರ ವಿರುದ್ಧ ನಮ್ಮವರು ಸೆಣಸಿದ ವೀರ ಕಥನಗಳು. ಶಸ್ತ್ರಾಸ್ತ್ರ ಶರಣಾಗತಿ ಕಾಯದೆಯು (Disarming Act) ಬಂದಾಗ ಹಲಗಲಿ ಗ್ರಾಮದ ಬೇಡರು ಪ್ರತಿಭಟಿಸಿದುದೂ. ಆದಾಯ

ತೆರಿಗೆಯನ್ನು ಹೇರಿದಾಗ ಜನತೆಯು ಪಟ್ಟ ತೊಂದರೆಯೂ ಜನಪದ ಕವನಗಳಲ್ಲಿ ಹೊರಹೊಮ್ಮಿದುವು. ಓರ್ವ ಸಾಹುಕಾರನು ಸಂಗಣ್ಣನೆಂಬ ಸಾಲಗಾರನನ್ನು ಹಣಕ್ಕಾಗಿ ಪೀಡಿಸಿದ್ದರಿಂದ, ಸಂಗಣ್ಣನು ಆ ಸಾಹುಕಾರನನ್ನು ಕೊಲ್ಲುತ್ತಾನೆ. ಬ್ರಿಟಿಶ್ ಸರಕಾರವು ಅದಕ್ಕಾಗಿ ಅವನನ್ನು ಫಾಶೀ ಶಿಕ್ಷೆಗೆ ಗುರಿಪಡಿಸಿದಾಗ, ಸಾಮಾನ್ಯ ಹಳ್ಳಿಗರ ಮನಸ್ಸು ಸಂಗಣ್ಣನತ್ತ ಸಹಾನುಭೂತಿ ಪರವಾಗಿತ್ತು. ಈ ಘಟನೆಯನ್ನು ಕುರಿತು ಲಾವಣಿಯೊಂದು ರಚಿತವಾಗಿದ್ದು, ಫ್ಲೀಟ್ ಅದನ್ನೂ ಬರೆದುಕೊಂಡು ಪ್ರಕಟಿಸಿದರು. ಇಂಡಿಯನ್ ಎಂಟಿಕ್ವೆರಿ ಪತ್ರಿಕೆಯಲ್ಲಿ ಸಂಪುಟ (೧೪-೧೯).

ಗಮನಿಸಬೇಕಾದ ಮಾತೆಂದರೆ ಇವು ಬ್ರಿಟಿಶರನ್ನು ನೇರವಾಗಿ, ಇಲ್ಲವೆ ಪರ್ಯಾಯವಾಗಿ ಟೀಕಿಸಿದ ಪದ್ಯಗಳಾಗಿದ್ದರೂ ಫ್ಲೀಟ್ ಅವನ್ನು ಪ್ರಕಟಿಸಿದುದು. ಅವರಲ್ಲಿದ್ದ ಇತಿಹಾಸ ಪ್ರಜ್ಞೆಯೇ ಇದರ ಹಿಂದಿರುವ ಹೇತುವಾಗಿರಬೇಕು. ಅಲ್ಲದೆ ಫ್ಲೀಟ್, ಬ್ರಿಟಿಶ್ ಉಚ್ಚಾಧಿಕಾರಿಯಾಗಿದ್ದರೂ ಮೇಳದವರು ಅಂಥ ಪದ್ಯಗಳನ್ನು ಅವರೆದುರು ಹಾಡಿ ತೋರಿಸಲು ಹಿಂಜರಿಯಲಿಲ್ಲವೆಂಬುದೂ ಅರ್ಥಪೂರ್ಣವಾಗಿದೆ. ಅದಕ್ಕೆ ಫ್ಲೀಟರ ಸ್ವಭಾವವೇ ಕಾರಣ. ತನ್ನ ದಿನದ ಕಚೇರಿಯ ಕೆಲಸ ಮುಗಿಸಿ ರಾತ್ರಿಯ ವೇಳೆ, ತನ್ನ ಡೇರೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ಕಾಲದಲ್ಲಿ ಲಾವಣಿಕಾರರ ತಂಡಕ್ಕೆ ಹೇಳಿ ಕಳುಹುತ್ತಿದ್ದರು. ಬದುಕಿನ ಸಾಮಾನ್ಯ ಅಂಶಗಳಲ್ಲಿಯೂ ಆಸ್ಥೆಯನ್ನು ತೋರಿ ಸಂತೋಷಪಡುವ ಮನೋಧರ್ಮವಿದು. ಇತ್ತ ಊರವರು ಸಾಹೇಬರ ಸಮ್ಮುಖದಲ್ಲಿ ಲಾವಣಿಯ ಕಾರ್ಯಕ್ರಮ ನಡೆಯುವುದೆನ್ನುತ್ತಲೂ ಗುಂಪಾಗಿ ನೆರೆಯುತ್ತಿದ್ದರಂತೆ. ಹಾಡುವವರು ಫ್ಲೀಟ್ ಕೊಡುವ ಸಂಭಾವನೆ ಅಥವಾ ಖುಷಿಗೆ ಮಾತ್ರ ಪದ್ಯಗಳನ್ನು ಹೇಳುತ್ತಿದ್ದರೆಂದಲ್ಲ. ತಮ್ಮ ಸಜ್ಜನಿಕೆಯ ಸ್ವಭಾವದಿಂದ ಹಳ್ಳಿಗರೊಡನೆ ಬೆರೆತು ಅವರು ಅವರ ವಿಶ್ವಾಸಗಳನ್ನು ಗಳಿಸಿಕೊಂಡಿದ್ದರು. ಇಂಥ ರಸಮಯ ಸನ್ನಿವೇಶಗಳ ದಿನಗಳನ್ನು ಅವರು ತಮ್ಮ ನಿವೃತ್ತ ಜೀವನದಲ್ಲಿ ನೆನೆಯುತ್ತಿದ್ದರೆಂದು ಅವರ ಕಿರಿಯ ಅನುವರ್ತಿಯಾಗಿದ್ದ ಎಸ್.ಡಿ. ಬಾರ್ನೆಟ್ ಉಲ್ಲೇಖಿಸಿದ್ದಾರೆ. ಜಾನಪದ ಸಾಹಿತ್ಯವನ್ನು ಸಂಗ್ರಹಿಸುವ ಕಾರ್ಯ ೨೦ನೆಯ ಶತಮಾನದಲ್ಲಿ ವ್ಯಾಪಕವಾಗಿ ನಡೆದಿದೆ. ಅವುಗಳ ಮಹತ್ವವನ್ನು ಅರಿತು ಅದನ್ನು ಆರಂಭ ಮಾಡಿದವರು ಫ್ಲೀಟ್ ಎಂಬ ಅಂಶ ದಾಖಲಿಸುವಂತಹದೇ ಆಗಿದೆ.

ರೈಸ್ ಮತ್ತು ಫ್ಲೀಟ್ ವಿಸ್ತರಿಸಿದ ಭಾರತ ಕರ್ನಾಟಕಗಳ ಇತಿಹಾಸ ಸಂಶೋಧನಾ ಕಾರ್ಯವನ್ನು ಕೆಲವರು ಮುಂದುವರಿಸಿದರು. ಕ್ರಿ.ಶ. ೧೮೬೮ರಿಂದ ೧೮೯೪ರ ವರೆಗೆ ಭಾರತ ಪುರಾತತ್ತ್ವ ವಿಭಾಗದಲ್ಲಿದ್ದ ರಾಬರ್ಟ್ ಸಿವೆಲ್ ಮರೆತು ಹೋದ ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಬರೆದು, ಅದು ಸದಾ ನೆನಪುಳಿಯುವಂತೆ ಮಾಡಿದರು. ಹಲ್ಷ್ ಕೂಡಾ ಕೇಂದ್ರ ಪುರಾತತ್ತ್ವ ವಿಭಾಗದಲ್ಲಿದ್ದವರೇ. ಕರ್ನಾಟಕದ ಇತಿಹಾಸ

ವಿಚಾರದಲ್ಲಿ ಅವರಿಗೆ ಆಸ್ಥೆ ಇದ್ದಿತು. ಕನ್ನಡ ಭಾಷೆಯನ್ನು ಕಲಿತುಕೊಂಡಿದ್ದರಲ್ಲ! ಅವರಿಗೆ ಫ್ಲೀಟ್, ಕಿಟೆಲ್, ರೈಸ್ ಮುಂತಾದ ಕರ್ನಾಟಕದ ವಿದ್ವಾಂಸರ ಬೆಂಬಲವಿದ್ದಿತು.

ಹಲ್ಷ್‌ನಿಂದ ತರಬೇತಿ ಹೊಂದಿದವರಾಗಿ ಹೊಸಕೋಟೆ ಕೃಷ್ಣಶಾಸ್ತ್ರಿಗಳು ದಕ್ಷಿಣ ಭಾರತದ ಇತಿಹಾಸಕ್ಕೆ ಸಂಬಂಧಿಸಿ ಅನೇಕ ಸಂಶೋಧನ ಲೇಖನಗಳನ್ನು ಬರೆದರು. ಹಾಗೆಯೇ, ಬಿ.ಎಲ್. ರೈಸರಿಂದ ಕಾರ್ಯಪ್ರೇರಿತರಾದವರು ಕೆ.ಬಿ. ಪಾಠಕ ಮತ್ತು ಆರ್. ನರಸಿಂಹಾಚಾರ್ಯರು. ಮೂಲತಃ ಹುಬ್ಬಳ್ಳಿಯವರಾದ ಪಾಠಕರು ರೈಸರ ಸಹಾಯಕರಾಗಿ ಕವಿರಾಜಮಾರ್ಗವನ್ನು ಸಂಪಾದಿಸಿಕೊಟ್ಟದ್ದನ್ನು ಹೇಳಲಾಗಿದೆ. ಅದರ ಕರ್ತೃತ್ವದ ಬಗ್ಗೆ ಫ್ಲೀಟ್, ಪಾಠಕರ ನಡುವೆ ಜರುಗಿದ ವಾದ, ವಿವಾದ ಗಮನಿಸುವಂತಿದೆ. ಪಾಠಕರ ಮುಂದಿನ ಜೀವನವು ಮಹಾರಾಷ್ಟ್ರದಲ್ಲಿಯೇ ಕಳೆಯಿತು. ಇತ್ತ ಫ್ಲೀಟರ ಸಂಶೋಧನಾ ಕಾರ್ಯವನ್ನು ಎಲ್.ಡಿ. ಬಾರ್ನೆಟ್ ತುಸುಮಟ್ಟಿಗೆ ಮುಂದುವರಿಸಿದ್ದಾರೆ.

ಭಾರತೀಯ ಶಿಲ್ಪಕಲೆಯ ಬಗ್ಗೆ ಉದ್ಗ್ರಂಥಗಳನ್ನು ಬರೆದ ಜೇಮ್ಸ್ ಫರ್ಗ್ಯುಸನ್ ಮತ್ತು ಹೆನ್ರಿ ಕಸಿನ್ಸ್, ಭಾರತೀಯ ಭಾಷಾ ಸಮೀಕ್ಷಕ ಗ್ರಿಯರ್‌ಸನ್ ಇವರು ಕನ್ನಡ ನಾಡಿನಲ್ಲಿ ಬಾಳಿದವರಲ್ಲವಾದರೂ, ಕನ್ನಡ ಶಿಲ್ಪಕಲೆ ಮತ್ತು ಭಾಷೆ ಇವನ್ನು ಕುರಿತು ಆಳವಾದ ಅಭ್ಯಾಸ ಮಾಡಿ, ಮೌಲಿಕ ವಿಚಾರಗಳನ್ನು ವ್ಯಕ್ತಪಡಿಸಿದುದು ಉಲ್ಲೇಖನೀಯವಾಗಿದೆ.

ಬ್ರಿಟಿಶ್ ಅಧಿಕಾರಿಗಳು ಮಿಶನರಿ ಜನರಂತೆ ನೇರವಾಗಿ ಕನ್ನಡ ಸಾಹಿತ್ಯ ನಿರ್ಮಿತಿಗೆ ತೊಡಗಿದವರಲ್ಲ. ಆದರೆ ಕನ್ನಡದ ಭಾಷೆ ಮತ್ತು ಇತಿಹಾಸಗಳಿಗೆ ಸಂಬಂಧಿಸಿ ಅನೇಕ ಹೊಸ ಅಂಶಗಳನ್ನು ಹೊರಗೆಡಹಿದರು. ಮತ್ತು ಮುಂದಿನ ಕಾರ್ಯಕ್ಕೆ ದೇಶೀಯರನ್ನು ಅಣಿಗೊಳಿಸಿದರು. ಇಂಥ ಕಾರ್ಯದ ನಾಂದಿಯನ್ನು ಹಾಡಿದವರು ವಾಲ್ಟರ್ ಎಲಿಯೆಟ್. ರೈಸ್ ಮತ್ತು ಫ್ಲೀಟ್ ಅದನ್ನು ಬಹುವಾಗಿ ವಿಸ್ತರಿಸಿದರು. ಅದು ಮುಂದುವರಿಯುವುದಕ್ಕೆ ಇತರ ವಿದ್ವಾಂಸರು ಪ್ರೇರಣೆಯಾಗಿ ನಿಂತರು. ಅವರು ಬಿಟ್ಟು ಹೋದ ಐತಿಹಾಸಿಕ ಮತ್ತು ಇತರ ಸಾಮಗ್ರಿಗಳ ಮೂಲ ದ್ರವ್ಯವು ಇಂದು ವ್ಯಾಪಕವಾಗಿ ನಡೆದಿರುವ ನಾಡು ನುಡಿಗಳ ಅಭ್ಯಸನ ಹಾಗೂ ಗ್ರಂಥನಿರ್ಮಿತಿಗೆ ಕಾರಣವಾಗಿದೆಯೆಂಬುದೇ ಅವರುಗಳ ಗೈಮೆಯ ಬಹು ದೊಡ್ಡ ಸಾಧನೆಯಾಗಿದೆ.

## ಸಂದರ್ಭ ಸೂಚಿ

೧. History of Mysore. Vol.I. Introduction, p.15.
೨. Asiatic Annual Regsiter, 1804
೩. ಕರ್ಣಾಟಕ ಕವಿ ಚರಿತ್ರೆ III ಪು. ೧೪೭–೪೮

೪. Journal of the Royal Asiatic Society, Vol.1 (1834): K.Venkatarama Swamy, p.141

೫. Madras Jounral of Literature and Science, Vol.7 (1838), p.195

೬. Dynasties of the Kanerese Districts of the Bombay Presidency, p.1.

೭. Epigraphia Carnatica, Vol. 11. Introduction, p.1.

೮. Indian Antiquary. Vo. 46 (1917), p. 17

೯. ಅದೇ, ಪು.೨೧೭

೧೦. ಅದೇ, ಪು. ೨೧೮

ಪ್ರಕರಣ ೬

# ಮುಮ್ಮಡಿ ಕೃಷ್ಣರಾಜರು

## ೬.೧ ಜೀವನ, ವ್ಯಕ್ತಿತ್ವ

ಹಳೆ ಹೊಸ ಯುಗಗಳ ಸಂಧಿಕಾಲದಲ್ಲಿ ಜನಿಸಿದ ಮುಮ್ಮಡಿ ಕೃಷ್ಣರಾಜರು ೭೫ ವರ್ಷ ಬದುಕಿದ್ದರು. ಮೈಸೂರಿನ ರಾಜರಲ್ಲಿ ಷಷ್ಟ್ಯಬ್ದಿಯನ್ನು ಕಂಡವರಿಲ್ಲ. ೬೮ ವರ್ಷ ಪಟ್ಟಾಭಿಷಿಕ್ತರಾಗಿದ್ದ ಮುಮ್ಮಡಿಯವರಷ್ಟು ದೀರ್ಘಕಾಲ ರಾಜ್ಯಭಾರ ಮಾಡಿದ ಯಾವ ರಾಜನೂ ಕರ್ನಾಟಕದ ಪ್ರಮುಖ ರಾಜಮನೆತನಗಳಲ್ಲಿ ಕಂಡು ಬಂದದ್ದಿಲ್ಲ. ಈ ದೀರ್ಘಾವಧಿಯ ಆಳಿಕೆಯಿಂದಲೂ ಸ್ವತಃ ಕರ್ತೃತ್ವಶಾಲಿಯಾದುದರಿಂದಲೂ ಮುಮ್ಮಡಿಯವರ ರಾಜ್ಯಭಾರದ ಅವಧಿಯು ನಾಡು, ನುಡಿಗಳ ಇತಿಹಾಸದಲ್ಲಿ ಮಹತ್ವದ ಗಡುವಾಗಿ ಪರಿಣಮಿಸಿದೆ.

ಅವರು ಪಟ್ಟವೇರಿದ್ದ ಕಾಲದಲ್ಲಿ (೧೭೯೯) ತಂದೆ, ತಾಯಿ ಇಬ್ಬರೂ ತೀರಿಹೋಗಿದ್ದರು. ಎಳವರೆಯದಲ್ಲಿಯೆ ಅವರಲ್ಲಿ ರಾಜ ಲಕ್ಷಣಗಳು ಸುವ್ಯಕ್ತವಾಗಿದ್ದುದನ್ನು ಆಗಿನ ಬ್ರಿಟಿಶ್ ಅಧಿಕಾರಿಗಳು ಸಹ ಉಲ್ಲೇಖಿಸಿದ್ದಾರೆ. ಪರಂಪರಾಗತ ರೀತಿಯಲ್ಲಿಯ ಶಿಕ್ಷಣವನ್ನು ಪಡೆದು, ಅವರು ವಯಸ್ಸಿಗೆ ಬಂದೊಡನೆಯೆ ರಾಜ್ಯ ಸೂತ್ರಗಳನ್ನು ವಹಿಸಿಕೊಂಡರು (೧೮೧೧). ಮುಂದಿನ ಎರಡು ದಶಕಗಳ ವೈಭವಯುತವಾದ ಆಳ್ವಿಕೆಯು ಅವರ ಔದಾರ್ಯದ ಹಾಗೂ ದಾನ ಧರ್ಮದ ನೂರಾರು ನಿದರ್ಶನಗಳಿಂದ ನಿಬಿಡವಾಗಿದೆ. ಗುಣಬಾಹುಲ್ಯವು ಸಹ ದೋಷವೆನಿಸುತ್ತದೆ. ಅತ್ಯಂತ ಮುಕ್ತ ರೀತಿಯಲ್ಲಿ ದಾನ ದತ್ತಿಗಳನ್ನು ಕೊಟ್ಟುದರ ಪರಿಣಾಮವಾಗಿ ವೆಚ್ಚದ ಬಾಬುಗಳು ಹೆಚ್ಚಿದುವು. ಕ್ರಿ.ಶ. ೧೮೩೧ರಲ್ಲಿ ಅವರು ಸಾರ್ವಭೌಮತ್ವಕ್ಕೆ ಎರವಾದುದಕ್ಕೆ ಇದೂ ಒಂದು ಕಾರಣವಾಯ್ತು. ಮುಂದೆ, ಅವರ ವೆಚ್ಚಕ್ಕೆಂದು ಸಂಸ್ಥಾನದ ಆದಾಯದ ಐದನೆಯ ಅಂಶವು ಮಾತ್ರ ದೊರೆಯುತ್ತಿದ್ದ ಕಾಲದಲ್ಲಿಯೂ ಅವರ ದಾನಧರ್ಮಗಳ ಕಾರ್ಯಕ್ಕೆ ಚ್ಯುತಿಯುಂಟಾಗಲಿಲ್ಲ. ಕೃಷ್ಣರಾಜರಿಂದ ಒಂದಿಲ್ಲೊಂದು ರೀತಿಯಲ್ಲಿ ಪ್ರಯೋಜನ ಪಡೆಯದೇ ಇದ್ದ ಒಂದಾದರೂ ಮನೆತನವು ಮೈಸೂರ ಸಂಸ್ಥಾನಗಳಲ್ಲಿ ಇದ್ದಿಲ್ಲವೇನೊ. 'ಕೃಷ್ಣರಾಜ ಭೂಪ; ಮನೆಯೆಲ್ಲ ದೀಪ' ಎಂಬ ಸಾಮಯಿಕ ಗಾದೆಮಾತು. ಆ

ಅರ್ಥದಲ್ಲಿ ಸಮಂಜಸವೇ ಆಗಿದ್ದಿತು. ಅವರ ಔದಾರ್ಯ ವೃತ್ತಿಗೆ ದೈವಭಕ್ತಿಯು ಬಹುಮಟ್ಟಿಗೆ ಪುಟಕೊಟ್ಟಿತು.

ಮುಮ್ಮಡಿ ಕೃಷ್ಣರಾಜರ ವಿದ್ಯಾವಿಷಯಕವಾದ ಕಳಕಳಿ, ಧರ್ಮಮಾರ್ಗ ಮತ್ತು ಔದಾರ್ಯ ವೃತ್ತಿಗಳ ಮೂಲಕ ಅವರ ಆಸ್ಥಾನವು ಪಂಡಿತರಿಂದ ತುಂಬಿಕೊಳ್ಳುವಂತಾಯ್ತು. ನೂರಾರು ಜನ ವಿದ್ವಾಂಸರು ತಮ್ಮ ವೈದಿಕ ಹಾಗೂ ಇತರ ಪರಂಪರಾಗತ ವಿದ್ಯೆಗಳನ್ನು ಪ್ರದರ್ಶಿಸಿ ಕೃಷ್ಣರಾಜರಿಂದ ಮನ್ನಣೆ, ಪ್ರೋತ್ಸಾಹಗಳನ್ನು ಪಡೆದಿದ್ದಾರೆ. ಇದು ಮೈಸೂರು ಸಂಸ್ಥಾನದವರಿಗೆ ಮಾತ್ರ ಸೀಮಿತವಾಗಿದ್ದಿಲ್ಲ. ಇತರ ಕನ್ನಡ ಪ್ರದೇಶಗಳು, ತಮಿಳು, ತೆಲುಗು, ಮಹಾರಾಷ್ಟ್ರ ಈ ಪ್ರದೇಶಗಳಿಂದಲೂ ವಿದ್ವಾಂಸರೂ ಕಲಾವಿದರೂ ಸಹ ಆಸ್ಥಾನಕ್ಕೆ ಬಂದು ಶಾಲುಜೋಡಿ, ಖಿಲ್ಲತ್ತು ಮುಂತಾದ ಬಹುಮಾನಗಳನ್ನು ಪಡೆದು ಹೋಗಿದ್ದಾರೆ. ಪೇಶ್ವೆಯರ ರಾಜ್ಯವು ನಿರ್ನಾಮವಾದ ಮೇಲೆ, ಅಲ್ಲಿಯ ಹಲವಾರು ವೈದಿಕ ಕುಟುಂಬಗಳನ್ನು ಮೈಸೂರಿನ ಆಸ್ಥಾನವೇ ಆಕರ್ಷಿಸಿತು. ಆರ್ಥಿಕ ಸಹಾಯದ ಕಾರಣದಿಂದಲಷ್ಟೇ ಪಂಡಿತರು ಇವರಲ್ಲಿಗೆ ಬರುತ್ತಿದ್ದರೆಂದಲ್ಲ. ಯಾರಲ್ಲಿ ನಿಜವಾದ ವಿದ್ವತ್ತು ಇದ್ದಿತೊ ಅವರನ್ನು ಆದರದಿಂದ ಕಂಡು ಅವರ ವಿದ್ಯೆಗೆ ಮನ್ನಣೆಯೀಯುತ್ತಿದ್ದರೆಂಬುದೇ ಮುಖ್ಯವಾದ ಆಕರ್ಷಣೆಯಾಗಿದ್ದಿತು.

ಮಹಾರಾಜರ ಮನ್ನಣೆಗೆ ಪಾತ್ರರಾಗಿದ್ದ ಪ್ರಾರಂಭಕಾಲದ ವಿದ್ವಾಂಸರಲ್ಲಿ ಶ್ರೀವೈಷ್ಣವ ಮತದ ಕರೂರು ಶ್ರೀನಿವಾಸಾಚಾರ್ಯರು ಪ್ರಮುಖರು. ಅವರ ಶಿಷ್ಯರಾಗಿದ್ದ ತಿರುಮಲೈ ರಂಗಾಚಾರ್ಯರು ಮುಮ್ಮಡಿಯವರಿಗೆ ಸಂಸ್ಕೃತದ ಅಭ್ಯಾಸ ಮಾಡಿಸಿದ್ದರು. ಚತುಃಶಾಸ್ತ್ರ ಪಂಡಿತರೆನಿಸಿ, ಪೇಶ್ವೆಯವರಿಂದ ಸನ್ಮಾನಿತರಾಗಿದ್ದ ತ್ರ್ಯಂಬಕಶಾಸ್ತ್ರಿಗಳನ್ನು ಕೃಷ್ಣರಾಜರು ತಾವಾಗಿ ಬರಮಾಡಿಕೊಂಡಿದ್ದರು. ಆಗ ಕರೂರು ಶ್ರೀನಿವಾಸಾಚಾರ್ಯರಿಗೂ, ತ್ರ್ಯಂಬಕಶಾಸ್ತ್ರಿಗಳಿಗೂ ವಾಕ್ಯಾರ್ಥ ನಡೆಯಿತು. ಪಂಡಿತರಲ್ಲಿ ಇಂಥ ವಾಕ್ಯಾರ್ಥ, ವಾಗ್ವಾದದ ಪ್ರಸಂಗಗಳು ಅನೇಕ ಸಲ ಮುಮ್ಮಡಿಯವರ ಆಸ್ಥಾನದಲ್ಲಿ ಜರುಗುತ್ತಿದ್ದುವು. ವಾದದಲ್ಲಿ ಸೋತು ಯಾರೊಬ್ಬರು ಅವಮಾನಿತರಾಗುವಂಥ ಸಂದರ್ಭವನ್ನು ತಾರದೇ ಕೃಷ್ಣರಾಜರು ಇಬ್ಬರು ಪಂಡಿತರಿಗೂ ಯಥೋಚಿತ ಉಡುಗೊರೆಗಳನ್ನು ಸಲ್ಲಿಸುತ್ತಿದ್ದರು.

ಕುಣಿಗಲ್ ರಾಮಶಾಸ್ತ್ರಿಗಳು ತ್ರ್ಯಂಬಕಶಾಸ್ತ್ರಿಗಳಲ್ಲಿ ವಿದ್ಯೆ ಕಲಿತು ತರ್ಕಶಾಸ್ತ್ರ ಮತ್ತು ವೇದಾಂತಗಳಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ್ದರು. ಕಾಶಿಯಲ್ಲಿ ಅನೇಕ ವರ್ಷ ವ್ಯಾಸಂಗ ಮಾಡಿ ಬಂದಿದ್ದ ದ್ವೈತ ಸಿದ್ಧಾಂತಿ ತಿಮ್ಮಣ್ಣಾಚಾರ್ಯರು ಅನ್ಯ ಮತಸ್ಥರ ವಾಕ್ಯಾರ್ಥ ಕಾಲದಲ್ಲಿ ತ್ರಯಸ್ಥರಾಗಿರುವಷ್ಟು ಗೌರವವನ್ನು ಹೊಂದಿದ್ದರು. ಒಂದೊಂದು ವಿದ್ಯೆಯಲ್ಲಿ ವಿಶೇಷ ಸಾಧನೆಯನ್ನು ಹೊಂದಿದ್ದ ವಿವಿಧ ವಿದ್ವಾಂಸರು ಆಸ್ಥಾನದಲ್ಲಿ ಇದ್ದರು. ವಿಷ್ಣುಪಾದಾಚಾರ್ಯರು ಖಗೋಲ, ಜ್ಯೋತಿಷಗಳಲ್ಲಿ

ಅಪ್ರತಿಮರಾಗಿದ್ದರೆ, ರಾಜೇಶ್ವರಶಾಸ್ತ್ರಿಗಳು ಮಂತ್ರಾಗಮದಲ್ಲಿ ಪ್ರವೀಣರಾಗಿದ್ದರು. ಸೋಸಲೆ ಗರಳಪುರಿಶಾಸ್ತ್ರಿ ಮತ್ತು ಕಾಶಿ ಶೇಷಶಾಸ್ತ್ರಿ ಇವರು ಅನುಕ್ರಮವಾಗಿ ಅಲಂಕಾರ, ವ್ಯಾಕರಣಗಳಲ್ಲಿ ವಿಖ್ಯಾತರೆನಿಸಿದ್ದರು. ಮಹದೇವಶಾಸ್ತ್ರಿಗಳು ಶಕ್ತಿವಿಶಿಷ್ಟಾದ್ವೈತದ ಪಂಡಿತರಾಗಿ ಆಸ್ಥಾನದಲ್ಲಿಯೇ ಇದ್ದರು.

'ಪರಕಾಲವಿಜಯ ಚಂಪೂ' ಕಾವ್ಯವನ್ನು ಬರೆದ ಪೆರಿಯ ಕೃಷ್ಣಮಾಚಾರ್ಯ, 'ಅನಿರುದ್ಧ ವಿಜಯ' ಎಂಬ ನಾಟಕವನ್ನು ಬರೆದ ಆನವಟ್ಟಿ ಶ್ರೀನಿವಾಸಾಚಾರ್ಯ ಮೊದಲಾದ ಸಂಸ್ಕೃತ ಗ್ರಂಥಕಾರರೂ ಕೃಷ್ಣರಾಜರ ಆಸ್ಥಾನದಲ್ಲಿ ಇದ್ದವರು. ರಾಮಶೇಷಶಾಸ್ತ್ರಿ ಆಶುಕವಿಯೆಂದು ಹೆಸರು ಪಡೆದಿದ್ದರು. ಹಲವಾರು ಸಂಸ್ಕೃತ ಗ್ರಂಥಗಳನ್ನು ರಚಿಸಿ ಸಾಹಿತ್ಯಾಚಾರ್ಯರೆಂಬ ಬಿರುದನ್ನು ಹೊಂದಿದ್ದ ಸಜ್ಜಯಂ ತಾತಾಚಾರ್ಯರು ದೊರೆಗಳ ನಿಕಟವರ್ತಿಯಾಗಿದ್ದರು. ಕನ್ನಡ ಕವಿ–ಲೇಖಕರಲ್ಲಿ ಯಾದವಕಬ್ಬಿಗ, ಕೆಂಪುನಾರಾಯಣ, ಶ್ರೀನಿವಾಸಕವಿ, ತಮ್ಮಯ್ಯ ಕವಿ, ಮದ್ದಗಿರಿ ನಂಜಪ್ಪ, ಅಳಿಯ ಲಿಂಗರಾಜ ಇವರೆಲ್ಲ ಕೃಷ್ಣರಾಜರ ಪೋಷಣೆಯನ್ನು ಪಡೆದವರೇ.

ಅಪ್ರತಿಮ ಕಾರ್ಯ ಸಾಮರ್ಥ್ಯವನ್ನು ಹೊಂದಿದ್ದ ಮುಮ್ಮಡಿ ಕೃಷ್ಣರಾಜರ ದಿನಚರಿಯು ವಿವಿಧ ಚಟುವಟಿಕೆಗಳಿಂದ ಕೂಡಿದ್ದಿತು. ಅವರ ಜ್ಞಾಪಕಶಕ್ತಿಯು ಅಸಾಧಾರಣವಿತ್ತೆಂದು ಹೇಳಲಾಗುತ್ತಿತ್ತು. ಜನರೊಡನೆಯ ನಡೆವಳಿಕೆಯಲ್ಲಿ ಹಾಸ್ಯಪ್ರವೃತ್ತಿಯು ತಲೆದೋರುತ್ತಿದ್ದಿತು. ಜೀವನದ ಅನೇಕ ಅಂಗಗಳಲ್ಲಿ, ವಿವಿಧ ಬಗೆಯ ಜನರಲ್ಲಿ ಅವರಿಗೆ ಹಾರ್ದಿಕ ಆಸಕ್ತಿ ಇದ್ದಿತು. ಪಂಡಿತರು, ಕಲಾವಿದರು ಇವರನ್ನು ಬರಮಾಡಿಕೊಂಡು ವಿದ್ವದ್ಗೋಷ್ಠಿ, ಸುಖಸಂಕಥಾವಿನೋದ, ಪುರಾಣವಾಚನ, ಕೀರ್ತನೆ, ಯಕ್ಷಗಾನ ಇವುಗಳಲ್ಲಿ ತೊಡಗಿರುತ್ತಿದ್ದರು. ಅರಮನೆಯ ಖಾಸಾ ಜನರು, ಅಧಿಕಾರಿಗಳು ಇವರೊಂದಿಗೆ ಚದುರಂಗ, ಗಂಜೀಫು ಮುಂತಾದ ಆಟಗಳಲ್ಲಿ ಭಾಗವಹಿಸುತ್ತಿದ್ದರು.

ಮುಮ್ಮಡಿ ಕೃಷ್ಣರಾಜರ ಸಮಗ್ರ ಜೀವನದ ಪರಿಶೀಲನೆಯಿಂದ ಅವರು ಪ್ರಾಚೀನ ಹಾಗೂ ನವೋದಯಗಳ ಸಂಧಿಕಾಲದ ಪ್ರತೀಕವಾಗಿದ್ದರೆನ್ನುವುದು ಸ್ಪಷ್ಟವಾಗುತ್ತದೆ. ಮಧ್ಯಯುಗೀನ ಸಂಸ್ಥಾನೀ ಪದ್ಧತಿಯ ರಾಜರಾಗಿದ್ದರೂ ಆ ಕಾಲದ ರೀತಿಯಲ್ಲಿ ಯುದ್ಧ ಮಾಡುವ ಪ್ರಸಂಗ ಬಾರದೇ, ಹೊಸಕಾಲಕ್ಕೆ ತಕ್ಕಂತೆ ರಾಜಕೀಯ ಹೋರಾಟದಲ್ಲಿ ನಿರತರಾಗಿದ್ದರು. ಪರಂಪರಾಗತ ವಿದ್ಯೆಯನ್ನೇ ಪೋಷಿಸುತ್ತಿದ್ದರೂ ಅವರಿಗೆ ಆಧುನಿಕ ವಿಷಯಗಳಲ್ಲಿ ಆಸಕ್ತಿ ಇದ್ದಿತು. ಪಾಶ್ಚಿಮಾತ್ಯ ಪದ್ಧತಿಯ ಔಷಧಾಲಯವನ್ನೂ ಅವರು ಸ್ಥಾಪಿಸಿದ್ದರು. ಭಾರತೀಯ ಜ್ಯೋತಿಷ್ಯಶಾಸ್ತ್ರವನ್ನು ಅರಿತುಕೊಂಡಿದ್ದರೂ ಪಾಶ್ಚಾತ್ಯರಿಂದ ಪಡೆದ ದೂರದರ್ಶಕ* ಯಂತ್ರದ ಸಹಾಯದಿಂದ ಗ್ರಹ, ನಕ್ಷತ್ರಗಳ ವೀಕ್ಷಣೆಯಲ್ಲಿ ತೊಡುಗುತ್ತಿದ್ದರು. ಮುದ್ರಾಯಂತ್ರವನ್ನು ಅರಮನೆಯಲ್ಲಿಯೆ ಸ್ಥಾಪಿಸಿ ಹಲವಾರು

* ಇದೇ ಬಗೆಯ ಯಂತ್ರವು ವಿಷ್ಣುಪಾದಾಚಾರ್ಯನೆಂಬ ಜ್ಯೋತಿಶಾಸ್ತ್ರಜ್ಞನ ಎರಡಂತಸ್ತಿನ ಮನೆಯ ಮಾಳಿಗೆಯ ಮೇಲೂ ಇದ್ದಿತಂತೆ.[೨]

ಗ್ರಂಥಗಳನ್ನು ಪ್ರಥಮವಾಗಿ ಹೊರತಂದರು. ವಿದೇಶೀಯರಿಗಿಂತ ಮುಂಚೆಯೇ ಅವರು ಬಣ್ಣದ ಮುದ್ರಣವನ್ನು ಕೈಗೊಂಡರು <೨೧೨>. ಹೀಗೆ ಅವರ ಜೀವನ ದೃಷ್ಟಿಯು ಪುರೋಗಾಮಿಯಾಗಿದ್ದಿತು. ಅವರು ಚಿತ್ರಕಲಾ ಪ್ರೇಮಿಗಳೂ ಆಗಿದ್ದರು. ಪುಸ್ತಕಗಳಲ್ಲಿ ನಕ್ಷಾಚಿತ್ರಗಳನ್ನು ಬಿಡಿಸಿ ಅವಕ್ಕೆ ಬಣ್ಣಕೊಡಲು ಕಲಾವಿದರನ್ನು ನಿರ್ಮಿಸಿದ್ದರು.

ವಿದ್ವಾಂಸ ಮಂಡಲಿಯನ್ನು ಪೋಷಿಸಿ ಅವರ ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದ ಮುಮ್ಮಡಿಯವರು ಸ್ವತಃ ಎಷ್ಟರಮಟ್ಟಿಗೆ ವಿದ್ವಾಂಸರಾಗಿದ್ದರು? ಬಾಲ್ಯದಲ್ಲಿ ಕ್ಷಾತ್ರ ವಿದ್ಯೆಯ ಜೊತೆಗೆ ಸಂಸ್ಕೃತ ವಿದ್ಯಾಭ್ಯಾಸದ ಏರ್ಪಾಡನ್ನು ಮಾಡಲಾಗಿದ್ದಿತು. ಪಂಡಿತರು ಸಂಸ್ಕೃತದ ಶ್ಲೋಕಗಳನ್ನು ಹೇಳುತ್ತಿದ್ದರೆ ಅದರ ಭಾವವನ್ನು ಗ್ರಹಿಸುವಷ್ಟು ಪರಿಣತಿಯನ್ನು ಅವರು ನಿಸ್ಸಂಶಯವಾಗಿ ಪಡೆದಿದ್ದರು. ಜೊತೆಗೆ ಆಗಿನ ರಾಜಕೀಯ ವ್ಯವಹಾರಕ್ಕೆ ಅಗತ್ಯವಿದ್ದ ಹಿಂದುಸ್ತಾನೀ, ಮರಾಠೀ ಭಾಷೆಗಳನ್ನೂ ಅವರು ಕಲಿತಿದ್ದರು.[೨] ಇಂಗ್ಲಿಷ್ ಭಾಷೆಯನ್ನು ಕಲಿಯುವುದರ ಅಗತ್ಯವನ್ನು ಲಾರ್ಡ್ ವೆಲೆಂಟೈನ್ ಬಿಂಬಿಸಿದುದರ ಪರಿಣಾಮವಾಗಿ ಅದನ್ನು ಕಲಿತರು– ಆದರೆ ಇಂಗ್ಲಿಷ್ ಪತ್ರಿಕೆಗಳನ್ನು ಮತ್ತು ಇನ್ನೊಬ್ಬರು ಮಾತನಾಡಿದುದನ್ನು ಅರ್ಥಮಾಡಿಕೊಳ್ಳುವ ಮಟ್ಟಿಗೆ ಮಾತ್ರ. ಪರ್ಶಿಯನ್ ಮತ್ತು ತೆಲುಗು ಭಾಷೆಗಳನ್ನೂ ಅವರು ತಕ್ಕಮಟ್ಟಿಗೆ ರೂಢಿಸಿಕೊಂಡಿದ್ದರು.[೩]

ಅವರ ಕನ್ನಡ ಪ್ರೌಢಿಮೆಯ ಬಗ್ಗೆ ಪ್ರತ್ಯೇಕ ಉಲ್ಲೇಖಗಳಾಗಲೀ, ನೇರವಾದ ನಿದರ್ಶನಗಳಾಗಲೀ ದೊರೆಯುವುದಿಲ್ಲ. ಅನೇಕ ಟೀಕಾಗದ್ಯ ಮತ್ತು ಕಾವ್ಯಗಳ ರಚನೆಯ ಪ್ರಸ್ತಾಪವೊಂದೇ ಇದಕ್ಕೆ ಪುರಾವೆಯಾಗಿದೆ. ಬಹುಶಃ ಕನ್ನಡವು ಮಾತೃಭಾಷೆಯೇ ಆದುದರಿಂದ ಅದರ ಬಗ್ಗೆ ವಿಶೇಷಿಸಿ ಹೇಳುವ ಪ್ರಮೇಯವು ಬಂದಿರಲಿಕ್ಕೂ ಇಲ್ಲ. ಪರಂಪರಾಗತ ವಿದ್ಯೆಗಳಲ್ಲಿ ಗಣಿತ, ಜ್ಯೋತಿಷ್ಯಗಳಲ್ಲಿ ಅವರಿಗೆ ವಿಶೇಷ ಒಲವಿದ್ದಿತು.* ಅವರ ಇನ್ನೊಂದು ಮೆಚ್ಚಿಕೆಯ ವಿಷಯವೆಂದರೆ ಆಗಮಶಾಸ್ತ್ರ.[೪] ಇಂತು ಮುಮ್ಮಡಿಯವರು ವೈದಿಕ ಪರಂಪರೆಯ ಕಾವ್ಯ, ಶಾಸ್ತ್ರಗಳಲ್ಲಿ ತಕ್ಕಷ್ಟು ಪರಿಣತಿಯನ್ನು ಹೊಂದಿದ್ದರು ಮತ್ತು ಆ ಕುರಿತ ವಿದ್ವತ್‌ಗೋಷ್ಠಿಗಳಲ್ಲಿ ನಡೆಯುವ ಚರ್ಚೆಯ ರಸಗ್ರಹಣವನ್ನು ಮಾಡಬಲ್ಲವರಾಗಿದ್ದರು. ಹೀಗೆ ಗ್ರಂಥ ರಚನೆಗೆ ಹಿನ್ನೆಲೆಯಾಗಿ ಬೇಕಾದ ಕಾವ್ಯವಿದ್ಯಾಪರಿಪ್ರಚಯ ಅವರಿಗಿದ್ದಿತು. ಆದರೂ ಮುಮ್ಮಡಿಯವರೇ ಸ್ವತಃ ಎಷ್ಟರ ಮಟ್ಟಿಗೆ ಕೃತಿರಚನೆ ಮಾಡಿದ್ದಾರೆನ್ನುವುದು ಅನೇಕ ವಿದ್ವಾಂಸರಿಗೆ ಸಮಸ್ಯೆಯಾಗಿದೆ. ಅದನ್ನು ಕೂಲಂಕಷವಾಗಿ ಪರಿಶೀಲಿಸುವುದು ಅವಶ್ಯವಾಗಿದೆ.

---

* ಕುಣಿಗಲ್ ರಾಮಶಾಸ್ತ್ರಿಗಳ ಮೂರನೆಯ ಮಗನ ಜಾತಕವನ್ನು ನೋಡಿ ಅವನು ಪೀಠಾಧಿಪತಿಯಾಗುವನೆಂದು ಹೇಳಿದುದನ್ನು ಸ್ಮರಿಸಿಕೊಳ್ಳಬಹುದು.

## ೬.೨ ಗ್ರಂಥ ಕರ್ತೃತ್ವ

### ೬.೨.೧ ರಾಜ ಮತ್ತು ಕವಿಗಳ ಸಹಯೋಗ

ಯಾವುದೊಂದು ಕೃತಿಯು ರಾಜನಿಂದ ರಚಿತವಾದುದೆಂದು ಹೇಳಿದರೆ. ಹಿಂದಿನ ಕಾಲದಲ್ಲಿ ಆ ಕುರಿತು ಯಾರೂ ಸಂದೇಹ ತಾಳುತ್ತಿರಲಿಲ್ಲ. ಪಾಶ್ಚಾತ್ಯರ ಚಿಕಿತ್ಸಕ ಮನೋವೃತ್ತಿಯ ಪ್ರಭಾವದಿಂದಲೋ ಏನೋ, ರಾಜಾಂಕಿತ ಕೃತಿಯೆಂದೊಡನೆ ಅದು ಅವನ ಆಸ್ಥಾನದಲ್ಲಿಯ ಒಬ್ಬರು ಬರೆದದ್ದು ಎಂಬುದಾಗಿ ಮೊದಲಿಗೆಯೆ ಸಂದೇಹ ಮೂಡುತ್ತದೆ. 'ರತ್ನಾವಳಿ' ಖ್ಯಾತಿಯ ಹರ್ಷವರ್ಧನನು (೭ನೇ ಶತಮಾನ) ಸಮ್ರಾಟನೂ ಅಹುದು; ನಾಟಕಕಾರನೂ ಹೌದು. ಆದರೆ ಅವನ ಕೃತಿಗಳನ್ನು ಬಾಣ, ಇಲ್ಲವೆ ಮತ್ತೊಬ್ಬ ಆಸ್ಥಾನಿಕನು ಬರೆದಿರಬಹುದೆಂಬ ಶಂಕೆ ಇದೆ. ಮಾಳವ ದೇಶದ ಭೋಜರಾಜನಂತೂ (೧೧ನೇ ಶತಮಾನ) ವಿದ್ವತ್ಪೋಷಣೆಯಲ್ಲಿ ಹಿರಿದಾದ ಸ್ಥಾನವನ್ನು ಗಳಿಸಿದ್ದಾನೆ. ಅವನ ಆಸ್ಥಾನವು ಅನೇಕ ಪಂಡಿತರು, ಕವಿಗಳಿಂದ ತುಂಬಿದ್ದಿತು. ಅವನ ಸೇವಕ ಸೇವಕಿಯರು ಕೂಡ ಸಮಸ್ಯಾಪೂರ್ತಿಯ ಪದ್ಯಗಳನ್ನು ರಚಿಸುವ ಆಶುಕವಿಗಳಾಗಿದ್ದರೆಂಬ ದಂತಕಥೆಗಳಿವೆ. ಸ್ವತಃ ರಾಜನು ೮೪ ಕೃತಿಗಳನ್ನು (೧೦೪?) ರಚಿಸಿದ್ದನೆಂಬ ಪ್ರತೀತಿ ಇದ್ದು ಅವನ ಗ್ರಂಥ ಸಮುದಾಯವು ಜ್ಯೋತಿಷ್ಯ, ಅಲಂಕಾರ, ಕಥಗಳು ಇವೆಲ್ಲವನ್ನೂ ಒಳಗೊಂಡಿದೆ. ಯುದ್ಧ, ಮತ್ತಿತರ ರಾಜಕಾರಣಗಳಲ್ಲಿ ನಿರತನಾಗಿದ್ದ ರಾಜನು, ಅದೂ ಒಬ್ಬನೇ ವ್ಯಕ್ತಿಯು, ಹೀಗೆ ಭಿನ್ನ ಭಿನ್ನ ವಿಷಯಗಳ ಮೇಲೆ ಗ್ರಂಥರಚನೆ ಮಾಡಿದುದು ಸಾಧ್ಯವೇ ಎಂಬ ಶಂಕೆಯನ್ನು ಯಥಾಪ್ರಕಾರ ಎತ್ತಲಾಯಿತು.[೬] ಕನ್ನಡದ ಆದಿಮ ಕೃತಿಯೆನಿಸಿದ ಕವಿರಾಜಮಾರ್ಗದ ಕರ್ತೃತ್ವದ ವಿಚಾರದಲ್ಲಿಯೆ ಸಂದೇಹ ಮೂಡಿದೆ. ಮೈಸೂರಿನ ಅರಸರಲ್ಲಿ ಒಬ್ಬನಾದ ಚಿಕ್ಕದೇವರಾನ ಹೆಸರಿನಲ್ಲಿರುವ ಗ್ರಂಥಗಳನ್ನು ಮಂತ್ರಿ ತಿರುಮಲೆಯಾರ್ಯನೊ, ಚಿಕ್ಕುಪಾಧ್ಯಾಯನೊ ರಚಿಸಿರಬೇಕೆಂಬ ಊಹೆಗೆ ನಿಚ್ಚಳವಾದ ಅವಕಾಶವಿದೆ. ಮುಮ್ಮಡಿ ಕೃಷ್ಣರಾಜರ ಗ್ರಂಥಕರ್ತೃತ್ವಕ್ಕೂ ಇದೇ ಬಗೆಯ ಮೇಘಚ್ಛಾಯೆಯು ಆವರಿಸಿದೆ.

ರಾಜನಿದ್ದವನಿಗೆ ಕೃತಿರಚನೆಯ ಸಾಮರ್ಥ್ಯ ಇದ್ದಿಲ್ಲ ಎಂಬ ಗ್ರಹಿಕೆಯು ಆಪಾತತಃ ಸರಿಯಲ್ಲ. ಉಚ್ಚಕುಲಪ್ರಸೂತನೂ ಉತ್ತಮ ಸಂಸ್ಕಾರವಂತನೂ ಆದ ರಾಜನು ವಿವಿಧ ಕಾವ್ಯ, ಶಾಸ್ತ್ರಗಳ ಶಿಕ್ಷಣವನ್ನೂ ಸಾಮಾನ್ಯವಾಗಿ ಪಡೆದೇ ಇರುತ್ತಿದ್ದನು. ಕೆಲವು ವಿಷಯಗಳಲ್ಲಿ ಪರಿಣತಿಯನ್ನೂ ಹೊಂದಿರುತ್ತಿದ್ದನು. ಪ್ರತಿಭಾನ್ವಿತವಾದ ಕಾವ್ಯರಚನೆಯು ಅವನಿಂದ ನಡೆಯುತ್ತಿದ್ದುದು ಅಸಂಭವವೇನಲ್ಲ. ಆದ ಕಾರಣ ಭೂಪತಿಯು ಕವಿಯೂ ಆಗಿದ್ದ ಪ್ರಸಂಗಗಳು ಅಪೂರ್ವವೆಂದೇನೂ ಅಲ್ಲ.

ಆದರೆ ರಾಜನ ಕರ್ತೃತ್ವ ವಿಚಾರದಲ್ಲಿ ಸಂದೇಹ ಮೂಡುವುದಕ್ಕೆ ಮುಖ್ಯ ಕಾರಣ ಅವನ ಆಸ್ಥಾನದ ಕವಿ ಮತ್ತು ವಿದ್ವಾಂಸರು. ರಾಜಮಹಾರಾಜರು ಕವಿಗಳಿಗೆ

ಆಶ್ರಯವಿತ್ತು ಪೋಷಿಸುವ ಪರಂಪರೆಯು ಬಹು ಪುರಾತನವಾದದ್ದು. ಗ್ರೀಸ್, ಇಟಲಿ, ಬ್ರಿಟನ್ ಮೊದಲಾದ ದೇಶಗಳ ಪ್ರಾಚೀನ ಇತಿಹಾಸದಲ್ಲಿಯೂ ಇದಕ್ಕೆ ನಿದರ್ಶನಗಳಿವೆ. ಭಾರತೀಯ ಅರಸರು ಹಲವಾರು ಬಗೆಯಲ್ಲಿ ಕವಿಗಳಿಗೆ ಪೋಷಣೆ ನೀಡುತ್ತಿದ್ದರು. ಅವರಿಗೆ ವರ್ಷಾಶನವನ್ನು ಇಲ್ಲವೆ ಗ್ರಾಮ, ಜಮೀನುಗಳನ್ನು ದತ್ತಿಯಾಗಿ ಕೊಡುತ್ತಿದ್ದರು. ತಮ್ಮ ವರ್ಷವರ್ಧಂತಿ, ತುಲಾಭಾರ, ಪಟ್ಟ ಬಂಧೋತ್ಸವ ಮುಂತಾದ ಸಂದರ್ಭಗಳಲ್ಲಿ ಕವಿ, ವಿದ್ವಾಂಸರಿಗೆ ವಿಶೇಷ ಸನ್ಮಾನಗಳನ್ನು ನೀಡಲಾಗುತ್ತಿತ್ತು. ಅಂಥ ವ್ಯಕ್ತಿ ಮಹಾಮೇಧಾವಿಯು ಪ್ರತಿಭಾನ್ವಿತನೂ ಆಗಿದ್ದರೆ ಅವರು ತಮ್ಮ ಆಸ್ಥಾನದಲ್ಲಿ ಇರುವುದೇ ಗೌರವಾಸ್ಪದವೆಂದು ಭಾವಿಸಲಾಗುತ್ತಿತ್ತು.

ಈ ರೀತಿಯ ಆಶ್ರಯವನ್ನು ಹೊಂದಿದವರು ದೊರೆಗೆ ಕೃತಜ್ಞರಾಗಿರುತ್ತಿದ್ದದ್ದು ಸಾಮಾನ್ಯವಾದುದು.* ಇತ್ತ ರಾಜನಿಂದ ಪಡೆದ ಪೋಷಣೆಗೆ ಪ್ರತಿಯಾಗಿ ಅವರು ಸಹಜದಲ್ಲಿ ಅರ್ಪಿಸಬಹುದಾಗಿದ್ದ ಅಂಶಗಳೆಂದರೆ ತಮ್ಮ ಕವಿತ್ವ, ಪಾಂಡಿತ್ಯಗಳೇ. ಆದ್ದರಿಂದ ಕವಿಗಳು, ವಿದ್ವಾಂಸರು ಗ್ರಂಥ ರಚಿಸಿ, ಪೋಷಕ ದೊರೆಗೆ ಅಂಕಿತ ಮಾಡುತ್ತಿದ್ದ ಪರಂಪರೆಯು ನಮ್ಮ ದೇಶದಲ್ಲಿ ಬಹುಕಾಲದಿಂದ ನಡೆದುಕೊಂಡು ಬಂದಿತು. ಅಲ್ಲದೆ ತಾವು ರಚಿಸಿದ ಕೃತಿಯು ತಮ್ಮ ಹೆಸರಿನಲ್ಲಿಯೇ ಬೆಳಗಬೇಕೆಂಬ ಪ್ರಜ್ಞೆಯು ಹಿಂದಣ ಕವಿಗಳಲ್ಲಿ ಅನೇಕರಿಗೆ ಇರಲಿಲ್ಲ. ತಮ್ಮ ಕೃತಿಗೆ ಸ್ವಂತದ ಮುದ್ರೆಯನ್ನೊತ್ತುವ ವಿಚಾರದಲ್ಲಿ ಪ್ರಾಚೀನ ಕವಿಗಳು ಒಟ್ಟಿನಲ್ಲಿ ಆಸಕ್ತರಲ್ಲ.

ರಾಜ ಮತ್ತು ಆಶ್ರಿತ ಕವಿಯ ಸಹಯೋಗದಲ್ಲಿ (Collaboration) ಹಲವು ಪರಿಗಳಿವೆ. ಆಸ್ಥಾನ ಪಂಡಿತನ ಉತ್ಕೃಷ್ಟ ಕೃತಿಯನ್ನು ಬೆಲೆ ತೆತ್ತು ಪಡೆದು ತನ್ನ ಹೆಸರಿನಲ್ಲಿ ಪ್ರಚುರ ಪಡಿಸುವುದು ಒಂದು ಬಗೆ. ತನ್ನ ಹೆಸರು ಶಾಶ್ವತವಾಗಿ ಉಳಿಯುವ ದೃಷ್ಟಿ ಇಲ್ಲಿದೆ. ಇದರ ಇನ್ನೊಂದು ತುದಿಯೆಂದರೆ, ಕವಿಯೊಬ್ಬ ತನ್ನಲ್ಲಿದ್ದ ಅಲ್ಪ ವಿದ್ಯೆಯನ್ನು ಲೇಖನ ರೂಪಕ್ಕಿಳಿಸಿ, ದರ್ಬಾರದ ಭಕ್ಷಿ ಅಥವಾ ಬೇರೆಯವರ ಮುಖಾಂತರ ತಾನಾಗಿ ರಾಜನಿಗೆ ಅರ್ಪಿಸಿ ಸಂಭಾವನೆಯ ಮೊತ್ತವನ್ನು ಪಡೆಯುವ ಕ್ರಮವೂ ಇದ್ದಿತು. ಇವೆರಡೂ ಮೆಚ್ಚತಕ್ಕ ಅಂಶಗಳೇನಲ್ಲ.

ಆದರೆ ಈ ರಾಜ – ಕವಿ ಸಂಬಂಧದಲ್ಲಿ ಮಧ್ಯಮಾರ್ಗವೊಂದಿದೆ. ಕವಿಯು ರಾಜನನ್ನು ತನ್ನ ಕೃತಿಯಲ್ಲಿ ಉದಾರವಾಗಿ ಹೊಗಳುವ ಇಲ್ಲವೆ ತನ್ನ ಕೃತಿಯನ್ನು ಬಹಿರಂಗವಾಗಿ ಅವನಿಗೆ ಸಮರ್ಪಿಸುವ ಕ್ರಮವದು. ರಾಜಾಶ್ರಯದ ಋಣವೇ ಇಂಥ ಮನೋಭಾವಕ್ಕೆ ಯಾವಾಗಲೂ ಪ್ರೇರಕವೆಂದೇನೂ ಅಲ್ಲ. ಶೌರ್ಯ, ಸದ್ಗುಣಾದಿಗಳಿಂದ ಕೂಡಿದ್ದ ರಾಜನ ಮಹೋನ್ನತ ವ್ಯಕ್ತಿತ್ವಕ್ಕೆ ಮನಸೋತು ತಮ್ಮ ಕೃತಿಯನ್ನು ಅವನಿಗೆ

---

* ಕೆಲವರು ಅತಿಯಾದ ದೀನಭಾವವನ್ನು ತಾಳುತ್ತಿದ್ದರೆ, ಇನ್ನು ಹಲವರು ತಮ್ಮ ಸ್ವಂತದ ವ್ಯಕ್ತಿತ್ವವನ್ನು ಕಾಯ್ದುಕೊಂಡವರೂ ಇದ್ದರು.

ಸಾದರವಾಗಿ ಅರ್ಪಿಸುತ್ತಿದ್ದ ಪ್ರಮೇಯವೂ ಇದ್ದಿತು. ಅರಿಕೇಸರಿಯನ್ನು ಕಥಾನಾಯಕನಾದ ಅರ್ಜುನನೊಂದಿಗೆ ಏಕೀಭಾವದಿಂದ ಕಾಣುವಷ್ಟು ಪಂಪನು ತನ್ನ ದೊರೆಯ ವಿಷಯದಲ್ಲಿ ಗುಣಲಬ್ಧನಾಗಿದ್ದನು.

ಇನ್ನೊಂದು ವಿಶಿಷ್ಟ ಸಾಹಚರ್ಯವು ಗಣನೀಯವಾಗಿದೆ. ಸ್ವಯಂ ವಿದ್ಯಾವಂತನೂ ಹಲವು ವಿಷಯಗಳಲ್ಲಿ ನಿಷ್ಣಾತನೂ ಆಗಿ ರಾಜನು ವಿದ್ವದ್ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದಾಗ, ಅವನ ವಿಚಾರಗಳನ್ನು ವಿಸ್ತರಿಸಿ ಕೃತಿ ರಚನೆ ಮಾಡಿರಬಹುದಾದ ಸಂದರ್ಭಗಳವು. ರಾಜನು ಸ್ವತಃ ಲೆಕ್ಕಣಿಕೆಯನ್ನು ಹಿಡಿಯದೆ ಒಬ್ಬ ಆಸ್ಥಾನ ವಿದ್ವಾಂಸ/ಕವಿಯ ಮೂಲಕ ತನ್ನ ಗ್ರಂಥರಚನಾ ಶಕ್ತಿಯನ್ನು ವ್ಯಕ್ತಗೊಳಿಸುವುದು ಸಹಜವೇ ಎಂದು ಭಾವಿಸತಕ್ಕುದು. ಹಾಗೆ ಮಾಡುವಾಗ ದೊರೆಯ 'ಲೇಖಕ'ನಾದವನು ತನ್ನ ಮಾತುಗಳನ್ನೂ ಸೇರಿಸಿ, ಮೂಲಭಾವವನ್ನು ವಿಸ್ತರಿಸಿ ಒಟ್ಟಿನಲ್ಲಿ ಅದಕ್ಕೆ 'ಅನುಮತ'ವಾಗುವಂತೆ ಬರೆಯುವ ಕ್ರಮವೂ ಇದ್ದಂತೆ ತೋರುತ್ತದೆ.*

ಕವಿಗಳ ವಿಚಾರ ಸ್ವಂತಿಕೆಯನ್ನು ಹರಣ ಮಾಡುವ ರಾಜಾಶ್ರಯವು ಸಾಹಿತ್ಯದ ಅಭಿವೃದ್ಧಿಗೆ ಒಂದು ತೊಡಕು ಎಂಬುದು ಆಧುನಿಕ ಯುಗದ ನಿಲುಮೆಯಾಗಿದೆ. ಸ್ಥೂಲವಾಗಿ ಮಾತ್ರ ಇದು ನಿಜ. ಹಳಗನ್ನಡ ಸಾಹಿತ್ಯಕ್ಕೆ ಅನ್ವಯಿಸಿ ಹೇಳುವುದಾದರೆ, ರಾಜಾಶ್ರಯದಿಂದ ಒಟ್ಟಿನಲ್ಲಿ ಉಪಕಾರವೇ ಆಯಿತೆನ್ನಬಹುದು. ಅನೇಕ ಪ್ರಮುಖ ಕವಿಗಳು ರಾಜಾಶ್ರಯವನ್ನೊಂದಿಯೇ ಶ್ರೇಷ್ಠ ಕೃತಿಗಳನ್ನು ರಚಿಸಿದ್ದಾರೆ. ಇತ್ತ ಕೆಲವು ಕವಿಗಳು ಬರಿ ಲೆಕ್ಕಣಿಗರಾಗಿರದೇ ಚಮೂಪತಿಗಳಾಗಿಯೂ ಮೆರೆದಿದ್ದಾರೆ (ಪಂಪ, ಜನ್ನ ಇ.)

ರಾಜಾಶ್ರಯಿಗಳು ಹೆಚ್ಚಾಗಿ ಕಂಡುಬಂದುದು ವಿಜಯನಗರದ ಕೃಷ್ಣದೇವರಾಯನ ಕಾಲದಿಂದ ಈಚೆಗೆ. ಅವನ ವೈಭವಪೂರ್ಣ 'ಆಡಳಿತಾವಧಿಯಲ್ಲಿ ಕನ್ನಡ' ತೆಲುಗು ಮತ್ತು ಸಂಸ್ಕೃತ ಭಾಷಾ 'ದಿಗ್ಗಜ'ಗಳೂ ಹರಿದಾಸ, ಶಿವಶರಣ, ಸ್ವಾಮಿಗಳವರೂ ಆಗಿ ಹೋದರು. ಅವರಲ್ಲಿ ಅನೇಕರು ಅವನಿಂದ ಸನ್ಮಾನಿತರಾಗಿದ್ದರು. ಅನಂತರದ ದೊಡ್ಡ ರಾಜಾಶ್ರಯವೆಂದರೆ ಚಿಕ್ಕದೇವರಾಜನದು. ಸ್ವತಃ ಅವನ ಹೆಸರಿನಲ್ಲಿ ಕೆಲವು ಗ್ರಂಥಗಳಿವೆಯಲ್ಲದೆ, ಅವನ ಆಸ್ಥಾನದಲ್ಲಿದ್ದ ತಿರುಮಲೆಯಾರ್ಯ, ಚಿಕ್ಕುಪಾಧ್ಯಾಯ, ಸಿಂಗರಾರ್ಯ, ಹೊನ್ನಮ್ಮ ಮೊದಲಾದವರು ರಾಜನ ಪ್ರೇರಣೆಯಿಂದಲೇ ಕಾವ್ಯಗಳನ್ನು ರಚಿಸಿದ್ದಾರೆ.

ಮುಮ್ಮಡಿ ಕೃಷ್ಣರಾಜರ ವಿದ್ವತ್ಪೋಷಣೆ ಮತ್ತು ಅವರ ಕಾಲದ ಗ್ರಂಥ ರಚನೆಯು

* ನೃಪತುಂಗಾನುಮತಮಪ್ಪ ಕವಿರಾಜಮಾರ್ಗವು ಈ ಬಗೆಯ ಗ್ರಂಥವಿದ್ದಿರಬೇಕು.

ಭೋಜರಾಜ, ಕೃಷ್ಣದೇವರಾಯ ಮತ್ತು ಚಿಕ್ಕದೇವರಾಯ–ಇವರ ಕಾಲವನ್ನೂ ಕಾರ್ಯವನ್ನೂ ನೆನಪಿಗೆ ತರುವಂತಿದ್ದವು. ಭೋಜರಾಜನಿಗಿದ್ದಂತೆ, ಮುಮ್ಮಡಿಯವರ ಹೆಸರಿನ ಗ್ರಂಥ ಸಂಖ್ಯೆಯೂ ವಿಪುಲವಾಗಿದೆ. ಕೃಷ್ಣದೇವರಾಯನ ಪರಿಸರದಂತೆ ಇವರ ಆಸ್ಥಾನವೂ ವಿವಿಧ ಮತಗಳ ಕವಿ, ವಿದ್ವಾಂಸ, ಯತಿವರರಿಂದ ಕೂಡಿದ್ದಿತು. ತಮ್ಮ ಪೂರ್ವಜನಾದ ಚಿಕ್ಕದೇವರಾಜನ ಹಾಗೆ ಕೃಷ್ಣರಾಜರು, 'ಎಲ್ಲರೂ ಮಱುವಂತೆ ಕನ್ನಡವಾತಿನೊಳ್ ಮೆಲ್ನುಡಿಗಳಿಂದೆ ಅಖಿಲ ತತ್ವಾರ್ಥಂಗಳಂ ಸಂಗತಿಗೊಳಿಸಬೇಕು' ಎಂಬ ಧೋರಣೆಯನ್ನು ತಳೆದು, ಅನೇಕ ಪುರಾಣಗಳನ್ನೂ ಇತರ ಪ್ರಾಚೀನ ಕೃತಿಗಳನ್ನೂ ಕನ್ನಡ ಗದ್ಯದಲ್ಲಿ ಹರಹುವುದಕ್ಕೆ ಕಾರಣರಾದರು.

## ೬.೨.೨ ಮುಮ್ಮಡಿಯವರ ಗ್ರಂಥಕರ್ತೃತ್ವದ ಆಕರಗಳು

ಈ ಹಿನ್ನೆಲೆಯನ್ನಿಟ್ಟುಕೊಂಡು ಮುಮ್ಮಡಿ ಕೃಷ್ಣರಾಜರ ಗ್ರಂಥ ಕರ್ತೃತ್ವವನ್ನು ನಿಷ್ಕರ್ಷಿಸೋಣ. ಅದಕ್ಕೆ ಪೂರ್ವಭಾವಿಯಾಗಿ, ಅವರ ಗ್ರಂಥಗಳ ಪ್ರಸ್ತಾಪವಿರುವ ಆಕರಗಳನ್ನು, ಅವುಗಳ ಕಾಲಕ್ರಮದಲ್ಲಿ ಪರಿಶೀಲಿಸೋಣ :

೧. ಮೊತ್ತಮೊದಲಿನ ಆಕರವೆಂದರೆ ಕೃಷ್ಣರಾಜರು ಮೈಸೂರಿನ ಪ್ರಸನ್ನ ಕೃಷ್ಣಸ್ವಾಮಿಯ ದೇವಸ್ಥಾನಕ್ಕೆ ಇತ್ತ ದತ್ತಿಯ ಶಾಸನ (ಮೈಸೂರು ಶಾಸನ ನಂ. ೬೧, ಕ್ರಿ.ಶ. ೧೮೨೭ ರೈಸ್ ಆವೃತ್ತಿ). ಅದರಲ್ಲಿ ದೊರೆಗಳ ಜೀವನ ಕಾರ್ಯವನ್ನು 'ಉಪಕಾರರತ್ನ', 'ಕೀರ್ತಿರತ್ನ' ಇತ್ಯಾದಿ ನವರತ್ನಗಳೆಂದು ಉಲ್ಲೇಖಿಸಿದ್ದು, ಅವುಗಳಲ್ಲಿ ಒಂಬತ್ತನೆಯದು 'ಸಾರಸ್ವತ ರತ್ನ' :

"ಶ್ರೀ ಭಾಗವತ ಆಧ್ಯಾತ್ಮ ರಾಮಾಯಣ ಮೊದಲಾದ ಪುರಾಣೇತಿಹಾಸಗಳಿಗೆ ಕರ್ಣಾಟಕ ಭಾಷಾ ವ್ಯಾಖ್ಯಾನಗಳು ಸೌಗಂಧಿಕಾ ಪರಿಣಯದ ಕಾವ್ಯ ಪ್ರಬಂಧಗಳೆಂಬ ಸಾರಸ್ವತ ರತ್ನ"[೭]

೨. ಕ್ರಿ. ಶ. ೧೮೪೦–೫೦ ರ ಸುಮಾರಿಗೆ 'ರಾಜವಂಶ ರತ್ನಪ್ರಭೆ' ಎಂಬ ಕಾವ್ಯವನ್ನು ರಚಿಸಿದ ತಮ್ಮಯ ಕವಿಯು ಮೇಲಿನ ನವರತ್ನಗಳ ಮೂಲಕ ಅವೇ ಸಾಹಿತ್ಯ ಕೃತಿಗಳನ್ನು ಉಲ್ಲೇಖಿಸಿದ್ದಾನೆ. ಜೊತೆಗೆ 'ತತ್ತ್ವನಾಮ' (ತತ್ತ್ವನಿಧಿ) ಎಂಬ ಕೃತಿಯನ್ನು ಹೆಚ್ಚಿಗೆ ಸೇರಿಸಿದ್ದಾನೆ (ಪದ್ಯ ೨೫–೨೭)[೮]

೩. ಮುಮ್ಮಡಿ ಕೃಷ್ಣರಾಜರು ಪಟ್ಟಾಭಿಷಿಕ್ತರಾಗಿ ೬೦ ವರ್ಷಗಳು ಕಳೆದ ಸಂದರ್ಭದಲ್ಲಿ (೧೮೫೯) 'ಸಂತಾನಾಂಬುಜ'ವೆಂಬ ಶಾಸನವನ್ನು ಸಿದ್ಧಪಡಿಸಲಾಯಿತು. ಅದರ ವಿವಿಧ 'ದಳ'ಗಳಲ್ಲಿ ಮೈಸೂರು ಒಡೆಯರ ವಂಶಾವಳಿಯನ್ನು ಕೆತ್ತಲಾಗಿದ್ದು ಬಲಭಾಗದಲ್ಲಿ

(೨೫–೫೩) ಮುಮ್ಮಡಿಯವರ ಗ್ರಂಥರಚನೆಯ ಪ್ರಸ್ತಾಪವಿದೆ.* ಈ ಶಾಸನವನ್ನು ಮೈಸೂರಿನ ಜಗನ್ಮೋಹನ ಬಂಗಲೆಯಲ್ಲಿ ಇಡಲಾಗಿದೆ.

೪. ದೇವಲಾಪುರದ ನಂಜುಂಡನೆಂಬ ಕವಿ ತನ್ನ ‘ಕೃಷ್ಣರಾಜಭಕ್ತಿಸಾರ’ದಲ್ಲಿ (೧೮೬೨) ಕೃಷ್ಣರಾಜರ ಗ್ರಂಥಗಳನ್ನು ಉಲ್ಲೇಖಿಸಿದ್ದಾನೆ (ಪದ್ಯ ೪೨–೪೪).[೧೦] ಇದರಲ್ಲಿ ಮೇಲೆ ಹೇಳಿದ ಆಕರಗಳಲ್ಲಿ ಬಾರದಿದ್ದ ಹೊಸ ಕೃತಿಯ ಪ್ರಸ್ತಾಪವೇನಿಲ್ಲ. ಆದರೆ ‘ವಿತತವಾದ ಶಿಲಾದಿಯಂತ್ರಾಂಕಿತವ ಗೈಸಿದ ರಮ್ಯರೂಪನೆ’ ಎಂಬ ಅವನ ಹೇಳಿಕೆಯಲ್ಲಿ ಮುಮ್ಮಡಿಯವರ ಶಿಲಾಮುದ್ರಣದ ಪ್ರಸ್ತಾಪವಿದೆ.

ಇವು ನಾಲ್ಕು ಸಮಕಾಲೀನ ದಾಖಲೆಗಳು. ಹೆಚ್ಚು ವಿಶ್ವಾಸಾರ್ಹವಾದವುಗಳು. ಅದರಲ್ಲಿಯೂ ‘ಸಂತಾನಾಂಬುಜ’ವು ಮಹತ್ವದ ದಾಖಲೆಯಾಗಿದ್ದು, ಅದರಲ್ಲಿ ೧೪ ವಿವಿಧ ಕೃತಿಗಳು ಹಾಗೂ ಪುರಾಣ ಟೀಕಾಗ್ರಂಥದ ರಚನೆ–ಇವುಗಳ ಸ್ಪಷ್ಟ ನಿರ್ದೇಶನವಿದೆ. ಆ ಅಧಿಕೃತ ದಾಖಲೆಯಲ್ಲಿ ಅವರ ಮಹತ್ವದ ಗ್ರಂಥಗಳೆಲ್ಲವೂ ಅಡಕವಾಗಬೇಕಾದದ್ದು ಕ್ರಮಪ್ರಾಪ್ತವಾದುದು.

ಅನಂತರದ ಆಕರಗಳು ೧೮೮೦ರಿಂದ ಈಚಿನವು :

೫. ‘ಶ್ರೀತತ್ತ್ವನಿಧಿ’ಯ ಪೀಠಿಕೆಯನ್ನು ಬರೆದವರು (೧೯೦೧) ಮುಮ್ಮಡಿಯವರ ಹತ್ತು ಕೃತಿಗಳನ್ನು ಉಲ್ಲೇಖಿಸಿದ್ದು, ಅವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳಾಗಿವೆ.

೬. ಸೋಸಲೆ ಅಯ್ಯಾಶಾಸ್ತ್ರಿಗಳು ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ರಚಿಸಿದ ‘ಮಹಿಶೂರ ಮಹಾರಾಜ ಚರಿತ್ರಂ’ ಎಂಬ ಚಂಪೂಕಾವ್ಯದಲ್ಲಿ (೪ನೆಯ ಆಶ್ವಾಸ, ೭೬ವ.) ಮುಮ್ಮಡಿಯವರ ಸಂಸ್ಕೃತ, ಕನ್ನಡ ಗ್ರಂಥಗಳ ಪಟ್ಟಿಯಿದೆ. ಅವುಗಳಲ್ಲಿಯ ತ್ರಿಶತೀ ನಾಮಕ ಕೃತಿಗಳು ಈ ಮೊದಲು ಪ್ರಸ್ತಾಪಗೊಂಡಿಲ್ಲ.

೭. ಕಾವ್ಯಕಲಾನಿಧಿಯ ಸಂಪಾದಕರಾಗಿ ವಿವಿಧ ಹಸ್ತಪ್ರತಿಗಳನ್ನು ಸಂಚಯಿಸುತ್ತಿದ್ದ ಎಂ.ಎ. ರಾಮಾನುಜಯ್ಯಂಗಾರರು ಮುಮ್ಮಡಿಯವರ ‘ಶಾಕುಂತಲ ನಾಟಕ ನವೀನ ಟೀಕೆ’ಯನ್ನು ಪ್ರಕಟಿಸುತ್ತ (೧೯೧೪), ಪ್ರಸ್ತಾವನೆಯಲ್ಲಿ ಮುಮ್ಮಡಿಯವರ ಗದ್ಯಕೃತಿಗಳನ್ನು ಕಾಣಿಸಿದ್ದಾರೆ. ಅವುಗಳಲ್ಲಿ ಹಲವು ಮೊದಲ ಬಾರಿಗೆ ಉಲ್ಲೇಖಗೊಂಡಿವೆ.

---

* ಸಮಸ್ತ ಪ್ರಶಸ್ತ ವಸ್ತು ಸುಬೋದಕ ‘ಶ್ರೀ ಚಾಮುಂಡಾ ಲಘು ನಿಘಂಟು । ವಿಷ್ಣುಕಥಾ ಪ್ರತಿಪಾದಕ ‘ಶ್ರೀ ಕೃಷ್ಣ ಕಥಾಸಾರಸಂಗ್ರಹ’ । ಸಕಲ ದೇವತಾಧ್ಯಾನ ನವ ನಿಧ್ಯಾತ್ಮಕ ‘ಶ್ರೀತತ್ತ್ವನಿಧಿ’ । ಆರ್ಯಾಭಿನಂದನೀಯ ‘ದಶರಥನಂದನ ಚರಿತ್ರೆ’ । ‘ಸೌಗಂಧಿಕಾ ಪರಿಣಯ’ । ಸಮಸ್ತಕೋಶ ಶಬ್ದಾಲಂಕೃತ ವಿದ್ವಚ್ಚಕೋರ ಜೀವಾತು ಚಂದ್ರಿಕಾ ಮಂಡಲ ವಿಭಾಸುರ ‘ಮಹಾಕೋಶ ಸುಧಾಕರ । ಸೂರ್ಯಚಂದ್ರಾದಿ ವಂಶಾವತರಣ’ । ಗಣಿತಜ್ಞ ಮನೋರಂಜಕ ಪ್ರಭಾವಳಿ ವ್ಯಾಖ್ಯಾ ಸಹಿತ ‘ಸಂಖ್ಯಾರತ್ನಕೋಶ’ । ಗ್ರಹಣದರ್ಪಣ’ । ‘ದಶಾ ವಿಭಾಗ ಪ್ರದೀಪಿಕಾ । ಪೂರ್ಣತಾರಾ ಜಗನ್ಮೋಹನಾದಿ ವಿಚಿತ್ರತರ ತುರಗಪ್ಲುತಿ-ವಿಲಸಚ್ಚಕ್ರ ಪರಿಶೋಭಿತ, ‘ಚತುರಂಗಸಾರಸರ್ವಸ್ವ ಶ್ರೀಚಕ್ರಮಂಜರೀ’ । ಶ್ರೀಮಚ್ಚಾಮುಂಡಿಕಾಂಬಾದಿ ಸಮಸ್ತ ‘ದೇವತಾ ಸ್ತೋತ್ರಾವಳಿ’ ಮಂಗಳಾ ಶಾಸನಾಷ್ಟೋತ್ತರ । ‘ಪುರಾಣ ಟೀಕಾ’ ದ್ಯನೇಕ ಗ್ರಂಥನಿರ್ಮಾಣ ಪ್ರಕಾಶಿತ ಸಕಲ ಶಾಸ್ತ್ರಾರ್ಥ ಪಾಂಡಿತ್ಯ ವೈಭವಃ.”[೯]

೮. ೧೯೨೦ರ ಅನಂತರದ ಮಹತ್ವದ ಆಕರವೆಂದರೆ, 'ಮಹಾರಾಜರ ವಂಶಾವಳಿ' (ಬಿ. ರಾಮಕೃಷ್ಣರಾವ್) ಅರಮನೆಯ ದಾಖಲೆಗಳನ್ನು ಪರಿಶೀಲಿಸಿ, ಹಾಗೆ ದೊರೆತ ಪ್ರತಿಯೊಂದು ವಿಚಾರವನ್ನು ಒಳಗೊಂಡ ಸಂಪೂರ್ಣ ಕೃತಿಯಾಗಿದೆ. ಇದರಲ್ಲಿ ೨೭ ಗ್ರಂಥಗಳ ಸ್ಪಷ್ಟ ಉಲ್ಲೇಖವಿದ್ದು, ಅವುಗಳಲ್ಲಿ ಮೂರು ನಾಲ್ಕು ಮಾತ್ರ ಮೇಲಿನ ೭ ಯಾದಿಗಳಲ್ಲಿ ಬಾರದಿದ್ದವುಗಳು.

೯. ಮುಮ್ಮಡಿಯವರ ಎಲ್ಲಕ್ಕೂ ಹೆಚ್ಚಿನ ಕೃತಿಗಳನ್ನು ಉಲ್ಲೇಖಿಸಿದವರೆಂದರೆ ಕವಿಚರಿತಕಾರರು. ಅವರು ಹೇಳಿರುವ ೫೧(+೨) ಕೃತಿಗಳಲ್ಲಿ ಅನೇಕ ಹಸ್ತಪ್ರತಿಗಳನ್ನು ಅವರು ಪರಿಶೀಲಿಸಿ, ಅವುಗಳ ಒಕ್ಕಣಿಕೆಯ ಬಗೆಯನ್ನು ಕಂಡಿರಬೇಕು. ಮಹತ್ವದ ಮಾತೆಂದರೆ, ಅವರು ಹೇಳಿದ್ದರಲ್ಲಿ ೪೧ ಕೃತಿಗಳು ಹಿಂದಿನ ಆಕರಗಳಲ್ಲಿ ದೊರೆಯುವುದೇ ಇಲ್ಲ. ಈ 'ಹೊಸ' ಕೃತಿಗಳು ಪುರಾಣಗಳ ಟೀಕೆ ಇಲ್ಲವೆ ಮಹಾತ್ಮ್ಯದ ಗ್ರಂಥಗಳಾಗಿವೆ. (ಅವರು ಕಾಣಿಸಿರುವ 'ಅನೇಕ ಕೃತಿಗಳ ಹಸ್ತಪ್ರತಿಗಳು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ನೋಡ ದೊರೆಯುತ್ತವೆ.) ಈ ಎಲ್ಲ ಕೃತಿ ಸಮುದಾಯವನ್ನು ಪರಿಶೀಲಿಸಿ, ಕವಿಚರಿತ್ರಕಾರರು "ಈ ಗ್ರಂಥಗಳಲ್ಲಿ ಹಲವನ್ನು ಆಸ್ಥಾನ ಪಂಡಿತರುಗಳಿಗೆ ಸೂಚನೆ ಕೊಟ್ಟು ಬರೆಯಿಸಿರಬಹುದು" ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ.

೧೦. 'ಸಂಸ್ಕೃತ ಕವಿಚರಿತೆ'ಯ ೨ನೆಯ ಸಂಪುಟವು ಮುಮ್ಮಡಿಯವರ ಸಂಸ್ಕೃತ ಕೃತಿಗಳ ಆಕರವಾಗಿದೆ.

೧೧. ಅಧ್ಯಯನ ಸಂಸ್ಥೆಯ 'ಹಸ್ತಪ್ರತಿ ಸಂಗ್ರಹದಲ್ಲಿರುವ ಮುಮ್ಮಡಿ ಕೃಷ್ಣರಾಜರ ಹೆಸರಿನ ಕೃತಿಗಳಲ್ಲಿ 'ಸೌಗಂಧಿಕಾ ಪರಿಣಯ ನಾಟಕ' ಮತ್ತು 'ಹರದತ್ತಾಚಾರ್ಯ ಚರಿತ್ರೆ' – ಎಂಬ ಕೃತಿಗಳಿದ್ದು, ಅವುಗಳ ಪ್ರಸ್ತಾಪವು ಈ ಮೊದಲು ಬಂದಿಲ್ಲ.

೧೨. ೧೯೫೦ರಲ್ಲಿ ನಂಜನಗೂಡಿನ ಕರ್ನಾಟಕ ಸಂಘದವರು ಮುಮ್ಮಡಿಯವರ ಹೆಸರಿನ 'ಪಾರ್ವತೀ ಭಕ್ತಿ ಸಾರ'ವೆಂಬ ಕೃತಿಯನ್ನು ಪ್ರಕಟಿಸಿದರು. ಅದರಲ್ಲಿ ಹಳೆಯ ತಲೆಮಾರಿನ ವಿದ್ವಾಂಸರು, ಭಕ್ತರು, ರಾಣೀವಾಸದವರು–ಇವರ ಮನೆಗಳಲ್ಲಿಯ ಗ್ರಂಥಸಂಗ್ರಹಗಳನ್ನು ತಿರುವಿ ಹಾಕಿ, ಸುಮಾರು ೨೫ ಕೃತಿಗಳ ಪಟ್ಟಿ ಮಾಡಿದ್ದಾರೆ. ಅವುಗಳಲ್ಲಿ ರತಿರಹಸ್ಯ, ಚಿತ್ರ ಭಾಗವತ, ರೋಗಪ್ರತಿಮಾ ಸ್ವರೂಪ, ಸಾಮುದ್ರಿಕಾ ಶಾಸ್ತ್ರ ಮುಂತಾದ ವಿಶಿಷ್ಟ ಗ್ರಂಥಗಳಿವೆ. 'ರಾಗಸ್ವರೂಪ' ಮುಂತಾದ ಶೀರ್ಷಿಕೆಗಳಿಂದ ವಿಷಯದ ಬೋಧೆಯಾಗುವುದಿಲ್ಲ. ಅವಸರದಿಂದ ಪಟ್ಟಿಮಾಡಿದಂತಿದ್ದು, ಇಲ್ಲಿಯ ಅನೇಕ ಕೃತಿಗಳನ್ನು ನೇರವಾಗಿ ಸ್ವೀಕರಿಸುವಂತಿಲ್ಲ.

ಇನ್ನು ಕೆಲವರು, ತಮ್ಮ ಗ್ರಂಥಗಳಲ್ಲಿ ಕಾರಣಾಂತರದಿಂದ ಮುಮ್ಮಡಿಯವರ ಒಂದೊಂದು ಕೃತಿಯನ್ನು ಕಾಣಿಸಿದ್ದಾರೆ. ಅವಾವುವೆಂದರೆ :–

೧೩. ಪಾರಿಜಾತಾಪಹರಣ ಕಥೆ (ಆಕರ : ಕೆ. ಎಂ. ಕೃಷ್ಣರಾಯರ 'ಯಕ್ಷಗಾನ ಸಾಹಿತ್ಯ' ಪು.೧೦೨)

೧೪. ಶಕಕಾಲ ನಿರ್ಣಯ (ಹಿ.ಎನ್. ಲಿಂಗಣ್ಣಯ್ಯ ಅವರ 'ಮುಮ್ಮಡಿ ಕೃಷ್ಣರಾಜ ಚರಿತೆ' ಪು.೧೦೬)

೧೫. ಸಂಖ್ಯಾರತ್ನಕೋಶ-ಮರಾಠೀ ಗ್ರಂಥ (ಎ. ಕೆ. ಪ್ರಿಯೋಳಕರರ 'ಮ್ಹೈಸೂರಚಾ ತಿಸರಾ ಕೃಷ್ಣರಾಜ ವ ತ್ಯಾಚಾ ಮರಾಠೀ ಗ್ರಂಥ ಸಂಖ್ಯಾರತ್ನಕೋಶ'ದಲ್ಲಿ)

ಮುಮ್ಮಡಿ ಕೃಷ್ಣರಾಜರ ಕೃತಿಗಳ ಮುದ್ರಣ- ಪ್ರಕಾಶನದ ಬಗ್ಗೆ ಒಂದು ಮಾತು. ರಾಜಒಡೆಯರ ಕಾಲದಿಂದಲೂ ಅರಮನೆಯಲ್ಲಿದ್ದ ಸರಸ್ವತೀ (ಗ್ರಂಥ) ಭಂಡಾರವು ಮುಮ್ಮಡಿಯವರ ವಾಙ್ಮಯಾಸಕ್ತಿಯ ಮೂಲಕ ಬೆಳೆಯುತ್ತ ನಡೆಯಿತು. ಕ್ರಿ.ಶ. ೧೮೪೨ರ ಸುಮಾರಿಗೆ ಅರಮನೆಯಲ್ಲಿ ಸ್ಥಾಪಿಸಲಾದ ಕಲ್ಲಿನ ಅಚ್ಚುಕೂಟದಲ್ಲಿ ಅನೇಕ ಕನ್ನಡ, ಸಂಸ್ಕೃತ (ಮರಾಠಿ ಸಹ) ಪುಸ್ತಕಗಳನ್ನು ಸಚಿತ್ರವಾಗಿ ಮುದ್ರಿಸಿದ್ದರೆಂಬುದನ್ನು ನಾವು ಈ ಹಿಂದೆ ನೋಡಿದ್ದೇವೆ. ಯಾವ ಕೃತಿಗಳಲ್ಲಿ ಮಹಾರಾಜರಿಗೆ ಆಸ್ಥೆಯಿದ್ದಿತೊ ಅವುಗಳು ಅಲ್ಲಿ ತಪ್ಪದೇ ಅಚ್ಚಾಗಿರಬೇಕಲ್ಲವೆ.* ಹಾಗೆ ಅಚ್ಚಾದ ಗ್ರಂಥಗಳಿಗೂ ದೊರೆಗಳ ಗ್ರಂಥಕರ್ತೃತ್ವಕ್ಕೂ ಒಂದಿಲ್ಲೊಂದು ಸಂಬಂಧವಿದ್ದಿತೆಂದು ತರ್ಕಿಸಲು ಅಡ್ಡಿಯಿಲ್ಲ.

ಚಾಮರಾಜೇಂದ್ರ ಒಡೆಯರು ರಾಜ್ಯಸೂತ್ರಗಳನ್ನು ವಹಿಸಿದ ಮೇಲೆ (ಕ್ರಿ. ಶ. ೧೮೮೧) ತಮ್ಮ ತಂದೆಯವರ ಗದ್ಯ ಗ್ರಂಥಗಳ ಮುದ್ರಣ ಕಾರ್ಯವನ್ನು ಕೆಲವರಿಗೆ ಒಪ್ಪಿಸಿಕೊಟ್ಟರು. ಅವುಗಳ ಮುದ್ರಣವು ಇಪ್ಪತ್ತನೆಯ ಶತಮಾನದ ಆರಂಭದವರೆಗೂ ಮುಂದುವರಿದು, ಸೌಗಂಧಿಕಾ ಪರಿಣಯ, ಕಾಶೀಖಂಡ, ಮಹಾಭಾರತ, ಭಾಗವತ ಶಂಕರ ಸಂಹಿತೆ, ಸಹಸ್ರಾಯು ಚರಿತೆ, ಶಾಕುಂತಲ ಟೀಕೆ, ವತ್ಸರಾಜ ಕಥೆ, ಕೃಷ್ಣಕಥಾಸಾರ ಸಂಗ್ರಹ (ಉತ್ಪತ್ತಿ ಕಾಂಡ)-ಇವು ಪ್ರಕಟವಾದುವು.

## ೬.೨೩. ಕೃತಿಗಳು

ಇನ್ನೀಗ, ಮೇಲಣ ಆಕರಗಳಿಂದ ದೊರೆಯುವ ಮುಮ್ಮಡಿ ಕೃಷ್ಣರಾಜ ಹೆಸರಿನ ಸಮಗ್ರ 'ಸಾರಸ್ವತ ರತ್ನ'ವನ್ನು ವಿಷಯವಾರ ವಿಂಗಡಿಸಿ, ಅವುಗಳ ಕರ್ತೃತ್ವ ನಿರ್ಣಯಕ್ಕೆ ನೆರವಾಗುವ ಅಂಶಗಳೊಂದಿಗೆ ಇಲ್ಲಿ ಕೊಡುತ್ತೇವೆ :**

---

* ಆ ರೀತಿ ಅಚ್ಚಾದುವೆಂದು ನಮಗೆ ನಿಶ್ಚಿತವಾಗಿ ತಿಳಿದಿರುವ ಗ್ರಂಥಗಳಿವು. ದೇವತಾ ಸ್ತೋತ್ರಗಳು। ಚಾಮುಂಡಾ ಲಘು ನಿಘಂಟು, ಗ್ರಹಣದರ್ಪಣ, ಸಂಖ್ಯಾರತ್ನಕೋಶ (ಮರಾಠಿಯದೂ ಸಹ), ಚತುರಂಗ ಸಾರಸರ್ವಸ್ವ, ರಾಮಕಥಾ ಪುಷ್ಪಮಂಜರಿ, ಕೃಷ್ಣಕಥಾ ಪುಷ್ಪಮಂಜರಿ, ಸೌಗಂಧಿಕಾ ಪರಿಣಯ ಗದ್ಯ).

* ನಿಶ್ಚಿತವಾಗಿ ಮುಮ್ಮಡಿಯವರ ಕೃತಿಗಳೆಂಬುದನ್ನು ದಪ್ಪಕ್ಷರಗಳಲ್ಲಿಯೂ, ಅಷ್ಟೇ ನಿಶ್ಚಿತವಾಗಿ ಅವರ ಕೃತಿಗಳಲ್ಲ ಎಂಬುದನ್ನು [ ] ಈ ಆವರಣ ಚಿಹ್ನೆಯಲ್ಲಿಯೂ ಕೊಡಲಾಗಿದೆ.

## ೧. ದೇವತಾ ಸ್ತುತಿ (ಸಂಸ್ಕೃತ)

ಶ್ರೀ ಚಾಮುಂಡಿಕಾಂಬಾದಿ ಸಮಸ್ತ ದೇವತಾ ಸ್ತೋತ್ರಾವಳಿ (ಆಕರ ೩)

[ದೇವತಾ ನಾಮ ಕುಸುಮ ಮಂಜರಿ] (ಆಕರ ೫, ೮)

[ದೇವತಾಧ್ಯಾನ ಮಾಲಿಕಾ] (ಆಕರ ೧೦) ಮುದ್ರಣ– ಸು. ೧೮೫೦

ದೇವತಾಷ್ಟೋತ್ತರಾ (ಆಕರ ೩,೫.೮) ಮುದ್ರಣ– ಸು. ೧೮೫೦

**ಚಾಮುಂಡಾ ಲಘು ನಿಘಂಟು** (ಆಕರ ೩,೫,೮,೧೧) ೧೮೩೬

ಮುದ್ರಣ ಸು. ೧೮೫೦

**ಚಾಮುಂಡಾ ತ್ರಿಶತೀ (ಆಕರ ೬,೮)**

[ಚಾಮುಂಡಿ ಮಂಗಳಮಾಲಿಕಾ] (ಆಕರ ೧೦)

ಗಣಪತಿ ತ್ರಿಶತೀ (ಆಕರ ೬,೮)

ನವಗ್ರಹ ಪೂಜಾಮಂಜರೀ (ಆಕರ ೮)

ಮಹಾವಿಷ್ಣು ತ್ರಿಶತೀ (ಆಕರ ೬, ೮)

ವಿಷ್ಣುನಾಮ ಪಂಚದಶೀ (ಆಕರ ೮)

ಶ್ರೀಕಂಠೇಶ್ವರ ತ್ರಿಶತೀ (ಆಕರ ೬,೮)

ರಾಮಕಥಾ ಪುಷ್ಪಮಂಜರಿ (ಆಕರ ೧೦) ಮುದ್ರಣ ಸು. ೧೮೫೦

## ೨. ಶಾಸ್ತ್ರ ವಿಷಯಗಳು

(ಕೋಶ, ನಿಘಂಟು, ಗಣಿತ, ಜ್ಯೋತಿಷ್ಯ, ಕ್ರೀಡಾ, ಕಲೆಗಳು)

**ಶ್ರೀತತ್ತ್ವನಿಧಿ** (ಆಕರ ೨,೩,೪,೬,೮,೯) ೧೮೨೩. ಮುದ್ರಣ ೧೯೦೧ (ಸಂಸ್ಕೃತ, ಕನ್ನಡ)

[ದೇವೀ ಸಾಯುಜ್ಯ ಸೀಸಮಾಲಿಕೆ] (ಆಕರ ೯)

ಮಹಾಕೋಶ ಸುಧಾಕರ (ಆಕರ ೩,೬,೮) ಸಂಸ್ಕೃತ

ಗಣಿತ ಸಂಗ್ರಹಂ (ಆಕರ ೬,೮) ಸಂಸ್ಕೃತ

ಗ್ರಹಣ ದರ್ಪಣ (ಆಕರ ૩,೪,೫,೮) ೧೮೪೨ ಸಂಸ್ಕೃತ

ಜಾತಕ ಸಾಮ್ರಾಜ್ಯ ಟೀಕೆ (ಆಕರ ೯)

ದಶಾವಿಭಾಗ ಪ್ರದೀಪಿಕಾ ದಶಾವಿಭಾಗ ಪ್ರಕರಣ (ಆಕರ ೩,೮)

ಶಕಕಾಲ ನಿರ್ಣಯ (ಆಕರ ೧೪)

ಸಂಖ್ಯಾಮಾಲೆ/ಸಂಖ್ಯಾರತ್ನಮಾಲಾ ಕನ್ನಡ ಟೀಕೆ (ಆಕರ ೮,೯) ೧೮೪೯

**ಸಂಖ್ಯಾರತ್ನಕೋಶ-ಪ್ರಭಾವಳೀ ಸಂಸ್ಕೃತ ವ್ಯಾಖ್ಯಾ ಸಹಿತ** (ಆಕರ ೩,೪,೫,೬,೮) ೧೮೪೫

**ಸಂಖ್ಯಾರತ್ನಕೋಶ**-ಮರಾಠಿ (ಆಕರ ೧೫) ಸು. ೧೮೪೬, ಮುದ್ರಣ ೧೮೫೨

ಚತುರಂಗಸಾರಸರ್ವಸ್ವ (ಆಕರ ೩,೪,೮,೧೫) ಮುದ್ರಣ ಸು. ೧೮೫೦

ಚಕ್ರಮಂಜರೀ (ಆಕರ ೩,೫,೮,೧೫) ೧೮೪೫

ಭರತಸಾರ ಸಂಗ್ರಹ ಟೀಕೆ (ಆಕರ ೯)

ಸ್ವರಚೂಡಾಮಣಿ (ಆಕರ ೬,೮)

ಅಮರು ಶತಕ-ರತಿ ರಹಸ್ಯ (ಆಕರ ೧೨)

ಕೊಕ್ಕೋಕಶಾಸ್ತ್ರ ಟೀಕೆ (ಆಕರ ೧೨)

ಪರಿಮಳ ಪಾರಿಜಾತ-ಸುಗಂಧ ದ್ರವ್ಯ ವಿಚಾರ (ಆಕರ ೧೨)

ರೋಗ ಪ್ರತಿಮಾ ಸ್ವರೂಪ, ಲಕ್ಷಣ (ಆಕರ ೧೨)

ಕೃಷ್ಣರಾಜ ಗಣಿತ (ಆಕರ ೧೨)

ಕಾಮರತ್ನಾಕರ (ಆಕರ ೧೨)

ಯೋಗರತ್ನಾವಳಿ-ಸ್ವರಶಾಸ್ತ್ರ, ಚಾಮುಂಡಾ ಪ್ರಶ್ನ ಚಕ್ರ ಇ. (ಆಕರ ೧೨)

ಸಿದ್ಧಾಂತಾರ್ಥ ಪ್ರಕಾಶ ಜ್ಯೋತಿಷ (ಆಕರ ೧೨)

ಸಾಮುದ್ರಿಕಾ ಶಾಸ್ತ್ರ–ಸಾಲಿಗ್ರಾಮ ಪರೀಕ್ಷಾ, ರತ್ನ ಮುತ್ತುಗಳ ಪರೀಕ್ಷೆ (ಆಕರ ೧೨)

ಕೃಷ್ಣರಾಜ ಲಿಪಿ (ಆಕರ ೧೨)

ಸ್ವಪ್ನಾಧ್ಯಾಯ (ಆಕರ ೧೨)

ಶಿವಧರ್ಮೋತ್ತರ ಖಂಡ (ಆಕರ ೧೨)

ಶ್ರೀಶೈಲ ಮಹಾತ್ಮ್ಯೆ (ಆಕರ ೯)

ಹರಿವಂಶ (ಆಕರ ೯)

ಹರದತ್ತಾಚಾರ್ಯರ ಚರಿತ್ರೆ (ಭವಿಷ್ಯೋತ್ತರ ಪುರಾಣ) (ಆಕರ ೧೧)

ಹಾಲಾಸ್ಯ ಮಹಾತ್ಮ್ಯೆ (ಆಕರ ೯)

ಭಕ್ತವಿಲಾಸ ದರ್ಪಣ (ಆಕರ ೯)

ಮಹಾಸಂಕಲ್ಪ (ಆಕರ ೮)

## ೩. ಕಾವ್ಯಾತ್ಮಕ ಗದ್ಯ

(ರಾಮಾಯಣ, ಮಹಾಭಾರತ, ಭಾಗವತ, ಉಪನಿಷತ್ತುಗಳು)

**ಆಧ್ಯಾತ್ಮ ರಾಮಾಯಣ ಟೀಕೆ (ಬ್ರಹ್ಮಾಂಡ ಪುರಾಣ)** (ಆಕರ ೧,೨,೬,೮,೯)

ಆರ್ಯಾರಾಮಾಯಣ (ಆಕರ ೬, ೯)

[ದಶರಥನಂದನ ಚರಿತ್ರೆ] (ಆಕರ ೩)

[ರಾಮೋದಂತ ಕಥೆ] (ಆಕರ ೭)

ರಾಮಕಥಾ ಕಲ್ಪವೃಕ್ಷ–ಸಾರ ಸಂಗ್ರಹ (ಆಕರ ೯,೧೧)

ರಾಮಾಯಣ ಟೀಕೆ (ಆಕರ ೬,೮,೯) ೧೮೬೭

ರಾಮಾಯಣ ತಾತ್ಪರ್ಯ ದೀಪಿಕಾ ಟೀಕೆ (ಆಕರ ೯)

ಮಹಾಭಾರತ ಟೀಕೆ (ಆಕರ ೫.೬.೮.೯.೧೧) ಮುದ್ರಣ ೧೮೮೪-೯೯ -'ಕೃಷ್ಣರಾಜ ವಾಣೀವಿಲಾಸ' ಮಾಲಿಕೆ

ಜೈಮಿನಿಭಾರತ ಅಶ್ವಮೇಧಿಕಪರ್ವ ಟೀಕೆ ((ಆಕರ ೯) ೧೮೨೦

[ಭಗವದ್ಗೀತೆ] (ಆಕರ ೯) ಮುದ್ರಣ ೧೮೯೦

ಉತ್ತರಗೀತೆ (ಆಕರ ೯)

**ಕೃಷ್ಣಕಥಾಸಾರಸಂಗ್ರಹ** (ಆಕರ ૩,೬,೮,೯,೧೧) ಮುದ್ರಣ ೧೮૩೮-૩೯

ಕೃಷ್ಣಕಥಾ ರತ್ನಾಕರ (ಆಕರ ೯,೧೧)

[ಕೃಷ್ಣೋದಂತ ಕಥೆ] (ಆಕರ ೭)

ಚಿತ್ರಭಾಗವತ (ಆಕರ ೧೨)

ಹರಿಶ್ಚಂದ್ರೋಪಾಖ್ಯಾನ (ಮಹಾಭಾರತ ಅರಣ್ಯಪರ್ವದಿಂದ) (ಆಕರ ೯) ೧೮೨೦

**ಭಾಗವತ ಟೀಕಾ** (ಆಕರ ೧.೨.೬.೮.೯) ಮುದ್ರಣ ೧೮೯೭-೯೯ -'ಕೃಷ್ಣರಾಜ ವಾಣೀವಿಲಾಸ' ಮಾಲಿಕೆ

## ೪. ಕವಿತೆ

(ಷಟ್ಪದಿ, ಶತಕ, ಯಕ್ಷಗಾನ, ಹಾಡುಗಳು)

**ಸೌಗಂಧಿಕಾಪರಿಣಯ (ಭಾಮಿನೀ ಷಟ್ಪದಿ)** (ಆಕರ ೯)

**ಸಿರಿನಂಜುಂಡ ಶತಕ (ಕಂದ)** (ಆಕರ ೯,೧೧,೧೨)

[ಪಾರ್ವತಿ ಭಕ್ತಿಸಾರ ಶತಕ] (ಆಕರ ೧೨)

ದಕ್ಷಾಧ್ವರಯಜ್ಞ ಕಥೆ- ಯಕ್ಷಗಾನ ((ಆಕರ ೯)

ಭಾಮಾ ಕಥೆ-ಯಕ್ಷಗಾನ (ಆಕರ ೯)

[ಪಾರಿಜಾತಾಪಹರಣ ಕಥೆ] (ಆಕರ ೧೩)

ಪ್ರಸನ್ನಕೃಷ್ಣ ಕೊರವಂಜಿ ಕಥೆ-ಯಕ್ಷಗಾನ (ಆಕರ ೧೧)

ರಾಮಾನುಜ ವಿಜಯ (ಆಕರ ೧೨)

ಹಾಡುಗಳು : ಅನುಭವ ಪಂಚರತ್ನ ಮತ್ತು ವೈರಾಗ್ಯದ ಜಾವಡಿ ((ಆಕರ ೯,೧೧)

ರಘುವಂಶ-೨ನೆಯ ಸರ್ಗ (ಆಕರ ೧೨)

## ೫. ಪುರಾಣ ಟೀಕೆ / ಮಹಾತ್ಮ್ಯ ಗ್ರಂಥಗಳು

ಅಖಂಡ ಕಾವೇರಿ ಮಹಾತ್ಮ್ಯ (ಸ್ಕಾಂದ ಪುರಾಣ) (ಆಕರ ೯,೧೧) -'ಕೃಷ್ಣರಾಜ ವಾಣಿವಿಲಾಸ' ಮಾಲಿಕೆ

ಅರ್ಕ್ಕ ಪುಷ್ಕರಿಣೀ ಮಹಾತ್ಮ್ಯ (ಬ್ರಹ್ಮಾಂಡ ಪುರಾಣ) (ಆಕರ ೯,೧೧) - 'ಕೃಷ್ಣರಾಜವಾಣಿ ವಿಲಾಸ' ಮಾಲಿಕೆ

ಉಷಾ ಪರಿಣಯ (ಆಕರ ೯)

ಕಾಶೀಖಂಡ (ಸ್ಕಾಂದಪುರಾಣ) (ಆಕರ ೯) ಮುದ್ರಣ ೧೯೦೮

ಗಯ ಚರಿತ್ರೆ (ಆಕರ ೯)

ಗರಳಪುರಿ ಮಹಾತ್ಮ್ಯ (ಆಕರ ೧೨)

[ಚುಂಚನಕಟ್ಟೆ ಮಹಾತ್ಮ್ಯ] (ಆಕರ ೯)

ತಲಕಾವೇರಿ/ತುಲಾಕಾವೇರಿ ಮಹಾತ್ಮ್ಯ (ಆಕರ ೯)

ದೇವಿ ಮಹಾತ್ಮ್ಯ ಸಪ್ತಶತೀ (ಮಾರ್ಕಂಡೇಯ ಪುರಾಣ) (ಆಕರ ೯,೧೧) -'ಕೃಷ್ಣರಾಜವಾಣಿವಿಲಾಸ' ಮಾಲಿಕೆ (೧೮೧೫)

ದೇವೀಭಾಗವತ ತಾತ್ಪರ್ಯಟೀಕಾ (ಆಕರ ೯)

ನಳೋಪಾಖ್ಯಾನ (ಆಕರ ೯)

ಯಾದವಗಿರಿ ಮಹಾತ್ಮ್ಯ (ಆಕರ ೯)

[ಲಲಿತೋಪಾಖ್ಯಾನ (ಬ್ರಹ್ಮಾಂಡೋಪ ಪುರಾಣದಿಂದ)] (ಆಕರ ೯,೧೧) –'ಕೃಷ್ಣರಾಜವಾಣಿವಿಲಾಸ' ಮಾಲಿಕೆ ೧೮೨೩

[ಸಹಸ್ರಾಯು ಕಥೆ/ಚರಿತ್ರೆ (ಲಲಿತೋಪಾಖ್ಯಾನದಿಂದ)] (ಆಕರ ೭) ಮುದ್ರಣ ೧೯೦೬

ಲೈಂಗ ಪುರಾಣ (ಆಕರ ೯)

[ಶನಿತ್ರಯೋದಶೀ ಮತ್ತು ಅಮಾ ಸೋಮವಾರ ವ್ರತಗಳು] (ಆಕರ ೯)

ಶಿವಧರ್ಮೋತ್ತರಖಂಡ (ಆಕರ ೧೨)

ಶನೈಶ್ವರ ಕಥೆ (ಆಕರ ೯)

ಶಂಕರ ಸಂಹಿತೆ (ಸ್ಕಾಂದ ಪುರಾಣ) (ಆಕರ ೯) ೧೮೨೦ ಮುದ್ರಣ ೧೮೯೨ –'ಕೃಷ್ಣರಾಜವಾಣಿವಿಲಾಸ' ಮಾಲಿಕೆ

## ೬. ಕಥೆಗಳು

ಪಂಚತಂತ್ರ ಕಥೆ (ಆಕರ ೯,೧೧) ಮುದ್ರಣ ೧೮೫೬

ಬತ್ತೀಸಪುತ್ಥಳಿ ಕಥೆ (ಆಕರ ೯,೧೧) ೧೮೬೫

ಬೇತಾಳ ಪಂಚವಿಂಶತಿ ಕಥೆ (ಆಕರ ೯)

ಶುಕ ಸಪ್ತತಿ (ಆಕರ ೯) ೧೮೨೦

ಕಾದಂಬರಿ (ಆಕರ ೯)

ದಶಕುಮಾರ ಕಥಾ ಕಲಾನಿಧಿ–ಯಯಾತಿರಾಯನ ಚರಿತ್ರೆ (ಆಕರ ೭) ಮುದ್ರಣ ೧೮೯೦ –'ಕೃಷ್ಣರಾಜವಾಣಿವಿಲಾಸ'

**ಸೌಗಂಧಿಕಾ ಪರಿಣಯ** (ಕಾದಂಬರಿ) (ಆಕರ ೧, ೨, ೩, ೫, ೬, ೭, ೮, ೯, ೧೧) ರಚನೆ ಸುಮಾರು ೧೮೨೦, ಮುದ್ರಣ ೧೮೫೦, ೧೯೦೯

[ಸೌಗಂಧಿಕಾ ಪರಿಣಯ–ನಾಟಕ] (ಆಕರ ೧೧)

## ೭. ನಾಟಕ ಗದ್ಯ

ಮಾಲವಿಕಾಗ್ನಿಮಿತ್ರ ಕಥೆ (ಆಕರ ೭,೯) ೧೮೪೭

ವಿಕ್ರಮೋರ್ವಶೀ ಕಥೆ (ಆಕರ ೯)

ಶಕುಂತಲ ನಾಟಕ ನವೀನ ಟೀಕೆ / ಶಕುಂತಲೋಪಾಖ್ಯಾನ (ಆಕರ ೭,೯) ಮುದ್ರಣ ೧೯೧೪ – ಮೂರು ಕೃತಿಗಳು ಸೇರಿ 'ಕೃಷ್ಣರಾಜವಾಣಿವಿಲಾಸ ರತ್ನಾಕರ' ಎಂಬ ಅಭಿದಾನ ಹೊಂದಿದೆ.

ಉತ್ತರರಾಮ ಚರಿತ್ರ ಕಥೆ (ಆಕರ ೯)

ವತ್ಸರಾಜ ಕಥೆ (ಆಕರ ೭,೯,೧೧) ಮುದ್ರಣ ೧೯೦೪ – ಕೃಷ್ಣರಾಜ ಸೂಕ್ತಿ ಮುಕ್ತಾವಳಿ

[ಮುದ್ರಾಮಂಜೂಷ] (ಆಕರ ೭)

## ೮. ಚರಿತ್ರೆ

ಸೂರ್ಯಚಂದ್ರಾದಿ ವಂಶಾವತರಣ (ಆಕರ ೩,೮,೧೦) ಮುದ್ರಣ ೧೮೫೭ ಸಂಸ್ಕೃತ

[ಮೈಸೂರು ರಾಜವಂಶ ಚರಿತ್ರೆ] (ಆಕರ ೮)

[ರಾಜವಂಶ ರತ್ನಪ್ರಭಾ] (ಆಕರ ೫,೭)

### ೬.೪ ನಾಮಾಂತರ ಹಾಗೂ ಅನ್ಯ ಕರ್ತೃತ್ವ

ಮೇಲೆ ಕೊಡಲಾದ ೧೧೯ ಹೆಸರುಗಳಲ್ಲಿ ಹಲವು ನಾಮಾಂತರಗಳಿದ್ದು, ಅವು ಪ್ರತ್ಯೇಕ ಗ್ರಂಥಗಳೆಂದು ತೋರುವುದಿಲ್ಲ. ಉದಾಹರಣೆಗೆ ದೇವತಾಸ್ತುತಿ ವಿಭಾಗದಲ್ಲಿಯ ಮೊದಲಿನದು ಚಾಮುಂಡೇಶ್ವರಿ ಮೊದಲ್ಗೊಂಡು ನೂರೆಂಟು ದೇವತೆಗಳ ೧೦೮ ನಾಮಗಳನ್ನು ಒಳಗೊಂಡಿದೆ. ಇದು ಕೃಷ್ಣರಾಜ ರಚನೆಯೆಂಬುದು ನಿಜ. ಆದರೆ ಇದರ ಸಮಾನಾರ್ಥವನ್ನು ಕೊಡುವ ಇತರ ಕೃತಿಗಳು ನಾಮಾಂತರಗಳಿರಬೇಕು. ಅವಾವುವೆಂದರೆ ದೇವತಾಧ್ಯಾನಮಾಲಿಕಾ, ದೇವತಾನಾಮಕುಸುಮಮಂಜರಿ, ಚಾಮುಂಡಿ ಮಂಗಳ ಮಾಲಿಕಾ.

ಶಾಸ್ತ್ರ ವಿಷಯದ ಕೃತಿಗಳಲ್ಲಿ ಬರುವ 'ದೇವೀಸಾಯುಜ್ಯ ಸೀಸಮಾಲಿಕೆ' ಯು ಪ್ರತ್ಯೇಕ ಕೃತಿಯಲ್ಲ. ಅದು 'ಶ್ರೀ ತತ್ತ್ವನಿಧಿ'ಯ ಕೊನೆಯ ಪ್ರಕರಣದಲ್ಲಿ ಬರುವ 'ದೇವೀ ಸಾಯುಜ್ಯ' ವೆಂಬ ಆಟಕ್ಕೆ ಸೀಸಪದ್ಯ ರೂಪದ ಕನ್ನಡ ವಿವರಣೆಯಾಗಿದೆ. ಅದರಂತೆ ಕಾವ್ಯ ವಿಭಾಗದಲ್ಲಿ ಬರುವ 'ಪಾರ್ವತೀಭಕ್ತಿಸಾರ'ದಲ್ಲಿ ಮುಮ್ಮಡಿಯವರ ಗ್ರಂಥಕರ್ತೃತ್ವದ ಸ್ಪಷ್ಟ ನಿರ್ದೇಶನವಿಲ್ಲ ಮತ್ತು ಅವರ ಹೆಸರು ಇರುವ ೧೦೭, ೧೦೮ನೆಯ ಪದ್ಯಗಳು ಕೇವಲ ಸ್ತುತಿರೂಪವಾಗಿವೆ. ಅದೇ 'ಸಿರಿನಂಜುಂಡ ಶತಕ'ದಲ್ಲಿ ಅವರ ಮುದ್ರಿಕೆ ಸ್ಪಷ್ಟವಾಗಿ ಇದೆ.

'ಪಾರಿಜಾತಾಪಹರಣ ಕಥೆ' ಯಕ್ಷಗಾನವೆಂದು ಹೇಳಿದೆ. ಕವಿಚರಿತಕಾರರು ಹೇಳಿದ 'ಭಾಮಾಕಥೆ'ಯೂ ಯಕ್ಷಗಾನವಾಗಿದ್ದು, ಸತ್ಯಭಾಮೆಯು ಅಪೇಕ್ಷಿಸಿದ ಪಾರಿಜಾತದ ಕಥೆಯೇ ಇದು. ಆದ್ದರಿಂದ ಇವೆರಡೂ ಅಭಿನ್ನ.

ಬ್ರಹ್ಮಾಂಡ ಪುರಾಣೋಕ್ತ 'ಅರ್ಕಪುಷ್ಕರಿಣೀ ಮಹಾತ್ಮ್ಯ'ದ ಹಸ್ತಪ್ರತಿ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯಲ್ಲಿದ್ದು, ಅದು ಚುಂಚನಕಟ್ಟೆಯ ಮಹಾತ್ಮ್ಯವನ್ನು ಒಳಗೊಂಡಿದೆ. ಆದರೆ ಚುಂಚನಕಟ್ಟೆ ಮಹಾತ್ಮ್ಯೆ ಎಂಬ ಹೆಸರಿನದೇ ಕೃತಿಯೊಂದನ್ನು ಕವಿಚರಿತಕಾರರು ಉಲ್ಲೇಖಿಸಿದ್ದಾರೆ. 'ಅರ್ಕಪುಷ್ಕರಿಣೀ ಮಹಾತ್ಮ್ಯ' ವನ್ನಾದರೂ ಅವರೊಬ್ಬರೇ ಹೆಸರಿಸಿರುವರು. ಆದ್ದರಿಂದ ಇವೆರಡೂ ಕೃತಿಗಳು ಒಂದೇ ಎಂಬ ಅಭಿಪ್ರಾಯವನ್ನು ತಾಳುವುದು ಸರಿಯೆನಿಸಲಿಕ್ಕಿಲ್ಲವಾದರೂ ಒಂದೇ ವಿಷಯದ ಮೇಲೆ ಒಬ್ಬರೇ ಲೇಖಕರ ಎರಡು (ಗದ್ಯ) ಕೃತಿಗಳಿರುವುದು ಸಂಭವನೀಯವಲ್ಲ. ಅಲ್ಲದೆ 'ಚುಂಚನಕಟ್ಟೆ ಮಹಾತ್ಮೆ'ವನ್ನು ಇನ್ನಾರೂ ಹೇಳಲಿಲ್ಲ. ಅದರ ಹಸ್ತಪ್ರತಿಯು ಸದ್ಯಕ್ಕೆ ಪ್ರತ್ಯೇಕವಾಗಿ ದೊರೆಯುತ್ತಲಿಲ್ಲ. ಕಾರಣ ಇವೆರಡೂ ಒಂದೇ ಗ್ರಂಥವಾಗಿರಬಹುದೆಂದು ತೋರುತ್ತದೆ.

'ಸಹಸ್ರದಾಯಕ ಕಥೆ' (ಚರಿತೆ)ಯನ್ನು ಎಂ. ಶ್ರೀನಿವಾಸಮೂರ್ತಿರಾಯರು ೧೯೦೬ರಲ್ಲಿ ಪ್ರಕಟಿಸಿದ್ದಾರೆ. ಇದು ಬ್ರಹ್ಮಾಂಡಪುರಾಣದ ಉತ್ತರ ಭಾಗದಲ್ಲಿರುವ ಒಂದು ಉಪಾಖ್ಯಾನದ ಆರಂಭದ ೨೪ ಅಧ್ಯಾಯಗಳ ಗದ್ಯಾನುವಾದ. ಆದರೆ ಇದೇ ಹೆಸರಿನ ಗ್ರಂಥವನ್ನು ಸೀತಾರಾಮಸೂರಿ ಎಂಬವರು ಬರೆದಿರುವುದಾಗಿ ಕವಿಚರಿತೆಕಾರರು ಹೇಳಿದ್ದಾರೆ.[೧೧] ಅವರು ಕೊಟ್ಟಿರುವ ವಿವರಗಳಿಗೂ ಮುದ್ರಿತ ಪುಸ್ತಕಕ್ಕೂ ಹೊಂದಿಕೆಯಿದೆ. ಅಲ್ಲದೆ ಸೀತಾರಾಮಸೂರಿಯವರು 'ಕೃಷ್ಣರಾಜಮುದೇ ಕಥಿತಾ' ಎಂಬುದಾಗಿ ಗ್ರಂಥಾರಂಭದ ಶ್ಲೋಕದಲ್ಲಿ ಕಾಣಿಸಿರುವುದನ್ನು ಗಮನಿಸಬೇಕು.* ಹೀಗೆ 'ಸಹಸ್ರಾಯುಕಥೆ'ಯ ಮುಮ್ಮಡಿಯವರ ರಚನೆ ಅಲ್ಲ.

* ಜಯತ್ಯಮಿತ ಕಲ್ಯಾಣ ಗುಣರತ್ನ ಮಹೋದಧಿ
ಮಹಿಶೂರ ಪುರೇ ಶ್ರೀ ಕೃಷ್ಣರಾಜ ಮಹೀಪತಿಃ ॥೧॥
ತನ್ಮುದೇ ಕಥಿತಾ ಸೇಯಂ ಕಥಾ ಕರ್ಣಾಟಕ ಭಾಷಯಾ
ಶ್ರೀಪತಿ ಕೃಪಯಾ ಮಧುರಂ ಸೀತಾರಾಮಾಖ್ಯ ಸೂರಿಣಾ ॥೨॥

'ಲಲಿತೋಪಾಖ್ಯಾನ' ಎನ್ನುವ ಹೆಸರಿನಲ್ಲಿ ಕೃಷ್ಣರಾಜರ ಒಂದು ಕೃತಿ ಇದೆಯಷ್ಟೆ. ಅದರ ಹಸ್ತಪ್ರತಿಯ ಪರಿಶೀಲನೆಯಿಂದ, ಅದು ಮೇಲಿನ ಸಹಸ್ರಾಯು ಕಥೆಯನ್ನು ಒಳಗೊಂಡದ್ದಾಗಿ ಕಂಡುಬರುತ್ತದೆ. (ಮೂಲಕೃತಿಯ ಆರಂಭದ ೨೫ ಅಧ್ಯಾಯಗಳು) ಕಾರಣ, ಇದಾದರೂ ಮುಮ್ಮಡಿ ಕೃತವಲ್ಲ.

ಮುಮ್ಮಡಿಯವರ ಸುಪ್ರಸಿದ್ಧ ಕೃತಿಯಾದ 'ಸೌಗಂಧಿಕಾಪರಿಣಯ'ವು ಪದ್ಯ ಮತ್ತು ನಾಟಕರೂಪಗಳಲ್ಲಿಯೂ ಬೇರೆಯಾಗಿ ದೊರೆಯುತ್ತದೆ.

ನಾಟಕದಲ್ಲಿ ಮೊದಲಿಗೆ :

ಶ್ರೀ ಜಯ ಕೀರ್ತಿ ಸಮಾಜನು ।
ಭೂಜನನುತ ಕೃಷ್ಣರಾಜ ಭೂಪ ನುಡಿಪನೀ ॥
ರಾಜ ಸಭಿಕರು ಕೇಳಿರಿ ।
ರಾಜತ್ಸೌಗಂಧಿಕಾ ಪರಿಣಯಾಖ್ಯ ಸುಚರಿತಂ ॥

ಎಂಬ ಪದ್ಯವು ಬರುತ್ತದೆ. ಆದರೆ ಅಂತ್ಯದಲ್ಲಿ ಮಾತ್ರ–

'.........ವರ ಕೃಷ್ಣರಾಜೇಂದ್ರ [ನು] ವಚನರೂಪದಲಿ ರಚಿಸಿದ ಸೌಗಂಧಿಕಾಪರಿಣಯಾಖ್ಯ ಸಚ್ಚರಿತ್ರವನೀಗ ಸಂಕ್ಷೇಪವಾಗಿ ವರಮುದ್ದುಕೃಷ್ಣಾಂಬೆ ಗೊಡೆಯನಾಗಿರುವ ನರವರೋತ್ತಮ ಕೃಷ್ಣನೃಪನು [ನ?] ಕರುಣದಲಿ ನಾಟಕ ರೂಪದಿಂ ನವ್ಯತರಮಾಗಿ ರಚಿಸಿದ 'ವೆಂಕಟರಮಣಾಖ್ಯ' ಭೂಮಿಸುರನು ಸರ್ವರಿಗೆರಗಿ ಸ್ತುತಿಸಿ ಈ ಕೃತಿಯ ಧರೆಯೊಳಗೆ ಆಚಂದ್ರತಾರಕಂಬಾಗಿ ಇರುವಂತೆ ಪ್ರಾರ್ಥಿಸಿ. . . .'

ಎಂಬುದಾಗಿ ಉಕ್ತವಾಗಿದೆ. ಇದರ ಒಟ್ಟಿನ ಅರ್ಥ, ವಚನರೂಪವಾದ ಮುಮ್ಮಡಿ ಕೃಷ್ಣರಾಜರ 'ಸೌಗಂಧಿಕಾಪರಿಣಯ'ವನ್ನು ವೆಂಕಟರಮಣಾಖ್ಯನೆಂಬ ಬ್ರಾಹ್ಮಣನು ನಾಟಕರೂಪದಲ್ಲಿ ರಚಿಸಿದನೆಂದಾಗುತ್ತದೆ. ಅಂತೆಯೇ ಕವಿಚರಿತಕಾರರು ಈ ನಾಟಕವನ್ನು 'ವೆಂಕಟ'ನ ಹೆಸರಿನಲ್ಲಿ ಕೊಟ್ಟಿದ್ದಾರೆ. ಇನ್ನೊಂದೆಂದರೆ ಯಾಲಪದ ಸೀಸಪದಗಳಿಂದ ಕೂಡಿದ ಈ ಕೃತಿಯು ರಂಗಪ್ರಯೋಗದ ನಾಟಕವೇನೂ ಅಲ್ಲ.

'ಶನಿತ್ರಯೋದಶೀ ಮತ್ತು ಅಮಾಸೋಮವಾರ ವ್ರತ'ಗಳಲ್ಲಿಯಂತೂ ಈ ದ್ವಂದ್ವಕರ್ತೃತ್ವವು ಸ್ಪಷ್ಟವಾಗಿಯೇ ಇದೆ. ಅವುಗಳ ಆರಂಭದಲ್ಲಿ ದೇವಾಂಡಹಳ್ಳಿ ವೆಂಕಟರಾಮಶಾಸ್ತ್ರಿಯು 'ಕನ್ನಡಿಸಿ'ದುದೆಂದೇ ಉಕ್ತವಾಗಿದ್ದು, ಅಂತ್ಯದಲ್ಲಿ ಮಾತ್ರ ಕೃಷ್ಣರಾಜಕೃತ 'ಕರ್ಣಾಟಕ ವಚನರಚನಾಭಿದಾನ' (ಶನಿತ್ರಯೋದಶೀವ್ರತ) ಎಂದೂ ಕೃಷ್ಣರಾಜರು . . .ಬುಧಜನ ಪ್ರೀತಿಗೋಸ್ಕರ ವಿಸ್ತರಿಸಿದ ಕರ್ಣಾಟಕ ಭಾಷಾ ವ್ಯಾಖ್ಯಾನ (ಅಮಾಸೋಮವಾರವ್ರತ) ಎಂದೂ ಹೇಳಲಾಗಿದೆ*೧೨

* ಈ ಕಾರಣದಿಂದ ಕವಿಚರಿತಕಾರರು ಇವನ್ನು ವೆಂಕಟರಾಮಶಾಸ್ತ್ರಿಯ ಹೆಸರಿನಲ್ಲಿಯೇ ಕಾಣಿಸಿದ್ದಾರೆ.

ಎಂ. ಎ. ರಾಮಾನುಜಯ್ಯಂಗಾರರು ಹೆಸರಿಸಿದ ರಾಮೋದಂತ, ಕೃಷ್ಣೋದಂತ ಕಥೆಗಳೂ ನಾಮಾಂತರಗಳೆಂದು ಅನಿಸುತ್ತದೆ. ಶ್ರೀರಾಮ, ಶ್ರೀಕೃಷ್ಣರ ಕುರಿತು, ಮುಮ್ಮಡಿಯವರ ಹಲವು ಕೃತಿಗಳ ಉಲ್ಲೇಖ ಈಗಾಗಲೇ ಬಂದಿದೆ ಮತ್ತು ಉದಂತ ಪದ ಪ್ರಯೋಗವುಳ್ಳ ಕೃತಿಗಳನ್ನು ಇನ್ನಾರೂ ಹೆಸರಿಸಿಲ್ಲ.

ಪ್ರಚಲಿತವಿರುವ ಕೆಂಪುನಾರಾಯಣ ವಿರಚಿತ–ಮುದ್ರಾಮಂಜೂಷಕ್ಕೂ ಮುಮ್ಮಡಿಯವರ ಹೆಸರಿನಲ್ಲಿರುವ ಮುದ್ರಾಮಂಜೂಷಕ್ಕೂ ಸಂಬಂಧ ಇದೆಯೇ? ಮಂಜೂಷವೆಂಬ ಉತ್ತರ ಪದವು ಕೆಂಪುನಾರಾಯಣನ ಕೃತಿಗೆ ವಿಶಿಷ್ಟವಾದುದು. ಸಂಸ್ಕೃತದಲ್ಲಿ ಈ ಕಥಾವಸ್ತುವನ್ನು ಬೇರೆ ಯಾರೂ ಹಾಗೆ ಕರೆದಂತಿಲ್ಲ. ಮೇಲಾಗಿ ಕೆಂಪುನಾರಾಯಣನು, ಮುಮ್ಮಡಿಯವರ ಆಸ್ಥಾನಿಕನೇ ಆಗಿ ಅವನ್ನು 'ಚಿರಂಜೀವತು ಚಾಮೇಂದ್ರ ತನೂಜ: ಕೃಷ್ಣಭೂಮಿಪ: ಯತ್ಕಟಾಕಾಂಕ್ಷರಸ್ತೋವ: ಕವಿಕಲ್ಪದ್ರುಮಾಯತೇ' ಎಂದು ಹೊಗಳಿದ್ದಾನೆ. ಅಲ್ಲದೆ, ಈ ಕೃತಿಯನ್ನು ಮುಮ್ಮಡಿಯವರ ಹೆಸರಿನಲ್ಲಿ ನಿರ್ದೇಶಿಸಿದ ಒಂದು ಉಲ್ಲೇಖವಷ್ಟೇ ದೊರೆಯುತ್ತಲ್ಲದೆ ಹಸ್ತಪ್ರತಿಯಾಗಲೀ ಮುದ್ರಿತ ಪುಸ್ತಕವಾಗಲೀ ಇಲ್ಲ. ಹೀಗೆ ಮುದ್ರಾಮಂಜೂಷವು ಮುಮ್ಮಡಿಯವರದ್ದು.

ಮೈಸೂರ ಮಹಾರಾಜರ ವಂಶಾವಳಿಯನ್ನು ಅದ್ಯಾವತ್ತಾಗಿ ಬರೆದು ಪ್ರಕಟಿಸಿದ ಬಿ. ರಾಮಕೃಷ್ಣರಾಯರು ತಮ್ಮ ಉಪೋದ್ಘಾತದಲ್ಲಿ ಮುಮ್ಮಡಿಯವರೇ ತಮ್ಮ ವಂಶಚರಿತ್ರೆಯನ್ನು ಬರೆದಿದ್ದಾರೆಂದು ಹೇಳಿದ್ದಾರೆ :

"ಖಾವಂದರವರು (ಅಂದರೆ ಚಾಮರಾಜ ಒಡೆಯರು) ತಮ್ಮ ಪಿತೃವರ್ಯರಾದ ಶ್ರೀಮನ್ಮಹಾರಾಜರು–ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರ ಅವರು ಕನ್ನಡದಲ್ಲಿ ರಚಿಸಿರುವ ಮೈಸೂರು ರಾಜವಂಶದ ಚರಿತ್ರೆಯನ್ನು ಮುದ್ರಿಸಲು ಅಪ್ಪಣೆಯಿತ್ತರು."

ಈ ಹಿಂದೆ ಪ್ರಸ್ತಾಪಿಸಿದ್ದಂತೆ <೫೧೨> ಚಿಕ್ಕದೇವರಾಜ ಕಾಲದಿಂದಲೂ ಮೈಸೂರರಸರ ಚರಿತ್ರೆ ವಂಶಾವಳಿಗಳನ್ನು ಬರೆದಿಡುವ ಕ್ರಮವು ನಡೆದುಕೊಂಡು ಬಂದಿದ್ದಿತು. ಮೆಕೆಂಝಿಯ ಹಸ್ತಪ್ರತಿಗಳ ಸಂಗ್ರಹದಲ್ಲಿ ಇಂಥ ನಾಲ್ಕೈದು ಕೃತಿಗಳ ಉಲ್ಲೇಖವಿದೆ. ಮುಮ್ಮಡಿಯವರ ಆಳ್ವಿಕೆಯ ಮಧ್ಯಕಾಲದ ಹೊತ್ತಿಗೆ ನಗರದ ಪುಟ್ಟಯ್ಯ ಹಾಗೂ ಶ್ಯಾನುಭೋಗ ವೆಂಕಟರಮಣಯ್ಯನವರು ಬರೆದ ವಂಶಾವಳಿಗಳಂತೂ ಸುಪ್ರಸಿದ್ಧವಾಗಿದ್ದುವು. ಕಾರಣ ಈ ಚರಿತ್ರ ಗ್ರಂಥವನ್ನು ಮುಮ್ಮಡಿ ಕೃಷ್ಣರಾಜರು ಪ್ರತ್ಯೇಕವಾಗಿ ಬರೆದದ್ದರ ಸಂಭವ ಕಡಿಮೆ. ಅದರಂತೆಯೇ 'ರಾಜವಂಶ ರತ್ನಪ್ರಭಾ' ಎಂಬ ಗ್ರಂಥವನ್ನು ನಾವು ಬಿಟ್ಟುಕೊಡಬೇಕಾದೀತು. ಏಕೆಂದರೆ, ಇದೇ ಹೆಸರಿನ ಕೃತಿಯನ್ನು ೧೮೩೪ರಲ್ಲಿ ತಮ್ಮಯ್ಯ ಕವಿಯು ರಚಿಸಿದ್ದಾನೆ. ರಾಜರು 'ನಮ್ಮ ವಂಶ ಕ್ರಮವ ಬರೆ' ಎಂದು ಆಜ್ಞಾಪಿಸಿದ್ದರೆಂದೇ ಅದರ ರಚನೆಯಾಯಿತು. ತಮ್ಮಯ್ಯ ಕವಿಯ ಹೆಸರಿನ ಕೃತಿಯು ಹಸ್ತಪ್ರತಿಯ ರೂಪದಲ್ಲಿ ಲಭ್ಯವಿದೆ; ಮುಮ್ಮಡಿಯವರ ಹೆಸರಿನ ಕೃತಿ ದೊರೆಯುತ್ತಿಲ್ಲ.

## ೬.೨೫ ಬಹುಜನ ಕರ್ತೃತ್ವ

ಕವಿಯೊಬ್ಬನ ಗ್ರಂಥಕರ್ತೃತ್ವವನ್ನು ಗೊತ್ತುಪಡಿಸುವುದಕ್ಕೆ ಅವನ ಕೃತಿಗಳ ಭಾಷಾಶೈಲಿಯು ಖಚಿತವಾದ ಪ್ರಮಾಣವಷ್ಟೆ. ಮುಮ್ಮಡಿಯವರ ಅನೇಕ ಗದ್ಯ ಗ್ರಂಥಗಳ ಮುದ್ರಣವು ನಡೆದಾಗ, ಚಾಮರಾಜ ಒಡೆಯರ ಕಾಲದಲ್ಲಿದ್ದ ವಿದ್ವಾಂಸರು ಅವನ್ನು ಚೆನ್ನಾಗಿ ಪರಿಷ್ಕರಿಸಿದುದರ ಪರಿಣಾಮವಾಗಿ ಮೂಲದ ಬರವಣಿಗೆಯು ಮರೆಯಾಗಿಬಿಟ್ಟಿತು. ಕೈಬರೆಹದ ಇನ್ನೂ ಅನೇಕ ಪ್ರತಿಗಳಿವೆಯಷ್ಟೆ. ಪ್ರತಿ ಮಾಡಿದವರ ಅಜ್ಞಾನದಿಂದ ಅನೇಕ ತಪ್ಪುಗಳಾಗಿ, ಆ ಪ್ರಸಂಗದಲ್ಲಿಯೂ ಮೊದಲಿನ ಶೈಲಿಯು ಮಾರ್ಪಟ್ಟಿತು. ಇಂಥ ಭಾಷಾಶೈಲಿಯ ವಿಭಿನ್ನತೆಯನ್ನು ಮನಗಾಣಲು ಈ ಕೆಳಗಿನ ಅವತರಣಿಕೆಗಳು ನೆರವಾಗಬಲ್ಲವು :

'ಬತ್ತೀಸ ಪುತ್ಥಳಿ ಕಥೆ'ಯಿಂದ–"ಬತ್ತೀಶ ಪುತ್ಥಲಿ ಕಥೆ ಬರೆಯುವುದಕ್ಕೆ ನಿರ್ವಿಘ್ನಮಸ್ತು ॥ ಕಾಂಭೋಜ ದೇಶದಲ್ಲಿ ವುಜ್ಜನಿ ಮಹಾಕಾಲಿ । ಯಂಬ ಪಟ್ಟಣದ. . .ವಬ್ಬ ಗೋವಿಂದ । ಭಗವಾನನೆಂಬ ಬ್ರಾಹ್ಮಣನಿದ್ದನು. ಆ ಬ್ರಾಹ್ಮಣಗೆ ಬ್ರಹ್ಮ ಕ್ಷತ್ರಿ ವೈಶ್ಯ ಶೂದ್ರ । ಯಿ ನಾಲ್ಕು ಜಾತಿಯಲ್ಲಿಯು ಮದುವೆಗಳು ಆಗಿ । ನಾಲ್ಕು ಮಂದಿ ಶ್ರೀಯ. . . ಲ್ಲಿಯು । ಪುತ್ರ ಸಂತಾನವಾ ಹೆಸರುಗಳು । ಯೇನು ಯೆಂದರೆ. . ." (ಆರಂಭದ ಪುಟ)

'ಶ್ರೀ ತತ್ತ್ವನಿಧಿ'ಯಿಂದ–"ಈ ಮೇರೆಯಷ್ಟು ಜನಗಳು ಆಡಬೇಕಾದರು ಜನಕ್ಕೆ ಸರಿಯಾಗಿ ಹಂಚಿಕೊಂಡು ೪ ಜನಗಳು ಆಡುವಲ್ಲಿ ಲೀಲಾಶುಕಯಂಬುದಾಗಿ ಬರದಿರುವ ಚಿನ್ನ ಬಣ್ಣದ ಗಿಣಿಯಲೆಗಳನ್ನು ಚಕ್ರವರ್ತಿಯಲೆಗಳಿಗೆ ಶೇರಿಸಿ ೨೯ ಚಕ್ರವರ್ತಿಗಳನ್ನು ಮಾಡಿಕೊಂಡು ಗಿಣಿಯಲೆಯಲ್ಲಿ ಮೋಹಿನಿಯು ಕೂತುಕೊಂಡು ಇಕ್ಷುಚಾಪ ಪುಷ್ಪಶರಗಳಿಂದ ಗರುಡನನ್ನು ಭೇದಿಸುವಂತೆ ಬರದಿರುವ ಯಲೆಯನ್ನು ಅಖ್ಯೆರು ಹುಕುಮಾಗಿ ಯಾರು ಯಳಿಯುತ್ತಾರಯೊ ಅವರ ಆಟಗೆದ್ದು ಮಿಕ್ಕವರ ಆಟ ಖಿಲಾವೆಂಬುದಾಗಿ ಬುದ್ಧಿವಂತರು ನಿಷ್ಕರ್ಷೆಯನ್ನು ಮಾಡಿಕೊಂಡಾಡುವರು." (೯ನೆಯ ನಿಧಿ)

'ಭಾಗವತ ಟೀಕೆ'ಯಿಂದ–"ಲೋಕದಲ್ಲಿ ಪುರುಷನು ಪ್ರತ್ಯಕ್ಷ ದೃಷ್ಟಗಳಾದ ರಾಜದಂಡನಾದಿಗಳಿಂದ ಪುರಾಣಾದಿಗಳಲ್ಲಿ ಬಹು ಪ್ರಕಾರವಾಗಿ ಶೃತಂಗಳಾದ ನರಕಾದಿಗಳಿಂದಲೂ ತನಿಗೆ ಪಾಪವನ್ನು ಅಹಿತವೆಂದು ತಿಳಿಯತಲಿರುವವನಾದಾಗ್ಯೂ ಪ್ರಾಯಶ್ಚಿತ್ತಾನಂತರದಲ್ಲಿ ಪರವಶನಾಗಿ ಪಾಪಗಳನ್ನಾಚರಿಸುತಲಿಧಾನೆಯಾದ ಕಾರಣ ಪ್ರಾಯಶ್ಚಿತ್ತದಿಂದ ಸಮೂಲವಾಗಿ ಪಾಪನಿವೃತ್ತಿಯಾಗದಿರೋಣದರಿಂದ ಪ್ರಾಯಶ್ಚಿತ್ತವು ನಿಷ್ಫಲವೆಂದು ತಿಳಿಯುತಲಿಧೇನೆ." (ಷಷ್ಠಸ್ಕಂಧ–ಪು. ೨)

ಪದ್ಯರಚನೆಯಲ್ಲಿಯೂ ಇದೇ ತೆರನಾದ ಹೆಚ್ಚು ಕಡಿಮೆಯು ಕಂಡುಬರುತ್ತದೆ.

ಈ ಕಾರಣದಿಂದಾಗಿ, ಭಾಷಾಶೈಲಿಯ ಅಂತಸ್ಥ ಪ್ರಮಾಣವನ್ನು ಬದಿಗಿರಿಸಬೇಕಾಗುತ್ತದೆ. ವೈವಿಧ್ಯಮಯ ಶೈಲಿಯಿಂದಾಗಿ, ಬೇರೆ ಬೇರೆ ಜನರು ಈ ಗ್ರಂಥ ಸಮುದಾಯವನ್ನು ನಿರ್ಮಿಸಿರಬೇಹುದೆಂಬ ಅನುಮಾನವನ್ನು ಅದು ದೃಢೀಕರಿಸುತ್ತದೆ.

ಜೊತೆಗೆ ಅಂಕಿತ ಗದ್ಯ-ಪದ್ಯದ ವೈವಿಧ್ಯವೂ ಭಿನ್ನ ಕರ್ತೃತ್ವದ ಬಗ್ಗೆ ಪುಷ್ಟಿಯನ್ನೀಯುವಂತಿದೆ. 'ಅಧ್ಯಾತ್ಮರಾಮಾಯಣ ಟೀಕಾ' ಗದ್ಯ ಮತ್ತು ಬೇರೆ ಒಂದೆರಡು ಕಡೆಗಳಲ್ಲಿ "ಅಮುನಾಕಿಲ ಲೋಕರಂಜನಾರ್ಥಂ । ನಯನಾನಂದಕರೇಣ ಕೃಷ್ಣ ನಾಮ್ನಾ । ಯದುನಾಥ ವರೇಣ ನಿರ್ಮಿತೇಯಂ ವರ ಕರ್ಣಾಟಕ ಭಾಷಯಾದ್ಯ ಜೀಯಾತ್" ಎಂಬ ಶ್ಲೋಕ ಬರುತ್ತದೆ. ಕೃಷ್ಣ ಕಥಾರತ್ನಾಕರ ಹಾಗೂ ರಾಮಕಥಾ ಕಲ್ಪವೃಕ್ಷಗಳ ಕರ್ತೃತ್ವದ ಉಲ್ಲೇಖವು ಶ್ರೀ ಕೃಷ್ಣರಾಜ ಮಹಾರಾಜರಿಂದ ಇಂಥ ಶಕೆ, ತಿಥಿ, ವಾರದಂದು ವಿರಚಿತವಾಯ್ತೆಂದು ಸ್ವಲ್ಪದರಲ್ಲಿ ಬಂದುದಾದರೆ, 'ಮಹಾ ಭಾರತ', "ಭಾಗವತ ಟೀಕಾ' ಗ್ರಂಥ, 'ಸೌಗಂಧಿಕಾಪರಿಣಯ', 'ವತ್ಸರಾಜನ ಕಥೆ' ಮುಂತಾದವುಗಳ ಕೊನೆಯಲ್ಲಿ ರಾಜರ ಬಿರುದಾವಳಿಗಳನ್ನೊಳಗೊಂಡ, ಆದರೆ ಒಂದಕ್ಕಿಂತ ಇನ್ನೊಂದು ಭಿನ್ನವಾದ, ಸುದೀರ್ಘ ಗದ್ಯವಿದೆ :

"ಚಂಡಕರಮಂಡಲೋಚ್ಚಂಡ ತೇಜಃ ಪ್ರಕಾಂಡ.. . ಕವಿತಾವಧೂರತ್ನ ರಾಜಾಧಿರಾಜ ಚಾಮರಾಜ ಪುತ್ರಾತ್ರೇಯ ಸಗೋತ್ರ ಪವಿತ್ರ ಚರಿತ್ರ ಕೆಂಪನಂಜಮಾಂಬಾ ಗರ್ಭಕ್ಷೀರ ಪಾರಾವಾರ ರಾಕಾಸುಧಾಕರಾಯಮಾನ. . .ಮಹೀಶೂರ ಮಹಾ ಸಂಸ್ಥಾನ ಮಧ್ಯದೇದೀಪ್ಯಮಾನ...... ಕುಲಕ್ರಮಾಗತ ದಿವ್ಯರತ್ನ ಸಿಂಹಾಸನಾರೂಢ ಉಭಯಕವಿತಾಚಕ್ಷಣ ಶ್ರೀಕೃಷ್ಣರಾಜಕಂಠೀರವರು ಲೋಕೋಪದಾರ್ಥವಾಗಿ ಸರಸಜನಾನಂದಕರಮಾಗಿ ನವರಸಭರಿತಮಾಗಿ ವಿರಚಿಸಿದ....... (ವತ್ಸರಾಜನ ಕಥೆ: ಶಾಕುಂತಲನಾಟಕ ನವೀನ ಟೀಕೆ)

"ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ... . . .ಕಂಠೀರವಾದ್ಯನೇಕ ಬಿರುದಾಂಕಿತರಾಗಿ ಮಹೀಶೂರ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನಿ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀ ಚಾಮುಂಡಿಕಾವರ ಪ್ರಸಾದೋದ್ಭವರಾದ ಶ್ರೀಕೃಷ್ಣರಾಜ ಒಡೆಯರವರಿಂದ ಬುಧಜನ ಸಮ್ಮತಿಯಿಂದ ರಚಿಸಲ್ಪಟ್ಟ. . ." (ಭಾಗವತದ ಟೀಕು ; ಅಖಂಡ ಕಾವೇರಿ ಮಹಾತ್ಮ್ಯ ಇ.)

"ಕುಂಡಲಶಯ ಖಂಡಪರಶು ಪುಂಡರೀಕ ಭೂಮಂಡಲ ಪ್ರಮುಖ. . . ಸಕಲ ಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸ ಕವಿತಾ ನಿಸ್ಸಹಾಯ ನಿರ್ಮಾಣ ಧೌರೇ ಘಟಿಕಾಶತಗ್ರಂಥಿ ದಿನದಿನ ಪ್ರಬಂಧ ನಿಬಂಧನ ದುರಂಧರ. . . ತ್ರಿಭುವನ

ಪವಿತ್ರಾತ್ರೇಯ ಸಗೋತ್ರಾಶ್ವಲಾಯನ ಸೂತ್ರ ಸುಚರಿತ್ರ ಚಾಮರಾಜ ಮಹಾರಾಜ ಪುತ್ರ ನರಪಿತ ಬಿರುದ ಮಹೀಶೂರ ಪುರವರಾಧೀಶ ಶ್ರೀ ಕೃಷ್ಣರಾಜ ಒಡೆಯರವರಿಂದ . . . ." (ಸೌಗಂಧಿಕಾ ಪರಿಣಯ)

ಮುಮ್ಮಡಿ ಕೃಷ್ಣರಾಜರ ವಿವಿಧ ಕೃತಿಗಳಿಗೆ ಕೊಡಲಾದ ಉಪಶೀರ್ಷಿಕೆಗಳೂ ಈ ಗ್ರಂಥಸಮೂಹದ ಬಹುಜನ ಕರ್ತೃತ್ವವನ್ನು ಸಮರ್ಥಿಸುವಂತಿದೆ. ಅವರ ಹೆಚ್ಚಿನ ಕೃತಿಗಳಿಗೆ ಕೃಷ್ಣರಾಜ ವಾಣೀವಿಲಾಸವೆಂಬ ನಾಮಧೇಯವಿದೆ (ಭಾಗವತ, ಮಹಾಭಾರತ, ಶಂಕರಸಂಹಿತೆ, ಭಗವದ್ಗೀತೆ, ಯಯಾತಿಚರಿತ್ರೆ, ದೇವಿಮಹಾತ್ಮೆ, ಅರ್ಕಪುಷ್ಕರಿಣೀ ಮತ್ತು ಅಖಂಡ ಕಾವೇರಿಮಹಾತ್ಮೆಗಳು ಇ). ಅದೇ ಕಾಳಿದಾಸನ ನಾಟಕತ್ರಯದ ಗದ್ಯಾನುವಾದವನ್ನು 'ಕೃಷ್ಣರಾಜ ವಾಣೀವಿಲಾಸ ರತ್ನಾಕರ'ವೆಂದು ವಿಶೇಷಿಸಲಾಯಿತು. ಇನ್ನೊಂದು ನಾಟಕ– ಗದ್ಯಾನುವಾದವೆನಿಸಿದ 'ವತ್ಸರಾಜನ ಕಥೆ'ಯು ಮಾತ್ರ 'ಸೂಕ್ತಿಮುಕ್ತಾವಳಿ' ಎಂಬ ಬೇರೊಂದು ಅಭಿಧಾನವನ್ನು ಹೊಂದಿತು.

'ಸೌಗಂಧಿಕಾಪರಿಣಯ ನಾಟಕ' ಮತ್ತು ಎರಡು ವ್ರತಕಥೆಗಳ ವಿಚಾರದಲ್ಲಿ ಆಸ್ಥಾನಿಕರು 'ತಾವಾಗಿ' ರಚಿಸಿದ ಕೃತಿಗಳನ್ನು ಮುಮ್ಮಡಿಯವರಿಗೆ ಅರ್ಪಣೆ ಮಾಡಿ, ಅವರನ್ನೇ ಗ್ರಂಥಕರ್ತರೆಂದು ಹೇಳಿದ ಬಗೆಯನ್ನು ನೋಡಿದೆವು.* ಇನ್ನು ಕೃಷ್ಣರಾಜರೇ ಕೃತಿಯೊಂದರ ವಿಚಾರದಲ್ಲಿ ಆಸ್ಥೆ ವಹಿಸಿ, ತಮ್ಮಲ್ಲಿಯ ಪಂಡಿತರಿಗೆ ಅದನ್ನು ಬರೆಯ ಹೇಳಿದ ಸಂದರ್ಭಗಳೂ ದೊರೆಯುತ್ತವೆ. ಉದಾಹರಣೆಗೆ 'ಬುಧ ಜನಸಮ್ಮತಿಯಿಂದ ಭಾಗವತದ ಟೀಕು' ರಚಿತವಾಯ್ತೆಂಬುದನ್ನು ನೋಡಿದ್ದೇವೆ.

ಕ್ರಿ. ಶ. ೧೮೮೦ ನೆಯ ದಶಕದಲ್ಲಿ ಮುದ್ರಿತವಾದ 'ಮಹಾಭಾರತ ಟೀಕೆ'ಯ ಉಪೋದ್ಘಾತದಲ್ಲಿ "ಶ್ರೀಮತ್ಕೃಷ್ಣರಾಜ ಒಡೆಯರ್ ಬಹದ್ದೂರವರು ಪುರಾತನವಾದ ಮಹಾಭಾರತದ ಪುಸ್ತಕಗಳಲ್ಲಿರುವಂತೆ ಅದರ ಅಭಿಪ್ರಾಯವನ್ನು ಲೇಶಮಾತ್ರವೂ ಇಡದೆ 'ವಿದ್ವಾಂಸರ ಸಹಾಯದಿಂದ' ಕರ್ನಾಟಕ ಭಾಷೆಯಲ್ಲಿ ಟೀಕಿಸಿ. . ." ಎಂದು ಹೇಳಲಾಗಿದೆ. ಇಂತು ರಾಜರ ಗ್ರಂಥರಚನಾ ಕಾರ್ಯದಲ್ಲಿ ಆಸ್ಥಾನ ವಿದ್ವಾಂಸರ ಅಂಗವಿರುತ್ತಿತ್ತೆಂಬುದು ಸ್ಪಷ್ಟವಿದೆ. ಇದನ್ನೆಲ್ಲ ಗಮನಿಸಿಯೇ ಕವಿಚರಿತಕಾರರು 'ಈ ಗ್ರಂಥಗಳಲ್ಲಿ ಹಲವನ್ನು ಆಸ್ಥಾನ ಪಂಡಿತರುಗಳಿಗೆ ಸೂಚನೆಗಳನ್ನು ಕೊಟ್ಟು ಬರೆಸಿರಬಹುದು' ಎಂಬ ನಿಲುಮೆಯನ್ನು ತಳೆದರೆಂದು ನಮಗೆ ತೋರುತ್ತದೆ.*

ಆದರೆ ಮುಮ್ಮಡಿಯವರು ಸ್ವತಃ ಗ್ರಂಥಗಳನ್ನು ರಚಿಸಿದುದು ನಿಶ್ಚಯ. ಜೊತೆಗೆ ಇತರ ಗ್ರಂಥಗಳೂ ಸೇರಿವೆ. ಇತ್ತ ಆಸ್ಥಾನಿಕರು ತಾವಾಗಿ ಅವರಿಗೆ ಅಂಕಿತಗೊಳಿಸಿದ ಕೃತಿಗಳೂ ಜೊತೆಗೂಡಿ ಮೇಲ್ಕಂಡ ಗ್ರಂಥ ಸಮುದಾಯವು ನಿರ್ಮಾಣವಾಗಿದೆ. ಇವು ಮೂರು ಪ್ರಕಾರಗಳನ್ನು ಎಷ್ಟರ ಮಟ್ಟಿಗೆ ವಿಂಗಡಿಸುವುದು ಸಾಧ್ಯವೆಂಬುದನ್ನು ನೋಡೋಣ.

## ೬.೩ ಕೃತಿ ಸಮೀಕ್ಷೆ

### ೬.೩.೧ ದೇವತಾ ಸ್ತುತಿ, ಶಾಸ್ತ್ರ ಗ್ರಂಥಗಳು

ದೇವತಾ ಸ್ತುತಿ ವಿಭಾಗದ ಕೃತಿಗಳು ಸಂಸ್ಕೃತದಲ್ಲಿವೆಯಷ್ಟೇ. ಮುಮ್ಮಡಿ ಕೃಷ್ಣರಾಜರು ಸಂಸ್ಕೃತವನ್ನು ಚೆನ್ನಾಗಿ ಅರಿತಿದ್ದರು. ತರುಣ ವಯದಲ್ಲಿಯೆ ಪ್ರಕಟವಾದ ಅವರ ದೈವಭಕ್ತಿ, ಧರ್ಮಶ್ರದ್ಧೆಗಳಂತೂ ಸುಪ್ರಸಿದ್ಧ. ಕಾರಣ, ಅವರು ದೇವತಾ ಸ್ತುತಿಗಳನ್ನು ರಚಿಸಿದುದರಲ್ಲಿ ಅಸಂಭವನೀಯತೆ ಇಲ್ಲ. ಚಾಮುಂಡೇಶ್ವರಿಯು ಅವರ ಕುಲದೇವತೆ. ಅವಳ ಸ್ತುತಿ ರೂಪದ ಶ್ಲೋಕಗಳನ್ನು ಅವರೇ ರಚಿಸಿರಬೇಕು. ಆ ಕುರಿತು ಸಂತಾನಾಂಬುಜ, ಮತ್ತಿತರ ಆಕರಗಳಲ್ಲಿ ಸ್ಪಷ್ಟ ಉಲ್ಲೇಖವೇ ಇದೆ. ನಕ್ಷತ್ರಮಾಲಿಕೆ ಎಂಬ ಚಿನ್ನದ ಹಾರದ ಪದಕಗಳಲ್ಲಿ ಕೆತ್ತಿಸಿ, ಚಾಮುಂಡೇಶ್ವರಿ ಮತ್ತು ಶ್ರೀಕಂಠೇಶ್ವರಸ್ವಾಮಿ (ನಂಜನಗೂಡು) ಇವರಿಗೆ ಅರ್ಪಿಸಲಾಯಿತು. ಶ್ರೀಮನ್ಮಹಾರಾಜರ ವಂಶಾವಳಿಯುಲ್ಲಿಂಯೂ ಮುಮ್ಮಡಿಯವರೇ ಅಷ್ಟೋತ್ತರ ನಾಮಗಳ ಕರ್ತೃ ಎಂಬುದಾಗಿ ಸ್ಪಷ್ಟವಾಗಿ ಉಕ್ತವಾಗಿದೆ.

ಕ್ರಿ.ಶ. ೧೮೩೬ರಷ್ಟು ಹಿಂದೆ ರಚಿತವಾದ 'ಚಾಮುಂಡಾ ಲಘು ನಿಘಂಟು' ೧೫೨ ಶ್ಲೋಕಗಳ ಪ್ರತ್ಯೇಕವಾದ ಕೃತಿ. ಅದರಲ್ಲಿ ದೇವತೆಗಳು ಧರಿಸುವ ಆಯುಧಗಳು, ಅವರ ವಾಹನ ಮೃಗ, ಇತ್ಯಾದಿಗಳ ನಾಮಾವಳಿ ಇದೆ. ಈ ಕೃತಿಯ ಆರಂಭ ಅಥವಾ ಅಂತ್ಯದಲ್ಲಿ ಮುಮ್ಮಡಿಯವರ ವೈಭವಯುಕ್ತ ಗದ್ಯವಿಲ್ಲ. ಅದಕ್ಕೆ ಕನ್ನಡದಲ್ಲಿ ಟೀಕೆಯೂ ಇದೆ. ಮೂಲಕೃತಿಯನ್ನು ಮುಮ್ಮಡಿಯವರೇ ರಚಿಸಿದ್ದು ಟೀಕೆಯನ್ನು ಕಾಕರ್ಲ ಜೋಸ್ಯನೆಂಬವನು ಕ್ರಿ.ಶ. ೧೮೪೪ರಲ್ಲಿ ಬರೆದಂತೆ (ಪ್ರತಿ ಮಾಡಿದಂತೆ) ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಕಾಗದದ ಹಸ್ತ ಪ್ರತಿಯಲ್ಲಿ (ಕೆ.ಎ.೨೬/೨) ಉಲ್ಲೇಖವಾಗಿದೆ.

ಶಾಸ್ತ್ರ ವಿಷಯಕ ಗ್ರಂಥಗಳಲ್ಲಿ ಅನೇಕವು ಸಂಸ್ಕೃತ ಭಾಷೆಯಲ್ಲಿ ಇವೆ. ಅವುಗಳಲ್ಲಿ 'ಶ್ರೀ ತತ್ತ್ವನಿಧಿ'ಯು ವಿಶೇಷ ಮಹತ್ವದ್ದು. ಕ್ರಿ.ಶ. ೧೮೨೩ರಲ್ಲಿ ರಚಿತವಾದ ಆ ಕೃತಿಯು, ಅವರ ಮರಣಾನಂತರ ಅದು ಹೇಗೋ ಮುಂಬಯಿ ತಲುಪಿ, ಅಲ್ಲಿ ಮುದ್ರಣ ಹೊಂದಿತು. ಇದರಲ್ಲಿ ಶಕ್ತಿ, ವಿಷ್ಣು, ಶಿವ, ಬ್ರಹ್ಮ, ಗ್ರಹ ನಕ್ಷತ್ರ, ವೈಷ್ಣವ, ಶೈವ, ಆಗಮ, ಮತ್ತು ಕೌತುಕ ಎಂಬ ಒಂಬತ್ತು 'ನಿಧಿ' ಗಳಿವೆ. ಹಿಂದೂ ಧರ್ಮಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ಸಂಕಲನ ಕೋಶವಿದು. ಮೊದಲಿನ ನಾಲ್ಕು ನಿಧಿಗಳಲ್ಲಿ ಹಲವು

---

* ಅರಮನೆ. ಇತರ ಕಡೆಗಳಲ್ಲಿದ್ದ ಪ್ರತಿಗಳನ್ನು ಪರಿಶೀಲಿಸಿದುದಾಗಿ ಹೇಳಿ, ನಂಜನಗೂಡು ಕರ್ನಾಟಕ ಸಂಘದ ಅಧ್ಯಕ್ಷರು ತಮ್ಮ 'ಪಾರ್ವತೀ ಭಕ್ತಿಸಾರ' ಪ್ರಕಟನೆಯಲ್ಲಿ ಹೀಗೆ ಹೇಳುತ್ತಾರೆ: "ಈ ಪ್ರಭುಗಳ ಅಂಕಿತದಲ್ಲಿ ಗ್ರಂಥರಚನೆ ಮಾಡಿ ಸನ್ನಿಧಿಯಲ್ಲಿ ಹಲವು ವಿದ್ವಾಂಸರುಗಳು ಒಪ್ಪಿಸಿ ಬಹುಮಾನಗಳನ್ನು ಪಡೆದಿದ್ದಾರೆ. ಈ ಮಹಾಪ್ರಭುವಿನ ಹೆಸರಿನಲ್ಲಿರುವ ಗ್ರಂಥಗಳನ್ನು ಸ್ವಲ್ಪ ಸೂಕ್ಷ್ಮವಾಗಿ ಪರಿಶೀಲಿಸಿದಲ್ಲದೆ ಎಲ್ಲ ಗ್ರಂಥಗಳಿಗೆ ಸ್ವಯಂ ಕರ್ತೃತ್ವವನ್ನು ಪ್ರಭುಗಳ ಕುತ್ತಿಗೆಗೆ ಕಟ್ಟಲು ಸ್ವಲ್ಪ ಹಿಂಜರಿಯಬೇಕಾಮದೇ."

ದೇವತೆಗಳ ಸ್ತೋತ್ರಗಳಿದ್ದು ಗ್ರಹನಿಧಿಯಲ್ಲಿ ಸೂರ್ಯಚಂದ್ರಾದಿ ಗ್ರಹಗಳು ಮತ್ತು ಜ್ಯೋತಿಷ ವಿಚಾರಗಳು ವರ್ಣಿತವಾಗಿವೆ. ನವನಿಧಿಗಳಲ್ಲಿ ಇದುವೆ ದೊಡ್ಡದಾಗಿದ್ದು ಖಗೋಳ – ಜ್ಯೋತಿಷ ಶಾಸ್ತ್ರಗಳಲ್ಲಿ ಮುಮ್ಮಡಿಯವರಿಗಿದ್ದ ಒಲವನ್ನು ತೋರ್ಪಡಿಸುತ್ತದೆ. ವೈಷ್ಣವ ನಿಧಿಯಲ್ಲಿ – ರಾಮಾನುಜೀಯ ಪಂಥ ಮತ್ತು ಆಳ್ವಾರರ ವಿಚಾರ ಬಂದಿದ್ದರೆ ಶೈವನಿಧಿಯಲ್ಲಿ ಲಿಂಗಪೂಜೆ, ಶೈವಕ್ಷೇತ್ರ ಇವುಗಳನ್ನು ವಿವರಿಸಲಾಗಿದೆ. ಆಗಮ ನಿಧಿಯಲ್ಲಿ ಪುರಾಣಗಳ ಪ್ರಸ್ತಾಪವಿದೆ.

ಕೊನೆಯದಾದ ಕೌತುಕನಿಧಿಯು ನಿಜವಾಗಿಯೂ ಕೌತುಕಪ್ರದವಾದುದು. ಅದರಲ್ಲಿ ಗಂಜೀಫು ಮುಂತಾದ ಆಟಗಳ (ಭದ್ರಾಕ್ಷಾದಿ ನಾನಾ ಕೌತುಕಾವಹ ಕ್ರೀಡಾದಯಃ) ವರ್ಣನೆ ಇದ್ದು ಅಪೂರ್ವವೆನಿಸಿದೆ. ಉಳಿದ ಎಂಟು ನಿಧಿಗಳ ಶ್ಲೋಕಗಳು ಬೇರೆ ಬೇರೆ ಪುರಾಣ, ಶಾಸ್ತ್ರ ಗ್ರಂಥಗಳಿಂದ ಎತ್ತಿಕೊಂಡವುಗಳು. ಆದರೆ ಕೌತುಕ ನಿಧಿಯ ಪದ್ಯಗಳು ಮತ್ತು ಅದರಲ್ಲಿನ ವಿಚಾರಗಳು ಸಂಸ್ಕೃತ ಸಾಹಿತ್ಯಕ್ಕೆಯೆ ಅಪೂರ್ವವಾಗಿವೆ. ಹೊಸ ಯುಗದ ಛಾಯೆ ಅವುಗಳ ಮೇಲೆ ಬಿದ್ದಿದೆ. ಅದರಲ್ಲಿ ಒಟ್ಟು ೩೨ ಕ್ರೀಡೆಗಳ ಉಲ್ಲೇಖವಿದ್ದು ೧೬ ಗಂಜೀಫಿನ ಆಟಗಳ ಮತ್ತು ೭ ಪಗಡೆಯ ಆಟಗಳ ಪ್ರಕಾರಗಳನ್ನು ಮುಖ್ಯವಾಗಿ ಕಾಣುತ್ತೇವೆ. ಪ್ರತಿಯೊಂದಕ್ಕೂ ವಿವಿಧ ದೇವತೆಗಳ ಹೆಸರುಗಳಿವೆ. ಒಂದು ಆಟಕ್ಕೆ ಕೃಷ್ಣರಾಜರ ಹೆಸರನ್ನೆ ಇಟ್ಟಿದೆ. ಒಂದೊಂದು ಆಟವನ್ನು ವಿವರಿಸಿಯಾದ ಮೇಲೆ, ಕೊನೆಯಲ್ಲಿ ಅದು ಕೃಷ್ಣರಾಜ ನಿರ್ಮಿತವೆಂದು ಹೇಳಿ, ಅದರ ನಿರ್ಮಾಣ ಕಾಲವನ್ನೂ ಕೊಡಲಾಗಿದೆ. *

ಮಹತ್ವದ ಮಾತೆಂದರೆ ಇಡೀ ಗ್ರಂಥವು ಸಂಸ್ಕೃತ ಶ್ಲೋಕ, ಗದ್ಯಗಳಲ್ಲಿ ಇದ್ದರೂ ಆಗಮನಿಧಿಯ ಕೊನೆಯ ಭಾಗಕ್ಕೆ (ಸ್ತ್ರೀ, ಶೂದ್ರರಿಗೆ ಉಪದೇಶ ಪ್ರಸಂಗ) ಮತ್ತು ಕೌತುಕನಿಧಿಯ ಎಲ್ಲ ಶ್ಲೋಕಗಳಿಗೆ ಕನ್ನಡದಲ್ಲಿ ಟೀಕೆ ಇದೆ. ಇದು ಮುಮ್ಮಡಿ ಕೃಷ್ಣರಾಜರ ಆರಂಭಕಾಲದ ಕನ್ನಡ ಬರವಣಿಗೆಯಾದ್ದರಿಂದ ಇದರ ಸ್ವರೂಪವನ್ನು ನಾವು ಅವಶ್ಯವಾಗಿ ಗಮನಿಸತಕ್ಕುದು.

ಸ್ತ್ರೀ ಶೂದ್ರಾದೀನಾಮ್ ಉಪದೇಶ ಕ್ರಮಃ
ಉತ್ತಮಃ ಪಂಚಧಾಪ್ರೋಕ್ತೋ ಗುರುರ್ಬ್ರಹ್ಮಾತ್ಮದರ್ಶಿಭಿಃ ।
ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥಶ್ಚ ಭಿಕ್ಷುಕಃ ॥

---

* ಮಾದರಿಯೆಂದು ಚಾಮುಂಡಾ ಪೇಟಿಕಾದ ಶ್ಲೋಕವನ್ನು ಗಮನಿಸಬಹುದು.
ಸಾಮಾನ್ಯಾಂಶಾ ಏವ ಮೇವೇತ್ಯವಧಾರ್ಯಂ ನ ಚಾನ್ಯಥಾ ॥
ಶ್ರೀ ಚಾಮುಂಡಾ ಕೃಪಾಲಬ್ಧ ಲಕ್ಷ್ಮೀವಾಣೀ ಸಮೃದ್ಧಿ ನಾ ॥೨೯॥
ಶಕೇ ಶಾಲೀವಾಹನಸ್ಯಂ ಫರೇಂದು ಮಿತೇ ಶುಭೇ ॥
ಆಷಾಢೇ–ಚಿತ್ರಭಾನೋಸ್ತು ಶುಕ್ಲೈಕಾದಶಕೇ ರವೌ ॥೩೦॥
ಕೃಷ್ಣರಾಜ ಮಹೇಂದ್ರೇಣ ಚಾಮುಂಡಾ ಪೇಟಿಕಾ ಕೃತಾ ॥ (ತತ್ವನಿಧಿ ಪು. ೩೬೩)

ಅತಿವರ್ಣಾಶ್ರಮೀ ತೇಷು ಕ್ರಮಾಚ್ಛ್ರೇಷ್ಠಾ ವಿಚಕ್ಷಣಾಃ ॥
ಅಶ್ರೇಷ್ಠಾನಾಂ ಹರೇ ಶ್ರೇಷ್ಠ ಗುರುವಃ ಪರಿಕೀರ್ತಿತಾಃ ॥

ಟೀಕು:- ತಂತ್ರಸಾರೋಕ್ತವಾದ ಉಪದೇಶಪಟಲದಲ್ಲಿ ಬ್ರಹ್ಮವೇತ್ತರುಗಳಿಂದ ಹೇಳಲ್ಪಟ್ಟಿರುವುದು ಏನೆಂದರೆ ಬ್ರಹ್ಮಚಾರಿಯು, ಗೃಹಸ್ಥನು, ವಾನಪ್ರಸ್ಥನು, ಯತಿಯು ವರ್ಣಾಶ್ರಮಾತೀತನಾದ ಅವಧೂತ ಯೋಗಿಯು ಯಿ ಐದು ಜನರು ಯೋಗ್ಯರಾಗಿದ್ದರೆ ವಬ್ಬರಿಗಿಂತ ವಬ್ಬರು ಶ್ರೇಷ್ಠರಾದ ಗುರುವೆನಿಸುವರು. ಯಲೈ ವಿಷ್ಣುವೆ. ತಮಗೆ ಯೋಗ್ಯತೆ ಕಡಿಮೆಯಾಗಿದ್ದರೆ ತಮಗಿಂತ ಶ್ರೇಷ್ಠರು ಕ್ರಮವಾಗಿ ಗುರುಗಳೆನಿಸಿಕೊಳ್ಳುವರು. ಅದು ಹ್ಯಾಗೆಂದರೆ ॥೨॥.........."

ಆಟಗಳ ಮೇಲಿನ ಕನ್ನಡ ಟೀಕೆಯ ಒಂದು ಅವತರಣಿಕೆಯನ್ನು ಬೇರೆ ಸಂದರ್ಭದಲ್ಲಿ <೬೫> ಕೊಟ್ಟಿದ್ದೇವೆ. ಅವುಗಳ ಗದ್ಯ ಟೀಕೆಯಲ್ಲದೆ ದೇವೀ ಸಾಯುಜ್ಯ ಮುಕ್ತಿ ಚಿತ್ರಪಟದ ಆಟಕ್ಕೆ ಕನ್ನಡದಲ್ಲಿ ಪದ್ಯರೂಪವಾದ ಟೀಕೆಯೂ ಇದೆ. ಈ ಆಟದ ಪಟದಲ್ಲಿ ೨೩೬ 'ಮನೆ'ಗಳಿದ್ದು, ಪ್ರತಿಯೊಂದಕ್ಕೂ ಹೆಸರಿದೆ-ಶೂಲನರಕದಿಂದ ಆರಂಭಿಸಿ ದೇವೀ ಸಾಯುಜ್ಯದವರೆಗೆ. ಅವನ್ನೇ ಕನ್ನಡ ಸೀಸ ಪದ್ಯಗಳಲ್ಲಿ (ಒಟ್ಟಿಗೆ ೪೮) ಕೊಡಲಾಗಿದೆ. ಕೆಲವು ಮಾದರಿಗಳನ್ನು ನೋಡಬಹುದು :-

ಕಂದ॥ ಶ್ರೀವರ ಕೃಷ್ಣಧರಾಧಿಪ
ಪಾವನ ಸದ್ಧರ್ಮ ಕರ್ಮಫಲಗಳ ಪರಿಯಮ್
ನೀವಿವರಿಪುದೆನೆ ಸುಜನರು
ದೇವಿಯ ಸಾಯುಜ್ಯವೆಂಬ ಕ್ರೀಡೆಯ ರಚಿಪಮ್ ॥
ಕಾರಣ ನೂರಾರಿರುವವು
ನೂರಾರು ಕಾರ್ಯಗಳಲ್ಲದಿಪ್ಪತ್ನಾಲ್ಕು
ತೋರುವ ಸದ್ಗುರು ಮೊದಲಾ
ಗಾರಿಸಲಿನ್ನೂರ ಮೂವತ್ತಾರೆ ಮನೆಗಳೂ ॥ ೧ ॥

ಸೀಸ॥ ವಂದರಿಂಧದಿನ್ನೈದು ಹೊಂದಿರುವ ಮನೆಗಳಲ್ಲಿ
ನಿಂದ ಕಾರ್ಯ ಕಾರಣವಿಂದು ಪೇಳುವೆ ॥
ವರಗುರು ದ್ರೋಹಿಗೆ ಬರುವುದಾಗಲೆ ಶೂಲ
ನರಕವನ್ನೃತವನಾಡೆ ನರಕ ಕ್ರಿಮಿಯು ॥ ೨ ॥

ಭೂತದಯೆ ಇಲ್ಲದೆಡೆ ಮುರುಡ ಶಿಲೆಯಾಗುವನು
ನಿದ್ರೆಯನು ಗೆಡೆಸಿದಡೆ ತಿಗಣೆಯಹನು ॥ ೬ ॥

ಅವಿವೇಕದಲಿ ಮುಳುಗೆ ಕಪ್ಪೆಯಾಗುವ
ಚಾಡಿ ಹೇಳಿ ಜೀವಿಸೆ ಮತ್ಸ್ಯನಿವನೆ ॥
ಯಹನು ಮದುವೆ ಕಂಟಕ ಬೆಕ್ಕು, ಚದುರೆ.
ವಂಚನೆಯಿಂದ ಬದುಕೆ ನರಿಯಾಗುವನು
ಮತಿಯ ನೀಗಿ ಬದುಕೆ ಬಹುದಿನ ಗೂಬೆ ॥ ೧೪ ॥

ಶಾಲಿವಾಹನ ಶಕವು ಸಾವಿರದ ಯೇಳುನೂರ
ನಲ್ವತ್ತ ಐದಕ್ಕೆ ಸಲವ ಚಿತ್ರಭಾನು ಸಂವತ್ಸರದ
ಪಡದ ಚೈತ್ರ ಶುದ್ಧ ಪಂಚಮಿಯು ಬುಧವಾರ
ರಂಜಿಸುವ ಶುಭವಾದ ದಿವಸದಲ್ಲಿ ಸಭೆಯವರು ॥ ೪೭ ॥

ಮೆಚ್ಚುವಾ ಪರಿಯಿಂದ ಧರೆಯಲಿ ಇರುವ ನರರು
ನಾರಿಯರು ಸನ್ಮಾರ್ಗವರಿವಂತೆ ಶ್ರೀಕೃಷ್ಣಧರಣೀಂದ್ರ
ರಚಿಸಿರುವ ಸರಸವಾದ ಶ್ರೀದೇವಿ ಸಾಯುಜ್ಯವೆಂಬು-
ವಾಟವಾ ಚಂದ್ರತಾರಕ ಮಾಗರಿತು ನೋಡಿ ॥
ಸತತ ಸಂತೋಷದಿಂದಾಡಿ ನೀವು ಸುಖದಲಾಡಿದ
ಜನಕೆ ಶುಭವು ವಹುದು ॥ ೪೮ ॥

ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾದ ಪದ್ಯಮಾಲಿಕೆಯಿದು; ಭಾಷೆಯು ಗ್ರಾಮ್ಯವಾಗಿರುವ ಆಕ್ಷೇಪಣೆ ಅಂತಿರಲಿ, ಇದರ ಪದ್ಯ ರಚನೆಯೇ ಅತ್ಯಂತ ವಿಷಮವಾಗಿದೆ. ಸಾಲುಗಳು ಎಲ್ಲಿಗೆ ಮುಗಿಯುತ್ತವೆಂಬುದು ತಿಳಿಯುವಂತಿಲ್ಲ. ಮಾತ್ರೆಗಳ ಲೆಕ್ಕಾಚಾರವೇ ಹೊರಟುಹೋಗಿದೆ. ಹಳಗನ್ನಡ ಪದ್ಯದ ಜೀವಾಳವಾದ ದ್ವಿತೀಯ ಪ್ರಾಸವನ್ನು ಗಾಳಿಗೆ ತೂರಿಬಿಡಲಾಗಿದೆ. ಆದಕಾರಣ ಇದನ್ನು ಸೀಸಪದ್ಯವೆಂದು ತಿಳಿಯದೇ, ಅಲ್ಲಲ್ಲಿ ಪದ್ಯದ ಛಾಯೆಯುಳ್ಳ ಗದ್ಯವೆಂದೇ ಕರೆಯಬೇಕು. ಶ್ಲೋಕಗಳ ಮಧ್ಯದಲ್ಲಿ ಅಡಗಿ ಕುಳಿತಿದ್ದ ಈ ಪದ್ಯಗಳು ಯಾವದೇ ಆಸ್ಥಾನ ಪಂಡಿತನ ಕಣ್ಣಿಗೆ ಬೀಳದೇ ನೇರವಾಗಿ ಮುದ್ರಣಗೊಂಡಂತೆ ಕಾಣುತ್ತದೆ. ಮುಮ್ಮಡಿಯವರ ಹೆಸರಿನ ಇತರ ಗದ್ಯಪದ್ಯಗಳ

ಕೃತಿಗಳಿಗೂ ಇದಕ್ಕೂ ಅಜಗಜಾಂತರವಿದೆ. ಅದು ಹೇಗೇ ಇರಲಿ, ಅನೇಕ ಆಕರಗಳಲ್ಲಿ ಉಲ್ಲೇಖಗೊಂಡ 'ಶ್ರೀತತ್ತ್ವನಿಧಿ' ಗ್ರಂಥವು ಮುಮ್ಮಡಿಯವರಿಂದಲೇ ರಚಿತವೆಂದು ನಮಗನಿಸುತ್ತದೆ. ವಿಶೇಷತಃ ಕೌತುಕನಿಧಿಯಲ್ಲಿ ಬಂದಿರುವ ಕ್ರೀಡೆಗಳ ನಿರ್ಮಾಪಕರು ಮುಮ್ಮಡಿಯವರೇ ಎಂಬ ವಿಚಾರವನ್ನು ಸಮಕಾಲೀನನಾದ ದೇವಲಾಪುರದ ನಂಜುಂಡರು ತಮ್ಮ ಕೃಷ್ಣರಾಜ ಭಕ್ತಿಸಾರದಲ್ಲಿ ಸ್ಪಷ್ಟವಾಗಿ ಸಾರಿದ್ದಾರೆ. ಆದರೆ ಈ ಪದ್ಯ (ಗದ್ಯ) ಮಾಲಿಕೆಯನ್ನು ಮಾತ್ರ ಅವರೇ ಬರೆದರೂ, ಇಲ್ಲವೆ, ಕ್ರೀಡಾಪಟುವಾದ ಕೈಕೆಳಗಿನವನೊಬ್ಬನು ಬರೆದನೊ, ಹೇಳುವುದು ಕಷ್ಟ.

ಕ್ರಿ. ಶ. ೧೮೪೨ರಿಂದ ೧೮೬೨ರ ವರೆಗಿನ ಗ್ರಹಣಗಳನ್ನು ತಿಳಿಸುವ 'ಗ್ರಹಣ ದರ್ಪಣ' ಗ್ರಂಥವು ಶಾಸ್ತ್ರವಿಭಾಗದಲ್ಲಿಯ ಇನ್ನೊಂದು ಮಹತ್ವದ ಕೃತಿ. ಇದೇ ಹೆಸರಿನ ಕೃತಿಯನ್ನು ಆಸ್ಥಾನ ವಿದ್ವಾಂಸನಾಗಿದ್ದ ಸಜ್ಜಯಂ ತಾತಾಚಾರ್ಯನೆಂಬುವನು ರಚಿಸಿದ್ದುದಾಗಿ ಸಂಸ್ಕೃತ ಕವಿಚರಿತೆಕಾರರು ಉಲ್ಲೇಖಿಸಿದ್ದಾರೆ.[೧೩] ಅದರ ಪ್ರತಿಯು ತಾತಾಚಾರ್ಯನ ವಂಶಜರಲ್ಲಿ ದೊರೆಯುತ್ತದೆಂಬುದಾಗಿಯೂ ಹೇಳಿದ್ದಾರೆ. ಈತನಿಗೆ ಸಾಹಿತ್ಯಾಚಾರ್ಯನೆಂಬ ಬಿರುದು ಇದ್ದಿತು. ಆದರೆ ಒಂದಾದರೂ ಸಾಹಿತ್ಯ ಕೃತಿಯು ಅವನ ಹೆಸರಿನಲ್ಲಿ ಅಧಿಕೃತವಾಗಿ ಲಭ್ಯವಿಲ್ಲ. ಅವೆಲ್ಲ ಕಾಲನಲ್ಲಿ ಲೀನವಾಗಿ ಹೋಗಿವೆಯೆಂದು ಸಂಸ್ಕೃತ ಕವಿಚರಿತಕಾರರು ಹೇಳುತ್ತಾರೆ. ಇತ್ತ ಜ್ಯೋತಿಷ ವಿಚಾರದಲ್ಲಿ ರಾಜರಿಗೆ ಎಷ್ಟೊಂದು ಆಸ್ಥೆ ಇದ್ದಿತೆಂಬುದನ್ನೂ ನೋಡಿದ್ದೇವೆ. ಕಾರಣ ತಮಗೆ ನಿಕಟವರ್ತಿಯಾಗಿದ್ದ ತಾತಾಚಾರ್ಯನ ಮೂಲಕ ಆ ಗ್ರಹಣಗಳನ್ನು ಗುರುತಿಸಿ, ತಾವೂ ಪರಿಶೀಲಿಸಿ ಅವನ್ನು ಬರೆಯುವುದಕ್ಕೆ ಸಮ್ಮತಿಸಿದುದರಿಂದ ಈ ಕೃತಿಗೆ ಮುಮ್ಮಡಿ ಕೃಷ್ಣರಾಜರ ಹೆಸರು ಬಂದಿರಬೇಕು.

'ದಶಾವಿಭಾಗ ಪ್ರದೀಪಿಕೆ'ಯು ಜನ್ಮಕುಂಡಲಿಯಲ್ಲಿ ಬರುವ ದಶೆಗಳನ್ನು ವಿವರಿಸುತ್ತದೆ. 'ಜಾತಕಸಾಮ್ರಾಜ್ಯ ಟೀಕೆ' ಯ ವಿಷಯವು ಸ್ವಯಂ ಸ್ಪಷ್ಟವಿದೆ. ಜ್ಯೋತಿಷ್ಯಕ್ಕೆ ಸಂಬಂಧಿಸಿದ ಇನ್ನೊಂದು ಗ್ರಂಥವಾದ 'ಶಕಕಾಲ ನಿರ್ಣಯ' ವನ್ನು ಓ. ಎನ್. ಲಿಂಗಣ್ಣಯ್ಯರು ಅದಾವ ಆಕರದಿಂದ ಎತ್ತಿಕೊಂಡರೂ ತಿಳಿಯದು. ಇನ್ನಾರೂ ಅದರ ಪ್ರಸ್ತಾಪ ಮಾಡಿಲ್ಲ. 'ಸ್ವರಚೂಡಾಮಣಿ'ಯು ಸಂಗೀತಶಾಸ್ತ್ರ ಕೃತಿಯಾಗಿದೆ.

ಈ ವಿಭಾಗದಲ್ಲಿಯ ಇನ್ನೊಂದು ಮಹತ್ವದ ಗ್ರಂಥವೆಂದರೆ 'ಸಂಖ್ಯಾರತ್ನಕೋಶ'. ವಿವಿಧ ಆಕರಗಳಲ್ಲಿ ಇದರ ಉಲ್ಲೇಖವಿರುವುದರಿಂದಲೂ, ಇದಕ್ಕೆ 'ಪ್ರಭಾವಳಿ' ಎಂಬ

* ಇದನ್ನು ಬರೆದವರು ಚತುರಂಗ ಅನಂತರಾಜ ಅರಸಿನವರು ಎಂದು ೧೯೭೨-೭೩ರ ಗ್ರಹಣ ದರ್ಪಣದ ಆವೃತ್ತಿಯಿಂದ ತಿಳಿದುಬರುತ್ತದೆ.

ಸಂಸ್ಕೃತ ವ್ಯಾಖ್ಯೆ ಕನ್ನಡ ಸಮಾರೋಪದೊಡನೆ ಇರುವುದರಿಂದಲೂ ಇದರ ರಚನೆಯಲ್ಲಿ ಮುಮ್ಮಡಿಯವರ ವಿಶೇಷ ಅಂಗವಿದ್ದಿತೆಂಬುದು ಖಚಿತ. ಗಣನೀಯ ಅಂಶವೆಂದರೆ 'ಸಂಖ್ಯಾರತ್ನಕೋಶ'ವನ್ನು ಮರಾಠಿಯಲ್ಲಿಯೂ ಬರೆಯಲಾಗಿದ್ದು (೧೮೪೬), ೧೮೫೨ರ ಸುಮಾರಿಗೆ ಮೈಸೂರಲ್ಲಿ ಮುದ್ರಣವಾಗಿದ್ದಿತು. <೨೧೨>

ಚಕ್ರಮಂಜರಿ, ಚತುರಂಗಸಾರಸರ್ವಸ್ವ ಮತ್ತು ಸಂಖ್ಯಾರತ್ನಕೋಶ, ಸಂಖ್ಯಾರತ್ನ ಮಾಲಾ ಇವು ಪರಸ್ಪರ ಸಂಬಂಧವುಳ್ಳ ಒಂದೇ ಬಗೆಯ ಕೃತಿಗಳಾಗಿವೆ. ಸಂಖ್ಯಾರತ್ನಕೋಶವು ಸಂಸ್ಕೃತದಲ್ಲಿ ರಚಿತವಾಗಿದ್ದು ಇದಕ್ಕೆ ಪ್ರಭಾವಳಿ ಎಂಬ ಸಂಸ್ಕೃತ ವ್ಯಾಖ್ಯಾನವು ರಚಿತವಾಗಿದೆ. ಸಂಖ್ಯಾರತ್ನಮಾಲಾಕೋಶವು ಚಿತ್ರನಿಬಿಡವಾಗಿದ್ದು, ಮೂಲಸಂಸ್ಕೃತ ಶ್ಲೋಕಗಳಿಗೆ ಕನ್ನಡ ಟೀಕೆಯು ರಚಿತಗೊಂಡಿದೆ– ಚತುರಂಗಸಾರ ಸರ್ವಸ್ವವೂ ಚಿತ್ರಭರಿತವಾಗಿದ್ದು ಮರಾಠಿಗೆ ಅನುವಾದಗೊಂಡಿದೆ. ಈ ಕೃತಿಗೆ ತೆಲುಗು ವಿವರಣೆಯೂ ರಚನೆಗೊಂಡಿದೆ. (ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಹಸ್ತಪ್ರತಿ ಎ. ೧೨೫೮/೨)

ಶಾಸ್ತ್ರವಿಭಾಗದ ಇನ್ನುಳಿದ ಕೃತಿಗಳಲ್ಲಿ 'ಮಹಾಕೋಶ ಸುಧಾಕರ'ವನ್ನು 'ಸಮಸ್ತ ಕೋಶ ಶಬ್ದಾಲಂಕೃತ ವಿದ್ವಚ್ಚಕೋರ ಜೀವಾತು ಚಂದ್ರಿಕಾ ಮಂಡಲ ವಿಭಾಸುರ' ಎಂಬುದಾಗಿ ಸಂತಾನಾಂಬುಜದಲ್ಲಿ ವರ್ಣಿಸಲಾಗಿದೆ. ಇಷ್ಟರ ಮೇಲಿಂದ ಆ ಕೋಶವ ಸ್ವರೂಪ ಮತ್ತು ಪ್ರತಿಪಾದ್ಯ ವಿಷಯುವನ್ನು ತಿಳಿಯುವುದು ದುಸ್ತರವಾಗಿದೆ. ಕವಿಚರಿತಕಾರರೊಬ್ಬರೇ ಕಾಣಿಸಿದ 'ಭರತ ಸಾರ ಸಂಗ್ರಹ ಟೀಕೆ' ಯು ನೃತ್ಯ, ಸಂಗೀತಗಳಿಗೆ ಸಂಬಂಧಿಸಿದುದು. ಮುಮ್ಮಡಿಯವರ ಸಮಕಾಲೀನ ಆಕರಗಳಲ್ಲಿ ಇದರ ಉಲ್ಲೇಖ ದೊರೆತಿದ್ದರೆ, ಇದು ನಿಶ್ಚಿತವಾಗಿ ಅವರ ರಚನೆಯೆಂದೇ ಹೇಳಬಹುದಾಗಿತ್ತು.

### ೬.೫.೨ ಕವನಗಳು

ಮುಮ್ಮಡಿ ಕೃಷ್ಣರಾಜಾಂಕಿತ ಕವನ ರಚನೆಯಲ್ಲಿ, "ಸೌಗಂಧಿಕಾ ಪರಿಣಯ'ವು ಅತಿ ದೊಡ್ಡದು. ಆರು ಸಾವಿರಕ್ಕೆ ಮೇಲ್ಪಟ್ಟು ಭಾಮಿನೀ ಷಟ್ಪದಿಯ ಪದ್ಯಗಳಿವೆ. ನವರತ್ನ ಶಾಸನದಲ್ಲಿ (೧೮೨೭) ಅವರಿಂದ ರಚಿತವಾದ ಪುರಾಣ ಟೀಕೆಗಳ ಹೆಸರನ್ನು ಹೇಳಿದ ಮೇಲೆ, 'ಸೌಗಂಧಿಕಾಪರಿಣಯಾದಿ' ಕಾವ್ಯ ಪ್ರಬಂಧಗಳ ಪ್ರಸ್ತಾಪ ಬಂದಿರುವುದರಿಂದ, ಈ ಕಾವ್ಯವು ೧೮೨೭ಕ್ಕೆ ಮುಂಚೆ ರಚಿತವಾಗಿರಬಹುದು. ಗದ್ಯ ಗ್ರಂಥವು ೧೮೨೧ಕ್ಕೆ ರಚಿತವಾಯ್ತು ಎಂಬುದು ಆ ಕೃತಿಯ ಆರಂಭದಲ್ಲಿಯೆ ಹೇಳಿದೆ. ಒಂದೇ ಕಥಾವಸ್ತುವುಳ್ಳ ಕೃತಿಯನ್ನು ಗದ್ಯಪದ್ಯವೆಂಬ ಎರಡು ಪ್ರಕಾರಗಳಲ್ಲಿ ಒಬ್ಬನೇ ಲೇಖಕನು ಬರೆದಿದ್ದುದು ಅಸಂಭವನೀಯವಾಗಿ ನಮಗೆ ತೋರುತ್ತದೆ. 'ಸೌಗಂಧಿಕಾ ಪರಿಣಯ' ದ ನಾಟಕ ಮತ್ತು ಸಾಂಗತ್ಯ ಗ್ರಂಥಗಳು ಅನ್ಯಕೃತವಾಗಿರುವಂತೆ ಇದಾದರೂ ಮೂಲ ಗದ್ಯ ಗ್ರಂಥವನ್ನನುಸರಿಸಿ, ಒಬ್ಬ ಆಸ್ಥಾನಿಕನಿಂದ ರಚಿತವಾಗಿ ಮುಮ್ಮಡಿಯವರ

ಅಂಕಿತವನ್ನು ಹೊಂದಿರಬೇಕು. ತಮ್ಮಯ್ಯನೆಂಬುವನು 'ಸೌಗಂಧಿಕಾ ಪರಿಣಯ'ವನ್ನು ದ್ವಿಪದಿಯಲ್ಲಿ ರಚಿಸಿದ್ದಾನೆ. ಹೀಗೆ ಅದರ ಬೇರೆ ಬೇರೆ ರೂಪಗಳಿರುವುದು, ಮುಮ್ಮಡಿಯವರ ಆದ್ಯ ಕರ್ತೃತ್ವವನ್ನು ದೃಢೀಕರಿಸುತ್ತದೆ.

ಮುಮ್ಮಡಿಯವರಿಗೆ ಯಕ್ಷಗಾನ ಆಟಗಳಲ್ಲಿ ಆಸಕ್ತಿ ಇದ್ದಿತು. ಅರಮನೆಯಲ್ಲಿ ಅವುಗಳ ರಂಗಪ್ರಯೋಗದ ವ್ಯವಸ್ಥೆಯು ಬಹುಕಾಲದಿಂದ ಇದ್ದಿತು. ಆದರೆ ಅರಮನೆಯಲ್ಲಿ ಅವುಗಳ ರಂಗಪ್ರಯೋಗದ ವ್ಯವಸ್ಥೆಯು ಬಹುಕಾಲದಿಂದ ಇದ್ದಿತು. ಆದರೆ ಅವರ ಹೆಸರಿನಲ್ಲಿರುವ 'ದಕ್ಷಾಧ್ವರ ಯಜ್ಞ', (ಸತ್ಯ) 'ಭಾಮಾಕಥೆ' ಹಾಗೂ 'ಪ್ರಸನ್ನ ಕೃಷ್ಣ ಕೊರವಂಜಿ ಕಥೆ' ಎಂಬ ಯಕ್ಷಗಾನ ಪ್ರಸಂಗಗಳನ್ನು ಅವರೇ ಬರೆದರೆಂಬುದನ್ನು ಖಚಿತಪಡಿಸುವುದು ಸಾಧ್ಯವಿಲ್ಲ. ಕೊನೆಯ ಯಕ್ಷಗಾನ ಪ್ರಸಂಗದಲ್ಲಿಯಂತೂ ಉಭಯ ಅಥವಾ ಅನ್ಯ ಕರ್ತೃತ್ವವನ್ನು ಹೇಳುವ ಪದ್ಯ ದೊರೆಯುತ್ತದೆ.

ನರಪತಿಕೃಷ್ಣ ಧರಾಧಿಪ
ವಿರಚಿತ ನವಪಾರಿಜಾತ ವಿಮಲ ಸುಕಥೆಯೊಳ್
ಮುರರಿಪು ಧರಿಸಿದ ವೇಷದ
ಕೊರವಂಜಿಯ ಕಥೆಯ ನಾನು ಕುಶಲದಿ ಪೇಳ್ವೆ ॥

ಈ 'ನಾನು' ಎಂಬ ವ್ಯಕ್ತಿ ಮುಂದಿನ ಪದ್ಯದಲ್ಲಿ 'ಕೃಷ್ಣ ಭೂಪತಿ ಸಭಾಸ್ಥಾನಸ್ಥ ನಾನಾ ಕಲೋಜ್ವಲ ವಿದ್ವಜ್ಜನಮಾದೇವಿಕೃತಿಯ ತಾಂ ಸಂತೋಷದಿಂ ಕೇಳಲೀ' ಎಂದು ಹೇಳಿದ್ದರಿಂದ ಅವನ ಗ್ರಂಥಕರ್ತೃತ್ವವು ಪರ್ಯಾಯವಾಗಿ ಸ್ಥಿರೀಕರಣಗೊಂಡಿದೆ.

'ನಂಜುಂಡ ಶತಕವು' ಅವರ ಹೆಸರಿನ ಇನ್ನೊಂದು ಷಟ್ಪದಿ ಕೃತಿ. ಅಲ್ಲದೆ ಅದ್ವೈತ ವಿಚಾರಗಳನ್ನು ವ್ಯಕ್ತಪಡಿಸುವ ಕೆಲವು ಹಾಡುಗಳನ್ನು ಕವಿಚರಿತಕಾರರು ಉಲ್ಲೇಖಿಸಿದ್ದಾರೆ. ಏನಿದ್ದರೂ ಮುಮ್ಮಡಿ ಕೃಷ್ಣರಾಜರ ಕವಿತ್ವವು ಮೊತ್ತದಲ್ಲಿ ಕಡಿಮೆಯಾದುದು. ಅವರ ಛಂದೋರಚನೆಯು ವೈವಿಧ್ಯದಿಂದ ಕೂಡಿದ್ದು, ಪದಬಂಧವು ವಿಷಮವಾಗಿ ತೋರುತ್ತದೆ. ಅವರೊಬ್ಬರೇ ಇವೆಲ್ಲ ಕೃತಿಗಳನ್ನು ರಚಿಸಿರಲಾರರು ಎಂಬ ಸಂದೇಹವನ್ನು ಮೂಡಿಸುತ್ತದೆ.

### ೬.೩.೩ ಗದ್ಯ ಗ್ರಂಥಗಳು

ಪುರಾಣಗಳ ಗದ್ಯಾನುವಾದವು ಮೊತ್ತದಲ್ಲಿ ಇತರ ವಿಭಾಗಗಳನ್ನು ಮೀರಿಸುವಂತಿದೆ. 'ದೇವೀಭಾಗವತ', 'ಲಿಂಗಪುರಾಣ' ಮತ್ತು 'ಹರಿವಂಶ' ಇವು ಇಡಿಯಾಗಿಯೆ ಅನುವಾದಗೊಂಡವು. ಅಷ್ಟಾದಶ ಪುರಾಣಗಳಲ್ಲಿ ಅತಿ ದೊಡ್ಡದಾದ ಸ್ಕಾಂದ ಪುರಾಣವು ಕಾಶೀಖಂಡ, ಶಂಕರಸಂಹಿತೆ, ಕಾವೇರೀ ಮಾಹಾತ್ಮ್ಯ ಮುಂತಾದ ಗದ್ಯ ಕೃತಿಗಳಿಗೆ ಸಾಮಗ್ರಿಯನ್ನು ಒದಗಿಸಿದೆ. ಮಾರ್ಕಂಡೇಯ ಪುರಾಣೋಕ್ತವಾದ ದೇವೀ ಮಾಹಾತ್ಮ್ಯ

ಸಪ್ತಶತೀ ಮಂತ್ರವು ಕನ್ನಡ ವ್ಯಾಖ್ಯಾನವನ್ನು ಒಳಗೊಂಡಿದೆ. ಇದರ ಕಾಲವು ಕ್ರಿ.ಶ. ೧೮೧೫. ರಚನಾವರ್ಷವು ದೊರೆತಿರುವ ಮುಮ್ಮಡಿಯವರ ಕೃತಿಗಳಲ್ಲಿ ಇದುವೆ ಪ್ರಾಚೀನವಾದುದು. 'ಕೃಷ್ಣರಾಜ ಒಡೆಯ'ರವರು 'ಬುಧಜನ ಸಮ್ಮತಿಯಿಂದ' ಇದನ್ನು ರಚಿಸಿದರೆಂಬ ಗ್ರಂಥಸ್ಥ ಹೇಳಿಕೆಯನ್ನು ಸ್ವೀಕರಿಸಲಡ್ಡಿಯಿಲ್ಲ.

ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ, ಹಸ್ತಪ್ರತಿಯ ರೂಪದಲ್ಲಿ ಲಭ್ಯವಿರುವ 'ಹರದತ್ತಾಚಾರ್ಯರ ಚರಿತ್ರೆ' ಎಂಬ ಕೃತಿ ಇದೆ. 'ಶ್ರೀ ಕೃಷ್ಣರಾಜ ಒಡೆಯರವರು ವ್ಯಾಸಕೃತ ಭವಿಷ್ಯೋತ್ತರ ಪುರಾಣೋಕ್ತರವಾದ ಹರದತ್ತಾಚಾರ್ಯರ ಚರಿತ್ರೆಯಂನು ಲೋಕೋಪಕಾರಾರ್ಥವಾಗಿ ಕರ್ಣಾಟಕ ಭಾಷೆಯಿಂದ ವಿರಚಿಸುವ ಪರಿಯೇನಂದರೆ– ' ಎಂಬ ಆರಂಭದ ಗದ್ಯದಲ್ಲಿ ರಾಜರ ಅಂಕಿತವಿದೆ. ಅದರ ಭಾಷೆಯನ್ನು ಯಾರೂ ಸಂಸ್ಕರಿಸಿದಂತೆ ಕಾಣುವುದಿಲ್ಲ.*

ಇನ್ನುಳಿದ 'ಗಯಚರಿತ್ರೆ' ಜೊತೆಗೆ 'ಅರ್ಕಪುಷ್ಕರಿಣೀ, ಗರಳಪುರಿ, ಯಾದವಗಿರಿ, ಶ್ರೀಶೈಲ, ಹಾಲಾಸ್ಯ'–ಇವುಗಳ ಮಹಾತ್ಮ್ಯ ಗ್ರಂಥಗಳು ಬ್ರಹ್ಮಾಂಡ, ಸ್ಕಾಂದ ಮೊದಲಾದ ಪುರಾಣಗಳಿಂದ ಆಯ್ದುಕೊಂಡವುಗಳಾಗಿವೆ. ನಳ, ಹರಿಶ್ಚಂದ್ರ, ಉಷಾ ಪರಿಣಯಾದಿ ಉಪಾಖ್ಯಾನಗಳಾದರೂ ಪುರಾಣಗಳಿಂದ ಆಯ್ದವುಗಳೇ ಆಗಿ ಕನ್ನಡ ಗದ್ಯರೂಪದಲ್ಲಿ ವಿಸ್ತಾರವನ್ನು ಪಡೆದಿವೆ. ಪುರಾಣವನ್ನಾಗಲೀ ಅವುಗಳ ಭಾಗಗಳನ್ನೇ ಆಗಲೀ ಅನುವಾದಕ್ಕೆ ಆಯ್ದುಕೊಳ್ಳುವಲ್ಲಿ ಯಾವ ಕ್ರಮಬದ್ಧತೆಯೂ ತೋರಿಬರುತ್ತಿಲ್ಲ

ಪುರಾಣಕೃತಿಗಳೆಂದು ರಾಮಾಯಣ, ಮಹಾಭಾರತ ಮತ್ತು ಭಾಗವತಗಳನ್ನು ಪ್ರತ್ಯೇಕವಾಗಿ ಕೊಡಬಯಸಿದೆ. ಮುಮ್ಮಡಿಯವರ ಪೂರ್ವಾರ್ಧಕಾಲದಲ್ಲಿ ರಚಿತವಾದ ಅಧ್ಯಾತ್ಮ ರಾಮಾಯಣವು ಬ್ರಹ್ಮಾಂಡ ಪುರಾಣಾಂತರ್ಗತವೇ ಆಗಿದೆ. ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ಮಾಡಿದ ಉಪದೇಶದಲ್ಲಿ ಮತ್ತು ಇತರ ಕೆಲವು ಸಂದರ್ಭಗಳಲ್ಲಿ ಅಧ್ಯಾತ್ಮ ವಿಚಾರವು ಬಂದಿರುವುದರಿಂದ ಇದು ಅಧ್ಯಾತ್ಮ ರಾಮಾಯಣವೆನಿಸಿತು. ಈ ಕೃತಿಯ ಉಲ್ಲೇಖವು ಮೈಸೂರಿನ ೬೧ನೆಯ ಶಾಸನದಲ್ಲಿ ಬಂದಿರುವುದಲ್ಲದೆ, ಇತರರೂ ಹೆಸರಿಸಿದ್ದಾರೆ. ಇದು ಮುಮ್ಮಡಿಯವರ ಅನುಮತದಿಂದಲೇ ಹೊರಹೊಮ್ಮಿರಬೇಕೆಂದು ಎಣಿಸುತ್ತೇವೆ. ಕೃತಿಯ ಆರಂಭದಲ್ಲಿ ಮೈಸೂರರಸರ ವಂಶಾವಳಿಯನ್ನೂ ಸಂಗ್ರಹವಾಗಿ ಕೊಡಲಾಗಿದೆ.

---

* ಉದಾಹರಣೆಗೆ, ಅದರ ಅಂತ್ಯಗದ್ಯವನ್ನು ನೋಡಬಹುದು :-

'ಬ್ರಾಹ್ಮಣನ ಕರೆದು । ನೀನು ಶಿವನಾಮ ಸಂಕೀರ್ತನವಂ ಮಾಡಿಕ್ಕೊಂಡು ಬ್ರಾಹ್ಮಣರ ಸಭೆಗೆ ಹೋಗಿ ನಂನ ಪಾಪ ಶಿವನಾಮ ಸ್ಮರಣೆಯಿಂದ ಹೋಯಿತೆಂದು । ಆ ಆಚಾರ್ಯರು ಹೇಳಿದರು । ನಂನ ಪಾಪವು ಹೋಯಿತೆಂದುಕೊಳ್ಳಿ । ಸುಖವಾಗಿ ಯಿರು ಎಂದು ಹೇಳಿ ಆಚಾರ್ಯರು ಬ್ರಾಹ್ಮಣಪ್ರಕಾರವಾಗಿ । ಶಿವನಾಮ ಸ್ಮರಣೆ. . . (ಕೃತಿ–ಅಸಮಗ್ರ) – ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚಿ, IV. ಪು. ೫೦೩.

'ರಾಮಾಯಣ ಟೀಕು', 'ರಾಮಕಥಾ ಕಲ್ಪವೃಕ್ಷ' (ಸಾರಸಂಗ್ರಹ) ಹಾಗೂ 'ರಾಮಾಯಣ ತಾತ್ಪರ್ಯದೀಪಿಕಾ ಟೀಕೆ'-ಇವು ಮೂರೂ ಪ್ರತ್ಯೇಕ ಗ್ರಂಥಗಳೆಂದು ಭಾಸವಾಗುತ್ತದೆ. ಮೊದಲಿನದು ಸಮಗ್ರ ರಾಮಾಯಣದ ಗದ್ಯಾನುವಾದ. ಇದರ ರಚನಾವರ್ಷವು ೧೮೬೭, ಎಂದರೆ ಅವರ ಅವಸಾನಕ್ಕೆ ಒಂದು ವರ್ಷ ಹಿಂದಿನದು. ಅವರಿಗೆ ಆಗ ೭೪ ವರ್ಷ. ಆ ಇಳಿವಯಸ್ಸಿನಲ್ಲಿ ಈ ಗದ್ಯಾನುವಾದವನ್ನು ಅವರು ಬರೆದಿರಬಹುದೆ? ಎಂಬ ಸಂಶಯ ಮೂಡುತ್ತದೆ.* ಚಾಮರಾಜೋಕ್ತಿ ವಿಲಾಸ ರಾಮಾಯಣವು ಆದಾಗಲೇ ಅರಮನೆಯಲ್ಲಿದ್ದಿತೆಂಬುದನ್ನು ನಾವು ಮರೆಯುವಂತಿಲ್ಲ. 'ರಾಮಕಥಾ ಕಲ್ಪವೃಕ್ಷವು' (೧೮೬೪) ಮೇಲಿನ ಕೃತಿಗಿಂತ ಮೂರು ವರ್ಷ ಮಾತ್ರ ಹಿಂದಿನದು. ರಾಮಾಯಣವೊಂದೇ ಅಲ್ಲದೆ, ವಿಷ್ಣುಪುರಾಣ, ವಿಷ್ಣುಧರ್ಮೋತ್ತರ ಪುರಾಣ, ಜೈಮಿನಿ ಮುಂತಾದವುಗಳಿಂದ ವಿಷಯ ಸಂಗ್ರಹ ಮತ್ತು ಸವಿವರ ಪರಾಮರ್ಶೆ ಇರುವ ಈ ಗ್ರಂಥದ ಕರ್ತೃತ್ವ ವಿಚಾರದಲ್ಲಿಯೂ, ಅದೇ ಬಗೆಯ ಸಂದೇಹ ಮೂಡುತ್ತದೆ. ಮೂರನೆಯದಾದ 'ತಾತ್ಪರ್ಯದೀಪಿಕಾ ಟೀಕೆ' ಯು ಹೆಚ್ಚು ವಿಮರ್ಶಾತ್ಮಕವಾಗಿದೆ. ರಾಮಾಯಣದ ಬಗ್ಗೆ ಇರುವ ಅನೇಕ ಪ್ರಾಚೀನ ಕೃತಿಗಳಿಂದ ವಿಷಯವನ್ನು ಸಂಗ್ರಹಿಸಲಾಗಿದೆ. ಮೂಲಕಥೆಯ ಅನೇಕ ಘಟನೆಗಳಿಗೆ ಕಾಲ ನಿರ್ಣಯವನ್ನು ಮಾಡಿದ್ದುದರಲ್ಲಿ ಈ ಕೃತಿಯ ಹೆಚ್ಚುಗಾರಿಕೆ ಇದೆ. 'ರಾಮಾಯಣ ತಾತ್ಪರ್ಯ' ವೆಂಬ ಮೂಲಗ್ರಂಥವು ಸಂಸ್ಕೃತದಲ್ಲಿದ್ದು ಮುಮ್ಮಡಿಯವರ ಅಂಕಿತವುಳ್ಳ ಅದರ ಟೀಕೆಯು ಕನ್ನಡದಲ್ಲಿ ಇದ್ದಿರಬೇಕು.

ಕೃಷ್ಣರಾಜ ವಾಣೀವಿಲಾಸ ನಾಮಕ 'ಮಹಾಭಾರತದ ಕನ್ನಡ ಟೀಕೆ'ಯು ಸುಪರಿಚಿತವಾದುದು. ಮೂಲಗ್ರಂಥವನ್ನು ಸಮಂಜಸ ರೀತಿಯಿಂದ ಅನುವಾದ ಮಾಡಲಾಗಿದ್ದು ಅದು ೧೯ನೆಯ ಶತಮಾನದ ಉತ್ಕೃಷ್ಟ ಕನ್ನಡ ಗ್ರಂಥಗಳಲ್ಲಿ ಒಂದಾಗಿದೆ. ಇದರಲ್ಲಿ ಸಮಾವೇಶವಾಗಿದ್ದ ಭಗವದ್ಗೀತೆಯ ಅನುವಾದವು ಆಮೇಲೆ ಪ್ರತ್ಯೇಕವಾಗಿ ಹೊರಬಂದಿತು. ಮಹಾಭಾರತದ ಸಮಗ್ರ ಟೀಕಾನುವಾದವು ಆಮೇಲೆ ಪ್ರತ್ಯೇಕವಾಗಿ ಹೊರಬಂದಿತು. ಮಹಾಭಾರತದ ಸಮಗ್ರ ಟೀಕಾನುವಾದವು 'ವಿದ್ವಾಂಸರ ಸಹಾಯದಿಂದ' ನಿರ್ಮಾಣವಾಯ್ತೆಂಬ ಮಾತನ್ನು ಈ ಹಿಂದೆ ಹೇಳಿದ್ದಿದೆ. ಕ್ರಿ. ಶ. ೧೮೨೦ರಲ್ಲಿ ರಚಿತವಾದ ಜೈಮಿನಿ ಭಾರತದ ಅಶ್ವಮೇಧಿಕ ಪರ್ವದ ಟೀಕೆಯುನ್ನು ಕವಿಚರಿತಕಾರರೊಬ್ಬರೇ ಉಲ್ಲೇಖಿಸಿದ್ದಾರೆ. ಸಮಕಾಲೀನ ಆಕರಗಳಲ್ಲಿ ಅದರ ಪ್ರಸ್ತಾಪವಿಲ್ಲ.

ಶ್ರೀಕೃಷ್ಣನ ಕಥೆಯು ರಾಮಕಥನಕ್ಕೆ ಸಮನಾಗಿ, ವಿಸ್ತಾರವಾಗಿಯೆ ಪ್ರತಿಪಾದಿತವಾಗಿದೆ. ೧೮೨೭ಕ್ಕೆ ಮುಂಚೆ ರಚಿತವಾಗಿದ್ದ ಭಾಗವತ ಟೀಕೆಯು ಕೃಷ್ಣರಾಜರ ಅನುಮತದಿಂದಲೇ

---

* ಇದನ್ನು ಉಲ್ಲೇಖಿಸಿದ ಆಕರಗಳಲ್ಲಿ ಈ ಅನುವಾದ ಕೃತಿಯ ಸ್ಪಷ್ಟ ನಿರ್ದೇಶನವಿಲ್ಲ ಮತ್ತು ಭಾರತ ಭಾಗವತಗಳ ಅನುವಾದದಂತೆ ಇದು ಮುದ್ರಿತವಾಗಿ ಹೊರಬಂದಿಲ್ಲ; ಹಸ್ತ ಪ್ರತಿಯ ರೂಪದಲ್ಲಿಯೂ ದೊರೆಯುವುದಿಲ್ಲ.

ಆಗಿದೆಯೆಂಬುದು ನಿಶ್ಚಯ. ಶ್ರೀಧರೀಯ ವ್ಯಾಖ್ಯಾನವನ್ನು ಮೂಲವಾಗಿಟ್ಟುಕೊಳ್ಳಲಾದ ಈ ಕೃತಿಗೆ ಮಹಾಭಾರತ ಟೀಕೆಯಷ್ಟೆ ಗೌರವವಿದೆ. 'ಕೃಷ್ಣಕಥಾಸಾರ ಸಂಗ್ರಹ'ವು ೩೯೯ ಅಧ್ಯಾಯಗಳ ಬೃಹತ್ ಕೃತಿ. ವಿಶ್ವ ಸೃಷ್ಟಿಯಿಂದ ಮೊದಲ್ಗೊಂಡು ಶ್ರೀ ಕೃಷ್ಣನಿಗೆ ಸಂಬಂಧಿಸಿದ ಸಮಗ್ರ ವಿಷಯಗಳ ವಿವರಣೆ ಇದೆ. ಕೊನೆಯ ಅವತಾರ ಕಾಂಡದಲ್ಲಿ ದಶಾವತಾರಗಳ ವರ್ಣನೆ ಬಂದಿದೆ. ರಾಮಾವತಾರ ವಿವೇಚನೆಯಲ್ಲಿ ಸಂಪೂರ್ಣ ರಾಮಾಯಣ ಕಥೆಯನ್ನೆ ಒಳಗೊಂಡಿರುವಷ್ಟು ವಿಸ್ತಾರವನ್ನು ಪಡೆದಿದೆ. ಅದು ಮುಗಿದ ಮೇಲೆ ಕಪಿಲಾವತಾರ, ವೆಂಕಟೇಶ ಮಾಹಾತ್ಮ್ಯ ಇವು ಸಹಿತ ಸಮಾವೇಶವಾಗಿವೆ. ಹೀಗೆ ಕೃಷ್ಣಕಥೆಯ ನಿಮಿತ್ತದಿಂದ ಇದು ಅನೇಕ ಪುರಾಣಗಳ ಸಾರಗಳನ್ನು ಒಳಗೊಂಡ ಮಹತ್ವಪೂರ್ಣ ಕೃತಿಯೆನಿಸಿದೆ.

'ಕೃಷ್ಣ ರತ್ನಾಕರ'ವು ಶ್ರೀಕೃಷ್ಣ ವಿಷಯಕವಾದ ಇನ್ನೊಂದು ಪುಸ್ತಕ. ಹನ್ನೆರಡು ತರಂಗಗಳುಳ್ಳ ಈ ದೊಡ್ಡ ಹೊತ್ತಿಗೆಯಲ್ಲಿಯೂ ವಿವಿಧ ಪುರಾಣಗಳಿಂದ ವಿಷಯವನ್ನು ಶೇಖರಿಸಲಾಗಿದೆ. ಒಂದೇ ವಿಷಯದ ಮೇಲೆ ಗದ್ಯರೂಪದಲ್ಲಿ ಎರಡು ಗ್ರಂಥಗಳನ್ನು ಮುಮ್ಮಡಿಯವರು ರಚಿಸಿದುದೇಕೆ ಎಂಬ ಶಂಕೆಯು ಇಲ್ಲಿಯೂ ತಲೆದೋರುತ್ತದೆ. 'ರಾಮಕಥಾ ಕಲ್ಪವೃಕ್ಷ'ದಂತೆ ಇದಾದರೂ ಅವರ ಅಪರ ವಯಸ್ಸಿನಲ್ಲಿ ರಚಿತವಾದದ್ದು.

## ೬.೩. ಕಥನ ಗದ್ಯ

ಪಂಚತಂತ್ರ, ಬತ್ತೀಸ ಪುತ್ಥಳಿ, ಬೇತಾಳ ಪಂಚವಿಂಶತಿ ಕಥಾನಕಗಳು ಮುಮ್ಮಡಿಯವರ ಹೆಸರಿನಲ್ಲಿವೆಯಷ್ಟೆ. ಅವುಗಳ ಕರ್ತೃತ್ವ ವಿಚಾರದಲ್ಲಿ ಖಚಿತವಾಗಿ ಹೇಳಬರುವಂತಿಲ್ಲ. ಸಾಮಾನ್ಯ ಜನರ ಮನರಂಜನೆಗೆ ಇದ್ದ ಕಥೆಗಳನ್ನು ಅನುವಾದ ಮಾಡುತ್ತ ಕೂಡುವ ವಿಚಾರ, ವ್ಯವಧಾನಗಳು ಅದೂ ಇಳಿವಯಸ್ಸಿನಲ್ಲಿ–ಅವರಿಗೆ ಇದ್ದುವೆ? ಬಾಣನ ಕಾದಂಬರಿ ಮತ್ತು ದಂಡಿಯ ದಶಕುಮಾರ ಚರಿತ್ರೆಯ ಅನುವಾದಗಳು ಸ್ವಾಗತಾರ್ಹವಾಗಿವೆ. ಆದರೆ ಅವು ಅಧಿಕೃತವಾಗಿ, ಹಸ್ತಪ್ರತಿಯ ರೂಪದಲ್ಲಿ ಸಹ, ಲಭ್ಯವಿಲ್ಲ.

ಕಥನ ಗದ್ಯದಲ್ಲಿ ಮಹತ್ವದ ಕೃತಿಯೆಂದರೆ 'ಸೌಗಂಧಿಕಾ ಪರಿಣಯ' ೧೮೨೧ರಷ್ಟು ಹಿಂದೆಯೇ ರಚಿತವಾಗಿದೆ. ಅನೇಕ ಆಕರಗಳಲ್ಲಿ ಸ್ಪಷ್ಟವಾಗಿ ನಿರ್ದೇಶನಗೊಂಡ ಈ ಕೃತಿಗೂ ಮುಮ್ಮಡಿ ಕೃಷ್ಣರಾಜರಿಗೂ ನಿಶ್ಚಯವಾಗಿ ನಿಕಟ ಸಂಬಂಧವಿದೆ. ಅವರ ವೈಭವ ಕಥನದ ಮಾತು ಬಂದಾಗಲೆಲ್ಲ, 'ಸೌಗಂಧಿಕಾ ಪರಿಣಯ'ವನ್ನು ಅವಶ್ಯವಾಗಿ ಪ್ರಸ್ತಾಪಿಸುವುದುಂಟು. ಮುಂದೆ ಪದ್ಯ, ಹಾಗೂ 'ನಾಟಕ' ರೂಪಗಳನ್ನು ಸಹ ಹೊಂದುವಷ್ಟು ಅದು ಮನ್ನಣೆಯನ್ನು ಪಡೆದಿದ್ದಿತು. 'ಸೌಗಂಧಿಕಾ ಪರಿಣಯ'ವು ಯಾವುದೊಂದು ಪುರಾಣ ಭಾಗ ಅಥವಾ ಸಂಸ್ಕೃತ ಕಾವ್ಯದ ಅನುವಾದವಾಗಿರದೆ

ಬಹುಮಟ್ಟಿಗೆ ನೂತನ ಕಥನ ಸೃಷ್ಟಿಯಾಗಿದ್ದುದು ಇದರ ಹಿರಿಮೆಯಾಗಿದೆ. ಮುಮ್ಮಡಿಯವರ ಅನೇಕ ಕೃತಿಗಳು ಲೋಕೋಪಕಾರಾರ್ಥವಾಗಿ ಇದ್ದರೆ, ಇದು 'ರಸಿಕಜನಾನಂದಕರವಾಗುವಂತೆ' ರಚಿತವಾದ ಕೃತಿ. ಕೃತಿಕಾರನು ಇದನ್ನು 'ನವೀನ ಕೃತಿ' ಎಂದು ಕರೆದುದರಲ್ಲಿ ಔಚಿತ್ಯವಿದೆ ಮತ್ತು ಕೊನೆಯಲ್ಲಿ–

'ಸರಸ ಸಂವಿಧಾನಂಗಳಿಂದೊಡಗೂಡಿ ಕಲ್ಪಿತಂಗಳಾದ ವಿಚಿತ್ರ ಕಥೆಗಳಿಂದಲೂ ಪುರಾಣ ಚರಿತಾನುವಾದಂಗಳು ರಸಿಕಜನ ಹೃದಯ ರಮಣೀಯ್ಯಮಾಗಿ ....ಶೃಂಗಾರ ರಸಕ್ಕೆ ಮುಖ್ಯ ಜೀವನವಾಗಿ ಸರಸಪ್ರಬಂಧ ಶಿರೋಭೂಷಣಮಾದ ಸೌಗಂಧಿಕಾ ಪರಿಣಯವೆಂಬ ವಿಚಿತ್ರ ಕಥಾನುಕ್ರಮಣಿಕಾ'

–ಎಂದಿರುವ ವಿಶೇಷಣವು ಯಥಾರ್ಥವೇ ಆಗಿದೆ.

ಕಥೆಯು ಸ್ವರ್ಗಾಧಿಪತಿಯಾದ ದೇವೇಂದ್ರನನ್ನು ಕುರಿತದ್ದು. ದೂರ್ವಾಸಮುನಿ ಶಾಪದಿಂದ ಭೂಲೋಕದಲ್ಲಿ (ಕರ್ಣಾಟ ದೇಶದಲ್ಲಿ) ಸುಗಂಧರಾಜನಾಗಿ ಅವತರಿಸುತ್ತಾನೆ. ಕಲಿಂಗದಲ್ಲಿ ತನ್ನಂತೆಯೇ ಭೂಮಿಗಿಳಿದು ಬಂದಿದ್ದ ಶಚಿದೇವಿ ಎಂದರೆ ಸೌಗಂಧಿಕೆಯನ್ನು ಈ ರಾಜನು ಅವಳು ಇರಿಸಿದ್ದ ಎಂಟು 'ಪಣ'ಗಳನ್ನು ಗೆದ್ದು ಮದುವೆಯಾಗುತ್ತಾನೆ. ಇಂದ್ರನಿಗೊದಗಿದ ಮುನಿಶಾಪದ ಹಿನ್ನೆಲೆ, ಸ್ವರೂಪಗಳು ಪುರಾಣಗಳಲ್ಲಿ ಬಂದಿವೆ. ಮುಂದಿನ ಕತೆಯ ನಿಮಿತ್ತದಿಂದ ಇತರ ಅನೇಕ ಪುರಾಣ ಹಾಗೂ ಶಾಸ್ತ್ರವಿಷಯಗಳು ಸೇರಿಕೊಂಡವು. ಶೈವ –ವೈಷ್ಣವ ಆಗಮಗಳು, ಯೋಗ ಶಾಸ್ತ್ರ, ಶಕುನ ಸಾಮುದ್ರಿಕ ಲಕ್ಷಣ, ಕಾಮಕಲೆ, ಗಜರತ್ನಾದಿ ಲಕ್ಷಣ ಪರೀಕ್ಷಣ, ವಾಪೀ ಕೂಪ ತಟಾಕ ನಿರ್ಮಾಣ– ಇವೇ ಮೊದಲಾದ ವಿಷಯಗಳ ವಿವರಣೆ ಇದರಲ್ಲಿ ದೊರೆಯುತ್ತದೆ. ಇಂದ್ರನಿಗೆಯೇ ವಿಶಿಷ್ಟವಾಗಿ ಸಂಬಂಧಿಸಿದ ವಜ್ರಾಯುಧ, ಐರಾವತ, ಉಚ್ಚೈಃಶ್ರವ, ಚಿಂತಾಮಣಿ, ಕಲ್ಪವೃಕ್ಷ, ರಂಭಾದಿ ಸ್ತ್ರೀಯರು, ಕಾಮಧೇನು, ವ್ಯೋಮಯಾನ – ಎಂಬವುಗಳ ವಿಚಾರದ ಪಣಗಳು ಕಥನರೂಪದಲ್ಲಿ ವಿಸ್ತಾರಗೊಂಡಿವೆ. ಸ್ವಕಲ್ಪಿತವಾಗಿ ನಾವೀನ್ಯದಿಂದ ಕೂಡಿವೆ.

ಮಹತ್ವದ ಅಂಶವೆಂದರೆ, ಕಥನದ ಉದ್ದಕ್ಕೂ ಆದಿಶಕ್ತಿ ಅಥವಾ ಚಾಮುಂಡಾಂಬೆಗೆ ಇತ್ತ ಪ್ರಾಶಸ್ತ್ಯ. ಕಥಾನಾಯಕನ ತಂದೆಯು ಈ ದೇವತೆಯ ಪರಮ ಭಕ್ತನು. ಅವಳ ವರಪ್ರಸಾದದಿಂದಲೇ ಮುಂದೆ ಸುಗಂಧ ರಾಜಕುಮಾರನ ಏಳ್ಗೆಯಾಗುವುದು. ಏಳನೆಯ ಪ್ರಕರಣದಲ್ಲಿ ದೇವಿಯ ಲಕ್ಷಣ, ವಿರಾಟ್ ಸ್ವರೂಪವನ್ನು ಭಕ್ತ್ಯಾದರಗಳಿಂದ ವರ್ಣಿಸಲಾಗಿದೆ. ಹರಿ ಮತ್ತು ಹರರು ಅವಳಿಗೆ ಅಧೀನರು, ಕೃತಿಯ ಆರಂಭದಲ್ಲಿ ಅವಳ ಸವಿವರ ಸ್ತುತಿಯಿದ್ದು 'ಕರ್ಣಾಟರಾಜರಾದ ಯದುವಂಶ ಭೂಪಾಲರಿಗೆ ಕುಲದೇವತೆಯಾಗಿ, ಅಭಿವೃದ್ಧಿಯನ್ನು ಕೊಡುವವಳಾಗಿ' ಇದ್ದಾಳೆಂಬುದನ್ನು ಕಾಣಿಸಲಾಗಿದೆ. ಮುಂದಿನ

ಪ್ರಕರಣಗಳೆಲ್ಲವೂ ಚಾಮುಂಡೇಶ್ವರಿಯ ನಮನದಿಂದಲೇ ಪ್ರಾರಂಭವಾಗುತ್ತವೆ.

ಈ ಗ್ರಂಥದಲ್ಲಿರುವ ಮುಮ್ಮಡಿ ಕೃಷ್ಣರಾಜರ ಕರ್ತೃತ್ವಕ್ಕೆ ಸಂಬಂಧಿಸಿದ ಅಂಶಗಳನ್ನು ಅವಶ್ಯವಾಗಿ ಪರಿಶೀಲಿಸಬೇಕಾಗುವುದು:- ". . ಲೋಕಪಾವನೆಯಾದ, ಎನ್ನ ಕುಲದೇವತೆಯಾದ, ಶ್ರೀ ಚಾಮುಂಡೇಶ್ವರೀಯೆಂಬ ಹೆಸರುಳ್ಳ ಮಹಾದೇವಿಯ ಚರಣಕಮಲಂಗಳಂ ಭಕ್ತಿಯಿಂದ ಹೃದಯದೊಳಿಟ್ಟು ಸಾಷ್ಟಾಂಗವೆರಗಿ, ಈ ನವೀನ ಕೃತಿಯು ಲೋಕವಿಖ್ಯಾತಮಾಗಿ ಆಚಂದ್ರಾರ್ಕಮಾಗಿರುವಂತೆ ಪ್ರಾರ್ಥನೆಯಂ ಮಾಡಿ, ಆ ಬಳಿಕ ನಮ್ಮ ಕುಲಕ್ರಮಾಗತೇಷ್ಟ ದೇವತಾ ಸ್ವರೂಪನಾದ ಶ್ರೀ ನಂಜುಂಡೇಶ್ವರಭಿದಾನದಿಂ ಮೆರೆಯುವ ಪಾರ್ಥಿವೇಶ್ವರನು ನನ್ನ ಕರಪೀಠದೊಳ್ನಿಂದು ಪೂಜೆಗೊಂಡು ಯನ್ನಿಷ್ಟಾರ್ಥಮಂ ಕೊಟ್ಟು ಸಲಹಬೇಕೆಂದು ನಮಸ್ಕಾರ ಪೂರ್ವಕವಾಗಿ ಬಿನ್ನೈಸಿ....ಹಿರಿಯರ ಆಶೀರ್ವಾದದಿಂದೆನಗೆ ತಿಳಿದಷ್ಟು ಪೇಳುವ ಸೌಗಂಧಿಕಾ ಪರಿಣಯವೆಂಬೀ ನವೀನ ಕೃತಿಯಂ ನಿರ್ಮತ್ಸರರಾದ ವಿದ್ವಾಂಸರುಗಳು ನೋಡಿ, ರಸಂಗಳಲ್ಲಿ ಅಲಂಕಾರಗಳಲ್ಲಿ ರೀತಿಪಾಕಂಗಳಲ್ಲಿ ಸಂವಿಧಾನ ನಿಬಂಧನದಲ್ಲಿ ಯಾವದೊಂದು ಕಡಿಮೆಯಾದರೂ ಕ್ಷಮಿಸಿ ಒಡಂಬಡುವುದು. ಈ ಕೃತಿಯಂ ಓದುವ ಕೇಳುವ ಸಕಲ ಜನಂಗಳೂ ಅಸೂಯೆಯಂ ಮಾಡದೆ ಮನ್ನಿಸಿರೆಂದು ಅತಿ ವಿನಯೋಕ್ತಿಗಳಿಂದ ಪ್ರಾರ್ಥಿಸುವೆನು.

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಂಗಳು ೧೭೪೭(?) ನೆ ಸಂದ ವರ್ತಮಾನವಾದ ವಿಕ್ರಮ ಸಂವತ್ಸರದ ಆಶ್ವಯುಜ ಶುದ್ಧ ೧೪ ಗುರುವಾರದಲ್ಲು ........[ಇಲ್ಲಿ ಬಿರುದಾವಳಿ ಇದೆ].........ಅನೇಕ ಬಿರುದಾಂಕಿತ ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀ ಕೃಷ್ಣರಾಜ ಒಡೆಯರವರು ಲೋಕ ರಂಜನಾರ್ಥವಾಗಿ ಚತುರ್ವಿಧ ಪುರುಷಾರ್ಥಪ್ರದಮಾದ ಇತಿಹಾಸ ಪುರಾಣ ಸಾರಭೂತಮಾದ........ಸೌಗಂಧಿಕಾ ಪರಿಣಯಮೆಂಬ ಈ ನವೀನ ಕೃತಿಯನ್ನು ಕರ್ಣಾಟಕ ಭಾಷಾವಚನ ರಚನಾರೂಪಮಾಗಿ ವಿಸ್ತರಿಸುವ ಕ್ರಮವದೆಂತೆದೆನೆ-"

ಇಲ್ಲಿ ಕೃತಿರಚನೆಯ ಪ್ರಸ್ತಾಪವು ಒಂದೇ ಕಡೆಗೆ ಎರಡು ಬೇರೆ ಬೇರೆ ರೀತಿಯಲ್ಲಿ ಬಂದುದನ್ನು ಗಮನಿಸಬೇಕು. ಮೊದಲಿನದರಲ್ಲಿ ವಿನಯೋಕ್ತಿಗಳಿಂದ ಉತ್ತಮ ಪುರುಷದಲ್ಲಿ ಹೇಳಿದುದಾದರೆ, ಎರಡನೆಯದರಲ್ಲಿ ತೃತೀಯ ಪುರುಷವಿದೆ ಮತ್ತು ಮುಮ್ಮಡಿಯವರ ಬಿರುದಾವಳಿಯು ಉಕ್ತವಾಗಿದೆ. 'ಎನ್ನ ಕುಲದೇವತೆಯಾದ ಶ್ರೀ ಚಾಮುಂಡೇಶ್ವರೀ' ಮತ್ತು 'ನಮ್ಮ ಕುಲ ಕ್ರಮಾಗತೇಷ್ಟ ದೇವತಾಸ್ವರೂಪನಾದ ಶ್ರೀ ನಂಜುಂಡೇಶ್ವರ' ಎಂಬ ಹೇಳಿಕೆಗಳು ಮುಮ್ಮಡಿಯವರಿಗೆ ವಿಶಿಷ್ಟವಾಗಿ ಅನ್ವಯಿಸುತ್ತವೆ. ಕತೆಯಲ್ಲಿ ಕೂಡ ಚಾಮುಂಡೇಶ್ವರಿಗೆ ಪ್ರಾಧಾನ್ಯವಿದ್ದುದು ಮಾತ್ರವಲ್ಲದೆ, ಹರಿ, ಹರರ ಹಾಗೂ ಶೈವ ವೈಷ್ಣವರ ವಿಚಾರಗಳ ಪ್ರಸಕ್ತಿಯಲ್ಲಿ ಎರಡನ್ನೂ ಸಮಾನವಾಗಿ ಗಣಿಸಲಾಗಿದೆ. ಇದರ

ಮೇಲಿಂದ 'ಸೌಗಂಧಿಕಾಪರಿಣಯ'ವು ಮೂಲತಃ ಮುಮ್ಮಡಿಯವರ ಕಲ್ಪನೆಯೇ ಆಗಿದ್ದು ಅವರ ಕಾಲಕಾಲದ ನಿರ್ದೇಶನಗಳ ಮೇರೆಗೆ ಆಸ್ಥಾನ ವಿದ್ವಾಂಸನೊಬ್ಬನು ಲಿಪಿಕಾರನಾಗಿ, ವಿವಿಧ ಶಾಸ್ತ್ರ ವಿಷಯಗಳನ್ನು ಸೇರಿಸುತ್ತ, ಅಲ್ಲಲ್ಲಿ, ವಿಶದೀಕರಿಸಿ ಬರೆದನೆಂದು ಊಹಿಸುತ್ತೇವೆ.

ನಾಟಕ ಗದ್ಯದ ವಿಭಾಗದಲ್ಲಿ ಕಾಳಿದಾಸನ ನಾಟಕತ್ರಯವೂ, ಭವಭೂತಿಯ ಉತ್ತರರಾಮ ಚರಿತವೂ, ರತ್ನಾವಳೀ ನಾಟಕವೂ (ವತ್ಸರಾಜ ಕಥೆ) ಕನ್ನಡ ಗದ್ಯದಲ್ಲಿ ಹೊರಹೊಮ್ಮಿದೆ. ಇವುಗಳಲ್ಲಿ ಮಾಲವಿಕಾಗ್ನಿಮಿತ್ರದ ಕಥೆಯ ರಚನಾಕಾಲ ಒಂದೇ ತಿಳಿದುಬಂದಿದೆ (೧೮೪೭). ಇವುಗಳ ಅನುವಾದದಲ್ಲಿ ಸ್ವಲ್ಪ ಸ್ವಾತಂತ್ರ್ಯವನ್ನು ವಹಿಸಿ, ಹೊಸ ಕಲ್ಪನೆಗಳನ್ನು ಸೇರಿಸಿದ್ದಾಗಿದೆ. (ಉದಾಹರಣೆಗೆ: ಶಾಕುಂತಲದಲ್ಲಿ ಪ್ರತಿಷ್ಠಾನ ನಗರದ ವರ್ಣನೆ, ವತ್ಸರಾಜಕಥೆಯಲ್ಲಿ, ಇಂದ್ರಜಾಲಕ, ವಿಂದ, ಅನುವಿಂದರೆಂಬ ಹೊಸ ಪಾತ್ರಗಳು). ಸಂಸ್ಕೃತವನ್ನು ಚೆನ್ನಾಗಿ ಅಭ್ಯಸಿಸಿದ್ದ ಕನ್ನಡದ ಪ್ರಾಚೀನ ಕವಿಗಳು, ಕಾಳಿದಾಸ, ಭವಭೂತಿ ಇವರ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ತರುವುದಕ್ಕೆ ಮಹತ್ವ ಕೊಟ್ಟಿರಲಿಲ್ಲ. ಮೇಲಣ ಅನುವಾದಗಳು ಈ ನಾಟಕಗಳಿಗೆ ಸಂದ ಮನ್ನಣೆಯ ದ್ಯೋತಕವಾಗಿವೆ. ಇನ್ನು ಮುಮ್ಮಡಿಯವರ ಕರ್ತೃತ್ವ ವಿಚಾರವಾಗಿ ಹೇಳುವುದಾದರೆ ಸಮಕಾಲೀನ ಆಕರಗಳಲ್ಲಿ ಈ ಗದ್ಯಾನುವಾದಗಳ ಉಲ್ಲೇಖವು ದೊರೆಯುವುದಿಲ್ಲ.

## ಸಮಾರೋಪ

ಇಷ್ಟರವರೆಗಿನ ಸಮಾಲೋಚನೆಯಿಂದ ನಿಷ್ಪನ್ನವಾಗುವ ಅಂಶಗಳನ್ನು ಹೀಗೆ ಸಮಾರೋಪಗೊಳಿಸಬಹುದು. ಮುಮ್ಮಡಿಯವರು ಸ್ವತಃ ವಿದ್ವಾಂಸರೂ, ಕೆಲವು ವಿಷಯಗಳಲ್ಲಿ ಪಾರಂಗತರೂ ಆಗಿದ್ದರು. ಅಲ್ಲದೆ ಗ್ರಂಥರಚನೆ ಮತ್ತು ಮುದ್ರಣ ಪ್ರಕಟಣೆಗಳ ವಿಚಾರದಲ್ಲಿ ಆಸಕ್ತರಿದ್ದರು. ಅವರು ಗ್ರಂಥ ರಚನಾ ಸಾಮರ್ಥ್ಯವನ್ನು ಪಡೆದಿದ್ದರು ಮತ್ತು ಆ ಪ್ರಕಾರ ರಚಿಸಿಯೂ ಇದ್ದಾರೆ. ಸಂಸ್ಕೃತದ ಕೆಲವು ಸ್ತೋತ್ರಗಳು, ಕ್ರೀಡಾವಿಚಾರ, ಸೌಗಂಧಿಕಾ ಪರಿಣಯದ ಮೂಲ ಕತೆ ಇವನ್ನು ಅವರು ನಿಶ್ಚಯವಾಗಿಯೂ ರಚಿಸಿದ್ದಾರೆ. ಇನ್ನೂ ಕೆಲವು ಕೃತಿಗಳು ಇವೆಯಾದರೂ ಅವನ್ನು ಹೆಸರಿಸುವುದಕ್ಕೆ ಮೇಲಿನವುಗಳಿಗಿದ್ದಂತೆ ಸ್ಪಷ್ಟವಾದ ಪ್ರಮಾಣಗಳು ಇಲ್ಲವೆಂಬ ಕಾರಣ ಮಾತ್ರದಿಂದ ಬಿಡಬೇಕಾಗಿದೆ.

ಆಸ್ಥಾನ ವಿದ್ವಾಂಸರ ಸಹಯೋಗದಿಂದ ಹಲವಾರು ಗ್ರಂಥಗಳ ನಿರ್ಮಾಣವಾಯಿತಲ್ಲದೆ, ಭಾಷಾಶೈಲಿ, ಅಂತ್ಯಗದ್ಯ, ಉಪಶೀರ್ಷಿಕೆ ಇವೆಲ್ಲ ವಿಧವಿಧವಾಗಿರುವುದು, ಇತರರ ಸಹಯೋಗವನ್ನು ಪುಷ್ಟೀಕರಿಸುತ್ತಿದೆ. ಈ ಸಹಯೋಗವು ಎರಡು ಬಗೆಯಾದುದು. ಮುಮ್ಮಡಿಯವರು ಕೃತಿ ರಚನೆಯಲ್ಲಿ ಆಸ್ಥೆ ವಹಿಸಿ, ಕವಿ

ಚರಿತಕಾರರು ಹೇಳುವಂತೆ 'ಸೂಚನೆಗಳನ್ನು ಕೊಟ್ಟು' ಬರೆಸಿದ್ದ ಬಗೆಯು ಉಭಯ ಕರ್ತೃತ್ವವೆನಿಸುತ್ತದೆ. ಮಹಾಭಾರತ, ಭಾಗವತ, ಅಧ್ಯಾತ್ಮ ರಾಮಾಯಣ, ಶಂಕರ ಸಂಹಿತೆ ಇವುಗಳ ಗದ್ಯಾನುವಾದಗಳೂ, 'ಗ್ರಹಣದರ್ಪಣ' 'ಚತುರಂಗಸಾರಸರ್ವಸ್ವ'ಗಳೂ ಉಭಯ ಕರ್ತೃತ್ವಕ್ಕೆ ನಿದರ್ಶನಗಳಾಗಿವೆ. ಈ ಬಗೆಯ ಕೃತಿಗಳಲ್ಲಿ ಮುಮ್ಮಡಿಯವರ ಪಾಲು ಎಷ್ಟು, ಆಸ್ಥಾನಿಕರದು ಎಷ್ಟು ಎಂಬುದನ್ನು ಅದೆಂತು ಹೇಳಬಂದೀತು? ಹಾಗೆ ತಿಳಿಯಲು ಪ್ರಯತ್ನಿಸುವುದು ಸಾಧುವೂ ಅಲ್ಲ. ಇಷ್ಟು ಮಾತ್ರ ನಿಜ, ಮುಮ್ಮಡಿಯವರ ರಚನಾತ್ಮಕ ಆಸ್ಥೆ ಮತ್ತು ಪ್ರೋತ್ಸಾಹ ಇಲ್ಲದೇ ಅವುಗಳು ನಿರ್ಮಾಣವಾಗುತ್ತಿರಲಿಲ್ಲ ಎಂಬುದನ್ನು ಬಗೆದರೆ ಅವರಿಗೇನೇ ಆ ಕೃತಿಗಳ ಹೆಚ್ಚಿನ ಶ್ರೇಯಸ್ಸನ್ನು ಸಲ್ಲಿಸಬೇಕಲ್ಲವೆ?

ಅನ್ಯಕರ್ತೃತ್ವದ, ಎಂದರೆ ಮುಮ್ಮಡಿಯವರಿಗೆ ಬರಿಯೆ ಅಂಕಿತವಾದ ಕೃತಿಗಳು ಇನ್ನೊಂದು ಬಗೆಯವಾಗಿವೆ. ಅವುಗಳ ವಿಷಯದಲ್ಲಿ ಹೀಗೆಯೇ ಎಂದು ಹೇಳುವುದು ದೂರಾಪಾಸ್ತವಿದೆ. ಕೃತಿರಚನಾ ಪೂರ್ವದಲ್ಲಿ ದೊರೆಗಳ ಸಂಬಂಧವೇನೂ ಇರದೇ ಆಮೇಲೆ ಅದನ್ನು ರಚಿಸಿದವನಿಂದ ಓದಿಸಿ, ಅಭಿಪ್ರಾಯವಿತ್ತು, ಸಂಭಾವನೆಯನ್ನು ಸಲ್ಲಿಸಿದ ಕಾರಣದಿಂದ ಅನೇಕ ಕವಿಗಳು ಕೃತಜ್ಞತಾಭಾವದಿಂದ, ತಮ್ಮ ಕೃತಿಗಳನ್ನು ಮುಮ್ಮಡಿಯವರಿಗೆ ಅರ್ಪಿಸಿರಬೇಕು. ಸ್ಥಳ ಮಹಾತ್ಮೆಯ ಕೃತಿಗಳು, ಯಕ್ಷಗಾನ, ನಾಟಕಗದ್ಯ, ಬತ್ತೀಸ ಪುತ್ಥಳಿಯಂಥ ಕಥೆಗಳು–ಇವನ್ನು ಈ ಮಾಲಿಕೆಯಲ್ಲಿ ಸೇರಿಸಬಹುದು. ಇಂಥ ಕೃತಿಗಳು ಸಮಕಾಲೀನ ಆಕರಗಳಲ್ಲಿ ಉಲ್ಲೇಖವಾಗಿಲ್ಲವೆಂಬುದು ಈ ಮಾತಿಗೆ ಪುಷ್ಟಿಯನ್ನೀಯುತ್ತದೆ.

ಮುಮ್ಮಡಿ ಕೃಷ್ಣರಾಜರ ಗ್ರಂಥ ಕರ್ತೃತ್ವದ ನಿರ್ಣಯ ಏನೇ ಇರಲಿ, ಅವರು ಹೊಸಗನ್ನಡ ಸಾಹಿತ್ಯದ ಮೂಲಭೂತ ಲಕ್ಷಣವಾದ ಗದ್ಯರಚನೆಗೆ ಅನನ್ಯವಾದ ಪ್ರಚೋದನೆಯಿತ್ತರು. ಹಿಂದೆಂದೂ ಕಂಡುಬಾರದ ಅನೇಕ ಶಾಸ್ತ್ರಪುರಾಣ ಹಾಗೂ ಲೌಕಿಕ ಕಾವ್ಯಗಳು ಕನ್ನಡ ಗದ್ಯದಲ್ಲಿ ಒಡಮೂಡಿದವು. ಅಧ್ಯಾತ್ಮ, ಜ್ಯೋತಿಷ್ಯ, ಕಾವ್ಯಶಾಸ್ತ್ರ, ನೃತ್ಯ, ಸಂಗೀತ, ಕ್ರೀಡಾದಿ ಕಲೆಗಳು ಗ್ರಂಥರೂಪದಲ್ಲಿ ಹೊರಹೊಮ್ಮಿದುವು. ಸಂಸ್ಕೃತದ ಪ್ರಸಿದ್ಧ ನಾಟಕಗಳು ಕನ್ನಡ ಗದ್ಯರೂಪವನ್ನು ಪ್ರಥಮತಃ ಪಡೆದುವು. 'ಸೌಗಂಧಿಕಾ ಪರಿಣಯ'ದಂಥ ಬಹುಮಟ್ಟಿಗೆ ಸ್ವತಂತ್ರವೆನಿಸುವ ಕಥಾರಚನೆಯು ನಿರ್ಮಾಣವಾಯಿತು. ಇವೆಲ್ಲ ಪರಂಪರಾಗತ ವಿಷಯಗಳೇ ಆಗಿರಲಿ, ಸಾವಿರಾರು ಪುಟಗಳ ಸರಸ ಹಾಗೂ ಸುಲಭವಾದ ಗದ್ಯಸಾಹಿತ್ಯ ಹೊಸಗನ್ನಡಕ್ಕೆ ಒದಗಿ ಬಂದುದು ಸಣ್ಣ ಕೊಡುಗೆಯೇನಲ್ಲ.

## ೬.೪ ಆಸ್ಥಾನದ ಕನ್ನಡ ಕವಿಗಳು

ಕೃಷ್ಣರಾಜರ ಆಸ್ಥಾನದಲ್ಲಿ ಕನ್ನಡ ಕವಿ, ಲೇಖಕರಿಗಿಂತ ಸಂಸ್ಕೃತ ವಿದ್ವಾಂಸರು ಹೆಚ್ಚು ಪ್ರಾಶಸ್ತ್ಯವನ್ನು ಪಡೆದಿದ್ದರು. ಅಳಿಯ ಲಿಂಗರಾಜನೊಬ್ಬ ಇದಕ್ಕೆ ಅಪವಾದ.

ಏನಿದ್ದರೂ ಅವರ ಔದಾರ್ಯದ ಫಲವನ್ನು ಪಡೆದ ಕೆಲವರು ತಮ್ಮ ಕನ್ನಡ ಕಾವ್ಯಗಳಲ್ಲಿ ಒಂದಿಲ್ಲೊಂದು ಬಗೆಯಲ್ಲಿ ಸ್ತುತಿಸಿದ್ದಾರೆ. ಬೇರೆ ಕೃತಿರಚನೆ ಮಾಡಿದ ಹಲವು ಕನ್ನಡ ಕವಿಗಳ ಪರಿಚಯವನ್ನು ನೋಡುವ.

**ದೇವಚಂದ್ರ ಮತ್ತು ಇತರರು** ಇಂಥ ಲೇಖಕರಲ್ಲಿ ದೇವಚಂದ್ರನನ್ನು ಮೊದಲಿಗೆ ಹೆಸರಿಸಬೇಕು. ಕೃಷ್ಣರಾಜರ ತಂದೆಯ ಕಾಲದಲ್ಲಿಯೇ ಆಸ್ಥಾನದಲ್ಲಿದ್ದ ಈತನು ಮೆಕೆಂಝಿಯೊಡನೆಯ ಸಂಪರ್ಕದಿಂದಾಗಿ 'ರಾಜಾವಳೀ ಕಥೆ'ಯನ್ನು ರಚಿಸಿದುದನ್ನು ಈ ಹಿಂದೆ ಪರಿಶೀಲಿಸಿದ್ದೇವೆ. <೫೧೧>

ಸ್ವಕಲ್ಪಿತ ಕಥೆಯೊಂದನ್ನು ವಚನಕಾವ್ಯವಾಗಿ ಬರೆದ ಯಾದವ ಕಬ್ಬಿಗನ ಬದುಕು ಸಾಹಸದಿಂದ ಕೂಡಿದ್ದಾಗಿದೆ. ಈತನು ದೊಡ್ಡಬಳ್ಳಾಪುರದ ಅರವತ್ತೊಕ್ಕಲು ಮತದ ಮಾಧ್ವನು. ಮುಮ್ಮಡಿ ಕೃಷ್ಣರಾಜರ ಪ್ರೀತ್ಯಾಸ್ಪದನಾಗಿ ಆಸ್ಥಾನದಲ್ಲಿದ್ದ ಕಾಲಕ್ಕೆ, ಅವನ ಸ್ವಾಭಿಮಾನದ ನಡತೆಯಿಂದಲೊ, ಚಾಡಿಕೋರರ ಮಾತಿನಿಂದಲೊ ಅವನ ಮೇಲೆ ರಾಜರ ಅವಕೃಪೆಯಾಯಿತು. ಯಾದವನು ಆಸ್ಥಾನದಿಂದ ಹೊರಟು ಬಂದು ಹಳ್ಳಿಯಲ್ಲಿಯೆ ನಿಂತನು.[೯] 'ಕಲಾವತಿ ಪರಿಣಯ'ದ ರಚನೆಯಾದುದು ಆವಾಗಲೇ. ಕನ್ನಡ ವಚನ ಕಾವ್ಯಗಳಲ್ಲಿ ಇದುವೆ ದೊಡ್ಡದು. ಸರಳ ರಗಳೆ ಅಥವಾ ದಂಡಕ ವೃತ್ತದಲ್ಲಿದ್ದರೂ ಅದರ ನಡೆ ಗದ್ಯದಂತೆಯೆ ಇರುವುದರಿಂದ, ಗೋವಿಂದ ಪೈಯವರು ಇದನ್ನು ಕನ್ನಡದ ಮೊತ್ತಮೊದಲಿನ ಕಾದಂಬರಿ ಎಂದು ಕರೆದರು.[೧೫] ಕನ್ನಡದಲ್ಲಿ ಇದೊಂದು ವಿಶಿಷ್ಟವಾದ ಕೃತಿಯಾಗಿದೆ.

ಸುಪ್ರಸಿದ್ಧವಾದ 'ಮುದ್ರಾಮಂಜೂಷ' ಕೃತಿಯನ್ನು ರಚಿಸಿದ ಕೆಂಪುನಾರಾಯಣನ ಬಗ್ಗೆ ಹೆಚ್ಚಿನ ಅಂಶಗಳು ತಿಳಿದುಬಂದಿವೆ. ಮುಮ್ಮಡಿಯವರ ಆಶ್ರಿತನಾಗಿದ್ದ ಆತನು ತನ್ನ ಕೃತಿಯ ಅಂತ್ಯದಲ್ಲಿ 'ಯತ್ಕಟಾಕಾಂಕ್ಷರ ಸ್ತೋಮಃ ಕವಿಕಲ್ಪದ್ರುಮಾಯತೇ' ಎಂದು ದೊರೆಯನ್ನು ಹೊಗಳಿದ್ದುದು ಔಚಿತ್ಯಪೂರ್ಣವಾಗಿದೆ. ಪ್ರಖ್ಯಾತ ಸಂಸ್ಕೃತ ನಾಟಕಗಳನ್ನು ಗದ್ಯಕಥನರೂಪಕ್ಕೆ ತಿರುಗಿಸುವ ಒಲವನ್ನು ಮೊದಲಿಗೆ ತೋರಿದವನು ಕೆಂಪುನಾರಾಯಣನೇ. ಅನಂತರವೇ ಹರ್ಷ, ಕಾಳಿದಾಸ ಮೊದಲಾದವರ ಕೃತಿಗಳ ಗದ್ಯಾನುವಾದಗಳು ಹೊರಬಂದುವು.

ದೇವಲಾಪುರದ ನಂಜುಂಡನು ಪೋಷಕ-ಆಶ್ರಿತ ಸಂಬಂಧದಲ್ಲಿ ಚರಮಸೀಮೆಯನ್ನು ತಲುಪಿದ್ದಿರಬೇಕು. 'ಸಲಹಿದೊಡೆಯನು, ಬುದ್ಧಿವಿದ್ಯೆಯ ಕಲಿಸಿರುವ ಗುರು, ಅನ್ನಪ್ರದನು ನೀನು, ನಿನ್ನ ಸುಗುಣಾವಳಿಯ ವರ್ಣಿಸೆ ಎನ್ನ ಜನ್ಮಕೆ ಫಲವಿದು' ಎಂಬ ಅವನ ಮುಮ್ಮಡಿಯವರ ಕುರಿತಾದ ಈ ಭಕ್ತ್ಯಾದರದ ನುಡಿಯನ್ನು ಗಮನಿಸಬೇಕು. ಆದರೆ 'ಅತಿಪರಿಚಯಾದವಜ್ಞಾ' ಎಂಬಂತೆ ಒಮ್ಮೆ ದೊರೆಯ ಅವಕೃಪೆಗೆ

ಪಾತ್ರನಾಗಿ ಒದ್ದಾಡಿದನು. ಆ ಕಾಲಕ್ಕೆಯೆ ಶಿವಸ್ತುತಿರೂಪದ 'ಅಪರಾಧ ಸ್ತೋತ್ರ'ವನ್ನು ಬರೆದುದೆಂಬ ಪ್ರತೀತಿ ಇದೆ.[೧೬] ಬೇರೆ ಕೆಲವು ಶಿವಸ್ತುತಿಗಳನ್ನು ಬಿಟ್ಟರೆ ಅವನು ರಚಿಸಿದ ಷಟ್ಪದಿ, ಸಾಂಗತ್ಯ, ಕಂದ, ವೃತ್ತರೂಪದ ಪದ್ಯಗಳು ಕೃಷ್ಣರಾಜರ ವರ್ಣನೆಗೇ ಮೀಸಲಾಗಿದೆ. ವಿರಕ್ತ ತೋಂಟದಾರ್ಯ ವಿರಚಿತ ಕರ್ಣಾಟಕ ಶಬ್ದಮಂಜರಿಗೆ ಒಬ್ಬರು ಟೀಕೆಯನ್ನು* ಬರೆದಿದ್ದು ಅದಕ್ಕೆ ಮುಮ್ಮಡಿಯವರೇ ಕಾರಣರಾಗಿದ್ದಾರೆ. (ಪರಿಶೋಧನೆ: ಮುನೇಗೌಡ, ಮುದ್ರಣ ೧೮೭೦)

**ಲಿಂಗರಾಜ :** ಲಿಂಗರಾಜ (೧೮೨೩-೧೮೭೪) ಸಾಹಿತ್ಯ ಪೋಷಣೆಯಲ್ಲಿ ಮುಮ್ಮಡಿಯವರ ಮಾರ್ಗವನ್ನೇ ತುಳಿದರು. ಅರಮನೆಯಲ್ಲಿಯೆ ಹುಟ್ಟಿ, ದೊರೆಗಳ ಕಣ್ಣರಿಕೆಯಲ್ಲಿ ಬೆಳೆದ ಲಿಂಗರಾಜರಿಗೆ ಅವರು ಸಂಸ್ಕೃತ, ಕನ್ನಡಗಳಲ್ಲಿ ಶಾಸ್ತ್ರಾಭ್ಯಾಸ ಮಾಡಿಸಿದರು. ತಮ್ಮ ಇಬ್ಬರು ಪುತ್ರಿಯರನ್ನು ಧಾರೆಯೆರೆದು ಕೊಟ್ಟರು. ಜೊತೆಗೆ ಐಶ್ವರ್ಯವನ್ನೂ ಇತ್ತರು.

ಲಿಂಗರಾಜರ ಮುಂದಿನ ಜೀವನವು ಸಾಹಿತ್ಯಕಲೆಗಳ ಸೇವೆಗೆ ಮೀಸಲಾಯಿತು. ಸಂಗೀತದಲ್ಲಿಯೂ ಅವರು ಪರಿಣತರಿದ್ದರು.[೧೭] ಅವರ ನಿವಾಸವು ವಿದ್ವಾಂಸರಿಂದ ತುಂಬಿದ್ದಾಗಿ ನಾನಾವಿಧ ಗ್ರಂಥಾವಲೋಕನ, ಕಾವ್ಯವಿಚಾರ ಚರ್ಚೆಗಳು ನಡೆಯುತ್ತಿದ್ದವು. ವಿದ್ವತ್ಸೇವಾನುರಾಗಿಯಾದ ಲಿಂಗರಾಜರು ತಮ್ಮ ಮಾವನಂತೆ ಕವಿ ಲೇಖಕರಿಗೆ ಆಶ್ರಯವಿತ್ತರು.* ತಮ್ಮ ದಾನ, ಉದಾರ ಗುಣಗಳಿಂದ ವಿಶೇಷ ಖ್ಯಾತಿಯನ್ನು ಹೊಂದಿದ್ದರು. ತನ್ನ ಮೇಲೆ ಸದ್ಯೈವ ಕೃಪಾದೃಷ್ಟಿಯನ್ನಿರಿಸಿದುದೇ ಅಲ್ಲದೇ, ತುಂಬಿದ ಸಭೆಯಲ್ಲಿ 'ಉಭಯ ಕವಿತಾವಿಶಾರದ'ನೆಂಬ ಸನ್ಮಾನವನ್ನು ಇತ್ತಂಥ ಮುಮ್ಮಡಿ

---

* ಈ ಟೀಕೆಯ ಕರ್ತೃ ಸೋದೆ ಗುರುರಾಯ (ನೋಡಿ: ಸೋದೆ ಗುರುರಾಯನ ಕರ್ನಾಟಕ ಶಬ್ದಮಂಜರಿ ಟೀಕುಸುಧಾ ಒಂದು ಟಿಪ್ಪಣಿ-ಎಸ್. ಶಿವಣ್ಣ, ಬಿಡುಮುತ್ತು, ಕನ್ನಡ ಸಾಹಿತ್ಯ ಪರಿಷತ್ತು - ೨೦೦೪)

* ಕೆ. ವಾಸುದೇವಾಚಾರ್ಯರ 'ನೆನಪುಗಳು' ಪುಸ್ತಕದಲ್ಲಿ ಬಂದ ಈ ಹೇಳಿಕೆಯನ್ನು ಗಮನಿಸಬೇಕು: ಆಗ್ಗೆ ಮೈಸೂರಿಗೆ ಬಂದ ವಿದ್ವಾಂಸರು ಪ್ರಭುದರ್ಶನ ಪಡೆಯಲು ವೀಣೆ ವೆಂಕಟಸುಬ್ಬಯ್ಯನವರನ್ನಾಗಲೀ ಅಳಿಯಂದಿರು ಲಿಂಗರಾಜೇ ಅರಸರನ್ನಾಗಲೀ ಆಶ್ರಯಿಸಿ ಅವರ ಮೂಲಕ ಪ್ರಯತ್ನಿಸಬೇಕಾಗಿತ್ತು. ಇವರಿಬ್ಬರೂ ವಿದ್ವಾಂಸರು ಸಂಗೀತ ಸಾಹಿತ್ಯ ಪ್ರೇಮಿಗಳು, ವಿದ್ವಜ್ಜನ ಪೋಷಕರು, ಉದಾರಿಗಳಾದ ಶ್ರೀಮಂತರು. . . .ನನ್ನ ತಂದೆಯವರು ಮೈಸೂರಿಗೆ ಬರುವ ಹೊತ್ತಿಗೆ ಅಳಿಯಂದಿರು ಲಿಂಗರಾಜೇ ಅರಸರ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತ್ತು. ಕೆಲವಾರು ಯಕ್ಷಗಾನಗಳನ್ನು ಬರೆದು ದಕ್ಷರಾದ ನಟರಿಂದ ಅವನ್ನು ಅತ್ಯುತ್ತಮ ರೀತಿಯಲ್ಲಿ ಆಡಿಸುತ್ತಿದ್ದ ಲಿಂಗರಾಜರು ಉತ್ತಮ ಕವಿಗಳೆಂದೂ ಕಲಾಪ್ರೇಮಿಗಳೆಂದೂ ವಿಖ್ಯಾತರಾಗಿದ್ದರು. ಪುರಾಣಗಳನ್ನು, ಅದರಲ್ಲೂ ಶ್ರೀ ಮದ್ಭಾಗವತವನ್ನು ಅತ್ಯಂತ ಲಕ್ಷ್ಯಪೂರ್ವಕವಾಗಿ ಅಧ್ಯಯನ ಮಾಡಿ, ಕಂಠಪಾಠ ಮಾಡಿಕೊಂಡಿದ್ದ ನನ್ನ ತಂದೆಯವರ ಮೇಲೆ ಲಿಂಗರಾಜ ಅರಸರಿಗೆ ಅಪಾರ ವಿಶ್ವಾಸವುಂಟಾದದ್ದರಲ್ಲಿ ಆಶ್ಚರ್ಯವೇನಿಲ್ಲ. (ಪು. ೨-೩)

ಕೃಷ್ಣರಾಜರ ವಿಷಯದಲ್ಲಿ ಅವರಿಗೆ ಅಪಾರ ಗೌರವವಿದ್ದುದು. ಅವರ ಕೃತಿಗಳಲ್ಲಿ ಅಲ್ಲಲ್ಲಿ ವ್ಯಕ್ತವಾಗಿದೆ. 'ನರಪತಿ ಚರಿತಂ' ಎಂಬ ಅವರ ಅಲಂಕಾರ ಗ್ರಂಥದ ಲಕ್ಷಣ ಪದ್ಯಗಳೆಲ್ಲ ಕೃಷ್ಣರಾಜ ಸ್ತುತಿಪರವಾಗಿವೆ.

ಲಿಂಗರಾಜರದು ಸಹಜ ಕವಿತ್ವ ಅವರ ಪದ್ಯ ರಚನೆಯು ನಿರರ್ಗಳವಾಗಿ ಹರಿದು ಬಂದಿದೆ. ಅವರ ೫೦ಕ್ಕೆ ಮಿಕ್ಕಿದ ಕೃತಿಗಳಲ್ಲಿ 'ಪ್ರಭಾವತಿ ಪರಿಣಯ'ವು ಮಹಾಕಾವ್ಯವಾಗಿದೆ. 'ಗಿರಿಜಾಕಲ್ಯಾಣ'ವು (೧೮೬೧) ಸಾಂಗತ್ಯದಲ್ಲಿದ್ದರೆ, 'ವೀರಭದ್ರಶತಕ' ಮತ್ತು 'ಮಹಾಲಿಂಗ ಶತಕ'ಗಳು ಅನುಕ್ರಮವಾಗಿ ವೃತ್ತ, ಕಂದಗಳಲ್ಲಿವೆ. ಕೆಲವು ದೇವತಾ ಸ್ತೋತ್ರಗಳು, ಹಾಡುಗಳು, ಲಾವಣಿಗಳನ್ನೂ ಲಿಂಗರಾಜರು ರಚಿಸಿದ್ದಾರೆ. 'ಅಷ್ಟವಿಧ ನಾಯಿಕಾ ಲಕ್ಷಣ ಲಕ್ಷ್ಯ'ವನ್ನು ಹೇಳುವ 'ಶೃಂಗಾರ ಜಾವಡಿಗಳು' (ಪ್ರಕಟಣೆ. ೧೮೯೨) ಕಂದಪದ್ಯ ರೂಪದಲ್ಲಿದೆ.

ಆದರೆ ಅವರ ಮುಖ್ಯ ಅಭಿರುಚಿಯು ಯಕ್ಷಗಾನಗಳಲ್ಲಿದ್ದಿತು. ಸಂಗೀತಲೋಲರಾದ ಅವರು ವಿವಿಧ ಧಾಟಿಯ ಪದ್ಯಗಳನ್ನು ರಚಿಸುವುದಕ್ಕೆ ಯಕ್ಷಗಾನ ಪ್ರಕಾರವು ಅನುಕೂಲವಾಗಿ ಪರಿಣಮಿಸಿರಬೇಕು. ಆ ರೀತಿಯಲ್ಲಿ ೩೬-೩೭ ಯಕ್ಷಗಾನ ಪ್ರಸಂಗಗಳನ್ನು ರಚಿಸಿದರು. ಒಂದೊಂದು ಸುಮಾರು ೪೦೦ ಪದ್ಯಗಳನ್ನೊಳಗೊಂಡಿದ್ದು, ಇವರಷ್ಟು ಬಹುಸಂಖ್ಯೆಯಲ್ಲಿ ಪ್ರಸಂಗಗಳನ್ನು ಬರೆದವರು ಕಡಿಮೆ. ಇವು ರಂಗಸ್ಥಳದ ಮೇಲೆ ಪ್ರಯೋಗವಾದದ್ದರ ಖಚಿತ ಉಲ್ಲೇಖವಿಲ್ಲದಿದ್ದರೂ, ಕೆಲವಾದರೂ ಪ್ರಯೋಗವಾಗಿರ ಬೇಕೆಂದು ಊಹಿಸುತ್ತೇವೆ. ಹೇಗೂ ಅರಮನೆಯಲ್ಲಿಯೆ ಯಕ್ಷಗಾನ ಪ್ರಯೋಗಕ್ಕೆ ಅವಕಾಶವಿದ್ದಿತೆಂಬುದನ್ನು ಜ್ಞಾಪಿಸಿಕೊಳ್ಳಬಹುದು.

ತನ್ನ ಯಕ್ಷಗಾನ ಪ್ರಸಂಗಗಳಿಗಾಗಿ ಅವರು ರಾಮಾಯಣ, ಮಹಾಭಾರತ ಮತ್ತು ಭಾಗವತಗಳಿಂದಲೇ ಹೆಚ್ಚಾಗಿ ವಿಷಯಗಳನ್ನು ಆಯ್ದುಕೊಂಡಿದ್ದಾರೆ. ಯಕ್ಷಗಾನಗಳಿಗೆ ಸೂಕ್ತವಾದ ವೀರ, ಶೃಂಗಾರ ಮತ್ತು ಭಕ್ತಿರಸಗಳ ಅಭಿವ್ಯಕ್ತಿಯು ಇವರ ಕೃತಿಗಳಲ್ಲಿ ಒಡಮೂಡಿದೆ. ಅವರು ಆಯ್ದುಕೊಂಡ ಕಥಾವಸ್ತುಗಳಲ್ಲಿ, 'ಮನ್ಮಥ ಮೋಡಿ' 'ಮದಾಲಸಾ ಪರಿಣಯ' 'ನಲಕೂಬರ ವಿಳಾಸ' ಹಾಗೂ 'ಚಂದ್ರಾವಳೀ ಕಥೆ' ಎಂಬ ಸುಪರಿಚಿತವಲ್ಲದವುಗಳೂ ಇವೆ. ಲಿಂಗರಾಜರ ಯಕ್ಷಗಾನ ಪ್ರೇಮಕ್ಕೆ ಮನಸೋತವರಾಗಿ, ನಂಜಯ್ಯನೆಂಬವರು ಗಟ್ಟದ ಕೆಳಗಣಿಂದ ಬಂದು ಮೈಸೂರಲ್ಲಿಯೆ ನೆಲೆಸುವಂತಾಯ್ತು ಎಂಬುದನ್ನು ನೆನೆಯತಕ್ಕುದು.

## ಸಂದರ್ಭ ಸೂಚಿ

೧. ಸಂಸ್ಕೃತ ಕವಿಚರಿತೆ II, ಪು. ೪೫
೨. ಕುಣಿಗಲ ರಾಮಾಶಾಸ್ತ್ರಿಗಳ ಚರಿತ್ರೆ, ಪು. ೮೦
೩. ಮಹಾರಾಜರವರ ವಂಶಾವಳಿ, ಭಾ ೨, ಪು. ೨೫೫
೪. ಅದೇ, ಪು. ೧೭೯
೫. ಅದೇ, ಪು. ೨೫೬
೬. Inidan Antiquary, vol 1. 1 (1872), ಪು. ೨೩೫ ; Dynastic History of North India; H. C. Ray. vol. 14, ಪು. ೮೭೨
೭. Epigraphia Carnatica, vol. 14, ಪು. ೮೯–೯೦
೮. ರಾಜವಂಶರತ್ನ ಪ್ರಭೆ, ತೃತೀಯ ರುಚಿ (ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಹಸ್ತಪ್ರತಿ ನಂ. k 17) ಪು. ೧೦–೧೧
೯. Mysore Archaeological Department Annual Report, 1935, ಪು. ೧೫೦–೧೫೧
೧೦. ಕೃಷ್ಣರಾಜಭಕ್ತಿಸಾರ (ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಹಸ್ತಪ್ರತಿ ನಂ. K. A. 93).
೧೧. ಕರ್ಣಾಟಕ ಕವಿಚರಿತೆ III, ಪು. ೧೯೨
೧೨. ಅದೇ, ಪು. ೧೮೩
೧೩. ಸಂಸ್ಕೃತ ಕವಿಚರಿತೆ II, ಪು. ೪೩೫
೧೪. ಪರಿಷತ್ಪತ್ರಿಕೆ, ಸಂ. ೯ (೧೯೨೫) : ಬೆಳ್ಳಾವೆ ವೆಂಕಟನಾರಣಪ್ಪ
೧೫. ಕನ್ನಡ ಸಾಹಿತ್ಯ ಸಮ್ಮೇಳನ, ಮುಂಬಯಿ ೧೯೫೦ : ಅಧ್ಯಕ್ಷ ಭಾಷಣ
೧೬. ಕರ್ಣಾಟಕ ಕವಿಚರಿತೆ III, ಪು. ೧೯೬
೧೭. ನರಪತಿಚರಿತಂ – ಪೀಠಿಕೆ ಪು. ೧

ಪ್ರಕರಣ : ೭

# ಧಾರ್ಮಿಕ ವಾಙ್ಮಯಕಾರರು

ಪಾಶ್ಚಾತ್ಯ ಪ್ರಭಾವ, ಹೊಸ ವಿಚಾರ ಪ್ರಣಾಲಿ, ಇವಾವುದರ ಪರಿವೆಯಿಲ್ಲದೇ, ಅನೇಕ ಸಂಪ್ರದಾಯನಿಷ್ಠರು ಗದ್ಯ ಪದ್ಯಗಳೆರಡರಲ್ಲಿಯೂ ಧಾರ್ಮಿಕ ವಾಙ್ಮಯವನ್ನು ಸೃಷ್ಟಿಸಿದರು. ಹೊಸಗನ್ನಡ ವಾಹಿನಿಯ ಜೊತೆಗೆ ಇದೂ ಸಾಕಷ್ಟು ಬಲವತ್ತರವಾಗಿ ಹರಿದು ಬಂದಿತಾದ್ದರಿಂದ ಸಂಧಿಕಾಲದ ಈ ಸಾಹಿತ್ಯ ನಿರ್ಮಿತಿಯನ್ನು ಚುಟುಕಿನಲ್ಲಿಯೇ ಆಗಲಿ, ಅಗತ್ಯವಾಗಿ ಪರಿಶೀಲಿಸ ಬೇಕಾಗುವುದು. [+] ಭಕ್ತಿಭಾವ ಮತ್ತು ಸ್ವಮತಾಭಿಮಾನಗಳಿಂದ ಪ್ರೇರಿತರಾಗಿ ಜೈನರು, ವೀರಶೈವರು, ಅದ್ವೈತಿಗಳು, ರಾಮಾನುಜೀಯರು ಹಾಗೂ ಮಾಧ್ವರು ಪರಂಪರಾಗತ ಸಾಹಿತ್ಯ ರಥವನ್ನು ಎಳೆದುಕೊಂಡು ಬಂದರು. ಈ ಕಾರ್ಯದಲ್ಲಿ ಆ ಆ ಮತಗಳ ಪೀಠಾಧಿಪತಿಗಳು ಉತ್ತೇಜನ ನೀಡಿದ್ದಾರಲ್ಲದೆ, ಹಲವರು ಸ್ವತಃ ಕಾವ್ಯರಚನೆಗೆ ಉದ್ಯುಕ್ತರಾಗಿದ್ದಾರೆ.

## ೭೧ ಜೈನರು

ಶ್ರವಣಬೆಳ್ಗೊಳದ ಉತ್ತರಕ್ಕಿರುವ ತೋವಿನಕೆರೆಯು ಆಗಿನ ಜೈನ ವಾಙ್ಮಯ ರಚನೆಗೆ ಕೇಂದ್ರಸ್ಥಾನದಂತಿದ್ದಿತು. ಅಲ್ಲಿಯ ಬ್ರಹ್ಮಣಾಂಕ / ಚಂದ್ರಸಾಗರವರ್ಣಿ ಮತ್ತು ರಾಯಂಣವಾಗ್ಮಿ ಇವರು ಕಳೆದ ಶತಮಾನದ ಜೈನ ಸಾಹಿತ್ಯದ ಪುರಸ್ಕರ್ತರಾಗಿದ್ದರು. ಬ್ರಹ್ಮಣಾಂಕನು ಮಂಗರಸನ ಕೃತಿಯನ್ನು ಆಧರಿಸಿ ಭಾಮಿನಿ ಷಟ್ಪದಿಯಲ್ಲಿ 'ಜಿನಭಾರತ'ವನ್ನು ಬರೆದನು. ಅವನ ಕೃತಿಯಲ್ಲಿ ಕುಮಾರವ್ಯಾಸನ ಛಾಯೆಯು ಅಲ್ಲಲ್ಲಿ ಕಂಡುಬರುತ್ತದೆ.* ಇವನ ಇನ್ನೊಂದು ಕೃತಿ 'ಕಂದರ್ಪ ಕೊರವಂಜಿ'ಯು ಯಕ್ಷಗಾನ ರೂಪದಲ್ಲಿದೆ.

---

[+] ಸೂಚನೆ : ಈ ಪ್ರಕರಣದಲ್ಲಿಯ ಹೆಚ್ಚಿನ ಕವಿ-ಕೃತಿ ಸಾಮಗ್ರಿಗೆ ಕರ್ಣಾಟಕ ಕವಿಚರಿತೆಯ ಮೂರನೆಯ ಸಂಪುಟವು ಆಧಾರವಾಗಿದೆ.

* ಉದಾಹರಣೆಗೆ ಬ್ರಾಹ್ಮಣ ವೇಷಧಾರೀ ಅರ್ಜುನನು ದ್ರೌಪದೀ ಸ್ವಯಂವರ ಕಾಲದಲ್ಲಿ ಧನುಸ್ಸನ್ನೂ ಮುರಿಯಲು ಸಿದ್ಧನಾದಾಗಿನ ಚೇಷ್ಟೆಯ ಮಾತುಗಳು. (ಕವಿಚರಿತೆ, III. ಪು. ೧೫೪-೧೫೫ರಲ್ಲಿ ಉದ್ಧೃತ)

**'ಚಂದ್ರಸಾಗರ ವರ್ಣಿ'**ಗಳು** ನಿರರ್ಗಳ ಕವಿತಾಶಕ್ತಿಯುಳ್ಳವರಾಗಿದ್ದು ಸುಮಾರು ೨೫ ಕೃತಿಗಳನ್ನು ರಚಿಸಿದ್ದಾರೆ. ಆಗಿನ ಕಾಲದ ಪ್ರಸಿದ್ಧ ಜೈನ ಯತಿಗಳೆನಿಸಿದ್ದ ಶ್ರವಣಬೆಳ್ಗೊಳದ ಚಾರುಕೀರ್ತಿ ಪಂಡಿತರಿಂದ ಉಪದೇಶ ಪಡೆದು, ಮಧ್ಯ ವಯಸ್ಸಿನಲ್ಲಿ ಸನ್ಯಾಸವನ್ನು ಸ್ವೀಕರಿಸಿದರು. ಇವರ ಕೃತಿ ರಚನೆಗೆ ತೋವಿನಕೆರೆ ಬಸದಿಯ ಶ್ರಾವಕರು ಉತ್ತೇಜನ ನೀಡಿದ್ದಾರೆ. ಇವರ ಇಷ್ಟದೇವತೆ ಚಂದ್ರಪ್ರಭನು ; ಕೃತಿಗಳ ಆರಂಭದಲ್ಲಿ ತಪ್ಪದೇ ಅವನ ಸ್ತುತಿ ಬರುತ್ತದೆ. ಭಾಮಿನೀ ಷಟ್ಪದಿಯು ಇವರಿಗೂ ಅತಿ ಮೆಚ್ಚಿನದಾಗಿದ್ದು, ಹೆಚ್ಚಿನ ಕಾವ್ಯಗಳು ಆ ವೃತ್ತದಲ್ಲಿಯೇ ರಚಿತವಾಗಿವೆ. ಜೈನಮತ ಪ್ರಕ್ರಿಯೆಗೆ ನೇರವಾಗಿ ಸಂಬಂಧಿಸಿದ ಕೃತಿಗಳಲ್ಲಿ 'ಭವ್ಯಾಮೃತವು' ಹೆಚ್ಚು ಪ್ರಸಿದ್ಧವಾದುದು. 'ಧರ್ಮಪರೀಕ್ಷೆ'ಯು ಒಂದು ಗದ್ಯಕೃತಿ. 'ಜಿನಭಕ್ತಿಸಾರ'ವು ಕನಕದಾಸರ 'ಹರಿಭಕ್ತಿಸಾರ'ದ ಮಾದರಿಯಲ್ಲಿದ್ದು ಸಾಕಷ್ಟು ಜನಬಳಕೆಯಲ್ಲಿದೆ. 'ಜಿನರಾಮಾಯಣ, ಯಶೋಧರಷಟ್ಪದಿ, ವಿಕ್ರಮಂಧರಕಾವ್ಯ, ಚಾಮುಂಡರಾಯನ ಕಥೆ, ಬಿಜ್ಜಳರಾಯ ಪುರಾಣ'–ಇವು ಅವರ ಜೈನ ಕಥನ ಕಾವ್ಯಗಳು. 'ಪರಶುರಾಮ ಭಾರತ'ದಲ್ಲಿ ವೀರ ಪರಶುರಾಮನು ಸುಭೌಮನೆಂಬ ಜೈನ ರಾಜನಿಂದ ಹತನಾದ ಸಂದರ್ಭ ಬರುತ್ತದೆ. 'ಜಿನಮುನಿ' ಎಂಬ ಷಟ್ಪದೀ ಕಾವ್ಯದಲ್ಲಿ ಗುರುದತ್ತನೆಂಬವನ ಕಥೆಯಿದ್ದರೆ, 'ಹಿಮಶೀತಳನ ಕಥೆ'ಯಲ್ಲಿ (ಸಾಂಗತ್ಯ ಕೃತಿ) ಜೈನ ಗುರು ಅಕಳಂಕನ ಮಹಿಮೆ ವರ್ಣಿತವಾಗಿದೆ. 'ಕದಂಬ ಪುರಾಣ'ವೆಂಬ ಚಿಕ್ಕ ಕೃತಿಯಲ್ಲಿ ವಿವಿಧ ಚಾರಿತ್ರಿಕ ವಿಷಯಗಳನ್ನು ಚುಟುಕಿನಲ್ಲಿ ಹೇಳಿದೆ. ಕೊಡಗು ಬ್ರಿಟಿಶರ ರಾಜ್ಯದಲ್ಲಿ ಲೀನವಾದ ಸಂದರ್ಭವು (೧೮೩೪) ಅದರಲ್ಲಿ ಪ್ರಾಸಂಗಿಕವಾಗಿ ಬಂದಿದೆ.

**'ಮುಲ್ಲಾಶಾಸ್ತ್ರ'**ವು ಚಂದ್ರಸಾಗರವರ್ಣಿಗಳ ವಿಶಿಷ್ಟ ಕೃತಿ. ಇಂದ್ರನಿಂದ ಅಪಮಾನ ಹೊಂದಿದ ಪಾರ್ಶ್ವಭಟ್ಟಾರಕನೆಂಬವನು ಮುಲ್ಲಾಶಾಸ್ತ್ರವನ್ನು ಕಲ್ಪಿಸಿದುದಂತೆ. ಆ ಸಂದರ್ಭದಲ್ಲಿ ಬಸದಿಯು ಮಸೀದೆಯ ರೂಪ ತಾಳಿತು. ಮೋಕ್ಷವು ಮೊಖ್ಖ (ಮಕ್ಕಾ) ಆಯಿತು! ಪಾರ್ಶ್ವಭಟ್ಟಾರಕನು ಎಲ್ಲವನ್ನು ಹೀಗೆ 'ಅಪಸವ್ಯ' ಮಾಡಿ ಮುಸಲ್ಮಾನ್ ಮತವನ್ನು ಸಿದ್ಧಗೊಳಿಸಿದನೆಂಬುದು ವಿಚಿತ್ರ ಕಲ್ಪನೆಯಾಗಿದೆ. ಸಾಂಗತ್ಯದಲ್ಲಿರುವ 'ಬಿಟ್ಟಿವರ್ಧನ ಚರಿತ್ರೆ'ಯಲ್ಲಿ ಮಾತ್ರ ಚಾರಿತ್ರಿಕ ಘಟನೆಯ ವಿಪರ್ಯಾಸವಾದುದಿಲ್ಲ. ಜೈನಮುನಿಗಳು ಬಿಟ್ಟಿವರ್ಧನನ ಹಸ್ತದಿಂದ ಭಿಕ್ಷೆಯನ್ನು ಸ್ವೀಕರಿಸಲು ಒಪ್ಪದಿದ್ದಾಗ ಅವನು ಶ್ರೀವೈಷ್ಣವ ಮತವನ್ನು ಸ್ವೀಕರಿಸಿ, ರಾಮಾನುಜಾಚಾರ್ಯರೇ 'ಎಲ್ಲಕೆ ಕುಲಸ್ವಾಮಿ'ಗಳೆಂದು ನೇಮಿಸಿದನಾಗಿ ಉಕ್ತವಾಗಿದೆ. ಚಂದ್ರಸಾಗರವರ್ಣಿಗಳು ಹೀಗೆ ಬಹು ಸಂಖ್ಯೆಯಲ್ಲಿ ಕೃತಿ ರಚನೆ ಮಾಡಿದ್ದರೂ ಅವರ ಕವಿತ್ವವು ಸಾಧಾರಣ ಮಟ್ಟದ್ದೆಂದು ಕವಿಚರಿತಕಾರರು ಅಭಿಪ್ರಾಯಪಟ್ಟಿದ್ದಾರೆ.

---

** ಬ್ರಹ್ಮಣಾಂಕನೇ ಸನ್ಯಾಸವನ್ನು ಸ್ವೀಕರಿಸಿ ಚಂದ್ರಸಾಗರವ[illegible] ಎಂಬ ಹೆಸರನ್ನು ಪಡೆದನು– ಎಂಬೊಂದು ಊಹೆಯಿದೆ.

ಮೇಲೆ ಹೇಳಿದ ಚಾರುಕೀರ್ತಿ ಪಂಡಿತರ ಒಂದು ಕೃತಿಯೂ ಇದೆ. (೧೮೧೫). ಚಂಪೂ ರೂಪದಲ್ಲಿರುವ ಅವರ 'ಭವ್ಯಜನಚಿಂತಾಮಣಿ'ಯಲ್ಲಿ 'ಜಿನಾರ್ಚನೆಯೊಳೊಂದೊಂದರಿಂದ ಸುಖವನ್ನೈದಿದ[ವರ] ಕಥೆ'ಗಳಿವೆ.

**'ತೋವಿನಕೆರೆಯ ರಾಯಂಣ'** (ವಾಗ್ಮಿ) ಜೈನಕವಿ ಪೋಷಕನಾಗಿ ಮಹತ್ವದ ಸೇವೆ ಸಲ್ಲಿಸಿದ್ದಾನೆ. ಮನೆತನದಿಂದ ಅನುಕೂಲಸ್ಥ; ಮಕ್ಕಳಿರಲಿಲ್ಲ. ಬೆಂಗಳೂರಲ್ಲಿ ನೆಲೆಸಿ ಗ್ರಂಥಪ್ರಕಟನೆಯನ್ನು ಕೈಕೊಂಡನು. 'ಭವ್ಯಜನ ಚಿಂತಾಮಣಿ'ಯನ್ನೂ ಚಂದ್ರಸಾಗರವರ್ಣಿಗಳ ಹಲವಾರು ಕೃತಿಗಳನ್ನೂ ಪ್ರಕಟಿಸಿದ್ದಾನೆ. ಅವರ 'ಅಷ್ಟಾಂಗ ನಿಘಂಟು' (೧೮೮೮) ಎಂಬ ವೈದ್ಯ ಶಬ್ದಕೋಶಕ್ಕೆ ಟೀಕೆಯನ್ನು ಬರೆದಿದ್ದಾನೆ.

ಬ್ರಹ್ಮಸೂರಿಯ ಮಗ **ಪದ್ಮರಾಜಪಂಡಿತ**ನಿಗೂ ಗ್ರಂಥ ಪ್ರಕಾಶನದಲ್ಲಿ ಆಸಕ್ತಿ. ಇವನ ಕಾರ್ಯವು ಹೆಚ್ಚು ವಿಸ್ತಾರವೂ ವೈವಿಧ್ಯಮಯವೂ ಆಗಿದೆ. ಅವನು ಸಂಪಾದಿಸಿದ ಮತ್ತು ಟೀಕೆ ಟಿಪ್ಪಣಿಗಳನ್ನು ಬರೆದ, ಸುಮಾರು ೨೫ ಪುಸ್ತಕಗಳು ಕೇವಲ ಹತ್ತು ವರ್ಷಗಳ ಅವಧಿಯಲ್ಲಿ (೧೮೮೮–೧೮೯೭) ಹೊರಬಂದಿವೆ. ಜೈನ ನೀತಿ–ತತ್ತ್ವ ವ್ರತ ಮತ್ತು ಕಥೆಗಳಿಗೆ ಸಂಬಂಧಿಸಿದ ಪ್ರಾಚೀನ ಕೃತಿಗಳನ್ನು ಸಾಮಾನ್ಯ ಕನ್ನಡಿಗನಿಗಾಗಿ ಒದಗಿಸುವುದರಲ್ಲಿ ಅವನು ವಿಶೇಷ ಉತ್ಸಾಹವನ್ನು ತೋರಿದನು. ಗುಣಭದ್ರ, ಸೋಮಪ್ರಭ, ಉಪೇಂದ್ರಾಚಾರ್ಯ ಮೊದಲಾದವರ ಕೃತಿ ಭಾಗಗಳ, ಇತರ ಸ್ತೋತ್ರಾದಿಗಳ ಪರಿಚಯವನ್ನು ಆ ರೀತಿಯಲ್ಲಿ ಮಾಡಿಕೊಟ್ಟಿದ್ದಾನೆ. ಸುಪ್ರಸಿದ್ಧವಾದ ಮಹಾಪುರಾಣವನ್ನು ಕನ್ನಡಿಸಲೆಂದು ಕೈಗೆತ್ತಿಕೊಂಡನಾದರೂ (೧೮೯೬–೯೭) ಅದರ ಪ್ರಕಟನೆಯು ಎರಡು ಭಾಗಗಳಿಗೆ ತಡೆದು ನಿಂತಿತು. ಅವನು ಆರಂಭಿಸಿದ 'ಬುಧಜನ ಮನೋರಂಜನಿ' ಎಂಬ ಪತ್ರಿಕೆಯಾದರೂ (೧೮೯೦-೯೫) ಜೈನೀಯ ಕಾರ್ಯಕ್ಕೆಯೇ ಮೀಸಲಾಗಿದ್ದಿತು. 'ಸಟೀಕಾ ಸ್ಮೃತಿ ಸಂಗ್ರಹ' (೧೮೮೮), 'ಸುಜ್ಞಾನ ಚಂದ್ರಿಕಾ', 'ಸಜ್ಜನಚಿತ್ತವಲ್ಲಭ' (೧೮೯೧) ಎಂಬ ಅವನ ಕೃತಿಗಳು ಜೈನ ನೀತಿ ತತ್ವಗಳನ್ನು ತಿಳಿಸುವಂತಹವಾಗಿವೆ. ಈ ವಿಷಯದ ಕುರಿತು, ಇಂಗ್ಲಿಶ್, ಮರಾಠೀ, ಕನ್ನಡ–ತ್ರಿಭಾಷಾ ಪ್ರಕಟನೆಯೊಂದನ್ನು ಧರಣೇಂದ್ರ ಜನ್ನಪ್ಪನೆಂಬವನೊಂದಿಗೆ ಮುಂಬಯಿಯಿಂದ ಪ್ರಕಟಪಡಿಸಿರುವುದು ಒಂದು ವಿಶೇಷ. (Treatise on Jain Law and Usage....1886).

ವ್ರತ/ಕಥಾ ವಿಚಾರದಲ್ಲಿ 'ಭವ್ಯಾಮೃತ', 'ಚತುರ್ದಶನೋಂಪೀ ಕಥೆ', 'ಅಕಲಂಕಾಷ್ಟಕ, ವ್ರತಫಲ' ಮತ್ತು 'ಪಂಚಾಣು ವ್ರತಕಥೆ' (೧೮೯೨–೯೩ರ ಅವಧಿಯಲ್ಲಿ ಪ್ರಕಟವಾದವುಗಳು)–ಇವನ್ನು ಹೆಸರಿಸಬೇಕು. ಜನತೆಯಲ್ಲಿ ಬಳಕೆಯಲ್ಲಿದ್ದ 'ಉದಯರಾಗ, ದೇವರ ಪದಗಳು' (೧೮೯೫) 'ಬಾಗಿಲು ತಡೆಯುವ ಮತ್ತು ಚಂಡಾಡುವ ಹಾಡುಗಳು' (೧೮೯೭) ಇವನ್ನು ಮುದ್ರಿಸಿ ಪ್ರಚುರಪಡಿಸಿದ್ದಾನೆ. 'ಕಾರ್ಕಳ ಚರಿತ್ರೆ'ಯನ್ನು ಪದ್ಮರಾಜಪಂಡಿತನೇ ಮೊದಲಿಗೆ ಬರೆದುದು. ಕ್ರಿ.ಶ. ೧೮೯೭ರಲ್ಲಿ ಮೈಸೂರ ನಗರವಲ್ಲಿ

ಶಾಂತೀಶ್ವರನ ಪ್ರತಿಷ್ಠೆಯಾದಾಗ, ಆ ಘಟನೆಗೆ ನಾಟಕರೂಪವನ್ನು ಕೊಟ್ಟು ವರ್ಣಿಸಿದ್ದಾನೆ. ಗಾದೆಗಳ ಸಂಗ್ರಹ ಕಾರ್ಯದಲ್ಲಿಯೂ ಅವನು ಆಸಕ್ತಿಯನ್ನು ತೋರಿದ್ದಾನೆ. ಹೀಗೆ ರಾಯಯಂಣ ವಾಗ್ಮಿ ಮತ್ತು ಪದ್ಮರಾಜಪಂಡಿತ ಇವರ ಗ್ರಂಥ ಪ್ರಕಟನಾ ಕಾರ್ಯವು ಕಳೆದ ಶತಮಾನದ ಮಹತ್ವದ ಘಟನೆಗಳಲ್ಲೊಂದಾಗಿದೆ.

ಇತ್ತ ಮೂಡಬಿದರೆಯ **ಚಂದಯ್ಯ ಉಪಾಧ್ಯಾಯ**ನು 'ಜೈನಾಚಾರ' ಮುಂತಾದವನ್ನು ರಚಿಸಿದ್ದಾನೆ. ಇವನ ಕೃತಿಗಳ ಬಗ್ಗೆ ಆರಾ ಎಂಬಲ್ಲಿಯ ಕನ್ನಡ ತಾಡಪತ್ರೀಯ ಗ್ರಂಥಸೂಚಿಯಲ್ಲಿ ಉಲ್ಲೇಖವಿದೆ; ಅವು ಮುದ್ರಿತವಾದಂತಿಲ್ಲ. ಹಿರಣ್ಯಗರ್ಭನೆಂಬ ಕವಿಯ ಹೆಸರನ್ನು ಧಾರವಾಡ ಕಡೆಯವನೆಂಬುದಾಗಿ ಕವಿಚರಿತಕಾರರು ಹೆಸರಿಸಿದ್ದಾರೆ. ಅವನ 'ಸರಸ್ವತೀ ಪ್ರಬಂಧ'ವು (ಚಂಪೂ) ಜೈನ ಪುರಾಣಗಳ ಸಂಗ್ರಹಕಥನವಾಗಿದೆ. ಇನ್ನೊಂದು ಕೃತಿ–'ವಿಶ್ವಕೃತಿ ಪರೀಕ್ಷಣ'ವು, ವಿವಿಧ ಕವಿ ಕೃತಿಗಳೊಂದಿಗೆ, ನೇಮಿಚಂದ್ರ, ಅಗ್ಗಳರ ಕೃತಿಗಳನ್ನು ಹೋಲಿಸಿ, ಈ ಜೈನ ಕಾವ್ಯಗಳೇ ಶ್ರೇಷ್ಠವೆಂಬ ಮಾತನ್ನು ಪ್ರತಿಪಾದಿಸುತ್ತದೆ. ಇವಾವವೂ ಮೇಲ್ಮಟ್ಟದ ಕೃತಿಗಳೇನಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಒಂದು ಕಾಲಕ್ಕೆ ವೈಭವದ ಶಿಖರದಲ್ಲಿದ್ದ ಜೈನ ವಾಙ್ಮಯವು ೧೯ನೆಯ ಶತಮಾನದಲ್ಲಿ ಕ್ರಮೇಣ ಇಳಿಮುಖವಾಗುತ್ತ ಸಾಗಿದ್ದಿತು.

## ೭.೨ ವೀರಶೈವರು

ಹತ್ತೊಂಬತ್ತನೆಯ ಶತಮಾನದಲ್ಲಿ ಸಾಗಿಬಂದ ವೀರಶೈವ ವಾಙ್ಮಯವನ್ನು ಸಾಂಪ್ರದಾಯಕ ರಚನೆ ಮತ್ತು ಅನುಭಾವ ಕವಿತ್ವ ಎಂದು ವಿಭಾಗಿಸಬಹುದು. ಎರಡರಲ್ಲಿಯೂ ಎಣಿಕೆ ಮೀರಿದ ಹೆಚ್ಚಳ. ಎರಡಕ್ಕೂ ಪ್ರೇರಣೆ ಮಠಾಧೀಶರುಗಳಿಂದ. ಅಲ್ಲದೆ ಅವರಲ್ಲಿ ಕೆಲವರು ಸ್ವಯಂ ಕೃತಿರಚನೆ ಮಾಡಿದ್ದುಂಟು. ಮಠಾಧೀಶರಲ್ಲಿ ಎದ್ದು ಕಾಣುವವರು–ಅಟವೀಶ್ವರರು ಹಾಗೂ ಚನ್ನವೀರಸ್ವಾಮಿಗಳು. ಇಬ್ಬರೂ ತಮ್ಮ ವಿರಕ್ತಿ ಹಾಗೂ ತಪೋಬಲದಿಂದ ದೂರ ದೂರದಲ್ಲಿದ್ದ ಶಿಷ್ಯರನ್ನು ಆಕರ್ಷಿಸಬಲ್ಲವರಾಗಿದ್ದರು.

ಅದರಂತೆ ಶಿರಹಟ್ಟಿ ಫಕೀರೇಶ್ವರರು, ತಿಪ್ಪಶೆಟ್ಟಿಮಠದ ಗುರುಸಿದ್ಧರು, ಬೆಟ್ಟದ ಪುರಮಠದ ಚಿಕ್ಕವೀರದೇಶಿಕರು, ತಾಂಡೂರಿನ ಸಿದ್ಧರಾಮ ಶಿವಯೋಗಿಗಳು, ಹಾನಗಲ್ಲಿನ ಕುಮಾರಸ್ವಾಮಿಗಳು (ಕುಮಾರಕವಿ–ಎಂಬುದು ಅವರ ಕಾವ್ಯನಾಮ), ಹಂಪಿಯ ಮುದ್ದುಸಂಗ ಮಣಿಗಳು, ಮುಳಗುಂದದ ಮಹಾಂತಲಿಂಗದೇಶಿಕರು–ಇನ್ನೂ ಹಲವರು ಸ್ಥಳೀಯವಾಗಿ, ಧಾರ್ಮಿಕ ಜಾಗೃತಿಗೂ ಸಹಜಸ್ಫೂರ್ತ ಕವಿತಾರಚನೆಗೂ ಕಾರಣರಾದರು.

ಇವರುಗಳ ಶಿಷ್ಯಕೋಟಿ ಸ್ವಾಭಾವಿಕವಾಗಿ ಅಗಣಿತವಾದದ್ದು. ಈ ಶಿಷ್ಯವರ್ಗದ ವೈಶಿಷ್ಟ್ಯವೆಂದರೆ ತಮ್ಮ ಗುರುವಿನಲ್ಲಿ ಅನನ್ಯವಾದ ಭಕ್ತಿ–ವಿಶ್ವಾಸ. ಗುರುವಿನ ಕರುಣೆ–

ಕೃಪೆಗಳನ್ನು ತಮ್ಮ ಹಾಡುಗಳಲ್ಲಿ ಮತ್ತೆ ಮತ್ತೆ ತಂದಿದ್ದಾರೆ. ಅಟವೀಶ ಸ್ವಾಮಿಗಳನ್ನು ಕುರಿತು, ಈ ರೀತಿಯಾಗಿ ಹಾಡುಗಳನ್ನು ರಚಿಸಿದವರೆಂದು ಮತಕೂರಿನ ಸಂಜುಂಡ ಶಿವಯೋಗಿ ಹಾಗೂ ಅರಿಶಿನಗುಂಟೆಯ ವೀರಪ್ಪಾರಾಧ್ಯರನ್ನು ಹೆಸರಿಸಬೇಕು.

ಗಮನಿಸಬೇಕಾದ ಮಾತೆಂದರೆ, ಸ್ವತಃ ಸ್ವಾಮಿಗಳಾದವರು ಹಿರಿಯ ಸ್ವಾಮಿಗಳನ್ನು ಅರಸಿಕೊಂಡು ಹೋಗುತ್ತಿದ್ದದ್ದು. ಮುಳಗುಂದದ ಮಹಾಂತಲಿಂಗದೇಶಿಕ ಹಾಗೂ ಬಾಲಲೀಲಾ ಮಹಾಂತ ಶಿವಯೋಗಿಗಳು ಮೇಲೆ ಹೇಳಿದ ಚೆನ್ನವೀರ ಸ್ವಾಮಿಗಳ ಬಳಿಗೆ ಹೋಗಿ ಉಪದಿಷ್ಟರಾದವರು. ಇತ್ತ ಅವರ ಲೌಕಿಕ ಶಿಷ್ಯರಲ್ಲಿ ಮೈಲಾರದ ಬಸವಲಿಂಗನದು ಎದ್ದು ಕಾಣುವ ವ್ಯಕ್ತಿತ್ವ. ವೀರಶೈವ ತತ್ವಗಳನ್ನು ಕವಿತಾರೂಪದಲ್ಲಿ ಸರಳವಾಗಿ ನಿರೂಪಿಸಿದ್ದಾನೆ. ಷಟ್ಸ್ಥಲ ನಿರಾಭಾರ–ವೀರಶೈವ ಸಿದ್ಧಾಂತ, ಶಿವಾನುಭವ ದರ್ಪಣ ಮತ್ತು ಗುರುಕರುಣ ತ್ರಿವಿಧಿ–ಇವು ಅವನ ಸರಸ ಕವಿತ್ವಕ್ಕೆ ಸಾಕ್ಷಿ.

ಯಾರೋ ಒಬ್ಬ ವೈಷ್ಣವರು ಅವನನ್ನು ಹರಿಯ ವೈರಿ ಎಂದು ಟೀಕಿಸಿದಾಗ, 'ಹಾಗೇನೂ ಇಲ್ಲ' – ಎಂದು ಅವನು ಕವಿತೆ ರಚಿಸಿದ್ದು ಹೀಗೆ :

ಗೋವಿಂದನಾದಿ ಗೋವಿಂದ । ನಮ್ಮ
ಗೋವಿಂದಲಾದ ಪಾವನ ಪಾಂಡುರಂಗ
ಶ್ರೀ ವಿಭೂತಿಯು ಪಂಚ ಗೋವಿಂದ । ವೀರ
ಶೈವಾಗವೋಕ್ತವು ಗೋವಿಂದ
ಪೀವ ಪಂಚಾಮೃತ ಗೋವಿಂದ । ಜಗ
ಜೀವ ಸಂತೃಪ್ತಿಯು ಗೋವಿಂದ

ಅಚ್ಚರಿಪಡಬೇಡಿರಿ. 'ಗೋವಿಂದ'–ಇದನ್ನು 'ಗೋವಿನಿಂದ' ಎಂದು ಅರ್ಥವಿಸಿಕೊಳ್ಳಿರಿ!

ಇತ್ತ ಸ್ವಾಮಿಗಳಾದವರೇ ಕೃತಿರಚನೆಗೆ ಮನಸ್ಸುಗೊಟ್ಟದ್ದಾದರೆ ಅದರ ಪರಿಯೇ ಬೇರೆ. ಉದಾಹರಣೆಗೆ, **ಹಾನಗಲ್ಲಿನ ಕುಮಾರವಿಭುಸ್ವಾಮಿಗಳು**. ಅವರೊಬ್ಬ ಕಾವ್ಯರಸಿಕರು. ಶಿವನ ಭಿಕ್ಷಾಟನ ವಿಷಯವನ್ನು 'ಭಿಕ್ಷುಕ ಮಹೇಶ ವಿಲಾಸ' ಎಂಬ ಚಂಪೂ ಕಾವ್ಯದಲ್ಲಿ ತಂದಿದ್ದಾರೆ. ಕುಮಾರೇಶ್ವರ ಪುರಾಣವು ಅವರ ಇನ್ನೊಂದು ಮನನೀಯ ಕಾವ್ಯ. ಕೃತಿರಚನೆಯಲ್ಲಿ ಅವರಿಗೆ ಷಡಕ್ಷರಕವಿಯೇ ಮಾರ್ಗದೀಪವಾಗಿದ್ದಾನೆ. ಈ ನಡುಗನ್ನಡ ಕಾವ್ಯ ಪರಂಪರೆಯಲ್ಲಿ ರಚಿತವಾದ ಇನೊಂದು ಕೃತಿ–'ಚೆನ್ನಬಸವಾಭ್ಯುದಯ' ಎಂಬುದು. ರಚಿಸಿದವರು ತಾಂಡೂರಿನ ಹೊಸಮಠದ ಸಿದ್ಧರಾಮಶಿವಯೋಗಿಗಳು.

**ಬಾಲಲೀಲಾ ಮಹಂತ ಶಿವಯೋಗಿಗಳು** ಮುಂಬಯಿ ಕರ್ನಾಟಕದ ಇನ್ನೊಬ್ಬ ವೀರಶೈವ ಮಹಾನುಭಾವರು. ಕ್ರಿ.ಶ. ೧೮೨೩ರಲ್ಲಿ ಆಲಮಟ್ಟಿಯಲ್ಲಿ ಜನಿಸಿದ ಇವರು

ಬದುಕಿದ್ದುದು ೩೬ ವರ್ಷ ಮಾತ್ರ. ಇವರ ದೀಕ್ಷಾಗುರು ಮುಳಗುಂದದ ಮಹಾಂತಲಿಂಗ ದೇಶಿಕರು. ಬಾಲಕರಿಗೆ ಉಚಿತವಾದ ರೀತಿಯಲ್ಲಿ–ಎಂದರೆ ತೊಟ್ಟಿಲಲ್ಲಿ ಮಲಗುವುದು, ಮಗುವಿನಂತೆ ವೇಷ ಭೂಷ ಧರಿಸುವುದು ಮುಂತಾದ ಲೀಲೆಗಳನ್ನು ತೋರುತ್ತಿದ್ದುದರಿಂದ ಅವರಿಗೆ ಮೇಲಿನ ಹೆಸರು ಸ್ಥಿರಗೊಂಡಿತು. ಅವರ ಕೆಲವು ಪದಗಳಲ್ಲಿಯೂ ಈ ಬಾಲಭಾವವು ವ್ಯಕ್ತವಾಗಿದೆ. ಮುಮ್ಮಡಿ ಕೃಷ್ಣರಾಜರಿಂದ ಆಹ್ವಾನಿತರಾಗಿ ಅವರಿಗೆ ನೀತಿಬೋಧೆ ಮಾಡಿದರೆಂದು ಕವಿಚರಿತಕಾರರು ಹೇಳುತ್ತ 'ಶ್ರೀರಂಗಪಟ್ಟಣದ ಖಾಸ ಭೋಗ ತೋಟದ ಬಂಗ್ಲೆಯಲ್ಲಿ ಪಾದ ಬಂದು ನೆಲೆಸಿದ ವರ್ತಮಾನ ಕೇಳಿ ದೊರೆಗಳು ತಮ್ಮ ಗುರಿಕಾರನ ಕೈಲಿ' ಬಿನ್ನಹ ಪತ್ರ ಬರೆದು ಕಳುಹಿದ್ದಾಗ ಕವಿಗಳಾದ ಶಿವಯೋಗಿಗಳು ಅದಕ್ಕೆ ಪದ್ಯರೂಪದಲ್ಲಿ ಉತ್ತರ ಕೊಟ್ಟಿದ್ದಾರೆ. ಮತ್ತು ರಾಜರಿತ್ತ ಯಾವ ಸನ್ಮಾನವನ್ನು ಸ್ವೀಕರಿಸದೇ ಕುಂಬಳ ಬುರುಡೆಯೊಂದನ್ನು ಮಾತ್ರ ತಂದರಂತೆ.

ಬಾಲಲೀಲಾ ಮಹಂತರು ನಿಜಗುಣ ಶಿವಯೋಗಿಗಳ ಮತ್ತು ಸರ್ಪಣಾರ್ಯರ ಕಾವ್ಯ ಪರಂಪರೆಯಲ್ಲಿ ಅನೇಕ ಪದ್ಯಗಳನ್ನು ರಚಿಸಿದ್ದು, ಈಚೆಗೆ 'ಕೈವಲ್ಯ ದರ್ಪಣ' ವೆಂಬ ಹೆಸರಿನಲ್ಲಿ ಅವನ್ನು ಪ್ರಕಟಿಸಲಾಗಿದೆ. ಪುರಾತನ ಶಿವಭಕ್ತರ, ಶರಣರ ಸ್ತೋತ್ರಗಳು ಹೆಚ್ಚಾಗಿ ಇರುವ ಈ ಪದ್ಯಗಳನ್ನು ಸಾಮಾನ್ಯ ಜನರು ಉತ್ಸವ ಕಾಲದಲ್ಲಿಯೂ ತಮ್ಮ ಮನೆಗಳಲ್ಲಿಯೂ ಹಾಡಿಕೊಂಡಿರುವಷ್ಟು ಅವು ಪ್ರಸಾರಗೊಂಡಿವೆ.

ಇವರ ಸಮಕಾಲೀನರಾದ **ನಾಗಭೂಷಣ ಘನಮಠದಾರ್ಯರು** (೧೮೨೮–೧೮೮೪) ಅಷ್ಟೇ ಮಹಿಮಾನ್ವಿತರು. ಆಂಧ್ರದೇಶದ ದೊರ್ವಾಡವು ಅವರ ಹುಟ್ಟಿದೂರು. ಆದರೆ ಅವರ ಕಾರ್ಯಕ್ಷೇತ್ರವು ನಿಜಾಮ ಕರ್ನಾಟಕ ಮತ್ತು ವಿಜಾಪುರ ಜಿಲ್ಲೆಯಲ್ಲಿ ಹೆಚ್ಚಾಗಿ ಹರಡಿದ್ದಿತು. ಮದುವೆಯಾಗಿದ್ದರೂ ತಮ್ಮ ೨೧ನೆಯ ವಯಸ್ಸಿನಲ್ಲಿ ಮನೆ ಬಿಟ್ಟು ಹೋಗಿ ಪುರಾಣ ಪ್ರವಚನ, ಧರ್ಮೋಪದೇಶಗಳಲ್ಲಿ ಕಾಲಕಳೆದರು. ಬಸವೇಶ್ವರರ ಮೇಲೆ ಅವರಿಗೆ ವಿಶೇಷ ಭಕ್ತ್ಯಾದರವಿದ್ದಿತು. ಅವರು ನಿಸ್ಪೃಹರು ಮತ್ತು ನಿಷ್ಠುರ ಮನೋವೃತ್ತಿಯವರು; ಆಗೀಗ ಜನರ ಮೇಲೆ ಸಾತ್ವಿಕ ಸಂತಾಪವನ್ನು ವ್ಯಕ್ತಪಡಿಸಿದುದು ಪದ್ಯಗಳಲ್ಲಿ ಕಂಡುಬರುತ್ತದೆ. ಭಕ್ತಿ, ಸದಾಚಾರಗಳಿಗೆ ಗಮನಕೊಡದೇ ಜನರು ಸಂಸಾರ, ದುರ್ಮೋಹಗಳಲ್ಲಿ ತೊಳಲಾಡುತ್ತಿದ್ದುದನ್ನು ಕಂಡಾಗ ಅವರು 'ಕಸವಿರುವ ಸ್ಥಾನದಿ ಕೆಟ್ಟು ಕುರುಡನಾಗಿ ಪೋದ ನರನ ತೆರನಾದ ಈ ಮನುಜರಿಗೆ ಉಂಟೇ ಭಕುತಿ ಮುಕುತಿ?' ಎಂದು ಕೋಪಿಸಿಕೊಂಡು 'ಮತ್ತಿವರ ಕರ್ಮಕೆ ಚಿಂತಿಸಿ ಇದನಾರಿಗೆ ಹೇಳುವೆ'ನೆಂದು ಬೇಸತ್ತು ನಿರ್ವಾಚ್ಯರಾಗಿ ಬಿಡುತ್ತಿದ್ದರಂತೆ.[೨]

ಮಹಂತ ಶಿವಯೋಗಿಗಳ ಹಾಗೂ ಘನಮಠದಾರ್ಯರ ತತ್ವದ ಪದಗಳನ್ನು ಒಟ್ಟಿಗೆ ಸೇರಿಸಿ, ೧೯೨೨ರಲ್ಲಿ ಮುದ್ರಿಸಲಾಗಿದ್ದಿತು. ಈಚೆಗೆ ಘನಮಠದಾರ್ಯರ ಪದಗಳನ್ನು 'ಭಕ್ತಿಸುಧಾಸಾರ' ವೆಂಬ ಹೆಸರಿನಲ್ಲಿ ಪ್ರತ್ಯೇಕವಾಗಿ ಪ್ರಕಟಿಸಿದ್ದಾಗಿದೆ. ಇವು ಶಾಸ್ತ್ರ

ಜಡವಾಗಿರದೇ ಶಿವನ ಮತ್ತು ಬಸವಾದಿ ಶಿವಶರಣರ ಕುರಿತ ಸ್ತೋತ್ರಗಳಾಗಿವೆ. ಮೇಲೆ ಹೇಳಿದ ಕೈವಲ್ಯದರ್ಪಣದ ಪದ್ಯಗಳಂತೆ ಇವೂ ಜನಪ್ರಿಯವಾಗಿವೆ.

'ಕೃಷಿಜ್ಞಾನ ಪ್ರದೀಪಿಕೆ' ಎಂಬ ಗದ್ಯ ಗ್ರಂಥವು **ನಾಗಭೂಷಣ ಘನಮಠದಾರ್ಯರ** ಹೆಸರಿನಲ್ಲಿದೆ. ಇದರಲ್ಲಿ ಭೂಮಿ ಹಾಗೂ ಪೈರುಗಳಿಗೆ ಸಂಬಂಧಿಸಿದ ವಿಷಯಗಳಿವೆ. ಜೊತೆಗೆ ಅಧ್ಯಾತ್ಮ ವಿಚಾರಗಳಿಗೂ ಇಂಬು ದೊರೆತಿದೆ. ಮನವೆಂಬ ಭೂಮಿಯಲ್ಲಿ ಭಕ್ತಿ ವೈರಾಗ್ಯಗಳನ್ನು ಅದೆಂತು ಬಿತ್ತಿ ಬೆಳೆಯಬೇಕೆಂಬುದರ ಬಗ್ಗೆ ಸೂಕ್ತ ಬೋಧನೆಯಿದೆ.

ಈ ಗ್ರಂಥದಲ್ಲಿಯ ವಿಚಾರಗಳು ಸಂಪೂರ್ಣವಾಗಿ ಘನಮಠದಾರ್ಯರವೇ ಆಗಿದ್ದರೂ ಅದರ ಲೇಖನ ಕಾರ್ಯವನ್ನು ಕುನ್ನಾಳ ಸಿದ್ಧರಾಮಪ್ಪ ಎಂಬವನು ಮಾಡಿದ್ದಾನೆ. ಕೃತಿರಚನೆಗೆ ಹತ್ತು ವರ್ಷ ಮುಂಚೆ ಸಿದ್ಧರಾಮಪ್ಪನಿಗೆ ಅವರ ದರ್ಶನವಾಯಿತು. ಅನೇಕ ಹಳ್ಳಿಗರು ನೆರೆದಿದ್ದಾಗ ಧರ್ಮೋಪದೇಶದ ಜೊತೆಗೆ ಕೃಷಿ ವಿಚಾರವನ್ನು ಸ್ವಾಮಿಗಳು ಪ್ರಸ್ತಾಪಿಸುತ್ತಿದ್ದರು. ಅವನ್ನೆಲ್ಲ ಕ್ರೋಡೀಕರಿಸಿ ಕನ್ನಡದಲ್ಲಿ ಬರೆದಿಡಬೇಕೆಂದು ಸ್ವಾಮಿಗಳ ಅಪ್ಪಣೆಯಾಯಿತು. ಸಾಂಸಾರಿಕ ತಾಪತ್ರಯಗಳಲ್ಲಿದ್ದ ಸಿದ್ಧರಾಮಪ್ಪನಿಗೆ ಅದನ್ನು ಮುಗಿಸುವುದಾಗಲಿಲ್ಲ. ನಾಲ್ಕು ವರ್ಷ ಸಂದ ಮೇಲ ಸ್ವಾಮಿಗಳು ಹುನಗುಂದದ ಸಂಗಪ್ಪ ದೇಸಾಯಿ ಎಂಬ ಶಿಷ್ಯನಿಗೆ ತಿಳಿಸಿದ ಪ್ರಕಾರ ಅವನು ಆ ಲೇಖಕನನ್ನು ಕುಟುಂಬಸಹಿತವಾಗಿ ತನ್ನ ಮನೆಯಲ್ಲಿಯೆ ನಿಲ್ಲಿಸಿಕೊಂಡು ಗ್ರಂಥಪೂರ್ತಿಗೆ ನೆರವಾದನು (೧೮೭೯). ಅದು ಮುಗಿದ ಮೇಲೆ ಇಳಕಲ್ಲು ಮುಕ್ಕಾಮಿನಲ್ಲಿ ಸ್ವಾಮಿಗಳೆದುರು ಓದಿ ತೋರಿಸಿದಾಗ, ಅವರು ಅಲ್ಲಲ್ಲಿ ತಿದ್ದಿ, ಅದಕ್ಕೆ ಇನ್ನಷ್ಟು ವಿಷಯ ಸೇರಿಸಿ ಆಶೀರ್ವಚನವನ್ನು ಬರೆದುಕೊಟ್ಟರು. ಈ ಅಂಶಗಳು ಆ ಪುಸ್ತಕದಲ್ಲಿಯೇ ಉಲ್ಲೇಖಿಗೊಂಡಿವೆ. ಹೀಗೆ 'ಕೃಷಿಜ್ಞಾನ ಪ್ರದೀಪಿಕೆ'ಗೆ ನಾಗಭೂಷಣರು ಮತ್ತು ಸಿದ್ಧರಾಮಪ್ಪ ಇಬ್ಬರೂ ಜೊತೆಯಾಗಿ ಲೇಖಕರಾದರೆಂಬುದನ್ನು ಗಮನಿಸಬೇಕು. ದೊಡ್ಡವರು ವ್ಯಕ್ತಪಡಿಸಿದ ವಿಚಾರಗಳನ್ನು ಅವರ ಸಮೀಪವರ್ತಿಯೊಬ್ಬರು ವಿಸ್ತರಿಸಿ ಬರೆದು, ಗ್ರಂಥರೂಪದಲ್ಲಿ ಹೊರತರುವ ಸಂಭವನೀಯತೆಯನ್ನು ಮುಮ್ಮಡಿ ಕೃಷ್ಣರಾಜರಿಗೆ ಅನ್ವಯಿಸಿ ಹೇಳಿದ್ದೇವೆ. ಈ ಬಗೆಯ ಗ್ರಂಥಕರ್ತೃತ್ವದ ಸ್ಪಷ್ಟ ನಿದರ್ಶನವು ಈ ಪುಸ್ತಕದ ಮೂಲಕ ದೊರೆಯುತ್ತಲಿದೆ. ಸ್ವಾಮಿಗಳು ಕೃಷಿ ವಿಷಯವನ್ನು ಆಯ್ದುಕೊಂಡು ಅದನ್ನು ಗದ್ಯದಲ್ಲಿ ಬರೆಯಿಸಿದುದು ಅವರ ಜನಹಿತ ಚಿಂತನೆಯ ದ್ಯೋತಕವಾಗಿದೆ ; ಲೌಕಿಕ ವಿಚಾರಗಳನ್ನು ಅಧ್ಯಾತ್ಮಕ್ಕೆ ಹೊಂದಿಸಿ ಹೇಳಿದ ಬಗೆಯು ಮನೋಜ್ಞವಾಗಿದೆ.

ಘನಮಠದಾರ್ಯರು ಮುಮ್ಮಡಿ ಕೃಷ್ಣರಾಜರಿಂದ ಆಹ್ವಾನಿತರಾಗಿದ್ದರೆಂದೂ ರಾಜಸನ್ಮಾನವನ್ನು ನಿರಾಕರಿಸಿ ಅವರು ಕುಂಬಳ ಬುರುಡೆಯೊಂದನ್ನು ಮಾತ್ರ ತಂದರೆಂದೂ 'ಕೃಷಿಜ್ಞಾನ ಪ್ರದೀಪಿಕೆ'ಯ ಸಂಪಾದಕರು ಉಲ್ಲೇಖಿಸಿದ್ದಾರೆ. ಆ ಸಂಬಂಧದಲ್ಲಿ ಸ್ವಾಮಿಗಳು ರಚಿಸಿದ್ದೆಂದು ಹೇಳಲಾದ ೧೫ ಷಟ್ಪದೀ ಪದ್ಯಗಳನ್ನು ಪೀಠಿಕೆಯಲ್ಲಿ

ಕೊಟ್ಟಿದ್ದಾರೆ. ಇದರಲ್ಲಿಯ ಕೆಲ ಪದ್ಯಗಳೂ ಮಹಂತ ಶಿವಯೋಗಿಗಳ ಅದೇ ಪ್ರಸಂಗದ 'ಕೈವಲ್ಯ ದರ್ಪಣ' ದಲ್ಲಿಯ ಕೆಲವು ಪದ್ಯಗಳೂ ಒಂದೇ ಆಗಿರುತ್ತವೆ.[೩] ಎರಡೂ ಪದ್ಯಮಾಲಿಕೆಗಳ ವಿಷಯ ಒಂದೇ ; ಎಂದರೆ ಮುಮ್ಮಡಿಯವರ ಸನ್ಮಾನದ ನಿರಾಕರಣೆ! ಇವರಿಬ್ಬರಲ್ಲಿ ಮಹಾರಾಜರನ್ನು ಕಂಡವರು ಯಾರು? ಅಥವಾ ಇಬ್ಬರೂ ಮಹಾರಾಜರಿಗೆ ದರ್ಶನವಿತ್ತಿದ್ದರೆ? ಒಂದೇ ಘಟನೆಯನ್ನು ಹೇಳುವ ಈ ಪದ್ಯಗಳು ಯಾರಿಗೆ ಅನ್ವಯಿಸುತ್ತವೆ? ಇವುಗಳನ್ನು ತುಸು ಪರಿಶೀಲಿಸೋಣ.

ಬಾಲಲೀಲಾ ಮಹಂತ ಶಿವಯೋಗಿಗಳು ಸಂಚಾರ ಮಾಡುತ್ತ ಶ್ರೀರಂಗಪಟ್ಟಣದ ವರೆಗೂ ಹೋದದ್ದನ್ನು ಗಮನಿಸಿದ್ದೇವೆ. ಮುಮ್ಮಡಿಯವರು ಅವರ ಭೇಟಿ ಮಾಡಿ ಉಪದೇಶ ಹೊಂದಿದರೆಂದು ಕವಿಚರಿತಕಾರರು ಹೇಳಬೇಕಾದರೆ ಆ ಘಟನೆ ಮೈಸೂರ ಪ್ರದೇಶದಲ್ಲಿ ಜನಜನಿತವಾಗಿರಬೇಕು. ಮಹಾರಾಜರು ಕೊಟ್ಟಿದ್ದ ಧನಕನಕಗಳನ್ನು ನಿರಾಕರಿಸಿದ ಈ ಕೆಳಗಿನ ಪದ್ಯಗಳು ಬಾಲಲೀಲಾ ಮಹಂತರವೇ ಇರಬೇಕು ;

ಅರಮನೆಯ ಸರ್ವ ಗುರಿಕಾರರು ಕೇಳಿ
ಇರದೆ ಶ್ರೀವೈಷ್ಣವ ಸ್ಮಾರ್ತರು ಮನಸ್ಸಿಗೆ ತನಿ
ಪರಮ ಷಟ್ಸ್ಥಲ ಗುರುಸ್ಥಲ ಶೆಟ್ಟಿ ಮುಂತಾದ ದೈವವೆಲ್ಲವು ಕೇಳಿರೈ ।
ಭರದಿ ನಿಮ ದೊರೆಯು ತಾ ತಿರಕ ಯೋಗಿಗೆ ಇಷ್ಟು
ಸರಂಜಮಿಯ ಮಾಡಿ ಕಳಿಸುವುದುಚಿತವೆ ನೋಡಿ
ತರವಲ್ಲವೆನುತುಸುರಿ ಬಿಡಿಸಿದರೆ ನಿಮ್ಮಂಥ ಪುಣ್ಯಾತ್ಮರುಗಳಿಲ್ಲವು ॥

ನಿಮ್ಮ ದೊರೆ ಭಕ್ತಿಯನು ಹಿಡಿದರಾಲಂಬೆಮಗೆ
ನಿಮ್ಮ ದೊರೆ ಭಕ್ತಿ ಬಿಡೆ ದೊರೆಯ ಮನಸಿಗೆ ಬರದು
ನಮ್ಮ ಪುಣ್ಯಕೆ ಕೀರ್ತಿವಾರ್ತೆಗೋಸುಗ ಮಾಡಿದೆ ತಮಗೆ ಮಾಡಿಲ್ಲೆಂಬನು ।
ನಿಮ್ಮ ದೊರೆ ಮಾತು ನಿಮ್ಮ ಮನಸಿಗರೆ ಬರುತಿಹುದೆ
ನಮಗೆ ಸಂಸಾರ ಲಂಪಟವ ತಂದು ಹಚ್ಚಿದನು
ಸುಮ್ಮನಿದ್ದರು ಕಷ್ಟ ಬೇಡೆಂದರು ಕಷ್ಟ ಪರಿಹರಿಸಿರೀ ನ್ಯಾಯವ ॥

ಇರದೆ ನಂಜಾಖ್ಯ ವೆಂಕಟರಾಯ ಕೇಳಿರೈ
ಮೂರುವರೆ ಮೊಳಗೀಬು ನಾವಿರುವ ಸ್ಥಳ ನೋಡಿ
ದೊರೆ ಕೊಟ್ಟ ರಥ ಮೇಣೆ ಛತ್ರ ಚಾಮರಗಳ ನಾನೆಲ್ಲಿ ಮಡಗಿಕೊಳಲಿ ।
ತರಬೇಡಿರೆಂದರೆ ತಂದಿರೂರೂರ್ಗೆ ಮೆರೆಸಿದಿರಿ
ತೀರೋಯ್ತು ಗುರುಕರುಣ ದೊರೆ ಭಕ್ತಿ ವೈಭವವು
ತಿರಿಗೊಯಿರಿ ಚೆಂದಲ್ಲ ದೊಡ್ಡ ಸ್ಥಲ ಸುಸರಿಗಳು ಸಣ್ಣ ಸ್ಥಲಕೇನು ಚೆಂದ ॥

'ಸುಮ್ಮನಿದ್ದರು ಕಷ್ಟ, ಬೇಡೆಂದರು ಕಷ್ಟ' ಎನ್ನುವ ಧರ್ಮಸಂಕಟಕ್ಕೆ ಮಹಂತ ಶಿವಯೋಗಿಗಳು ಗುರಿಯಾದರೂ, ರಾಜನಿತ್ತ ರಥ, ಮೇಣೆ ಮುಂತಾದುವನ್ನು ತಿರುಗಿ ಒಯ್ಯ ಹೇಳಿದರು. ಕುಂಬಳ ಬುರುಡೆಯೊಂದನು ತಂದರು. ಇಂದಿಗೂ ಅದು ಮುಳಗುಂದ ಮಠದಲ್ಲಿ ನೋಡ ದೊರೆಯುತ್ತದೆ.

ಮೈಸೂರ ದೊರೆಯ ಉದಾರಾಶ್ರಯವನ್ನು ಪಡೆದವರು, ಅದಕ್ಕಾಗಿ ಹಾತೊರೆಯುತ್ತಿದ್ದ ದೊಡ್ಡ ತಂಡವೇ ಅರಮನೆ-ಆಸ್ಥಾನಗಳಲ್ಲಿ ನೆರೆದಿದ್ದುದನ್ನು ಕಣ್ಣಾರೆ ಕಂಡು, **ಮಹಂತಶಿವಯೋಗಿಗಳು** "ವಸುಧಿಪನೆ ನಿನ್ನ ಮೈಸೂರೆಂಬ ಬೆಲ್ಲದ ಮುಸುರಿ ಗಡಿಗೆಗೆ ಲಕ್ಷಗಟ್ಲೆ ಭಿಕ್ಷುಕರೆಂಬ ಸಸಿನೆ ಮಕ್ಷಿಕ ದಂಡು ಮುಸುಕಿಹುದದೇನೆಂಬೆ ಮುತ್ತಿಗೆಯು ಹಾಕಿದಂತೆ" ಎಂದು ಉದ್ಗಾರವೆತ್ತಿದ್ದಾರೆ. ಅಂಥ ಮೈಸೂರ ವಾತಾವರಣವು ತಮಗೆ ಮೈಚೂರಿಯಿದ್ದಂತೆ ಎಂದಿದ್ದಾರೆ. ರಾಜನ ಸನ್ಮಾನವನ್ನು ನಿರಾಕರಿಸಿದುದಲ್ಲದೇ "ನಮ್ಮ ಬಳಿ ಇದ್ದುದೆಲ್ಲವನ್ನು ಸುಲುಕೊಂಡು ಕಡೆಗೆ ನಮ್ಮ ಸ್ಥಲಕಟ್ಟಿದರೆ ನಿಮ್ಮ ಪುಣ್ಯಕೆಣೆ ಇಲ್ಲ" ಎಂದು ಹೇಳುವಲ್ಲಿ ನಿರಿಚ್ಛೆಯ ಪರಾಕಾಷ್ಠೆಯನ್ನು ಮುಟ್ಟಿದ್ದಾರೆ!

ನಾನು.. ಘನಮಠದಾರ್ಯರೂ ಮುಮ್ಮಡಿಯವರಿಗೆ ಭೆಟ್ಟಿಯಾಗಿ ಆಶೀರ್ವಚನವಿತ್ತರೇ ಎಂಬುದೀಗ ಪ್ರಶ್ನೆ. ಅವರಿಬ್ಬರ ಸಮಾಗಮವಾಗಿದ್ದರೆ, ಸಿದ್ಧರಾಮಪ್ಪನು ಅವರ ಜೀವನ ಚರಿತ್ರೆಯಲ್ಲಿ ಅದನು ಹೇಳದಿರುತ್ತಿದ್ದಿಲ್ಲ. ಆದಕಾರಣ, ಮುಮ್ಮಡಿಯವರು ಆಮಂತ್ರಿಸಿದ್ದರೂ, ಘನಮಠದಾರ್ಯರು ಹೋಗದೆ ಖಡಾಖಂಡಿತವಾಗಿ ನಿರಾಕರಿಸಿದ್ದನ್ನು ಈ ಕೆಳಗಿನ ಪದ್ಯವು ತೋರಿಸಿಕೊಡುತ್ತದೆ.

ಧರೆಯೊಳಗೆ ಮೆರೆವ ಮೈಸೂರಾಧಿಪನೆ ಕೇಳು
ಬರಲೆಂತು ನಿನಲ್ಲಿ? ರಥ ಹಯಾನೆಗಳಿಲ್ಲ
ಮೆರೆವ ಪಲ್ಲಕ್ಕಿಲ್ಲ- ಹೊರುವಾಳು ಮುನಿಲ್ಲ ಬಲು ಪುರಾತನದಿಂದಿಹ ।
ಹಿರಿಯೆತ್ತು ನನಗಿರುವದರಿಂದ ಬರಲಾರೆ
ಕರಿಸುವುದು ನಿನಗುಚಿತವಲ್ಲ ಮೇಣ್ ಬೇಡ ಬಿಡು
ಬರಿದೇತಕೀ ತವಕ ಮನದೊಳುರು ಭಕ್ತಿಯಂ ಪಿಡಿದಿಲ್ಲ ಕಾಣೆನನು ॥

**ನವಲಗುಂದದ ನಾಗಲಿಂಗಪ್ಪನವರು** (೧೭೯೮-೧೮೭೮) ಉತ್ತರ ಕರ್ನಾಟಕದಲ್ಲಿ ಬಾಳಿದ ಇನ್ನೊಬ್ಬ ಮಹಾವಿಭೂತಿಗಳು. ಅವರ ತಪಸ್ಸು ಮತ್ತು ಸಿದ್ಧಿಗಳು ಆ ಭಾಗದಲ್ಲಿ ಮನೆಮಾತಾಗಿದ್ದುವು. ಅವರ ಬೋಧನೆಯಿಂದಾಗಿ ಕೆಲವು ವೀರಶೈವ ಮತ ವಿಚಾರಗಳೂ, ಹಾಡುಗಳೂ ಬರೆಹದಲ್ಲಿ ಒಡಮೂಡಿರಲು ಸಾಕು.

ಹುಬ್ಬಳ್ಳಿಯ **ಸಿದ್ಧಾರೂಢಸ್ವಾಮಿಗಳು** ನಿಜವಾಗಿಯೂ ಸಿದ್ಧಪುರುಷರು. ನಿಜಾಮ ರಾಜ್ಯದ ವಂಶದುರ್ಗ ಎಂಬಲ್ಲಿ ಜನಿಸಿದ ಅವರು ತಪಸ್ಸನ್ನು ಗೈದು ಭಾರತಾದ್ಯಂತ ಸಂಚರಿಸಿ, ಅನಂತರ ಹುಬ್ಬಳ್ಳಿಯಲ್ಲಿ ಮೂರು ದಶಕಗಳ ಕಾಲ ನೆಲೆಸಿದ್ದರು; ಅವಧೂತರೂ

ಅದ್ವೈತ ತತ್ತ್ವದ ಹಿರಿಯ ಉಪಾಸಕರೂ ಆಗಿದ್ದರು. ಅವರ ನೇತೃತ್ವದಲ್ಲಿ ಗುಂಡಾಶಾಸ್ತ್ರಿಯು ಚಿದಾನಂದಾವಧೂತರ 'ಜ್ಞಾನಸಿಂಧು'ವಿಗೆ ಟೀಕೆ ಬರೆದನು. ನಿರ್ವಾಣಪ್ಪನೆಂಬವನು ಪಂಚೀಕರಣವನ್ನು ಕನ್ನಡಿಸಿದನು. ಮೇ.ಜ. ಮುದಲಿಯಾರ ಎಂಬುವನು ಸಾಧು ನಿಶ್ಚಲದಾಸರ 'ವಿಚಾರಸಾಗರ' ಅಥವಾ 'ವೇದಾಂತಸಾರ ಸಂಗ್ರಹ' ವನ್ನು ಶ್ರೀ ಸಿದ್ಧಾರೂಢರ ಪ್ರೇರಣೆಯಿಂದಲೇ ಕನ್ನಡಕ್ಕೆ ಅನುವಾದಿಸಿದನು.*

ಹತ್ತೊಂಬತ್ತನೆಯ ಶತಮಾನದ ವೀರಶೈವ ವಾಙ್ಮಯದಲ್ಲಿ ಮತತತ್ವ ವಿವೇಚನೆಗಿಂತ ಪುರಾತನ ಶಿವಭಕ್ತರ ಹಾಗೂ ಐತಿಹಾಸಿಕ ಕಾಲದ ಶಿವಶರಣರ ಚರಿತ್ರೆಗಳು, ಅದರಂತೆ ಶತಕ, ಸ್ತೋತ್ರಗಳು ಇವೇ ಹೆಚ್ಚಾಗಿ ಹೊರಹೊಮ್ಮಿವೆ. ಈ ಕವಿಗಳು ಆಯ್ದುಕೊಂಡ ಪ್ರಕಾರವು 'ಮಾರ್ಗ' ಪದ್ಧತಿಯದೇನಲ್ಲ. ಷಟ್ಪದಿ, ಕಂದ, ಸಾಂಗತ್ಯ ಹಾಗೂ ದೇಸೀ ರಾಗಗಳ ವಿವಿಧ ಹಾಡುಗಳು–ಇವೇ ಕಂಡುಬರುತ್ತವೆ. ಅವು ಸರಳ ಸುಭಗವಾಗಿದ್ದು, ಜನಸಾಮಾನ್ಯರಿಗೂ ತಿಳಿಯಬೇಕೆಂಬ ಅಂದಿನ ಯುಗಧರ್ಮಕ್ಕೆ ಅನುಗುಣವಾಗಿ ಕಾವ್ಯರಚನೆ ನಡೆಯಿತು. ಮೇಲೆ ಉಲ್ಲೇಖಿಸಿದ ಮಠಾಧೀಶರ ಕೃತಿಗಳಲ್ಲಿ ಇದು ವ್ಯಕ್ತವಾದದ್ದೇ ಇದೆ. ಅನ್ಯ ವೀರಶೈವ ಕವಿಗಳ ಬರಹದಲ್ಲಿಯೂ ಇದೇ ಮನೋಧರ್ಮವನ್ನು ಕಾಣುತ್ತೇವೆ. ತುಸು ನೋಡುವಾ.

ಪುರಾತನ ಶಿವಭಕ್ತರಲ್ಲಿ ಸಾನಂದಗಣೇಶ ಮತ್ತು ದೀಪದ ಕಲಿ–ಇವರು **ವಿರಕ್ತದೇವ** ಹಾಗೂ **ಚನಮಲ್ಲೇಶರ** ಕೃತಿಗಳಲ್ಲಿ ಪುನಃ ಕಾಣಿಸಿಕೊಂಡಿದ್ದಾರೆ. ಸೋಮನೆಂಬವನು ತನ್ನ 'ಚತುರಾಚಾರ್ಯ ಪ್ರಬಂಧ'ದಲ್ಲಿ ನಾಲ್ವರು ವೀರಶೈವ ಆಚಾರ್ಯರ ಚರಿತ್ರೆಯನ್ನು ಹೇಳಿದ್ದಾನೆ. ಬಸವಕವಿಯ 'ಸಿದ್ಧಲಿಂಗ ಕಾವ್ಯ'ದ (೧೮೮೭) ವಿಷಯವು ಈ ಹಿಂದಿನ ಗ್ರಂಥಗಳಲ್ಲಿ ಬಂದಂತಿಲ್ಲ. ಅದರಲ್ಲಿ ಪರಶಿವನು ಕಂಥೆಯ ಸಿದ್ಧಲಿಂಗನಾಗಿ ಅವತರಿಸಿ ಜಲಾಶಯವೊಂದನ್ನು ನಿರ್ಮಿಸುವುದಕ್ಕೆ ಕಾರಣನಾದ ಕಥೆಯಿದೆ. ಕವಿಚರಿತಕಾರರು "ಈ ಗ್ರಂಥವು ಅತಿ ನವೀನವಾದುದು, ಈಗಲೂ ಇಂಥ ವಿಷಯಗಳನ್ನು ಕುರಿತು ಪದ್ಯ ಗ್ರಂಥವನ್ನು ರಚಿಸುವವರಿದ್ದಾರೆ" ಎಂಬ ವಿಶೇಷ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪ್ರಸ್ತುತ ಕಥೆಯ ವಿಷಯವು ಹೊಸತೆಂದು ಕಂಡರೂ ೧೯ನೆಯ ಶತಮಾನದ ಇನ್ನು ಕೆಲವು ಕನ್ನಡ ಕವಿಗಳು ಸಹ ನವೀನ ಕಲ್ಪನೆಯ ಕೃತಿಗಳನ್ನು ರಚಿಸಿದ್ದಾರೆಂಬುದನ್ನು ನೆನೆದಿರಬೇಕು.

ಐತಿಹಾಸಿಕ ಕಾಲದ ಶಿವಶರಣರಲ್ಲಿ ಬಸವೇಶ್ವರರ ಚರಿತ್ರೆಯನ್ನು ಬರೆದವನು ನರೇಗಲ್ಲಿನ ಶಿವಬಸವಶಾಸ್ತ್ರಿ (ಬಸವಪವಾಡ ಲೀಲಾಮೃತ). ವಿರೂಪಾಕ್ಷದೇಶಿಕನು ದೇವರ ದಾಸಿಮಯ್ಯನನ್ನೂ ಸಿದ್ಧರಾಮ ಶಿವಯೋಗಿಯು ಚೆನಬಸವನನ್ನೂ ತಂತಮ್ಮ

* ಶ್ರೀ ಸಿದ್ಧಾರೂಢರನ್ನು ಕುರಿತು ಕನ್ನಡ, ಇಂಗ್ಲಿಷ್, ಮರಾಠೀ ಭಾಷೆಗಳಲ್ಲಿ ಗ್ರಂಥಗಳು ಪ್ರಕಟವಾಗಿವೆ.

ಗ್ರಂಥಗಳಲ್ಲಿ ವರ್ಣಿಸಿದ್ದಾರೆ. ಮಲ್ಲಿಕಾರ್ಜುನ ಪಂಡಿತನು ಚಿಪ್ಪಿಗರ ವಂಶಕ್ಕೆ ಗುರುವಾಗಿದ್ದ ಶಂಕರದಾಸಿಮಯ್ಯನ ಚರಿತ್ರೆಯನ್ನು ಹೇಳಿದ್ದಾನೆ. ಬಸವಣ್ಣ ಕವಿ ಎಂಬವನು ಶಿವಭಕ್ತನೆನಿಸಿದ ನಯನಜನ ಸ್ತುತಿರೂಪದ ಪದಗಳನ್ನು ರಚಿಸಿದ್ದಾನೆ.

ಗುರುಭಕ್ತಿಯು ಕಾವ್ಯ ಪ್ರೇರಣೆಯನ್ನು ಒದಗಿಸಿದುದಕ್ಕೆ ಅಟವೀಶ್ವರ ಯತಿಯ ಶಿಷ್ಯರದು ಒಂದು ನಿದರ್ಶನವಾದರೆ, ಅಳಂದೆಯ ಶರಣಬಸವಸ್ವಾಮಿಗಳ (ಕ್ರಿ.ಶ. ೧೭೪೮–೧೮೨೨) ಶಿಷ್ಯರಲ್ಲಿಯೂ ಅದು ಒಡಮೂಡಿತು. ಮಾವನೂರ ಚೆನ್ನಬಸವ, ವಿರೂಪಾಕ್ಷ ಮತ್ತು ಬಸವಲಿಂಗ ಇವರು ತಮ್ಮ ಗುರುವಿನ ಮಹಿಮೆಯನ್ನು ಮನದುಂಬಿ ಹೊಗಳಿದ್ದಾರೆ. ಮಹಾದೇವನೆಂಬ ಕವಿಯು ಚಿತ್ರದುರ್ಗದ ಮಹಾಲಿಂಗೇಶಸ್ವಾಮಿಗಳ ಚರಿತ್ರೆಯನ್ನು ನಿರೂಪಿಸಿದ್ದಾನೆ. ರುದ್ರನೆಂಬವನು ಮುರಗೇಂದ್ರ ಸ್ವಾಮಿಗಳನ್ನು ಕುರಿತು ವಿಸ್ತಾರವಾದ ಷಟ್ಪದೀ ಕಾವ್ಯವನ್ನು ರಚಿಸಿದ್ದಾನೆ. ಇವೆಲ್ಲ ಜೀವನ ಕಥನಗಳಲ್ಲಿ ಐತಿಹಾಸಿಕ ಪ್ರಜ್ಞೆಯು ಗೌಣವಾಗಿದೆ. ಇವನ್ನು ಚಾರಿತ್ರಿಕ ಕಾವ್ಯಗಳೆಂದು ತಿಳಿಯದೇ 'ಲೌಕಿಕ ಪುರಾಣ' ಎಂದು ಕರೆಯುವದೇ ಸೂಕ್ತವಾದೀತು. ಅಲ್ಲಲ್ಲಿ ಹೃದ್ಯವಾದ ವರ್ಣನೆಗಳು ದೊರೆಯುವುದರಿಂದ ಆ ಮಟ್ಟಿಗೆ ಅವುಗಳ ಕಾವ್ಯಗುಣವನ್ನು ಮೆಚ್ಚಬಹುದು.

ಇದಕ್ಕೆ ನಿದರ್ಶನವಾಗಿ **ಬಸವ ಸುಕುಮಾರನ** ಕೃತಿಗಳನ್ನು ಉಲ್ಲೇಖಿಸಬೇಕು. ಇವನು ಗೋಕಾಕ ತಾಲೂಕಿನ ತೊಂಡಿಕಟ್ಟೆ ಗ್ರಾಮದ ಗೌಡ ಮನೆತನದವನು. ಗುರು, ಸೋಲೂರಿನ ಚೆನವೀರ ದೇಶಿಕೇಂದ್ರರು. ಎಳವರಯದಲ್ಲೇ ಪರಮಾರ್ಥದ ಕಡೆಗೆ ಪ್ರವೃತ್ತಿ ಇದ್ದಿತು. ವೀರಶೈವ ಕಾವ್ಯ ಮತ್ತು ಶಾಸ್ತ್ರ ಗ್ರಂಥಗಳನ್ನು ಚೆನ್ನಾಗಿ ವ್ಯಾಸಂಗಮಾಡಿದ್ದನೆಂಬುದು ಅವನ ಕಾವ್ಯ ಪರಿಶೀಲನೆಯಿಂದ ಗೊತ್ತಾಗುವಂತಿದೆ. ಅವನು ರಚಿಸಿದ ಮೂರು ಕಾವ್ಯಗಳು ಷಟ್ಪದಿಯಲ್ಲಿಯೇ ಇವೆ. ಮೊದಲಿನದು 'ಮುಗ್ಧಸಂಗಮಲೀಲೆ'. ಉಪ್ಪಾರಗಟ್ಟೆ ಎಂಬ ಹಳ್ಳಿಯಲ್ಲಿ ದನಗಾಹಿಯಾಗಿದ್ದ ಈ ಮುಗ್ಧನು ಪರಮ ಶಿವಭಕ್ತನು. ತನ್ನೂರಿನಲ್ಲಿ ಶ್ರೀಶೈಲದ ಲಿಂಗ ಹಾಗೂ ನದಿಗಳನ್ನು ಆವಾಹಿಸಿದ್ದುದರ ಮಹಿಮೆಯು ಇಲ್ಲಿ ವರ್ಣಿತವಾಗಿದೆ. ಇನ್ನೆರಡು ಕೃತಿಗಳು, 'ಮಹಲಿಂಗ ಜಂಗಮ' ಹಾಗೂ ದುರುದುಂಡಿಯ 'ಶಿವಲಿಂಗಜಂಗಮ' ಎಂಬವರ ಚರಿತ್ರೆಗಳಾಗಿವೆ. ಈ ಜಂಗಮರು ಕವಿಗಿಂತ ಎರಡು ಮೂರು ತಲೆಮಾರಿನಷ್ಟೆ ಹಿಂದಿನವರು. ದುರದುಂಡಿ ಜಂಗಮರ ಕಾರ್ಯಕ್ಷೇತ್ರವು ಅರಭಾವಿ ಎಂಬ ಊರಾಗಿದ್ದರೆ ಮಹಲಿಂಗರು ಮುಧೋಳದಲ್ಲಿ ಹೆಚ್ಚು ಕಾಲ ಇದ್ದವರು. ಇಬ್ಬರೂ ಒಂದೊಂದು ಸಂಸ್ಥಾನಕ್ಕೆ ಗುರುಸ್ಥಾನದಲ್ಲಿದ್ದವರು. ದುರದುಂಡಿಯ ಶ್ರೀಗಳು ಮಲಸರ್ಜ ದೊರೆಯನ್ನು ಟೀಪೂವಿನ ಸೆರೆಯಿಂದ ಬಿಡಿಸಿದರೆಂದೂ ಮಹಲಿಂಗರು ಮುಧೋಳದ ಘೋರ್ಪಡೆ ಮಾಲೋಜಿರಾಯನ ಉದ್ಧಾರಕರೆಂದೂ ವರ್ಣಿತರಾಗಿದ್ದಾರೆ. ಹೀಗೆ ಈ ಕೃತಿಗಳಲ್ಲಿ ಇತಿಹಾಸದ ಸೆಳಕುಗಳಿದ್ದರೂ ಎದ್ದು ಕಾಣುವ ಐತಿಹಾಸಿಕ ಘಟನೆಗಳಿಲ್ಲ.

ಮಹಲಿಂಗಜಂಗಮರ ಮನೆತನ, ಜನನ, ಬಾಲ್ಯ, ಇವುಗಳ ಪ್ರಸ್ತಾಪವು ಈ ಕೃತಿಯಲ್ಲಾಗಲೀ ತತ್ಪೂರ್ವದಲ್ಲಿ ರಾಮದುರ್ಗದ ಸಂಗನಬಸವ ಮಾಹೇಶ್ವರ ವಿರಚಿತ ಕಾವ್ಯದಲ್ಲಿಯಾಗಲೀ ದೊರೆಯುವುದಿಲ್ಲ.

## ೭.೨೧ ಅನುಭಾವ ಕವಿಗಳು

ಹತ್ತೊಂಬತ್ತನೆಯ ಶತಮಾನದಲ್ಲಿ ಅನುಭಾವ ಕವಿಗಳ ಬಾಹುಳ್ಯವೇ ಇದ್ದಿತು. ಇದು ಜಾನಪದ ಸದರಿನಲ್ಲಿ ಬರುವಂಥದಾದ್ದರಿಂದ ಅಂಥ ಕವಿಗಳ ಅಸ್ತಿತ್ವ ಒಡೆದು ತೋರಿಲ್ಲ. ಹಾಗೆ ಕಂಡು ಬಂದರೆ ಅದು ಅವರು ಸಾಂಪ್ರದಾಯಿಕ ಕೃತಿಗಳನ್ನು ರಚಿಸಿರುವರೆಂಬ ಕಾರಣದಿಂದ. ಗುಲಬರ್ಗ ಜಿಲ್ಲೆಯ ರಾಮಪುರದ ಬಕ್ಕನು 'ನಿಜಕರಣ ತ್ರಿವಿಧಿ' ಎಂಬ ಕಾವ್ಯದ ಜೊತೆಗೆ ಬಿಡಿ ಹಾಡುಗಳನ್ನೂ ರಚಿಸಿದ್ದಾನೆ. ಬೀದರ ಜಿಲ್ಲೆಯಲ್ಲಿದ್ದ ಧುಮ್ಮನಸೂರ ಸಿದ್ಧಪ್ರಭು ಎಂಬವನು 'ದೇವಿದಾಸ' ಎಂಬ ಅಂಕಿತದಿಂದ ಹಲವು ಸಾವಿರ ಹಾಡುಗಳನ್ನು ರಚಿಸಿದ್ದಾನೆಂದು ಎಂ.ಎಸ್. ಲಠ್ಠೆ ಹೇಳುತ್ತಾರೆ. ('ಭೂಷಣ' ಗ್ರಂಥದ ಪು. 330)

ಈ ಸುಪ್ರಸಿದ್ಧ 'ಭೂಷಣ' ಗ್ರಂಥದಲ್ಲಿ, ಇನೂ ಹಲವಾರು ವೀರಶೈವ ಕವಿಗಳ ಪ್ರಸ್ತಾಪವಿದೆ. ಅವರು ರಚಿಸಿದ ಸಾಂಪ್ರದಾಯಿಕ ಮತ್ತು ಭಜನೆಯ ಹಾಡುಗಳ ಹೆಚ್ಚಳ ಹಿಂದಿನ ಶತಮಾನದ ಸಾಹಿತ್ಯವನ್ನು ಸಮೃದ್ಧಿಗೊಳಿಸಿದೆ. ಇವರು ಅನುಭಾವ ಕವಿಗಳೂ ಹೌದು; ವಾಗ್ಗೇಯಕಾರರೂ ಹೌದು. ಇವರುಗಳಲ್ಲಿ ಮಾದರಿಯೆಂದು **ಕಡಕೋಳ ಮಡಿವಾಳಪ್ಪನ** ಬಗ್ಗೆ ತುಸು ವಿವರಗಳನ್ನು ಕೊಡುವೆ. ಈತ ಮೂಲತಃ ಗುಲಬರ್ಗದ ಬಿದನೂರಿನವ. ಬದಿಯ ಗುಡ್ಡದ ಓರೆಯಲ್ಲಿದ್ದ ಮಹಾಂತ ಶಿವಯೋಗಿಗಳಿಗೆ ತನ್ನನ್ನು ಅರ್ಪಿಸಿಕೊಂಡ. ತಾನೂ ಒಬ್ಬ ಮಹಾಂತನಾಗಬೇಕೆಂದು ಇಚ್ಛಿಸಿದಾಗ, ಊರಲ್ಲಿ ವಿರೋಧ ಕಂಡುಬಂತು. ಆಗ ಕಡಕೋಳದಲ್ಲಿ ಬಂದು ನೆಲಸಿದ.

'ಮಹಾಂತ' ವೆಂಬ ಮುದ್ರಿಕೆಯಿಂದ ಅವನು ಸಹಜ ಸ್ಫೂರ್ತವಾಗಿ ಹಾಡುಗಳನ್ನು ರಚಿಸುತ್ತಿದ್ದ. ಜಾನಪದ ಭಾಷೆಯನ್ನು ಅನುಭಾವದ ಅಭಿವ್ಯಕ್ತಿಗೆ ಅಳವಡಿಸಿದ ರೀತಿ ಮನೋಜ್ಞವಾದುದು. ತನ್ನ ಗುರು ಕೊಟ್ಟ ಇಷ್ಟಲಿಂಗದ ಬಗ್ಗೆ ಅವನದೊಂದು ರಚನೆ ಹೀಗಿದೆ:

ಎಂಥಾ ಆಕಳು ಕೊಟ್ಟಾ ಗುರು ಕಾಮಧೇನ
ಹಗಲು ಇರಳು ಹಾಲು ಗರಿವದೊಂದೇ ಸವನ
ಉಂಡು ನೋಡಿದವನೆ ಬಲ್ಲ ಇದರ ಹೈನ

ಭಾಳ ದಿನದ ಆಕಳಪ್ಪ ಹಳೇ ಮುದುಕಿ
ಮಾಡುತ ಬಂದೆನಪ್ಪ ಅದಕ ಜ್ವಾಕಿ

ಒಡದೇಸಂದ್ರ ಸಿಗುವದಿಲ್ಲ ಭಾಳ ಬೆರಕಿ
ಅದಕ ನನಗ ಆಗಬೇಕು ಆಪುಲಕಿ

ಆಕಳಿರುವ ಸ್ಥಳ ಶಿವಪುರದಲ್ಲಿ
ಬಲ್ಲವರಿಗೆ ತಿಳಿದೀತಪ್ಪ ಅದರ ನೆಲಿ
ಆಕಳಿಗಿ ಇದ್ದುವಪ್ಪ ಸಾವಿರ ಮಲಿ
ನಮ್ಮ ಮಹಾಂತನ ಹೆಸರ ಮ್ಯಾಲ ಬಿಟ್ಟೇನಪ್ಪ ಕಪಲಿ

* * *

'ತನ್ನ ತಾನು ತಿಳಿದ ಮೇಲೆ ಇನ್ನೇನಿನೇನೂ ತನ್ನಂತೆ ಸರ್ವರ ಜೀವ ಮನಿಸಿ ಮೂಕಾದ ಮೇಲೆ ಇನ್ನೇನಿನೇನೂ'- ಎಂಬ ಅವನ ಹಾಡು ಈಗಲೂ ಜನಜನಿತವಾಗಿ ಇದೆ. ಪ್ರತಿ ವರ್ಷ ಅವನ ಹೆಸರಿನ ಜಾತ್ರೆ ಕಡಕೋಳದಲ್ಲಿ ನಡೆಯುತ್ತದೆ. 'ನಿಜಲೀಲಾನುಭವ ವಚನ' ಎಂಬ ಅವನ ಹಾಡುಗಳ ಸಂಗ್ರಹ ಪ್ರಕಟವಾಗಿದೆ.

## ೭೩ ಅದ್ವೈತ ಕವಿಗಳು

ವೀರಶೈವ ಪರಂಪರೆಯಲ್ಲಿ ಕಂಡು ಬಂದಂತೆ ಅದ್ವೈತ ಪರಂಪರೆಯಲ್ಲಿಯೂ ಸಾಂಪ್ರದಾಯಿಕ ಹಾಗೂ ಅನುಭಾವಮಿಲಿತ ಕಾವ್ಯರಚನೆ ಯಥೇಚ್ಛವಾಗಿ ಕಾಣಿಸಿಕೊಂಡಿದೆ. ಹತ್ತೊಂಬತ್ತನೆಯ ಶತಮಾನದುದ್ದಕ್ಕೂ ಈ ಬಗೆಯ, ಎರಡೂ ಮತಪಂಥಗಳಲ್ಲಿ ಹಿಂದೆಂದೂ ಇಲ್ಲದಷ್ಟು ಕವಿಗಳು ಕಂಡುಬರುವುದು ಒಂದು ಅಪೂರ್ವ ವೈಶಿಷ್ಟ್ಯ.*

ವಿಶೇಷವೆಂದರೆ ಎರಡೂ ಪರಂಪರೆಯಲ್ಲಿ 'ಅದ್ವೈತ' ಎನ್ನುವುದು ಸಮಾಂತರ ಸೂತ್ರವಾಗಿದ್ದದರಿಂದ ಪರಸ್ಪರರಲ್ಲಿ ಸಾಮರಸ್ಯ ಹಾಗೂ ಮೈತ್ರಿ, ಹತ್ತಾರು ಕಡೆಗೆ ಕಂಡುಬರುತ್ತದೆ. ಇದರ ಸಂಕೇತವಾಗಿ ಪಾರಿಶವಾಡದ ಬಾಳಪ್ಪನನ್ನು (ಬಾಲಾವಧೂತರು) ಹೆಸರಿಸಬೇಕು. ಈತನು ಜನಿವಾರ, ಶಿವಲಿಂಗ, ವಿಭೂತಿ ಮೂರನ್ನೂ ಧರಿಸುತ್ತಿದ್ದನಂತೆ!

ಅದ್ವೈತ ಸಾಹಿತ್ಯವನ್ನು ಸೃಷ್ಟಿಸಿದವರನ್ನು ಅವಧೂತರು, ಆನಂದನಾಮಕರು ಮತ್ತು ದತ್ತ ಸಂಪ್ರದಾಯದವರು–ಎಂದು ಸ್ಥೂಲವಾಗಿ ವಿಂಗಡಿಸಬಹುದು.

**ಅವಧೂತ ಪಂಥೀಯರು :** ಅಲ್ಲಿ ಇಲ್ಲಿ, ಎಳೆ ಎಳೆಯಾಗಿ ಸಿಕ್ಕುವ ಆಧಾರಗಳಿಂದ ಈ ಪಂಥದ ನೆಲೆಯನ್ನು ೧೭ನೆಯ ಶತಮಾನದವರೆಗೂ ಅರಸಿಕೊಂಡು ಹೋಗಬಹುದು.

---

* ಹುಬ್ಬಳ್ಳಿಯ ಸಿದ್ಧಾರೂಢರು, ಗರಗದ ಶಿವಯೋಗಿಗಳು, ಮುರಗೋಡದ ಚಿದಂಬರ ದೀಕ್ಷಿತರು, ಕಲ್ಲೇಶ್ವರ ಮಹಾರಾಜರು, ರಾಸ್ತಾಪುರದ ಭೀಮಕವಿ, ಹೆಮ್ಮಡಿಗೆಯ ಪ್ರಭುಸ್ವಾಮಿ, ಸತ್ತಿಂಪೇಟೆಯ ಚೆನಮಲ್ಲಪ್ಪ, ಹುಗ್ಗಿ ಗುರಪ್ಪ ಮತ್ತು ಇನ್ನೂ ಅನೇಕರು

ನಮಗೆ ದೊರೆತಿರುವ ಹೆಸರುಗಳಲ್ಲಿ ಸಚ್ಚಿದಾನಂದರೆಂಬವರು ಮೊದಲಿಗರು. ಅವರ ಶಿಷ್ಯರಾದ ಸಹಜಾನಂದರೇ 'ಭಕ್ತಿ ರಸಾಯನ' ವನ್ನು (ಸು. ೧೭೫೦) ರಚಿಸಿದರು. 'ಅನುಭವಾಮೃತ' ಖ್ಯಾತಿಯ ಮಹಲಿಂಗರಂಗರು ಸಹಜಾನಂದರ ಶಿಷ್ಯರು. ಹದಿನೆಂಟನೆಯ ಶತಮಾನದಲ್ಲಿ, ಮಹಲಿಂಗರಂಗರ ಶಿಷ್ಯ ಶಂಕರಾನಂದ, ಆ ಮುಂದಿನ ಪೀಳಿಗೆಯು ಬ್ರಹ್ಮಾನಂದ, ನಿಜಾನಂದ, ಚಿದಾನಂದರಿಂದ ಈ ಪಂಥವು ಮುಂದುವರಿಯಿತು. 'ಅನುಭವಾಮೃತ' ವನ್ನು ಆಧರಿಸಿ ಚಿದಾನಂದರು 'ಜ್ಞಾನಸಿಂಧು' ವನ್ನು ಬರೆದರು (ಸು. ೧೭೫೦). ಈ ಕೃತಿಯು ವಿಶೇಷ ಜನಪ್ರಿಯತೆಯನ್ನು ಪಡೆಯಿತು. ಕಳೆದ ಶತಮಾನದಲ್ಲಿ ಹಲವಾರು ಬಾರಿ ಮುದ್ರಣಗೊಂಡಿತು. ಚಿದಾನಂದಾವಧೂತರ ಭಕ್ತಿ–ವೈರಾಗ್ಯದ ಘಟನೆಗಳು ಪವಾಡರೂಪದಲ್ಲಿ ಜನಜನಿತವಿದ್ದುವಾದ್ದರಿಂದ ಅಯ್ಯಪ್ಪನೆಂಬುವನು ಅವರ ಬಾಲಲೀಲೆಗಳನ್ನು ಕಥನಿಸಿದ್ದಾನೆ.

ಸಾವಿರಕ್ಕೆ ಮೀರಿದ ತತ್ತ್ವ ಪದಗಳನ್ನು ರಚಿಸಿದ **ಗುರುಕೃಷ್ಣ**ನಿಗೆ ಚಿದಾನಂದಾವಧೂತರ ಬದುಕು ಬರಹಗಳೇ ಪ್ರೇರಣೆಯನ್ನು ಒದಗಿಸಿದವು. 'ಅನುಭವಾಮೃತ'ಕ್ಕೆ ಹಾಡಿನ ರೂಪದ ವ್ಯಾಖ್ಯಾನವೊಂದು ಕಳೆದ ಶತಮಾನದಲ್ಲಿ ರಚಿತವಾಗಿದ್ದು ಅದು ಗುರುಕೃಷ್ಣ ಕೃತವೆಂದು ಕವಿಚರಿತಕಾರರು ಹೇಳುತ್ತಾರೆ. ಅವನ ಇತರ ಕಾವ್ಯಗಳು ಶ್ರೀಕೃಷ್ಣ ಚರಿತ್ರೆಯನ್ನು ನಿರೂಪಿಸುತ್ತವೆ. ಒಂದರಲ್ಲಿ ಶ್ರೀಕೃಷ್ಣನ ಬಾಲಲೀಲೆ ವರ್ಣಿತವಾಗಿದ್ದರೆ, ಇನ್ನೊಂದರಲ್ಲಿ ಸತ್ಯಭಾಮೆಯು ಅವನನ್ನು ನಾರದನಿಗೆ ದಾನವಾಗಿತ್ತ ಸಂದರ್ಭವಿದೆ. ಶ್ರೀಕೃಷ್ಣಪಾರಮ್ಯದ ಈ ಕೃತಿಗಳಿಂದ ಗುರುಕೃಷ್ಣನು ಭಾಗವತ ಸಂಪ್ರದಾಯದವನಾಗಿ ತೋರುತ್ತಾನೆ.

ಕಳೆದ ಶತಮಾನದಲ್ಲಿ ಇನು ಕೆಲವು 'ಆನಂದ'ನಾಮಕರು ಆಗಿಹೋದರು. ಅದ್ವೈತ ತತ್ತ್ವಪ್ರತಿಪಾದಕವಾದ ಗ್ರಂಥಗಳನ್ನು ಬರೆದರು. ಗಗನಾನಂದರ ಶಿಷ್ಯ ನಿರಂಜನಾನಂದರು ತಮ್ಮ ಗುರುವಿನ ಹೆಸರಿನಲ್ಲಿ 'ತಾರಾವಳಿ' ಯನ್ನು ರಚಿಸಿದ್ದಾರೆ ; ಶಿವಾನಂದರು ಶಂಕರಾನಂದರ ತತ್ತ್ವಗಳನ್ನು ತಿಳಿಸಿಕೊಟ್ಟಿದ್ದಾರೆ.

ಶಿವಾನಂದ ಅಥವಾ ಶಿವರಾಮಶಾಸ್ತ್ರಿಗಳ ಶಿಷ್ಯನೇ **ಅರಕಲಗೂಡು ಕೃಷ್ಣಪ್ಪ** ಎಂಬುದಾಗಿ ತೋರುತ್ತದೆ (೧೮೨೬–೧೯೦೬).* ಇವರದು ಬಹುಮುಖ ವ್ಯಕ್ತಿತ್ವ. ವೃತ್ತಿಯಲ್ಲಿ ಕಿರಿಯ ಪಾಳೆಯಗಾರರ 'ವಕೀಲ'ರಾಗಿದ್ದುದರ ಜೊತೆಗೆ ಕ್ಷಾತ್ರಧರ್ಮವನ್ನೂ ಮೈಗೂಡಿಸಿ ಕೊಂಡಿದ್ದರು. ಆದರೆ ಅಧ್ಯಾತ್ಮ ಮತ್ತು ಸಂಗೀತಗಳಲ್ಲಿಯೂ ಅಷ್ಟೇ ಪ್ರವೀಣತೆಯನ್ನು ಸಂಪಾದಿಸಿದ್ದುದು ವಿಶೇಷ ಸಂಗತಿಯಾಗಿದೆ. ದೈವಭಕ್ತಿ ಮತ್ತು ಅದ್ವೈತ ತತ್ತ್ವಗಳ ಹಿನ್ನೆಲೆಯಲ್ಲಿ ಅನೇಕ ಹಾಡುಗಳನ್ನು ರಚಿಸಿದ್ದಾರೆ. ಅವರ ಮಹತ್ವದ ವಾಙ್ಮಯ ಕಾರ್ಯವೆಂದರೆ ಭಗವದ್ಗೀತೆಯ ತಿರುಳನ್ನು ಸುಲಭ ಶೈಲಿಯಲ್ಲಿ ಕನ್ನಡಿಸಿದ್ದುದು.

---

* ಸುಪ್ರಸಿದ್ಧ ಕಾದಂಬರಿಕಾರ ಅ.ನ. ಕೃಷ್ಣರಾಯರು ಇವರ ಮೊಮ್ಮಗ.

ಗೀತೆಯು ಇಲ್ಲಿ ಸಂಗೀತ ರೂಪವನ್ನು ತಾಳಿದೆ. ಗೀತೆಯ ಸಾರವು ಇಪ್ಪತ್ತು ವಿವಿಧ ರಾಗಗಳಲ್ಲಿ ಹೊರಹೊಮ್ಮಿದುದು ಒಂದು ವಿಶೇಷ. ಹೀಗೆ ಹಾಡುಗಳ ಮೂಲಕ ಭಗವದ್ಗೀತೆಯು ಪ್ರಸರಣವಾದ ಕೆಲವು ಆರಂಭದ ಕೃತಿಗಳಲ್ಲಿ ಇದೂ ಒಂದು.

**ಶಂಕರಾನಂದಯೋಗಿಗಳು** ಜನ್ಮತಃ ಕ್ಷತ್ರಿಯರು. ಕಾಲಾಂತರದಲ್ಲಿ ಅದ್ವೈತಾನುಯಾಯಿಯಾದ ಅವರು 'ಕೈವಲ್ಯ ನವನೀತ'ದ ಹಾಡುಗಳ ಮೂಲಕ ವಿಶೇಷ ಖ್ಯಾತಿಯನ್ನು ಹೊಂದಿದರು. ಅವರು 'ಭಕ್ತಿಕಲ್ಪದ್ರುಮ, ರಾಮಭಕ್ತಿಸಾರ, ಹರಿಹರ ಲೀಲಾಮೃತ' ಮೊದಲಾದ ಕೃತಿಗಳನ್ನು ರಚಿಸಿದ್ದುದಾಗಿ ಕವಿಚರಿತಕಾರರು ಹೇಳುತ್ತಾರೆ. ಈ ಬಗೆಯ ನೀತಿ, ಭಕ್ತಿಪ್ರಧಾನವಾದ ಶತಕ, ಸ್ತೋತ್ರಗಳ ರಚನೆಯನ್ನು ವೆಂಕಟಾಚಲಯ್ಯ, ರಾಮಶೇಷಕವಿ, ವಿರೂಪಾಕ್ಷಸೂರಿ ಮೊದಲಾದವರಲ್ಲಿಯೂ ಕಾಣುತ್ತೇವೆ. ಬಾಗಲೂರ ರಾಮಸ್ವಾಮಿಯ 'ವಾಶಿಷ್ಠರಾಮಾಯಣ'ವು ಮಾತ್ರ ಸಮ್ಮಿಶ್ರ ಪದ್ಯಗಳುಳ್ಳ ದೀರ್ಘ ಕೃತಿಯಾಗಿದೆ. 'ಗಯೋಪಾಖ್ಯಾನ'ವೆಂಬ ಇನ್ನೊಂದು ದೊಡ್ಡ ಕಾವ್ಯದ ಕರ್ತೃ ವೆಂಕಟರಮಣಯ್ಯನು ತೆಲುಗಿನಲ್ಲಿಯೂ ಪರಿಣತನಿದ್ದನು.

ಸ್ವಯಂಪ್ರಕಾಶಾನಂದ ಎಂಬವರ ಶಿಷ್ಯರಾದ ರಾಮಬ್ರಹ್ಮಾನಂದರು ಕಳೆದ ಶತಮಾನದಲ್ಲಿ ವಿಶೇಷ ಪ್ರಸಿದ್ಧಿಯನ್ನು ಹೊಂದಿದ್ದರು. ಅದ್ವೈತ ತತ್ವಗಳನ್ನು ತಿಳಿಸುವ 'ಭಾಷಾಕುಸುಮಮಂಜರಿ' ಎಂಬ ಅವರ ಗದ್ಯರೂಪದ ಟೀಕಾ ಗ್ರಂಥವೊಂದಿದೆ. ಅವರು ಪ್ರಸಿದ್ಧ ಕವಿಗಳಿದ್ದುದರಿಂದ ಕ್ರಿ.ಶ. ೧೮೭೪ರಷ್ಟು ಹಿಂದಿನ ಮುಂಬಯಿಯ ಮ್ಯಾಟ್ರಿಕ್ ಪಠ್ಯಪುಸ್ತಕದಲ್ಲಿ 'ನನ್ನ ಸ್ವಪ್ನ' ವೆಂಬ ಅವರ ಆಧ್ಯಾತ್ಮಿಕ ಕವನವನ್ನು ಸೇರಿಸಲಾಗಿದ್ದಿತು. ಇವರೂ ಬ್ರಹ್ಮಸಮಾಜವನ್ನು ಸೇರಿದ್ದ ಬ್ರಹ್ಮಾನಂದಯೋಗಿಯೂ ಬೇರೆ ಬೇರೆ.*

**ಆತ್ಮಾರಾಮದಾಸ**ನೆಂಬ ಕವಿಯ ಹೆಸರು ಈಚೆಗೆ ಬೆಳಕಿಗೆ ಬಂದಿದ್ದು ಅವನ 'ರಾಮವಿಜಯ'ವು ಶಿವರಾಮಾಯಣಾನುಸಾರವಾಗಿದೆಯೆಂದು ಹೇಳಲಾಗಿದೆ.[೪] ಬಿಳಿಚೋಡ ಮನೆತನದ ಈತನು ಜಯರಾಮ ದಾಸರೆಂಬವರ ಗುರುಪರಂಪರೆಗೆ ಸೇರಿದವನು. ಕೃತಿಯಲ್ಲಿ ರಾಮಬ್ರಹ್ಮಾರ್ಯರು ತನ್ನ ವಿದ್ಯಾಗುರುಗಳೆಂದು ಹೇಳಿರುವದರಿಂದ, ಅವರು ಮೇಲೆ ಹೇಳಿದ ರಾಮಬ್ರಹ್ಮಾನಂದರೇ ಇರಬೇಕು. ಶಂಕರಾಚಾರ್ಯ, ಪುರಂದರ ದಾಸರನ್ನು ಸ್ತುತಿಸಿದ್ದಾನಲ್ಲದೆ ಕೃತಿಯಲ್ಲಿ ಹನುಮಂತನಿಗೆ ಪ್ರಾಶಸ್ತ್ಯವನ್ನು ಕೊಟ್ಟಿದ್ದಾನೆ. 'ಬುದ್ಧಿರ್ಬಲಂ ಯಶೋಧೈರ್ಯಂ' ಎಂಬ ಹನುಮಂತನ ಸ್ತುತಿಯ ಸಂಸ್ಕೃತ ಶ್ಲೋಕವನ್ನು ಅವನು ಕನ್ನಡಿಸುತ್ತ, 'ಬುದ್ಧಿಬಲ ಯಶಧೈರ್ಯ ನಿರ್ಭಯ ಕ್ಷುದ್ರರೋಗದುಪದ್ರ ಪೊದ್ದದು.

---

* ಅವರಿಬ್ಬರೂ ಒಂದೇ ಎಂಬುದಾಗಿ ಕವಿಚರಿತಕಾರರು ತಪ್ಪಾಗಿ ತಿಳಿದಂತಿದೆ. ಕ.ಚ.ಯ ಪುಟ ೧೯೩ರಲ್ಲಿ ಬಂದ ಈ ಅಂಶವನ್ನು ಬ್ರಿಟಿಶ್ ಮ್ಯೂಸಿಯಂನ ಕನ್ನಡ ಗ್ರಂಥಸೂಚಿಯ ಪು. ೩೫ರಲ್ಲಿ ಕೊಟ್ಟಿರುವ ನಮೂದಿನೊಂದಿಗೆ ಹೋಲಿಸಿ ನೋಡಬಹುದು.

ಸಿದ್ಧಿಪುದು ಸಕಲಾರ್ಥ ಸಿದ್ಧಿಯು ನಿನ ನೆನೆವರಿಗೆ ॥ ಬುದ್ಧಿಯೊಳು ನೀನಿಂದು ಯುನ್ನುವನ್ನುದ್ಧರಿಸು ಹನುಮಂತ ವಿಜಯದ ಬುದ್ಧಿಪ್ರೇರಕನಾಗಿ ನುಡಿಸೈ ನಿನ ಸ್ತುತಿಸುವೆ' ಎಂಬುದಾಗಿ ಅವನ ಪ್ರೇರಣೆಯನ್ನು ಕೋರಿದ್ದಾನೆ. ಹೀಗೆ 'ರಾಮವಿಜಯ ಕಾವ್ಯ'ವು ಹನುಮಂತ ವಿಜಯವೂ ಆಗಿದೆ.

**ದತ್ತಪಂಥೀಯರು :** ಇತ್ತ ಉತ್ತರ ಕರ್ನಾಟಕದಲ್ಲಿ ಸಮರ್ಥ ರಾಮದಾಸರ ಬೋಧನೆಯು, ದತ್ತಪಂಥದ ಪರಂಪರೆಗೆ ಕಾರಣವಾಯಿತು. ಮಹಾರಾಷ್ಟ್ರ, ಕರ್ನಾಟಕಗಳ ಗಡಿಯಲ್ಲಿರುವ ನರಸೋಬನವಾಡಿ, ಔದುಂಬರ, ಗಾಣಗಾಪುರ ಮತ್ತು ಅಕ್ಕಲಕೋಟ ಇವು ದತ್ತ ಸಂಪ್ರದಾಯವನ್ನು ಪೋಷಿಸಿದ ಸ್ಥಳಗಳು.

ಹದಿನೆಂಟನೆಯ ಶತಮಾನದಲ್ಲಿದ್ದ ಮುರಗೋಡದ ಚಿದಂಬರ ದೀಕ್ಷಿತರಿಂದ ಈ ದತ್ತ ಪರಂಪರೆ ಉತ್ತರ ಕರ್ನಾಟಕದಲ್ಲಿ ನೆಲೆಗೊಂಡಿತು. ಬೆಳಧಡಿಯ ಸದ್ಗುರು ಬ್ರಹ್ಮಾನಂದ ಮಹಾರಾಜರು (೧೮೫೯-೧೯೧೮) ಕೆಲವು ಹಾಡುಗಳನ್ನು ರಚಿಸಿದಂತೆ ತಿಳಿಯುತ್ತದೆ. (ಇವರ ಮುದ್ರಿಕೆಯೂ 'ರಾಮಬ್ರಹ್ಮಾನಂದ' ಎಂದಿದ್ದಿತು.)

**ಅಕ್ಕಲಕೋಟೆ ಮಹಾರಾಜರು** ಮೂಲತಃ ಮಂಗಳವೇಢೆಯವರು. ೧೮೫೭ರಲ್ಲಿ ಈಗಿನ ಮಹಾರಾಷ್ಟ್ರದ ಅಕ್ಕಲಕೋಟೆಗೆ ಬಂದು ನೆಲೆಸಿದರು. ಇವರ ಅನುಯಾಯಿಗಳ ಸಂಖ್ಯೆ ಆ ಭಾಗದಲ್ಲಿ ವಿಸ್ತಾರವಾದುದು. ಇವರ ಶಿಷ್ಯರೇ ಕೈವಲ್ಯಾಶ್ರಮದ ಬೋಠೆ ಸ್ವಾಮಿಗಳು (೧೮೫೬-). ಚಿದಾನಂದರನ್ನು ಅನುಸರಿಸಿದ ಭೀಮಾವಧೂತರ "ತತ್ವಾನುಸಂಧಾನ'ವು ಅದೇ ಸುಮಾರಿಗೆ ವಿಜಾಪುರದಿಂದ ಪ್ರಕಟವಾಯಿತು. ಬಾಡದ ಪದ್ಮನಾಭಮಹಾರಾಜರು ದೊಡ್ಡ ಮನೆತನದವರು; ಪರಮ ವಿರಕ್ತರು. ಉತ್ತರ ಕನ್ನಡ ಜಿಲ್ಲೆಯ ಬಾಡದಲ್ಲಿ ವಾಸವಾಗಿದ್ದು, ಆ ಭಾಗದಲ್ಲಿಯ ಧಾರ್ಮಿಕ ಪ್ರಸಾರಕ್ಕೆ ಕಾರಣರಾದರು. ರಾಮದಾಸರ ಬೋಧನೆಯನ್ನು ಅವರು ಗುರುಶಿಷ್ಯ ಸಂವಾದದ ಮೂಲಕ, ಅದರಂತೆ ನೇರವಾದ ಗದ್ಯದಲ್ಲಿ ಕೂಡ ನಿರೂಪಿಸಿದ್ದಾರೆ.(ದಾಸಬೋಧೆ* ನಿಗಮಸಾರಾಮೃತ). ನಾರಾಯಣ ಮಿಸಲಕರ ಎಂಬವನು ನಿಂಬರಗಿ ಮಹಾರಾಜರಿಂದ ಸ್ಫೂರ್ತಿ ಪಡೆದು ಹಲವು ಪದಗಳನ್ನೂ 'ಬೋಧಸುಧೆ' ಮತ್ತು 'ಸದ್ಗುರು ಸಮರ್ಥರು' ಎಂಬ ಗದ್ಯ ಕೃತಿಗಳನ್ನೂ ರಚಿಸಿದ್ದಾನೆ.

"ಕ್ಷತ್ರಿಯರು ತಮ್ಮ ಧರ್ಮವಂ ಬಿಟ್ಟು ಶ್ರೇಷ್ಠವಾದ ಬ್ರಾಹ್ಮಣರ ಧರ್ಮವಂ ಮತ್ತು ಕನಿಷ್ಠವಾದ ವೈಶ್ಯಾದಿಕರ ಧರ್ಮವಂ ಸ್ವೀಕರಿಸಿದರು. ಅದರಿಂದವರ ಶೂರತ್ವವು ನಷ್ಟವಾಯ್ತು. ಆಗ್ಗೇ ಪರದೇಶೀಯ ಜನರು ಈ ದೇಶಕ್ಕೆ ಅಧಿಪತಿಗಳಾದರು. ಅವರು ತಮ್ಮ ಹಿತದ ಸಲುವಾಗಿ ಬೇಕಾದ ಪ್ರಕಾರ ಏತದ್ದೇಶೀಯ ಪ್ರಜೆಗಳನ್ನು ದರಿದ್ರರಂ

* 'ದಾಸಬೋಧ'ದಲ್ಲಿ ಪ್ರಾಸಂಗಿಕವಾಗಿ ರಾಷ್ಟ್ರೀಯ ಮನೋಭಾವದ ವಿಚಾರಸರಣಿ ಬಂದಿದೆ. ಇದು ಅಂದಿನ ಸರಕಾರದ ಗಮನಕ್ಕೆ ಬಂದಿರಲಿಕ್ಕೂ ಇಲ್ಲ.

ಮಾಡುತ್ತಿರಲಾಗಿ ಅವರ ಅನ್ಯಾಯವನ್ನು ದಂಡಿಸುವಂಥ ಬಲವಾನರು ಯಾರೂ ಉಳಿದಿದ್ದಿಲ್ಲ. ಯಥಾ ರಾಜಾ ತಥಾ ಪ್ರಜಾ–ಈ ವಚನದ ಪ್ರಕಾರ ಜನರು ತಮ್ಮ ರಾಜರಾಚರಣೆಯನ್ನು ಮಾಡಲಾರಂಭಿಸಿದ್ದರು. ಆ ಆಚರಣವು ರಾಜನಿಗೆ ಪ್ರಿಯವಿದ್ದ ಕಾರಣ ಆ ಜನರಿಗೆ ಶಾಸನವಾಗದೇ ಉತ್ತೇಜನವೇ ಪ್ರಾಪ್ತವಾಗುತ್ತಿತ್ತು.'' (೨ನೇ ಮುದ್ರಣ -೧೯೫೩, ಪು. ೧೧)

ಇನ್ನೂ ಹಲವರು ದತ್ತಪಂಥೀಯರು ಆ ಕಾಲದಲ್ಲಿ ಬೆಳಗಿದರು. ಒಬ್ಬೊಬ್ಬರಲ್ಲಿಯೂ ಅನುಭಾವದ, ಅಧ್ಯಾತ್ಮದ ಸೆಳಕು ಇದ್ದದ್ದೇ. ಹಾಗಿರುತ್ತ ಹಾಡುಗಳನ್ನು ರಚಿಸಿದವರಿದ್ದಾರೆ. ಆದರೆ ಅವು ಶಿಷ್ಯರ ಕೈಬರಹದ ಪುಸ್ತಕಗಳಲ್ಲಿ ಉಳಿದುಬಿಟ್ಟಿವೆ. ದೊರೆತಷ್ಟರ ಮೇಲಿಂದ ಈರ್ವರ ಪರಿಚಯವನ್ನು ಮಾತ್ರ ಇಲ್ಲಿ ಕೊಡಬಯಸಿದೆ.

ಮೊದಲಿಗೆ, **ಬಾಳೆಕುಂದ್ರಿಯ ದತ್ತೋಪಂತರು** (ಬೆಳಗಾಂವ ಜಿಲ್ಲೆ). ವೃತ್ತಿಯಲ್ಲಿ ಪ್ರಾಥಮಿಕ ಶಿಕ್ಷಕರಾಗಿದ್ದರು. ಆದರೆ ಒಲವೆಲ್ಲ ತತ್ವಜ್ಞಾನದ ಕಡೆಗೆ. ಈ ಮಧ್ಯೆ ಕಬರೀಗುಡ್ಡದ ಬಾಳಪ್ಪ ಬಾಲಾವಧೂತನೆಂಬ ಗುರುವಿನ ಸಮಾಗಮ ಲಭಿಸಿತು. (ಈ ಬಾಳಪ್ಪನ ಗುರು ರಾಮಚೈತನ್ಯ ಎಂಬವರು. ಗುರುಪರಂಪರೆ ಎನ್ನುವುದು ಎಷ್ಟೊಂದು ಮಹತ್ವದ್ದೆಂಬುದನು ಇದು ತೋರಿಸುತ್ತದಲ್ಲವೆ.) ಶಾಲೆಯ ಕೆಲಸ ಮುಗಿದ ಮೇಲೆ ತಮ್ಮ ಮನೆಯಂಗಳದಲ್ಲಿ ನೆರೆದ ಜನರಿಗೆ ಉಪದೇಶಗೈಯುತ್ತಿದ್ದರು– ಪ್ರಾಯಶಃ ಮರಾಠಿ ಮತ್ತು ಕನ್ನಡ ಈ ಉಭಯ ಭಾಷೆಗಳಲ್ಲಿ. ಇವರ ಮರಾಠೀ ಪ್ರವಚನಗಳು ಲೇಖನರೂಪದಲ್ಲಿ ಪ್ರಕಟವಾಗಿವೆ. ಅವರ ಉಭಯ ಭಾಷಾ ಹಾಡುಗಳಲ್ಲಿ ಕನ್ನಡದಲ್ಲಿದ್ದವುಗಳು–ದೊರೆತದ್ದು–೨೭ ಮಾತ್ರ. ಅವುಗಳ ಮುದ್ರಿಕೆ 'ದತ್ತ' ಎಂಬುದಿದ್ದರೂ 'ಬಾಲ ಮುಕುಂದ' ಎಂಬುದನ್ನು ಮೇಲಿಂದ ಮೇಲೆ ಬಳಸಿದ್ದಾರೆ. ಅಂದಿನ ಕ್ರಮದಂತೆ ಗುರು ವಂದನೆಗೆ ಆದ್ಯತೆ.

> ''ಎಲ್ಲಿ ಪೋದನೆ ಪೇಳಮ್ಮಾ । ಬಾಲಾವ-
> ಧೂತನನೆಲ್ಲಿ ಹುಡುಕಲಿ ಹೇಳಮ್ಮಾ''
> –ಎಂದು ಆರಂಭಿಸಿ,

> ''ಅಚ್ಚಮರುಳ ದತ್ತಾನೆಚರ ತಪ್ಪಿಸಿ
> ನಿಶ್ಚಿಂತನಾಗಿ ತಾ ಬಟ್ಟ ಬಯಲಾದಾ.''
> –ಎಂದು ಮುಗಿಸಿದ್ದಾರೆ.

> ''ದೃಶ್ಯಕ್ಕೆ ಮೋಹಿಸಬೇಡೊ ಮನುಜಾ
> ಅದೃಶ್ಯದ ಗುರಿ ತಿಳಿ ಮನುಜಾ
> ಸಾದೃಶ್ಯ ತೋರಿದ ಈತನ ಕೂಡಿ
> ಅದೃಶ್ಯನಾಗೊ ಮನುಜಾ''

ಎಂಬುದು ಇನ್ನೊಂದು ಹಾಡಿನ ಪ್ರಾರಂಭ, ಹೆಚ್ಚಿನ ಹಾಡುಗಳಲ್ಲಿ ಗುರುನಮನ, ಸದ್ಗುರುವಿಗೆ ಶರಣಾಗತಿ ಇವೇ ಮತ್ತೆ ಮತ್ತೆ ಬಂದಿವೆ. ಇದೊಂದು ಮಾತ್ರ ಹೊಸ ವಿಚಾರಗಳಿಂದ ಕೂಡಿದೆ:

"ಹುಚ್ಚ ಬಂದನು ಇಲ್ಲಿಗೆ ಹುಚ್ಚ ಬಂದನು
ನಿಚ್ಚ ನಿಚ್ಚ ಕಾಲದಲ್ಲಿ ಎಚ್ಚರದಪ್ಪಿ ಕುಣಿಯುವಂಥಾ ।
ತತ್ವ ಕುದರಿ (ದುಪ್ಪಟಿ) ತಲೆಗೆ ಸುತ್ತಿ
ಸತ್ವ ಕುದರಿ ತಿರುಗಿ ಹತ್ತಿ

ಅನಿತ್ಯ ಮಣ್ಣು ಬಗಿದೂ ಬಗಿದು
ನಿತ್ಯ ಸುಖವ ತೋರುವಂಥಾ ೧

ಜ್ಞಾನ ಅಜ್ಞಾನ ತಟ್ಟಲಿ ಮೆಟ್ಟಿ
ಸುಜ್ಞಾನ ವಸ್ತ್ರ ನಡಕೆ ಕಟ್ಟಿ
ಜ್ಞಾನಿ ಅಜ್ಞರು ಕೂಡಿಕೊಂಡು
ಅಜ್ಞನಂತೆ ತೋರುವುದಕ್ಕೆ ೨

ಕಾಲ ಅಕಾಲ ಭೇದವಳಿದು
ಕಾಲನ ನಿಜ ಮೂಲನ ತುಳಿದು
ಬಾಲಮುಕುಂದನ ಕೂಡಿಕೊಂಡು
ಬಾಲಲೀಲೇಯ ಆಡುತ ಪಾಡುತ
ಹುಚ್ಚ ಬಂದನು.... ೩

ಖ್ಯಾತನಾಮ ವಿ.ಕೃ. ಗೋಕಾಕರು ತಮ್ಮ ತರುಣ ವಯದಲ್ಲಿ ಬಾಳೆಕುಂದ್ರಿ ಮಹಾರಾಜರನ್ನು ಗುರುಸ್ಥಾನದಲ್ಲಿರಿಸಿಕೊಂಡಿದ್ದನ್ನು ಪ್ರಾಸಂಗಿಕವಾಗಿ ಕಾಣಿಸಬಹುದಾಗಿದೆ.

**ನಿಂಬರಗಿ ನಾರಾಯಣ ಮಹಾರಾಜರು** : ಮಹಾನ್ ತತ್ತ್ವವೇತ್ತರಾದ ರಾ.ದ. ರಾನಡೆಯವರ ಗುರುಗಳಿವರು. ವಿಜಾಪುರ ಜಿಲ್ಲೆಯ ನಿಂಬರಗಿಯವರಾದ್ದರಿಂದ ಅದೇ ಹೆಸರು ಬಳಕೆಯಲ್ಲಿದೆ. ಇವರ ಶಿಷ್ಯವರ್ಗ ದಕ್ಷಿಣ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕ ಎರಡೂ ಕಡೆಗೆ ಹಬ್ಬಿದೆ–ಇಂದಿಗೂ! ಹಾಗೆ ಹೇಳಿದ್ದರೆ ಕಾರಣ, ಈಚೆಗೆ ಅಂದರೆ ೧೯೬೧ರಲ್ಲಿ 'ಆಚರಣೆಯ ಮೂಲತತ್ತ್ವ' ಎಂಬ ಅವರ ಉಪದೇಶ–ಪ್ರವಚನಗಳ ಸಂಗ್ರಹ ಪ್ರಕಟವಾಗಿದೆ. ಈ ಗ್ರಂಥದ ವೈಶಿಷ್ಟ್ಯವೆಂದರೆ ಎಡಬದಿಗೆ ಕನ್ನಡ, ಬಲಬದಿಯ ಪುಟದಲ್ಲಿ ಅದರ ತದ್ವತ್ ಮರಾಠೀ ಅನುವಾದವಿದೆ. ಅವರ ಪಾರಮಾರ್ಥಿಕ ಸಾಧನೆಯು ಸ್ವಂತ ಅನುಭವದಿಂದ ಒಗೆತಂದದ್ದು.

ಅದ್ವೈತಾನುಯಾಯಿಯಾದ ಅವರ ಪ್ರವಚನಗಳಿಗೆ ಎಲ್ಲ ಮತ ಪಂಥದವರೂ ಹೋಗುತ್ತಿದ್ದರು. ಅವರಾದರೂ ಕನಕ, ಕಬೀರ, ಅಲ್ಲಮ, ಪುರಂದರ ಇವರೆಲ್ಲರ ಉಕ್ತಿಗಳನ್ನು ಉದ್ಧರಿಸುತ್ತಿದ್ದರಂತೆ. ಅವರ ಪ್ರವಚನಗಳನ್ನು ಸಂಗ್ರಹಿಸಿದವರು ಮತ್ತು ಪ್ರಕಟಿಸಿದವರು ದ್ವೈತಿಗಳಾದ ವಿಜಾಪುರದ 'ಆದ್ಯ' ಮನೆತನದ ರಘುನಾಥಾಚಾರ್ಯ ಹಾಗೂ ಬಾಬಾಚಾರ್ಯ ಎಂಬವರು.

ಅವರ ಪ್ರವಚನಗಳಲ್ಲಿ ಮೊದಲಿಗೆ ಯಥಾಪ್ರಕಾರ ಗುರುವಂದನೆ ವಿವರವಾಗಿ ಬರುತ್ತಿತ್ತು. ಅದು ಅವರ ಗ್ರಂಥದಲ್ಲಿಯೂ ಬಂದಿದೆ. ಬಾಳೆಕುಂದ್ರಿಯವರಂತೆ ಇವರೂ ಉಭಯ ಭಾಷಾವಿದರು. ಕನ್ನಡದಲ್ಲಿ ಅವರು ರಚಿಸಿದ ೧೩ ಹಾಡುಗಳು 'ಆಚರಣೆಯ ಮೂಲತತ್ತ್ವ'ದ ಕೊನೆಯಲ್ಲಿವೆ. ಮುದ್ರಿಕೆ 'ಗುರುಲಿಂಗಜಂಗಮ' ಎಂಬುದು. ಜಾನಪದೀಯ ಧಾಟಿ ಧಾರಾಳವಾಗಿ ವ್ಯಕ್ತವಾಗಿದೆ, ಅವುಗಳಲ್ಲಿ. ಅಂದ ಹಾಗೆ ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬಲ್ಲಿಯ ಹಕ್ಕಿಯ ವಿರಾಟ್ ಸ್ವರೂಪದ ಕಲ್ಪನೆಗೆ, ನಿಂಬರಗಿ ಮಹಾರಾಜರ– "ಕೇಳು ಚಾತುರಾ ಹಕ್ಕೀ ಭೇದಾ ಕೇಳತಿದ್ದಿ ನಮಗ .... ಹಕ್ಕಿ ಹಸ್ತು ಬ್ರಹ್ಮಾಂಡ ನುಂಗಿತೊ, ನಿನ್ನ ನುಂಗಿತೊ" ಎಂದು ಮುಂತಾಗಿ ಬರುವ ವಿಚಾರ ಸರಣಿ ಬೇಂದ್ರೆಯವರಿಗೆ ಪ್ರೇರಣೆ ಕೊಟ್ಟಿರಲು ಸಾಕು.

**ಶಿಶುನಾಳದ ಶರೀಫ ಸಾಹೇಬ**ರನ್ನು ಕರ್ನಾಟಕದ ಕಬೀರನೆಂದು ತಿಳಿಯಲಾಗುತ್ತದೆ. ಇಬ್ಬರೂ ಜನ್ಮತಃ ಮುಸಲ್ಮಾನರು ; ಆದರೆ ಬ್ರಾಹ್ಮಣ ಗುರುವನ್ನು ಹೊಂದಿದ್ದರು. ಇಬ್ಬರೂ ಅದ್ವೈತದ ಉಪಾಸಕರು. ತಮ್ಮ ಉಪದೇಶಾತ್ಮಕ ಪದಗಳಿಂದ ಸಾಮಾನ್ಯ ಜನತೆಯ ಉದ್ಧಾರವನ್ನು ಕೈಕೊಂಡರು. ಶರೀಫರ ಗುರು ಕಳಸದ ಗೋವಿಂದಭಟ್ಟನೆಂಬ ಸಿದ್ಧಪುರುಷರು.* ಶರೀಫರು ಗಾವಠಿ ಶಾಲೆಯ ಮಾಸ್ತರಿಕೆಯಲ್ಲಿ ಕೆಲವು ದಿನ ಕಳೆದ ಮೇಲೆ ಹಳ್ಳಿಗರನ್ನು ನೆರೆಯಿಸಿ, ಅವರಿಗಾಗಿ ಲಾವಣಿ ಪದಗಳನ್ನು ಅಲ್ಲಿಯೆ ರಚಿಸಿ ಹಾಡುವುದರ ಮೂಲಕ ಬೆಳಕಿಗೆ ಬಂದರು. ಪಾರಮಾರ್ಥಿಕ ಸಿದ್ಧಿಯು ಹೆಚ್ಚಿದಂತೆ ಜನಾದರಣೀಯರಾದರು. ಹಲವು ಪವಾಡಗಳನ್ನು ತೋರಿದರು. ಜನಪದ ಜೀವನದ ಮರ್ಮವನ್ನು ಅರಿತಿದ್ದ ಶರೀಫರು ಕೇವಲ ಜನತೆಯನ್ನುದ್ದೇಶಿಸಿಯೆ ಹಾಡು ಕಟ್ಟಿದರು. ಕಬೀರನದು ನೇರವಾದ ಉಪದೇಶವಾಗಿದ್ದರೆ. ಶರೀಫರ ಹಾಡುಗಳಲ್ಲಿ ತೀರ ಸಾಮಾನ್ಯ ಅಂಶಗಳಿಗೆ ಅಧ್ಯಾತ್ಮದ ಮೆರುಗನ್ನು ಕೊಟ್ಟದ್ದು ಕಂಡು ಬರುತ್ತದೆ.

* ಗೋವಿಂದಭಟ್ಟರು ಸ್ವತಃ ಕವಿಯಾಗಿದ್ದು ಹಾಡುಗಳನ್ನು ರಚಿಸಿದ್ದಾರೆ. ಅವನ್ನು ಅರಸಿಕೊಂಡು ಈಚೆಗೆ ಕಳಸಗ್ರಾಮಕ್ಕೆ ಹೋದಾಗ ಅವೆಲ್ಲ ಕಾರಣಾಂತರದಿಂದ ನಶಿಸಿಹೋಗಿವೆ ಎಂದು ತಿಳಿದು ಬೇಸರವಾಯಿತು.

## ದಕ್ಷಿಣ ಕರ್ನಾಟಕ

ಉತ್ತರ ಕರ್ನಾಟಕದಲ್ಲಿ ಈ ಪರಿಸ್ಥಿತಿ ಇದ್ದರೆ, ಮೈಸೂರ ಪ್ರದೇಶದಲ್ಲಿ ಅದ್ವೈತ-ಭಾಗವತ ಎನ್ನಬಹುದಾದ ವಿಶಿಷ್ಟ ಪರಂಪರೆ ಅಸ್ತಿತ್ವದಲ್ಲಿದ್ದಿತು. ಇವರದು ಮೂಲತಃ ಅದ್ವೈತ ಪಂಥವೇ ಆಗಿದ್ದರೂ, ಭಾಗವತ ಪ್ರಣೀತ ಶ್ರೀಹರಿಗೆ ವಿಶೇಷ ಪ್ರಾಶಸ್ತ್ಯ. ಇದಕ್ಕೆ ಪ್ರಾಯಶಃ ವಾಸುದೇವಯ್ಯ ಎಂಬವರು ಆರಂಭಕರ್ತರೆನ್ನಬಹುದು. ಇವರ ಶಿಷ್ಯರೇ **ತಿಮ್ಮಪ್ಪದಾಸರು** (೧೭೭೦-೧೮೬೦). ಇವರಿದ್ದ ಚಿಕ್ಕನಾಯಕನಹಳ್ಳಿ ಚಿಕ್ಕದೇ ಆಗಿದ್ದರೂ ಇವರಿಂದಾಗಿ ಯಾತ್ರಾಸ್ಥಳವಾಯಿತು. ಅವರು ರಚಿಸಿದ ಅನೇಕ ಹಾಡುಗಳಲ್ಲಿ 'ಅರ್ಚನ'ಕ್ಕೆ ಸಂಬಂಧಿಸಿದವುಗಳನ್ನು, ಎಂ.ವಿ. ಸೀತಾರಾಮಯ್ಯನವರು ಸಂಕಲಿಸಿ ಪ್ರಕಟಿಸಿದ್ದಾರೆ. ಧ್ರುವಚರಿತ್ರೆ ಮತ್ತು ಶ್ರೀಕೃಷ್ಣಬಾಲಲೀಲೆ ಎಂಬ ಅವರ ಕಾವ್ಯಗಳೂ ಬೆಳಕು ಕಂಡಿವೆ. ಅದಕ್ಕೆ ಅಧಿಕಾರಯುತವಾದ ಪ್ರಸ್ತಾವನೆಯೂ ಇದೆ. ಇನ್ನುಳಿದ ಅವರ ಹಾಡುಗಳನ್ನೂ ಅವರ ಮಗ ನಾರಾಯಣದಾಸರು ರಚಿಸಿದವುಗಳನ್ನೂ ಸೇರಿಸಿ ಈಚೆಗೆ (ಕ್ರಿ.ಶ. ೨೦೦೦) ಪ್ರಕಟಿಸಲಾಗಿದೆ.

## ೭೪ ವೈಷ್ಣವ ಕವಿಗಳು

ಹತ್ತೊಂಬತ್ತನೆಯ ಶತಮಾನದಲ್ಲಿ ರಾಮಾನುಜೀಯರಾಗಲೀ, ಮಾಧ್ವರಾಗಲೀ ನೇರವಾದ ಸ್ವಮತೀಯ ಸಾಹಿತ್ಯವನ್ನು ರಚಿಸಿದುದು ಕಡಿಮೆ. ಭಾಗವತಾದಿ ಪುರಾಣಗಳಿಂದ ಆಯ್ದ ವಿವಿಧ ಆಖ್ಯಾಯಿಕೆಗಳನ್ನು ಕವನಿಸಿದ ಪ್ರವೃತ್ತಿಯೇ ಹೆಚ್ಚಾಗಿ ಕಂಡು ಬರುತ್ತದೆ. ಶ್ರೀರಾಮ, ಕೃಷ್ಣ, ವೆಂಕಟೇಶ ದೇವರುಗಳಿಗೆ ಸಂಬಂಧಿಸಿದ ಅನೇಕ ಕಥಾನಕಗಳೂ ಧ್ರುವ, ಪ್ರಹ್ಲಾದ ಮುಂತಾದ ಹರಿಭಕ್ತರ ಚರಿತ್ರೆಗಳೂ ಕಳೆದ ಶತಮಾನದಲ್ಲಿ ಹೊರಹೊಮ್ಮಿದುವು.

ಹಪ್ಪಳಾಚಾರ್ಯನೆಂಬವನು 'ಶ್ರೀರಂಗ ಮಹಾತ್ಮ್ಯ'ವನ್ನೂ ಗೊರೂರಿನ ಶ್ರೀನಿವಾಸನು 'ಅರ್ಚಾವತಾರವಿಲಾಸ' ವನ್ನೂ (೧೮೬೧) ಬರೆಯುವಲ್ಲಿ ಪುರಾಣಗಳೇ ಆಕರಗಳಾಗಿದ್ದವು. ಶ್ರೀವೈಷ್ಣವ ಪುಣ್ಯಕ್ಷೇತ್ರಗಳ ವಿವರಣೆಯಿರುವ 'ಅರ್ಚಾವತಾರವಿಲಾಸ'ವು ಷಟ್ಪದೀ ಕಾವ್ಯವಾಗಿದೆ. ಈ ಕವಿಯು ಪರಕಾಲಮಠದ ಶಿಷ್ಯನಿದ್ದನು. ಗೊರೂರ ಗ್ರಾಮದ ನರಸಿಂಹಾಚಾರ್ಯನು ಕಾವೇರಿ ಪುರಾಣವನ್ನು ಅನುವಾದಿಸುವುದರ ಜೊತೆಗೆ, ಭರ್ತೃಹರಿಯ ನೀತಿಶತಕ, ವೆಂಕಟಾಧ್ವರಿಯ ವಿಶ್ವಗುಣಾದರ್ಶ-ಇವನ್ನೂ ಕನ್ನಡಿಸಿದ್ದಾನೆ.

ಶ್ರೀಕೃಷ್ಣನ ಚರಿತ್ರೆಯನ್ನು ಎಷ್ಟು ಸಲ ಹಾಡಿ ಹೇಳಿದರೂ ವೈಷ್ಣವರು ತಣಿಯರು. ಮೇಲೆ ಹೆಸರಿಸಿದ ನರಸಿಂಹಾಚಾರ್ಯನು 'ಕೃಷ್ಣಲೀಲಾಮೃತ'ವನ್ನೂ ರಚಿಸಿದ್ದಾನೆ. ರಾಮಾನುಜಾಚಾರ್ಯ, ವೆಂಕಟವರದಾಚಾರ್ಯರೆಂಬ ಸರಗೂರಿನ ಬಂಧುದ್ವಯ ಅನುಕ್ರಮವಾಗಿ 'ಕೃಷ್ಣಲೀಲೆ' ಹಾಗೂ 'ಗೋಪಿಕಾಗೀತೆ'_ಇವನ್ನು ರಚಿಸಿದ್ದಾರೆ. ನುಗ್ಗೀಹಳ್ಳಿ

ರಂಗಾಚಾರ್ಯನ 'ಅಕ್ರೂರಚರಿತೆ' ಮತ್ತು ವಿಷ್ಣುದಾಸನ 'ಗೋವರ್ಧನಗಿರಿಯ ಕಥೆ'– ಇವು ಶ್ರೀಕೃಷ್ಣನ ಬಾಲಲೀಲೆಗೆ ಸಂಬಂಧಿಸಿದುವು. ಮಾಲೂರಿನ ಶ್ರೀನಿವಾಸಯ್ಯಂಗಾರನು ಬೊಮ್ಮೆರ ಪೋತನನ ಆಂಧ್ರ ಭಾಗವತದ ಕೆಲವು ಕಥಾಂಶಗಳನ್ನು ವಿಸ್ತರಿಸಿ 'ರುಕ್ಮಿಣೀಪರಿಣಯ'ವೆಂಬ ಚಂಪೂ ಕಾವ್ಯವನ್ನು ಬರೆದನು (೧೮೯೫). ನೀತಿ ತತ್ವಗಳನ್ನು ಹೇಳುವ 'ಅನಂತಶತಕ'ಕ್ಕೆ ಟೀಕೆಯನ್ನು ಬರೆದ (೧೮೬೮) ಶಾಮಾಚಾರ್ಯನೂ ತೆಲುಗು ಪದ್ಯವನ್ನೆ ಮೂಲವಾಗಿ ಇಟ್ಟುಕೊಂಡಿದ್ದನು.

ಇತ್ತ ವೆಂಕಟೇಶ ಕವಿಯು 'ರಾಮಕೊರವಂಜಿ' ಯನ್ನೂ ನ್ಯಾಪತಿ ಲಕ್ಷ್ಮೀನರಸಿಂಹನು 'ರಾಮ ಕಥಾರಂಜನ'ವನ್ನೂ ರಚಿಸಿ, ಶ್ರೀರಾಮಭಕ್ತಿಯನ್ನು ತೋರ್ಪಡಿಸಿದ್ದಾರೆ. ಲಕ್ಷ್ಮೀನರಸಿಂಹನು ತನ್ನ ರಾಮಕಥೆಯನ್ನು ಸುಂದರಕಾಂಡಕ್ಕೆ ಸೀಮಿತಗೊಳಿಸಿದ್ದರೂ ಅದು ವಿವಿಧ ವೃತ್ತಗಳಲ್ಲಿ ರಚಿತವಾದ ೬೮ ಸರ್ಗಗಳ ದೊಡ್ಡ ಕಾವ್ಯವಾಗಿದೆ. ಹುಲ್ಲುಹಳ್ಳಿ ರಾಮಣ್ಣನು ಮೈಸೂರಲ್ಲಿ ಉಪಾಧ್ಯಾಯನಿದ್ದನು; ನಾಟ್ಯ, ಸಂಗೀತಗಳಲ್ಲಿಯೂ ಪರಿಣತನಿದ್ದು, ಹರಿಕಥೆ ಮಾಡುತ್ತಿದ್ದನು. **ತೃಣಪುರೀಶ** ಎಂಬ ಹೆಸರಿನಲ್ಲಿ ಕೀರ್ತನೆಗಳನ್ನೂ ರಚಿಸಿದ್ದಾನೆ. ಇದೇ ರೀತಿ ಅನೇಕ ಹಾಡುಗಳನ್ನು ರಚಿಸಿದ ಅನಂತರಾಮಯ್ಯನು ಹೆಳವನಕಟ್ಟೆಯ ಶ್ರೀವೆಂಕಟನ ಭಕ್ತನು. ಅವನ ಉದಯರಾಗದ, ದ್ರೌಪದಿಯ ಸೀರೆ ಸೆಳೆದದ್ದರ, ಮತ್ತು ಅಜಾಮಿಳ ಚರಿತ್ರೆಯ ಹಾಡುಗಳು ಹೆಣ್ಣುಮಕ್ಕಳಲ್ಲಿ ವಿಶೇಷವಾಗಿ ಬಳಕೆಯಲ್ಲಿವೆ.

ನಾಡಿನ ಉತ್ತರ ಭಾಗದಲ್ಲಿದ್ದ ವೈಷ್ಣವ ಕವಿಗಳಲ್ಲಿ ಅಪರಾಳ ತಮ್ಮಣ್ಣ, ಐಹೊಳೆ ಭೀಮರಾಯ ಇವರು ಎದ್ದು ತೋರುವಂತಹರು.

ಶ್ರೀಕೃಷ್ಣಪಾರಿಜಾತ ಖ್ಯಾತಿಯ **ಅಪರಾಳ ತಮ್ಮಣ್ಣ***ನು ರಾಯಚೂರ ಕಡೆಯವನು. ಶಾಸ್ತ್ರ–ಪುರಾಣ ಹಾಗೂ ಮಾಧ್ವ ತತ್ವಜ್ಞಾನಗಳನ್ನು ಶ್ರದ್ಧೆಯಿಂದ ಅಭ್ಯಸಿಸಿದ್ದನು. ಅದಕ್ಕಿಂತ ಮಿಗಿಲಾಗಿ ಸಂಗೀತದಲ್ಲಿ ಪಾರಂಗತನಿದ್ದನು. ಅವನ ಕಾಲದಲ್ಲಿ ಸಂಗೀತ ಪ್ರಧಾನವಾದ ಜನಪದ ನಾಟಕಗಳು ಪ್ರಚುರದಲ್ಲಿದ್ದವು. ಅಲ್ಲಲ್ಲಿ ಸಂಭಾಷಣೆಗೆ ಅವಕಾಶವಿದ್ದಿತು. ಹಳ್ಳಿ ಹಳ್ಳಿಗಳಲ್ಲಿ ಅವುಗಳ ಪ್ರಯೋಗಗಳಾಗುತ್ತಿದ್ದುವು. ತಮ್ಮಣ್ಣನು ಅವುಗಳ ಮರ್ಮವನ್ನು ಕಂಡುಕೊಂಡಿದ್ದ. ಜೊತೆಗೆ ಅವನ ಆಳವಾದ ಕೃಷ್ಣಭಕ್ತಿಯಿಂದಾಗಿ ಈ ಗೀತನಾಟಕದ ರಚನೆಯಾಯ್ತು. (ಸು. ೧೮೦೦) ಕನಕಗಿರಿಯ ರಂಗಭೂಪಾಲನೆಂಬವನ ಪ್ರೋತ್ಸಾಹವೂ ಕೃತಿ ರಚನೆಗೆ ಕಾರಣವಾಯ್ತೆಂದು ಕಾವ್ಯದ ಕೊನೆಯಲ್ಲಿ ಉಕ್ತವಾದುದಿದೆ.

---

* ಅಪರಾಳ ತಮ್ಮಣ್ಣನ ಈ ಮೂಲ ಕೃತಿಯ ವಿವಿಧ ಆವೃತ್ತಿಯನ್ನು (ಗದ್ಯರೂಪ, ಚಿತ್ರಮಯ.) ಕರ್ನಾಟಕದ ಹಲವು ವಿಶ್ವವಿದ್ಯಾ(ನಿ)ಲಯಗಳು ಹೊರ ತಂದಿವೆ. ಪಿಎಚ್.ಡಿ. ಮಟ್ಟದ ಅಧ್ಯಯನ ಕೃತಿಗಳೂ ಬೆಳಕಿಗೆ ಬಂದಿವೆ.

ಅಪರಾಳ ತಮ್ಮಣ್ಣನು ಕಥಾವಸ್ತುವಿನಲ್ಲಿ ಭಾಗವತ ಮತ್ತು ಹರಿವಂಶಗಳ ನೆರವನ್ನು ಪಡೆದಿದ್ದಾನೆ. ಆದರೆ ಕಥಾ ಸೂತ್ರಗಳ ಪೂರ್ವಾಪರ ಸಂಬಂಧವನ್ನು ಚೆನ್ನಾಗಿ ಕಾಯ್ದುಕೊಂಡು ಬಂದಿದ್ದಾನೆ. ಹೃದ್ಯವಾದ ರೀತಿಯಲ್ಲಿ ಸಂಯೋಜಿಸಿದ್ದಾನೆ. ಇದರಲ್ಲಿ ಶ್ರೀಕೃಷ್ಣನು ದೇವಲೋಕದಿಂದ ಪಾರಿಜಾತವನ್ನು ತಂದು ಸತ್ಯಭಾಮೆಯನ್ನು ಸಮಾಧಾನಪಡಿಸಿದ ಕಥೆ ಮುಖ್ಯವಾದುದು. ಜೊತೆಗೆ ನರಕಾಸುರ ವಧೆ, ಇಂದ್ರ-ಶಚೀ-ಗರ್ವಭಂಗಗಳ ಪ್ರಸಂಗಗಳೂ ಇವೆ. ರಸಸ್ಯಂದಿಯಾದ ಭಾಗಗಳೆಂದರೆ ಸತ್ಯಭಾಮೆಯ ವಿರಹ-ಪ್ರಣಯ ಹಾಗೂ ಕೊರವಂಜಿಯ ಪಾತ್ರ. ಶುದ್ಧ ಕರ್ನಾಟಕ ಸಂಗೀತದ ಹಾಡುಗಳ ಗೇಯತೆಗೆ ಇಲ್ಲಿನ ಕಲ್ಪಕತೆಯು ಜೊತೆಗೂಡಿದ್ದರಿಂದ ಈ ಕಾವ್ಯವು ಶ್ರೇಷ್ಠ ಕಲಾಕೃತಿಯಾಗಿ ನಿಂತಿದೆ.

ಗಮನಿಸಬೇಕಾದ ಇನ್ನೊಂದು ಅಂಶವೆಂದರೆ. ಇದರಲ್ಲಿ ಸತ್ಯಭಾಮೆಯು ಪ್ರಧಾನ ವ್ಯಕ್ತಿಯಾಗಿ ಕಂಡುಬಂದರೂ ರುಕ್ಮಿಣಿಯ ವ್ಯಕ್ತಿತ್ವವೇ ಉನ್ನತವಾದುದು. ಶ್ರೀಕೃಷ್ಣನಂಥ ಮಹಿಮಾನ್ವಿತನ ಪಟ್ಟದ ರಾಣಿಯಾಗಲು, ಲಕ್ಷ್ಮೀದೇವಿಯ ಅವತಾರವೆನಿಸಿಕೊಳ್ಳಲು ಅವಳೇ ಯೋಗ್ಯಳೆಂಬ ರೀತಿಯಲ್ಲಿ ಅವಳು ಚಿತ್ರಿತಳಾಗಿದ್ದಾಳೆ. ವಿರಹ ತಾಪದಿಂದ ಬಳಲುವ ಸತ್ಯಭಾಮೆಯ ಕಡೆಗೆ ಹೋಗಲು ಶ್ರೀಕೃಷ್ಣನು ಅನುಮತಿ ಬೇಡಿದಾಗ, ಆಕೆಯು–

"ಬ್ಯಾಡವೆಂದೆನೇ? ಬ್ಯಾರೆಯೆನ್ನನು ಮಾಡಿ ಕೂಡಲಾಡದೇ ಕುಶಲ ದ್ವೈತವನೆ ಆಡಿ । ..... ಭೂಮಿ ನೀನು, ಮಾರ್ಗ ನಾನು .... ಸರಿತವು ನೀನು, ಸಾಗರವು ನಾನು ....... ಪೂರಣ ಬ್ರಹ್ಮ ನೀನು, ಕಾರಣವಾದ ಪ್ರಕೃತಿ ನಾನು ..... ಜಾಣ ನಿನ್ನೂರ ಜಗದೊಳು ವಾಸವನು ನಾನು ಮಾಡಿಹೆ. ನಾರಿ ಮನಿಗ್ಹೋದರೇನು ಪ್ರಾಣ ನಾಯಕಾ, ಪದಕದಂತೊಪ್ಪಿಹೆನು" ಎಂದು ಹೇಳುತ್ತಾಳೆ. ಶ್ರೀಕೃಷ್ಣ–ರುಕ್ಮಿಣಿಯರ ಈ ತಾದಾತ್ಮ್ಯಕ್ಕೆ ಮಾಧ್ವ ಪ್ರಣಾಲಿಯಲ್ಲಿ ವಿಶೇಷ ಸ್ಥಾನವಿದೆ. ಉತ್ತರದಲ್ಲಿ ಶ್ರೀರಾಧಾ–ಕೃಷ್ಣ ಮಿಲನಕ್ಕೆ ಹೆಚ್ಚು ಪ್ರಾಶಸ್ತ್ಯವಿದ್ದರೆ, ಶ್ರೀಕೃಷ್ಣ-ರುಕ್ಮಿಣೀ ಪರಿಣಯವು ಕರ್ನಾಟಕದ ಮಾಧ್ವರ ಕೊಡುಗೆಯೆನಬಹುದು.* ಅಪರಾಳ ತಮ್ಮಣ್ಣನು ಈ ಕೃತಿಯಲ್ಲಿ ಅದನ್ನು ಮನಂಬುಗುವಂತೆ ಚಿತ್ರಿಸಿದ್ದಾನೆ.

ಅಪರಾಳ ತಮ್ಮಣ್ಣನು ತನ್ನ ಮಗನ ಸಹಾಯದಿಂದ ಇದನ್ನು ರಂಗದ ಮೇಲೆ ತಂದಾಗ ಬಲು ಬೇಗ ಇದರ ಪ್ರಸಿದ್ಧಿಯು ಹರಡಿತು. ಅನೇಕ ಧಾರ್ಮಿಕ ಉತ್ಸವಗಳಲ್ಲಿ

---

* ಶ್ರೀ ಮಧ್ವಾಚಾರ್ಯ ವಿರಚಿತ, ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಇದನ್ನು ವಿವರವಾಗಿ ಬಣ್ಣಿಸಲಾಗಿದೆ. ಶ್ರೀ ವಾದಿರಾಜರು 'ರುಕ್ಮಿಣೀಶ ವಿಜಯ'ವೆಂಬ ಚಂಪೂಕಾವ್ಯವನ್ನೆ ಬರೆದಿದ್ದಾರೆ. ಮಾಧ್ವರಿಗೆ ಪ್ರಿಯವಾದ ಭಾಗವತ ಪುರಾಣದಲ್ಲಿ ರಾಧಾ-ಕೃಷ್ಣಲೀಲೆಯ ಪ್ರಸಂಗವೇ ಇಲ್ಲ.

ಈ ಸಣ್ಣಾಟದ ಪ್ರಯೋಗವು ನಡೆಯತೊಡಗಿತು. ಊರೂರಿಗೆ ಪಾರಿಜಾತ ಮೇಳಗಳು ಹುಟ್ಟಿಕೊಂಡವಲ್ಲದೆ, ಮೇಳ ಮೇಳಗಳಲ್ಲಿ ಸ್ಪರ್ಧೆಗಳು ಏರ್ಪಡುತ್ತಿದ್ದುವಂತೆ. ಇದರಿಂದಾಗಿ ಕ್ರಮೇಣ ಶ್ರೀಕೃಷ್ಣಪಾರಿಜಾತದಲ್ಲಿ ಸ್ಥಾನಿಕ ಬದಲಾವಣೆಗಳಾದುವು. ಜಾನಪದ ಸಂಗೀತ ರೂಪಕಕ್ಕೆ ಲೋಕ ನಾಟಕದ ಸ್ವರೂಪ ಬರತೊಡಗಿತು. ಎಂದರೆ ಸಂಭಾಷಣೆಗೆ ಸಾಕಷ್ಟು ಇಂಬು ದೊರೆಯಿತು.

**ಕುಲಗೋಡ ತಮ್ಮ**ಣ್ಣನೆಂಬವನು ಮೂಲ ಕೃತಿಯ ಹೆಚ್ಚಿನ ಪ್ರಸಾರಕ್ಕೆ ಕಾರಣನಾದನು. ಅಲ್ಲದೆ ಕೃತಿಯ ಪ್ರಾರಂಭದಲ್ಲಿ ಗೋಪಾಲ-ಗೊಲ್ಲತಿಯರ ಸಂಭಾಷಣೆಯನ್ನೂ ಅಲ್ಲಲ್ಲಿ ಕೆಲವು ಹಾಡುಗಳನ್ನು ಸೇರಿಸಿ ಆಡತೊಡಗಿದನು. ಇವನ ಕಾಲದಿಂದೀಚೆಗೆ, ನಾಟಕದ ಗದ್ಯಭಾಗವು ಆಶುವಾಗಿರದೇ ನಿರ್ದಿಷ್ಟರೂಪವನ್ನು ತಾಳಿತು.

ಶ್ರೀಕೃಷ್ಣಪಾರಿಜಾತದ ರಂಗಪ್ರಯೋಗ ಪರಂಪರೆಯನ್ನು ಕೌಜಲಗಿ ನಿಂಗವ್ವ, ಬಲಕುಂದ್ರಿ ಬಸಪ್ಪ ಇವರು ಮುಂದುವರಿಸಿಕೊಂಡು ಬಂದರು. ಉತ್ತರ ಕರ್ನಾಟಕದಲ್ಲಿ ಅದು ಚಿರಸ್ಥಾಯಿಯಾಗಿಬಿಟ್ಟಿತು. ಇದು ಎಷ್ಟರ ಮಟ್ಟಿಗೆ ಎಂದರೆ, ಪಾರಿಜಾತ ಹರಣದ ಪ್ರಸಂಗವೇ ಇಲ್ಲದಿದ್ದರೂ, ವೆಂಕಟೇಶ ಪಾರಿಜಾತ, ಬಿಳಿಗಿರಿ ರಂಗನ ಪಾರಿಜಾತ, ಶಿವ ಪಾರಿಜಾತ, ವೀರಭದ್ರ ಪಾರಿಜಾತ ಮೊದಲಾದವುಗಳು ರಚಿತವಾದುವು. ಅರ್ಥಾತ್ ದೈವಿಕ ಪ್ರೇಮವು ಕಥಾವಸ್ತುವಾಗಿರುವಂಥ ಜಾನಪದ ಗೀತರೂಪಕಕ್ಕೆ 'ಪಾರಿಜಾತ ನಾಟಕ'ವೆಂಬ ಪರ್ಯಾಯ ನಾಮವು ರೂಢವಾಗಿಬಿಟ್ಟಿತು. ಮೂಲ ಕೃತಿಯ ಮೇಲಿನ ವಿಶೇಷ ಶ್ರದ್ಧೆಯಿಂದಾಗಿ, ಅದರ ಬಗ್ಗೆ ಪವಾಡಗಳು ಹುಟ್ಟಿಕೊಂಡವು. ಈ ಕೃತಿಯು ಪ್ರಥಮತಃ ೧೮೬೩ರಲ್ಲಿ (ಸವಣೂರು) ಮುದ್ರಣಗೊಂಡು ಉತ್ತರ ಕರ್ನಾಟಕದ ಆದ್ಯ ಮುದ್ರಿತ ಪುಸ್ತಕಗಳಲ್ಲಿ ಒಂದೆನಿಸಿತು. ಇವೆಲ್ಲ ಅಂಶಗಳು, ಜನತೆಯ ಮೇಲೆ ಶ್ರೀಕೃಷ್ಣಪಾರಿಜಾತವು ಬೀರಿದ ಗಾಢವಾದ ಪ್ರಭಾವದ ನಿದರ್ಶನಗಳಾಗಿವೆ.

ಇದು ಹಾಗಿರಲಿ, ಅಭಿಜಾತ ರಂಗಭೂಮಿಯ ಮೇಲೆಯೂ ಅದರ ಅಭಿಯೋಗವು ಅನನ್ಯವಾಗಿದೆ. ಶಾಂತಕವಿ, ಚುರಮುರಿ ಶೇಷಗಿರಿರಾಯ ಮುಂತಾದವರ ನಾಟಕಗಳಲ್ಲಿಯ ಅನೇಕ ಹಾಡುಗಳಿಗೆ ಇದರ ಪದ್ಯಗಳೇ ಮಾದರಿಯಾದವು. ಇಷ್ಟೇ ಅಲ್ಲ, ೧೯ನೇ ಶತಮಾನದ ಅನೇಕ ಮರಾಠೀ ನಾಟಕಗಳ ಮೇಲೂ ಗಣನೀಯ ಪ್ರಭಾವವನ್ನು ಬೀರಿದೆ. ಶಾಕುಂತಲದ ಮರಾಠೀ ಅನುವಾದಕಾರನಾದ ಕಿರ್ಲೋಸ್ಕರ ಅಣ್ಣಾರಾಯನು (ಕ್ರಿ.ಶ. ೧೮೭೯) ಶ್ರೀಕೃಷ್ಣಪಾರಿಜಾತದ ಪದ್ಯಗಳ ಧಾಟಿಗಳನ್ನು ನೇರವಾಗಿ ಎತ್ತಿಕೊಂಡವರಲ್ಲಿ ಒಬ್ಬನಾಗಿದ್ದಾನೆ.*

* ಉದಾಹರಣೆಯೆಂದು 'ಬೆಳಗಾಗ ಬಂತು ಬಿಡೆನು' ಎಂಬ ಶ್ರೀಕೃಷ್ಣಪಾರಿಜಾತದ ಸುಪ್ರಸಿದ್ಧ ಹಾಡಿನ ಧಾಟಿಯನ್ನು ಬಳಸಿಕೊಂಡದ್ದನ್ನು ಹೇಳಿದ್ದಾನೆ. ಈ ರೀತಿಯಲ್ಲಿ ಸು. ೧೪೦ ಮರಾಠೀ ಹಾಡುಗಳಿಗೆ ಕನ್ನಡ ಹಾಡುಗಳೇ 'ಚಾಲ್' ಒದಗಿಸಿವೆಯೆಂದು ಡಾ॥ ಪ್ರಹ್ಲಾದ ಮುದಗಲ್ಲ ಅವರು ತೋರಿಸಿಕೊಟ್ಟಿದ್ದಾರೆ.

**ಐಹೊಳೆಯ ಭೀಮರಾಯನ** ಬಗ್ಗೆ (೧೮೩೫-೧೯೧೫) ಕಲಮದಾನಿ ಗುರುರಾಯರು ಹೆಚ್ಚಿನ ಸಂಗತಿಗಳನ್ನು ಒದಗಿಸಿದ್ದಾರೆ.[೫] ಭೀಮರಾಯನು ಕಲಿತದ್ದು ಕಡಮೆಯಾದರೂ ಹಳಗನ್ನಡ ಕಾವ್ಯಗಳನ್ನು ಓದಿ ಅರ್ಥ ಹೇಳುವಷ್ಟು ವ್ಯಾಸಂಗವನ್ನು ಮಾಡಿದ್ದನು. ಬೆಳಗಾವಿಯ ಸರದಾರ್ ಹೈಸ್ಕೂಲಿನಲ್ಲಿ ಕನ್ನಡ ಶಿಕ್ಷಕನಿದ್ದುದು ಕೆಲವು ವರ್ಷ ಮಾತ್ರ. ಮುಂದೆ ಹರಿಭಕ್ತಿಯಿಂದ ಪ್ರೇರಿತನಾಗಿ ಭೀಮರಾಯನು 'ಐಹೊಳೆ ವೆಂಕಟೇಶ'ನೆಂಬ ಮುದ್ರಿಕೆಯಿಂದ ಅನೇಕ ಹಾಡುಗಳನ್ನು ರಚಿಸಿ ಕೀರ್ತನಕಾರನಾಗಿ ಬದುಕನ್ನು ಮುಂದುವರಿಸಿದನು. ಸೂತ್ರಧಾರನಾಗಿ ನಿಂತು, ಪಾರಿಜಾತ ಆಟಗಳನ್ನು ಆಡಿಸುತ್ತಿದ್ದನು. ಅವನೊಬ್ಬ ಪ್ರಾಸಾದಿಕ ಕವಿ. 'ಸುಭದ್ರಾಪರಿಣಯ', 'ಏಕಾದಶೀ ಮಾಹಾತ್ಮ್ಯ' ಎಂಬ ಕಾವ್ಯಗಳನ್ನು ರುಕ್ಮಿಣೀ ಸತ್ಯಭಾಮೆಯರ ಮುಯ್ಯದ ಹಾಡುಗಳನ್ನೂ, ರುಕ್ಮಾಂಗದ, ಅಂಬರೀಷ ಮುಂತಾದ ಹರಿಭಕ್ತರನ್ನು ಕುರಿತ ನಾಟಕಗಳನ್ನೂ ರಚಿಸಿದ್ದಾನೆ. ಮುದ್ರಣಗೊಂಡಿರುವ ಅವನ ಕೃತಿಗಳೆಂದರೆ 'ರಾಮ ಪಾರಿಜಾತ' ಮತ್ತು 'ಗೋಪ ನಾರಿಯರ ಕರುಣಾಲಾಪ' ಎಂಬವು ಮಾತ್ರ. 'ರಾಮ ಪಾರಿಜಾತ'ವು ರಾಮಾಯಣ ಬಾಲಕಾಂಡದ ಕಥೆಯನ್ನಷ್ಟೇ ಹೇಳುತ್ತದೆ. ಕೃಷ್ಣನು ಅಕ್ರೂರನ ಜೊತೆಗೆ ಹೊರಟಾಗ ಗೋಪಿಯರು ಮಾಡಿದ ಕರುಣಾಲಾಪವು ಅವನ ಇನ್ನೊಂದು ಕೃತಿಯ ವಸ್ತುವಾಗಿದೆ.

**ಗೋಕಾವಿ ಅನಂತಾಚಾರ್ಯರು** ಪಾರಿಜಾತ ಆಟಗಳ ಮೂಲಕ, ಸಂಗೀತದಲ್ಲಿ ವಿಶೇಷ ಅಭಿರುಚಿಯನ್ನು ಹೊಂದಿದ್ದರು. ಜೊತೆಗೆ ಸಂಸ್ಕೃತವನ್ನು ಬಲ್ಲವರು. ಅನಂತಾದ್ರೀಶವೆಂಬ ಮುದ್ರಿಕೆಯಿಂದ 'ವೆಂಕಟೇಶ ಮಹಾತ್ಮೆ' (೧೮೮೬), ಧ್ರುವ ಹಾಗೂ ಪ್ರಹ್ಲಾದರ ಚರಿತ್ರೆಗಳು, 'ಶಿವಪಾರಿಜಾತ' ಇವುಗಳನ್ನು ರಚಿಸಿದ್ದಾರೆ. ಕೊನೆಯದು ಪಾರ್ವತೀ ಪರಿಣಯ ಪ್ರಸಂಗ. 'ಪಾರಿಜಾತ' ಗೀತನಾಟಕ ಪ್ರಕಾರವು ಪ್ರಣಯ, ಪರಿಣಯಗಳ ಕಥಾನಕಗಳಿಗೆ ವಾಹಕವಾಗಿದ್ದುದರ ಲಕ್ಷಣವದು. ಈ ಕೃತಿಯಲ್ಲಿ ಬರುವ ಪರ್ವತರಾಜನು ಹರಿಭಕ್ತನು. ಶ್ರೀಹರಿಗೇ ತನ್ನ ಮಗಳನ್ನು ಕೊಡಬೇಕೆಂದು ಯೋಚಿಸಿದ್ದಾಗ, ಪಾರ್ವತಿಯು ಸಾಂಬಶಿವನನ್ನು ವರಿಸುತ್ತಾಳೆ.

ಸಂಸ್ಕೃತ ಪಂಡಿತರಾಗಿದ್ದ **ಪಾಂಡುರಂಗಿ ಹುಚ್ಚಾಚಾರ್ಯರು** ಮೂಲತಃ ರಾಣೆಬೆನ್ನೂರಿನವರು. ಅವರ ಸಾಧನ ಮಾರ್ಗವು ಅವರನ್ನು ಮುಗುಟಖಾನ-ಹುಬ್ಬಳ್ಳಿ, ಕೊಲ್ಹಾಪುರ, ತಿರುಪತಿಗಳಿಗೆ ಕೊಂಡೊಯ್ಯಿತು. ಅಲ್ಲಿಯ ದೇವತೆಗಳ ಸಾಕ್ಷಾತ್ಕಾರ ಹೊಂದಲು ತಪಸ್ಸುಗೈದರು. ಶ್ರೀನರಸಿಂಹ, ವೆಂಕಟೇಶ ದೇವರುಗಳ ಪರಮ ಭಕ್ತರಾಗಿದ್ದುದರ ಜೊತೆಗೆ ಮಹಾಲಕ್ಷ್ಮಿಯ ಉಪಾಸನಾ ರಹಸ್ಯವನ್ನೂ ಅರಿತಿದ್ದರೆಂದು ಹೇಳಲಾಗುತ್ತಿದೆ. ಆ ಕಾರಣ ಅವರ 'ಲಕ್ಷ್ಮೀಲೀಲಾಮೃತ' ವು ಹೆಣ್ಣುಮಕ್ಕಳಲ್ಲಿ, ಶುಕ್ರವಾರದ ಹಾಡು ಎಂಬುದಾಗಿ ವಿಶೇಷ ಪ್ರಸಾರದಲ್ಲಿದೆ. ಆಕೆಯ ವಿವಿಧ ರೂಪಗಳನ್ನು ಶಾಸ್ತ್ರ

ಪುರಾಣಾನುಸಾರ ವರ್ಣಿಸಲಾಗಿದೆ. ಆದರೆ ವ್ಯಾಜರೂಪದಲ್ಲಿ ಶ್ರೀಹರಿಯ ಸ್ತುತಿಯೇ ಹೆಚ್ಚಾಗಿ ಬಂದಿದೆ ;

ಹರಿಯ ಎಡಕೆ ಬಲಕಿರುವಿ ನಿನ್ನೊಳು ಸ್ನೇಹ
ಬೆರಿಸುವನತಿಶಯ ಪರಮ ಪುರುಷ ಕೃಷ್ಣ
ವರುಣತನಯೆ, ಹರಿ ಬರುವಂತೆ ಮಾಡೆನ್ನ
ಗುರುಳುಮುಖ ಚಿತ್ತ ಸರಸಿಜದಿ ॥
ತೊಟ್ಟಿಲಿಂದಲಿ ಎದ್ದು, ಬಿಟ್ಟು ಕರವ, ಭೂಮಿ
ಲಿಟ್ಟು ತಪ್ಪಹೆಜ್ಜೆಯ ಮುಟ್ಟಿ ಭಿತ್ತಿಲೆ ಬಂದು
ಬಟ್ಟಲೊಳಗೆ ಬೆಣ್ಣೆ ಇಟ್ಟು ಕೊಡೆಂಬುವ
ಪುಟ್ಟ ಕೃಷ್ಣನ ಭೆಟ್ಟಿ ನೀಡೆ ॥

– ಎಂಬಲ್ಲಿ ಪುಟ್ಟ ಕೃಷ್ಣನ ಚಿತ್ರ ಕಣ್ಣಿಗೆ ಕಟ್ಟುವಂತಿದೆ. ಕೆಲವೇ ಶಬ್ದಗಳಲ್ಲಿ ಸೊಗಸಾದ ಚಿತ್ರಣವನ್ನು ರೂಪಿಸುವಲ್ಲಿ ಹುಚ್ಚಾಚಾರ್ಯರು ಪರಿಣತರು. ರುಕ್ಮಿಣೀಹರಣವನ್ನು ಕುರಿತ ಈ ಪದ್ಯಗಳನ್ನು ನೋಡುವುದು :

ಪತ್ರವ ಬರೆದಿಲ್ಲ, ಮಿತ್ರತ್ವ ಮೊದಲಿಲ್ಲ
ಹತ್ತಿರದ ಅಣ್ಣಗೆ ಎತ್ತೊ ವಾರ್ತೆಗಳಿಲ್ಲ
ಹಸ್ತದಕ್ಷರ ನೋಡಿ ಚಿತ್ತ ಭ್ರಮಿಸಿ ಕರ
ವೆತ್ತಿ ರಥದಿ ನಿನ್ನ ಹತ್ತಿಸಿದ.

**೭.೪.೧ ಕವಯಿತ್ರಿಯರು**

ವಚನಕಾರ್ತಿಯರ ಕಾಲ ಮುಗಿದ ಮೇಲೆ ಚಿಕ್ಕದೇವರಾಜನ ಆಸ್ಥಾನದಲ್ಲಿ ಹೊನ್ನಮ್ಮ, ಶೃಂಗಾರಮ್ಮ ಕಾಣಿಸಿಕೊಂಡರಷ್ಟೆ. ಸ್ತ್ರೀಯರು ದೇವರ ಹಾಡುಗಳನ್ನು ರಚಿಸಿದ ಸ್ಪಷ್ಟ ಪರಂಪರೆಯು ಹದಿನೆಂಟನೆಯ ಶತಮಾನದಿಂದ ಗೋಚರವಾಯಿತೆನ್ನ ಬಹುದು. ಪುರಂದರದಾಸರ ಮಗಳು, ಮತ್ತೆ ಒಬ್ಬಿಬ್ಬರು ಆಗಿ ಹೋದರೇನೋ ನಿಜ. ಆದರೆ ಆ ಪರಂಪರೆಗೆ ಮೂರ್ತ ಸ್ವರೂಪವನ್ನು ಕೊಟ್ಟವರು ಗಲಗಲಿ ಅವ್ವನವರು (೧೭ನೆಯ ಶತ) ಮತ್ತು ಹೆಳವನಕಟ್ಟೆ ಗಿರಿಯಮ್ಮ (೧೮ನೆಯ ಶತ) ಮುಂದೆ ೧೯ನೆಯ ಶತಮಾನದಲ್ಲಿ ಮಹಿಳಾ ಪದ್ಯ ರಚನೆಯ ವಿಸ್ತಾರವನ್ನು ಕಾಣುತ್ತೇವೆ. ಕವಿಚರಿತಕಾರರು ಅಂಥವರನ್ನು ಉಲ್ಲೇಖಿಸಿದ್ದಾರೆ. ಸರೋಜಿನಿ ಮಹಿಷಿಯವರು ಇನ್ನು ಕೆಲವು ಕವಯಿತ್ರಿಯರನ್ನು ವಿಶೇಷತಃ ಉತ್ತರ ಕನ್ನಡ ಜಿಲ್ಲೆಯವರನ್ನು ಬೆಳಕಿಗೆ ತಂದಿದ್ದಾರೆ.

ಹಾಡಿನ ರಂಗಮ್ಮ, ಮೇಲುಕೋಟೆ ರಾಜಮ್ಮ ಮತ್ತು ಎಣ್ಣೆಹೊಳಕೊಪ್ಪಲಿನ

ವೆಂಕಟಲಕ್ಷ್ಮಮ್ಮ ಇವರು ಮೈಸೂರಿನ ಒಳಭಾಗದಲ್ಲಿದ್ದವರು. ಅನಂತಪದ್ಮನಾಭನ ಹಾಗೂ ಶ್ರೀಕೃಷ್ಣಪಾರಿಜಾತದ ಕಥೆಗಳನ್ನೂ ಅನೇಕ ದೇವರ ನಾಮಗಳನ್ನೂ ಅವರು ರಚಿಸಿದ್ದಾರೆ. ಉಡುಪಿಯ ಕಡೆಯವಳಾದ ವೆಂಕಟಸುಬ್ಬಮ್ಮ ಮತ್ತು ಹಲವರು ಅದೇ ರೀತಿಯಲ್ಲಿ ಹಾಡುಗಳನ್ನು ಹೇಳಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯು ನೀಡಿದ ಕವಯಿತ್ರಿಯರಲ್ಲಿ '**ಸಣ್ಣಭಡತಿ ಗಣಪಕ್ಕ**'ನನ್ನು ಮೊದಲಿಗೆ ಹೆಸರಿಸಬೇಕು.[೬] ಭಜನಾದಿ ಕಾರ್ಯಗಳಲ್ಲಿ ತೊಡಗಿದ್ದ ಬಡ ತಂದೆಯ ಮನೆಯಲ್ಲಿ ಗಣಪಕ್ಕ ಬೆಳೆದಳು. ಗೋಕರ್ಣದಲ್ಲಿದ್ದ ಗಂಡನ ಮನೆಯೂ ಬಡತನದ್ದೇ. ಜೊತೆಗೆ ಒಂಭತ್ತು ಮಕ್ಕಳ ಸಂಸಾರವನ್ನು ತೂಗಿಸಿಕೊಂಡು ಆಕೆ ಪದ್ಯ ರಚನೆಗೆ ಮನಸ್ಸುಗೊಟ್ಟುದು ಅಚ್ಚರಿಯುಂಟುಮಾಡುತ್ತದೆ. ಅವಳ ಕೃತಿಗಳಲ್ಲಿ ಮುಖ್ಯವಾದ 'ಗೋಕರ್ಣ ಮಾಹಾತ್ಮ್ಯೆ'ಯು ವಿವಿಧ ವೃತ್ತದ, ಹಾಡುಗಳ ಗುಚ್ಛವಾಗಿದೆ. ಇತ್ತ ತನ್ನ ಇಷ್ಟದೈವವಾದ ಶ್ರೀಕೃಷ್ಣನನ್ನು ಕುರಿತ ಹಲವು ಪದಗಳನ್ನೂ ಒಂದು ಯಕ್ಷಗಾನ ಕೃತಿಯನ್ನೂ ರುಕ್ಮಿಣೀ ಪರಿಣಯವನ್ನೂ ಆಕೆ ರಚಿಸಿದ್ದಾಳೆ. ಇವನ್ನುಳಿದು ಅನಂತನ ವ್ರತಕಥೆ, ಮದುವೆಯ ಕಾಲದ ಪದಗಳು, ತುಳಸಿ ಮಾಹಾತ್ಮ್ಯೆ ಇವನ್ನೂ ಕವನಿಸಿದ್ದಾಳೆ.

ಬಾಲವಿಧವೆಯಾಗಿದ್ದ **ಪನ್ನಿ ಲಕ್ಷ್ಮೀಬಾಯಿಯೂ** ಗೋಕರ್ಣದವಳೇ. ಅವಳದೂ ಬಡತನದ ಮನೆತನ. ಪಾರಮಾರ್ಥದ ಕಡೆಗೆ ಮನ ಒಲಿಯಿತಾದ್ದರಿಂದ, ಭಾವಪೂರ್ಣವಾದ ಹಾಡುಗಳನ್ನು ರಚಿಸಿದಳು. ಇವರಿಬ್ಬರ ಹಾಡುಗಳು ಗೋಕರ್ಣ ಮತ್ತು ಸುತ್ತಮುತ್ತಲಿನ ಊರುಗಳಲ್ಲಿ ಪ್ರಚಲಿತವಾಗಿವೆ.

ಭಟಕಳ ಊರಿನ **ನಾಡಘರ ಶಾಂತಿಬಾಯಿಯು** ಯೌವನ ಕಾಲದಲ್ಲಿಯೇ ಪತಿ, ಮಗ, ಅಳಿಯ ಇವರನ್ನು ಕಳೆದುಕೊಂಡಳು. ಆಗ ಜೀವನವೇ ನಿಸ್ಸಾರವಾಗಿ ಕಂಡಿತು. ಪುಟ್ಟಯ್ಯನೆಂಬ ಸಾಧುವಿನ ಮೂಲಕ ಪರಮಾರ್ಥ ಸಾಧನೆಯಿಂದ 'ಜೀವನ್ಮುಕ್ತೆ'ಯಾದಳು. ತನ್ನ ಬದುಕಿನ ಕೊನೆಗಾಲದಲ್ಲಿ ದತ್ತಾತ್ರೇಯನ ಗುಡಿಯನ್ನು ಕಟ್ಟಿಸಿದಳು. ಕನ್ನಡ, ಮರಾಠೀ–ಇವೆರಡೂ ಭಾಷೆಗಳಲ್ಲಿ ಅವಳ ಭಕ್ತಿಪರ ಕೀರ್ತನೆಗಳಿವೆ.[೭] 'ಶಾಂತಿಪಾಲಿಪಗುರು' ಎಂಬುದು ಅವಳ ಅಂಕಿತ. ಪಾಂಡುರಂಗ–ವಿಠ್ಠಲನು ಅವಳಿಗೆ ಇಷ್ಟದೈವತವಾಗಿದ್ದುದು ಹಲವು ಪದ್ಯಗಳಲ್ಲಿ ವ್ಯಕ್ತರೂಪವನ್ನು ತಾಳಿದೆ. ಶಾಂತಿಬಾಯಿಯ ಮರಣಾನಂತರ ಅವಳ ಮಗಳು ಈ ಹಾಡುಗಳನ್ನು ಪ್ರಕಟಿಸಿದ್ದಾಳೆ.

ಉತ್ತರ ಕನ್ನಡ ಜಿಲ್ಲೆಯ ಇನ್ನೊಬ್ಬ ಕವಯಿತ್ರಿ **ಕಿಬ್ಬಚಲ ಮಂಜಮ್ಮನು** ಹವ್ಯಕ ಸಮಾಜದವಳು. ವೇದಾಂತಿನಿಯಾಗಿ ಆಕೆ ರಚಿಸಿದ ಪದಗಳನ್ನು ಒಂದೆಡೆ ಸಂಕಲಿಸಿ, ಕರ್ಕಿ ವೆಂಕಟರಮಣಶಾಸ್ತ್ರಿಗಳು ಮುಂಬಯಿಯಲ್ಲಿ ಪ್ರಕಟಿಸಿದರು (೧೮೮೬ : 'ವೇದಾಂತ ತತ್ವಸಾರ'). ೧೯ನೆಯ ಶತಮಾನದಲ್ಲಿ ಮೊತ್ತಮೊದಲು ಮುದ್ರಣಗೊಂಡ ಮಹಿಳಾ ಸಾಹಿತ್ಯವಿದು. ಧಾರವಾಡ ಜಿಲ್ಲೆಯ ಹೆಬ್ಬಳ್ಳಿ ಊರಿನ ಸುಂದರಾಬಾಯಿ ಹೊರಗಿನವರ

ದೃಷ್ಟಿಗೆ ಭಾಗ್ಯವಂತೆ; ತೌರುಮನೆ, ಗಂಡನ ಮನೆ ಎರಡೂ ಜಹಗೀರುದಾರ ಮನೆತನಗಳು. ಮಾವ ಉತ್ತರಾದಿಮಠದ ಶ್ರೀ ಸತ್ಯಪರಾಕ್ರಮರು. ಆದರೆ ಸುಂದರಾಬಾಯಿ ಬಾಲವಿಧವೆ. ಮನಸ್ಸು ಭಾಗವತ ಧರ್ಮದತ್ತ ಒಲಿಯಿತು. 'ಶ್ರೀವೆಂಕಟೇಶ' ಎಂಬ ಅಂಕಿತದಿಂದ 'ಶ್ರೀಕೃಷ್ಣಜನನ', 'ರುಕ್ಮಿಣೀ ಪರಿಣಯ', 'ರುಕ್ಮಾಂಗದ ಚರಿತ್ರೆ' ಹಾಗೂ 'ಸುಭದ್ರಾ ಕಲ್ಯಾಣ' ಮುಂತಾದ ಕೃತಿಗಳನ್ನು ರೂಪಿಸಿದಳು. ಅಲ್ಲದೆ ಶುಕ್ರವಾರ, ಶನಿವಾರದ ಹಾಡುಗಳನ್ನೂ, ಮುಯ್ಯದ ಹಾಡುಗಳನ್ನೂ ಆಕೆ ರಚಿಸಿದ್ದು, ಅವನ್ನು ಧಾರವಾಡದ ಕಡೆಯ ಹೆಂಗಳೆಯರು ಇಂದಿಗೂ ಹಾಡುವದುಂಟು.

ಮೈಸೂರಿನ ಮಹಾರಾಣಿ ಬಾಲಿಕಾ ಪಾಠಶಾಲೆಯಲ್ಲಿ ಅಧ್ಯಾಪಕಿಯಾಗಿದ್ದ **ಚೆರುಕುಪಲ್ಲಿ ಚೆಲ್ಲಮ್ಮ**ನ ಕಾವ್ಯದೃಷ್ಟಿಯು ಪರಂಪರೆಯ ನಡೆಯಲ್ಲಿಯೆ ಇದ್ದಿತು. 'ರಾಜಕಳಾನಿಧಿ' ಎಂಬ ಉಪದೇಶದ ಕೃತಿ (೧೮೮೫) (ಈ ಕೃತಿಯು ೧೯೪೮ರಲ್ಲಿ ದ್ವಿತೀಯ ಮುದ್ರಣವನ್ನು ಕಂಡಿದೆ. ಇದನ್ನು ಪರಿಷ್ಕರಿಸಿದವರು ಆಗ ಸರ್ಕಾರದ ಭಾಷಾಂತರಕಾರರಾಗಿದ್ದ ಆರ್. ನರಸಿಂಹಾಚಾರ್ಯರು) ಯೊಂದನ್ನು ಬಿಟ್ಟರೆ ಉಳಿದವುಗಳು ಕೃಷ್ಣ ಮಹಿಮೆಯನ್ನು ಹೇಳುವಂತಹವೇ ಆಗಿವೆ. ಅವಳ 'ರುಕ್ಮಿಣೀ ಪರಿಣಯ'ವು ವಿಸ್ತಾರವಾದ ಷಟ್ಪದೀ ಕಾವ್ಯವಾದರೆ 'ಪಾರಿಜಾತಾಪಹರಣ'ವು ಪದ್ಯ ನಾಟಕ ರೂಪದಲ್ಲಿದೆ. 'ಗೀತಿಕಾ ಲಹರಿ'ಯು ವಿವಿಧ ಹಾಡುಗಳ ಸಂಕಲನವಾಗಿದೆ.

ದೇವರ ವಿಷಯದಲ್ಲಿ ಭಕ್ತಿ, ಶ್ರದ್ಧೆಗಳಿರುವುದು ಸ್ತ್ರೀಯರ ಸಹಜ ಮನೋಧರ್ಮವಾಗಿದೆ. ಹಾಡುಗಾರಿಕೆಯೂ ಅಷ್ಟೇ. ಅವರ ಕೋಮಲ ಭಾವನೆಗಳೊಂದಿಗೆ ಸಂಸಾರ ತಾಪತ್ರಯವು ತಾಕಲಾಡಿತೆಂದರೆ ಅವರಲ್ಲಿ ದೈವಭಕ್ತಿಯು ಬೇಗ ಜಾಗೃತವಾಗುತ್ತದೆ. ವೈಧವ್ಯದಂಥ ಕುತ್ತು ಬಂದರಂತೂ ಸಂಸ್ಕಾರವಂತ ಮಹಿಳೆಯರು ಸಂಪೂರ್ಣವಾಗಿ ದೇವರನ್ನೆ ಮೊರೆಹೋಗುತ್ತಾರೆ. ಹಾಗೆ ಉಕ್ಕಿ ಬಂದ ಭಾವನೆಗಳಿಗೆ ಪದ್ಯ ರಚನೆಯೇ ವಾಹಕವಾಗುತ್ತದೆ.

ಇದುವೆ ಕನ್ನಡ ಕವಯಿತ್ರಿಯರ ಕವನ ರಚನೆಯ ಪ್ರೇರಣೆ. ಅವರು ಶಾಸ್ತ್ರ ವ್ಯಾಸಂಗ ಮಾಡಿದವರಲ್ಲ. ಪೂರ್ವ ಸಂಪ್ರದಾಯ, ಆಸ್ತಿಕ ವಾತಾವರಣ, ಕೀರ್ತನ ಪುರಾಣಗಳ ಶ್ರವಣ, ಮನೆಯಲ್ಲಿ ಗಂಡಸರ ಶಾಸ್ತ್ರಾರ್ಥ ವಿಚಾರ-ಇವೇ ಅವರ 'ಕಾವ್ಯವಿದ್ಯಾಪ್ರಚಯ ಪರಿಚಯ'ಗಳು. ನಿರೂಪಣೆಯ ಸರಳತೆ, ಗೇಯತೆ ಅವರ ಕವಿತೆಗಳ ಪ್ರಧಾನ ಲಕ್ಷಣವಾಗಿವೆ. ನೇರವಾಗಿ ಮನವನ್ನು ಸೆರೆಹಿಡಿಯುವ ಈ ಕವಿತ್ವವು ನಾಡಿನ ಜನಮನದಲ್ಲಿ ಹೂವಿನ ಪರಿಮಳದಂತೆ ಹರಡುತ್ತ ನಡೆಯಿತು. ವಿಶೇಷತಃ ನಾಡ ಮಹಿಳೆಯರ ಬದುಕನ್ನು ಹಸನಗೊಳಿಸಿತು. ಇಂಥ ಕವಯಿತ್ರಿಯರು ಅಜ್ಞಾತರಾಗಿ ಅದೆಷ್ಟು ಜನರಿದ್ದಾರೊ !

## ೭೫ ಹರಿದಾಸರು

### ೭೫೧ ಹಿನ್ನೆಲೆ ಮತ್ತು ಪರಂಪರೆ

ಹದಿನಾರನೆಯ ಶತಮಾನದಲ್ಲಿ ಶ್ರೀ ವ್ಯಾಸರಾಯ, ಶ್ರೀ ಪುರಂದರದಾಸ ಮೊದಲಾದವರಿಂದ ವೈಭವದ ತುತ್ತ ತುದಿಯನ್ನು ಮುಟ್ಟಿದ್ದ ದಾಸವಾಹಿನಿಯು ಹದಿನೇಳನೆಯ ಶತಮಾನದಲ್ಲಿ ಹರಿಗಡಿಯಿತು. ಶ್ರೀ ಮಹಿಪತಿದಾಸ ಮತ್ತು ಶ್ರೀ ಪ್ರಸನ್ನವೆಂಕಟದಾಸರನ್ನು ಬಿಟ್ಟರೆ ಮೇಲ್ಮಟ್ಟದ ದಾಸರು ಆಗ ಕಂಡುಬಂದುದಿಲ್ಲ. ಹದಿನೆಂಟನೆಯ ಶತಮಾನದಲ್ಲಿ ಮಾತ್ರ ಮುನ್ನಿನ ದಾಸ ವೈಭವವು ಮರುಕಳಿಸಿತು. ಈ ಪುನರುತ್ಥಾನದ ಆದ್ಯ ಪ್ರವರ್ತಕರೆಂದರೆ **ವಿಜಯದಾಸರು**.

ಲೌಕಿಕ ಅರ್ಥದಲ್ಲಿ ಯಾವುದೇ ವಿದ್ಯಾರ್ಜನೆಯನ್ನು ಹೊಂದಿರದಿದ್ದಾಗ, ಅವರ ಹಾಡುಗಳಲ್ಲಿ ಭಕ್ತಿಭಾವದ ಜೊತೆಗೆ ವೇದಾಂತ ಜ್ಞಾನದ ಪ್ರೌಢಿಮೆಯು ವ್ಯಕ್ತವಾದುದಕ್ಕೆ ದೈವೀಕೃಪೆ ಹಾಗೂ ಪೂರ್ವಜನ್ಮದ ಸಂಸ್ಕಾರವೇ ಕಾರಣವೆನ್ನಬೇಕಾಗುವುದು. ಅಗಣಿತವಾದ ಕೀರ್ತನೆ, ಸುಳಾದಿಗಳನ್ನು ರಚಿಸಿದ ಹಾಗೂ ಅನೇಕ ಜನ ಶಿಷ್ಯರನ್ನು ಪಡೆದಿದ್ದ ವಿಜಯದಾಸರು ಹಲವಾರು ದೃಷ್ಟಿಯಿಂದ ದ್ವಿತೀಯ ಪುರಂದರದಾಸರೇ ಆಗಿದ್ದಾರೆ. ಅವರ ಜೀವಿತಕಾಲದಲ್ಲಿಯೆ ದಾಸಕೂಟವು ಭರದಿಂದ ಮುನ್ನಡೆಯಿತು.

ವಿಜಯದಾಸರಂತೆಯೇ ಮಹಿಮಾ ವಿಶೇಷದಿಂದ ಕೂಡಿದ ಗೋಪಾಲದಾಸ, ವೇಣುಗೋಪಾಲದಾಸ, ಪಂಗನಾಮ ತಿಮ್ಮಣ್ಣ ಮತ್ತು ಮೋಹನದಾಸ-ಇವರೂ, ಗೋಪಾಲದಾಸರ ಶಿಷ್ಯರಾದ ವ್ಯಾಸತತ್ವಜ್ಞರೂ ಮತ್ತು ಜಗನ್ನಾಥದಾಸರೂ ಅದೇ ಶತಮಾನದಲ್ಲಿ ಜನ್ಮವೆತ್ತಿದರು. ಇವರಲ್ಲಿ ತಿಮ್ಮಣ್ಣನವರನ್ನು ಬಿಟ್ಟರೆ ಉಳಿದವರು ಬಡತನ, ರೋಗಬಾಧೆ ಮುಂತಾದ ಕಷ್ಟ ಪರಂಪರೆಯಲ್ಲಿ ಒದ್ದಾಡಿದವರೇ. ಆದರೂ ವಿಜಯದಾಸರ ಸಂಪರ್ಕದಿಂದಾಗಿ ಅವರಲ್ಲಿ ಸುಪ್ತವಾಗಿದ್ದ ಹರಿಭಕ್ತಿ ಚೇತನವು ಅದ್ಭುತ ರೀತಿಯಲ್ಲಿ ಪಲ್ಲವಿಸಿತು.

ಆದವಾನಿ ಸಂಸ್ಥಾನದಲ್ಲಿ ದಿವಾನರಾಗಿದ್ದ ತಿಮ್ಮಣ್ಣ ಅನೇಕ ದಾಸರಿಗೆ ಆಶ್ರಯವಿತ್ತವರು. ವಿಜಯದಾಸರು ಅವರಿಗೆ ದೀಕ್ಷೆ ಇತ್ತರಾದರೂ ಐಹಿಕ ಪ್ರಪಂಚದಿಂದ ನಿವೃತ್ತರಾಗಗೊಡಲಿಲ್ಲ. ಆಗ ತಿಮ್ಮಣ್ಣನವರು ಎರಡೂ ರಂಗಗಳಲ್ಲಿ ತಮ್ಮ ಬದುಕನ್ನು ಸಾಗಿಸಿದುದು ಅರ್ಥಪೂರ್ಣವಾಗಿದೆ. ದಾಸರೆಂದರೆ ರೂಕ್ಷ ಸನ್ಯಾಸಿಗಳಲ್ಲವೆನ್ನುವುದಕ್ಕೆ ಇದೊಂದು ನಿದರ್ಶನ.

ಜಗನ್ನಾಥದಾಸರ ಜೀವನವಾದರೂ ಇದೇ ಮಾತನು ದೃಢೀಕರಿಸುತ್ತದೆ. ಅವರ ತಂದೆ ದಾಸ ದೀಕ್ಷೆಯನ್ನು ವಹಿಸಿದವರೇ. ಆದರೂ ಮಗ ಶ್ರೀನಿವಾಸಾಚಾರ್ಯನು

ತನ್ನ ಪಾಂಡಿತ್ಯದ ಬಿಗುಮಾನದಲ್ಲಿಯೇ ಇದ್ದನು. ಸಾಲದ್ದಕ್ಕೆ ದಾಸರನ್ನು, ವಿಶೇಷತಃ ವಿಜಯದಾಸರನ್ನು ಹಳಿಯುತ್ತಿದ್ದನು. ಸಾಮಾನ್ಯ ಜನತೆಗೆ ಪಂಡಿತರು, ಆಚಾರ್ಯರು– ಇವರ ವಿಷಯದಲ್ಲಿ ಗೌರವವಿದ್ದರೂ ದಾಸವರ್ಗದವರ ಮೇಲೆಯೇ ಹೆಚ್ಚಿನ ಭಕ್ತಿ, ಪ್ರೀತಿಗಳಿರುತ್ತಿದ್ದವು. ಇದು ಶ್ರೀನಿವಾಸಾಚಾರ್ಯನ ಮನವನ್ನು ಇನ್ನಷ್ಟು ಕೆರಳಿಸಿತು. ದಾಸನಿಂದೆಯ ಪರಿಣಾಮವೆಂಬಂತೆ ವಿಪರೀತ ಬೇನೆಗೆ ಬಲಿಯಾದನು. ಔಷಧೋಪಚಾರ ನಡೆಯಿತು. ತಿರುಪತಿ, ಮಂತ್ರಾಲಯಗಳಲ್ಲಿ ಉಗ್ರ ಸೇವೆಯನ್ನೂ ಕೈಕೊಂಡದ್ದಾಯಿತು. ಕೊನೆಗೆ ಅವನು ತನ್ನ ಅಹಂಕಾರವನ್ನು ಸಂಪೂರ್ಣ ತ್ಯಜಿಸಿ ಗೋಪಾಲದಾಸರಿಗೆ ಶರಣು ಬಂದನು. ಅವರು ರೋಗ ಪರಿಹಾರ ಮಾಡಿದರಲ್ಲದೆ ತಮ್ಮ ಆಯುರ್ಮಾನದ ನಾಲ್ಕು ದಶಕಗಳನ್ನು ಧಾರೆಯೆರೆದರೆಂದು ಪ್ರತೀತಿ ಇದೆ. ಆಗ ಪಂಢರಪುರದ ಪಾಂಡುರಂಗನ ಸನ್ನಿಧಿಯಲ್ಲಿ 'ಜಗನ್ನಾಥವಿಠಲ' ಎಂಬ ಅಂಕಿತ ದೊರೆತು ಜಗನ್ನಾಥದಾಸರಾದರು. ಮುಂದೆ 'ರಂಗನೊಲಿದ ದಾಸ'ರೆಂಬ ಅನ್ವರ್ಥಕ ಅಭಿದಾನ ಅವರದಾಯಿತು.

ಕನ್ನಡ ಸಾರಸ್ವತ ಪ್ರಪಂಚದಲ್ಲಿ ಜಗನ್ನಾಥದಾಸರ ಹೆಸರು ಶಾಶ್ವತವಾಗಿ ನಿಲ್ಲುವುದಕ್ಕೆ ಅವರ **ಹರಿಕಥಾಮೃತಸಾರವು** ಮುಖ್ಯ ಕಾರಣವಾಗಿದೆ. ಭಕ್ತಿಮಾರ್ಗದಲ್ಲಿ ತುಂಬು ಜೀವನವನ್ನು ನಡೆಯಿಸಿ, ಪ್ರತಿಭೆಯು ಪರಿಪಕ್ವ ಸ್ಥಿತಿಯಲ್ಲಿದ್ದಾಗ ರಚಿಸಿದ ಕಾವ್ಯವಿದು. ವಿಷಯ, ಶ್ರೀಹರಿಯ ಪಾರಮ್ಯದ ಕಥನವಾದರೂ ವೈದಿಕ ದರ್ಶನದ ಅನೇಕ ಪ್ರಮೇಯಗಳನ್ನು ಮಧ್ವಮತದ ದೃಷ್ಟಿಕೋಣದಿಂದ ಇಲ್ಲಿ ವಿವರಿಸಲಾಗಿದೆ. ಹರಿಯ ಸರ್ವೋತ್ತಮತ್ವ, ಜೀವರಾಶಿಗಳ ಮೇಲೆ ಅವನ ಕರುಣೆಯ ಮಹತ್ವ, ಅದಕ್ಕಾಗಿ ಜೀವಿಗಳಲ್ಲಿರಬೇಕಾದ ಸರ್ವಸಮರ್ಪಣಭಾವ, ಜೀವಿಗಳ ದತ್ತ ಸ್ವಾತಂತ್ರ್ಯ ಮತ್ತು ತಾರತಮ್ಯವಿಚಾರ ಮುಂತಾದವು ಈ ಕಾವ್ಯದಲ್ಲಿ ಮೈದಾಳಿವೆ. ಭಾಗವತಾದಿ ಪುರಾಣಗಳು, ಪಂಚರಾತ್ರಾದಿ ಆಗಮಗಳು, ಉಪನಿಷತ್ತುಗಳು, ಶ್ರೀ ವ್ಯಾಸರಾಯ, ಶ್ರೀ ವಾದಿರಾಜ ಮುಂತಾದ ಪೀಠಾಧಿಪತಿಗಳ ವ್ಯಾಖ್ಯಾನ–ವಿವೃತಿಗಳು ಇವೆಲ್ಲವುಗಳಿಂದ ಸಾಮಗ್ರಿಯನ್ನು ಸ್ವೀಕರಿಸಿದ್ದರೂ ಜಗನ್ನಾಥದಾಸರು ಸಂಪೂರ್ಣವಾಗಿ ತಮ್ಮದೇ ಆದ ರೀತಿಯಲ್ಲಿ ವಿಷಯವನ್ನು ಮಂಡಿಸಿದ್ದಾರೆ. ಇಲ್ಲಿಯ ವಿಷಯದ ಆಯ್ಕೆ ಮತ್ತು ವಿಭಜನಾ ಕ್ರಮವು ಅತ್ಯಂತ ನವೀನವಾದುದು. ಇಷ್ಟೇ ಆಗಿದ್ದರೆ ಇದೊಂದು ಉತ್ಕೃಷ್ಟ ಧಾರ್ಮಿಕ ಕೃತಿಯಾಗಿ ಉಳಿಯಬಹುದಿತ್ತು. ಆದರೆ ಜಗನ್ನಾಥದಾಸರು ಅನೇಕ ದೃಷ್ಟಾಂತಗಳನ್ನು ಕೊಟ್ಟು ಪದಲಾಲಿತ್ಯವುಳ್ಳ ತಿಳಿಯಾದ ಶೈಲಿಯಲ್ಲಿ ವಿಷಯವನ್ನು ಮಂಡಿಸಿ ಕಾವ್ಯಧರ್ಮವನ್ನೂ ಉಳಿಸಿಕೊಂಡಿದ್ದಾರೆ. ಮುಂದಿನ ಹರಿದಾಸರ ಮೇಲೆ ಈ ಮೇರು ಕೃತಿ ತನ್ನ ಪ್ರಭಾವವನ್ನು ಬೀರಿರುವುದರಿಂದ ಇದನ್ನು ಮನ್ವಂತರ ಕಾವ್ಯವೆಂದು ತಿಳಿಯಬಹುದು. ವಿಷಯ ನಿರೂಪಣೆಯು ಸುಲಭಗ್ರಾಹ್ಯವೆಂದು ಕಂಡರೂ, ಅದರೊಳಗಿನ ತತ್ವ ಪ್ರಯೋಗಗಳು

ನಿಗೂಢವೆನಿಸಿ, ಈ ಕೃತಿಗೆ ಹಲವಾರು ಟೀಕಾಗ್ರಂಥಗಳು ಹುಟ್ಟಿದವು. ಜಮಖಂಡಿಯ ವಾದಿರಾಜಾಚಾರ್ಯರು ಅದಕ್ಕೆ ಸಂಸ್ಕೃತದಲ್ಲಿ ಟೀಕೆಯನ್ನು ಬರೆದದ್ದಂತೂ ಕನ್ನಡ ಕವಿತ್ವಕ್ಕೆ ಆರತಿಯನೆತ್ತಿದಂತೆಯೇ ಸೈ. ಆ ಮುಂದೆ ದಾಸರು, ಇತರ ಮಾಧ್ವರು ಅದರ ಪ್ರತಿ ತೆಗೆದಿರಿಸಿಕೊಂಡು ಪಠಣ ಮಾಡುವ ಪರಂಪರೆ ಬೆಳೆದು ಬಂದಿತು. ಕ್ರಿ.ಶ. ೧೮೭೦ನೆಯ ದಶಕದಿಂದ ಅದರ ಮುದ್ರಣಕ್ಕೆ ಮೊದಲಾಗಿ ೨೦೦೮ರ ವರೆಗೂ ಹಲವಾರು ಆವೃತ್ತಿಗಳು ಹೊರಟದ್ದರಿಂದ ಅದರ ವ್ಯಾಸಂಗವು ಮಾಧ್ವರಲ್ಲಿ ಹಬ್ಬುತ್ತ ನಡೆದಿದೆ. ಹತ್ತೊಂಬತ್ತನೆಯ ಶತಮಾನದ ಹರಿದಾಸರಿಗಂತೂ ಅದು ಕೈದೀವಿಗೆಯಾಗಿದ್ದಿತು.

### ೭.೫.೨ ಹತ್ತೊಂಬತ್ತನೆಯ ಶತಮಾನದಲ್ಲಿ ಹರಿದಾಸರ ಪರಂಪರೆ

ಜಗನ್ನಾಥದಾಸರ ಅನಂತರ (೧೮೦೯) 'ದಾಸ ಸಾಹಿತ್ಯವು ಕ್ಷೀಣ ದೆಸೆಯನ್ನು ಹೊಂದಿತು; ೧೯ನೆಯ ಶತಮಾನವು ಅದರ ಅವನತಿಯ ಕಾಲ', ಎಂಬ ವಿಚಾರ ಹಲವೆಡೆಗಳಲ್ಲಿ ವ್ಯಕ್ತವಾಗಿದೆ. ಇದು ಸತ್ಯ ದೂರವಾದ ನಿಲುಮೆ.* ಆ ಶತಮಾನದಲ್ಲಿಯೂ ಅನೇಕ ಮಹಿಮಾನ್ವಿತ ದಾಸರು ಜನ್ಮ ತಾಳಿ ದಾಸವಾಙ್ಮಯವನ್ನು ಉಜ್ವಲಗೊಳಿಸಿದ್ದಾರೆ. ಜಗನ್ನಾಥದಾಸರ ಕಾಲಾನಂತರದ (೧೮೦೯) ದಾಸ ವಾಙ್ಮಯವು ವ್ಯಾಪಕವಾಗಿ ಮುಂದುವರಿದದ್ದೇ ಕಂಡುಬರುವುದು.

ಕರ್ನಾಟಕ ಕವಿಚರಿತೆಯಲ್ಲಿ ಕಳೆದ ಶತಮಾನದಲ್ಲಿ ಬಾಳಿದ ೨೫-೩೦ ಜನ ದಾಸರ ಹೆಸರುಗಳಷ್ಟೇ ಸಿಕ್ಕುತ್ತವೆ. ಅಲ್ಲಿಂದ ಈಚೆಗೆ ಗೂರಾಬಾಳ ಹನುಮಂತರಾವ, ಬೇಲೂರ ಕೇಶವದಾಸ, ಕಲಮದಾನಿ ನಾರಾಯಣರಾವ, ಸುಬೋಧ ರಾಮರಾವ, ಜಿ. ವರದರಾಜರಾವ ಮುಂತಾದವರ ಮೂಲಕ ಅನೇಕ ದಾಸರ ಜೀವನ ಚರಿತ್ರೆಗಳೂ, ನೂರಾರು ಹಾಡುಗಳೂ ಬೆಳಕಿಗೆ ಬಂದುದರಿಂದಾಗಿ, ದಾಸವರ್ಗದ ಸಂಖ್ಯೆ ಮೂರು ನೂರನ್ನು ದಾಟಿದೆ. ಅವರಲ್ಲಿ ಸುಮಾರು ಇನ್ನೂರು ಜನ ೧೯ನೆಯ ಶತಮಾನದಲ್ಲಿ ಬಾಳಿದ್ದಾರೆ.

ಹದಿನೆಂಟನೆಯ ಶತಮಾನದಿಂದ ಹರಿದಾಸ ಪೀಳಿಗೆಯು ವಿಸ್ತಾರಗೊಂಡದ್ದಕ್ಕೆ ವಿಜಯದಾಸರು ಮತ್ತು ಅವರ ಶಿಷ್ಯರ ಚಟುವಟಿಕೆಗಳೇ ಕಾರಣ. ರಾಯಚೂರ ಜಿಲ್ಲೆಯ ಮತ್ತು ಮುನ್ನಿನ ಗದ್ವಾಲ ಸಂಸ್ಥಾನದ ಪರಿಸರದಲ್ಲಿ ಹಲವು ದಾಸಶ್ರೇಷ್ಠರು ನಕ್ಷತ್ರಪುಂಜದಂತೆ ಕಾಣಿಸಿಕೊಂಡರು. ಆ ಬೆಳಕು ನೆರೆಯಲ್ಲಿಯ ಬಳ್ಳಾರಿ, ಧಾರವಾಡ ಜಿಲ್ಲೆಗಳ ಮೇಲೂ ಪಸರಿಸಿತು. ಮುಂದಿನ ಶತಮಾನದಲ್ಲಿ ಉತ್ತರ ಕರ್ನಾಟಕದ ತುಂಬೆಲ್ಲ ದಾಸರ ನೆಲೆಗಳು ತಲೆದೋರಿದುವಲ್ಲದೆ ಮೈಸೂರಿನ ಅನೇಕ ಊರುಗಳಲ್ಲಿಯೂ ಹರಿದಾಸರು ಕಾಣಿಸಿಕೊಂಡರು. ನಾಡಿನ ಮೂಲೆ ಮೂಲೆಗೂ ಹೋಗಿ ಜನರಲ್ಲಿ ಭಕ್ತಿ

---

* ಉದಾಹರಣೆಗೆ 'ಕರ್ನಾಟಕದ ಹರಿದಾಸರು' ಗ್ರಂಥದ ಪು. ೩೧೪ ನೋಡಬಹುದು

ಮಾರ್ಗ ಹಾಗೂ ಸದಾಚಾರಗಳನ್ನು ಬೋಧಿಸಿದರು. ಅವರಿಂದ ಸಾವಿರಾರು ಹಾಡುಗಳು ರಚಿತವಾಗಿ ಆ ಮಟ್ಟಿಗೆ ಕನ್ನಡ ಸಾಹಿತ್ಯವು ಸಮೃದ್ಧವಾಯಿತು.

ಜಗನ್ನಾಥದಾಸರ ಕಾಲದ ವೇಳೆಗೆ ದಾಸಕೂಟದ ಕೆಲವು ಸಂಪ್ರದಾಯಗಳು ಸ್ಥಿರಗೊಂಡಿದ್ದವು. ಸಂಸಾರದಲ್ಲಿದ್ದುಕೊಂಡೇ ಹರಿದಾಸ ದೀಕ್ಷೆಯನ್ನು ಹೊಂದಬಯಸಿ ಹಿರಿಯ ದಾಸರೊಬ್ಬರಿಂದ ವಿಠಲಾಂತ್ಯವಾದ ಮುದ್ರಿಕೆಯನ್ನು ಪಡೆದ ಕ್ರಮವು ಅವುಗಳಲ್ಲಿ ಒಂದಾಗಿದೆ. ಹೀಗೆ ದೀಕ್ಷಾನ್ವಿತರಾದ ಶಿಷ್ಯ-ಪ್ರಶಿಷ್ಯರ ಪೀಳಿಗೆಯು ಹಲವಾರು ತಲೆಮಾರುಗಳ ತನಕ ಬೆಳೆಯುತ್ತ ಹೋಯಿತು. ಅದರಿಂದ ದಾಸವಾಙ್ಮಯ ರಚನೆಯೂ ಒಂದು ಸುಸ್ಥಿರ ಪರಂಪರೆಯಾಗಿ ಹರಿದು ಬಂದಿತು.

ವ್ಯಾಸಕೂಟವನ್ನು ಪ್ರತಿನಿಧಿಸುವ ಮಠಾಧಿಪತಿಗಳು ದಾಸವರ್ಗದವರಿಗೆ ಪ್ರೋತ್ಸಾಹ ಕೊಟ್ಟದ್ದು ಹತ್ತೊಂಬತ್ತನೆಯ ಶತಮಾನದಲ್ಲಿಯೂ ಕಂಡುಬರುತ್ತದೆ. ಆಗಿನ ಅವಧಿಯ ಉತ್ತರಾದಿಮಠದ ಸ್ವಾಮಿತ್ರಯರು, ಸೋದೆಮಠದ ವಿಶ್ವಪ್ರಿಯತೀರ್ಥರು ಹಾಗೂ ಕೃಷ್ಣಾಪುರ ಮಠದ ವಿದ್ಯಾಧೀಶರು, ಇವರನ್ನು ವಿಶೇಷವಾಗಿ ನೆನೆಯಬೇಕು.

ಹರಿದಾಸರಿಗೆ, ಪೂರ್ವದಿಕ್ಕಿಗೆ ತಿರುಪತಿ, ಪಶ್ಚಿಮಕ್ಕೆ ಉಡುಪಿ ಹಾಗೂ ಉತ್ತರಕ್ಕೆ ಮಂತ್ರಾಲಯ, ಪಂಢರಪುರಗಳು ಸ್ಫೂರ್ತಿ ಕೇಂದ್ರಗಳಷ್ಟೆ. ಕಳೆದ ಶತಮಾನದಲ್ಲಿ ಬಾಳಿದ ದಾಸರು ಈ ಕ್ಷೇತ್ರಗಳನ್ನು ತಪ್ಪದೇ ಸಂದರ್ಶಿಸಿದ್ದಾರೆ. ಆದರೂ ಅವರ ಹೆಚ್ಚಿನ ಒಲವು ತಿರುಪತಿ ಮತ್ತು ಮಂತ್ರಾಲಯಗಳಲ್ಲಿದ್ದಿತು. ದಾಸರು ವಿಠಲಾಂಕಿತರಾದರೂ ಪಂಢರಪುರವನ್ನು, ಅದು ಮರಾಠೀ ಕೇಂದ್ರವಾಗುತ್ತ ನಡೆದುದರಿಂದಲೊ ಏನೊ, ವಿಶೇಷವಾಗಿ ನೆಚ್ಚಿಕೊಂಡಂತಿಲ್ಲ. ಮಂತ್ರಾಲಯವಂತೂ ನೆನಪಾದ ಸಲಕ್ಕೊಮ್ಮೆ ಹೋಗಿ ಬರುವ ಆತ್ಮೀಯ ಸ್ಥಳವಾಗಿತ್ತೆಂದರೂ ಸರಿ. ರಾಘವೇಂದ್ರ ಸ್ವಾಮಿಗಳನ್ನು ಸ್ತುತಿಸುವ ಅನೇಕಾನೇಕ ಕನ್ನಡ ಹಾಡುಗಳು ಕಳೆದ ಶತಕದ ದಾಸರಿಂದಲೇ ರಚಿತವಾಗಿವೆ.

ಧಾರವಾಡ, ಬಳ್ಳಾರಿ, ರಾಯಚೂರ ಜಿಲ್ಲೆಗಳ ಮಧ್ಯದಲ್ಲಿ ಹಾಯ್ದು ಮಂತ್ರಾಲಯದ ಮಾರ್ಗವಾಗಿ ಕೃಷ್ಣೆಯತ್ತ ಸಾಗಿಹೋದ ತುಂಗಭದ್ರಾ ನದಿಯು ಅನೇಕ ದಾಸರಿಗೆ ಪಾವನ ಗಂಗೆಯಾಗಿ ಪರಿಣಮಿಸಿತು. ಹೆಚ್ಚಿನ ಹರಿದಾಸರು ಆ ಮೂರು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಅದರಲ್ಲಿಯೂ ರಾಯಚೂರ ಜಿಲ್ಲೆ ಮತ್ತು ಗದ್ವಾಲ ಸಂಸ್ಥಾನಗಳು ಆಗಿನ ಹರಿದಾಸರ ಉಗಮ ಸ್ಥಾನಗಳೆನಿಸಿವೆ. ವಿಜಯದಾಸ (ಚೀಕಲಪರಿವಿ), ಗೋಪಾಲದಾಸ (ಮೊಸರಕಲ್ಲು), ಜಗನ್ನಾಥದಾಸ (ಮಾನ್ವಿ), ವ್ಯಾಸವಿಠಲ, ರಘುಪತಿವಿಠಲರು (ಕಲ್ಲೂರ), ಪ್ರಾಣೇಶವಿಠಲ (ಲಿಂಗಸುಗೂರು) ಮೊದಲಾದ ದಾಸಪ್ರಮುಖರು ಜನ್ಮ ತಾಳಿದುದು ರಾಯಚೂರ ಜಿಲ್ಹೆಯಲ್ಲಿಯೇ. ಬಳ್ಳಾರಿ ಜಿಲ್ಲೆಯಲ್ಲಿ ಹರಪನಹಳ್ಳಿಯು ಮಹತ್ವದ ದಾಸಕೇಂದ್ರವಾಗಿದ್ದಿತು. ಶ್ರೀಪತಿವಿಠಲ ಹಾಗೂ ಅವರ ಶಿಷ್ಯರು, ಅದರಂತೆ ಪ್ರಸಿದ್ಧ ಕವಯಿತ್ರಿ ಭೀಮವ್ವ-ಇದೇ ಊರಿನವರು. ಧಾರವಾಡದಲ್ಲಿ

ದೀಪದ ಅಣ್ಣಯ್ಯ ಮತ್ತು ಅವರ ಪೀಳಿಗೆಯವರೂ ಮತ್ತು ಆ ಜಿಲ್ಲೆಯ ಕರ್ಜಗಿಯಲ್ಲಿ ದಾಸಪ್ಪ (ಶ್ರೀದವಿಠಲ), ರಾಜಗೋಪಾಲದಾಸರೂ ಆಗಿಹೋದರು. ಅದೇ ಧಾರವಾಡ ಜಿಲ್ಲೆಯ ಕದರಮಂಡಲಗಿ, ಗಜೇಂದ್ರಗಡಗಳು, ಬೆಳಗಾಂವ ಜಿಲ್ಲೆಯ ಚಿಕ್ಕೋಡಿ, ಹುಕ್ಕೇರಿ, ವಿಜಾಪುರ ಜಿಲ್ಲೆಯ ಕಾಖಂಡಕಿ, ಬಾಗಲಕೋಟೆ ಇವುಗಳೂ ಹರಿದಾಸರ ನೆಲವನೆಗಳಾಗಿದ್ದುವು.

ಮೈಸೂರ ಸಂಸ್ಥಾನದಲ್ಲಿ ಹೊನ್ನಾಳಿ, ಬೇಲೂರು, ದೊಡ್ಡಬಳ್ಳಾಪುರ ಮತ್ತು ಮೈಸೂರು ಮೊದಲಾದ ನಗರಗಳಲ್ಲಿದ್ದ ಕೆಲವು ಹರಿಭಕ್ತರು ಔತ್ತರೇಯ ಕರ್ನಾಟಕದಲ್ಲಿಯ ದಾಸಪ್ರಮುಖರಿಂದ ದೀಕ್ಷೆಯನ್ನು ಹೊಂದಿ, ತಮ್ಮ ಪ್ರದೇಶದ ಪರಿಸರದಲ್ಲಿ ಸದ್ಧರ್ಮವನ್ನು ಪ್ರಚುರಗೊಳಿಸಿದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅದೇಕೋ ವಿಠಲಾಂಕಿತ ಹರಿದಾಸರು ಕಂಡುಬರುವುದಿಲ್ಲ. ಅಲ್ಲಿ ಪಾವಂಜೆ ಲಕ್ಷ್ಮೀನಾರಣಪ್ಪನಂತಹ ಹರಿದಾಸರು ಕೀರ್ತನಕಾರರಾಗಿ ಮೆರೆದರು. ಕೆಲವು ಭಾಗವತರು ತಮ್ಮ ಯಕ್ಷಗಾನದ ಹಾಡುಗಳ ನಿಮಿತ್ತದಿಂದ ಹರಿಭಕ್ತಿಯ ಪ್ರಸಾರಕರಾದುದೂ ಇದೆ.

ಮುನ್ನಿನ ಹಲವು ಸಂಸ್ಥಾನಗಳಲ್ಲಿ ದಾಸವಾಙ್ಮಯಕ್ಕೆ ಪೋಷಣೆ ದೊರೆತುದನ್ನು ಪ್ರತ್ಯೇಕವಾಗಿ ಉಲ್ಲೇಖಿಸಬೇಕು. ಚಿಕ್ಕ ಸಂಸ್ಥಾನವಾಗಿದ್ದ ಗದ್ವಾಲವು ರಾಯಚೂರು ಜಿಲ್ಲೆಯ ಪೂರ್ವ ದಿಕ್ಕಿಗಿದೆ. ಅಲ್ಲಿ ಕೇಶವವಿಠಲ, ಶ್ರೀಪತಿವಿಠಲರೆಂಬ ದಾಸರು ಜೀವಿಸಿದ್ದರು. ವ್ಯಾಸತತ್ವಜ್ಞರ ಊರಾದ ಐಜಿ, ಗೋಪಾಲವಿಠಲರ ವೇಣೀಸೋಮಪುರ, ಶೇಷದಾಸರ ದರೂರು–ಇವು ಗದ್ವಾಲ ಸಂಸ್ಥಾನಕ್ಕೆ ಸೇರಿದವುಗಳೇ. ಆದವಾನಿ ಸಂಸ್ಥಾನವು ಒಬ್ಬ ನವಾಬನ ಆಡಳಿತದಲ್ಲಿದ್ದರೂ ಪಂಗನಾಮದ ತಿಮ್ಮಣ್ಣ ದಿವಾನರಾಗಿದ್ದಾಗ ಹರಿದಾಸರಿಗೆ ಅದೊಂದು ಆಶ್ರಯಸ್ಥಾನವಾಗಿದ್ದಿತು. ವಾಸುದೇವನಾಯಕನೆಂಬ ರಾಜವಂಶೀಯನು ಹೆನ್ನೆರಂಗದಾಸರ ಪೋಷಕನಾಗಿದ್ದನಲ್ಲದೆ, ಸ್ವತಃ ಸುರಪುರದ ಗೋಪಾಲಕೃಷ್ಣನೆಂಬ ಮುದ್ರಿಕೆಯಿಂದ ಹಾಡುಗಳನ್ನು ರಚಿಸಿದ್ದಾನೆ.* ಹಳೆಯ ಜಮಖಂಡಿ ಸಂಸ್ಥಾನವು (ವಿಜಾಪುರ ಜಿಲ್ಲೆ) ಇಭವರದವಿಠಲರನ್ನು ಕೊಡಮಾಡಿದೆ. ಸತ್ಯಬೋಧ ಸ್ವಾಮಿಗಳ ವಾಸಸ್ಥಾನವಾಗಿದ್ದ ಸವಣೂರು ಸುಪ್ರಸಿದ್ಧವೇ ಇದೆ. ಅಲ್ಲಿಯ ನವಾಬನೂ ದಿವಾನ್ ಖಂಡೇರಾಯನ ಮೂಲಕ ದಾಸವರ್ಗವನ್ನು ಗೌರವಿಸಿದ್ದಾನೆ. ಮೈಸೂರಿನ ಮುಮ್ಮಡಿ ಕೃಷ್ಣರಾಜರು ತಮ್ಮ ಧಾರ್ಮಿಕ ಔದಾರ್ಯದಿಂದ ಉತ್ತರದ ಹಲವು ದಾಸರನ್ನು ಬರಮಾಡಿಕೊಂಡು, ಅವರ ಹಾಡುಗಳನ್ನು ಕೇಳಿ, ಸಂತೋಷಿಸಿ ಖಿಲ್ಲತ್ತು ಮೊದಲಾದವುಗಳನಿತ್ತು ಸನ್ಮಾನಿಸಿದ್ದಾರೆ.

---

* ಇವನ 'ದಶಾವತಾರ ಮುಂಡಿಗೆ' ಎಂಬ ಹಾಡು ಹೆನ್ನೆರಂಗದಾಸ ವಿರಚಿತ 'ಶ್ರೀ ವಿಠ್ಠಲ ಶತಕ ಮತ್ತು ಕೀರ್ತನೆಗಳು' ಈ ಪುಸ್ತಕದಲ್ಲಿ ಸೇರ್ಪಡೆಯಾಗಿದೆ.

## ೭೫೩ ಪ್ರಮುಖ ದಾಸರು

ಹತ್ತೊಂಬತ್ತನೆಯ ಶತಮಾನದಲ್ಲಿ ದಾಸ ಪರಂಪರೆಯನ್ನು ಮುಂದುವರಿಸಿದವರೆಂದರೆ ಸರ್ವಶ್ರೀ ಜಗನ್ನಾಥದಾಸ, ತಂದೆ ಗೋಪಾಲವಿಠಲ ಮತ್ತು ರಘುಪತಿವಿಠಲ ಹಾಗೂ ಇವರುಗಳ ಶಿಷ್ಯ-ಪ್ರಶಿಷ್ಯರು. ಅವರಲ್ಲಿ ಮುಖ್ಯರಾದವರ ಕವನ ರಚನೆಯ ಹಿನ್ನೆಲೆಯನ್ನು ಪರಿಶೀಲಿಸಬೇಕಾಗಿದೆ.

ಜಗನ್ನಾಥದಾಸರ ಶಿಷ್ಯವರ್ಗದಲ್ಲಿ **ಅಭಿನವ ಜನಾರ್ಧನವಿಠಲರೇ** ಹಿರಿಯರೆಂದು ತೋರುತ್ತದೆ. ಅವರಿಗೆ ಸೋಮಪುರದ ಪ್ರೇಮದಾಸರೆಂದೂ ಹೆಸರು. ಶ್ರೀ ರಾಘವೇಂದ್ರ ಸ್ವಾಮಿಗಳ ಆತ್ಯಂತಿಕ ಭಕ್ತರಾಗಿದ್ದು, ಅವರ ಕುರಿತು ರಚಿಸಿದ ಹಾಡುಗಳು ಇಂದಿಗೂ ವಿಶೇಷ ಪ್ರಸಾರದಲ್ಲಿವೆ. ('ತುಂಗಾ ತೀರದಿ ನಿಂತ ಸುಯತಿವರನ್ಯಾರೆ'; 'ಬಂದದ್ದೆಲ್ಲಾ ಬರಲಿ ರಾಘವೇಂದ್ರರ ದಯವೊಂದಿರಲಿ') ನೂರಕ್ಕೆ ಮೇಲ್ಪಟ್ಟು ಇವರ ಪದ ಹಾಗೂ ಸುಳಾದಿಗಳು ದೊರೆಯುತ್ತವೆ.

ಇನ್ನೊಬ್ಬ ಶಿಷ್ಯರು ಕರ್ಜಗಿಯ **ಶ್ರೀದವಿಠಲರು** (ದಾಸಪ್ಪ). ಜಗನ್ನಾಥದಾಸರು ತಮ್ಮ ಅಪರ ವಯಸ್ಸಿನಲ್ಲಿ ಇವರ ಊರಿಗೆ ಬಂದು, ಸಭೆಯಲ್ಲಿ ಕೆಲವು ಪ್ರಮೇಯಗಳನ್ನು ಮಂಡಿಸಿದಾಗ ದಾಸಪ್ಪನು ಅದಕ್ಕೆ ಉತ್ತರ ಹೇಳಿದನೆಂದೂ ಅನಂತರ ಕಾಮ, ಮೋಹಾದಿಗಳಿಂದ ಮುಕ್ತನಾಗಿ ಶ್ರೀದವಿಠಲನಾದನೆಂದೂ ಪ್ರತೀತಿ ಇದೆ. ಮುಂದೆ ಭಕ್ತಿರಸದಿಂದ ಕೂಡಿದ ಕೀರ್ತನೆಗಳನ್ನು ರಚಿಸಿದುದಲ್ಲದೆ 'ಹರಿಕಥಾಮೃತಸಾರ'ಕ್ಕೆ ಪ್ರಥಮವಾದ ಫಲಶ್ರುತಿಯನ್ನು ಬರೆದಿದ್ದಾರೆ. ಇವರ ಶಿಷ್ಯರಲ್ಲಿ ಹೊನ್ನಾಳಿ ಭೀಮದಾಸರು ಪ್ರಮುಖರು. ಇವರ ಮೂಲಕ ದಾಸಪರಂಪರೆಯು ಮೈಸೂರ ಸಂಸ್ಥಾನದಲ್ಲಿ ವಿಶೇಷವಾಗಿ ಹಬ್ಬುತ್ತ ನಡೆಯಿತು.

ಜಗನ್ನಾಥದಾಸರ ಮತ್ತೊಬ್ಬ ಪ್ರಮುಖ ಶಿಷ್ಯರೆಂದರೆ **ಮನೋಹರವಿಠಲರು** (ಬುದ್ದಿನ್ನಿ ನಾರಪ್ಪ). ಆಸ್ತಿಕರ ನಿತ್ಯ ಪಠಣದ ರಾಘವೇಂದ್ರ ಸ್ತೋತ್ರವನ್ನು ಇವರೇ ಕನ್ನಡಿಸಿದ್ದಾರೆ. ಇವರ 'ಶ್ರೀ ಕೃಷ್ಣಜಯಂತಿ'ಯು ಒಂದು ಚಿಕ್ಕ ಕೃತಿ. 'ಮನ್ಮಥವಿಲಾಸ' ವೆಂಬ ಇನ್ನೊಂದು ಕಾವ್ಯದಲ್ಲಿ ತಾರಕಾಸುರ ವಧೆಯೇ ಮುಖ್ಯ ಕಥಾನಕವಾಗಿದೆ. ಪರ್ಯಾಯವಾಗಿ ಶ್ರೀ ಹರಿಯ ಶ್ರೇಷ್ಠತ್ವವನ್ನು ಹೇಳುತ್ತದೆ. ಇದರಲ್ಲಿ ಕವಿ ತನ್ನ ಕಲ್ಪನಾವಿಲಾಸವನ್ನೂ ತುಸು ಮಟ್ಟಿಗೆ ಸ್ವಚ್ಛಂದ ಶೃಂಗಾರವನ್ನೂ ತೋರ್ಪಡಿಸಿದ್ದಾರೆ. 'ಗದಾಯುದ್ಧ' 'ಹರಿವಾಯುಸ್ತುತಿ'ಗಳು ಅವರ ಇನ್ನೆರಡು ಕೃತಿಗಳಾಗಿವೆ. 'ಚಾಯಣ ಭಾರತ'ವೆಂಬ ಕಾವ್ಯಕ್ಕೆ ೧೫೧ ಪದ್ಯಗಳನ್ನು ಸೇರಿಸಿದ್ದಾರೆ. ಇವರ ಹೆಸರಿನಲ್ಲಿ 'ಸಂಕೋಚ ಭಾರತ' ಎಂಬ ಕಾವ್ಯವೂ ಇದೆ.[೯] ಮನೋಹರವಿಠಲರ 'ಅನಂತನ ಕಥಾ' ಹನ್ನೊಂದು ಸಂಧಿಗಳ ದೊಡ್ಡ ಕಾವ್ಯ. ಕಥಾವಸ್ತುವನ್ನು ಭವಿಷ್ಯೋತ್ತರ ಪುರಾಣದಿಂದ ಆಯ್ದುದಾಗಿದೆ. ಅವರ ಎಲ್ಲ ಕವನಗಳು ಷಟ್ಪದಿಯಲ್ಲಿದ್ದುದು ಒಂದು ವಿಶೇಷ. ಮನೋಹರವಿಠಲರು

ಕುಮಾರವ್ಯಾಸನ ಕಾವ್ಯದಿಂದ ಪ್ರಭಾವಿತರಾಗಿದ್ದುದು ಅಲ್ಲಲ್ಲಿಯ ಪದ್ಯಗಳಿಂದ ಸ್ಪಷ್ಟವಾಗಿ ಕಂಡುಬರುತ್ತದೆ.

'ಶ್ರೀಪ್ರಾಣೇಶವಿಠಲ' ಎಂಬ ಅಂಕಿತದ **ಚಿಕ್ಕೋಡಿ ಭಗವಂತರಾಯರು** (೧೭೮೩–೧೮೫೫) ಸರಕಾರಿ ನೌಕರಿಯಲ್ಲಿದ್ದುಕೊಂಡೇ ಪಾರಮಾರ್ಥ ಸಾಧನೆಗೆ ಮನಸ್ಸುಗೊಟ್ಟರು. ತರುಣ ವಯಸ್ಸಿನಲ್ಲಿಯೆ ಜಗನ್ನಾಥದಾಸರ ಸಮಾಗಮವಾಯಿತು. ಪರ್ಶಿಯನ್ ಉರ್ದುಗಳ ವಿದ್ಯಾಭ್ಯಾಸದಲ್ಲಿ ತೊಡಗಿದ್ದುದನ್ನು ಬಿಟ್ಟುಕೊಟ್ಟು, ರೊಟ್ಟಿ ವರಹಾಚಾರ್ಯರೆಂಬವರ ಶಿಷ್ಯತ್ವ ವಹಿಸಿ ಮಧ್ವಸಿದ್ಧಾಂತದ ವ್ಯಾಸಂಗಮಾಡಿದರು. ತಾವೇ ಅನ್ಯರಿಗೆ ಪಾಠಪ್ರವಚನಗಳನ್ನು ಹೇಳುವಷ್ಟು ಪರಿಣತಿಯನ್ನು ಪಡೆದರು. ಇತ್ತ ಹಲವಾರು ಊರುಗಳಲ್ಲಿ (ಚಿಕ್ಕೋಡಿಯಲ್ಲಿ ಬಹುಕಾಲ) ತಹಸೀಲುದಾರಿಕೆಯನ್ನು ಮಾಡಿ ಕೊನೆಗೆ ಬಳ್ಳಾರಿಯಲ್ಲಿ ನೆಲೆನಿಂತರು. ಇವರ ಕೀರ್ತನೆಗಳು ಪ್ರೌಢ ಸರಣಿಯವಾಗಿವೆ. ಹುಂಡೇಕಾರ ದಾಸರೆಂದು ಪ್ರಸಿದ್ಧರಾದ ಕಂಪಲಿಯ ಶ್ರೀಶವಿಠಲರೂ ಹೊನ್ನಾಳಿಯ ವೆಂಕಟದಾಸರೂ ಇವರ ಸಮಕಾಲೀನರು.

ಜಗನ್ನಾಥದಾಸರ ಶಿಷ್ಯವೃಕ್ಷದ ಬಹು ದೊಡ್ಡ ಶಾಖೆ ಲಿಂಗಸುಗೂರಿನಲ್ಲಿ ಹುಟ್ಟಿತು. ಅಲ್ಲಿದ್ದ **ಪ್ರಾಣೇಶವಿಠಲರು** ದಾಸಪರಂಪರೆಯಲ್ಲಿಯ ಒಬ್ಬ ಹಿರಿಯ ಕವಿಗಳು; ಮಂತ್ರಾಲಯದ ವರದೇಂದ್ರ ಸ್ವಾಮಿಗಳ ಪರಮಭಕ್ತರು. ಪ್ರಾಣೇಶವಿಠಲರ ಪ್ರಾಸಾದಿಕ ವಾಣಿಯಿಂದ ಅನೇಕ ಕಥನ-ಕವನಗಳು ಹೊರಹೊಮ್ಮಿವೆ. 'ಸೀತಾಸ್ವಯಂವರ', 'ಹನುಮದ್ವಿಲಾಸ' ಎಂಬುವು ರಾಮಾಯಣಕ್ಕೆ ಸಂಬಂಧಿಸಿದವುಗಳು. 'ಗೋಪಿಕಾ ವಿಲಾಸ', 'ಕಾಳಿಂಗಮರ್ದನ'ಗಳು ನೇರವಾದ ಶ್ರೀಕೃಷ್ಣ ಕಥಾನಕಗಳಾದರೆ ಭೀಮಸೇನ, ಪಾರ್ಥ, ಅನಿರುದ್ಧ ಇವರ ಹೆಸರಿನ ವಿಲಾಸಗಳಲ್ಲಿ ಶ್ರೀಕೃಷ್ಣನೇ ಸೂತ್ರಧಾರನಾಗಿ ಚಿತ್ರಿತನಾಗಿದ್ದಾನೆ. ಗಾಲವ, ಪ್ರಹ್ಲಾದರ ಚರಿತ್ರೆಗಳಂತೂ ಹರಿಭಕ್ತರ ಕಥೆಗಳು. ಇನ್ನಿತರ ಕೃತಿಗಳಾದ 'ಕಾಳೀ ಸ್ವಯಂವರ', 'ವೀರಭದ್ರ ವಿಲಾಸ' ಮತ್ತು 'ವಶಿಷ್ಠ–ವಿಶ್ವಾಮಿತ್ರಾಖ್ಯಾನ' ಇವುಗಳಲ್ಲಿಯೂ ಹರಿಯೇ ಸೂತ್ರಧಾರನು. ಪ್ರಾಣೇಶವಿಠಲರು ಇವೆಲ್ಲ ಕೃತಿಗಳ ಮೂಲ ಕಥಾವಸ್ತುವನ್ನು ಮಾರ್ಪಡಿಸಿಕೊಳ್ಳುವ ಸ್ವಾತಂತ್ರ್ಯವನ್ನು ತೋರಿದ್ದಾರೆ. ಅವರು ಕಠಿಣತರವಾದ ವಾಯುಸ್ತುತಿಯನ್ನು ಕನ್ನಡಿಸಿದ್ದಾರೆ. ಕೆಲವು ಮುಯ್ಯದ ಪದಗಳನ್ನೂ ಬರೆದಿದ್ದಾರೆ. ಅವರ ಅಸಂಖ್ಯ ಕೀರ್ತನೆ, ಸುಳಾದಿ, ಉಗಾಭೋಗಗಳಲ್ಲಿ ಭಕ್ತಿರಸವು ಪ್ರವಹಿಸುತ್ತಿದ್ದಂತೆ ಪದಲಾಲಿತ್ಯವೂ ಚೆನ್ನಾಗಿ ಮೈಗೂಡಿದೆ.

ಪ್ರಾಣೇಶವಿಠಲರ ಮಕ್ಕಳಾದ ಗುರುಪ್ರಾಣೇಶವಿಠಲರು ಮತ್ತು ಮೊಮ್ಮಕ್ಕಳಾದ ಶ್ರೀಶಪ್ರಾಣೇಶವಿಠಲರು ಹತ್ತೊಂಬತ್ತನೆಯ ಶತಮಾನದ ಮಧ್ಯಕಾಲದಲ್ಲಿ ದಾಸ ಪರಂಪರೆಯನ್ನು ವಿಶೇಷವಾಗಿ ಮುಂದುವರಿಸಿದರು. ಇವರಿಬ್ಬರ ಶಿಷ್ಯಸಂಪತ್ತು

ಅಪಾರವಾಗಿದ್ದಿತು. ಅವರಲ್ಲೊಬ್ಬರಾದ ಕೌತಾಳದ ವರದೇಶವಿಠಲರು ಮಂತ್ರಾಲಯ ಮಠದಲ್ಲಿ ನಿಷ್ಠೆಯುಳ್ಳವರಾಗಿ ಪ್ರಹ್ಲಾದ, ರಾಘವೇಂದ್ರ, ವರದೇಂದ್ರ ಸ್ವಾಮಿಗಳನ್ನು ಕುರಿತು ಆಖ್ಯಾಯಿಕೆಗಳನ್ನು ರಚಿಸಿದ್ದಾರೆ.

ಇತ್ತ ಪಂಗನಾಮದ ತಿಮ್ಮಣ್ಣದಾಸರ ಪರಂಪರೆಯಲ್ಲಿ ಬೆಳೆದು ಬಂದ ರಘುಪತಿವಿಠಲರು ಹದಿನೆಂಟನೆಯ ಶತಮಾನದ ಕೊನೆಯಲ್ಲಿದ್ದವರು. ಅವರು ಕೀರ್ತನೆಗಳ ಜೊತೆಗೆ 'ಅಧ್ಯಾತ್ಮಮಾಲಾ' ಎಂಬ ಗದ್ಯಕೃತಿಯನ್ನೂ ರಚಿಸಿದ್ದಾರೆ. ದಾಸರಲ್ಲಿ ಗದ್ಯ ಬರೆಹ ಅಪೂರ್ವವಾದುದರಿಂದ ಈ ಕೃತಿಗೆ ವಿಶೇಷ ಸ್ಥಾನವಿದೆ. ರಘುಪತಿವಿಠಲರ ಪ್ರಶಿಷ್ಯರಲ್ಲಿ ಪ್ರಮುಖರು ಗದ್ವಾಲದ ಶ್ರೀಪತಿವಿಠಲರು. ಇವರ ಶಿಷ್ಯರಾದ 'ತಂದೆಶ್ರೀಪತಿವಿಠಲ'ರು (ಸು.೧೮೦೦-೧೮೬೦) ಅಷ್ಟೇ ಮಹಿಮಾನ್ವಿತರು. ಇವರ ಎಂಟು ಕೀರ್ತನೆಗಳು ಮಾತ್ರ ಲಭ್ಯವಿವೆ. ಇನ್ನೊಂದು ದೊಡ್ಡ ಹೆಸರು **ಶ್ರೀನಿಧಿವಿಠಲರದು** (ದೀಪದ ಅಣ್ಣಯ್ಯ). ತಿರುಪತಿಯ ವೆಂಕಟೇಶನನ್ನು ವಿಶೇಷವಾಗಿ ಒಲಿಸಿಕೊಂಡ ಇವರು ಹಿರಿಯ ಭಾಗವತ ಪಂಥೀಯರೂ ಕವಿತ್ವರಚನೆಯಲ್ಲಿ ಸಿದ್ಧಹಸ್ತರೂ ಆಗಿದ್ದರು. ಇವರ ಶಿಷ್ಯರಲ್ಲಿ ಶ್ರೀವರವಿಠಲ (ಸವದಿ ರಾಮಚಂದ್ರರಾಯ) ಮತ್ತು ತೀರ್ಥಪಾದವಿಠಲರು ಪ್ರಮುಖರಾಗಿದ್ದಾರೆ.

ಗೋಪಾಲದಾಸರ ಪ್ರಶಿಷ್ಯರಲ್ಲಿ **ಮೈಸೂರು ಕೃಷ್ಣದಾಸರನ್ನು** ಪ್ರತ್ಯೇಕವಾಗಿ ಹೆಸರಿಸಬೇಕು. ಮೈಸೂರು ಪ್ರದೇಶದಲ್ಲಿ 'ಹರಿಕಥಾಮೃತಸಾರ'ವನ್ನು ಪ್ರಸಾರಗೊಳಿಸಿದವರಲ್ಲಿ ಇವರೂ ಒಬ್ಬರು. ಭಾಮಿನಿ ಷಟ್ಪದಿಯಲ್ಲಿ 'ಗಯಚರಿತ್ರೆ' ಮತ್ತು 'ಭಗವದ್ಗೀತೆ' ಇವುಗಳನ್ನು ಬರೆದಿದ್ದಾರೆ.

ಗೋಪಾಲದಾಸರ ಪ್ರಶಿಷ್ಯರಲ್ಲಿ **ಸುರಪುರದ ಆನಂದದಾಸರು** ವಿಶೇಷ ಪ್ರಸಿದ್ಧಿಯನ್ನು ಹೊಂದಿದವರು. ತಮ್ಮ ಹುಟ್ಟೂರಾದ ಚೀಕಲಪರವಿಯನ್ನು ಬಿಟ್ಟು ಶಾಸ್ತ್ರವಿದ್ಯಾಭ್ಯಾಸಕ್ಕೆಂದು ಸುರಪುರಕ್ಕೆ ಬಂದರು. ಆಗ ಅವರು ಹೆಚ್ಚಾಗಿ ಕಲಿತದ್ದು ಗಾಯನವಿದ್ಯೆಯನ್ನು. ದೈವಾಯತ್ತವಾಗಿದ್ದ ಸುಮಧುರ ಕಂಠದಿಂದ ಅವರು ತಮ್ಮ ತರುಣ ವಯಸ್ಸಿನಲ್ಲಿ ಸುರಪುರದ ಸಂಸ್ಥಾನಿಕನ ಆಶ್ರಯದಲ್ಲಿಯೆ ನಿಂತರು. ಒಮ್ಮೆ ಶ್ರೀಶವಿಠಲರು ಸುರಪುರಕ್ಕೆ ಬಂದಾಗ ಆನಂದದಾಸರು ಸ್ವಯಂಸ್ಫೂರ್ತಿಯಿಂದ ಪದ್ಯ ರಚಿಸಿ ಹಾಡಿದರು. ಶ್ರೀಶವಿಠಲರು ಅವರ ಕಂಠಶ್ರೀ ಮತ್ತು ಪದರಚನಾ ಸಾಮರ್ಥ್ಯವನ್ನು ಮೆಚ್ಚಿ ಪ್ರೋತ್ಸಾಹಿಸಿದರು.* ಮುಂದೆ ಆನಂದದಾಸರು ಭಾಗವತದ ಅನೇಕ ಆಖ್ಯಾನಗಳನ್ನು

* ಶ್ರೀಶವಿಠಲರೇ ಇವರಿಗೆ ದಾಸ ದೀಕ್ಷೆಯನ್ನು ಕೊಟ್ಟಿರಬೇಕು. ದಾಸವಾಙ್ಮಯದ ಇತರ ಪುಸ್ತಕಗಳಲ್ಲಿ ಆನಂದದಾಸರು ಕೇಶವವಿಠಲರ ಶಿಷ್ಯರೆಂದು ಉಕ್ತವಾಗಿದೆ. ಗೋಪಾಲದಾಸರ ಶಿಷ್ಯರಾಗಿದ್ದ ಕೇಶವವಿಠಲರು ಹದಿನೆಂಟನೆಯ ಶತಮಾನದ ಅಂತ್ಯದಲ್ಲಿದ್ದವರು. ಆನಂದದಾಸರು ಹತ್ತೊಂಬತ್ತನೆಯ ಶತಮಾನದ ಮಧ್ಯಕಾಲದಲ್ಲಿದ್ದವರು. ಇವರಿಬ್ಬರ ಸಮಾಗಮದ ಸ್ಪಷ್ಟ ಉಲ್ಲೇಖವಿಲ್ಲ. ಅದೇ, 'ಕರ್ಣಾಟಕ ಭಕ್ತವಿಜಯ'ದಲ್ಲಿ ಆನಂದದಾಸ-ಶ್ರೀಶವಿಠಲರ ಮೇಲ್ಕಾಣಿಸಿದ ಸಂಪರ್ಕದ ಉಲ್ಲೇಖವಿದೆ.

ರಚಿಸುತ್ತ ಕೀರ್ತನರಂಗದಲ್ಲಿ ಕಾಲಿಟ್ಟರು. ಇತರ ಸಂಸ್ಥಾನಿಕರಿಂದ, ಸಿರಿವಂತರಿಂದ ಆಮಂತ್ರಿತರಾಗಿ ಹತ್ತಾರು ಕಡೆ ಸಂಚರಿಸಿದರು. ಅವರ ಅಸಾಧಾರಣ ಗಾಯನಪಟುತ್ವವು ದಕ್ಷಿಣದ ತಂಜಾವೂರಿನ ವರೆಗೂ ಕರೆದೊಯ್ಯಿತು. ಹೀಗೆ ವಿಶೇಷ ಸನ್ಮಾನ ಹೊಂದಿ ದ್ರವ್ಯಾರ್ಜನೆ ಮಾಡಿದರು. ಮುಂದೆ ಸುರಪುರ ಸಂಸ್ಥಾನವು ನಿಕೃಷ್ಟ ಸ್ಥಿತಿಯಲ್ಲಿದ್ದಾಗ ರಾಜಾಶ್ರಯ ತಪ್ಪಿ ಬವಣೆಗೊಳಗಾದರು. ತಮ್ಮ ನಾಲ್ವತ್ತನೆಯ ವಯಸ್ಸಿನವರೆಗೂ ಅವರಿಗೆ ವಿರಕ್ತಿ ಹುಟ್ಟಿರಲಿಲ್ಲ. ಕೊನೆಗೊಮ್ಮೆ ಸುರಪುರವನ್ನು ಬಿಟ್ಟು ಕೊಲ್ಹಾಪುರಕ್ಕೆ ಹೋದರು. ತಮ್ಮ ಗಾನ, ಕೀರ್ತನೆಗಳಿಂದ ಅಲ್ಲಿಯ ರಾಜನ ಮನಸ್ಸನ್ನು ಆಕರ್ಷಿಸಿ ಕೆಲಕಾಲ ಅಲ್ಲಿಯೆ ನಿಂತರು. ಅನಂತರ ಅವರು ಉಡುಪಿ, ಮೈಸೂರುಗಳಿಗೆ ಹೋಗಿ ಬಂದರು. ಅಲ್ಲಿಯೂ ಅವರಿಗೆ ಆತ್ಮಶಾಂತಿ ದೊರೆಯಲಿಲ್ಲ. ಆ ಕಾಲದಲ್ಲಿ ಪಂಡಿತೋತ್ತಮರೂ ಮಹಿಮಾಶಾಲಿಗಳೂ ಎನಿಸಿದ್ದ ಇಭರಾಮಪುರದ ಕೃಷ್ಣಾಚಾರ್ಯರು ಮಂತ್ರಾಲಯದಲ್ಲಿ ಭೆಟ್ಟಿಯಾದಾಗಿನಿಂದ ಆನಂದದಾಸರಿಗೆ ಹೊಸ ಬೆಳಕು ತೋರಿತು. ಪರಮಾರ್ಥ ಸಾಧನೆಯಲ್ಲಿ ಮುಂದುವರಿದರು. ಭಗವನ್ನಾಮದ ಗಾಯನದಲ್ಲಿಯೇ ಪರಮಾತ್ಮನನ್ನು ಕಂಡುಕೊಂಡರು.

ಆನಂದದಾಸರು ತಮ್ಮ ಕೀರ್ತನಕಾರ್ಯಕ್ಕಾಗಿ ನಾಲ್ವತ್ತಕ್ಕೆ ಮೇಲ್ಪಟ್ಟು ಆಖ್ಯಾಯಿಕೆಗಳನ್ನು ರಚಿಸಿದ್ದಾರೆ. ಉಡುಪಿಯ ಶ್ರೀಕೃಷ್ಣನ ಸನಿಧಿಯಲ್ಲಿ ದಾಸರು ಭಾಗವತ ದಶಮಸ್ಕಂಧವನ್ನು ಕನ್ನಡದಲ್ಲಿ ಕೀರ್ತನರೂಪಕ್ಕಿಳಿಸಿದರು. ಭಗವದ್ಗೀತೆಯನ್ನು ಸಹ ಹಾಡಿನ ರೂಪಕ್ಕೆ ತಿರುಗಿಸುವ ಆಶಯದಿಂದ ಶರೀರ, ಅಹಂಕಾರ, ಮಮಕಾರ ಮತ್ತು ಭಕ್ತಿ ವೈರಾಗ್ಯ–ಎಂಬ ಮೂರು ವಿಭಾಗಗಳನ್ನು ಅಧ್ಯಾತ್ಮ ರೀತ್ಯಾ ಮಾಡಿಕೊಂಡು ಅದಕ್ಕನುಗುಣವಾದ ಶ್ಲೋಕಗಳನ್ನು ಕವನಿಸುವಲ್ಲಿ ವಿಶೇಷ ಪ್ರತಿಭೆಯನ್ನು ತೋರಿದ್ದಾರೆ. "ಅಮುಖ್ಯ ಭಾಗವೆಂದು ಗೀತಾಭ್ಯಾಸಿಗಳು ಸಾಮಾನ್ಯವಾಗಿ ಉಪೇಕ್ಷಿಸುವ 'ಅರ್ಜುನ ವಿಷಾದ ಯೋಗ' ವನ್ನೂ, ದ್ವಿತೀಯಾಧ್ಯಾಯದ ಮೊದಲ ಹತ್ತು ಶ್ಲೋಕಗಳನ್ನೂ ವ್ಯಕ್ತಿ–ಕಥೆಯಾಗಿ ತೆಗೆದುಕೊಳ್ಳದೆ ತತ್ವನಿರೂಪಣೆಯೆಂದು ವಿಸ್ತರಿಸಿದ ದಾಸರ ಅನುವಾದವು ಅವರ ವಿದ್ಯಾಗುರುಗಳನ್ನೂ, ಇತರ ವಿದ್ವಾಂಸರನ್ನೂ ಮುಗ್ಧರನ್ನಾಗಿ ಮಾಡಿತು. ದಾಸರು ಬರೆದಿರುವ ಕೀರ್ತನಗೀತೆಯಲ್ಲಿ ಪ್ರತಿ ಅಧ್ಯಾಯಕ್ಕೂ ಎರಡು ಪದಗಳು, ಕೆಲವು ಆರ್ಯಗಳು ಮತ್ತು ಷಟ್ಪದಿಗಳು; ಈ ರೀತಿ ಬಲು ಬಂಧುರವಾದ ರಚನೆಯಿದೆ. ವಿಶ್ವರೂಪ ವರ್ಣನೆಯ ಕನ್ನಡ ದಂಡಕವು ಶ್ರೀಭಾಷ್ಯಕಾರರ ವೈಕುಂಠ ಗದ್ಯದಂತೆ ಸುಂದರವಾಗಿದೆ.[೧೦] ಬಳಕೆಯಲ್ಲಿರುವ ಕೆಲವು ಹಾಡುಗಳನ್ನು ಬಿಟ್ಟರೆ, ಆನಂದದಾಸರ ಇವಾವ ಕೃತಿಗಳೂ ಅಚ್ಚಾಗಿರದಿದ್ದುದು ವಿಷಾದನೀಯ.

ಆನಂದದಾಸರ ಶಿಷ್ಯವರ್ಗದಲ್ಲಿ ಅವರ ಮಗಳು ತುಂಗಮ್ಮನನ್ನೂ ಹೆಸರಿಸಬೇಕು. ಪ್ರಮುಖ ಶಿಷ್ಯರೆಂದರೆ ಸಂತೆಬೆನ್ನೂರಿನ **ಕಮಲಾಪತಿವಿಠಲರು**. ಇವರು ಕೃಷ್ಣಾಪುರಮಠದ

ವಿದ್ಯಾಧೀಶರಲ್ಲಿ ವ್ಯಾಸಂಗ ಮಾಡಿದರು. ತಮ್ಮ ಪಾಂಡಿತ್ಯ, ಭಕ್ತಿ, ವೈರಾಗ್ಯಗಳಿಂದ ಅನೇಕ ಜನ ಶಿಷ್ಯರನ್ನು ಪಡೆದು ದಾಸವಾಙ್ಮಯದ ವಿಶೇಷ ಪ್ರಸಾರಕ್ಕೆ ಕಾರಣರಾದರು. ಕಮಲಾಪತಿವಿಠಲರ ಇನ್ನೊಬ್ಬ ಶಿಷ್ಯರಾದ ಜೋಶಿ ವೆಂಕಪ್ಪಾಚಾರ್ಯರು (೧೮೨೩–೧೮೯೫) ಸಂಗೀತಜ್ಞರಾಗಿದ್ದು, ಹಲವು ವ್ಯಾಖ್ಯಾನಗಳನ್ನೂ ನಾಟಕಗಳನ್ನೂ ರಚಿಸಿದ್ದಾರೆ.

ಕಮಲಾಪತಿವಿಠಲರು 'ಹರಿಕಥಾಮೃತಸಾರ'ಕ್ಕೆ ಬರೆದಿದ್ದ ಭಾವದರ್ಪಣವೆಂಬ ಟೀಕೆಯನ್ನು (೧೮೮೪) **ಜಂಬುಖಂಡಿ ವಾದಿರಾಜಾಚಾರ್ಯರು** ವಿಸ್ತರಿಸಿ ಸಂಸ್ಕೃತದಲ್ಲಿ ಬರೆದರು. ಆಚಾರ್ಯರದು ತುಂಬ ಸಂಘರ್ಷದ ಜೀವನ. ಮಠಾಧೀಶರ ಬಹಿಷ್ಕಾರವನ್ನು ಎದುರಿಸಬೇಕಾಗಿ ಬಂದಿತು. ಇವರ ವಿದ್ಯಾಗುರುಗಳು ವಿದ್ಯಾಧೀಶರು; ದಾಸವೃತ್ತಿಯ ಗುರುಗಳು ಭೀಮೇಶವಿಠಲರು. 'ಇಭವರದವಿಠಲ' ಎಂಬ ಅಂಕಿತವಿದ್ದರೂ, ಇವರು ಲೌಕಿಕ ಹೆಸರಿನಿಂದಲೇ ಪ್ರಸಿದ್ಧಿ ಹೊಂದಿದ್ದರು. ಮಧ್ವಶಾಸ್ತ್ರದಲ್ಲಿ ಪರಿಣತರಿದ್ದಂತೆ, 'ಹರಿಕಥಾಮೃತಸಾರ' ವಿಚಾರದಲ್ಲಿಯೂ ಅಷ್ಟೇ ಪಾಂಡಿತ್ಯವನ್ನು ಪಡೆದಿದ್ದರು.

ಒಮ್ಮೆ ಅದರ ಪ್ರವಚನವನ್ನು ಮಾಡುತ್ತಿದ್ದಾಗ, ಉತ್ತರಾದಿ ಮಠದ ವಿದ್ಯಾಧೀಶರು 'ಅದೇನು; ಕನ್ನಡ ಗ್ರಂಥ'ವೆಂಬ ಅವಜ್ಞೆಯ ಮಾತನಾಡಿದುದೇ, ಸಂಸ್ಕೃತದಲ್ಲಿ ಟೀಕೆ ಬರೆಯಲು ನಿಮಿತ್ತವಾಯಿತಂತೆ. ವೇದಶಾಸ್ತ್ರ, ಪುರಾಣೇತಿಹಾಸಗಳೆಲ್ಲವೂ ಇದರಲ್ಲಿ ಅಡಕವಾಗಿವೆಯೆಂದು ಮನಗಾಣಿಸಲು ಆ ಟೀಕೆಯನ್ನು ಬರೆದು ಅದಕ್ಕೆ 'ವ್ಯಾಸ-ದಾಸ ಸಿದ್ಧಾಂತ ಕೌಮುದೀ' ಎಂಬ ಅರ್ಥಪೂರ್ಣ ಹೆಸರನ್ನು ಕೊಟ್ಟರು.

ಗುರುಪೀಳಿಗೆಯು ನಮಗೆ ತಿಳಿದು ಬಂದಿರದ ಕೆಲವು ದಾಸರ ಕಾರ್ಯವನ್ನು ಇಲ್ಲಿ ಪ್ರಸ್ತಾಪಿಸೋಣ. ಪೂರ್ವೋಕ್ತ ತಿಮ್ಮಪ್ಪದಾಸರ 'ಪೂಜಾವಿಧಾನ', ಗುರುಬೋಧೆ, ಪುರಾಣಭಾವ-ಮುಂತಾದ ವಿಷಯಗಳ ಮೇಲಿನ ಅವರ ಕೀರ್ತನೆಗಳು ತುಂಬಾ ಜನಬಳಕೆಯಲ್ಲಿದ್ದುವು. ಅದರಂತೆ ಭಾಗವತದಲ್ಲಿಯ ಶ್ರೀಕೃಷ್ಣಕಥನಕ್ಕೆ ಸಂಬಂಧಿಸಿದ ಕೀರ್ತನೆಗಳಿವೆ. 'ಧ್ರುವಚರಿತ್ರೆ'ಯು ಸಾಂಗತ್ಯದಲ್ಲಿದೆ. ಅಲ್ಲದೆ 'ಪರಬ್ರಹ್ಮಪ್ರಕಾಶಿಕೆ' ಮತ್ತು 'ಭಗವದ್ವಿಲಾಸದಾಟ' ಎಂಬ ಗದ್ಯ ಕೃತಿಗಳೂ ಇವೆ.

ಅನಂತಪುರ ಜಿಲ್ಲೆಯ ಪೆನ್ನ-ಅಹೋಬಲ ಕ್ಷೇತ್ರದಲ್ಲಿಯ ನೃಸಿಂಹದೇವರ ಉಪಾಸಕರಾಗಿದ್ದ **ಪೆನ್ನೆರಂಗದಾಸರು** ದೂರದ ತೆಲುಗು ದೇಶದಲ್ಲಿದ್ದರೂ ಕನ್ನಡ ಹರಿದಾಸರಾಗಿ ಕಾರ್ಯವನ್ನೆಸಗಿದರು. ಕದರಮಂಡಲಗಿ (ಧಾರವಾಡಜಿಲ್ಲೆ)ಯಲ್ಲಿದ್ದ ಅವಧೀ ರಾಮದಾಸ ಮತ್ತು ಶ್ರೀನಿವಾಸದಾಸ ಎಂಬವರು ಅಲ್ಲಿಯ ಪ್ರಾಣದೇವರ ಉಪಾಸಕರಾಗಿದ್ದರು. ರಾಮದಾಸರ ಮನೆತನದವರು ಪೂರ್ಣಯ್ಯನ ಕಾಲದಲ್ಲಿ ರಾಜಾಶ್ರಯವನ್ನು ಹೊಂದಿದ್ದರು. ಗೊಂಬೆಯಾಟದ ಮೂಲಕ ಪೂರ್ವಾಶ್ರಮದಲ್ಲಿ ಪ್ರಸಿದ್ಧಿ ಹೊಂದಿದ್ದ ಶ್ರೀನಿವಾಸದಾಸರು 'ಕದರಮಂಡಲಗಿ ಪಾಂಡುರಂಗ'ನೆಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚಿಸಿದ್ದು ಅವುಗಳ ಕುರಿತು 'ಕನಕದಾಸರ

ಗುಟ್ಟು, ಶ್ರೀನಿವಾಸದಾಸರ ತಿಟ್ಟು' ಎಂದು ಪಡೆನುಡಿಯ ರೂಪದಲ್ಲಿ ಹೇಳಲಾಗುತ್ತಿತ್ತು. ಕರ್ಜಗಿಯು ಎಂದಿನಿಂದಲೂ ದಾಸ ಸಂಪ್ರದಾಯದ ನೆಲೆವೀಡು. ಅಲ್ಲಿಯ **ರಾಜಗೋಪಾಲದಾಸರು** (ಕಡಕೋಳ ರಾಜಗೋಪಾಲಚಾರ್ಯ) ತಮ್ಮ ಕೀರ್ತನೆಗಳಿಂದ ವಿಶೇಷ ಜನ ಮೆಚ್ಚುಗೆಯನ್ನು ಗಳಿಸಿದ್ದರು. ಅವರ 'ಕೀಚಕ ವಧೆ' ಎಂಬ ಚಿಕ್ಕ ಷಟ್ಪದೀ ಕಾವ್ಯವನ್ನು ಹೆಣ್ಣುಮಕ್ಕಳು ಹಾಡುವುದುಂಟು. ಅವರು ಪ್ರಾಸಬದ್ಧವಾಗಿ ಆಶುಕವಿತ್ವ ಮಾಡುತ್ತಿದ್ದುದನ್ನು ಜನ ಈಗಲೂ ನೆನೆಯುತ್ತಾರೆ.

**ವಿಜಯರಾಮಾರ್ಯ**ರು ಮೈಸೂರಿನ ರಾಮನಾಥಪುರದವರು. ಲೌಕಿಕ ಜಗತ್ತಿನಲ್ಲಿ ದೊಡ್ಡ ಹುದ್ದೆಯಲ್ಲಿದ್ದರೂ ಅದನ್ನು ತ್ಯಜಿಸಿ ದಾಸದೀಕ್ಷೆಯನ್ನು ವಹಿಸಿ ಅನೇಕ ಪದ್ಯಗಳನ್ನು ರಚಿಸಿದ್ದಾರೆ. ತಮ್ಮ ಮಗಳು ಚೇಚಮ್ಮ ಹಾಗೂ ಇತರ ಸಂಬಂಧಿಕರನ್ನು ಸಹ ದಾಸಕೂಟಕ್ಕೆ ಸೇರಿಸಿಕೊಂಡಿದ್ದರು. ಅವರ ಶಿಷ್ಯರಲ್ಲಿ ಮೈಸೂರ ಶ್ರೀನಿವಾಸದಾಸರನ್ನು ಹೆಸರಿಸಬೇಕು. ಇವರು ಮುಮ್ಮಡಿ ಕೃಷ್ಣರಾಜರ ಆಸ್ಥಾನಕ್ಕೆ ಬಂದಾಗ ಅದನ್ನು ವರ್ಣಿಸಬೇಕೆಂಬ ಸೂಚನೆ ಬಂದಿತು. 'ಇಂಥ ಲೌಕಿಕ ವರ್ಣನೆಯನ್ನು ಮಾಡಲಾರೆ. ಬೇಕಾದರೆ ದ್ವಾರಕಾಪಟ್ಟಣದ ಶ್ರೀಕೃಷ್ಣನ ಒಡ್ಡೋಲಗವನ್ನು ವರ್ಣಿಸುವೆ'ವೆಂದು ಸಾರಿ ಶ್ರೀನಿವಾಸದಾಸರು ಅಲ್ಲಿಯೇ ದ್ವಿಪದಿಯಲ್ಲಿ ಹಾಡು ಕಟ್ಟಿ ಹೇಳಿದರಂತೆ. ಇವರು ಶ್ರೀಹರಿಯ 'ವಿರಾಡ್ರೂಪ ವರ್ಣನೆ' ಮತ್ತು 'ಮೋಹಿನಿ ವರ್ಣನೆ'ಯನ್ನೂ ಬರೆದಿದ್ದಾರೆ.

**ಬಾಗೇಪಲ್ಲಿಯ ಸುಬ್ರಹ್ಮಣ್ಯದಾಸರು** (ಗುರುರಾಮವಿಠಲ) ಕಳೆದ ಶತಮಾನದ ಉತ್ತರಾರ್ಧದಲ್ಲಿ ಬಾಳಿದರು. ಅನೇಕ ಕೀರ್ತನೆಗಳನ್ನು ರಚಿಸಿದುದಲ್ಲದೆ, 'ಭೋಜನಕಾಲ ನಿರ್ಣಯ' 'ಕನಕದಾಸರ ಕಥೆ' ಮತ್ತು 'ಸೇತುರಾಯರ ಕಥೆ' ಎಂಬ ಕವನಗಳನ್ನೂ ಬರೆದಿದ್ದಾರೆ. ಸೇತೂರಾಯರು ಚಾಮರಾಜ ಒಡೆಯರ ಆಸ್ಥಾನದಲ್ಲಿದ್ದವರು; ಎಂದರೆ ಸುಬ್ರಹ್ಮಣ್ಯದಾಸರ ಸಮಕಾಲೀನರು. ಹರಿದಾಸರು ಸಮಕಾಲೀನರಾದ ವಿದ್ವಾಂಸ ಇಲ್ಲವೆ ಹರಿಭಕ್ತನ ಚರಿತ್ರೆಯನ್ನು ಕವನಿಸಿದ ಉದಾಹರಣೆ ಬೇರೊಂದಿಲ್ಲ.

ಬೇಲೂರಿನಲ್ಲಿಯೂ ಒಂದು ದಾಸ ಮನೆತನವು ನೆಲೆಗೊಂಡಿದ್ದಿತು. ಅದರ ಮೂಲ ಪುರುಷರು ವಿಜಯದಾಸರ ಶಿಷ್ಯರಾದ **ವೆಂಕಟದಾಸರು**. ಅವರಿಂದ ನಾಲ್ಕನೆಯ ತಲೆಮಾರಿನವರೇ ಕಳೆದ ಶತಮಾನದ ಅಂತ್ಯದಲ್ಲಿದ್ದ ವೆಂಕಟಸುಬ್ಬದಾಸರು. ಸುರಪುರದ ಆನಂದದಾಸರಿಂದ ಕೀರ್ತನ ಶಿಕ್ಷಣವನ್ನು ಹೊಂದಿ ಪ್ರಸಿದ್ಧಿ ಪಡೆದರು. ದಾಸ ವಾಙ್ಮಯವನ್ನು ಪ್ರಸಾರಗೊಳಿಸಿದರು.

**ಮೊದಲಕಲ್ಲು ಶೇಷದಾಸ**ರನ್ನು ಅಪರೋಕ್ಷ ಜ್ಞಾನಿಗಳೆಂದು ತಿಳಿಯಲಾಗುತ್ತಿದ್ದಿತು (ಸು.೧೮೮೦–೧೮೮೪). ಗದ್ವಾಲ ಸಂಸ್ಥಾನದ ದರೂರಿನ ಶಾನುಭೋಗರಿದ್ದಾಗ ರಾಜನಿಂದ ಅವಮಾನಿತರಾದ್ದರಿಂದ ಲೌಕಿಕ ಜೀವನಕ್ಕೆ ಶರಣು ಹೊಡೆದರು. ಚಿಂತಲರೇವಲಿನಲ್ಲಿ

ತಪಸ್ಸಿಗೆ ನಿಂತಿದ್ದಾಗ ವಿಜಯದಾಸರು ಕಾಣಿಸಿಕೊಂಡು ಅನುಗ್ರಹಿಸಿದಂತಾಯಿತು. ಆಗ ಗುರುವಿಜಯವಿಠಲನೆಂಬ ಅಂಕಿತವನಿಟ್ಟುಕೊಂಡು ಹರಿದಾಸರಾದರು. ಮೊದಲಕಲ್ಲು ಗ್ರಾಮಕ್ಕೆ ಬಂದು ಪುನಃ ಸಾಧನೆ ಗೈದರು. ಅವರ ಸುಳಾದಿ, ಉಗಾಭೋಗಗಳು ನಿಗೂಢವಾದ ಅಧ್ಯಾತ್ಮ ಪ್ರಮೇಯಗಳಿಂದ ಕೂಡಿವೆ. ಚಿಂತಲರೇವಿಗೆ ಬಂದ ದಿನದಿಂದ ಅವರು ಬರೆದಿಟ್ಟ ದಿನಚರ್ಯದ ಹಸ್ತಪ್ರತಿ ಇದ್ದು ಅದರಲ್ಲಿ ದಾಸರು ಮಂತ್ರೋಪಾಸನೆ ಮಾಡಿದ್ದರ ವಿಧಾನ, ಉಪಾಸನೆ ಮಾಡಿದ ಕಾಲದ ಪರಿಮಿತಿ, ತಮಗಾದ ದೇವತಾ ದರ್ಶನ, ವರಪ್ರದಾನ ಇವುಗಳ ವಿವರಣೆಯಿದೆ.[೧೧] ಈ ಬಗೆಯ ಆತ್ಮಕಥನವು ಒಂದು ಅಪೂರ್ವ ಕೃತಿಯೆಂದೇ ಹೇಳಬೇಕು.

ಮೇಲಣ ಪರಿಶೀಲನೆಯಲ್ಲಿ ಹರಿದಾಸರ ಜೀವನ ಹಾಗೂ ಕಾವ್ಯರಚನೆಗೆ ಸಂಬಂಧಿಸಿದ ಕೆಲವು ಸಮಾನಾಂಶಗಳನ್ನು ಕಾಣಬಲ್ಲೆವು. ಅವರೆಲ್ಲರ ಮನೆತನ ಹಾಗೂ ಬೆಳೆದು ಬಂದ ಪರಿಸರಗಳು ಸಾಮಾನ್ಯ ಮಟ್ಟದವಾದರೂ ತಾವು ಕೇಳಿದ ಪುರಾಣ ಕೀರ್ತನೆಗಳು, ಜೊತೆಗೆ ಹಿರಿಯ ಧಾರ್ಮಿಕರ ಸಮಾಗಮ ಇವಿಷ್ಟರಿಂದಲೇ ಅವರು ಮಹಿಮಾವಂತರಾಗಿ ಬಾಳಿದುದು ಹರಿದಾಸರ ಜೀವನ ವೈಶಿಷ್ಟ್ಯವೆನ್ನಬೇಕು. ಅನೇಕ ದಾಸರು ಸಂಸಾರಿಗಳಾಗಿಯೆ ಪರಮಾರ್ಥ ಸಾಧನೆಯಲ್ಲಿ ತೊಡಗಿದುದು ಅವರ ಸ್ಥಿತಪ್ರಜ್ಞತೆಯ ದ್ಯೋತಕವಾಗಿದೆ; ಸಾಮಾಜಿಕ ಸ್ಥಿರತೆಯ ದೃಷ್ಟಿಯಿಂದ ಅರ್ಥಪೂರ್ಣವಾಗಿದೆ. ದಾಸರ ಜೀವನದಲ್ಲಿ ಕಂಡುಬರುವ ಇನ್ನೊಂದು ವಿಶೇಷತೆಯೆಂದರೆ ಅವರು ಮಾಧ್ವಮತಾವಲಂಬಿಗಳಾಗಿದ್ದರೂ ಅವರಲ್ಲಿ ಸ್ವಮತವಿಷಯಕವಾದ ಶಾಠ್ಯತನವಿರಲಿಲ್ಲ. ವಿಜಯದಾಸ, ಶೇಷದಾಸ, ಗೊಂಬೆ ಶ್ರೀನಿವಾಸದಾಸ–ಇವರಿಗೆ ವಿವಿಧ ಜಾತಿಯ ಶಿಷ್ಯರಿದ್ದರು. ಅಂಥವರನ್ನು ಸಹೃದಯತೆಯಿಂದ ಕಾಣುವ ಉದಾರ ಭಾವ ದಾಸರಲ್ಲಿದ್ದಿತು.

ಹರಿದಾಸರಿಗೆ ಪ್ರಾದೇಶಿಕ ಭಾವನೆ ಎಳ್ಳಷ್ಟೂ ಇರಲಿಲ್ಲ. ನಾಡಿನ ತೀರ ಉತ್ತರಕ್ಕಿದ್ದವರು ನಂಜನಗೂಡಿಗೂ ಹೋದುದಿದೆ. ಮೈಸೂರವರು ದಾಸಪಂಥದ ಗುರುಗಳನ್ನು ಅರಸಿಕೊಂಡು ಧಾರವಾಡ, ಲಿಂಗಸುಗೂರುಗಳ ತನಕ ಧಾವಿಸಿ ಬಂದಿದ್ದಾರೆ. ಆರಾಧ್ಯ ದೈವತದ ನಿಮಿತ್ತ ಹರಿದಾಸರು ಒಂದೊಂದು ಸ್ಥಳವನ್ನು ನೆಚ್ಚಿಕೊಂಡಿದ್ದರೂ, ಅವರೆಲ್ಲ ವರ್ಷದಲ್ಲಿ ಹೆಚ್ಚು ಕಾಲ ಊರೂರನ್ನು ಸುತ್ತಿದ್ದಾರೆ. ಪೂರ್ವಪರಿಚಯವಿಲ್ಲದ ಜನರ ಮಧ್ಯದಲ್ಲಿ ಹರಿಕಥೆ, ಕೀರ್ತನಗಳನ್ನು ನೆರವೇರಿಸಿ ಜನತೆಯ ಬದುಕನ್ನು ಹಸನಾಗಿಡಲು ಯತಿಸಿದ್ದಾರೆ.

ಅವರ ಕವನಗಳ ವಿಷಯವು ಶ್ರೀಹರಿಯ ಮತ್ತು ಹರಿಭಕ್ತರ ಸ್ತುತಿ-ಕಥಾನಕಗಳು ಹಾಗೂ ಮಾಧ್ವ ಪ್ರಮೇಯಗಳು–ಇವುಗಳಿಗೆ ಸೀಮಿತವಾಗಿದ್ದಿತು. ಅವರಿಗೆ ದೊರೆತ ಕಾವ್ಯ ವ್ಯಾಸಂಗವೆಂದರೆ ತಮಗಿಂತ ಹಿಂದಿನ ಕಾಲದ ದಾಸರ ಕೃತಿಗಳು, ಭಾಗವತ

ಪುರಾಣ, ಕುಮಾರವ್ಯಾಸ ಭಾರತ ಮುಂತಾದವು. ಈ ಕಾರಣದಿಂದ ಅವರ ಕೃತಿಗಳ ವಸ್ತುವಿನಲ್ಲಿ ಹೊಸತನ ತೋರಿಬರಲಿಕ್ಕಿಲ್ಲ. ಸ್ವಾನುಭಾವದಿಂದ ಒಡಮೂಡಿದ ಭಾವಗೀತಗಳೆಂದೇ ಅವನ್ನು ತಿಳಿಯತಕ್ಕುದು. ಈ ಹಿಂದೆ ಪ್ರತಿಪಾದಿತ ವಿಷಯವೇ ಇದ್ದರೂ ಅದನ್ನೇ ಹೊಸ ರೀತಿಯಲ್ಲಿ ಹೇಳಿದುದೂ ಇದೆ. ಪೌರಾಣಿಕ ಕಥೆಗಳನ್ನು ಮಾರ್ಪಡಿಸಿಕೊಳ್ಳುವ ಸ್ವಾತಂತ್ರ್ಯವನ್ನು ಅವರು ತೋರಿದ್ದಾರೆನುವುದೂ ಮಹತ್ವದ್ದು.

ಗಮನಿಸಬೇಕಾದ ಒಂದು ಮಾತೆಂದರೆ ೧೯ನೆಯ ಶತಮಾನದ ಹರಿದಾಸರ ಅಪ್ರತಿಮವಾದ ಕನ್ನಡ ಪ್ರೇಮ. ಇದು ಸಂಸ್ಕೃತವನ್ನು ವಿಶೇಷ ಕಲಿಯದವರ ಅನಿವಾರ್ಯದ ಕನ್ನಡ ಒಲವೇನೂ ಅಲ್ಲ. ಸಂಸ್ಕೃತದಲ್ಲಿ ಪ್ರೌಢವ್ಯಾಸಂಗ ಮಾಡಿಯೂ ಅನೇಕ ದಾಸರು ಧಾರಾಳವಾಗಿ ಕನ್ನಡ ಪದಗಳನ್ನು ರಚಿಸಿದ್ದಾರೆ. ಇಂದಿನ ಕರ್ನಾಟಕಕ್ಕೆ ಸೇರದ ಪ್ರದೇಶಗಳಲ್ಲಿ ಕೆಲವು ದಾಸರು ಬಾಳಿದರಷ್ಟೆ. ಆದರೂ ಅವರು ತಾಯ್ನುಡಿಯನ್ನೇ ನೆಚ್ಚಿಕೊಂಡಿದ್ದರಲ್ಲದೆ ಅನ್ಯ ಭಾಷಾ ಪ್ರದೇಶಗಳಿಗೆ ಹೋಗಿ ಕನ್ನಡ ಪದಗಳನ್ನು ವ್ಯಾಪಕವಾಗಿ ಪ್ರಸಾರಗೊಳಿಸಿದ್ದಾರೆ. ತಿಳಿಯಾದ ಕನ್ನಡದ ಶೈಲಿಯಲ್ಲಿ ಕಾವ್ಯ ರಚಿಸಬೇಕೆಂಬ ಅದಮ್ಯ ಪ್ರವೃತ್ತಿಯನ್ನು ನಾವು ಅವರಲ್ಲಿ ಕಾಣುತ್ತೇವೆ. ಹಾಗಲ್ಲವಾದರೆ ಮಾಧ್ವರು ನಿತ್ಯ ಪಾರಾಯಣ ಮಾಡುವ ವಾಯುಸ್ತುತಿ, ರಾಘವೇಂದ್ರ ಸ್ತೋತ್ರಗಳನ್ನು ಕನ್ನಡದಲ್ಲಿ ಅನುವಾದ ಮಾಡುವ ಅಗತ್ಯವೆಲ್ಲಿದ್ದಿತು?

ಹತ್ತೊಂಬತ್ತನೆಯ ಶತಮಾನದಲ್ಲಿ ರಚಿತವಾದ ಅಪಾರ ದಾಸವಾಙ್ಮಯದಲ್ಲಿ ವ್ಯಕ್ತವಾದ ಕಾವ್ಯಗುಣ, ತತ್ವವಿವೇಚನೆ ಹಾಗೂ ಸಾಮಾಜಿಕ ಪ್ರಜ್ಞೆ ಇವು ಪ್ರತ್ಯೇಕ ಅಭ್ಯಾಸದ ಅಂಶಗಳಾಗಿವೆ. ದಾಸರ ಭಕ್ತಿ ಪ್ರಸಾರ ಕಾರ್ಯದಿಂದ ನಾಡಿನಲ್ಲಿ ಆಗಿರಬಹುದಾದ ಸಾಮಾಜಿಕ, ನೈತಿಕ ಮತ್ತು ಧಾರ್ಮಿಕ ಜಾಗೃತಿಯು ಮನನೀಯವಾದುದು. ಅಂದಿನ ಅವ್ಯವಸ್ಥಿತ ರಾಜಕೀಯ ಸ್ಥಿತಿಯಲ್ಲಿ ಹಾಗೂ ಪರ ಸಂಸ್ಕೃತಿಯ ಪ್ರಭಾವದಿಂದಾಗಿ ಸಾಮಾಜಿಕ ವ್ಯವಸ್ಥೆಯು ಸಡಿಲುಗೊಳ್ಳುತ್ತಿದ್ದ ಕಾಲದಲ್ಲಿ ದಾಸರು ಮತ್ತು ಇತರ ಮಹಾನುಭಾವರ ಬೋಧನೆಯಿಂದ ಜನತೆಯಲ್ಲಿ ತಮ್ಮ ಪ್ರಾಚೀನ ಸಂಸ್ಕೃತಿಯ ವಿಷಯವಾಗಿ ಹೊಸ ಶ್ರದ್ಧೆ, ಅದರಂತೆ ಜೀವನದಲ್ಲಿ ಹೊಸ ಭರವಸೆ ಮೂಡಿಬಂದುವು.

ಕಳೆದ ಶತಮಾನದಲ್ಲಿ ನೂರಿನ್ನೂರು ಹರಿದಾಸರು ಆಗಿಹೋದರೆಂದು ಹೇಳಿತಷ್ಟೆ. ಅವರಲ್ಲಿ ದಾಸವಾಙ್ಮಯಕ್ಕೆ ವಿಶೇಷ ಕೊಡುಗೆಯನ್ನು ನೀಡಿದ ಇನ್ನೂ ಹಲವರ ವಿವರ ಪರಿಚಯವನ್ನು ಅನುಬಂಧ ೭ರಲ್ಲಿ ಕೊಡಲಾಗಿದೆ. ಇದೆಲ್ಲ ಈಚೆಗೆ ನಡೆಸಿದ ಶೋಧ-ಸಂಶೋಧನೆಗಳಿಂದ ಹೊರಹೊಮ್ಮಿದವುಗಳು.

## ಸಂದರ್ಭ ಸೂಚಿ


೧. ವಿವೇಕಾಭ್ಯುದಯ, ಸೆಪ್ಟೆಂಬರ್ ೧೯೭೧ : ಹಂಪ ನಾಗರಾಜಯ್ಯ, ಪು. ೨೭.

೨. ಕೃಷಿಜ್ಞಾನ ಪ್ರದೀಪಿಕೆ, ಪು. ૩೩೨.

೩. ಕೈವಲ್ಯ ದರ್ಪಣ–ಪ್ರಸ್ತಾವನೆ, ಪು. ೫; ಮತ್ತು ಭಕ್ತಿ ಸುಧಾಸಾರ – ಪ್ರಸ್ತಾವನೆ, ಪು. ೧೯೪, ಅಡಿಟಿಪ್ಪಣಿ.

೪. ಪರಿಷತ್ಪತ್ರಿಕೆ, ಸಂ. ೨೧ (೧೯೩೬) : ಎಚ್.ಎಂ. ಶಂಕರನಾರಾಯಣರಾವ. ಪು. ೧೯೪.

೫. ಜಯಂತಿ, ೧೯೫೬ರ ಸೆಪ್ಟೆಂಬರ್, ಡಿಸೆಂಬರ್ ಸಂಚಿಕೆಗಳು : ಗುರುರಾವ ಕಲಮದಾನಿ.

೬. ಕರ್ನಾಟಕದ ಕವಯಿತ್ರಿಯರು, ಪು. ೩೨೬–೩೩೪.

೭. ಭಟಕಳ ನಾಡಘರ ಶಾಂತಿಬಾಯಿಯವರ ಚರಿತ್ರವೂ ಅವರು ರಚಿಸಿದ ಪದಗಳೂ. (ಚಿಕ್ಕ ಪುಸ್ತಕ)

೮. ಕರ್ನಾಟಕದ ಕವಯಿತ್ರಿಯರು, ಪು. ೩೪೧.

೯. ಕರ್ನಾಟಕ ಹರಿದಾಸ ಸಾಹಿತ್ಯ ದ್ವೈಮಾಸಿಕ ೨ (೧೯೫೬), ಸಂಚಿಕೆ ೨.

೧೦. ಕರ್ನಾಟಕ ಭಕ್ತಿವಿಜಯ, ಪು. ೬೦೯.

೧೧. ಅದೇ, ಪು. ೬೫೪-೫೫.

## ಪ್ರಕರಣ : ೮

# ಯಕ್ಷಗಾನ ಕವಿಗಳು

### ೮೧ ಹಿನ್ನೆಲೆ

ನದಿಯ ಮೂಲ, ಋಷಿಯ ಮೂಲ, ಇವುಗಳನ್ನು ತಿಳಿಯಲು ಯತ್ನಿಸಬಾರದು, ಎಂಬಂತೆ ಜಾನಪದ ಕಲೆಗಳ ಉಗಮವನ್ನು ಅರಸಿಕೊಂಡು ಹೋಗುವುದೂ ವಿಫಲ ಸಾಹಸವೇ ಸೈ. ಯಕ್ಷಗಾನವು ಒಂದು ಜಾನಪದ ಕಲೆಯಾಗಿ ಎಷ್ಟೋ ಶತಮಾನಗಳಿಂದ ಜನತೆಯನ್ನು ರಂಜಿಸಿದೆ. ಜೊತೆಗೆ ಅದರಲ್ಲಿ ಸಾಹಿತ್ಯ, ಸಂಗೀತ, ನೃತ್ಯಾದಿ ವಿವಿಧ ಅಂಗಗಳು ಹಾಸುಹೊಕ್ಕಾಗಿ ಸೇರಿಕೊಂಡಿರುವುದರಿಂದ ಆ ಅಂಗಗಳಲ್ಲಿ ಒಂದೊಂದನ್ನು ವಿಂಗಡಿಸಿಕೊಂಡು ಮೂಲವನ್ನು ತಿಳಿಯುವುದು ಇನ್ನಷ್ಟು ಕಷ್ಟಕರವಾದದ್ದು. ಇದೇ ಕಾರಣದಿಂದ ಈ ಜಾನಪದ ಕಲೆಯಲ್ಲಿ ಅದರ ಪ್ರಭೇದಗಳೂ ಇವೆ. ಆದರೆ ಭಾಗವತರು ಪದ ಹೇಳುತ್ತ ಅದನ್ನನುಸರಿಸಿ ಪಾತ್ರಗಳು ಕುಣಿಯುವ ಮತ್ತು ಅಭಿನಯದಿಂದ ಆಶು ಸಂಭಾಷಣೆಯನ್ನು ನಡೆಸುವ ವಿಶಿಷ್ಟವಾದ ಯಕ್ಷಗಾನಕ್ಕೆ ಮಾತ್ರ ಕರಾವಳಿಯ ಕನ್ನಡ ಜಿಲ್ಲೆಗಳು ಹಾಗೂ ಮಲೆನಾಡಿನ ಹಾಸನ-ಶಿವಮೊಗ್ಗ ಜಿಲ್ಲೆಗಳು ಉಗಮಸ್ಥಾನವೆಂದು ಹೇಳುವುದುಂಟು. ಅದನ್ನು ದಾಟಿ ಬೇರೆಡೆಗೆ ಹಬ್ಬಿರಬಹುದಾದರೂ ಇಂದಿಗೂ ಆ ಪ್ರದೇಶವೇ ಯಕ್ಷಗಾನ ಕಲೆಯ ಪ್ರಮುಖ ಕ್ಷೇತ್ರವಾಗಿದೆ.

ಯಕ್ಷಗಾನದ ವಿವಿಧ ಅಂಗಗಳೊಳಗೆ ನಮಗೆ ಇಲ್ಲಿ ಪ್ರಸ್ತುತವಾದುದು ಅದರ ಸಾಹಿತ್ಯ. ಯಕ್ಷಗಾನದ ಆದ್ಯ ಪ್ರಸಂಗಕಾರರು ಯಾರೆಂಬುದು ತಿಳಿದಿಲ್ಲ. ದೊರೆತಿರುವ ಮೊದಲ ಕೃತಿ ವಾರಂಬಳ್ಳಿಯ ವಿಷ್ಣುವು ರಚಿಸಿದ 'ವಿರಾಟ ಪರ್ವ' ಎಂಬುದು.[೧] ಅದರ ಒಂದು ಹಸ್ತಪ್ರತಿಯ ಕಾಲವು ಕ್ರಿ.ಶ. ೧೫೬೪. ಅದಕ್ಕಿಂತ ಪೂರ್ವದಲ್ಲಿ ಯಕ್ಷಗಾನ ಪ್ರಸಂಗಗಳು ರಚಿತವಾಗಿದ್ದುವೆಂದು ಊಹಿಸುವುದಕ್ಕೆ ಎಡೆ ಇದೆ. ಆದಕಾರಣ ೧೫ನೆಯ ಶತಮಾನದಿಂದ ಯಕ್ಷಗಾನ ಪ್ರಸಂಗಗಳ ರಚನೆಯು ಮೊದಲಾಯಿತೆಂದು ಸ್ಥೂಲವಾಗಿ ಗ್ರಹಿಸಬಹುದು.

ದಾಸವಾಙ್ಮಯದ ಪರಂಪರೆಯು ಬೆಳೆದು ಬಂದುದೂ ಆ ಶತಮಾನದಿಂದಲೇ. ಅವೆರಡರಲ್ಲಿ ಮತ್ತೊಂದು ಸಾಮ್ಯವಿದೆ. ಗೇಯತೆಯೇ ಅವುಗಳ ಮುಖ್ಯ ಲಕ್ಷಣವಾದ್ದರಿಂದ, ವಿವಿಧ ರಾಗ, ತಾಳಗಳಲ್ಲಿಯ ಆ ಹಾಡುಗಳು, ಷಟ್ಪದಿ, ಕಂದ ಮುಂತಾದ ಮಾತ್ರಾ

ವೃತ್ತಗಳು ಎರಡೂ ಪ್ರಕಾರಗಳಲ್ಲಿ ಕಾಣಿಸಿಕೊಳ್ಳುತ್ತವೆ. ಅಂತೂ ಕನ್ನಡದ ಹಾಡುಗಬ್ಬವು ಇವೆರಡೂ ವಾಙ್ಮಯ ವಿಧಾನಗಳಿಗೆ ಸಮಾನವಾದ ರೀತಿಯಲ್ಲಿ ವಾಹಕವಾಗಿ ನಿಂತುದು ಗಮನಾರ್ಹವಾಗಿದೆ. ಹರಿದಾಸರಂತೆಯೇ ಹಾಡುಗಬ್ಬಗಳ ರಚನೆಯಲ್ಲಿ ಯಕ್ಷಗಾನ ಕವಿಗಳು ನಿರಾಯಾಸವಾದ ಸಿದ್ಧಿಯನ್ನು ಪಡೆದಿದ್ದರು. ಹೀಗೆ ಸಾಮಾನ್ಯ ಜನತೆಗೆ ಉತ್ತಮ ಸಂಸ್ಕಾರವನ್ನು ನೀಡುವಲ್ಲಿ ದಾಸವಾಙ್ಮಯ ಮತ್ತು ಯಕ್ಷಗಾನ ಪ್ರಸಂಗಗಳು ಸಂತತವಾಗಿ ನೆರವಾದವು. ಉತ್ತರದಲ್ಲಿ ಹಾಗೂ ಕೆಲಮಟ್ಟಿಗೆ ಪೂರ್ವ ಭಾಗದಲ್ಲಿ ದಾಸವಾಙ್ಮಯವು ಆ ಕೆಲಸವನ್ನು ನೆರವೇರಿಸಿದರೆ, ನಾಡಿನ ಪಶ್ಚಿಮ, ದಕ್ಷಿಣ ದಿಕ್ಕುಗಳಲ್ಲಿ ಯಕ್ಷಗಾನವು ನೆಲೆನಿಂತು ಆ ಕೆಲಸ ಮಾಡಿತು.

ಯಕ್ಷಗಾನ ಕವಿಗಳಲ್ಲಿ ಅನೇಕರು ಶ್ರೀಸಾಮಾನ್ಯರು. ಒಟ್ಟಿನಲ್ಲಿ ಬಹುಶ್ರುತರು. ರಾಮಾಯಣ, ಭಾರತ, ಭಾಗವತ ಮೊದಲಾದ ಪುರಾಣ ಕಾವ್ಯಗಳನ್ನು ಬೇರೆ ಹಲವು ಪ್ರಸಿದ್ಧ ಪುರಾಣಗಳನ್ನು ಓದಿ, ಕೇಳಿ ತಿಳಿದಿದ್ದರು. ಕನ್ನಡದಲ್ಲಿ ಅವರ ಕಾವ್ಯವ್ಯಾಸಂಗವು ಕುಮಾರವ್ಯಾಸ, ಲಕ್ಷ್ಮೀಶ, ಕುಮಾರವಾಲ್ಮೀಕಿ, ಚಾಟುವಿಠಲ–ಮೊದಲಾದ ಕವಿಕೃತಿಗಳಿಗೆ ಪರಿಮಿತವಾದುದು. ಅವರ ಸ್ಫೂರ್ತಿವಿಶೇಷವೆಂದರೆ ತಮಗಿಂತ ಹಿಂದಿನವರ ಯಕ್ಷಗಾನ ಪ್ರಯೋಗಗಳೇ. ಇವಿಷ್ಟೇ ಸಾಧನ ಸಂಪತ್ತಿಯಿಂದ, ೧೭–೧೯ನೆಯ ಶತಮಾನಗಳ ಅವಧಿಯಲ್ಲಿ ನಾನೂರಕ್ಕೆ ಮಿಕ್ಕಿ ಯಕ್ಷಗಾನ ಕೃತಿಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ಹಲವಾರು ಕಾವ್ಯಸತ್ವದಿಂದ ಕೂಡಿವೆ.*

ಯಕ್ಷಗಾನದ ಕಥೆಗಳಿಗೆ ಮೇಲೆ ಹೇಳಿದ ಪುರಾಣಗಳೇ ಪ್ರಮುಖ ಆಕರಗಳು. ಸ್ಕಾಂದ, ಭವಿಷ್ಯೋತ್ತರ, ದೇವೀ ಭಾಗವತಗಳಿಂದಲೂ ಕಥಾವಸ್ತುವನ್ನು ಆಯ್ದುಕೊಂಡದ್ದಿದೆ. ಇವೆಲ್ಲವುಗಳಿಂದ ಸಾವಿರಾರು ಕಥಾನಕ/ಆಖ್ಯಾಯಿಕೆಗಳು ಹೊರಡಬಹುದಾದರೂ ಯಕ್ಷಗಾನ ಕವಿಗಳ ಕೈಗೆ ಎಟಕಿದಂಥ ಪ್ರಸಂಗಗಳು ನೂರೈವತ್ತರಷ್ಟು ಮಾತ್ರ. ಅದಕ್ಕೆ ಕಾರಣ ಯಕ್ಷಗಾನ ಪ್ರಸಂಗಗಳಿಗೆ ಶೃಂಗಾರ, ವೀರ ಇವೆರಡೇ ರಸಗಳು ಪ್ರಧಾನವಾಗಿದ್ದುದು. ಅವುಗಳ ಕಥಾವಸ್ತು ಎಂದರೆ ಯುದ್ಧ/ ವಿಜಯ ಇಲ್ಲವೇ ಪರಿಣಯ/ಕಲ್ಯಾಣಗಳು. ಕುಣಿತದ ವೈಭವಕ್ಕೆ ಕಾಳಗದ ಸನ್ನಿವೇಶವೇ ಹೆಚ್ಚು ಸೂಕ್ತ. ಒಮ್ಮೊಮ್ಮೆ ಕಲ್ಯಾಣದ ಪ್ರಸಂಗಗಳಲ್ಲಿಯೂ ಕಾಳಗಗಳೇ ಪ್ರಮುಖವಾಗಿರುವುದುಂಟು. ಹೀಗೆ ವೀರ, ಶೃಂಗಾರ ರಸಗಳು ಪ್ರೇಕ್ಷಕರ ಮನಸ್ಸಿನಲ್ಲಿ ಚೆನ್ನಾಗಿ ಬಿಂಬಿಸುವಂತೆ ಅತಿರೇಕಗೊಂಡು ಚಿತ್ರಿತವಾದುದು ಯಕ್ಷಗಾನ ಪ್ರಸಂಗಗಳ

---

* ಯಕ್ಷಗಾನ ಕವಿಗಳು, ಹಳೆಯ ಕನ್ನಡಕವಿಗಳಂತೆಯೇ ಅಜ್ಞಾತರು. ಹೆಸರು, ಊರು, ಇಷ್ಟದೇವತೆ–ಇವಷ್ಟೇ ದೊರೆಯುತ್ತವೆ. ಅವರ ಕಾಲಾವಧಿಯನ್ನು ಗೊತ್ತುಹಿಡಿಯುವುದು ಇನ್ನಷ್ಟು ಕಷ್ಟಕರವಾದುದು. ಒಂದೇ ಕಥಾನಕವನ್ನು ಕುರಿತು ನಾಲ್ಕೈದು ಜನ ಕವಿಗಳು ಬರೆದದ್ದರಿಂದಲೂ ಪದ್ಯಗಳ ಪುನರುಕ್ತಿ, ಅನುಕರಣಗಳಿಂದಲೂ ಯಕ್ಷಗಾನ ಕವಿ/ಕೃತಿಗಳ ವಿಚಾರವು ಅನಿಶ್ಚಿತವಾಗಿಯೇ ಉಳಿಯುತ್ತದೆ.

ಸಾಮಾನ್ಯ ಗುಣಧರ್ಮವಾಗಿದೆ. ರೌದ್ರ, ಭಯ, ಕರುಣ– ಈ ರಸಗಳು ವೀರ ಶೃಂಗಾರಗಳಿಗೆ ಆಲಂಬವಾಗಿ ಹೊರಹೊಮ್ಮಬೇಕು. ಹಾಸ್ಯರಸವು ಹಾಸ್ಯಗಾರನ ಮಾತುಗಳಲ್ಲಿ ಹೆಚ್ಚಾಗಿ ವ್ಯಕ್ತವಾಗಬೇಕಲ್ಲದೆ ಪದ್ಯಗಳಲ್ಲಿ ಅಲ್ಲ.

ಭಕ್ತಿಯೂ ಒಂದು ರಸವೆಂದು ಲಾಕ್ಷಣಿಕವಾಗಿ ಗ್ರಹಿಸಿದರೆ ಯಕ್ಷಗಾನ ಪ್ರಸಂಗಗಳಲ್ಲಿ ಅದಕ್ಕೂ ಒಂದು ಸ್ಥಾನವಿದೆ. ದಶಾವತಾರ, ಭಾಗವತ ಇಲ್ಲವೆ ಭವಿಷ್ಯೋತ್ತರ ಪುರಾಣಗಳ ಕಥೆಗಳಲ್ಲಿ ಹರಿಭಕ್ತಿಯೇ ಪ್ರಧಾನ. ಇತ್ತ ಸ್ಕಾಂದ, ಶಿವ ಪುರಾಣಗಳ ಕಥೆಗಳಲ್ಲಿ ಹರನ ಪಾರಮ್ಯವು ಕಂಡು ಬಂದರೆ ಶೇಷ/ಆನಂದ ರಾಮಾಯಣಗಳ ಆಖ್ಯಾನಗಳೂ, ದ್ರೌಪದೀ ಪ್ರತಾಪದಂತಹ ಪ್ರಸಂಗಗಳೂ ಶಕ್ತಿ ದೇವತೆಯ ಮಾಹಾತ್ಮ್ಯೆಯನ್ನು ಪ್ರಸ್ತಾಪಿಸುವಂತಹವಾಗಿವೆ.

ಯಕ್ಷಗಾನ ಕವಿ ಪರಂಪರೆಯಲ್ಲಿ ಪಾರಂಬಳ್ಳಿಯ ವಿಷ್ಣುವಿನ ಅನಂತರ ೧೭ನೆಯ ಶತಮಾನದ ಪ್ರಸಿದ್ಧ ಯಕ್ಷಗಾನ ಕವಿಗಳೆಂದು ನಗಿರೆಯ ಸುಬ್ಬ ಹಾಗೂ ದೇವಿದಾಸ- ಇವರನ್ನು ನೆನೆಯಬೇಕು. ಧ್ವಜಪುರದ ನಾಗಪ್ಪಯ್ಯ ಇನ್ನೊಬ್ಬ ಮಾನನೀಯ ಕವಿ. ಅವನ 'ಚಂದ್ರಾವಳೀ ಪ್ರಸಂಗ'ವು ಶಿವರಾಮ ಕಾರಂತರ ದೃಷ್ಟಿಯಲ್ಲಿ ಅದ್ವಿತೀಯ ಕೃತಿ.[೨] ೧೮ನೆಯ ಶತಮಾನದಲ್ಲಿ ಕೆಲವು ರಾಮಾಯಣ ಪ್ರಸಂಗಗಳೂ, ರುಕ್ಮಿಣೀ ಸ್ವಯಂವರ, ಪಾರಿಜಾತಾದಿ ಪ್ರಸಂಗಗಳೂ ರಚಿತವಾದವು. ಇವೆಲ್ಲ ಪ್ರಸಂಗಗಳ ಕರ್ತೃ ಪಾರ್ತಿ ಸುಬ್ಬನೇ ಅಥವಾ ಅಜಪುರದ ಸುಬ್ಬನೇ–ಎಂಬುದು ಸಮಸ್ಯೆಯ ಸುಳಿಯಲ್ಲಿದೆ. ಏನಿದ್ದರೂ ಆ ಕೃತಿ ಸಮೂಹದಿಂದ ಯಕ್ಷಗಾನ ವಾಙ್ಮಯವು ಸಮೃದ್ಧವಾಯಿತು. ಇದೇ ಶತಮಾನದಲ್ಲಿ ಅಜಪುರದ ಸುಬ್ಬನ ಮಗನಾದ ವೆಂಕಟನು ಮೈರಾವಣ ಕಾಳಗವನ್ನು ಬರೆದಿದ್ದಾನೆ. ರಾವಣ, ಮೈರಾವಣ–ಈ ರಾಕ್ಷಸದ್ವಯದ ವೇಷ, ಕುಣಿತಗಳು ಅದ್ಭುತ, ಭಯಾನಕ ಭಾವಗಳನ್ನು ಹುಟ್ಟಿಸುವಂಥವು. ಅದಕ್ಕೆ ಅನುಗುಣವಾಗಿ ಪದ್ಯ ರಚನೆ ಇರಬೇಕಾಗುತ್ತದೆ. ವೆಂಕಟನು ಅದನ್ನು ಸಾಧಿಸಿದ್ದಾನೆ. ಹಟ್ಟಿಯಂಗಡಿ ರಾಮಭಟ್ಟನು ಇನ್ನೊಬ್ಬ ಗಣನೀಯ ಪ್ರಸಂಗಕಾರನು. ಅವನು ಬರೆದಿರುವ ಪ್ರಸಂಗಗಳು ಇಂದಿಗೂ ಪ್ರಯೋಗವಾಗುತ್ತಿರುವುದು ಆ ಕೃತಿಗಳ ಸುಭಗತೆ, ಸೌಷ್ಟವಗಳಿಗೆ ಸಾಕ್ಷಿಯಾಗಿದೆ.

ಪೌರಾಣಿಕ ಕೃತಿಗಳಲ್ಲದೆ, ಐತಿಹಾಸಿಕ ವಿಷಯಗಳನ್ನು ಯಕ್ಷಗಾನಕ್ಕೆ ಅಳವಡಿಸಿಕೊಳ್ಳುವ ಮನೋಧರ್ಮವು ೧೮ನೆಯ ಶತಮಾನದಲ್ಲಿ ವ್ಯಕ್ತವಾಯಿತು. ವೈದಿಕ ಪುರಾಣಗಳನ್ನು ಸ್ವೀಕರಿಸಲೊಲ್ಲದ ಜೈನರೂ, ಶಿವಶರಣರಿಗೆ ಪ್ರಾಶಸ್ತ್ಯವನ್ನು ಕೊಡಬಯಸಿದ ವೀರಶೈವರೂ ಆ ಬಗೆಯ ಕೃತಿಗಳಿಗೆ ಮನಸ್ಸುಗೊಟ್ಟರು. ಬೊಮ್ಮಯ್ಯನ 'ಆದಿ ಪರಮೇಶ್ವರ ಪುರಾಣ', ಭಾಳಾಕ್ಷನ 'ಕರಿಭಂಟನ ಕಥೆ', 'ಕಸ್ತೂರಿ ಸಿದ್ಧನ', 'ಚೋರ ಕಥೆ' ಈ ಜಾತಿಗೆ ಸೇರಿದವುಗಳು. ಈ ಪ್ರಭೇದವು ಮೊದಲು ಮಲೆನಾಡಿನಲ್ಲಿ

ತಲೆದೋರಿತೆಂದು ತೋರುತ್ತದೆ. ಆದರೆ ಪೌರಾಣಿಕ ಕೃತಿಗಳೇ ಪ್ರಭಾವಶಾಲಿಯಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂಥ ಚಾರಿತ್ರಿಕ ಯಕ್ಷಗಾನ ಪ್ರಸಂಗಗಳು ಅಳುಕುತ್ತಲೇ ಕಾಲಿಟ್ಟವು.

ಹೀಗೆ ೧೮ನೆಯ ಶತಮಾನದ ಕೊನೆಯ ಹೊತ್ತಿಗೆ ಯಕ್ಷಗಾನ ಪ್ರಸಂಗಗಳ ಸ್ವರೂಪವು ಸ್ಥಿರಪಟ್ಟಿದ್ದಿತಲ್ಲದೆ ಮುಖ್ಯವಾದ ಎಲ್ಲ ಕಥಾನಕಗಳು ರಂಗಸ್ಥಳದ ಮೇಲೆ ಬೆಳಕು ಕಂಡಿದ್ದವು. ೧೯ನೆಯ ಶತಮಾನವು ಯಕ್ಷಗಾನ ಚರಿತ್ರೆಯ ವಿಸ್ತಾರ ಕಾಲವೆನ್ನಬಹುದು. (ದಾಸ ಸಾಹಿತ್ಯದಲ್ಲಿಯೂ ಇದೇ ಬಗೆಯ ವಿಸ್ತಾರವನ್ನು ಕಂಡಿದ್ದೇವೆ.) ಆ ಶತಮಾನದಲ್ಲಿ ಹಳೆಯ ಕ್ರಮವನ್ನು ಅನುಸರಿಸಿಯೇ ಪ್ರಸಂಗಗಳನ್ನು ಹೊಸತಾಗಿ ರಚಿಸಿದ್ದು ಕಂಡುಬರುತ್ತದೆ. ಸ್ಥೂಲವಾಗಿ ನೋಡೋಣ :

## ೮.೨ ಪ್ರಮುಖ ಪ್ರಸಂಗಕಾರರು

**ಭೀಮ**ನೆಂಬ ಕವಿಯು ರಾಜಸೂಯ ಅಥವಾ ಸಭಾಪರ್ವವನ್ನು ಬರೆದಿದ್ದು, ಅದು ಹಲವು ದಶಕಗಳ ಹಿಂದೆ ಮುದ್ರಿತವಾಗಿದೆ. ಈತ ದೇಶಸ್ಥ ಬ್ರಾಹ್ಮಣನು. ಇವನ ತಂದೆಯ ಹೆಸರು ಕೃಷ್ಣ. ಗುರು ಶಿವರಾಮನೆಂಬಾತನು. ಮುದ್ರಿತ ಪ್ರತಿಯಲ್ಲಿ ಪ್ರಕಾಶಕರು, ಕವಿಯು ಕಲ್ಯಾಣಿಯವನು ಎಂದು ಹೇಳಿದ್ದಾರೆ. 'ಕವಿಯ ಬರೆಹದಲ್ಲಿ ಭಾಷೆಯ ನಯ ಮತ್ತು ಪ್ರೌಢಿಮೆಗಳು ಕಾಣಿಸುತ್ತವೆ.' 'ಈತ ತೀರ ಸಾಮಾನ್ಯ ಕವಿಯಾಗಿ ಕಾಣುವುದಿಲ್ಲ' ಎಂಬ ಅಭಿಪ್ರಾಯವಿದೆ. ಅದರ ಶ್ರೇಯಸ್ಸಿನ ಅರ್ಧ ಪಾಲನ್ನು ಕುಮಾರವ್ಯಾಸನಿಗೆ ಸಲ್ಲಿಸಬೇಕಾದೀತು! ಕಥನಕ್ರಮದಲ್ಲಿ ಭೀಮನು ಅವನನ್ನೇ ಅನುಸರಿಸಿದ್ದಾನೆ. ಅಲ್ಲದೆ ಅನೇಕ ಪದ್ಯಗಳು ಅಲ್ಪ ವ್ಯತ್ಯಾಸಗಳೊಡನೆ ಕುಮಾರವ್ಯಾಸನಿಂದ ಎತ್ತಿಕೊಂಡಂತಿವೆ.

ಈ ಕೆಳಗಿನ ನಾರದ ವರ್ಣನೆಯನ್ನು ಗಮನಿಸಬೇಕು :

ದಣಿಯದಾತನ ಬೆರಳು ನಾರಾ –
ಯಣರವದ ವೀಣೆಯಲಿ ಹೃದಯಾಂ–
ಗಣಕೆ ಅಲಸಿಕೆದೋರದಾ ಹರಿಚರಣ ಕೇಳಿಯಲಿ ॥

– ಭೀಮಕವಿ

ದಣಿಯದಾತನ ಬೆರಳು ನಾರಾ
ಯಣರವದ ವೀಣೆಯಲಿ ಹೃದಯಾಂ
ಗಣದ ಸೇವೆಗೆ ಬಿಡಯವಾಗದು ಕೃಷ್ಣ ಪದ ಕೇಳಿ ॥

– ಕುಮಾರವ್ಯಾಸ

ಇನ್ನೊಂದು ಉದಾಹರಣೆ :

ಕುಶಲವೆಮಗಿನ್ನೈದೆ ನೀನೀ
ವಸುಮತೀ ವಧುಗೊಳ್ಳಿದನೆ ಶೋ
ಭಿಸುವದೇ ಭವದಾಜ್ಞೆಯಲಿ ಕುಲಕೆಸೆವ ಚರಿತ ॥

— ಭೀಮಕವಿ

ಕುಶಲವೆಮಗಿಂದ್ಯೆದೆ ನೀನೀ
ವಸುಮತೀ ವಧುಗೊಳ್ಳಿದನೆ ಶೋ
ಭಿಸುವದೇ ಭವದಾಜ್ಞೆಯಲಿ ವರ್ಣಾಶ್ರಮಾಚಾರ ॥

— ಕುಮಾರವ್ಯಾಸ

ಕುಮಾರವ್ಯಾಸನ ಭಾವ, ಶಬ್ದಗಳನ್ನು ನೇರವಾಗಿ ಹೀಗೆ ಎತ್ತಿಕೊಂಡಿದ್ದರೂ ಆತನ ಪದ್ಯಗಳ ಉಚಿತ ಆಯ್ಕೆಯಲ್ಲಿ ಮತ್ತು ಭಾಮಿನೀ ಷಟ್ಪದಿಗಳನ್ನು ವಿವಿಧ ರಾಗ, ತಾಳಗಳಿಗೆ ಅಳವಡಿಸಿಕೊಳ್ಳುವುದರಲ್ಲಿ ಭೀಮಕವಿ ಜಾಣ್ಮೆಯನ್ನು ತೋರಿದ್ದಾನೆ. ಕೆಲವೆಡೆ ಯಕ್ಷಗಾನ ಪ್ರಸಂಗಗಳಿಗೆ ಹೊಂದಿಕೊಳ್ಳದ ವಿವರಗಳು ಬಂದಿವೆ (ಉದಾಹರಣೆಗೆ ಧರ್ಮರಾಜನಿಗೆ ನಾರದನ ವಿವರವಾದ ಉಪದೇಶ). ಅಲ್ಲದೆ ಯಕ್ಷಗಾನ ಪದ್ಯಗಳ ಅರ್ಥಸ್ಪಷ್ಟತೆಗೆ ತೊಡಕಾದ ಚಿತ್ರಕವಿತ್ವವೂ ತಲೆದೋರಿದೆ. ಇದೊಂದು ಉದಾಹರಣೆ :

ಕುವಲಯಕಧಿಪತಿಯಪ್ಪನೆ
ತವಯುಕ್ತ ಲಕ್ಷಣವಿಲ್ಲದಿರ್ದೊಡೆ ರಾಜಂ ॥
ಕುವಲಯಕಧಿಪತಿಯಪ್ಪನೆ
ತವಯುಕ್ತ ಲಕ್ಷಣವಿಲ್ಲದಿರ್ದೊಡೆ ರಾಜಂ ॥

ಇದೇ ಕಥೆಯನ್ನು ತಲೆಪ್ಪಾಡಿಯ ಓರ್ವ ಕವಿಯು (ಅಜ್ಞಾತ) ರಚಿಸಿದ್ದು (ರಾಜಸೂಯಾಧ್ವರ), ಅದು ಭೀಮಕವಿಯ ಪ್ರಸಂಗಕ್ಕಿಂತ ಹೆಚ್ಚು ಬಳಕೆಯಲ್ಲಿದೆ. ಅದರ ಕಾರಣವೆಂದರೆ ಆ ಕೃತಿಯ ಭಾಷೆಯು ನೇರವೂ ಸರಳವೂ ಆಗಿದ್ದುದು.

'ಸಮುದ್ರ ಮಥನ', 'ಚಂದ್ರಹಾಸ', 'ಬಿಲ್ಲಹಬ್ಬ—ಕಂಸವಧೆ'ಗಳೆಂಬ ಸುಪರಿಚಿತ ಪ್ರಸಂಗಗಳನ್ನು ರಚಿಸಿದವ ಮಟ್ಟಿ **ವಾಸುದೇವ ಪ್ರಭು.*** ಇವನ ಊರು ಮೂಲ್ಕಿ. ಮೇಲಣ ಕೃತಿಗಳಲ್ಲಿ ಅಲ್ಲಿಯ ವಿಘ್ನೇಶನನ್ನೂ, ವಳಲಂಕೆಯ ಗುರು ವೆಂಕಟೇಶನನ್ನೂ

* ಮಟ್ಟಿ ವಾಸುದೇವ ಪ್ರಭು ೧೮ನೆಯ ಶತಮಾನದವನೆಂದು 'ಯಕ್ಷಗಾನ ಬಯಲಾಟ' ದಲ್ಲಿ ಉಕ್ತವಾಗಿದೆ. ಇವನ ಒಂದು ಕೃತಿಯ ತಾಡವೋಲೆಯ ವರ್ಷವು ೧೮೧೪ ಎಂದಿರುವುದರಿಂದ ಅದಕ್ಕೂ ೫೦ ವರ್ಷಗಳ ಹಿಂದಿನ ರಚನೆ ಅದಾಗಿರಬೇಕೆಂದು ಎಣಿಕೆ ಮಾಡಲಾಗಿದೆ. ಮೂಲ ಮತ್ತು ಅದರ ಪ್ರತಿಗಳ ನಡುವಿನ ಅಂತರವು ಅರ್ಧ ಶತಮಾನವೇ ಇರಬೇಕೆಂಬುದನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂದಿಲ್ಲ. ಕವಿಯ ಮೊಮ್ಮಗನ ಮೊಮ್ಮಗನೊಬ್ಬ ಮಂಗಳೂರಿನಲ್ಲಿ ಜೀವಂತನಿರುವನೆಂಬ

ತಪ್ಪದೆ ಸ್ತುತಿಸಿದ್ದಾನೆ. ಆದರೆ ಇವನದೆಂದೇ ಪ್ರಚಲಿತವಿರುವ 'ರಾಧಾವಿಲಾಸ' ದಲ್ಲಿ ಈ ಸ್ತುತಿಗಳಿಲ್ಲ. ಇದು ಮುಖ್ಯತಃ ಶೃಂಗಾರ ಕಾವ್ಯ. ಇವನ ಪದ್ಯಗಳಲ್ಲಿ ಶೃಂಗಾರ ಭಾವವು ತುಸು ಹೆಚ್ಚೆಂದು ತೋರಿದರೂ ಅದು ಅಂದಿನ ಯಕ್ಷಗಾನ ಕವಿಗಳ ಮನೋಧರ್ಮಕ್ಕೆ ಅನುಗುಣವಾಗಿದ್ದಿತೆನಬಹುದು. ಜೊತೆಗೆ ಕರುಣಾರಸವನ್ನೂ ಹೃದ್ಯವಾಗಿ ಚಿತ್ರಿಸಬಲ್ಲನೆಂಬುದಕ್ಕೆ ಅಲ್ಲಲ್ಲಿ ನಿದರ್ಶನಗಳು ದೊರೆಯುತ್ತವೆ.

**ಮಯ್ಯವಟಿ ವೆಂಕಟರಮಣಯ್ಯನ** ಹುಟ್ಟೂರು ಸುರತ್ಕಲ್ಲಿನ ಹತ್ತಿರವಿರುವ ಇಂದಿನ ಮೈರ್ಪಾಡಿ ಎಂಬುದು. ಈತನು ಸ್ಥಾನಿಕ ಬ್ರಾಹ್ಮಣನು. ತಂದೆ ತಿಮ್ಮ ಸಂಕಯ್ಯನು. ವೃತ್ತಿಯಲ್ಲಿ ಶಾನುಭೋಗ. ವೆಂಕಟರಮಣಯ್ಯನೂ ಕುಂಬಳೆಯ ನೆರೆಯ ಮಾಯಿಪ್ಪಾಡಿಯಲ್ಲಿ ಶಾನುಭೋಗಿಕೆಯನ್ನು ಮಾಡುತ್ತ ತನ್ನ ಇಳಿವಯಸ್ಸಿನಲ್ಲಿ ಸ್ವಗ್ರಾಮದಲ್ಲಿಯೆ ಉಳಿದನು. ಅವನ ಕೃತಿಗಳಲ್ಲಿ 'ಪ್ರಹ್ಲಾದ ಚರಿತ್ರೆ'ಯು ಹೆಚ್ಚು ಜನಪ್ರಿಯವಾದುದು. ಈಚೆಗೆ 'ಮದಾಲಸಾ ಕಲ್ಯಾಣ' 'ಕಾವೇರಿ ಮಾಹಾತ್ಮ್ಯೆ' ಮೊದಲಾದ ಪ್ರಸಂಗಗಳೂ ಬೆಳಕಿಗೆ ಬಂದಿವೆ.[೩] ಇವನ ಪ್ರಸಂಗಗಳ ಭಾವ-ಭಾಷೆಗಳು ಸುಭಗವಾದುವುಗಳು. ಪದ್ಯರಚನೆ ಸನ್ನಿವೇಶಕ್ಕೊಪ್ಪುವಂತಿದೆ. ಮಗ ಹಿರಣ್ಯಾಕ್ಷನ ಮರಣಕ್ಕಾಗಿ ದಿತಿಯು ದುಃಖಪಟ್ಟ ಬಗೆಯನ್ನು ನೋಡಬಹುದು :

ಮಗುವೆ ನೀ ಮಡಿದೆಯಲ್ಲ । ನಿರ್ದಯದೊಳಿಂ-
ತಗಲಿ ನೀ ಪೋದೆಯಲ್ಲ ॥
ಹಗೆಯೇನು ಹರಿಗೆ ಬಂತು । ಎನ್ನಯ ಮಹಾ -
ಸುಗುಣನನು ಕೊಲ್ಲಲಿಂತು ॥
ಆಡಿಸುವಂಥ ಕೈಗೆ । ನಿನ್ನನು ಮುದ್ದು
ಮಾಡಿ ಪೊರೆದ ತಾಯಿಗೆ
ಕೇಡನೀಯುತ ವಂಚಿಸಿ । ಬರಿದೆ ಯೆತ್ತ -
ಲೋಡಿ ಪೋದೆಯೊ ಸಾಹಸಿ ॥

ತಾಯಿಯ ದುಃಖವನ್ನು ಕಂಡು ಕನಲಿದ ಹಿರಣ್ಯಕಶಿಪುವು ಹರಿಯನ್ನು ಕೊಂದು ಸೇಡು ತೀರಿಸಿಕೊಳ್ಳಲು ಪ್ರತಿಜ್ಞೆ ಮಾಡಿದ ಬಗೆ ಇಂತಿದೆ :-

---

ಇನ್ನೊಂದು ಕಾರಣವನ್ನು ಲೆಕ್ಕಕ್ಕೆ ಹಿಡಿದರೂ ಕಪಿಯು ನೂರು ವರ್ಷದಷ್ಟೆ ಹಿಂದಿನವನಾಗುತ್ತಾನೆ. ಸಮುದ್ರ ಮಥನದಲ್ಲಿ ಋಷಿ ಹಾಗೂ ಕಾವಲುಗಾರನ ಸಂಭಾಷಣೆಯ ಕಾಲಕ್ಕೆ ಹಿಂದುಸ್ತಾನೀ ಹಾಡುಗಳು ಬರುವುದರಿಂದ ಕಪಿಯು ೧೮ನೆಯ ಶತಮಾನದಷ್ಟು ಹಳಬನಲ್ಲವೆನಿಸುತ್ತದೆ. 'ಗ್ರಂಥಕರ್ತರ ಚರಿತ್ರಕೋಶ' ದಲ್ಲಿ ಕಪಿಯ ಮರಣ ವರ್ಷವು ೧೮೭೫ ಎಂದಿದೆ. ಅಂತೂ ಇವನು ೧೯ನೆಯ ಶತಮಾನದವನೆಂದೇ ತಿಳಿಯೋಣ. ಇವನು ಕೆಲವು ಕೀರ್ತನೆಗಳನ್ನು ರಚಿಸಿದ್ದಾನೆ.

ಹೆತ್ತವ್ವೆಯ ಮನ ಮರುಕವ ಕಾಣುತ
ಮೃತ್ಯುಂಜಯನಂತೆ
ಚಿತ್ತದಿ ಖತಿಯನ್ನು ತಾಳುತಲೆಂದನು
ಪೃಥ್ವಿಯು ಬಿರಿವಂತೆ ॥
ಹರಿಯೆಂಬಧಮಗೆ ನಾನಾ ಯತ್ನದಿ
ಮರಣವನೆಸಗದಿರೆ
ತರಳನೆ ನಿನಗೆ ಗಿರೀಶನ ಭಜಕನೆ
ಧುರಧೀರನೆ ಭಟನೆ
ಸಿಂಧುವಿನೊಳಗಿಹೆ ಬಂದವರಾರೆನು-
ತೆಂದರಿತಿಹ ಮನದಿ
ಇಂದಿರೆರಮಣನ ಬಿಡೆನೆಂದಿಗು
ತಂದೆ ಕಶ್ಯಪನಾಣೆ ॥

ತನ್ನ ಜೀವಿತ ಕಾಲದಲ್ಲಿ ಪ್ರಸಿದ್ಧ ಭಾಗವತನೆನಿಸಿದ್ದ **ಸಂಕಯ್ಯನು** ಪ್ರಸಂಗಕಾರನೂ ಆಗಿದ್ದನು. ಅವನು ವಿಟ್ಲ ಸೀಮೆಯ ಪೆರ್ಮುಡಿಯವನು. ಇವನ ಮನೆತನವು ಒಂದಿಲ್ಲೊಂದು ರೀತಿಯಲ್ಲಿ ಯಕ್ಷಗಾನ ಕಲೆಯನ್ನು ಪೋಷಿಸಿಕೊಂಡು ಬಂದಂತಹುದು. ಇವನ ಅಣ್ಣ ಈಶ್ವರ ಭಟ್ಟನು ಆ ಕಾಲದಲ್ಲಿ ಪ್ರಖ್ಯಾತ ಹಾಸ್ಯಗಾರನೆನಿಸಿದ್ದನು. ಸಂಕಯ್ಯನು ಸುರುವಿಗೆ ವಿಟ್ಲದ ಅರಮನೆಯಲ್ಲಿ ಪುರಾಣವಾಚನ ನಡೆಸುತ್ತಿದ್ದನು. ತುಳು ಭಾಷೆಯು ತಾಯ್ನುಡಿಯಾಗಿದ್ದ ಅಲ್ಲಿಯ ರಾಣೀವಾಸದವರಿಗಾಗಿ ಸಂಕಯ್ಯನು ಸುಬ್ಬನ ಪಂಚವಟಿಯನ್ನೂ ವಾಲಿ-ಸುಗ್ರೀವರ ಕಾಳಗವನ್ನೂ ತುಳು ಭಾಷೆಯಲ್ಲಿ ಅನುವಾದಿಸಿದನು. ಅವಕ್ಕೆ ಸ್ವಂತದ ಕೆಲವು ಪದ್ಯಗಳನ್ನೂ ಸೇರಿಸಿದ್ದಾನೆ. ಕನ್ನಡದಲ್ಲಿಯ ಅವನ ಸ್ವತಂತ್ರ ಕೃತಿ 'ಕೃಷ್ಣಾರ್ಜುನ ಕಾಳಗ' ಪ್ರಸಂಗವು ಇಂದಿಗೂ ಪ್ರಚಲಿತವಾಗಿದೆ. ಇವನಿಂದ ರಚಿತವಾದ ಭಕ್ತಿಪರ ಹಾಡುಗಳು 'ಭಕ್ತಿ ಚೌಪದನ' ವೆಂಬ ಸಂಗ್ರಹದಲ್ಲಿ ಅಡಕವಾಗಿವೆ. ಉತ್ತಮ ಕಂಠಶ್ರೀಯನ್ನು ಹೊಂದಿದ್ದ ಈ ಭಾಗವತನ ಹಾಡುಗಾರಿಕೆಯು ಒಂದು ಪಡೆನುಡಿಯಾಗಿ ನಿಂತಿದೆ. ಇವನ ವಿದ್ವತ್ತು, ಹಾಡುಗಾರಿಕೆಗಳಿಗೆ ಮೆಚ್ಚಿದ ವಿಟ್ಲದ ಅಂದಿನ ಬಲ್ಲಾಳ ಅರಸರು ಅವನನ್ನು ಆಸ್ಥಾನ ಕವಿಯೆಂದು ಗೌರವಿಸುತ್ತಿದ್ದರು.

**ಮೂಲ್ಕಿ ರಾಮಕೃಷ್ಣಯ್ಯನು** ಸಹ (೧೮೩೦-೧೯೯೦) ಮೂಲತಃ ಭಾಗವತನೇ. ಆಶುಕವಿಯಾಗಿದ್ದುದರಿಂದ ಅನೇಕ ಪದಗಳನ್ನು ರಚಿಸಿದ್ದಾನೆ. 'ಸಂಕೀರ್ತನ ಮಾಲೆ'ಯಲ್ಲಿ ಅವನ ವಿವಿಧ ಗೀತಗಳು ಪ್ರಕಟವಾಗಿವೆ. ಬಾಸೆಲ್ ಮಿಶನಿನವರಲ್ಲಿ ಕನ್ನಡದ ಕೆಲಸಗಾರನಾಗಿದ್ದುದರಿಂದಲೋ ಏನೊ, ಏಸು ಕ್ರಿಸ್ತನ ಮೇಲೆ ೭೮ ಚೌಪದಿಗಳ

ಒಂದು ಸೊಗಸಾದ ಭಾವಗೀತೆಯನ್ನು ರಚಿಸಿದ್ದಾನೆ.[೬] ಇವನ 'ಕೃಷ್ಣಾರ್ಜುನ ಕಾಳಗ' ಮತ್ತು 'ಸುಧನ್ವ ಕಾಳಗ'– ಇವು ಜನಪ್ರಿಯ ಕೃತಿಗಳಾಗಿವೆ. ತಿರುಪತಿಯ ಭಕ್ತನಾಗಿ 'ವೆಂಕಟಗಿರಿ ಮಹಾತ್ಮೆ' ಮತ್ತು 'ಪದ್ಮಾವತಿ ಕಲ್ಯಾಣ' ಗಳನ್ನೂ ರಚಿಸಿದ್ದಾನೆ.*

ಉತ್ತರ ಕನ್ನಡ ಜಿಲ್ಲೆಯು ಯಕ್ಷಗಾನ ಕ್ಷೇತ್ರದಲ್ಲಿ ಹಿಂದೆ ಬಿದ್ದುದೇನಲ್ಲ. ಅಲ್ಲಿಯ ಸಭಾಹಿತ ಮನೆತನದವರು ಯಕ್ಷಗಾನ ಪರಂಪರೆಯನ್ನು ಕಾಯ್ದುಕೊಂಡವರಲ್ಲಿ ಒಬ್ಬರು. ಪ್ರಸಂಗಗಳ ಪ್ರತಿಗಳನ್ನು 'ಸಭಾಹಿತ ಪ್ರತಿ' ಎಂದು ಉಲ್ಲೇಖಿಸುವಷ್ಟು ಆ ಮನೆತನದ ಖ್ಯಾತಿ ಇದೆ. ಕಳೆದ ಶತಮಾನದಲ್ಲಿದ್ದ **ವಿಷ್ಣು ಸಭಾಹಿತ**ನು ಓರ್ವ ಗಣ್ಯ ಪ್ರಸಂಗಕಾರನು. ಹೊನ್ನಾವರ ಹಳದೀಪುರದ ಅಗ್ರಹಾರದಲ್ಲಿದ್ದ ನಾರಾಯಣ ಸಭಾಹಿತನ ಕಿರಿಯ ಮಗನೀತ. ಇಡಗುಂಜಿಯ ವಿಘ್ನೇಶ್ವರನು ಅವನ ಇಷ್ಟ ದೈವತ. ಇವನ ಕೃತಿಗಳೆಂದರೆ 'ಚಂದ್ರಹಾಸನ ಕಾಳಗ' ಮತ್ತು 'ಶತಾಸ್ಯ ರಾವಣ ಕಾಳಗ'.

**ಎಣ್ಣೆಮಡಿ ವೆಂಕಟರಮಣಯ್ಯ**ನು ಶಿರಾಲಿಯವನು. ಅಲ್ಲಿಯ ಗಣಪತಿಯ ಉಪಾಸಕನು. ಇವನ ಗುರುಗಳು ಚಿತ್ರಾಪುರ ಮಠದ ಕೇಶವಾಶ್ರಮ ಸ್ವಾಮಿಗಳು. ವೆಂಕಟರಮಣಯ್ಯನು ಶಿರಾಲಿ ಮುಂತಾದ ಕಡೆಗಳಲ್ಲಿ ಶಿಕ್ಷಕನಾಗಿದ್ದನು. ಅವನ ಹೆಸರಾಂತ ಕೃತಿಯೆಂದರೆ 'ಭೀಷ್ಮ ಪರ್ವ'. ಇದೇ ಕತೆಯನ್ನು ಉತ್ತರ ಕನ್ನಡಜಿಲ್ಲೆಯವನೇ ಆದ ದೇವಿದಾಸನು ಈ ಹಿಂದೆ ಬರೆದದ್ದನ್ನು ಇವನು ನೋಡಿರಬೇಕು.

**ಗೆರಸೊಪ್ಪೆ ಶಾಂತಪ್ಪಯ್ಯ**ನು ಬಹುಕಾಲ ಮಂಗಳೂರಿನಲ್ಲಿ ನೆಲಸಿದ್ದರೂ ಮೂಲತಃ ಅವನು ಉತ್ತರ ಕನ್ನಡಜಿಲ್ಲೆಯವನೇ. ಕೇಶವಾಶ್ರಮ ಸ್ವಾಮಿಗಳು ಇವನಿಗೂ ಗುರುಗಳಾಗಿದ್ದವರು. ಮಂಗಳೂರಿನ ಗಣಪತಿಯನ್ನೂ (ಶರವು?), ವೆಂಕಟ ರಮಣಯ್ಯನನ್ನೂ ಅವನು ತನ್ನ ಕೃತಿಗಳಲ್ಲಿ ಉಲ್ಲೇಖಿಸಿದ್ದಾನೆ. ಪಾಶ್ಚಾತ್ಯ ಶಿಕ್ಷಣದತ್ತ ಲಕ್ಷ್ಯ ಹೊರಳಿಸಿದ ಆರಂಭ ಕಾಲದವರಲ್ಲಿ ಇವನೂ ಒಬ್ಬ. ಅದರ ಬಲದಿಂದ ಸದರ ಅಮೀನ (ಹಿರಿಯ ನ್ಯಾಯಾಧೀಶ) ಹುದ್ದೆಗೆ ಏರಿದ್ದನು.

ಅಂದಿನ ದಿನಗಳಲ್ಲಿ, ಯಕ್ಷಗಾನ ಕಲೆಯು ಹೊಸ ವಿದ್ಯಾವಂತರ ಗಮನವನ್ನು ಸೆಳೆದಿರಲಿಲ್ಲ. ಅಷ್ಟೇ ಏಕೆ ಹೊಸ ನಾಗರಿಕತೆಯ ಪ್ರತಿಷ್ಠಿತ ವರ್ಗಕ್ಕೆ ಸೇರಿದವರು

---

* ಮೂಲ್ಕಿ ರಾಮಕೃಷ್ಣಯ್ಯನ ನೌಕರಿಗೆ ಸಂಬಂಧಿಸಿದ ಮೋಜಿನ ಸಂಗತಿಯೊಂದಿದೆ; ಅವನು ಎರಡು ಸಂದರ್ಭಗಳಲ್ಲಿ ತಾಡಮೋಲೆಯನ್ನು ಬಳಸಿಕೊಂಡಿದ್ದ. ಒಂದು, ಬೈಬಲಿನ ಒಂದು ಸಣ್ಣ ಪ್ರಸಂಗವನ್ನು ಕನ್ನಡದಲ್ಲಿ ಅನುವಾದಿಸಿ ತಾಡಮೋಲೆಯಲ್ಲಿ ಬರೆದದ್ದು, ಬೈಬಲ್ ಕೂಡ ಪ್ರಾಚೀನವಾದದ್ದು, ಪವಿತ್ರವಾದದ್ದು – ಎಂಬುದನ್ನು ಬಿಂಬಿಸುವುದಕ್ಕೆ, ಮತ್ತೊಂದು, ತನ್ನ ಸಂಬಳವನ್ನು ಹೆಚ್ಚಿಸಬೇಕು – ಎಂಬ ಮನವಿಗಾಗಿ! ಅದರ ಒಕ್ಕಣಿಕೆ ಹೀಗಿದೆ:

"Right Rev. Sir, with this I am completing by God's grace about 20th year of my service under the most indulgent shelter of your Mission. My service, all Reverends know very well. I wish your kindness and liberty that any promotion in my pay ... [Rest not clear]

ಅದನ್ನು ಅನಾದರದಿಂದ ಕಾಣುವ ಪರಿಸ್ಥಿತಿ ಕ್ರಮೇಣ ತಲೆದೋರಿತ್ತು. ಶಾಂತಯ್ಯನು ಅಂಥ ಪ್ರತಿಷ್ಠಿತನಾಗಿದ್ದರೂ ಯಕ್ಷಗಾನ ಕಲೆಯ ಕೈವಾರಿಯಾದುದು ಒಂದು ಮಹತ್ವದ ಅಂಶವಾಗಿದೆ. ಶಾಂತಯ್ಯನಿಗೆ ಯಕ್ಷಗಾನದಲ್ಲಿ ಜನ್ಮಜಾತವಾದ ಅಭಿರುಚಿ ಇದ್ದಿತು. ಆತನು ವೈದಿಕ ಧರ್ಮ ಹಾಗೂ ಸಾಹಿತ್ಯ ಗ್ರಂಥಗಳ ವ್ಯಾಸಂಗಮಾಡಿದ್ದನು. ಜೊತೆಗೆ ರಾಗ, ಮಟ್ಟುಗಳಲ್ಲಿ ಪರಿಣತಿಯನ್ನು ಪಡೆದಿದ್ದನು. ಕೆಲವು ಪ್ರಸಂಗಗಳನ್ನು ಸ್ವಯಂ ರಚಿಸಿದನಲ್ಲದೆ ಯಕ್ಷಗಾನದ ಪ್ರಸಾರವು ಅಗತ್ಯವೆಂಬ ಮನೋಭಾವದಿಂದ ಅದರ ಪ್ರಯೋಗಗಳಿಗೆ ಅಪ್ರತ್ಯಕ್ಷವಾಗಿ ಸಹಾಯ ಮಾಡಿದನು. ಕಚೇರಿಯ ಕೆಲಸವನ್ನು ಮುಗಿಸಿಕೊಂಡು ಬಂದೊಡನೆಯೇ ಮನೆಯ ಜನರನ್ನೊ, ತರುಣ ಕಲಾವಿದರನ್ನೋ ನೆರೆಯಿಸಿಕೊಂಡು ಹಾಡು, ಕುಣಿತಗಳಲ್ಲಿ ತೊಡಗಿರುತ್ತಿದ್ದ ಹವ್ಯಾಸ ಅವನದು. ಆತನ ಕೃತಿಯೊಂದನ್ನು (ರಾವಣ ದಿಗ್ವಿಜಯ) ಅಂದಿನ ಮಿಶನರಿಗಳು ಕ್ರಿ. ಶ. ೧೮೪೪ರಷ್ಟು ಹಿಂದೆಯೇ ಮುದ್ರಿಸಿದ್ದನ್ನು ನೋಡಿದರೆ, ತನ್ನ ಪರಿಚಯದ ಕೆಲವು ಯುರೋಪಿಯನ್ ಜನರಿಗೆ ಯಕ್ಷಗಾನ ಪ್ರಯೋಗಗಳನ್ನು ಅವನು ತೋರಿಸಿರಲಿಕ್ಕೂ ಸಾಕು.

ಅವನ ಪ್ರಸಂಗಗಳು ವಿವಿಧ ಪುರಾಣ ಕಾವ್ಯಗಳಿಂದ ಆಯ್ದುಕೊಂಡವುಗಳು. ಯುದ್ಧಕ್ಕೆ ಮೀಸಲಾದ ಭೀಷ್ಮ, ದ್ರೋಣ, ಕರ್ಣ ಪರ್ವಗಳೂ ಜರಾಸಂಧ ವಧೆಯೂ ಮಹಾಭಾರತದ ಪ್ರಸಂಗಗಳಾಗಿವೆ. ವಾಲ್ಮೀಕಿ ರಾಮಾಯಣದಲ್ಲಿ ದಶರಥನು ಕೈಕೇಯಿಗೆ ವರ ಕೊಡುವಲ್ಲಿಂದ ಸೀತಾ ವಿವಾಹದ ವರೆಗಿನ ಕಥೆಯು ಅವನ 'ಪುತ್ರಕಾಮೇಷ್ಟಿ' ಮತ್ತು 'ಸೀತಾ ಕಲ್ಯಾಣ' ಪ್ರಸಂಗಗಳಲ್ಲಿ ಹರಿದು ಬಂದಿದೆ. 'ಸೀತಾ ವಿಯೋಗ', 'ಲವಣ ಸಂಹಾರ' ಹಾಗೂ 'ರಾವಣ ದಿಗ್ವಿಜಯ' – ಇವು ಪ್ರಾಕೃತ ರಾಮಾಯಣದಿಂದ ಆಯ್ದ ಕಥಾನಕಗಳಾಗಿ ತೋರುತ್ತವೆ. 'ಸುರಥಸುಧನ್ವ ಕಾಳಗ'ವು ಜೈಮಿನಿ ಭಾರತದ ಕಥಾಂಶವಾಗಿದ್ದು, ಕವಿಯ ಶ್ರೀಕೃಷ್ಣ ಭಕ್ತಿಯನ್ನು ತೋರ್ಪಡಿಸುತ್ತದೆ. ಇದರ ಜೊತೆಗೆ 'ಏಕಾದಶೀ ಪ್ರಸಂಗ', 'ರುಕ್ಮಾಂಗದ ಚರಿತ್ರೆ' ಗಳನ್ನೂ ಸೇರಿಸಬೇಕು. ಇಂತು ವೀರ, ಕರುಣ, ಭಕ್ತಿ ಇವು ಮೂರೂ ರಸಗಳ ಚಿತ್ರಣದಲ್ಲಿ ಶಾಂತಯ್ಯನು ಯಶಸ್ವಿಯಾಗಿದ್ದಾನೆ. ಅದರಲ್ಲಿಯೂ ವೀರರಸಕ್ಕೆ ಅಗ್ರಪಟ್ಟ.

ಅವನ ಕೃತಿಗಳಲ್ಲಿ ಶ್ರೇಷ್ಠವೆನಿಸಿದ 'ಕರ್ಣಪರ್ವ' ಪ್ರಸಂಗದಲ್ಲಿ ವೀರ, ಕರುಣ ರಸಗಳು ಹಾಸುಹೊಕ್ಕಾಗಿ ಬೆರೆತಿವೆ. ಈ ಪ್ರಸಂಗಕ್ಕೂ ಇತರ ಭಾಗವತ, ಭಾರತ, ಕುಮಾರವ್ಯಾಸನ ಭಾರತಗಳೇ ಆಕರವಾಗಿದ್ದರೂ ಶಾಂತಯ್ಯನು ಮಾರ್ಮಿಕ ಸಂಭಾಷಣ ಪದ್ಯಗಳ ಮೂಲಕ ಅಲ್ಲಿಯ ಸನ್ನಿವೇಶಗಳಿಗೆ ಮೆರುಗನ್ನುಂಟುಮಾಡಿದ್ದಾನೆ. ದುರ್ಯೋಧನನು ಶಲ್ಯನಿಗೆ ಕರ್ಣ ಸಾರಥ್ಯದ ಸೂಚನೆ ಮಾಡಿದಾಗ ಶಲ್ಯನು 'ಇನ್ನು ಬಗುಳಿನೊಮ್ಮೆ ಕುರುಪತಿ' ಎಂದೂ, ಕರ್ಣನನ್ನು ಕುರಿತು 'ಎಲೆ ಮೊಗೇರರ ಮಗನೆ ಗಳುಹದಿರು' ಎಂಬುದಾಗಿಯೂ ಸಂಬೋಧಿಸಿದ್ದಾನೆ. ಅರ್ಜುನನಂತೂ ಅಣ್ಣನಾದ

ಧರ್ಮರಾಯನನ್ನು ಕುರಿತು 'ಷಂಡ ನೃಪತಿ, ಪಾತಕಿ, ನಿಷ್ಠುರ, ದುರಾತ್ಮ' ಎಂದು ಮುಂತಾಗಿ ಹೀಗಳೆಯುತ್ತಾನೆ. ಹಾಗೆ ನೋಡಿದರೆ ಅರ್ಜುನ–ಧರ್ಮರಾಜರಲ್ಲಿ ಘೋರ ವಾಗ್ವಾದವೇ ನಡೆಯುತ್ತದೆ. ಧರ್ಮರಾಜನಾದರೂ ಅರ್ಜುನನನ್ನು ನಿಂದಿಸುವದರಲ್ಲಿ ಹಿಂದೆ ಬಿದ್ದವನಲ್ಲ! ಪಾತ್ರ ವಿನ್ಯಾಸದ ರೇಖೆಗಳು ಹೀಗೆ ಗಡುಸಾಗಿ ತೋರಿದರೂ ಯಕ್ಷಗಾನ ಪ್ರಸಂಗಗಳಲ್ಲಿ ಇದು ಸ್ವಲ್ಪ ಮಟ್ಟಿಗೆ ಅನಿವಾರ್ಯವೇ. ಮುಂದೆ ಕರ್ಣನ ಅವಸಾನ ಚಿತ್ರಣದಲ್ಲಿ ಕರುಣಾ ರಸವು ಗಾಢವಾಗಿ ಹೊರಹೊಮ್ಮಿದೆ. ಕುಮಾರವ್ಯಾಸನಿಂದ ಕೆಲವು ಅಂಶಗಳನ್ನು ಸ್ವೀಕರಿಸಿಯೂ ಶಾಂತಯ್ಯನು ಕವಿತ್ವದಲ್ಲಿ ಸ್ವತಂತ್ರ ಭಾವವನ್ನು ತೋರಿದ್ದಾನೆ.

'ರಾವಣ ದಿಗ್ವಿಜಯ'ವು ಶಾಂತಪ್ಪಯ್ಯನ ಇನ್ನೊಂದು ಪ್ರಮುಖ ಕೃತಿ. ಅದರ ಕಥಾನಾಯಕನು ರಾವಣನಲ್ಲ; ಅವನ ಹಿರಿಯ ಮಗನು. 'ಸಮರದೊಳು ಶಕ್ರನಂ ಶೆರೆವಿಡಿದು ಜೈಸಿ ಸ್ವರ್ಗವನು ವಿಕ್ರಮದೊಳಿಂದ್ರಜಿತುವೆಂಬ ನಾಮವನು ಪಡೆದ' ಕಥೆಯಿದು. ಶಾಂತಯ್ಯನು ದೇವದಾನವರ ಸಮುದ್ರ ಮಥನ ಕಾಲದಲ್ಲಿ ಹುಟ್ಟಿದ ವಸ್ತುಗಳಿಗೆ ರಾಮಾಯಣದಲ್ಲಿಯ ಒಂದೊಂದು ಪಾತ್ರದ ಹೋಲಿಕೆಯನ್ನು ಕೊಟ್ಟಿದ್ದಾನೆ. ರಾಮಾಯಣವೆನ್ನುವ ದುಗ್ಧಾರ್ಣವಕ್ಕೆ ವಾಲ್ಮೀಕಿಯ ಸ್ಮೃತಿಯೇ ಮಂದರ ಪರ್ವತವಂತೆ!

> ವಿನುತ ವಾಲ್ಮೀಕಿ ಸ್ಮೃತಿ ಮಂದರದಿ ಮಥಿಸಲಾ ।
> ಜನಕ ಸಂಭವೆ ಲಕ್ಷ್ಮಿಸುಗ್ರೀವ ಕಲ್ಪತರು ।
> ಹನುಮ ಕೌಸ್ತುಭ ರತ ಸೌಮಿತ್ರಿ ಹಿಮಕಿರಣನಂಗದೈರಾವತ ಗಜಾ ॥
> ಅನಲ ಜೋಚ್ಚೈಶ್ರವ ಸುಷೇಮ ಸುಮನ ಸುಧೇನು ।
> ಘನ ವಿಭೀಷಣ ಸುಧಾ ರಾವಣೋತ್ಕಟ ಗರಳ ।
> ಜನಿಸಿರ್ದ ರಾಮಾಯಣಾಖ್ಯ ದುಗ್ಧಾರ್ಣವಂ ಶ್ರೇಯಸವನೆಮಗೀಯಲೀ ॥

ಈ ಉಪಮೆಯಲ್ಲಿಯ ನಾವೀನ್ಯವು ಹೃದ್ಯವಾಗಿದೆ. ರಾಕ್ಷಸನಾದ ರಾವಣನು ಉತ್ಕಟ ಗರಳನಷ್ಟೆ. ಶ್ರೀರಾಮನು ಅವನನ್ನು ವಧಿಸುವುದರ ಮೂಲಕ ಆ ಗರಳವನ್ನು ನುಂಗಿ ಶಿವ–ರಾಮನಾದ ಎಂಬುದಾಗಿ ಆ ಉಪಮೆಯನ್ನು ಮುಂದುವರಿಸಲಾಗಿದೆ!

## ೮೩. ಮುದ್ದಣ

ಹತ್ತೊಂಬತ್ತನೆಯ ಶತಮಾನದ ಯಕ್ಷಗಾನ ಕವಿಗಳಲ್ಲಿ ಮುದ್ದಣನೇ ಕಡೆಯವನು (೧೮೭೦–೧೯೦೧). ಪ್ರಮುಖನೂ ಅಹುದು. ಅವನ ಕಾವ್ಯಕರ್ಮಕ್ಕೆ ಯಕ್ಷಗಾನವೇ ಪ್ರೇರಣೆ ನೀಡಿತೆಂಬುದು ವಿದಿತವಾದ ವಿಷಯ. ತರುಣ ವಯಸ್ಸಿನಲ್ಲಿಯೆ ಆತನು ಯಕ್ಷಗಾನದ ಬಯಲಾಟ, ತಾಳ ಮದ್ದಲೆಗಳಲ್ಲಿ ಆಸ್ಥೆ ವಹಿಸುತ್ತಿದ್ದುದು ಸ್ಪಷ್ಟವೇ ಇದೆ. ಅಲ್ಲದೆ ತುಳುಭಾಷೆಯ ಪದಗಳನ್ನು ಕಟ್ಟಿ, ಅವುಗಳನ್ನು ತನ್ನ ಗೆಳೆಯರ ಕೂಟದಲ್ಲಿ

ರಸಿಕರಂತೆ ಹಾಡುವುದನ್ನೊ, ಉಡುಪಿಯ ನಾಟಕ ಮಂಡಳಿಯವರ ನಾಟಕಗಳಲ್ಲಿ ಒಂದೊಂದು ಸಲ ವಿದೂಷಕನ ವೇಷದಿಂದ ಸಭಿಕರಲ್ಲಿ ವಿನೋದಗೊಳಿಸುವುದಕ್ಕೊ ಯತ್ನಿಸುತ್ತಿದ್ದನಂತೆ.[೫] ಉಡುಪಿಯಲ್ಲಿ ವ್ಯಾಯಾಮ ಶಿಕ್ಷಕನಿದ್ದಾಗ ಅಲ್ಲಿಯ ಬೋರ್ಡ್ ಹೈಸ್ಕೂಲ್ ಗ್ರಂಥಾಲಯದ ಕನ್ನಡ ಕಾವ್ಯಗಳನ್ನು ತಿರುವಿ ಹಾಕಿದ್ದನು. ತನ ಕಾವ್ಯ-ಗುರುವಾದ ಮಳಲಿ ಸುಬ್ಬರಾಯರಿಂದ ವಿವಿಧ ಪುರಾಣ ಪುಸ್ತಕಗಳನ್ನೂ ಯಕ್ಷಗಾನ ಪ್ರಸಂಗಗಳನ್ನೂ ತಂದು ಓದಿದ್ದಲ್ಲದೆ ಸ್ವತಃ ಪ್ರಸಂಗಗಳನ್ನು ರಚಿಸುವ ದೃಷ್ಟಿಯಿಂದ ಹೊಸ ಕಥಾನಕಗಳಿದ್ದರೆ ಕೊಡಬೇಕಾಗಿ ಒಮ್ಮೆ ಸುಬ್ಬರಾಯರನ್ನು ಕೇಳಿಕೊಂಡನಂತೆ.[೬]

ಇಂತು ತನ್ನ ಎಳವರಯದಿಂದ ಬೆಳೆಸಿಕೊಂಡು ಬಂದ ಯಕ್ಷಗಾನ ಕಲಾಭಿರುಚಿಯಿಂದಾಗಿ ಮುದ್ದಣನು 'ಕುಮಾರ ವಿಜಯ', 'ರತ್ನಾವತೀ ಕಲ್ಯಾಣ'ಗಳೆಂಬ ಪ್ರಸಂಗಗಳನ್ನು ರಚಿಸಿದನು. ಈ ಕೃತಿಗಳಲ್ಲಿ ಮೊದಲು ಬರೆದದ್ದಾವುದೆನುವುದು ಖಚಿತವಾಗಿಲ್ಲ. ರಾ. ನರಸಿಂಹಾಚಾರ್ಯರು 'ಕುಮಾರ ವಿಜಯ'ವು ಮೊದಲು ರಚಿತವಾಯ್ತೆಂದು ಹೇಳುತ್ತಾರೆ. ಮಳಲಿ ಸುಬ್ಬರಾಯರ ಹೇಳಿಕೆಯ ಪ್ರಕಾರ 'ರತ್ನಾವತೀ ಕಲ್ಯಾಣ'ವು ಮೊದಲಿನದಾಗುತ್ತದೆ. ರಚನೆಯ ದೃಷ್ಟಿಯಿಂದ 'ರತ್ನಾವತಿ ಕಲ್ಯಾಣ'ವು ಚಿಕ್ಕದು; ಮತ್ತು ಸುಲಭವಾದುದು. 'ಕುಮಾರ ವಿಜಯ'ವು ಅದರ ಎರಡು ಪಟ್ಟು ದೊಡ್ಡದಿದೆ ಹಾಗೂ ಪ್ರೌಢವಾಗಿದೆ. ಮುದ್ದಣನು ತನ ಯಕ್ಷಗಾನ ಕೃತಿಗಳಲ್ಲಿ ತಂದ ಷಟ್ಪದಿ, ಕಂದ, ಸಾಂಗತ್ಯಾದಿ ಮಾತ್ರಾವೃತ್ತಗಳನ್ನು ಬಿಟ್ಟರೆ ಒಟ್ಟು ೪೩ ವಿವಿಧ ರಾಗಗಳ ಹಾಡುಗಳನ್ನು ಸೇರಿಸಿಕೊಂಡಿದ್ದಾನೆ. ಅವುಗಳಲ್ಲಿ 'ರತ್ನಾವತೀ ಕಲ್ಯಾಣ' ದಲ್ಲಿರುವ ೨೪ ರಾಗಗಳು 'ಕುಮಾರ ವಿಜಯ'ದಲ್ಲಿಯೂ ಇವೆ; ಮಾತ್ರವಲ್ಲ, ೧೯ ರಾಗಗಳು ಹೆಚ್ಚಿಗೆ ಸೇರಿವೆ. ಅವನ ಕಾವ್ಯ ಹಾಗೂ ಸಂಗೀತ ಪರಿಣತಿಯು ಬೆಳೆದದ್ದನ್ನು ಸೂಚಿಸುವಂಥ ಮತ್ತು ಕಾವ್ಯವನ್ನು ಹೆಚ್ಚೆಚ್ಚು ಪ್ರೌಢವಾಗಿಸಬೇಕೆನ್ನುವ ಅವನ ಸಹಜ ಮನೋವೃತ್ತಿಯ ದ್ಯೋತಕವಾದ 'ಕುಮಾರ ವಿಜಯ'ವೇ ಅನಂತರದ ಕೃತಿಯೆಂದು ಅನಿಸುತ್ತದೆ. 'ರತ್ನಾವತೀ ಕಲ್ಯಾಣ'ವು ಆಮೇಲಿನ ರಚನೆಯಾಗಿದ್ದರೆ, ಅದರಲ್ಲಿ ಕೆಲವಾದರೂ ಹೊಸ ರಾಗ, ಮಟ್ಟುಗಳು ಇರುತ್ತಿದ್ದುವೇನೋ.

ಇವೆರಡೂ ಕೃತಿಗಳು ಉಡುಪಿಯಲ್ಲಿ ಮುದ್ರಣಗೊಂಡು ಪ್ರಚಾರದಲ್ಲಿದ್ದವು.

'ಕುಮಾರ ವಿಜಯ'ವನ್ನು ಓದಿದ ಪಂಜೆ ಮಂಗೇಶರಾಯರು ೧೯೩೫ ರಲ್ಲಿ ಜರುಗಿದ ಒಂದು ಸಭೆಯಲ್ಲಿ ಅದನ್ನು ಬಹಿರಂಗವಾಗಿ ಹೊಗಳಿದರು. ಅದನ್ನು ಬಿಟ್ಟರೆ ಬೇರೆ ಪ್ರಸಂಗವೆ ಇಲ್ಲವೆನ್ನುವಷ್ಟು ಅವರ ಪ್ರಶಂಸೆಯು ಹರಿದು ಬಂದಿತು.[೭] ಸಮಕಾಲೀನರಾಗಿದ್ದ ಬೆನಗಲ್ ರಾಮರಾಯರಿಗೂ 'ಕುಮಾರವಿಜಯ'ವೇ ಹೆಚ್ಚು ಆಪ್ಯಾಯಮಾನವಾಗಿದ್ದಿತು. ಆ ಕಥಾನಕದಲ್ಲಿಯ ನವೀನ ಅಂಶಗಳು, ಪ್ರೌಢವಾದ

ಕಾವ್ಯಬಂಧ ಜೊತೆಗೆ ಅದರ ಸೊಗಸಾದ ಮುದ್ರಣ ಅವರ ಕುತೂಹಲ. ಆದರಗಳಿಗೆ ಕಾರಣವಾದುವು.

ಹರ್ಷನ 'ರತ್ನಾವತಿ ನಾಟಕ'ದ ಕಥೆಯನ್ನು ಮುದ್ದಣನಿಗೆ ತಾವು ಹೇಳಿದಾಗ 'ರತ್ನಾವತಿ ಕಲ್ಯಾಣ'ವು ಅವನಿಂದ ರಚಿತವಾಯ್ತೆಂದು ಮಳಲಿ ಸುಬ್ಬರಾಯರು ಹೇಳಿದ್ದಾರೆ. ಆದರೆ ಸಂಸ್ಕೃತ ನಾಟಕದ ಕಥೆಗೂ ಇದಕ್ಕೂ ಯಾವ ಸಂಬಂಧವೂ ಇಲ್ಲ. ಇದರ ನಾಯಕ ನಾಯಕಿಯರ ಹೆಸರುಗಳಷ್ಟೇ (ವತ್ಸಾಖ್ಯ, ರತ್ನಾವತಿ) ಸಂಸ್ಕೃತ ಕೃತಿಯನ್ನು ಅನುಸರಿಸಿವೆ ಮತ್ತು ನಾಟಕಕಾರನಾದ ಹರ್ಷನು ಇಲ್ಲಿ ಒಂದು ಪಾತ್ರವಾಗಿ ಬಂದದ್ದರ ಮಟ್ಟಿಗೆ ಮಾತ್ರ ಹೋಲಿಕೆಯು ಕಂಡು ಬರುತ್ತದೆ.

ಹಾಗೆಂದು ಇದು ಬೇರೆ ಪುರಾಣದ ಕಥಾನಕವೊಂದರ ರೂಪಾಂತರವಾಗಿಯೂ ತೋರುವುದಿಲ್ಲ. ವಿನೂತನವಾದ ಕೃತಿಯನ್ನು ರಚಿಸಬೇಕೆನ್ನುವ ತನ್ನ ಹೃದ್ಗತಕ್ಕೆ ಅನುಗುಣವಾಗಿ, ಅವನು ಕಾಲ್ಪನಿಕ ಕತೆಯೊಂದನ್ನು ಇದರಲ್ಲಿ ಹೆಣೆದಿದ್ದಾನೆ. ದೃಢವರ್ಮನ ಕುಮಾರಿಯಾದ ರತ್ನಾವತಿಯನ್ನು ವತ್ಸರಾಜನಿಗೆ ಮದುವೆ ಮಾಡಿಕೊಡಬೇಕೆಂದಿದ್ದಾಗ, ಕಲಿಂಗ ದೇಶದ ಭದ್ರಸೇನನು ಅವಳ ಹಸ್ತವನ್ನು ಯಾಚಿಸಿ ಯುದ್ಧ ಮಾಡುತ್ತಾನೆ. ಯುದ್ಧದಲ್ಲಿ ದೃಢವರ್ಮನು ಸೋಲುತ್ತಾನೆ. ಇತಿಹಾಸ ಕಾಲದ ಘಟನೆಯೆಂದು ತೋರುವ ಈ ಕಥೆಯಲ್ಲಿ ಕಿರಾತ, ರಾಕ್ಷಸರೂ ಭಾಗವಹಿಸುತ್ತಾರೆ. ಆಗ ವತ್ಸಾಖ್ಯನು ಬಂದು ವೈರಿಗಳನ್ನು ಸೋಲಿಸಿ, ರತ್ನಾವತಿಯನ್ನು ಮದುವೆಯಾಗುತ್ತಾನೆ. ಕತೆಯು ಸರಾಗವಾಗಿ ಮುಂದೆ ಸಾಗುತ್ತಿದ್ದರೂ, ಅದರ ಉದ್ದೇಶವೇನೆಂಬುದು ಸ್ಪಷ್ಟವಿಲ್ಲ. ಶೃಂಗಾರ, ವೀರ ರಸಗಳನ್ನು ತೋರ್ಪಡಿಸುವ ಸನ್ನಿವೇಶಗಳೂ ಕಿರಾತ, ರಾಕ್ಷಸರ ಬೆಡಗಿನ ವೇಷಗಳೂ ನೋಟಕರಿಗೆ ರಂಜಕವಾಗಿ ತೋರಿದರೂ ಒಟ್ಟಿನ ರಂಗ ಪ್ರಯೋಗವು ಗಾಢವಾದ ಪರಿಣಾಮವನ್ನುಂಟುಮಾಡುವುದಿಲ್ಲ.

ಮುದ್ದಣನ ಕವಿತ್ವ ಶಕ್ತಿಯು ಮಾತ್ರ ಈ ಪ್ರಥಮ ಕೃತಿಯಲ್ಲಿ ಚೆನ್ನಾಗಿ ಒಡಮೂಡಿದೆ. ಉದಾಹರಣೆಗೆ ನಟ್ಟಿರುಳಿನಲ್ಲಿ ಭದ್ರಸೇನನು ರತ್ನಾವತಿಯ ಮಂದಿರವನ್ನು ಪ್ರವೇಶಿಸಿ, ನಿದ್ರೆಯಲ್ಲಿದ್ದ ಅವಳ ಸೌಂದರ್ಯವನ್ನು ವರ್ಣಿಸಿದ್ದರಲ್ಲಿ ಉಲ್ಲಾಸದ ನಡೆಯಿದೆ. ('ಏನನುಸಿರಲಿ ಮಾನಿನಿಯ ಚೆಲುವಾನನದ ಪರಿಯ' ಹಾಗೂ 'ಅಮಮ ಏನ್ ಬೆಡಗುಗಾರ್ತಿಯೊ ಕನ್ಯೆ' ಎಂಬೆರಡು ಪದ್ಯಗಳು.) ಪದಲಾಲಿತ್ಯ ಮತ್ತು ಯಮಕ ಪ್ರಾಸ, ಇವೂ ಸೇರಿದ್ದರಿಂದ ಅದು ಗೇಯತೆಗೆ ಹೇಳಿ ಮಾಡಿಸಿದಂತಹ ಪದ್ಯರಚನೆಯಾಗಿದೆ. ಆದರೆ ಅರ್ಥ ಹೇಳುವ ಪಾತ್ರಧಾರಿಯು ಅಭಿಜ್ಞನಿದ್ದರೆ ಮಾತ್ರ ಅದರಿಂದ ಅರ್ಥವನ್ನು ಹೊರಡಿಸಬಲ್ಲ.

ಪದಲಾಲಿತ್ಯ, ಯಮಕ ಪ್ರಾಸಗಳೆಂಬ ಗುಣಗಳು ಅತಿಯಾಗಿ, ಅರ್ಥಕ್ಕೆ ಸಂಚಕಾರ ತರುವಂತಾದರೆ, ಅವು ಅವಗುಣಗಳೇ ಸೈ. ಅರಣ್ಯದಲ್ಲಿ ಏಕಾಕಿನಿಯಾಗಿದ್ದ ಕನ್ಯೆ

(ರತ್ನಾವತಿ)ಯನ್ನು ಕಂಡು ವತ್ಸಾಖ್ಯನು ಅವಳು ಯಾರೆಂದು ಕೇಳುವ ಈ ಪದ್ಯವನ್ನು ನೋಡಿರಿ:-

ನುಡಿಯೇ ನಿನ್ನೊಡೆಯನ ಪೆಸರೊಡನುಡಿಯೇ
ಬಡ ನಡುವಿನ ಜಡ ಪಿಡಿ ನಡೆದುದು ಕೊಡ-
ಬಿಡು ಕಡು ಬೆಡಗಿನೊಳುಡುಪಡೆಪತಿಮುಖಿ ನುಡಿಯೇ ।
ನಗೆ ಮೊಗ ನೆಗಹುತಲೊಗುಮಿಗೆ ದುಗುಡಗಳುಗಿ
ಮೃಗದೃಗುಯುಗೆ ಒಗೆ ಮಿಗೆ ಸುಗುಣೆ ನುಡಿಯೇ
ವನಜಾನನೆ ತನುವನು ನನೆಮೊನೆಯನ್ನು
ದಣಿಪನು ಮನವಿನಿತನು ಘನತನದೊಳು, ನುಡಿಯೇ ॥

ಮೊದಲೇ ಬೆದರಿದ್ದ ಆ ಕನ್ಯೆಯು ಇಂಥ ಒನಪಿನ ಪ್ರಶ್ನೆಯಿಂದ ಇನ್ನಷ್ಟು ಕಕ್ಕಾವಿಕ್ಕಿಯಾಗಬೇಕು! ಈ ಬಗೆಯ ಪದ್ಯಗಳು ವೇಷಧಾರಿ ಹಾಗೂ ಪ್ರೇಕ್ಷಕರಿಬ್ಬರಿಗೂ ದಣಿವನುಂಟುಮಾಡಬಲ್ಲವು.

ಮುದ್ದಣನ 'ಕುಮಾರ ವಿಜಯ'ವು ಸ್ವತಂತ್ರ ಕಥಾ ವಸ್ತುವೇನಲ್ಲ. ಪದ್ಮಪುರಾಣಾಂತರ್ಗತ ಶಂಕರ ಸಂಹಿತೆಯಲ್ಲಿ ಬಂದಿರುವ ಶೂರ ಪದ್ಮಾಸುರ ವಧೆಯ ಕಥೆಯನ್ನು ಯಕ್ಷಗಾನಕ್ಕೆ ಅಳವಡಿಸಿಕೊಂಡದ್ದಾಗಿದೆ. ಅವನು ಮೂಲದ ಕಥಾಂಶವನ್ನು ಮಾರ್ಪಡಿಸಿದುದು ಕೆಲವು ಸಂದರ್ಭಗಳಲ್ಲಿ ಮಾತ್ರ. ಶೂರ ಪದ್ಮಾಸುರನು ಇಂದ್ರನ ಮೇಲೆ ದಂಡೆತ್ತಿ ಹೋಗುವದಕ್ಕೆ ತಮ್ಮನಾದ ತಾರಕಾಸುರನ ವಧೆಯ ಸೇಡು ಕಾರಣವಲ್ಲ. ಬದಲಾಗಿ ನಾರದನು ಶಚಿಯನ್ನು ಪಡೆಯಬೇಕೆಂದು ಅವನಿಗೆ ಸೂಚಿಸಿದ್ದರಿಂದಾಗಿ, ಸೆಣಸಾಟಕ್ಕೆ ಸಿದ್ಧನಾಗುತ್ತಾನೆ. ಮುಂದಿನ ಕಥೆಯಲ್ಲಿ ಬರುವ ಇಂದ್ರ-ಶಚಿಯರ ಗುಪ್ತವಾಸ, ಭಾನುಕೋಪನಿಂದ ಜಯಂತನ ಬಂಧನ, ಅಜಮುಖಿಯ ಎತ್ತುಗಡೆ, ಅಲ್ಲಿಂದ ಷಣ್ಮುಖ ಪದ್ಮಾಸುರರ ಯುದ್ಧ, ಇಂದ್ರನ ಮಗಳು ಸುರಸೇನೆಯೊಡನೆ ಷಣ್ಮುಖನ ವಿವಾಹ- ಇವೆಲ್ಲ ಪುರಾಣದಲ್ಲಿದ್ದ ಕಥಾಂಶಗಳೇ ಆಗಿವೆ.

'ಕುಮಾರವಿಜಯ'ವು ರಸಸ್ಯಂದಿಯಾದ ಕಾವ್ಯವೆನ್ನುವದರಲ್ಲಿ ಸಂದೇಹವಿಲ್ಲ. ಪಾತ್ರಗಳ ಮನೋವ್ಯಾಪಾರವನ್ನು ಹೃದ್ಯವಾಗಿ ತೋರಿಸುವ ಪದ್ಯಗಳು ಅನೇಕವಿವೆ. ಉದಾಹರಣೆಗೆ ಪದ್ಮಾಸುರನು ತಮ್ಮ ಮೇಲೆ ದಾಳಿಯನ್ನು ಮಾಡಲಿರುವನೆಂಬ ವಾರ್ತೆಯನ್ನು ಕೇಳಿ ಇಂದ್ರ-ಶಚಿಯರು ಚಿಂತಾತುರರಾಗಿ ಮಾತಾಡಿಕೊಳ್ಳುವ ರೀತಿಯು ಸಾಂಸಾರಿಕ ವಿಪತ್ತು ಬಂದಾಗ ಗಂಡ-ಹೆಂಡತಿಯರು ಅದರ ಬಗ್ಗೆ ಚರ್ಚಿಸುತ್ತ ಚಿಂತೆಯನ್ನು ಪರಸ್ಪರ ಹಂಚಿಕೊಳ್ಳುವಂತೆನಿಸುತ್ತದೆ. ಅದರಲ್ಲಿಯೂ ಶಚಿಯು "ಬಡವರಿಂಗೆ ಎಡರು ಎತ್ತ ಪೋದಡೆಯು ತೊರೆವುದೆಂತು, ಅಕಟ ನೊಸಲಕ್ಕರವೆ ಹಾ. ವಿಧಿಯೆ"

ಎಂದು ದುಃಖಿಸುವಾಗ ಇಂದ್ರ–ಶಚಿಯರು ದೇವತೆಗಳೇನಲ್ಲ; ನಮ್ಮಂತೆ ಸಾಮಾನ್ಯರೆಂದೇ ಭಾಸವಾಗುತ್ತದೆ.

ಮೇಲೆ ಹೇಳಿದಂತೆ, ಕವಿಯ ಯಮಕಪ್ರಾಸದ ಚಪಲತೆಯು ಇಲ್ಲಿಯೂ ಸುಳಿದಾಡಿದೆ. ಆ ನಿಮಿತ್ತವಾಗಿ ವ್ಯಾಕರಣ ದೃಷ್ಟಿಯಿಂದ ಸಾಧುವಲ್ಲದ ಶಬ್ದ ಪ್ರಯೋಗಗಳನ್ನೂ ಕಾಣಬಹುದು. ಕೆಳಗಿನ ಪದ್ಯವನ್ನು ಪರಿಶೀಲಿಸಬೇಕು. ಭಾನುಕೋಪನೊಡನಾದ ಯುದ್ಧದಲ್ಲಿ ಜಯಂತನು ಸೋತು, ಹೇಳುವ ಮಾತಿದು:–

ನಾರಿಯೊಡನೆಂತು ಕಾದುವೆ ನೋಡಲೀತ ಮದ–
ನಾರಿಯಂತಿಹ ವಿಕ್ರಮದೊಳೊರ್ಮೆ ಪೊಯ್ವೆನೆನೆ
ನಾರಿ ಜಿನುಗುವುದಸ್ತ್ರ ಸಂಘಟನೆಯೊಳ್ ಖಳರ ಪೌರುಷಕೆ ಒಂದು ಜಯದ
ನಾರಿ ಸೇರಿ ಹಳವರ ಯುದ್ಧ ರಂಗದೊಳು ತಾ–
ನಾರಿಗೊರೆದಪೆನಸುರನೇನ್ ಗೆಯ್ವನೆಂಬುದಂ
ನಾರಿಯೆನು ಎಂತಿರಲಿ ಮತ್ತಾತನಂ ಗೆಲುವನರಿಯಲಿದನ್ನು

'ನಾರಿ' ಎಂಬ ಶಬ್ದವನು ಪ್ರತಿ ಚರಣದ ಆರಂಭದಲ್ಲಿ ವಿವಿಧ ಅರ್ಥದಲ್ಲಿ ಕೊಡುವ ಚಪಲತೆಯಿಂದ ಮುದ್ದಣನು ಎರಡು ಕಡೆ ಅಪಾರ್ಥ ಬರುವಂತೆ ತಂದಿದ್ದಾನೆ.'ನಾರಿಯೊಡನೆಂತು ಕಾದುವೆ' ಎಂಬಲ್ಲಿ ನಾ(ನು) + ಅರಿಯೊಡನೆ ಎಂತು ಕಾದುವೆ ಎಂಬ ಅರ್ಥವಿದ್ದರೆ ಕೊನೆಯ ಸಾಲಿನ 'ನಾರಿಯೆನು' ಎಂಬಲ್ಲಿ ನಾ + ಅರಿಯೆನು (ತಿಳಿಯೆನು) ಎನ್ನುವ ಅರ್ಥವಿದೆ. ಪದ್ಯದಲ್ಲಿ ಮೇಲಿಂದ ಮೇಲೆ ಬರುವ ಈ 'ನಾರಿ' ಯನ್ನು ಕಥಾ ಸಂದರ್ಭದಲ್ಲಿ ಕಾಣದೆ, ಪಾತ್ರಧಾರಿಗಳು ಅದನ್ನು ಬಿಟ್ಟು ಕೊಟ್ಟು ಮುಂದೆ ಸಾಗಬಹುದಲ್ಲವೆ. ಹೀಗೆಯೇ ಸಂದಿಗ್ಧ ಇಲ್ಲವೆ ಗೂಢಾರ್ಥವಿರುವ ಅನೇಕ ಪದ್ಯಗಳು 'ಕುಮಾರವಿಜಯ'ದಲ್ಲಿ ದೊರೆಯುತ್ತವೆ. (ಉದಾಹರಣೆಗೆ 'ಅತಿಥಿಯನ್ನು ಪೆತ್ತವನ ತಾತನ ಸತಿಯನೊಯ್ಯುವನೊಯ್ದನನುಜನ ...' ಪು. ೫೩)

ಇಂತು 'ರತ್ನಾವತೀ ಕಲ್ಯಾಣ' ದಲ್ಲಿರುವ ಗುಣ ಮತ್ತು ದೋಷಗಳು 'ಕುಮಾರ ವಿಜಯ'ದಲ್ಲಿ ವಿಸ್ತಾರಗೊಂಡಿವೆ. ಆದರೆ ಒಟ್ಟಿನಲ್ಲಿ ಮುದ್ದಣನ ಕಾವ್ಯ ವೈಶಿಷ್ಟ್ಯಗಳನೊಳಗೊಂಡು ಅದು ಒಂದು ಉತ್ತಮ ಪ್ರಸಂಗವೆನಿಸಿದೆ.

ಆ ಮಾನದಿಂದ ಹಾಗೂ ಮುದ್ದಣನ ಹೆಸರಿನ ಹೆಗ್ಗಳಿಕೆಗೆ ಅನುಗುಣವಾಗಿ ಅವನ ಎರಡೂ ಕೃತಿಗಳು ರಂಗದ ಮೇಲೆ ಅತ್ಯಂತ ಜನಪ್ರಿಯ ಪ್ರಸಂಗಗಳಾಗಿರಬೇಕಿದ್ದಿತು. ಆದರೆ ವಸ್ತುಸ್ಥಿತಿ ಹಾಗಿಲ್ಲ. 'ರತ್ನಾವತೀ ಕಲ್ಯಾಣ' ವನ್ನು ಆಗೀಗ ಪ್ರಯೋಗಿಸುವದುಂಟು. 'ಕುಮಾರ ವಿಜಯ'ದ ಪ್ರಯೋಗವು ಅಷ್ಟಾಗಿ ಕಂಡು ಬರುವದಿಲ್ಲ. ಪದ್ಯಗಳ ಕ್ಲಿಷ್ಟತೆಯೇ

ಅದರ ಕಾರಣವೆಂಬುದಾಗಿ ತೋರುತ್ತದೆ. ಅರ್ಥಪೂರ್ಣವಾಗಿ ಅವನ್ನು ಹಾಡಲು ಮತ್ತು ಅವಕ್ಕೆ ಸರಿಯಾದ ಅರ್ಥವನ್ನು ಹಚ್ಚಿ, ಆಶು ಸಂಭಾಷಣೆ ನಡೆಸಲು ಭಾಗವತರಿಗೆ (ದಿ. ಬಲಿಪ ಭಾಗವತರಂತಹರನ್ನುಳಿದು) ಹಾಗೂ ಪಾತ್ರಧಾರಿಗಳಿಗೆ ಕಠಿಣವೆನಿಸುತ್ತಿದ್ದಿರಬೇಕು.

ಷಣ್ಮುಖನಿಗೆ (ಕುಮಾರಸ್ವಾಮಿ) ಮದುವೆ ಮಾಡಿಸಿದುದು ಈ ಪ್ರಸಂಗದ ಅಪ್ರಿಯತೆಗೆ ಕಾರಣವಾಯ್ತೆಂದು ಅಭಿಪ್ರಾಯಪಡಲಾಗಿದೆ.[೮] ಷಣ್ಮುಖನು ದಕ್ಷಿಣ ಕನ್ನಡ ಜಿಲ್ಲೆಯ ಪ್ರಸಿದ್ಧ ದೇವತೆ. ಅವನು ಸ್ತ್ರೀಯರ ಮುಖವನ್ನು ನೋಡಲಾರದವನೆಂಬ ಪ್ರತೀತಿ ಇದ್ದುದೇನೊ ನಿಜ. ಆದರೆ ಪುರಾಣಗಳಲ್ಲಿ ಅವನ ಮದುವೆಯ ಪ್ರಸ್ತಾಪ ಬಂದದ್ದೇ ಇದೆ. ಅಮೃತವಲ್ಲಿ ಮತ್ತು ಸುವರ್ಣವಲ್ಲಿ ಸೋದರಿಯರನ್ನು ಅವನು ಅನುಗ್ರಹಿಸಿದುದು ; ಅದರಂತೆ, ಬ್ರಹ್ಮನ ಮಗಳೂ ಪ್ರಕೃತಿ ಶಕ್ತಿಯ ಅಂಶವುಳ್ಳವಳೂ ಆದ ಷಷ್ಠೀದೇವಿಯನ್ನು ಆತ ಮದುವೆಯಾದುದೂ ಸುಪರಿಚಿತವಿದೆ. ಇತ್ತ ಮುದ್ದಣನು ಆ ಮದುವೆಯನ್ನು ಉಲ್ಲೇಖಿಸಿದುದು ತೀರ ಕೊನೆಯಲ್ಲಿ, ಒಂದೆರಡು ಪದ್ಯಗಳಲ್ಲಿ ಮಾತ್ರ ಬಲಾಢ್ಯ ರಾಕ್ಷಸರನ್ನು ಸಂಹರಿಸಿ ದೇವತೆಗಳನ್ನೆಲ್ಲ ಹರ್ಷಗೊಳಿಸಿದ ಕಥಾನಾಯಕನ ವಿಜಯ ಕಾರ್ಯಕ್ಕೆ ಇದೊಂದು ಪುರಸ್ಕಾರವೆಂಬ ರೀತಿಯಲ್ಲಿ ಬಂದಿರುವದರಿಂದ ಜನತೆಯ ಧಾರ್ಮಿಕ ಭಾವನೆಯನ್ನು ನೋಯಿಸುವಂತಹ ಘಟನೆ ಇದಲ್ಲವಾಗಿ ತೋರುತ್ತದೆ.

ತನ್ನ ಯಕ್ಷಗಾನ ಕೃತಿಗಳ ಯಶಸ್ಸಿನ ಬಗ್ಗೆ ಮುದ್ದಣನು ಅದೇನೆಂದು ಭಾವಿಸಿದ್ದನೊ! ಯಕ್ಷಗಾನವನ್ನು ತನ್ನ ಮುಂದಿನ ಕಾವ್ಯ ಕರ್ಮಕ್ಕೆ ಜಿಗಿವುಣೆಯಂತೆ ಉಪಯೋಗಿಸಿಕೊಂಡನಲ್ಲದೆ, ಮತ್ತೆ ಅದರ ಮೇಲೆ ಕಾಲಿಡಲಿಲ್ಲ.

ಮುದ್ದಣನ ಯಕ್ಷಗಾನದ ಹಾಡುಗಳನ್ನು ಕುರಿತು ಪ್ರತ್ಯೇಕವಾಗಿ ಹೇಳಬೇಕಾದ ಮಾತೊಂದಿದೆ. ತಮಗಿಂತ ಹಿಂದಿನವರಿಂದ ಹಾಡಿನ ಧಾಟಿಗಳನ್ನು ಸ್ವೀಕರಿಸಿ, ಅದೇ ರಾಗ, ತಾಳಗಳಲ್ಲಿ ಪ್ರಸಂಗಕಾರರು ಕೃತಿ ರಚನೆ ಮಾಡುತ್ತಾರಷ್ಟೆ. ಮುದ್ದಣನೂ ಹಾಗೆ ಮಾಡಿರುವನು. 'ಕುಮಾರವಿಜಯ'ದಲ್ಲಿ ಮಾತ್ರ ಒಂದೆಡೆ ವಿನೂತನವಾದ ರೀತಿಯಲ್ಲಿ ಅರ್ಥಪೂರ್ಣವಾಗಿ ತನ್ನ ಸಂಗೀತಜ್ಞಾನವನ್ನು ತೋರ್ಪಡಿಸಿದ್ದಾನೆ. ದೇವೇಂದ್ರನ ಸಭೆಯಲ್ಲಿ ಅಪ್ಸರೆಯರ ನಾಟ್ಯವು ಪ್ರಸಿದ್ಧವಷ್ಟೆ. ಅವರ ಕುಣಿತಕ್ಕೆ ಮುದ್ದಣನು ವರ್ಣವಿನ್ಯಾಸವನ್ನು ಹೇಳಿದ್ದಾನೆ. ಇನ್ನಾವ ಯಕ್ಷಗಾನ ಕೃತಿಯಲ್ಲಿಯೂ ಅದು ನಮ್ಮ ಕಣ್ಣಿಗೆ ಬಿದ್ದುದಿಲ್ಲ. ಆ ಪದ್ಯವನ್ನು ಗಮನಿಸಬೇಕು.

**ಖಮಾಚು–ಆದಿತಾಳ**

ಶ್ರೀಕರ ಶತ ಮುಖನತ ತ್ರಿದಿಶಾ । ಮಗಮನಿದನಿ ಪದಪರಿ ॥ ಶ್ರೀಕರ ॥

ಶೋಕದುರಿತ ಹರ। ರೀಸನಿ ಸಸಸಸ। ಪಾಕಶಾಸದಿ । ವಾಕರ ಶೋಭಿತ

ಶಚಿವರ ಮಣಿಗಣ । ಖಚಿತ ಕಿರೀಟ ವಿಶಾಲ । ಮಾ ಪಾ ।
ಸುಚರಿತ ನಗಹರ । ಖಚರಾದ್ಯನಿಮಿಷ ಪಾಲಾ ॥
ಮಮಗಮ ಪಪ ಪಮ । ನಿನಿದನಿ ಸ ನಿಸಸ । ರೀಸ ನೀ ದಪದ
ನೀದಮಪಮ ಪದ ॥ ಶ್ರೀಕರ ....

ಮುದ್ದಣನ ಸಂಗೀತ ಪರಿಣತಿಯನ್ನು ಇನ್ನೊಂದು ಬಗೆಯಲ್ಲಿಯೂ ಕಾಣಬಹುದು. ಯಕ್ಷಗಾನದ ವೀರರಸದ ಹಾಡುಗಾರಿಕೆಯು ಏರಿಕೆಯಲ್ಲಿ ಪ್ರಾರಂಭವಾಗುತ್ತದೆ. ಉಳಿದ ರಸಗಳದು ಮಂದ್ರದ ನಡೆಯಿದ್ದು, ಅದು ಮುಂದೆ ತ್ವರಿತಕ್ಕೆ ತಿರುಗುವ ಅನೇಕ ಪದಗಳು 'ಕುಮಾರ ವಿಜಯ'ದಲ್ಲಿ ದೊರೆಯುತ್ತವೆ. ಮಾದರಿಗೆ ಕಾಂಭೋಜಿ ಅಷ್ಟ ತಾಳದ ೯ ಪದ್ಯಗಳು; ಬೇಗಡೆ ತ್ರಿಪುಡೆಯ ೬ ಪದಗಳು, ಮತ್ತು ಧನ್ಯಾಸಿ, ಜಂಜೂಟಿಗಳ ಏಕತಾಳದ ಒಂದೊಂದು ರಚನೆಗಳು—ಇವನ್ನು ಆ ದೃಷ್ಟಿಯಿಂದ ಗಮನಿಸಬೇಕು. ಕಾವ್ಯ, ವ್ಯಾಕರಣಗಳ ಅಭ್ಯಾಸದ ಜೊತೆಗೆ ಮುದ್ದಣನು ಸಂಗೀತದ ಅಭ್ಯಾಸವನ್ನು ಅದಾವಾಗಲೋ ಮಾಡಿದ್ದನೆನುವದನ್ನು ಇಲ್ಲಿ ಎತ್ತಿ ಹೇಳಬಯಸಿದೆ.

ಮುದ್ದಣನ ಶಬ್ದಸೃಷ್ಟಿಯು ವಿಶಿಷ್ಟವಾದುದು. ಅಪೂರ್ವವಾದ ಶಬ್ದಗಳನ್ನು ಪ್ರಯೋಗಿಸುವ ಅವನ ಪ್ರವೃತ್ತಿಯು ಅವನ ಆರಂಭದ ಯಕ್ಷಗಾನ ಕೃತಿಗಳಲ್ಲಿಯೆ ಸುವ್ಯಕ್ತವಾಗಿದೆ. ಹಿಂದಿನ ಕವಿಗಳು ಕ್ವಚಿತ್ತಾಗಿ ಉಪಯೋಗಿಸಿದಂಥ ಪದಗಳನ್ನು ಆಯ್ದು ತಾನು ಬಳಸುವಲ್ಲಿಯೂ ಹೊಸ ಶಬ್ದಗಳನ್ನು ಸೃಷ್ಟಿಮಾಡುವಲ್ಲಿಯೂ ಈ ಪ್ರವೃತ್ತಿಯು ಕಂಡುಬರುತ್ತದೆ. ಹೊಸತೇನನಾದರೂ ಕೊಡವಾಡಬೇಕು ಎಂಬ ಅವನ ಮನೋಧರ್ಮವೂ, ಅನುಪ್ರಾಸ-ಯಮಕಪ್ರಾಸದ ಬಾಹುಲ್ಯವೂ ಇಂಥ ಪದ ಪ್ರಯೋಗದ ಹಿನ್ನೆಲೆಯಾಗಿದೆ.

ಹಿಂದಿನವರು ತೀರ ಕಡಿಮೆಯಾಗಿ ಬಳಸಿದ್ದ ಶಬ್ದಗಳಲ್ಲಿ ಯಾತುಧಾನ (ರಾಕ್ಷಸ), ಯಾಮಿನಿಗೋಮಿನಿ (ನಿಶಾ ಸ್ತ್ರೀ) ಎಂಬ ಸಂಸ್ಕೃತ ಶಬ್ದಗಳೂ, ಅಣುವ (=ಹನುಮ) ಎಂಬ ತದ್ಭವಗಳೂ ಒಳಗೊಳ್ಳುತ್ತವೆ. ಇನ್ನು ಪದಗಳನ್ನು ಜೋಡಿಸಿಯೊ, ತದ್ಧಿತ ಪ್ರತ್ಯಯಗಳನ್ನು ಸೇರಿಸಿಯೊ ಮುದ್ದಣನು ಅನೇಕ ಹೊಸ ಶಬ್ದಗಳನ್ನು ಸೃಷ್ಟಿಮಾಡಿದ್ದಾನೆ. ಯಕ್ಷಗಾನ ಕೃತಿದ್ವಯದಲ್ಲಿ ಬಂದ ಕೆಲವು ಮಾದರಿಗಳಿವು : **ಉಡು**-ಉಡುಮುಖಿ, ಉಡುಪಡೆಪತಿಮುಖಿ, ಉಡುಸೇನೆಯಧಿಪತಿ, **ಗುಣ**-ಗುಣಜಾಲ, ಗುಣಧೇನು, ಗುಣಸದನೆ, ಗುಣಶರಧಿಸಮಾನೆ, ಗುಣಹಾರೆ, ಗುಣಸಾಂದ್ರ, ಗುಣವ್ರಜನ, **ಭಾನುಕೋಪ**—ಇನಕೋಪ, ತರಣಿಕೋಪ, ದಿನಪತಿಕೋಪ, ಮಾರ್ತಂಡಕೋಪ, ಭಾಸ್ಕರಕೋಪ, ಸಾರಸಸಖಕೋಪ.

ಎರಡಕ್ಕಿಂತ ಹೆಚ್ಚು ಶಬ್ದಗಳನ್ನು ಜೋಡಿಸಿ ಹೊಸ ಹೊಸ ಪದಗಳನ್ನು ಸೃಷ್ಟಿ ಮಾಡಿದ್ದರಲ್ಲಿ ಮುದ್ದಣನ ಜಾಣ್ಮೆ ಇದೆ. ಮುನಿ, ಋಷಿ, ತಾಪಸ, ತಪಸ್ವಿ-ಇವೆಲ್ಲ

ಹಳಗನ್ನಡ ನಡುಗನ್ನಡ ಕಾವ್ಯಗಳಲ್ಲಿ ಬಂದಂತಹವೇ. ಮುದ್ದಣನು ಈ ಅರ್ಥವನ್ನು ಕೊಡುವ ಶಬ್ದಗಳಿಗೆ 'ಪವನಜಲ ಪರ್ಣಾಶನ', 'ನಿತ್ಯೋಪವಾಸಿ' ಎಂಬವನ್ನು ಸೇರಿಸಿದ್ದಾನೆ. ಬ್ರಾಹ್ಮಣರು ಭೂಸುರರು ಮಾತ್ರವಲ್ಲದೆ, 'ಶಾಲ್ಯಾನಘೃತ ಭಕ್ಷಕರು'. ನಾರದನು 'ತುಲಸಿಸ್ರಗ್ಧರ'ನು ಮತ್ತು 'ಮೂಗಾಲಬಲ್ಲಿದ'ನು. 'ನೊಸಲಗಣ್ಣ'ನಾದ ಶಿವನನ್ನು ಬರಿಯೆ 'ನೊಸಲ' ಎಂದು ಪ್ರಸ್ತಾಪಿಸಿದುದು ಮುದ್ದಣನದೇ ವಿಶೇಷತೆ ಎಂದು ತಿಳಿಯತಕ್ಕುದು.

ಈ ರೀತಿಯ ಅಪರೂಪದ ಶಬ್ದ ಪ್ರಯೋಗಗಳಲ್ಲಿ ಮುದ್ದಣನು ಎಲ್ಲ ಕಾಲಕ್ಕೂ ಯಶಸ್ವಿಯಾಗಿಲ್ಲ. ಅವನ ಕೃತಿಗಳು ರಂಗದ ಮೇಲೆ ಹೆಚ್ಚಾಗಿ ಬಾರದಿರುವುದಕ್ಕೆ ಅವನ ಶಬ್ದ ವೈಚಿತ್ರ್ಯವೂ ಕಾರಣವಾಗಿರಬಹುದು.

ಮುದ್ದಣನ ಎಲ್ಲ ಕೃತಿಗಳ ಬಗ್ಗೆ ಅಸಂಖ್ಯ ಲೇಖನಗಳು, ನವೀನ ಅಂಶಗಳು ಬೆಳಕಿಗೆ ಬಂದಿವೆಯಾದ್ದರಿಂದ ಅವನ ಹಾಗೂ ಅವನ ಕೃತಿಗಳ ಬಗ್ಗೆ ಹೆಚ್ಚು ಹೇಳಹೋಗಿಲ್ಲ. ಆದರೆ ಕಳೆದ ೨೫ ವರ್ಷಗಳಲ್ಲಿ, ೧೯೭೪ ರಿಂದ ನಾನೂ ಅವನ ಕುರಿತು ಕೆಲವು ಹೊಸ ವಿಚಾರಗಳನ್ನು ಸಂಗಣಕದ ಮೂಲಕ ಶೋಧಿಸಿರುವೆ.

(ಅ) ಸಂಗಣಕ ಯಂತ್ರವನ್ನು ಬಳಸಿ, ಅವನ ಪಂಚ ಗ್ರಂಥ ಕರ್ತೃತ್ವವನ್ನು ಸ್ಥಿರೀಕರಿಸಿದುದು. (ಈ ಬಗ್ಗೆ ಇಂಗ್ಲೆಂಡಿನ ಒಂದು ಸಂಗಣಕ ಸಮ್ಮೇಳನದಲ್ಲಿ ೧೯೭೫ರಲ್ಲಿ ಪ್ರಬಂಧವನ್ನು ಮಂಡಿಸಿದ್ದೆ).

(ಆ) ಅದರಂತೆ* ಮುದ್ದಣನು ಆತ್ಯಂತಿಕ ಶಿವಭಕ್ತನಿದ್ದನೆಂದು ಮೊದಲ ಬಾರಿಗೆ ತೋರಿಸಲಾಯಿತು.

(ಇ) ಸಂಗಣಕದ ಆಧಾರದಿಂದಲೇ, ನನ್ನ ತರುಣ ಮಿತ್ರರಾದ ನಾ. ದಾಮೋದರ ಶೆಟ್ಟಿಯವರು, ಮುದ್ದಣನ ಶಬ್ದಸೃಷ್ಟಿಯ ವಿಶೇಷತೆಗಳನ್ನು, ಆ ಮೂಲಕ ಅವನ ಅಪೂರ್ವವಾದ ಪ್ರತಿಭೆಯನ್ನು ತೋರ್ಪಡಿಸುವ ಸಂಪ್ರಬಂಧವನ್ನು ಸಿದ್ಧಪಡಿಸಿದುದು.

### ೮೪ ಯಕ್ಷಗಾನದ ಹಬ್ಬುಗೆ

ಧರ್ಮಸ್ಥಳದ ಕುಮಾರ ಹೆಗ್ಗಡೆಯವರು ಕ್ರಿ. ಶ. ೧೮೧೨ರಂದು (ಆಂಗೀರಸ ಸಂವತ್ಸರ) ಶ್ರವಣಬೆಳಗೊಳದಲ್ಲಿಯ ಚಂದ್ರಸಾಗರವರ್ಣಿಗಳನ್ನು ಕಾಣಲು ಹೋದರು. ಎಲ್ಲೇ ಹೊರಡಲಿ, ಜೊತೆಗೆ ಒಂದು ಯಕ್ಷಗಾನದ ಮೇಳವನ್ನು ಕರೆದೊಯ್ಯುವುದು ಅವರ ರೂಢಿಯಾಗಿದ್ದಿತು. ಹಾಗೆ ಮೈಸೂರ ಸಂಸ್ಥಾನಕ್ಕೆ ಹೋಗಿದ್ದಾಗ ಮುಮ್ಮಡಿ ಕೃಷ್ಣರಾಜರಿಂದ ಆಮಂತ್ರಿತರಾಗಿ ಅರಮನೆಯಲ್ಲಿಯೂ ಯಕ್ಷಗಾನ ಆಟಗಳನ್ನು ಪ್ರದರ್ಶಿಸಿದರು. ಅರ್ಧ ಶತಮಾನವು ಕಳೆದ ಮೇಲೆ ಅದನ್ನು ನೆನೆಮುಕೊಂಡು

* ವಿವರಗಳಿಗೆ ನೋಡಿ: "ಮುದ್ದಣಕಂಡ ಶಿವ', **ಸಂ-ಕಥನ** ಪು.೩೨೧-೩೨೬, ೨೦೦೮

ಮುಮ್ಮಡಿಯವರು ಧರ್ಮಸ್ಥಳಕ್ಕೆ ಬರೆಯಿಸಿದ ಪತ್ರದ (೧೨-೧೧-೧೮೬೭) ಈ ಅವತರಣಿಕೆಯನ್ನು ಪರಿಶೀಲಿಸಬೇಕು :

"ಧರ್ಮಸ್ಥಳದ ಮಂಜೆ ಹೆಗ್ಗಡಿಗಳಿಗೆ ಬರಸಿ ಕಳುಯಿಸಿದ ನಿರೂಪ. ಅದಾಗಿ..... ಸಾಂಪ್ರತಾ ನಿಮ್ಮ ತಂದೆ ಕೊಮಾರ ಹೆಗ್ಗಡೀರು ಇದ್ದಾಗ್ಯೆ ಅವರು ಯಿಲ್ಲಿಗೆ ಬಂದು ನಂಮ ಭೇಟಿ ತೆಗೆದುಕೊಂಡು ಯಿಲ್ಲಿಂದ ಬಂದು ಯಿಲ್ಲಿ ಬಹು ಸಂಸಾರಿಗಳಾಗಿ ಅವರೆಲ್ಲರಿಗೂ ನಂಮಲ್ಲಿ ಸಂಬಳ ಯಿನಾಮು ಮುಂತಾದ್ದು ಸಲ್ಲುತ್ತಾ ಭಾಗವತದ ಆಟ ನಡೆಯುತ್ತಾ ಯಿತ್ತು. ಯೀಗ ಆ ಪೈಕಿ ಬಹು ಜನಗಳು ನಷ್ಟರಾಗಿ ಆಟಕ್ಕೆ ಜನ ಸಾಲದೆಯಿರೂವದ್ದರಿಂದಾ ಆ ಬಗ್ಗೆ ಯಿಲ್ಲಿ ದಶಾವತಾರದ ಆಟದ ಗೊತ್ತುಗಾರನಾದ ಶೇಷಪ್ಪಂನು ಅಲ್ಲಿಗೆ ಕಳುಹಿಸಿಯಿದೆ. ಆ ಪ್ರಾಂತದಲಿ ನೀವು ವಿಚಾರಿಶಿ ಭಾಗವತ ಮುಂತಾದ್ದಂನು ವೊದಿ ಕಥಾ ಪ್ರಸಂಗವಂನು ಹೇಳತಕ್ಕದ್ದಕ್ಕೆ ಬುದ್ಧಿವಂತನಾದವನ್ನು ವಬ್ಬ,-ರಾಕ್ಷಸ ವೇಷ ಮುಂತಾದ್ದಂನು, ಹಾಡತಕ್ಕವರು ನಾಲ್ಕು ಜನ—ಉಭಯಂ ಐದು ಜನವಂನು ಯಿಲ್ಲಿಗೆ ಕಳುಹಿಸಿ ಕೊಟ್ಟಲ್ಲಿ ಅವರಿಗೆ ಸಂಬಳ ಮುಂತಾದ್ದಂನು ಮಾಡಿಶಿ ಕೊಡುತ್ತಾ ಇದೆ..."[೯]

ದಕ್ಷಿಣ ಕನ್ನಡಜಿಲ್ಲೆಯ ಯಕ್ಷಗಾನ ಆಟವನು ನೋಡಿ ಸುಪ್ರೀತರಾಗಿದ್ದ ದೊರೆಗಳು ಆ ಕಲಾವಿದರನ್ನು ತಮ್ಮಲ್ಲಿಯೇ ನಿಲ್ಲಿಸಿಕೊಂಡು ಯಕ್ಷಗಾನದ ನಿಯತವಾದ ಪ್ರಯೋಗಗಳ ವ್ಯವಸ್ಥೆ ಮಾಡಿದ್ದುದು ಮಹತ್ವದ ಅಂಶವಾಗಿದೆ. ಅದಕ್ಕಾಗಿ ಶೇಷಪ್ಪನೆಂಬ ಗೊತ್ತುಗಾರನಿದ್ದನಲ್ಲವೆ. ಅವನು ಆ ಹಿಂದೆ ಕಳುಹಿದ ವೇಷಧಾರಿಗಳಲ್ಲೊಬ್ಬನ ಮಗನಾಗಿದ್ದನು.

ಯಕ್ಷಗಾನ ಕಲೆಯು ಮೂಲದ ತಾಣವನ್ನು ದಾಟಿಕೊಂಡು ಹೇಗೆ ಹಬ್ಬುತ್ತ ನಡೆದಿತ್ತೆನುವುದಕ್ಕೆ ಮೇಲಿನ ಸಂದರ್ಭವು ನಿದರ್ಶನವಾಗಿದೆ. ಈ ಹಬ್ಬುಗೆಯು ಹದಿನೆಂಟನೆಯ ಶತಮಾನದಿಂದಲೇ ಆರಂಭವಾಗಿದ್ದಿತು. ಆ ಮುಂದಿನ ಕಾಲದಲ್ಲಿ ಅದರ ಉತ್ತಮ ಫಲಿತಾಂಶವೆಂದರೆ ಲಿಂಗರಾಜನಂತಹ ರಾಜವಂಶೀಯನು ಸ್ವಯಂ ಕೃತಿಕಾರನಾಗಿ ನಿಂತುದು. ಅಲ್ಲದೆ ಅವನ ಸಕ್ರಿಯ ಪ್ರೋತ್ಸಾಹದ ಬಗೆಯನ್ನು ಕೇಳಿದವನಾಗಿ ಘಟ್ಟದ ಕೆಳಗಣಿಂದ ಒಬ್ಬ ಕಲಾವಿದ–ಪ್ರಸಂಗಕಾರನು ಮೈಸೂರಿಗೆ ಬಂದು ಅಲ್ಲಿಯೇ ನೆಲೆಸಿದ ಸಂದರ್ಭವನ್ನೂ ಈ ಹಿಂದೆ <೬೪> ಗಮನಿಸಿದ್ದೇವೆ. ಇತ್ತ ಲಿಂಗರಾಜನ ಬಹುಸಂಖ್ಯೆಯ ಪ್ರಸಂಗಗಳು ಅವನ ಬಹುಶ್ರುತತ್ವ, ಸರಸ ಕವಿತ್ವಗಳಿಗೆ ಅನುಗುಣವಾಗಿದ್ದು

ಯಕ್ಷಗಾನ ಪ್ರಸಂಗ ರಚನೆಗೆ ಮಾದರಿಯಾಗಿವೆ. ಅವನಂತೆಯೇ ಪ್ರಾಸಾದಿಕ ಕವಿಯಾಗಿದ್ದ ನಂಜುಂಡ ಭಾಗವತನು[೧೦] ಹದಿನೇಳು ವಿವಿಧ ಪ್ರಸಂಗಗಳನ್ನು ರಚಿಸಿದ್ದಾನೆ.*

ಯಕ್ಷಗಾನ ಕವಿಗಳು ಸಾಮಾನ್ಯವಾಗಿ ರಾಮಾಯಣ, ಭಾರತ, ಭಾಗವತ ಮುಂತಾದ ಪ್ರಸಿದ್ಧ ಗ್ರಂಥಗಳಿಂದ ಅದೂ ಜನತೆಗೆ ಪರಿಚಿತವಿರುವ ಕಥಾನಕಗಳನ್ನೆ ಆಯ್ದುಕೊಂಡು ಪ್ರಸಂಗಗಳನ್ನು ರಚಿಸಿದುದು ಕಂಡುಬರುತ್ತದೆ. ಆದರೆ ಹೊಸದನ್ನು ಅರಸಿಕೊಂಡು ಹೋಗುವ ಮನೋಧರ್ಮವನ್ನು ಕೆಲವರು ತೋರಿದ್ದಾರೆ. ಮುದ್ದಣನು ಅಂಥವನೆಂದು ಕಂಡಿದ್ದೇವೆ. ಬೇರೆ ಹಲವು ಕವಿಗಳು 'ಆನಂದ ರಾಮಾಯಣ' ಮುಂತಾದ ಪುರಾಣ ಕಾವ್ಯಗಳನ್ನು ತಡಕಾಡಿದ್ದಾರೆ. ಅಣ್ಣಾಜಿ ಕೃಷ್ಣ ವರ್ಣಾರ್ರುವಿನ ಮೂರು ಪ್ರಸಂಗಗಳು ಪ್ರಾಕೃತ ರಾಮಾಯಣದಿಂದ ಎತ್ತಿಕೊಂಡವುಗಳು.[೧೨] 'ಪ್ರಪನಾಮೃತ, ಪುರೂರವ ಚರಿತ್ರೆ, ವಿಜಿತಾಶ್ವ ವಿಜಯ ಕಾಳಗ, ಶಶಿರೇಖಾ ಪರಿಣಯ, ಮೀನಾಕ್ಷಿ ಕಲ್ಯಾಣ' ಮುಂತಾದ ಪ್ರಸಂಗಗಳು ಪೂರ್ವ ಪರಿಚಿತವಲ್ಲದ ಕಥಾನಕಗಳೆಂಬುದನ್ನು ನೆನೆಯಬೇಕು.

ಚಾರಿತ್ರಿಕ ಪ್ರಸಂಗಗಳ ರಚನೆಯು ೧೮ನೆಯ ಶತಮಾನದಲ್ಲಿ ಕಾಣಿಸಿಕೊಂಡಿತೆಂಬುದನ್ನು ಈ ಹಿಂದೆ <೮೧> ಸೂಚಿಸಲಾಗಿದೆ. ಅದನ್ನು ಹೆಚ್ಚಾಗಿ ಆರಂಭ ಮಾಡಿದವರು ವೀರಶೈವರು. ಪರಿಣಾಮವಾಗಿ ಓಹಿಲಯ್ಯ, ಸಾರಂಗಧರ, ಸಿರಿಯಾಳ ಮೊದಲಾದ ಪುರಾತನರ, ಅದರಂತೆ ಬಸವಣ್ಣ (ಮಹಾಂತದೇಶಿಕ ಕೃತ), ಅಲ್ಲಮಪ್ರಭು (ನಂದಪ್ಪ ಕೃತ) ಮುಂತಾದ ಶಿವಶರಣರ ಚರಿತ್ರೆಗಳೂ ಯಕ್ಷಗಾನ ರೂಪದಲ್ಲಿ ತಲೆದೋರಿದುವು. ಮೈಸೂರ ದೊರೆ ಚಾಮರಾಜೇಂದ್ರರು ೧೮೯೪ರಲ್ಲಿ ತೀರಿಕೊಂಡ ಎರಡು ವರ್ಷಗಳಲ್ಲಿಯೆ ಅವರ ಕುರಿತು ಒಂದು ಪ್ರಸಂಗವನ್ನು ರಚಿಸುವಲ್ಲಿಗೂ ಇದು ಮುಂದುವರಿಯಿತು. ಇನ್ನು ಜೈನ ಮತದವರ ಚಾರಿತ್ರಿಕ ಪ್ರಸಂಗಗಳಲ್ಲಿ ಚಂದನೆ, ವಿಜಯಕುಮಾರ ಇವರ ಕಥಾಪ್ರಸಂಗಗಳನ್ನು ಹೆಸರಿಸಬೇಕು.

ಹಬ್ಬುಗೆಯು ಪ್ರಗತಿಯ ಲಕ್ಷಣವಾಗಿದೆ. ಆದರೆ ಅದು ಕೇವಲ ಅನುಕರಣ ರೂಪವಾಗಿದ್ದರೆ ಪ್ರಗತಿಯನ್ನು ಸೂಚಿಸುವದಿಲ್ಲವೆಂದೇ ತಿಳಿಯಬೇಕು. ಯಕ್ಷಗಾನ ಪ್ರಯೋಗಕ್ಕೆ ವೀರ–ಶೃಂಗಾರ ರಸ ಪ್ರಧಾನವಿರುವ ವಿಶಿಷ್ಟ ಕಥಾವಸ್ತು ಬೇಕು ಹಾಗೂ ಅದು ಸುಭಗ ಶೈಲಿಯ ಕಾವ್ಯ ರಚನೆಯಾಗಿರಬೇಕು. ಚೆನ್ನಾಗಿ ಹಾಡುವ ಭಾಗವತರಿರಬೇಕು. ಅದರ ಅರ್ಥವನ್ನು ಸರಿಯಾಗಿ ಗ್ರಹಿಸಿ, ಗದ್ಯದಲ್ಲಿ ಹೇಳುವ ಮತ್ತು ಅಭಿನಯ

---

* ಮೈಸೂರಿನಲ್ಲಿ ಈ ರೀತಿಯಾಗಿ ಹಬ್ಬಿದ ಯಕ್ಷಗಾನ ಪ್ರಯೋಗಗಳ ಕುರಿತು ಬಿ.ಎಲ್. ರೈಸ್ ಮೈಸೂರು ಗಜೆಟಿಯರ್‌ನಲ್ಲಿ ಈ ರೀತಿಯಾಗಿ ಪ್ರಸ್ತಾಪ ಮಾಡಿದ್ದಾರೆ : In some parts of southern Mysore, almost every important village has periodical performances of these, the actors being some of the villagers themselves trained for the purpose.[೧೧]

ಕುಣಿತಗಳನ್ನು ಬಲ್ಲ ಪಾತ್ರಧಾರಿಗಳು ಬೇಕು. ಇವೆಲ್ಲ ಅಂಗಗಳನ್ನು ಒಳಗೊಂಡು ಪ್ರತ್ಯೇಕ ಜಾನಪದ ಕಲೆಯಾಗಿ ಯಕ್ಷಗಾನವು ಬೆಳೆದಿದ್ದಾಗ ಬರಿಯೆ ಯಕ್ಷಗಾನ ಪ್ರಸಂಗ ರಚನೆಯೊಂದರಿಂದ ಆ ಕಲೆಯು ಅನ್ಯತ್ರ ಹಬ್ಬಲಾರದು. ಹೀಗಿದ್ದರೂ ತಮಗೆ ತೋಚಿದ ಒಂದು ಕಥಾವಸ್ತುವನ್ನು (ಅದು ಯಾವುದೂ ಆದೀತು) ವಿವಿಧ ಮಾತ್ರಾವೃತ್ತದ ಪದ್ಯಗಳ ಮತ್ತು ಹಾಡುಗಳ ಮೂಲಕ ಹೆಣೆಯುತ್ತ ಯಕ್ಷಗಾನದ ಹೆಸರಿನಲ್ಲಿ ಅದನ್ನು ಹೊರತರುವ ಪ್ರಯತ್ನವು ಹತ್ತೊಂಬತ್ತನೆಯ ಶತಮಾನದಲ್ಲಿ ವಿಶೇಷವಾಗಿ ನಡೆಯಿತು.

ದಕ್ಷಿಣ ಕನ್ನಡ ಜಿಲ್ಲೆಯ ಹೊರಗಿದ್ದ ಇಂಥ ಯಕ್ಷಗಾನ ಕವಿಗಳು ಸುಮಾರು ಐವತ್ತು ಜನ ದೊರೆಯುತ್ತಾರೆ. ಮೇಲ್ಕಂಡ ಕಾರಣದಿಂದ ಅವರಲ್ಲಿ ನಿಜವಾದ ಯಕ್ಷಗಾನ ಕವಿಗಳೆನ್ನುವವರು ಕಡಮೆ. ಅಲ್ಲದೆ ಅನೇಕರಿಗೆ ಮತೀಯ ದೃಷ್ಟಿಯು ಮೇಲ್ವಾಯ್ದು ಬಂದು, ಅದಕ್ಕನುಗುಣವಾದ ಕೃತಿಗಳನ್ನು ರಚಿಸಿ ಅವನ್ನು ಯಕ್ಷಗಾನವೆಂದು ಕರೆದರು. ಒಂದೇ ಶತಮಾನಾವಧಿಯಲ್ಲಿ ಐವರು ಪ್ರಹ್ಲಾದ ಚರಿತ್ರೆಯನ್ನು ಯಕ್ಷಗಾನ ರೂಪದಲ್ಲಿ ಬರೆದದ್ದರಲ್ಲಿಯೂ, ವೀರ–ಶೃಂಗಾರ ರಸಗಳಿಗೆ ಪ್ರಾಮುಖ್ಯ ದೊರೆಯದ ಶಿವಭಕ್ತ, ಜೈನಯತಿಗಳ ಚರಿತ್ರೆಗಳನ್ನು ನಿರೂಪಿಸಿದ್ದರಲ್ಲಿಯೂ ಈ ಮಾತಿನ ಸತ್ಯತೆಯನ್ನು ಮನಗಾಣಬಹುದು. ಇಂಥ ಕೃತಿ ರಚನೆಯಿಂದ, ಯಕ್ಷಗಾನವೆನ್ನುವುದು ಚಂಪೂ, ವಚನ, ಗದ್ಯ, ಕಾವ್ಯ ಎನ್ನುವ ಹಾಗೆ ಒಂದು ಸಾಹಿತ್ಯ ಪ್ರಕಾರವಾಗಿ ರೂಪುಗೊಂಡಿತಲ್ಲದೆ, ಪ್ರಯೋಗಕ್ಕನುಗುಣವಾದ ಬಯಲಾಟದ ಪ್ರಸಂಗವೆಂದಲ್ಲ. ಜೈನರ ವಿರಕ್ತಿ ಪ್ರತಿಪಾದಕವಾದ 'ಚಂದನೆಯ ಕಥೆ'ಯಾಗಲೀ, ತತ್ವಜ್ಞಾನ ವಿವೇಚನೆಯು ಹೆಚ್ಚಾಗಿ ಬಂದಿರುವ 'ಮಾನಸ ಚರಿತ್ರೆ' ಯಾಗಲೀ, ಚಾಮರಾಜೇಂದ್ರ ಒಡೆಯರಂಥವರ ಜೀವನ ಕಥೆಯಾಗಲೀ ಯಕ್ಷಗಾನ ಪ್ರಸಂಗ ರಚನೆಗೆ ಸೂಕ್ತವಲ್ಲವೆಂಬುದನ್ನು ಆ ಕವಿಗಳು ಯೋಚಿಸಲಿಲ್ಲ. ಅವರಲ್ಲಿ ಕೆಲವರ ಕವಿತ್ವವೇನೊ ಮೇಲ್ಮಟ್ಟದ್ದಾಗಿದೆ. ಆದರೆ ಉತ್ತಮ ಕವಿತಾ ರಚನೆಯೊಂದೇ ಯಕ್ಷಗಾನ ಪ್ರಸಂಗವೆಂಬ ಹೆಸರನ್ನು ಸಾರ್ಥಕಗೊಳಿಸಲಾರದು.

ಆದರೂ ಇಂಥ ಕೃತಿಗಳು ವಿಶೇಷ ಪ್ರಚಾರದಲ್ಲಿ ಬಂದವು! ಅದಕ್ಕೆ ಕಾರಣವೆಂದರೆ ಮುದ್ರಣ ಸೌಲಭ್ಯ. ಕ್ರಿ.ಶ. ೧೮೬೦ನೆಯ ದಶಕದಿಂದ ವಿವಿಧ ಊರುಗಳಲ್ಲಿ ಮುದ್ರಣ ವ್ಯವಸಾಯಕ್ಕೆ ತೊಡಗಿದ ದೇಶೀಯರು ಯಕ್ಷಗಾನ ಪ್ರಕಾರದ ಜನಪ್ರಿಯತೆಯನ್ನು ಮನದಂದು, ಅವು ಪ್ರದರ್ಶಿತವಾಗಲಿ, ಬಿಡಲಿ ಅವನ್ನು ಮುದ್ರಿಸತೊಡಗಿದರು. ಈ ಮುದ್ರಿತ ರೂಪದಿಂದಾಗಿ ಸಾಮಾನ್ಯರಿಗೂ ತಿಳಿಯುವ ಪದ್ಯಗಳನ್ನು ಬೇಕೆಂದಾಗ ಮನೆಯಲ್ಲಿಯೆ ಹಾಡಿಕೊಳ್ಳುವ ಅವಕಾಶವೂ ಜನತೆಗೆ ಒದಗಿ ಬಂದಿತೆಂದು ಸಮಾಧಾನ ತಾಳಲಾರದು.

ವರುಷ ವರುಷಕ್ಕೆ ಈ ಬಗೆಯ ಪ್ರಸಾರವು ಹೆಚ್ಚುತ್ತ ನಡೆಯಿತು. ಅಂತೆಯೇ ಬಿ. ಎಲ್. ರೈಸ್ ಪುನಃ ಅದನ್ನು ಪ್ರಸ್ತಾಪಿಸಿದ್ದಾರೆ :–

It was part of my duty for several years annually to review the publications of Mysore, the principal country in which Kannada works are printed and my experience leads me to the opinion that (omitting notice of school books) the Yakshagana stories, the Mahabharata, Ramayana and other similar works, have been the most popular books of later years.[೧೩]

ಇಂಥ ಯಕ್ಷಗಾನ ಕೃತಿಗಳ ಮತ್ತು ಅವುಗಳ ಪ್ರಕಟನೆಯ ಒಂದು ಮಾದರಿಯನ್ನು ನೋಡೋಣ. ಕೃತಿಯ ಹೆಸರು 'ಸುಧಾಮ ಚರಿತ್ರ.' ಇದರಲ್ಲಿಯ ಕೆಲವು ಪದ್ಯಗಳನ್ನು ಅವು ಅಚ್ಚಾದ ರೀತಿಯಲ್ಲಿಯೇ ಪರಿಶೀಲಿಸಬೇಕು.

ಮೊದಲ ಪದ್ಯ (ನಾಂದೀ) ಇಂತಿದೆ :—

"ದ್ವಿಪದೆ.

ಶ್ರೀ ಪದ್ಮನಾಭನೆ ಪದ್ಮಣೀ ಸಖನೆ
ಪದ್ಮಾಯತಾಕ್ಷನೆ ಪದ್ಮಜ ಪಿತನೆ
ಪದ್ಮ ಪೋಲುವ ನಿನ ಪಾದಯುಗವನ
ಮೋದದಿಂ ಪೂಜಿಪೆನು ಮುದದಿಂದ ಯನಾ
ವುದ್ಧಾರ ಮಾಡಯ್ಯ ವುರುಗೇಶ ಶ್ಯೆಯಾ
ಈ ಧಾರುಣೀಯೊಳಗೆ ನಿಂನ ಸಖನಾದ
ಆ ಸುಧಾಮನ ಕಥೆಯ ರಚನೆ ಮಾಡಿಸು ಯನ್ನ
ವಚನದಿಂ ಘನ ಸುಚರಿತ್ರೆಯಾಗಿರಲಿ
ಸುಕವಿಗಳು ಕೇಳಿ ಭ್ರಮೆಯಿಟ್ಟು ಪಾಲಿಸುವುದು
ಬಾಲಕನಲ್ಲಿ ಶ್ರೀ ಅಹೋಬಲನಾಥ ಶ್ರೀ ನಾರಸಿಹ್ಮಾ"

(ದ್ವಿತೀಯ ಪ್ರಾಸ ಇದರಲ್ಲಿಲ್ಲ.)

"ರಾಗ ಹುಶೇನಿ—
ಪ|| ಹ್ಯಾಂಗೆ ಪೋಗಲಿ ಯದುಪನಲ್ಲಿಗೆ ಯೇನು ಕೊಡಲಿ ಶ್ರೀಕೃಷ್ಣಗೆ
ನಾಗಶಯನನು ರಕ್ಷಿಪ ರಿಕ್ತ ಹಸ್ತದಿ ಯೀಗ ನಾ ||....

ವ|| ಈ ರೀತಿಯಿಂದ ವಿಪ್ರನು ಶ್ರೀ ಕೃಷ್ಣಮೂರ್ತಿಯಂನು ನೆನೆದು ಆನಂದಭರಿತನಾಗಿ

ತನ್ನ ನಿಜಗೃಹದಿಂದ ಪೊರಟು ಪುರವನ್ನು ದಾಟಿ ದ್ವಾರಕಾವತಿಯನ್ನು ಪೋಗುತಿರುವ ಮಾರ್ಗದಲ್ಲಿ ಶಕುನಂಗಳಾದ ಬಗೆ...."

ಇದೇ 'ಸುಧಾಮ ಚರಿತ್ರ'ದ ಶೀರ್ಷಿಕಾ ಪುಟ ಈ ರೀತಿ ಇದೆ:—

ಸುಧಾಮ ಚರಿತ್ರವೆಂಬ
ಯಕ್ಷಗಾನ ಪ್ರಬಂಧವು
ಸಕಲ ಭಕ್ತಜನೋಪಕಾರಾರ್ಥವಾಗಿ
ಹಿರಿಯ ಧಾರಾಪುರದ ತಿಮ್ಮಪ್ಪದಾಸರೆಂಬ
ಮಹಾಕವಿಯಿಂದ
ಕನ್ನಡಭಾಷೆಯೋಳ್ ರಚಿಸಲ್ಪಟ್ಟು
ಪಂಡಿತರಿಂದ ಪರಿಷ್ಕೃತವಾಗಿ
ವಿ. ರಾಮಯ್ಯನವರಿಗಾಗಿ
ಎರಡನೇ ಛಾಪೆ
ಬೆಂಗಳೂರು
ವಿಚಾರದರ್ಪಣ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲ್ಪಟ್ಟಿತು. ಈ ಪುಸ್ತಕವು
ಬೆಂಗಳೂರು ಚೌಕದ ಬಳಿಯಲ್ಲಿರುವ ಕರ್ನಾಟಕ ಬುಕ್ ಡಿಪೋ
ವಿ. ರಾಮಯ್ಯನವರಿಂದ ಮಾರಲ್ಪಡುತ್ತದೆ.
ಇದರ ಕ್ರಯ ೫ ಆಣೆ
೧೮೮೨ (Registered Copyright)

'ಮಹಾಕವಿ' ಯಿಂದ ರಚಿಸಲ್ಪಟ್ಟು 'ಪಂಡಿತರಿಂದ ಪರಿಷ್ಕೃತ' ವಾಗಿಯೂ ಇದರ ಭಾಷೆ, ಶೈಲಿಗಳು ಬಹುಮಟ್ಟಿಗೆ ಅಪದ್ಧವಾಗಿ ಉಳಿದಿವೆ.*

ಯಕ್ಷಗಾನ ಪ್ರಸಂಗಗಳು ಮುದ್ರಣದ ಮೂಲಕವಾಗಿ ಉತ್ತರ ಕರ್ನಾಟಕದಲ್ಲಿಯೂ ಪ್ರಸಾರಗೊಂಡವು. ಹಾಗೆಂದು ಅಲ್ಲಿಯವರೇ ಪ್ರಸಂಗಗಳನ್ನು ರಚಿಸಿದ ಉದಾಹರಣೆಗಳಿಲ್ಲ. ಆದರೆ ಕನ್ನಡ ಜಿಲ್ಲೆಗಳಿಂದ ಆಟದ ಮೇಳಗಳು ಅತ್ತ ಕಡೆ ಸಂಚರಿಸುತ್ತಿದ್ದವು. ಇಂಥ ಮೇಳವೊಂದು ೧೮೪೦ರಲ್ಲಿ ಹೊರನಾಡಿನಲ್ಲಿ ಸಾಂಗಲಿಯ ತನಕ ಹೋಗಿ, ಆಟಗಳನ್ನು ಪ್ರದರ್ಶಿಸಿ ತನ್ಮೂಲಕ ಮರಾಠೀ ನಾಟಕಕ್ಕೆ ಪ್ರೇರಣೆ ಒದಗಿಸಿದ್ದನ್ನು ನೋಡಿದರೆ,

* ಆಗಿನ ಯಕ್ಷಗಾನ ಪ್ರಕಟನೆಗಳ ಕುರಿತು ಬೆನಗಲ್ ರಾಮರಾಯರು ಹೀಗೆ ಟೀಕಿಸಿದ್ದಾರೆ:– ಸಾಮಾನ್ಯತಃ ಯಕ್ಷಗಾನ ಪ್ರಸಂಗದ ಪುಸ್ತಕಗಳು, ಬಜಾರೀ ನಾಟಕದ ಪುಸ್ತಕಗಳ ಹಾಗೆಯೇ ಕೆಟ್ಟ ಕಾಗದದ ಮೇಲೆ ನೂರಾರು ತಪ್ಪುಗಳೊಡನೆ (ಆದರೆ 'ಪಂಡಿತರಿಂದ ಪರಿಷ್ಕರಿಸಲ್ಪಟ್ಟು' ಎಂಬ ಮಾತು ರಕ್ಷಾಪತ್ರದ ಮೇಲೆ ತಪ್ಪದೆ ಬರೆದಿದೆ) ಕಣ್ಣುಬೇನೆ ತರತಕ್ಕ ಮೊಳೆಗಳಿಂದ ಅಚ್ಚು ಹಾಕಲ್ಪಡುತ್ತಿದ್ದವು.

ಒಳನಾಡಿನಲ್ಲಿಯೂ ವಿವಿಧ ಮೇಳಗಳು ಸಾಕಷ್ಟು ಕಾರ್ಯನಿರತವಾಗಿದ್ದುವೆಂದೇ ತಿಳಿಯತಕ್ಕುದು. ಅಂತೆಯೇ, ಧಾರವಾಡ ಜಿಲ್ಲೆಯಲ್ಲಿ ಮುದ್ರಣ ಯಂತ್ರವು ಕೆಲಸಕ್ಕೆ ತೊಡಗಿದ ೧೮೬೦ನೆಯ ದಶಕದಲ್ಲಿಯೇ ಕೆಲವು ಯಕ್ಷಗಾನ ಪ್ರಸಂಗಗಳು (ದಕ್ಷಿಣ ಕನ್ನಡ ಜಿಲ್ಲೆಯವರು ಬರೆದದ್ದು) ಅಚ್ಚಾದುವು. ದೂರದ ಮುಂಬಯಿ ನಗರದಲ್ಲಿ ಕರ್ಕಿ ವೆಂಕಟರಮಣ ಶಾಸ್ತ್ರಿಗಳು ಈ ದಿಶೆಯಲ್ಲಿ ವಿಶೇಷ ಕೆಲಸ ಮಾಡಿದ್ದಾರೆ. ಅವರ ಸಂಪಾದಕತ್ವದಲ್ಲಿ ಯಾಗಪ್ಪನ 'ಕೃಷ್ಣ ಸಂಧಾನ', ಹಟ್ಟಿಯಂಗಡಿ ರಾಮಭಟ್ಟನ 'ಬಿಲ್ಲ ಹಬ್ಬ, ಕಂಸವಧೆ' ಮತ್ತು ಇನ್ನು ಹಲವು ಪ್ರಸಂಗಗಳು ಮುದ್ರಿತವಾದುವು.

ಯಕ್ಷಗಾನದ ಹಬ್ಬುಗೆಯ ಈ ಕಾಲಾವಧಿಯಲ್ಲಿ ಅದರ ಮೂಲ ಲಕ್ಷಣಗಳನ್ನು ಉಳಿಸಿಕೊಳ್ಳಲು ಸಮರ್ಥವಾದ ಕೃತಿಗಳು ನಿಃಸಂಶಯವಾಗಿ ಸ್ವಾಗತವನ್ನು ಪಡೆದವು. ಶೃಂಗಾರ, ವೀರ ರಸಗಳನ್ನು ಪ್ರಭಾವಶಾಲಿಯಾಗಿ ರೂಪಿಸಲಾಗದ ಮತ್ತು ಅರ್ಥ ಹೇಳುವುದಕ್ಕೆ ಅನುಕೂಲಿಸಲಾಗದ ಕೃತಿಗಳು ಹಿಂದೆ ಬಿದ್ದುವು. ಮಯ್ಯವಟಿ ವೆಂಕಟರಮಣಯ್ಯನು ಅದೇ ತಾನೇ ನಾಡಿನಲ್ಲಿ ಪ್ರಚುರವಾಗತೊಡಗಿದ್ದ ವ್ರತಕಥೆ–'ಸತ್ಯನಾರಾಯಣ ಮಾಹಾತ್ಮ್ಯೆ'ಯನ್ನು ಬರೆದನು. ಅದರಂತೆ 'ಮಾರ್ಜಾಲ ಮೂಷಿಕ', 'ಧೂಮಪತ್ರ (ತಂಬಾಕುವಿನ) ಪ್ರಸಂಗ', 'ಪಲಾಂಡು (ನೀರುಳ್ಳಿ) ಚರಿತ್ರೆ' ಇವನ್ನು ನಾವೀನ್ಯ ದೃಷ್ಟಿಯಿಂದ ಮಾತ್ರ ಇಲ್ಲಿ ನಮೂದಿಸಬೇಕು. ಅವು ಪೌರಾಣಿಕ ಪ್ರಸಂಗಗಳ ಮಟ್ಟಕ್ಕೆ ನಿಲ್ಲುವಂತಹವಲ್ಲ. ಇದೇ ಕಾರಣದಿಂದ, ಅನೇಕ ಚಾರಿತ್ರಿಕ ಪ್ರಸಂಗಗಳು ಜನತೆಯ ಗಮನವನ್ನು ಸೆಳೆಯದೇ ಹೋದುವು. ಹೀಗೆ ಯಕ್ಷಗಾನ ಪರಂಪರೆಯಲ್ಲಿ ಇಷ್ಟ ಬಂದಂತೆ ಬದಲಾವಣೆ ಮಾಡಲೆಳಸಿದುದರ ಚಿಹ್ನೆಗಳು ಕಳೆದ ಶತಮಾನದ ಉತ್ತರಾರ್ಧದಲ್ಲಿಯೆ ಕಂಡು ಬಂದವು. ಆದರೆ ಅವಕ್ಕೆ ಎಳ್ಳಷ್ಟೂ ಪುರಸ್ಕಾರ ದೊರೆಯಲಿಲ್ಲ.

## ಸಂದರ್ಭ ಸೂಚಿ


೧. ಯಕ್ಷಗಾನ ಬಯಲಾಟ, ಪು. ೧೮೭

೨. ಅದೇ, ಪು. ೨೨೭

೩. ಯಕ್ಷಗಾನ (ಪತ್ರಿಕೆ) ಸೆಪ್ಟೆಂಬರ್ ೧೯೫೮ ಮತ್ತು ಡಿಸೆಂಬರ್ ೧೯೫೮ : ಕೆ. ವೆಂಕಟರಾಯಾಚಾರ್.

೪. ಕ್ರೈಸ್ತ ಸಭಾಪತ್ರ, ೧೮೮೩

೫. ಮುದ್ದಣ, ಪು. ೬೫

೬. ಅದೇ, ಪುಟ ೧೪

೭. ಅದೇ, ಪುಟ ೧೦

೮. ಅದೇ, ಪು. ೩೬

೯. ಪಾರ್ತಿ ಸುಬ್ಬ, ಪು. ೧೨೧

೧೦. ಹರಿಶ್ಚಂದ್ರನ ಕಥೆಯ (ನಂಜುಂಡ ಭಾಗವತ ಕೃತ) ಪೀಠಿಕೆ.

೧೧. Mysore : A Gazetteer Vol. 1. p. 504

೧೨. ಗ್ರಂಥಕರ್ತರ ಚರಿತ್ರಕೋಶ, ಪು. ೧ Karnataka Sabdanusasanam, ed. by B.L. Rice– ಪೀಠಿಕೆ

೧೩. ಮುದ್ದಣ, ಪು. ೩೪

ಪ್ರಕರಣ : ೯

# ಅರುಣೋದಯದ ಆರಂಭಕಾರರು

ವಿದೇಶೀಯ ಪ್ರಭಾವದಿಂದ ಸಂಪೂರ್ಣವಾಗಿ ದೂರ ಉಳಿದು ಅನೇಕ ಕವಿ–ಲೇಖಕರು ಹಳೆಯ ಕ್ರಮದಲ್ಲಿಯೇ ಕೃತಿ ರಚನೆ ಮಾಡಿದರೆಂಬುದನ್ನು ಹಿಂದಿನ ಎರಡು ಪ್ರಕರಣಗಳಲ್ಲಿ ನೋಡಿದೆವು. ಅವರಲ್ಲಿ ಹಲವರು ಗದ್ಯಕಾರರಾಗಿದ್ದರೂ ಅದು ಆಧುನಿಕ ದೃಷ್ಟಿಯಿಂದಲ್ಲ; ಆ ರೀತಿಯ ಬರವಣಿಗೆಯು ೧೮ನೆಯ ಶತಮಾನದಿಂದಲೇ ಬಂದುದಾಗಿತ್ತು–ಎಂಬುದನ್ನು ಈ ಹಿಂದೆ ಗಮನಿಸಿದ್ದೇವೆ.

ಇತ್ತ ಪಾಶ್ಚಾತ್ಯ ಶಿಕ್ಷಣ ಪದ್ಧತಿಯಿಂದಾಗಿ ಹೊಸ ಪೀಳಿಗೆಯೊಂದು ರೂಪುಗೊಳ್ಳತೊಡಗಿತು. ಸಾಹಿತ್ಯ ರಚನೆಯಲ್ಲಿ ಹೊಸ ವಿಚಾರಗಳನ್ನು ತರಬೇಕೆಂದು ಹವಣಿಸಿತು. ಬೇರೆ ಭಾಷೆಗಳಲ್ಲಿ ಆ ವಿಚಾರವು ತಲೆದೋರಿದ್ದರೆ ಅವನ್ನು ಕನ್ನಡದಲ್ಲಿ ಕೊಡಬೇಕೆಂಬ ಸಹಜಾಕಾಂಕ್ಷೆ ಅವರದು. ಆದರೆ ಇಂಥ ಲೇಖಕರಲ್ಲಿ ಹಳೆಯದನ್ನು ಸಂಪೂರ್ಣವಾಗಿ ಬಿಟ್ಟುಕೊಡದೇ ಪೌರಾಣಿಕ ಕಥೆಗಳನ್ನೂ ಮುನ್ನಿನ ವೃತ್ತ ಧಾಟಿಗಳನ್ನೂ ಒಟ್ಟಿನಲ್ಲಿ ಉಳಿಸಿಕೊಂಡಿದ್ದಾರೆ. ಆದರೆ ಅವರು ಹೊಸತನವನ್ನು ಅರಸಿಕೊಂಡು ಹೋಗುವ ಮನೋಭಾವದವರಾಗಿದ್ದರು. ಅಂತಾಗಿ ಅವರನ್ನು ನಾವು ಹೊಸ ಯುಗದ ಆರಂಭಕಾರರೆಂದು ತಿಳಿಯಬೇಕಾಗಿದೆ.

ಇಂಥ ಸಾಹಿತ್ಯಕಾರರು ತಲೆದೋರಿದುದು ಕಳೆದ ಶತಮಾನದ ಉತ್ತರಾರ್ಧದಲ್ಲಿ. ಆ ದೃಷ್ಟಿಯಿಂದ ನಾಲ್ಕನೆಯ ಚಾಮರಾಜೇಂದ್ರರು ರಾಜ್ಯಭಾರ ವಹಿಸಿದ ೧೮೮೧ನೆಯ ವರ್ಷವು ಸಾಂಕೇತಿಕ ಮಹತ್ವದ್ದಾಗಿದೆ.

## ೯೧ ಮೈಸೂರ ಲೇಖಕರು

### ೯೧೧ ಚಾಮರಾಜೇಂದ್ರರು

ಯೋಗ್ಯತೆಯ ದೃಷ್ಟಿಯಿಂದ ಚಾಮರಾಜೇಂದ್ರ ಒಡೆಯರು ಮುಮ್ಮಡಿ ಕೃಷ್ಣರಾಜರಿಗಿಂತ ಕಡಿಮೆಯವರೇನಲ್ಲ. ಇಷ್ಟೇ, ಇವರ ಆಳಿಕೆಯು (೧೮೮೧-೧೮೯೪) ಕೃಷ್ಣರಾಜರದಷ್ಟು ದೀರ್ಘಕಾಲದ್ದಲ್ಲ. ಆಡಳಿತದ ಅನೇಕ ಕಷ್ಟಗಳು ಚಾಮರಾಜೇಂದ್ರರನ್ನೂ

ಎದುರಿಸಿದುವು. ಕ್ಷಾಮ ಮುಂತಾದವುಗಳಿಂದಾಗಿ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಆದರೂ ಅವರು ಮುಮ್ಮಡಿಯವರಂತೆಯೇ ವಿದ್ಯಾಪಕ್ಷಪಾತಿಯೂ ಉದಾರರೂ ಆಗಿದ್ದದರಿಂದ ಆಸ್ಥಾನದ ಹಾಗೂ ವಿದ್ವತ್ತಿನ ಪರಂಪರೆಯು ಮುಂದುವರಿಯಿತು. ಪ್ರಗತಿಪರ ದೃಷ್ಟಿಕೋನದಲ್ಲಿ, ಪಾಶ್ಚಾತ್ಯ ಸುಧಾರಣೆಗಳನ್ನು ಬರಮಾಡಿಕೊಳ್ಳುವಲ್ಲಿ ಚಾಮರಾಜೇಂದ್ರರು ಮುಮ್ಮಡಿಯವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ. ಅಲ್ಲದೆ ಉಜ್ವಲ ದೇಶಭಕ್ತಿಯನ್ನು ತೋರಿದ್ದಾರೆ. ಅವರು ಅದೇ ಆರಂಭವಾಗಿದ್ದ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯ ಪುರಸ್ಕರ್ತರಲ್ಲೊಬ್ಬರಾಗಿದ್ದರು. ಅದಕ್ಕಾಗಿ ಅಂದಿನ ವೈಸರಾಯನ ಕೋಪಕ್ಕೆ ಗುರಿಯಾದರೂ ಅದನ್ನವರು ಲೆಕ್ಕಿಸಲಿಲ್ಲ.* ಚಾಮರಾಜೇಂದ್ರರಲ್ಲಿ ಕಂಡುಬಂದ ಇನ್ನೊಂದು ಅಂಶವೆಂದರೆ ಅವರ ಪ್ರವಾಸಪ್ರಿಯತೆ. ಭಾರತದ ಇತರ ಪ್ರದೇಶಗಳಿಗೆ ಹೋಗಬೇಕು, ಬೇರೆ ಬೇರೆ ಜನರನ್ನು ಕಾಣಬೇಕು ಎಂಬ ಅವರ ಮನೋಭಾವವು ಪ್ರಗತಿಪರವಾದುದು. ಹಾಗೆ ಪುಣೆ, ಮುಂಬಯಿ, ಕಲ್ಕತ್ತ ಮುಂತಾದ ನಗರಗಳನ್ನು ಅವರು ಸಂದರ್ಶಿಸಿದ್ದರು. ಅವರು ಕಾಲವಾದುದು ಹೀಗೆ ಪ್ರವಾಸದಲ್ಲಿದ್ದಾಗಲೇ.

ಚಾಮರಾಜೇಂದ್ರರು ಸ್ವತಃ ಯಾವ ಗ್ರಂಥವನ್ನೂ ರಚಿಸಲಿಲ್ಲ. ಅವರ ಹೆಸರಿನಲ್ಲಿ ಅನ್ಯರು ಬರೆದದ್ದೂ ಇಲ್ಲ. ಆದರೆ ಮುಮ್ಮಡಿ ಕೃಷ್ಣರಾಜರ ಜೀವಿತ ಕಾಲದಲ್ಲಿ ರಚಿತವಾದ ಗ್ರಂಥಗಳ ಮುದ್ರಣ ಪ್ರಕಟನೆಗಳಿಗೆ ಚಾಲನೆಯಿತ್ತರು. ಮುಖ್ಯವಾಗಿ ಕನ್ನಡ ನಾಟಕರಂಗವನ್ನು ಪುನರುಜ್ಜೀವಿಸಿದರು. ರಾಜ್ಯಸೂತ್ರ ವಹಿಸಿದ ಮರುವರ್ಷವೇ 'ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭೆ' ಯನ್ನು ಸ್ಥಾಪಿಸಿ ತಾವು ನೋಡಿದ್ದ ಪಾರ್ಸೀ, ಮರಾಠೀ ನಾಟಕಗಳಂಥವನ್ನು ಕನ್ನಡದಲ್ಲಿ ಆಡಿಸಲು ಅವರು ಪ್ರಯತಪಟ್ಟುದು, ಅರುಣೋದಯ ಕಾಲದ ಮಹತ್ವದ ಹೆಜ್ಜೆಯಾಗಿದೆ. ಅದಕ್ಕಾಗಿ ಅವರಿಗೆ ದೊರೆತಿದ್ದ 'ಕರ್ಣಾಟಕ ನಾಟಕ ನಿರ್ಮಾಪಕ' ಎಂಬ ಬಿರುದು (ಮೈಸೂರ ಸೀಮೆಯ ಮಟ್ಟಿಗೆ) ಅನ್ವರ್ಥಕವಾದುದು. ಚಾಮರಾಜೇಂದ್ರರ ಮರಣದ ಕುರಿತು 'ವೀಣೆಗಳು ಮುಸುಕಿಟ್ಟು ಮೌನದಿ ಕೋಣೆಯೊಳಡಗಿದವು. ಬಿನ್ನನೆ ಜಾಣಳಿದು ನಾಟಕಗಳುಳಿದವು ತೆರೆಯ ಮರೆಯೊಳಗೆ' ಎಂಬೊಂದು ಚರಮ ಗೀತೆಯು ಅವರ ನಾಟಕ ಕಲಾ ಪೋಷಣೆಯ ಗರಿಮೆಯನ್ನು ಸೂಚಿಸುತ್ತದೆ.[೧]

---

* ಆ ಸಂದರ್ಭ ಹೀಗಿದೆ : ೧೮೮೫ರಲ್ಲಿ ಸ್ಥಾಪಿತವಾದ ಕಾಂಗ್ರೆಸ್ಸಿನ ೨ನೇ ಅಧಿವೇಶನವು ಮದ್ರಾಸದಲ್ಲಿ ಸೇರಲಿದ್ದಾಗ (೧೮೮೭) ಚಾಮರಾಜೇಂದ್ರರು ಸ್ವಾಗತ ಸಮಿತಿಯ ಸದಸ್ಯರಾಗಿ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟರು. ಇಷ್ಟು ದೊಡ್ಡ ಮೊತ್ತವನ್ನು ಕೊಟ್ಟ ರಾಜವಂಶೀಯರೆಂದರೆ ಇವರೊಬ್ಬರೇ. ವೈಸರಾಯ್ ಡಫರಿನನಿಗೆ ಈ ವಿಷಯ ತಿಳಿದಾಗ, ಕೋಪಗೊಂಡು ರೆಸಿಡೆಂಟನ ಮುಖಾಂತರ ಅವನು ಚಾಮರಾಜೇಂದ್ರರ ಸ್ಪಷ್ಟೀಕರಣವನ್ನು ಕೇಳಿದನು. ಆಗ ಚಾಮರಾಜೇಂದ್ರರು "ಅರಮನೆಯ ವೆಚ್ಚದಿಂದ ಇದನ್ನು ಕೊಟ್ಟಿದ್ದೇವೆ. ಇತರರಿಗೆ ಇದರಲ್ಲಿ ಕೈ ಹಾಕಲು ಯಾವುದೇ ಅಧಿಕಾರವಿಲ್ಲ" ಎಂದು ಖಂಡತುಂಡವಾಗಿ ತಿಳಿಸಿದರಂತೆ!

ಕೃಷ್ಣರಾಜರ ಆಸ್ಥಾನದಲ್ಲಿಯ ವಿದ್ವಾಂಸರಿಗೂ ಇವರ ಆಸ್ಥಾನದವರಿಗೂ ಇದ್ದ ಒಂದು ವ್ಯತ್ಯಾಸವೆಂದರೆ, ಚಾಮರಾಜೇಂದ್ರರ ಆಸ್ಥಾನ ವಿದ್ವಾಂಸರು ಕನಡಾಭಿಮಾನವನ್ನು ವಿಶೇಷವಾಗಿ ಇಟ್ಟುಕೊಂಡು ತಾಯ್ನುಡಿಯಲ್ಲಿಯೇ ಸಾಹಿತ್ಯವನ್ನು ರಚಿಸಬೇಕೆನ್ನುವ ಲವಲವಿಕೆಯನ್ನು ತೋರಿದುದು. ಅದಕ್ಕೆ ಪ್ರೋತ್ಸಾಹ ದೊರೆತುದು ಚಾಮರಾಜೇಂದ್ರರು ಮತ್ತು ಅವರ ಅಧಿಕಾರಿಗಳಾಗಿದ್ದ ಅಂಬಿಲ್ ನರಸಿಂಹಯ್ಯಂಗಾರ್ ಹಾಗೂ ದಿವಾನ್ ಸಿ. ರಂಗಾಚಾರ್ಲು ಅವರಿಂದ. ಈ ಆಸ್ಥಾನ ವಿದ್ವಾಂಸರು ಬರಿಯೆ ಸಂಸ್ಕೃತ ಪಂಡಿತರಾಗಿ ಉಳಿಯದೆ, ಕನ್ನಡದಲ್ಲಿ ಪದ್ಯ ಹಾಗೂ ನಾಟಕ ಗ್ರಂಥಗಳನ್ನು ರಚಿಸಿದ್ದಾರೆ.

ಕನ್ನಡದ ಅಭ್ಯಾಸವನ್ನು ವ್ಯಾಪಕಗೊಳಿಸಲು 'ಕರ್ಣಾಟಕ ಭಾಷೋಜ್ಜೀವಿನೀ ಪಾಠಶಾಲೆ'ಯು ಆರಂಭವಾದುದು ಒಂದು ಮಹತ್ವದ ಹೆಜ್ಜೆಯಾಗಿದೆ. ಮಹಾರಾಜರ ಮತ್ತು ಮಹಾರಾಣಿಯವರ ಹೆಸರಿನಲ್ಲಿದ್ದ ವಿದ್ಯಾಲಯಗಳು ಈ ಕಾಲದಲ್ಲಿ ಅಭಿವೃದ್ಧಿಯನ್ನು ಹೊಂದಿದುವು. ಅಲ್ಲಿ ಪರ್ಯಾಯವಾಗಿ ಕನ್ನಡದ ಕೆಲಸ ಮುಂದುವರಿಯಿತು. ಮಹಾರಾಣಿ ಬಾಲಿಕಾ ಪಾಠಶಾಲೆಯ ವಿದ್ಯಾರ್ಥಿನಿಯರಿಗೋಸ್ಕರವೇ ಹಲವು ಕನ್ನಡಗ್ರಂಥಗಳ ರಚನೆಯಾದುದು, ಅಂಥ ಬೆಳವಣಿಗೆಯ ಇನ್ನೊಂದು ನಿದರ್ಶನವೆನ್ನಬಹುದು. ವರುಷ ವರುಷಕ್ಕೆ ಹೆಚ್ಚುತ್ತಾ ನಡೆದಿದ್ದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಿಗೋಸ್ಕರ ಅನೇಕ ಪಠ್ಯ ಪುಸ್ತಕಗಳು ಹೊರಬಂದುವಲ್ಲದೆ, ಅವುಗಳನ್ನು ಪರಿಷ್ಕರಿಸುವ ಪ್ರಯತ್ನಗಳು ಪದೇ ಪದೇ ನಡೆದುವು. ಆಗ ಇತರ ಶಿಕ್ಷಕರು ಅವುಗಳಲ್ಲಿಯ ನ್ಯೂನತೆಗಳನ್ನು ಎತ್ತಿ ತೋರಿಸಿ ಲೇಖನಗಳನ್ನು ಬರೆದುದು ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಗಣನೀಯ ಅಂಶವಾಗಿದೆ.

### ೯೧೨ ಆಸ್ಥಾನದ ಕವಿ ನಾಟಕಕಾರರು*

ಚಾಮರಾಜೇಂದ್ರರ ಆಸ್ಥಾನದಲ್ಲಿ ಹಾಗೂ ಆ ಪರಿಸರದಲ್ಲಿ ಇದ್ದಂಥ ಒಬ್ಬಿಬ್ಬರು ಪರಂಪರಾಗತ ಕಾವ್ಯರಚನೆಗೆ ಮಾತ್ರ ಮನಸ್ಸುಗೊಟ್ಟವರಿದ್ದಾರೆ. ಅನೇಕರು ಅಂಥ ಕಾವ್ಯದ ಜೊತೆಗೆ ನಾಟಕಗಳನ್ನೂ ಹೊರತಂದಿದ್ದಾರೆ. ಪರಂಪರಾಗತ ಕವಿಗಳಲ್ಲಿ ಪರಕಾಲಮಠದ ಯತಿಗಳಾದ ಕೃಷ್ಣಬ್ರಹ್ಮತಂತ್ರರನ್ನು ಮೊದಲಿಗೆ ನೆನೆಯೋಣ. ಅವರು ಚಾಮರಾಜೇಂದ್ರರಿಗೆ ಗುರುವಾಗಿದ್ದರು. ಬಹು ದೊಡ್ಡ ವಿದ್ವಾಂಸರಿದ್ದುದರಿಂದ ಗದ್ವಾಲ, ರೇವಾ ಮುಂತಾದ ಅನ್ಯ ಸಂಸ್ಥಾನಿಕರೂ ಅವರನ್ನು ಗೌರವಿಸಿದುದಿದೆ. ಅವರ ಕನ್ನಡ ಕೃತಿಯ ಹೆಸರು 'ಕಲ್ಯಾಣ ಗೀತಮಂಜರಿ' ಎಂಬುದು. ಅದನ್ನು ಮೇಲೆ ಹೇಳಿದ ಮಹಾರಾಣಿ ಬಾಲಿಕಾ ಪಾಠಶಾಲೆಯ ವತಿಯಿಂದ ಪ್ರಕಟಿಸಲಾಯಿತು (೧೮೯೦).

---

* ಇನ್ನು ಮುಂದೆ ಕೊಡಲಾದ ಕವಿ, ಲೇಖಕರ ಜೀವನ ಚರಿತ್ರೆಯ ಅನೇಕ ಅಂಶಗಳನ್ನು ವೆಂಕಟೇಶ ಸಾಂಗಲಿಯವರ 'ಗ್ರಂಥಕರ್ತರ ಚರಿತ್ರಕೋಶ'ದಿಂದ ತೆಗೆದುಕೊಂಡಿದೆ.

**ಭಾಗವತಂ ಕೃಷ್ಣಸ್ವಾಮಿಯು** ಮುಮ್ಮಡಿ ಕೃಷ್ಣರಾಜರ ಕಾಲದಿಂದಲೂ ಆಸ್ಥಾನ ವಿದ್ವಾಂಸನಾಗಿದ್ದನು. ಯೋಗ ಮತ್ತು ಜ್ಯೋತಿಷಗಳು ಅವನ ಮೆಚ್ಚಿನ ವಿಷಯಗಳು. ಅಂತೆಯೇ ಯೋಗವಾಸಿಷ್ಠವನ್ನು 'ಜ್ಞಾನ ತರಂಗಿಣಿ' ಎಂಬ ಹೆಸರಿನಲ್ಲಿ ಅನುವಾದಿಸಿದನು. 'ಜಾತಕ ಜ್ಞಾನ ರತ್ನಾವಳಿ', 'ಬ್ರಹ್ಮಜಾತಕ'ಗಳನ್ನೂ ಕನ್ನಡಕ್ಕೆ ಒದಗಿಸಿದ್ದಾನೆ. ಭಾಗವತವನ್ನು ಸಂಕ್ಷೇಪವಾಗಿ ಪದ್ಯರೂಪದಲ್ಲಿ ಹೇಳಿದುದು ಅವನ ಇನ್ನೊಂದು ಮಹತ್ವದ ಕಾರ್ಯವಾಗಿದೆ. ಜೊತೆಗೆ ಲಕ್ಷ್ಮೀಶ, ಕುಮಾರವ್ಯಾಸರ ಭಾರತಗಳನ್ನೂ, 'ತೊರವೆ ರಾಮಾಯಣ', 'ಹರಿಕಥಾಮೃತಸಾರ' ಇವುಗಳನ್ನೂ ಪರಿಷ್ಕರಿಸಿ ಪ್ರಕಟಿಸುವಲ್ಲಿ ಆಸ್ಥೆಯನ್ನು ತೋರಿದ್ದಾನೆ.

**ನಂಜನಗೂಡು ಸುಬ್ಬಾಶಾಸ್ತ್ರಿಯು** (೧೮೩೪–೧೯೦೬) ಮುಮ್ಮಡಿ ಕೃಷ್ಣರಾಜ ಮತ್ತು ಚಾಮರಾಜೇಂದ್ರ ಇವರಿಬ್ಬರಲ್ಲಿಯೂ ಆಸ್ಥಾನ ವಿದ್ವಾಂಸನಾಗಿದ್ದನು. ಸೀತಾ ಚರಿತ್ರೆಗೆ ಸಂಬಂಧಿಸಿದ ಕಾವ್ಯಗಳನ್ನು ರಚಿಸಿದುದಲ್ಲದೆ 'ಮೃಚ್ಛಕಟಿಕ' ಹಾಗೂ 'ಮಾಳವಿಕಾಗ್ನಿಮಿತ್ರ" ಇವನ್ನು ಕನ್ನಡಿಸಿದನು. ಅರಮನೆಯಲ್ಲಿ ರಂಗಪ್ರಯೋಗವಾಗಬೇಕಿದ್ದ ನಾಟಕಗಳ ಪೂರ್ವ ಪರೀಕ್ಷಣ ಮಂಡಲಿಯಲ್ಲಿ ಸುಬ್ಬಾಶಾಸ್ತ್ರಿಯೂ ಒಬ್ಬನಾಗಿದ್ದನು. ಚಾಮರಾಜೇಂದ್ರರು ಸಂಸ್ಕೃತದ 'ಶಾಕುಂತಲ' ವನ್ನೂ 'ರತ್ನಾವಳಿ' ಯನ್ನೂ ಕನ್ನಡದಲ್ಲಿ ಬರೆಯಿಸಿ, ಆಸ್ಥಾನದ ನಟವರ್ಗದ ಮೂಲಕ ಆಡಿಸಿದ ಬಳಿಕ ಹಾಸ್ಯರಸ ಪ್ರಧಾನವೂ, ಸಾಮಾಜಿಕವೂ ಆದ ನಾಟಕವನ್ನು ಬರೆಯಬೇಕೆಂದು ಸಮ್ಮುಖದ ವಿದ್ವನ್ಮಂಡಲಿಗೆ ವಿಜ್ಞಾಪಿಸಲು, ಸುಬ್ಬಾಶಾಸ್ತ್ರಿಯು 'ಮೃಚ್ಛಕಟಿಕ' ವನ್ನು ರಂಗಭೂಮಿಗೆ ಅನುಕೂಲಿಸುವಂತೆ ಕನ್ನಡಿಸಿದನೆಂದು, ಅದರ ಈಚಿನ ಆವೃತ್ತಿಯಲ್ಲಿ ಉಕ್ತವಾಗಿದೆ.

ಸುಬ್ಬಾಶಾಸ್ತ್ರಿಯ ಮಕ್ಕಳಲ್ಲಿ **ಅನಂತನಾರಾಯಣಶಾಸ್ತ್ರಿ** ಮತ್ತು **ಶ್ರೀಕಂಠಶಾಸ್ತ್ರಿಗಳು*** ಕಾವ್ಯ, ನಾಟಕ, ಲೇಖನ ಕಾರ್ಯಗಳನ್ನು ಬಹುವಾಗಿ ಮುಂದುವರಿಸಿದರು. ಇಬ್ಬರೂ ಆಸ್ಥಾನ ವಿದ್ವಾಂಸರು. ಆಂಧ್ರಭಾಷೆಯನ್ನು ಬಲ್ಲವರಾಗಿದ್ದು, ಅನೇಕ ತೆಲುಗು ಕೃತಿಗಳನ್ನು ಕನ್ನಡಕ್ಕೆ ತಂದರು. ಅನಂತನಾರಾಯಣಶಾಸ್ತ್ರಿಯು (೧೮೬೬–೧೮೯೮) ಮಿಶನರಿಗಳಿಗೆ ಕನ್ನಡಬೋಧಕನೂ ಆಗಿದ್ದನು. 'ಕರ್ಣಾಟಕ ನಾಗಾನಂದ' (೧೮೯೪) ಹಾಗೂ 'ಕರ್ಪೂರ ಮಂಜರೀಪರಿಣಯ' ಗಳೆಂಬ ನಾಟಕಗಳಲ್ಲದೆ, ವೀರೇಶಲಿಂಗಂ ಪಂತುಲು ಕೃತ 'ಸತ್ಯವತಿಚರಿತೆ' (ಕಾದಂಬರಿ)ಯನ್ನು ಅನುವಾದಿಸಿದ್ದಾನೆ (೧೮೯೭). ತನ್ನ ನಾಟಕಗಳ ರಚನೆಗೆ ಚಾಮರಾಜೇಂದ್ರರ ಪ್ರೇರಣೆಯೇ ಕಾರಣವೆಂದು ಸ್ಪಷ್ಟವಾಗಿ ಸಾರಿದ್ದಾನೆ.

---

* ನಂಜನಗೂಡು ಶ್ರೀಕಂಠಶಾಸ್ತ್ರಿಗಳ (೧೮೮೪–೧೯೩೮) ಸಾಹಿತ್ಯಿಕ ಗೈಮೆಯು ವಿಸ್ತಾರವಾದುದು. ತಮ್ಮ ೪೯ ವರ್ಷಗಳ ಅಧ್ಯಾಪನ ವೃತ್ತಿಯಲ್ಲಿ ಪತ್ರಿಕಾ ಸಂಪಾದಕರಾಗಿಯೂ, ಲೇಖಕರಾಗಿಯೂ ಕಾರ್ಯವೆಸಗಿದರು. ಅವರ ಗ್ರಂಥಗಳಲ್ಲಿ ಹೆಚ್ಚಿನವು ೨೦ನೆಯ ಶತಮಾನದಲ್ಲಿ ರಚಿತವಾಗಿವೆ.

ತರುಣ ವಯಸ್ಸಿನಲ್ಲಿಯೇ ತೀರಿಕೊಂಡ ಇವನಿಂದ ಇನ್ನೂ ಹೆಚ್ಚಿನ ಸಾಹಿತ್ಯ ನಿರ್ಮಿತಿ ಸಾಧ್ಯವಿದ್ದಿತು.

ಚಾಮರಾಜೇಂದ್ರರ ಆಸ್ಥಾನ ವಿದ್ವಾಂಸರಲ್ಲೆಲ್ಲ **ಬಸವಪ್ಪಶಾಸ್ತ್ರಿಗಳು** (೧೮೪೩-೧೮೯೧) ಹೆಚ್ಚು ಖ್ಯಾತಿವಂತರು. ತಂದೆ ಮಹಾದೇವ ಶಾಸ್ತ್ರಿಯನ್ನು ಬಾಲ್ಯದಲ್ಲಿಯೇ ಕಳೆದುಕೊಂಡ ಬಸವಪ್ಪಶಾಸ್ತ್ರಿಗಳು ಅರಮನೆಯಲ್ಲಿ, ವಿಶೇಷತಃ ಲಿಂಗರಾಜನ ಆಶ್ರಯದಲ್ಲಿ ಬೆಳೆದರು. ಸ್ವಸಾಮರ್ಥ್ಯದಿಂದ ಮುಂದೆ ಬಂದರು. ತನ್ನ ಹದಿನೆಂಟನೆಯ ವಯಸ್ಸಿನಲ್ಲಿಯೇ ಮುಮ್ಮಡಿ ಕೃಷ್ಣರಾಜರ ಅಭ್ಯುದಯವನ್ನು ಸಾರುವ ಸಂಸ್ಕೃತ ಚಂಪೂಕಾವ್ಯವನ್ನು ರಚಿಸುವಷ್ಟು ಪಾಂಡಿತ್ಯ, ಪ್ರತಿಭೆಗಳನ್ನು ಹೊಂದಿದ್ದರು. ಜೊತೆಗೆ ವಕ್ತೃತ್ವ, ಗಮಕ ಕಲೆಗಳಲ್ಲಿಯೂ ಪರಿಣತರಿದ್ದುದರಿಂದ ಅವರು ಆಸ್ಥಾನದಲ್ಲಿ ಎದ್ದು ಕಾಣುವಂತಾಯಿತು.

ಬಸವಪ್ಪಶಾಸ್ತ್ರಿಗಳದು ಸಹಜ ಸ್ಫೂರ್ತಿಯ ಅಭಿಜಾತ ಕವಿತ್ವ. ಪ್ರೌಢ ಕಾವ್ಯ ರಚನೆಯಲ್ಲಿ ಹೇಗೊ ಹಾಗೆಯೇ ಲಲಿತವಾದ ಪದ್ಯ ರಚನೆಯಲ್ಲಿಯೂ ಸಮರ್ಥರಿದ್ದರು. ಮಹಾರಾಣಿ ಬಾಲಿಕಾ ಶಾಲೆಯವರಿಗಾಗಿ ಬರೆದ 'ದಮಯಂತೀ ಸ್ವಯಂವರ', 'ಬಾಲಿಕಾಗೀತ ಮುಕ್ತಾಕಲಾಪ' ಹಾಗೂ 'ಸಾವಿತ್ರೀ ಚರಿತ್ರೆ'ಗಳನ್ನು ಈ ದೃಷ್ಟಿಯಿಂದ ಮೆಚ್ಚಬೇಕು. ಕೆಲವು ಶತಕಗಳನ್ನೂ ಇದೇ ರೀತಿಯಲ್ಲಿ ಕನ್ನಡಕ್ಕೆ ತಂದಿದ್ದಾರೆ.

ಬಸವಪ್ಪಶಾಸ್ತ್ರಿಗಳ ನಾಟಕಾನುವಾದಕ್ಕೆ ಅರಮನೆಯ ನಾಟಕೋದ್ಯಮವೇ ಕಾರಣವೆಂಬುದು ಸರ್ವಶ್ರುತವಿದೆ. ಅವರ ಆರೂ ನಾಟಕಗಳು (ಶಾಕುಂತಲ, ವಿಕ್ರಮೋರ್ವಶೀಯ, ಉತ್ತರರಾಮಚರಿತ, ಮಾಲತೀಮಾಧವ, ರತ್ನಾವಳಿ ಮತ್ತು ಶೂರಸೇನಚರಿತ್ರೆ) ಅರಮನೆಯ ರಂಗಭೂಮಿಗಾಗಿಯೇ ಬರೆದವುಗಳು. ಅವರ ಏಳನೆಯ ಕೃತಿ 'ಚಂಡಕೌಶಿಕ'ದ ಕೊನೆಯಂಕವು ಹಾಗೆಯೇ ಉಳಿಯಿತು. ಸಂಸ್ಕೃತ ನಾಟಕಗಳ ಜೊತೆಗೆ ಶೆಕ್ಸ್‌ಪಿಯರನ 'ಒಥೆಲೊ'ವನ್ನೂ (ಶೂರಸೇನ ಚರಿತ್ರೆ) ಅನುವಾದಕ್ಕೆ ತೆಗೆದುಕೊಂಡಿದ್ದರು. ತಮಗೆ ಇಂಗ್ಲಿಷ್ ಬಾರದಿದ್ದಾಗ ಬೇರೊಬ್ಬರಿಂದ ಅದನ್ನು ಓದಿಸಿ ಕನ್ನಡಕ್ಕೆ ಅಳವಡಿಸುವ ಕೆಲಸವನ್ನು ಬಸವಪ್ಪಶಾಸ್ತ್ರಿಗಳೇ ಕೈಗೊಳ್ಳುವಷ್ಟು ಅವರ ಅನುವಾದಗಳಿಗೆ ಮನ್ನಣೆ ದೊರೆತಿದ್ದಿತು.

ಬಸವಪ್ಪಶಾಸ್ತ್ರಿಗಳು ಯಾವ ಭಾಷೆಯ ನಾಟಕವನ್ನೂ ಕನ್ನಡಕ್ಕೆ ತರಬಲ್ಲರೆಂಬ ಭಾವನೆ ಮೂಡುವುದಕ್ಕೆ ಅವರ 'ಶಾಕುಂತಲ'ದ ಅನುವಾದವೇ ನಿಮಿತ್ತವಾಯಿತು. ಮೊದಲೇ ರಸಸ್ಯಂದಿಯಾದ ನಾಟಕ; ಬಸವಪ್ಪಶಾಸ್ತ್ರಿಗಳು ಅದರಲ್ಲಿಯ ಅನೇಕ ಪದ್ಯಗಳನ್ನು ಸೊಗಸಾಗಿ ಅನುವಾದಿಸಿದ್ದರು. ಆ ನಾಟಕ ಪ್ರಯೋಗಕ್ಕಾಗಿಯೇ ಅವರಿಗೆ 'ಅಭಿನವ ಕಾಲಿದಾಸ'ನೆಂಬ ಅಭಿಧಾನವನ್ನು ದಿವಾನ್ ರಂಗಾಚಾರ್ಲು ಸಲ್ಲಿಸಿದ್ದುದು. ಆದರೆ ಅವರ ಇತರ ನಾಟಕಗಳು 'ಶಾಕುಂತಲ'ದ ಮಟ್ಟದಲ್ಲಿ ಇಲ್ಲ. ಅಲ್ಲಿ ರಚಿಸಿದ ಪದ್ಯಗಳನ್ನೂ,

ಗದ್ಯ ಸಂಭಾಷಣೆಗಳನ್ನೂ ಉತ್ತಮಗೊಳಿಸುವ ಯೋಗ್ಯತೆಯಿದ್ದರೂ ವ್ಯವಧಾನವಿದ್ದಿಲ್ಲ ವೆಂದು ತೋರುತ್ತದೆ.

ನಾಟಕ ಸಂಭಾಷಣೆಗಳನ್ನು ಬಿಟ್ಟರೆ ಬಸವಪ್ಪಶಾಸ್ತ್ರಿಗಳ ಗದ್ಯ ಬರವಣಿಗೆಯು ಅಪೂರ್ವ. ಆದರೆ ೧೮೮೮–೮೯ರ ಸಾಲಿನ ಮೆಟ್ರಿಕ್ ಕನ್ನಡ ಪಠ್ಯಪುಸ್ತಕದಲ್ಲಿಯ ವ್ಯಾಕರಣಾದಿ ದೋಷಗಳನ್ನು ತೋರಿಸಿ ಬರೆದ ಪ್ರಬಂಧವು ಚಿಕ್ಕದಾದರೂ ಈ ದೃಷ್ಟಿಯಿಂದ ಗಮನಿಸುವಂತಿದೆ.

**ನರಹರಿ ಜಯರಾಯಾಚಾರ್ಯರು** (–೧೯೦೫) ಅರಮನೆಯೊಡನೆ ವಿಶೇಷ ಸಂಪರ್ಕವನ್ನಿಟ್ಟುಕೊಂಡಿದ್ದರು. ಮುಮ್ಮಡಿ ಕೃಷ್ಣರಾಜರ ಪತ್ನಿ ಚೆಲವಾಜಮ್ಮಣ್ಣಿಯ 'ವರನಂದೀ ಕಲ್ಯಾಣ' ಎಂಬ ಸಾಂಗತ್ಯವನ್ನೂ ಲಿಂಗರಾಜನ 'ನರಪತಿಚರಿತ' ವನ್ನೂ ಪರಿಶೋಧಿಸಿ ಪ್ರಕಟಿಸಿದರು. ಚಾಮರಾಜೇಂದ್ರರೊಂದಿಗೆ ಅವರದು ನಿಕಟ ಸಂಪರ್ಕ. ಹಳಗನ್ನಡ ಹಾಗೂ ದೇಶ್ಯ ಶಬ್ದಗಳನ್ನೊಳಗೊಂಡ 'ಕರ್ಣಾಟ ಭಾಷಾಕರಂ' ಎಂಬ ನಿಘಂಟುವನ್ನು ರಚಿಸಿ ಚಾಮರಾಜೇಂದ್ರರಿಗೆ ಅರ್ಪಿಸಿದ್ದಾರೆ. ಅವರ ಸಲಹೆಯ ಮೇರೆಗೆ ವೇಣೀಸಂಹಾರ, ಹರಿಶ್ಚಂದ್ರ ನಾಟಕಗಳನ್ನು ಅಲ್ಪಾವಧಿಯಲ್ಲಿ ಅನುವಾದಿಸಿದುದಲ್ಲದೆ 'ಸಿರಿಯಾಳ ರಾಜ', 'ಮದಾಲಸಾ ಪರಿಣಯ', 'ಚಂದ್ರಹಾಸ' ಮುಂತಾದ ಪೌರಾಣಿಕ ನಾಟಕಗಳನ್ನೂ ರಚಿಸಿದ್ದಾರೆ. ವೇಣೀಸಂಹಾರದ ಪ್ರಥಮ ಮುದ್ರಣದ ಪೀಠಿಕೆಯಲ್ಲಿ ಬಂದ 'ಮಹಾರಾಜರು ಈ ಸಂಸ್ಕೃತ ನಾಟಕವನ್ನು ಆಮೂಲಾಗ್ರವಾಗಿ ನನ್ನಿಂದ ಕೇಳಿ ಇದಕ್ಕೆ ಸರಿಯಾದ ಕರ್ಣಾಟ ಭಾಷಾಂತರವನ್ನು ನೀವೇ ಮಾಡಬೇಕೆಂದೂ ನಾಟಕದವರಿಗೂ ಓದುವವರಿಗೂ ಅನುಕೂಲವಾಗುವಂತೆ ಕಂದ, ವೃತ್ತ, ಗಾನ ಪದಗಳನ್ನು ಸೇರಿಸಬೇಕೆಂದೂ ಅಪ್ಪಣೆ ಕೊಡಿಸಿದ್ದರು' ಎಂಬ ಹೇಳಿಕೆಯು ಚಾಮರಾಜೇಂದ್ರರ ನಾಟಕಾಸಕ್ತಿಯ ಆಳವನ್ನು ದೃಢೀಕರಿಸುತ್ತದೆ. ಆಮೇಲೆ ತಾನು ಮಾಡಿದ ಅನುವಾದವನ್ನು ಓದಿ ತೋರಿಸಬೇಕೆನ್ನುವಷ್ಟರಲ್ಲಿ ದೊರೆಯು ತೀರಿಕೊಂಡದ್ದಕ್ಕಾಗಿ ಜಯರಾಯಾಚಾರ್ಯರು ಪರಿತಪಿಸಿದ್ದಾರೆ.

ಬಸವಪ್ಪಶಾಸ್ತ್ರಿಗಳಂತೆ **ಜಯರಾಯಾಚಾರ್ಯರೂ** ಕವಿತ್ವ ಸಾಮರ್ಥ್ಯವನ್ನು ಪಡೆದಿದ್ದರು. ಸ್ವಯಂ ಹರಿಕಥೆಗಳನ್ನು ಮಾಡುತ್ತಿದ್ದು ಅದಕ್ಕಾಗಿ ಹತ್ತಾರು ಉಪಾಖ್ಯಾನಗಳನ್ನು ರಚಿಸಿದರು. ಅವರಿಂದ ರಚಿತವಾದ 'ಅನುಕರಣ ಗೀತಲಹರಿ'ಯು ಎಳೆಯರಿಗಾಗಿ ಪದ್ಯಗಳನ್ನೊಳಗೊಂಡಿದೆ. ತಾಯಿ, ಗಡಿಯಾರ, ನವಿಲು, ಬೆಕ್ಕು, ಪಾಠಶಾಲೆ ಮುಂತಾದ ವಿಷಯಗಳ ಮೇಲಿನ ಲಲಿತವಾದ ಪದ್ಯಗಳವು. ಆದರೆ ಅವರ 'ಭವಿಷ್ಯೋತ್ತರ ಪುರಾಣ'ದ ಕಾವ್ಯಾನುವಾದವು ಚಂಪೂರೂಪದಲ್ಲಿದೆ. ಎ. ಆನಂದರಾಯ ಎಂಬವರ ಶೆಕ್ಸ್‌ಪಿಯರ್ ನಾಟಕಾನುವಾದಗಳಿಗೆ ಬೇಕಾದ ಕಂದ, ವೃತ್ತಗಳನ್ನು ಜಯ ರಾಯಾಚಾರ್ಯರು ಒದಗಿಸಿದ್ದಾರೆ. ಹೆಸರಿಸಬೇಕಾದ ಅವರ ಇನ್ನೆರಡು ಕೃತಿಗಳೆಂದರೆ

'ಕರ್ಣಾಟಾಶೌಚ ನಿರ್ಣಯ' ಮತ್ತು 'ಕರ್ಣಾಟಕ ಪಾಕಶಾಸ್ತ್ರ'. ಎರಡನೆಯದು ತಮಿಳು, ತೆಲುಗುಗಳಿಗೂ ಅನುವಾದಗೊಂಡಿದೆ.

**ಸೋಸಲೆ ಅಯ್ಯಾಶಾಸ್ತ್ರಿ**ಗಳು ಚಾಮರಾಜರ ನಿಕಟವರ್ತಿಗಳಲ್ಲಿ ಇನ್ನೊಬ್ಬರು (೧೮೫೪–೧೯೩೪). ಅರಮನೆಯಲ್ಲಿ ಗುರುಸ್ಥಾನದಲ್ಲಿದ್ದರಲ್ಲದೆ ಚಾಮರಾಜೇಂದ್ರರ ಪುಣೆ, ಮುಂಬಯಿ ಯಾತ್ರೆಗಳಲ್ಲಿ ಅವರ ಜೊತೆಗೇ ಇದ್ದರು. ಮೈಸೂರಿನ ಸದ್ವಿದ್ಯಾ ಪಾಠಶಾಲೆ ಮತ್ತು ಭಾಷೋಜ್ಜೀವಿನೀ ಸಭೆಗಳಲ್ಲಿ ಹಿರಿಯ ಕನ್ನಡ ಪಂಡಿತರಾಗಿದ್ದು, ಅರಮನೆಗೆ ಸಂಬಂಧಿಸಿದ ಜಗನ್ಮೋಹನ ಮುದ್ರಣಶಾಲೆಯಲ್ಲಿ ಸಂಸ್ಕೃತ, ಕನ್ನಡ ಕೃತಿಗಳ ಪರಿಶೋಧಕರಾಗಿ ಹಲವು ಕೃತಿಗಳನ್ನು ಪರಿಷ್ಕರಿಸಿದರು.

ಅಯ್ಯಾಶಾಸ್ತ್ರಿಯವರದು ಒಟ್ಟಿನಲ್ಲಿ ಪ್ರೌಢವಾದ ಕವಿತ್ವ ರಚನೆ. 'ಶೇಷರಾಮಾಯಣ', 'ದಮಯಂತೀ ಚರಿತ್ರೆ'ಗಳು ಆ ಬಗೆಯವಾಗಿವೆ. ಇವರು ಕೂಡ ಮಕ್ಕಳಿಗಾಗಿ ಪದ್ಯಗಳನ್ನು ರಚಿಸಿದ್ದಾರೆ. ಅರಮನೆಯ ರಂಗಭೂಮಿಗೂ ಅಯ್ಯಾಶಾಸ್ತ್ರಿಗಳ ಸೇವೆ ಸಂದಿದೆ–ನಾಟಕಕಾರರಾಗಿ. ಅವರ 'ವಿಕ್ರಮೋರ್ವಶೀಯ'ದ ಅನುವಾದವು ೧೮೯೧ರ ಸುಮಾರಿಗೆ ಪ್ರಯೋಗವಾಗಿತ್ತು. ಆಮೇಲೆ ಪ್ರಯೋಗದ ದೃಷ್ಟಿಯಿಂದ ಅದನ್ನು ಮೂರು ತಾಸಿಗೆ ಸಂಕ್ಷೇಪಿಸಲಾಯಿತು. ಈ ಕ್ರಮವನ್ನು ಆ ಮುಂಚೆ ಬಸವಪ್ಪಶಾಸ್ತ್ರಿಗಳ 'ರತ್ನಾವಳೀ' ಮತ್ತಿತರ ಕೆಲವು ನಾಟಕಾನುವಾದಗಳ ವಿಷಯದಲ್ಲಿಯೂ ಅನುಸರಿಸಲಾಗಿದ್ದಿತು. ಅಯ್ಯಾಶಾಸ್ತ್ರಿಗಳು ರಾಮಾಯಣದ ಆರೂ ಕಾಂಡಗಳ ಕಥೆಯನ್ನು ನಾಟಕರೂಪದಲ್ಲಿ ಪರಿವರ್ತಿಸಿರುವರಾದರೂ ಅದು ಅಭಿನಯಿಸಲ್ಪಟ್ಟ ಉಲ್ಲೇಖ ದೊರೆತಿಲ್ಲ. ಅವರ ಇನ್ನೊಂದು ನಾಟಕವಾದ 'ಕರ್ಣಾಟಕ ಪ್ರತಾಪಸಿಂಹ ಚರಿತ್ರೆ'ಯು ಹಿಂದುಸ್ಥಾನೀ ಭಾಷೆಯಿಂದ ಎತ್ತಿಕೊಂಡದ್ದಾಗಿ ತೋರುತ್ತದೆ.

ಪರಂಪರಾಗತ ಕಾವ್ಯ, ನಾಟಕ ಕರ್ತೃಗಳಲ್ಲಿ **ಮೋಟಗಾನಹಳ್ಳಿಯ ಶಂಕರಶಾಸ್ತ್ರಿ** ಮತ್ತು **ರಾಮಶೇಷಶಾಸ್ತ್ರಿ** (೧೮೬೭–೧೯೩೪) ಇವರನ್ನು ಉಲ್ಲೇಖಿಸಿ ಈ ವಿಭಾಗವನ್ನು ಮುಗಿಸಬಹುದು. ಇಬ್ಬರೂ ಆಸ್ಥಾನ ವಿದ್ವಾಂಸರು. ಶಂಕರಶಾಸ್ತ್ರಿಗಳು 'ಇಂದ್ರಸಭಾ' ನಾಟಕವನ್ನೂ ಕ್ಷೇಮೀಶ್ವರನ ಹರಿಶ್ಚಂದ್ರ ನಾಟಕವನ್ನೂ (೧೮೮೯) ಕನ್ನಡಕ್ಕೆ ಅಳವಡಿಸಿದ್ದಾರೆ. ರಾಮಶೇಷಶಾಸ್ತ್ರಿಗಳು ಸಂಸ್ಕೃತ, ಕನ್ನಡ ಭಾಷಾಕೋವಿದರಾಗಿದ್ದರು. 'ಯಕ್ಷಗಾನ ಸಾನಂದ ಗಣೇಶ್ವರನ ಕಥೆ' ಯು ಅವರ ಆರಂಭಕಾಲದ ಕೃತಿ ಇರಬೇಕು. ಕ್ರಿ.ಶ.೧೮೯೧ರಲ್ಲಿ ಅದು ಮೂರನೆಯ ಆವೃತ್ತಿಯನ್ನು ಪಡೆಯುವಷ್ಟು ಜನಪ್ರಿಯವಾಗಿದ್ದಿತು. ಅವರ ಇತರ ಪ್ರಸಿದ್ಧ ನಾಟಕಗಳಲ್ಲಿ ಮುದ್ರಾರಾಕ್ಷಸದ ಅನುವಾದವನ್ನೂ ಹೆಸರಿಸಬೇಕು.

ಆಸ್ಥಾನ ವಿದ್ವಾಂಸ ಎಂಬ ಗೌರವವನ್ನು ಹೊಂದಿದ್ದರೂ ಚಾಮರಾಜೇಂದ್ರ ನಾಟಕ ಸಭಾದಲ್ಲಿ ಕೆಲಸ ಮಾಡಿದ ಹಲವು ನಾಟಕಕಾರರನ್ನು ಇಲ್ಲಿ ನೆನೆಯಬೇಕು. ಸೂಲಿಬೆಲೆಯ ಡಿ. ಶಾಮರಾಯನು ಮೂಲತಃ ನಟನು. ನಕಲಿ ಪಾತ್ರವಿರಲಿ

'ರಾಜಾಪಾರ್ಟು' ಇರಲಿ, ಅವನು ಸಿದ್ಧಹಸ್ತನೆನಿಸಿದ್ದನು. ರಂಗಪ್ರಯೋಗಕ್ಕಾಗಿ ಅವನು 'ಚಂದ್ರಹಾಸ, ನಳಚರಿತ್ರೆ'ಗಳನ್ನು 'ಉಷಾಪರಿಣಯ' ಮೊದಲಾದ ಪೌರಾಣಿಕ ಕಥಾನಕಗಳನ್ನು ನಾಟಕವಾಗಿ ಮಾರ್ಪಡಿಸಿದುದಲ್ಲದೆ ಅನ್ಯ ಭಾಷೆಗಳಿಂದ ಐತಿಹಾಸಿಕ ಕಾಲ್ಪನಿಕ ಕೃತಿಗಳನ್ನು ಕನ್ನಡದಲ್ಲಿ ತಂದಿದ್ದಾನೆ. ಪಾರ್ಸೀ (ಮರಾಠೀ), ತೆಲುಗು ನಾಟಕ ಕಂಪೆನಿಗಳು ಮೈಸೂರ ತನಕ ಬಂದು ಹೋದದ್ದರ ಪರಿಣಾಮವಿದು.

ಸರಕಾರೀ ಭಾಷಾಂತರಕಾರನೂ 'ಶೂರಸೇನ ಚರಿತ್ರೆ'ಯ ಲೇಖನದಲ್ಲಿ ಬಸವಪ್ಪಶಾಸ್ತ್ರಿಗಳಿಗೆ ನೆರವಾದವನೂ ಆದ ಚಿಕ್ಕಬಳ್ಳಾಪುರ ಸುಬ್ಬರಾಯನು 'ಅರಮನೆ ನಾಟಕದ ಸುಬ್ಬರಾಯ' ನೆಂದೇ ಹೆಸರು ಹೊಂದಿದ್ದನು. ಅಭಿನಯಪಟುವಾಗಿದ್ದುದರ ಜೊತೆಗೆ ಕೆಲವು ನಾಟಕಗಳನ್ನು ಕನ್ನಡಕ್ಕೆ ಅಳವಡಿಸಿದ್ದಾನೆ. ('ಪ್ರಜ್ಞಾವತೀ ವಿಜಯ', 'ಯುವರಾಜ ಕಲ್ಯಾಣ' ಮತ್ತು 'ವಲೀಮುಖ ವಿಲಾಸ'). 'ಮನುಚರಿತ್ರೆ', 'ಅರಣೀಹರಣ' ನಾಟಕಗಳನ್ನು ಬರೆದ ಬಾಲಚಂದ್ರಶೇಖರ ಶಾಸ್ತ್ರಿಯೂ ಚಾಮರಾಜೇಂದ್ರರಿಂದ ಪೋಷಣೆ ಪಡೆದವರಲ್ಲಿ ಒಬ್ಬನಾಗಿದ್ದಾನೆ.

## ೯೧೩. ಚಾಮರಾಜೇಂದ್ರರ ಕಾಲದ ಅನ್ಯ ನಾಟಕಕಾರರು

ಮೈಸೂರಿನ ಅರಮನೆಯಲ್ಲಿ ಉದಯಿಸಿದ ಕನ್ನಡ ನಾಟ್ಯಭಾಸ್ಕರನ ಕಿರಣಗಳು ಸುತ್ತೆಲ್ಲಾ ಪಸರಿಸತೊಡಗಿದ್ದುವು. ಗುಬ್ಬಿಯ ಶ್ರೀ ಚೆನಬಸವೇಶ್ವರ ಕೃಪಾಪೋಷಿತ ನಾಟಕ ಸಂಘ (೧೮೮೪), ಶಾಕುಂತಳ ನಾಟಕ ಸಭಾ, ಚಾಮುಂಡೇಶ್ವರೀ ನಾಟಕ ಸಂಘ, ರಾಜಧಾನಿಯ ನಾಟಕ ಮಂಡಳಿ, ರತಾವಳೀ ನಾಟಕಸಭಾ, ಶ್ರೀಕಂಠೇಶ್ವರ ನಾಟಕಸಭಾ ಮುಂತಾದ ಸಂಸ್ಥೆಗಳು ಮೈಸೂರು, ಮತ್ತಿತರ ನಗರಗಳಲ್ಲಿ ತಲೆದೋರಿದುವು. ಮೊದಲ ಸಲ ಆಡಿ ಪ್ರಸಿದ್ಧಿ ಹೊಂದಿದ ನಾಟಕಗಳ ಹೆಸರಿನಿಂದಲೇ ಕಂಪೆನಿಗಳ ಅಭಿಧಾನವಿರುವುದನ್ನು ಗಮನಿಸಬೇಕು. ಇವುಗಳಲ್ಲಿ ಪೈಪೋಟಿ ಇದ್ದುದರಿಂದ ನಾಟಕ ಸಾಹಿತ್ಯವೂ ನಾಟ್ಯಕಲೆಯೂ ಬೆಳೆಯುವುದಕ್ಕೆ ಕಾರಣವಾಯಿತು. ಇಂಥ ಸಂಸ್ಥೆಗಳಿಗಾಗಿಯೇ ನಾಟಕಗಳನ್ನು ರಚಿಸುವ ಪರಂಪರೆಗೆ ಮೊದಲಾಯಿತು.

**ಗುಬ್ಬಿಯ ಗುರುಸಿದ್ದಪ್ಪ, ವೀರೇಶ್ವರಶಾಸ್ತ್ರಿ** ಇವರು ನಾಟಕಕಾರರಾಗಿ ಗುಬ್ಬಿ ಕಂಪೆನಿಯಲ್ಲಿದ್ದರು. ವೀರೇಶ್ವರಶಾಸ್ತ್ರಿ ಅಥವಾ ವೀರಪ್ಪಶಾಸ್ತ್ರಿಯೇ 'ಗುಲೇಬಕಾವಲಿ' ಯನ್ನು ಕನ್ನಡದಲ್ಲಿ ತಂದವನು. ಅವನ 'ಚೋರಕಥೆ ಇಲ್ಲವೆ ಸೋಮಶೇಖರ-ಚಿತ್ರಶೇಖರ ಚರಿತ್ರೆಯು' ಯಕ್ಷಗಾನದ ಆವರಣದಿಂದ ಮುಕ್ತವಾಗಿ ನಾಟಕರೂಪವನ್ನು ತಾಳಿತು. ಶಿವಪ್ಪಶಾಸ್ತ್ರಿಯು ಚಾಮುಂಡೇಶ್ವರೀ ನಾಟಕ ಸಂಘಕ್ಕಾಗಿ ನಾಟಕಗಳನ್ನು ರಚಿಸಿದನು. ಮೈಸೂರಿನ ಸೀತಾರಾಮಶಾಸ್ತ್ರಿಯು ಆಗಿನ ಕಂಪೆನಿ ನಾಟಕಕಾರರಲ್ಲಿ ಪ್ರಮುಖ ಸ್ಥಾನದಲ್ಲಿದ್ದವನು. ಅವನ 'ಇಂದ್ರಕೀಲ ವಿಜಯ'ವು (೧೮೯೫) ಲಕ್ಷಣಬದ್ಧ

ನಾಟಕವೆಂದು ತಿಳಿಯಲಾಗುತ್ತದೆ. ಇತ್ತ ರಾಜಧಾನಿಯ ನಾಟಕ ಮಂಡಳಿಯಲ್ಲಿದ್ದ ಮಂಡ್ಯಂ ರಂಗಾಚಾರ್ಯನು ಮರಾಠಿಗರು ಆಡುತ್ತಿದ್ದ 'ಬಾಣಾಸುರೋಪಾಖ್ಯಾನ'ವನ್ನು ಮರಾಠಿಯಲ್ಲಿಯೇ ಆಡಿಸಿದ್ದನಲ್ಲದೆ ಮುಂದೆ 'ಶ್ರೀಯಾಳಚರಿತ್ರೆ' ಮೊದಲಾದ ನಾಟಕಗಳನ್ನು ಬರೆದನು. ಮಾದಪ್ಪಶಾಸ್ತ್ರಿ ('ಮಕರಂದಿಕಾಪರಿಣಯ' ಕರ್ತೃ), ಪಂಡಿತ ಶ್ರೀನಿವಾಸಯ್ಯಂಗಾರ್ (ರತ್ನಾವಳೀ ಅನುವಾದಕ) ಇವರು ಈ ಮಂಡಳಿಯ ಇತರ ನಾಟಕಕಾರರು.

ಪೌರಾಣಿಕ ನಾಟಕಗಳನ್ನು ಒದಗಿಸಿದವರಲ್ಲಿ **ವೀರನಗೆರೆ ಪುಟ್ಟಣ್ಣನೂ** ಒಬ್ಬ. ಅವನ ನಾಟಕಗಳಲ್ಲಿ 'ಗಿರಿಜಾ ಕಲ್ಯಾಣ', 'ಹರಿಶ್ಚಂದ್ರ ನಾಟಕ', 'ದ್ರೌಪದೀ ಸ್ವಯಂವರ', 'ದುಶ್ಯಾಸನ ನಾಟಕ' ಇವುಗಳು ಜನಪ್ರಿಯವಾಗಿದ್ದುವು. 'ಶಾಕುಂತಲ ನಾಟಕ'ವನ್ನು ಬೇಟೆರಾಯದೀಕ್ಷಿತನೂ ಅನುವಾದಿಸಿದ್ದಾನೆ. ಅದು ಅಭಿನಯಿಸಲ್ಪಟ್ಟಂತೆ ತೋರುವುದಿಲ್ಲ. ಗೂಡಪಲ್ಲಿಯ ರಾಮಶಾಸ್ತ್ರಿಯ ಹಲವು ನಾಟಕಗಳಲ್ಲಿ ಯಕ್ಷಗಾನದ ಪ್ರಭಾವ ಕಂಡುಬರುತ್ತದೆ. ಅವನ 'ತಾರಾಶಶಾಂಕ ಅಥವಾ ಶ್ರೀಧರ ವಿಜಯಾಭ್ಯುದಯ' ನಾಟಕದ (೧೮೯೦) ಕಥಾವಸ್ತು ಯಕ್ಷಗಾನದಿಂದಲೇ ತೆಗೆದುಕೊಂಡದ್ದಾಗಿರಬೇಕು.

**ಸರಗೂರು ವೆಂಕಟರಮಣಾಚಾರ್ಯನ** 'ತಪತೀಪರಿಣಯವು' 'a dramatic work of high order, very well written' ಎಂಬುದಾಗಿ ಬಿ.ಎಲ್.ರೈಸ್ ಹೊಗಳುವಷ್ಟು[೨] ಗಣನೀಯವಾಗಿದ್ದಿತು. ಇವನು ಅನೇಕ ಕೀರ್ತನೆಗಳನ್ನೂ ರಚಿಸಿದ್ದಾನೆ. ಮಹಾರಾಣಿ ಬಾಲಿಕಾ ಪಾಠಶಾಲೆಯಲ್ಲಿದ್ದ ನಂಜನಗೂಡು ಸುಬ್ಬಾಶಾಸ್ತ್ರಿಯು ಪೂರ್ವ ಮತ್ತು ಉತ್ತರ ಸೀತಾ ಚರಿತ್ರೆಯ ನಾಟಕಗಳನ್ನು ಬರೆದಿದ್ದಾನೆ. ವಿದ್ಯಾರ್ಥಿನಿಯರು ಇದನ್ನು ಅಭಿನಯಿಸುತ್ತಿದ್ದಿರಬೇಕು. ಈ ಅವಧಿಯಲ್ಲಿ ಸ್ತ್ರೀಯರು ಸಹ ನಾಟಕ ರಚನೆಗೆ ಮನಸುಗೊಟ್ಟುದು ಕಂಡುಬರುತ್ತದೆ. ಉದಾಹರಣೆಗೆ, ಕಾಮಾಕ್ಷಿಅಮ್ಮಾ ಎಂಬವಳು ಭಾಗವತ ಪುರಾಣದ ಆಧಾರದಿಂದ 'ಚಂದ್ರಾವಳೀ ವಿಲಾಸ' ವನ್ನು ರಚಿಸಿದ್ದಳು.

ಚಿಕ್ಕಬಳ್ಳಾಪುರದ ವಿದ್ವಾನ್ ತಿರುಪತಿ ವೆಂಕಟಾಚಾರ್ಯನು (೧೮೭೮–೧೯೧೮) ಆಗಿನ ಕಾಲದ ಇನ್ನೊಬ್ಬ ಪ್ರಮುಖ ನಾಟಕಕರ್ತೃವಾಗಿದ್ದನು. ವರದಾಚಾರ್ಯರ ನಾಟಕ ಕಂಪೆನಿಯಲ್ಲಿ ಬಹು ಕಾಲ ಇದ್ದನು. ಅವನ 'ಭೋಜಪ್ರಬಂಧ ನಾಟಕ'ವನ್ನು ಉತ್ತರ ಕರ್ನಾಟಕದ ಶಿರಹಟ್ಟಿ ಗ್ರಾಮದ ಲಕ್ಷ್ಮೀ ಪ್ರಾಸಾದಿಕ ಮಂಡಳಿಯವರು ಮೈಸೂರ ವರೆಗೆ ಬಂದು ಮಹಾರಾಜರ ಸಮ್ಮುಖದಲ್ಲಿ ಅಭಿನಯಿಸಿ ತೋರಿಸಿದಾಗ ಅದಕ್ಕೆ ಎರಡು ಸಾವಿರ ರೂಪಾಯಿಗಳ ಗೌರವ ಧನ ದೊರೆಯಿತಂತೆ. ನಾಡಿನ ತುಂಬ ನಾಟಕಾಭಿರುಚಿಯು ಬಲು ಬೇಗ ಹಬ್ಬುತ್ತ ನಡೆಯಿತೆನ್ನುವುದನ್ನು ಇದು ನಿದರ್ಶಿಸುತ್ತದಲ್ಲವೆ.

ಮೇಲಣ ನಾಟಕಕಾರರು ಪೌರಾಣಿಕ ನಾಟಕಗಳನ್ನೇ ಹೆಚ್ಚಾಗಿ ಬರೆದರು. ಮತ್ತೆ ಕೆಲವರು ಇಂಗ್ಲಿಷ್‌ನಿಂದ, ವಿಶೇಷತಃ ಶೇಕ್ಸ್‌ಪಿಯರನ ನಾಟಕಗಳನ್ನು ಅನುವಾದಿಸಿ, ಐತಿಹಾಸಿಕ ನಾಟಕ ಪರಂಪರೆಗೆ ನಿಮಿತ್ತರಾದರು. ಅವರಲ್ಲಿ **ಎಂ. ಎಲ್. ಶ್ರೀಕಂಠೇಶಗೌಡರ** ಹೆಸರು ಎದ್ದು ಕಾಣುವಂತಹದು (೧೮೫೨-೧೯೨೬). ವೃತ್ತಿಯಲ್ಲಿ ಅವರು ಅಡ್ವೋಕೇಟ್; ಕೆಲವು ಕಾಲ ಮುನ್ಸೀಫರೂ ಆಗಿದ್ದರು. ಸುರುವಿಗೆ ಹಲವು ಪೌರಾಣಿಕ ನಾಟಕಗಳನ್ನು ರಚಿಸಿದ್ದರಾದರೂ ಶೇಕ್ಸ್‌ಪಿಯರನ ವಿಷಯದಲ್ಲಿ ವಿಶೇಷ ಗೌರವವಿದ್ದಿತಾದ್ದರಿಂದ, ಅವನ ಕೆಲವು ನಾಟಕಗಳನ್ನು ಅನುವಾದಿಸತೊಡಗಿದರು.

English Classics for Kannada Readers ಎಂಬ ಮಾಲಿಕೆಯಲ್ಲಿ ಈ ನಾಟಕಗಳ ಜೊತೆಗೆ, ಅವರ ಹಲವು ಕಥಾನಕಗಳು ಹೊರಬಂದಿವೆ. ನಾಟಕಗಳಲ್ಲಿ 'ಪ್ರತಾಪರುದ್ರ ದೇವ' ಎಂಬುದು (೧೮೯೫) ಮ್ಯಾಕ್‌ಬೆತ್‌ದ ಅನುವಾದವಾಗಿದೆ. Midsummer Night's Dreamದ ರೂಪಾಂತರವಾದ 'ಪ್ರಮೀಳಾರ್ಜುನೀಯ'ವು ಭಾರತೀಯ ಪೌರಾಣಿಕ ಪರಿಸರಕ್ಕೆ ಅನುಗುಣವಾಗುವಂತೆ ಮೈದಾಳಿದೆ. ಈ ರೀತಿಯ ರೂಪಾಂತರಗಳಲ್ಲಿ ಶ್ರೀಕಂಠೇಶಗೌಡರ ಸ್ವತಂತ್ರ ರಚನೆಯ ಹೊಳಹು ಅಲ್ಲಲ್ಲಿ ತೋರಿಬರುತ್ತದೆಯಲ್ಲದೇ ಹಲವು ಸನ್ನಿವೇಶ ಚಿತ್ರಣಗಳಲ್ಲಿ ವಾಸ್ತವಿಕತೆಯನ್ನು ಕಾಣಬಹುದು. 'ಭವಾನಿ ಬಾಳ್' ಅವರ ಇನ್ನೊಂದು ನಾಟಕವಾಗಿದೆ. (ಶಿವಾಜಿಗೆ ಸಂಬಂಧಿಸಿದ್ದು) ಅವರ ಕಥಾನುವಾದಗಳಲ್ಲಿ ಹೆನ್ರಿ ಟೇಲರ್‌ನ 'A Silican Summer' (ಕನ್ಯಾವಿತಂತು) ಮರಿಯಾ ಎಜ್‌ವರ್ಥ್ ಇವಳ Little Merchants (ಚಿಕ್ಕ ಬಣಜಿಗರು)– ಮೇಲೆ ಹೇಳಿದ English Classics ಮಾಲಿಕೆಯಲ್ಲಿ ಪ್ರಕಟವಾಗಿವೆ. ಇಂಗ್ಲಿಷ್ ಕೃತಿಗಳಿಂದ ಕನ್ನಡವಾಙ್ಮಯವನ್ನು ಪುಷ್ಟಿಗೊಳಿಸಬೇಕೆಂಬ ಪ್ರಜ್ಞೆಯಿಂದ ಆರಂಭಕಾಲದಲ್ಲಿ ಯತ್ನಿಸಿದವರಲ್ಲಿ ಶ್ರೀಕಂಠೇಶಗೌಡರು ಪ್ರಮುಖರೆನ್ನಬಹುದು. ಕವಿತಾರಚನೆಯೂ ಇವರ ಮೆಚ್ಚಿನ ವಿಷಯವಾಗಿದ್ದು, ಚಾಮರಾಜೇಂದ್ರ ಒಡೆಯರರ ಸ್ತುತಿಪರವಾದ ಪದ್ಯ ಪುಸ್ತಿಕೆಯನ್ನು (ಚಾಮನೃಪ ಚಂದ್ರಪ್ರಭ) ಹೊರತಂದಿದ್ದಾರೆ.*

ಶೇಕ್ಸ್‌ಪಿಯರನ ಕೃತಿಗಳನ್ನು ಕನ್ನಡಕ್ಕೆ ತರಬಯಸಿದ್ದ ಇನ್ನೊಬ್ಬ ಪದವೀಧರನೆಂದರೆ **ಎ. ಆನಂದರಾವ.** ಈತನೂ ವಕೀಲಿ ವ್ಯವಸಾಯದಲ್ಲಿದ್ದು ಅನಂತರ ಮುನಿಸಿಪಲ್ ಕಮೀಶನರ್ ಹುದ್ದೆಯಿಂದ ನಿವೃತ್ತನಾದನು. 'ರಾಮವರ್ಮ ಲೀಲಾವತೀ ಚರಿತ್ರೆ' (ರೋಮಿಯೊ ಎಂಡ್ ಜ್ಯೂಲಿಯೆಟ್) ಮತ್ತು 'ಪಾಂಚಾಲಿ ಪರಿಣಯ' (ಮರ್ಚಂಟ್ ಆಫ್ ವೆನಿಸ್) ಇವು ಅವನ ಅನುವಾದಿತ ಕೃತಿಗಳಾಗಿವೆ. ಮೊದಲಿನದು ರಂಗದ

---

* ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಪ್ರಕಟವಾದ ಇವನ 'ಸೀತಾ ಸ್ವಯಂವರ' ನಾಟಕವು ಹೊಸ ಕಥಾನಕವನ್ನು ಹೊಂದಿದೆ. ಅದರಲ್ಲಿ ರಾಕ್ಷಸ ವರ್ಗದ ಶೂರ್ಪನಖಿ ಮತ್ತು ವಿರಾಧರು ರಾಮ, ಸೀತೆ ಇವರನ್ನು ಮೋಸಗೊಳಿಸ ಹೋಗಿ, ತಾವೇ ಮೋಸ ಹೋಗುತ್ತಾರೆ.

ಮೇಲೆ ಕಾಣಿಸಿಕೊಂಡು ಜನಪ್ರಿಯವಾಗಿದ್ದಿತು. ಮುದ್ರಿತ ಕೃತಿಯಲ್ಲಿ, ಓರ್ವ ಮಿಶನರಿಯ ಸಲಹೆಯ ಮೇರೆಗೆ, ಶೇಕ್ಸ್‌ಪಿಯರರನ ಚರಿತ್ರೆಯನ್ನು ಪೀಠಿಕಾರೂಪವಾಗಿ ಸೇರಿಸಲಾಗಿದ್ದು, ಅದು ಶೇಕ್ಸ್‌ಪಿಯರನನ್ನು ಕುರಿತ ಮೊತ್ತಮೊದಲಿನ ಕನ್ನಡ ಲೇಖವಾಗಿದೆ.

## ೧೪ ಸಾಂಪ್ರದಾಯಿಕ ಗದ್ಯ ಲೇಖಕರು

ಇತ್ತ ಹೊಸ ಶಿಕ್ಷಣದ ಪರಿಣಾಮವಾಗಿ, ಸಾಮಾನ್ಯ ಮಟ್ಟದ ವಾಚನಾಭಿರುಚಿಯನ್ನು ಬೆಳೆಯಿಸಿಕೊಂಡ ಕನ್ನಡಿಗರ ಸಂಖ್ಯೆ ಭರದಿಂದ ಹೆಚ್ಚುತ್ತಲಿದ್ದಿತು. ಅವರಿಗೆ ಬೇಕಾಗಿದ್ದ ಕೃತಿಗಳೆಂದರೆ, ಜನಪ್ರಿಯ ಮಟ್ಟದ ಕಾವ್ಯಗಳು, ಬತ್ತೀಸಪುತ್ಥಳಿಯಂಥ ಕಥೆಗಳು ಮತ್ತು ಧಾರ್ಮಿಕ ಗ್ರಂಥಗಳು. ಇವುಗಳನ್ನು ಪೂರೈಸುವುದಕ್ಕೆ ದೇಶೀಯ ಮುದ್ರಕ ಪ್ರಕಾಶಕರು ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಸಿದ್ಧರಾಗಿಯೇ ಇದ್ದರು. ಪರಿಣಾಮವಾಗಿ ಸಾಂಪ್ರದಾಯಿಕ ಸಾಹಿತ್ಯದಲ್ಲಿಯೇ ತಮ್ಮ ದೃಷ್ಟಿಯನಿರಿಸಿಕೊಂಡ ಗದ್ಯ ಲೇಖಕರು ಕ್ರಮೇಣ ತಲೆಯೆತ್ತಿದರು. ಕನ್ನಡವನ್ನು ಕಲಿಯುತ್ತಿದ್ದವರಿಗಾಗಿ ವ್ಯಾಕರಣಾದಿ ಗ್ರಂಥಗಳನ್ನು ರಚಿಸುವ ಹಾಗೂ ಹಳೆಯ ಕಾವ್ಯಗಳನ್ನು ಟೀಕೆ ಟಿಪ್ಪಣಿಗಳೊಡನೆ ಪ್ರಕಟಿಸುವ ಹೊಣೆಯೂ ಅವರ ಮೇಲೆ ಇದ್ದಿತು. ಹೀಗೆ ಚಾಮರಾಜೇಂದ್ರರ ಕಾಲದಲ್ಲಿದ್ದ ಸಂಸ್ಕೃತ ಕನ್ನಡ ಪಂಡಿತರು ಸಾಮಾನ್ಯಮಟ್ಟದ ವಾಚಕನನ್ನು ಗಮನದಲ್ಲಿರಿಸಿಕೊಂಡು ಸುಲಭ ಸಾಹಿತ್ಯವನ್ನು ರಚಿಸುವ ಪ್ರವೃತ್ತಿಯುಳ್ಳವರಾಗಿದ್ದುದನ್ನು ನಾವು ಕಾಣುತ್ತೇವೆ. ಕನ್ನಡ ಸಾಹಿತ್ಯ ವಾಹಿನಿಯು ಹೆಚ್ಚು ಹೆಚ್ಚು ಜನಾಭಿಮುಖವಾಗುತ್ತ ನಡೆದುದರ ಲಕ್ಷಣವಿದು.

ಇಂಥ ವಿದ್ವಾಂಸರು ಶಾಲೆ, ಕಾಲೇಜುಗಳಲ್ಲಿ ಅಧ್ಯಾಪಕರಾಗಿ ಮುಂದಿನ ಪೀಳಿಗೆಯವರಲ್ಲಿ ಕನ್ನಡ ಪ್ರೇಮವನ್ನು ಕುದುರಿಸುತ್ತ, ಕನ್ನಡಭಾಷೆಯ ಪರಿಶುದ್ಧತೆಯನ್ನು ಕಾಯ್ದುಕೊಳ್ಳುವ ವಿಚಾರದಲ್ಲಿ ಶ್ರದ್ಧೆಯಿಂದ ಕೆಲಸ ಮಾಡಿದ್ದಾರೆ. ಅವರಲ್ಲಿ ಕೆಲವರು ಮಿಶನರಿಗಳಿಗೆ ಕನ್ನಡ ಪಾಠ ಹೇಳಿ ಅವರ ಬರವಣಿಗೆಯನ್ನು ಆಗೀಗ ತಿದ್ದಿದ್ದಾರೆ; ಇತರ ರೀತಿಯಿಂದಲೂ ನೆರವಾಗಿದ್ದಾರೆ.

ಮೈಸೂರು ಪ್ರದೇಶದಲ್ಲಿದ್ದ ಅಂದಿನ ಕನ್ನಡ ವಿದ್ವಾಂಸರಲ್ಲಿ **ಬೇಗೂರ ಮಲ್ಲಪ್ಪರ** ಹೆಸರು (೧೮೩೫–೧೯೦೭) ಎದ್ದು ಕಾಣುವಂತಹುದು. ಕನ್ನಡ, ಸಂಸ್ಕೃತಗಳ ಜೊತೆಗೆ ಇಂಗ್ಲಿಷ್, ಪರ್ಶಿಯನ್ ಭಾಷೆಗಳನ್ನು ಅವರು ರೂಢಿಸಿಕೊಂಡಿದ್ದರು. ಕರ್ನಾಟಕ ಭಾಷೋಜ್ಜೀವಿನೀ ಪಾಠಶಾಲೆ ಮತ್ತು ಮಹಾರಾಜಾ ಶಾಲೆಯಲ್ಲಿ ಮುಖ್ಯೋಪಾಧ್ಯಾಯ ರಿದ್ದುದಲ್ಲದೇ ಕಿಟೆಲ್, ರೈಸರ ಕನ್ನಡ ವಿಷಯಕ ಸಂದೇಹಗಳನ್ನು ನಿವಾರಿಸಿ, ಅವರ ಸಂಶೋಧನ ಕಾರ್ಯದಲ್ಲಿ ನೆರವಾಗಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಮಲ್ಲಪ್ಪನವರ ಪರಿಚಯವು ಸಾರ್ವತ್ರಿಕವಾಗುವುದಕ್ಕೆ ಅವರ 'ಶಬ್ದಾದರ್ಶ'ವೇ ಕಾರಣ. ಸುಲಭ ಪಠ್ಯವಾದ ಆ ಕೃತಿಯಿಂದಾಗಿ ಅವರಿಗೆ ವ್ಯಾಕರಣದ ಮಲ್ಲಪ್ಪನೆಂಬ ಹೆಸರು ರೂಢಿಯಲ್ಲಿ

ಬಂದಿತು. ಅವರು 'ರಾಜಶೇಖರ ವಿಳಾಸ' (೧೮೬೬) ಕಾವ್ಯಾವಲೋಕನದ ಅರ್ಥಾಲಂಕಾರ ಪ್ರಕರಣ ಟೀಕೆ(೧೮೮೨) ನಾಗವರ್ಮನ ಕಾದಂಬರಿ(೧೮೯೨)- ಇವುಗಳನ್ನು ಪರಿಷ್ಕರಿಸಿದ್ದಾರೆ.

ವೆಸ್ಲಿಯನ್ ಮಿಶನರಿಗಳ ಸಂಪರ್ಕದಲ್ಲಿದ್ದ ಎಂ. ರಾಮಸ್ವಾಮಿ ಶಾಸ್ತ್ರಿಯು ಕನ್ನಡ ವ್ಯಾಕರಣ, ಕೋಶಗಳನ್ನು ರಚಿಸಿದ (ಸು. ೧೮೫೪) ಆರಂಭಕಾರರಲ್ಲಿ ಒಬ್ಬನು. ಅವನ 'ವಾಗ್ವಿಧಾಯಿನಿ'ಯು ಅನೇಕ ವರ್ಷಗಳವರೆಗೆ ಪಠ್ಯವಾಗಿದ್ದಿತು. 'ಕರ್ಣಾಟಕ ಶಬ್ದಕಲ್ಪದ್ರುಮ'ವೆಂಬ ಕೋಶರಚನೆಯಲ್ಲಿ ಹೆಸರುಘಟ್ಟದ ಹೊನ್ನಪ್ಪನು ಇವನಿಗೆ ಸಹಾಯಕನಾಗಿದ್ದನು. ಹೊನಪ್ಪನು ಒಂದು ವ್ಯಾಕರಣ ಪುಸ್ತಕವನ್ನು ಬರೆದದ್ದಲ್ಲದೇ (೧೮೯೦) ರಾಜಶೇಖರ ವಿಳಾಸದ ೫ ಆಶ್ವಾಸಗಳಿಗೆ ಟೀಕೆಯನ್ನು ರಚಿಸಿದ್ದಾನೆ. ಪುಸ್ತಕಂ ಅಳಸಿಂಗರಾಚಾರ್ಯನು 'ಕರ್ಣಾಟಕ ಭಾಷಾಭೂಷಣ'ಕ್ಕೆ ಟೀಕೆಯನ್ನು ಬರೆದು, ರೈಸನಿಗಿಂತ ಮೊದಲೇ (೧೮೮೦) ಅದನ್ನು ಪ್ರಚುರಪಡಿಸಿದ್ದಾನೆ. ಅವನ 'ಚಾಣಕ್ಯತಂತ್ರ ಚಮತ್ಕಾರ' ಗದ್ಯಕಥನವು ಯಥಾಪ್ರಕಾರ ಜನಪ್ರಿಯ ವಾಚನಕ್ಕಾಗಿ ಬರೆದುದು.

ಆ ಕಾಲದ ಇನ್ನೊಬ್ಬ ವ್ಯಾಕರಣ ಪಂಡಿತನೆಂದರೆ ಕಳಲೆ ಗ್ರಾಮದ **'ಕುಂಡಲಗಿರಿಯಾಚಾರ್ಯ'**ನು (೧೮೬೫-೧೯೦೪). ಸಂಸ್ಕೃತ ಶಾಸ್ತ್ರ ಗ್ರಂಥಗಳನ್ನು ವಿಶೇಷತಃ ಪಾಣಿನಿಯನ್ನು ಆಳವಾಗಿ ಅಭ್ಯಾಸ ಮಾಡಿದ್ದನು. ಸಂಸ್ಕೃತ ಅಧ್ಯಾಪಕನಾಗಿ ಹಲವು ಊರುಗಳಲ್ಲಿ ಕೆಲಸ ಮಾಡಿದನು. ಕನ್ನಡ ಅಧ್ಯಯನ ವಿಚಾರದಲ್ಲಿ ಅವನಿಂದ ಸಂದ ದೊಡ್ಡ ಕಾಣಿಕೆಯೆಂದರೆ 'ಶಬ್ದಾನುಶಾಸನ'ಕ್ಕೆ ಬರೆದ ವಿಸ್ತಾರವಾದ ವ್ಯಾಖ್ಯಾನ. ಆದರೆ ಬರೆದದ್ದು ಮುಕ್ಕಾಲು ವಾಸಿ ಮಾತ್ರ. ಅದನ್ನು ಮ. ಪ್ರ. ಪೂಜಾರರು ಪೂರ್ಣ ಮಾಡಿದ್ದನ್ನು ಕರ್ನಾಟಕ ವಿದ್ಯಾವರ್ಧಕ ಸಂಘದವರು ೧೯೪೧ರಲ್ಲಿ ಪ್ರಕಟಿಸಿದರು. ಜೊತೆಗೆ ಹರ್ಷಚರಿತೆ, ಜೀವಂಧರ ಚರಿತೆ, ಜೈಮಿನಿ ಭಾರತದ ಕಥೆ ಇವನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿದುದು ಆಗಿನ ವಿದ್ವಾಂಸ ಲೇಖಕರ ಒಲವನ್ನು ನಿದರ್ಶಿಸುತ್ತದೆ. ಮಧ್ಯ ವಯಸ್ಸಿನಲ್ಲಿ ತೀರಿಹೋಗದಿದ್ದರೆ ಅವನಿಂದ ಇನ್ನೂ ಹೆಚ್ಚಿನ ಸೇವೆ ಸಲ್ಲಬಹುದಿತ್ತು.

ಆಗಿನ ಸಂಸ್ಕೃತ ವಿದ್ವಾಂಸರಲ್ಲಿ ಒಬ್ಬನಾದ **ದೊಡ್ಡಬೆಲೆ ನಾರಾಯಣಶಾಸ್ತ್ರಿಯು** ಪುಸ್ತಕ ಲೇಖನವನ್ನೇ ಪ್ರಮುಖ ಉದ್ಯಮವನ್ನಾಗಿ ಮಾಡಿಕೊಂಡಿದ್ದನು. ಅದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದ ಹಲವು ಗ್ರಂಥಗಳಿಗೆ ಟೀಕೆ, ಸಂಸ್ಕೃತ ಕಾವ್ಯಗಳ ಅನುವಾದ, ಕೆಲ ಕನ್ನಡ ಕಾವ್ಯಗಳ ಪ್ರಕಟಣೆ ಇವುಗಳ ಜೊತೆಗೆ 'ಶ್ರೀಕೃಷ್ಣಬೋಧಾಮೃತ'ವೆಂಬ ಹೆಸರಿನ (೧೨ ಜನ ರಾಜಪುತ್ರರ) ಕಥೆಯನ್ನು ತೆಲುಗಿನಿಂದ ಭಾಷಾಂತರ ಮಾಡಿದ್ದಾನೆ. ಅದರಂತೆ ಯು.ದಕ್ಷಿಣಾಮೂರ್ತಿಶಾಸ್ತ್ರಿಯು ಕೆಲವು ಸಂಸ್ಕೃತ, ಕನ್ನಡಕೃತಿಗಳಿಗೆ ಟೀಕೆಯನ್ನು ಬರೆದು ಪ್ರಕಟಿಸಿದುದರ ಜೊತೆಗೆ 'ಅಲಾದಿಯ ದೀಪಸ್ತಂಭದ ಕತೆ'ಯನ್ನು ಹೊರತಂದನು (೧೮೯೦).

**ಪಿ.ಆರ್. ಕರಿಬಸವಶಾಸ್ತ್ರಿಗಳು** (೧೮೪೮-೧೯೩೧) ತಮ್ಮ ಬದುಕಿನ ದೀರ್ಘ ಕಾಲವನ್ನು ಕನ್ನಡದ ಅಧ್ಯಾಪನ ಮತ್ತು ಗ್ರಂಥ ರಚನೆಗಳಲ್ಲಿ ಕಳೆದಿದ್ದಾರೆ. ವೆಸ್ಲೆಯನ್ ಶಾಲೆಯಲ್ಲಿಯೂ ಅನಂತರ ಮಹಾರಾಜಾ ಕಾಲೇಜಿನಲ್ಲಿಯೂ ಸುಮಾರು ೪೫ ವರ್ಷ ಕನ್ನಡದ ಪಾಠ ಹೇಳಿದ್ದಾರೆ. ಇವರ ಸಾಹಿತ್ಯ ಕಾರ್ಯವು ವೀರಶೈವ ಮತಕ್ಕೆ ಮೀಸಲಾಗಿದ್ದಿತು. ವಿಶೇಷತಃ ಸಂಸ್ಕೃತದಲ್ಲಿರುವ ವೀರಶೈವ ಸಿದ್ಧಾಂತದ ಕನ್ನಡವಿವರಣೆ, ಪ್ರಕಟಣೆಗಳಿಗೆ ಹೆಚ್ಚು ಮನಸ್ಸು ಹಾಕಿದ್ದಾರೆ. ಜೊತೆಗೆ ಹಳಗನ್ನಡ ಗ್ರಂಥಗಳ ಪರಿಷ್ಕರಣವೂ ಇವರಿಂದ ನೇರವೇರಿದೆ. ಇನ್ನೊಬ್ಬ ಕರಿಬಸವಶಾಸ್ತ್ರಿಯು (ಎನ್. ಆರ್.) ನಂಜನಗೂಡಿನವನು (೧೮೭೨-೧೯೨೩). ಇವನೂ ವೀರಶೈವ ಕೃತಿಗಳ ಪ್ರಕಟಣೆಯನ್ನು ಕೈಕೊಂಡು 'ಕೊಟ್ಟೂರ ಬಸವೇಶ ಪುರಾಣ'ಮುಂತಾದ ಅನೇಕ ಗ್ರಂಥಗಳನ್ನು ಹೊರತಂದಿದ್ದಾನೆ. 'ಮೈಸೂರ ಸ್ಟಾರ್' ಪತ್ರಿಕೆಯ ಪ್ರಕಟಣೆಯಲ್ಲಿ ಇವನ ಅಂಗವಿದ್ದಿತು.

ಕನ್ನಡ ಪುಸ್ತಕಗಳ ಮುದ್ರಣ, ಪ್ರಕಟನ ಕಾರ್ಯದಲ್ಲಿ ದೇಶೀಯರು ಹಿಂದೆ ಮುಂದೆ ನೋಡುತ್ತಿದ್ದಾಗ, **ಹೊಳಕಲ್ಲು ನರಸಿಂಹಯ್ಯನು** ಧೈರ್ಯದಿಂದ ಮುಂದಡಿ ಇಟ್ಟುದನ್ನು ಇಲ್ಲಿ ಪ್ರಸ್ತಾಪಿಸಬೇಕು. ಅಚ್ಚಿನ ಮೊಳೆಗಳನ್ನು ತಯಾರಿಸಲು ಮುಂಬಂದನ್ನು. ಚಿದಾನಂದಾವಧೂತರು, ಹಲವು ದಾಸರು, ನಿಜಗುಣಶಿವಯೋಗಿಗಳು ಇವರ ಕೃತಿಗಳಿಗೆ ಪ್ರಕಾಶಕನಾದನಲ್ಲದೆ 'ವಿಕ್ರಮಾದಿತ್ಯರಾಯ', 'ಬೇತಾಳ ಪಂಚವಿಂಶತಿ' ಈ ಕಥಾನಕಗಳನ್ನು ಪುಸ್ತಕ ರೂಪದಲ್ಲಿ ಹೊರತಂದವರೊಳಗೆ ಮೊದಲಿಗನೆಂದು ತೋರುತ್ತದೆ.

## ೯೧೫ ಹೊಸ ದೃಷ್ಟಿಯ ಗದ್ಯಕಾರರು

ಪರಂಪರೆಯಲ್ಲಿಯೆ ಹೆಚ್ಚಾಗಿ ಗಮನವಿರಿಸಿದ ಗದ್ಯಲೇಖಕರನ್ನೂ ಪ್ರಾಚೀನ ಕೃತಿಗಳನ್ನು ಪರಿಷ್ಕರಿಸಿದ ವಿದ್ವಾಂಸರನ್ನೂ ಪರಿಶೀಲಿಸಿದೆವಷ್ಟೆ. ಇನ್ನೀಗ ಹೊಸ ದೃಷ್ಟಿಯ ಹಲವು ಗದ್ಯ ಲೇಖಕರನ್ನು ಗಮನಿಸುವುದು ಪ್ರಸ್ತುತವಾಗಿದೆ. ಇವರು ಆಧುನಿಕ ರೀತಿಯ ಶಿಕ್ಷಣವನ್ನು ಪಡೆದವರು ; ಸರಕಾರೀ ನೌಕರಿಯಲ್ಲಿದ್ದವರು. ಅವರಲ್ಲಿ ಇಂಗ್ಲಿಷ್‌ನ ಜೊತೆಗೆ ತೆಲುಗು, ತಮಿಳು, ಹಿಂದುಸ್ಥಾನೀ, ಮರಾಠೀ ಹಾಗೂ ಬಂಗಾಲೀ ಭಾಷೆಗಳನ್ನು ಓದಿಕೊಂಡವರೂ ಇದ್ದಾರೆ. ಹಿಂದಿನ ವಿಭಾಗದಲ್ಲಿ ಹೇಳಿದ ವಿದ್ವಾಂಸರು ಸಂಸ್ಕೃತದಲ್ಲಿ ವಿಶೇಷ ಪರಿಣತಿಯನ್ನು ಹೊಂದಿದ್ದರಷ್ಟೆ. ಅಷ್ಟರಮಟ್ಟಿಗೆ ಅಲ್ಲವಾದರೂ ಇವರು ಸಂಸ್ಕೃತ ಕಾವ್ಯ ನಾಟಕಗಳನ್ನು ಬಲ್ಲವರಾಗಿದ್ದರು. ಹೀಗೆ ಹಳತು ಹೊಸತುಗಳೆರಡನ್ನೂ ರೂಢಿಸಿಕೊಂಡು ಅದೇ ಬಗೆಯಾಗಿ ಗ್ರಂಥರಚನೆಯನ್ನು ಮಾಡಿದ್ದಾರೆ.

ಹೊಸ ಸಾಹಿತ್ಯ ನಿರ್ಮಾಣದ ಹೊಣೆಯು ಇವರ ಮೇಲೆಯೇ ಇದ್ದಿತು. ಪರಂಪರಾಗತ ಪಂಡಿತ-ಲೇಖಕರಿಗೆ ಅದು ಸಾಧ್ಯವಿರಲಿಲ್ಲ. ಹಾಗೆಂದು ಇಂಗ್ಲಿಷ್‌ನಲ್ಲಿ

ಪರಿಣತ-ಪದವೀಧರರಾಗಿದ್ದ ಎಲ್ಲರೂ ಕನ್ನಡ ಸಾಹಿತ್ಯದಲ್ಲಿ ಆಸ್ಥೆಯುಳ್ಳವರಿರಲಿಲ್ಲ. ಅಷ್ಟೇ ಅಲ್ಲ, ಅವರಲ್ಲಿ ಅನೇಕರಿಗೆ ಸ್ವಭಾಷಾ ವಿಚಾರದಲ್ಲಿ ಅಸಡ್ಡೆಯೂ ಇದ್ದಿತು. ಆದರೂ ಟ್ರೇನಿಂಗ್ ಕಾಲೇಜಿನ ಮತ್ತು ಇತರ ಕಾಲೇಜುಗಳ ಕಟ್ಟೆ ಹತ್ತಿದ ಈ ಸಾಮಾನ್ಯ ವಿದ್ಯಾವಂತರೇ ಆ ಕೆಲಸ ಮಾಡಲು ತಕ್ಕವರು ಎಂಬ ಅಭಿಪ್ರಾಯವು ಹಲವು ಹೊಸ ಗ್ರಂಥಗಳ ಪೀಠಿಕೆಗಳಲ್ಲಿ ವ್ಯಕ್ತವಾಗಿದೆ. ಬಿ. ವೆಂಕಟಾಚಾರ್ಯರಿಂದ ಅನುವಾದಗೊಂಡ (೧೮೭೫) 'ದುರ್ಗೇಶ ನಂದಿನಿ' ಕಾದಂಬರಿಯ ಪೀಠಿಕೆಯಲ್ಲಿ ನಮ್ಮ ಹೊಸ ಸಾಹಿತ್ಯವನ್ನು ವಂಗ ಸಾಹಿತ್ಯಕ್ಕೆ ಹೋಲಿಸಿ ಕನ್ನಡದಲ್ಲಿ ಏನೂ ಇಲ್ಲವೆಂದು ಹೇಳುತ್ತ ಈ ಮಾತುಗಳು ಬಂದಿವೆ :

*"ನಮ್ಮಲ್ಲಿ ಇಂಗ್ಲೀಷ್ ಭಾಷಾಭಿಜ್ಞರಾದವರು ತಾವು ಓದುವ ವಿದ್ಯಾಲಯದ ಉಪಾಧಿಗಳನ್ನು ಸಂಪಾದಿಸಿ ಬಿಟ್ಟರೆ ಕೃತಕಾರ್ಯರಾದೆವೆಂದು ತಿಳಿದುಕೊಂಡು ತಟಸ್ಥರಾಗಿ ದೇಶಭಾಷೆಯ ಅಭಿವೃದ್ಧಿಯ ವಿಚಾರದಲ್ಲಿ ಸ್ವಲ್ಪವೂ ಲಕ್ಷ್ಯ ಕೊಡದೇ ಉದಾಸೀನರಾಗಿರುವುದೇ ಶೋಚನೀಯವಾದೀ ಸ್ಥಿತಿಗೆ ಕಾರಣವೆಂದು ತೋರುತ್ತದೆ. ಇದರಿಂದ ಇಂಗ್ಲಿಷ್ ಭಾಷೆಯಲ್ಲಿ ಕೃತವಿದ್ಯರಾಗಿರುವ ನಮ್ಮ ಅನೇಕ ಮಹಾಶಯರು ನಿಂದಿತರಾದೆವೆಂದು ತಿಳಿಯಕೂಡದು. ಅವರಿಂದಲೇ ದೇಶಕ್ಕೆ ಮಂಗಳವುಂಟಾಗಿ ಕಾರ್ಯಸಿದ್ಧಿಯಾಗಬೇಕಾಗಿರುವುದರಿಂದ ಅವರನ್ನು ನಾವೆಂದಿಗೂ ದೂಷಿಸಲಾರೆವು..... ನಮ್ಮ ಸಂಸ್ಕೃತ ಪಂಡಿತರಿಂದೀ ಕಾರ್ಯಸಾಧನೆಯಾಗುವುದೆಂದು ನಿರೀಕ್ಷಿಸಕೂಡದು..... ಅವರು ಸಾಮಾನ್ಯರಿಗೆ ತಿಳಿಯದ ಧರ್ಮಶಾಸ್ತ್ರಗಳಲ್ಲಿ ಪಾರಂಗತರಾಗಿರುವ ಕಾರಣ ಅವರು ಅದರ ತತ್ವಾನ್ವೇಷಣೆಯಲ್ಲಿ ನಿರತರಾಗಿರುತ್ತಾರೆ. ಪ್ರಾಕೃತವಾದ ದೇಶ ಭಾಷೆಯು ಅವರು ನೋಡತಕ್ಕದ್ದಲ್ಲ..... ಅವರವಧಾನಕ್ಕದು ಯೋಗ್ಯವಾದುದಲ್ಲ. .... ಆತ ಏವ ಇಂಗ್ಲೀಷಿನಲ್ಲಿ ಪಾರಂಗತರಾದ ಪಂಡಿತರಿಂದಲೇ ಈ ಕಾರ್ಯಸಿದ್ಧಿಯಾಗಬೇಕು."*

ಈ ಪಾಶ್ಚಾತ್ಯ ರೀತಿಯ ಶಿಕ್ಷಣವಂತರಲ್ಲಿ ಶಾಲೆ ಕಾಲೇಜುಗಳೊಳಗೆ ಅಧ್ಯಾಪನ ವೃತ್ತಿಯಲ್ಲಿದ್ದವರು ಮತ್ತು ಶಿಕ್ಷಣ ಖಾತೆ ಇಲ್ಲವೆ ಭಾಷಾಂತರ ಶಾಖೆಯಲ್ಲಿ ಕೆಲಸಕ್ಕಿದ್ದವರೇ ಹೆಚ್ಚು ಜನ. ಅವರ ಸಾಹಿತ್ಯಿಕ ಗೈಮೆಗೆ ಅವರ ಉದ್ಯೋಗವು ಅನುಕೂಲವಾಗಿದ್ದಿತು. ಜೊತೆಗೆ ರೆವಿನ್ಯೂ ಮುಂತಾದ ಅನ್ಯ ಶಾಖೆಯಲ್ಲಿದ್ದವರು ಸಹ ಕನ್ನಡವಾಚನ ಲೇಖನಗಳಲ್ಲಿ ಆಸ್ಥೆಯನ್ನು ತೋರಿದ್ದುದು ಕಂಡುಬರುತ್ತದೆ. ಅಲ್ಲದೆ ಮಹಾರಾಜಾ ಕಾಲೇಜು ಹಾಗೂ ಇತರ ವಿದ್ಯಾಲಯಗಳಲ್ಲಿ ಇತಿಹಾಸ, ವಿಜ್ಞಾನಾದಿ ವಿಷಯಗಳನ್ನು ಕಲಿಸುತ್ತಿದ್ದ ಅಧ್ಯಾಪಕರು ತಂತಮ್ಮ ವಿಷಯಗಳ ಮೇಲೆ ಕನ್ನಡದಲ್ಲಿ ಪುಸ್ತಕಗಳು ಇರಬೇಕು ಎನ್ನುವ ಒಲವನ್ನು ವ್ಯಕ್ತಪಡಿಸಿದ್ದುದು ಕಂಡುಬರುತ್ತದೆ.

ಕೆಲವು ವಿದ್ಯಾವಂತರು ಪತ್ರಿಕೋದ್ಯಮದತ್ತ ಮನಸ್ಸುಗೊಟ್ಟುದುದೂ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ ಹೆಜ್ಜೆಯಾಗಿದೆ. ಪ್ರಚಲಿತ ವಿಷಯಗಳನ್ನು

ಕುರಿತ ಗದ್ಯ ಬರವಣಿಗೆಯು ಇಲ್ಲಿಂದಲೆ ಮೊದಲಾಯಿತು. ಜೊತೆಗೆ ಕನ್ನಡ ಕಾವ್ಯಗಳನ್ನು ಧಾರಾವಾಹಿಯಾಗಿ ಕೊಡಬೇಕೆನ್ನುವ ಪತ್ರಿಕೋದ್ಯಮದ ಬಗೆಯನ್ನೂ ನಾವು ಕಾಣುತ್ತೇವೆ ('ಕರ್ಣಾಟಕ ಕಾವ್ಯಮಂಜರಿ', ೧೮೯೨).

ಮೈಸೂರಿನ ಹಲವು ಪದವೀಧರರು 'ಗ್ರ್ಯಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಶನ್' ಸ್ಥಾಪಿಸಿದರು. ಮುದ್ರಿತ ಗ್ರಂಥಗಳ ಪ್ರಸಾರವು ಅವರ ಪ್ರಾರಂಭದ ಉದ್ದೇಶವಾಗಿದ್ದಿತು. ಕ್ರಮೇಣ ಅಚ್ಚುಕೂಟವನ್ನು ಸ್ಥಾಪಿಸಿ, ಗ್ರಂಥ ಪ್ರಕಟನೆಗೆ ತೊಡಗಿದರು. ಈ ಕಾರ್ಯದಲ್ಲಿ ಇಂಗ್ಲಿಷ್ Classics ಕೃತಿಗಳ ಅನುವಾದವು ಹೆಚ್ಚಿನ ಪಾಲನ್ನು ಪಡೆಯಿತು. ಜೊತೆಗೆ Books for beginners ಮಾಲಿಕೆಯ ಪುಸ್ತಕಗಳೂ ಬೆಳಕಿಗೆ ಬಂದುವು. ಈ ಪ್ರಕಟಣೆಗಳಿಗಾಗಿ ಅವರು ಪತ್ರಿಕೆಯನ್ನು ಮಾಧ್ಯಮವಾಗಿ ಇಟ್ಟುಕೊಂಡರು. ಇಂಗ್ಲಿಷ್, ಬಂಗಾಲೀ, ಸಂಸ್ಕೃತ ಗ್ರಂಥಗಳ ಅನುವಾದಗಳನ್ನು ವಿಪುಲವಾಗಿ ಪ್ರಕಟಿಸಿದ ಅವರ 'ಕರ್ನಾಟಕ ಗ್ರಂಥಮಾಲಾ' ಪತ್ರಿಕೆಯ ಕಾರ್ಯ ಮಹತ್ತರವಾದುದು*

ಜಿ.ಟಿ.ಎ. ಮತ್ತು 'ಕರ್ನಾಟಕ ಗ್ರಂಥಮಾಲೆ' ಇವುಗಳ ಆರಂಭದ ಕಾರ್ಯಕರ್ತರೆಂದು ಎಲ್. ಜಯರಾವ, ಎಂ. ಶಾಮರಾವ (೧೮೬೦-೧೯೩೫), ಬಾಪು ಸುಬ್ಬರಾಯ ಮತ್ತು ಅಪ್ಪಣ್ಣ ಶೆಟ್ಟಿ ಇವರನ್ನು ಹೆಸರಿಸಬೇಕು. ಮೈಸೂರ ಸಂಸ್ಥಾನದಲ್ಲಿ ಹಿರಿಯ ಅಧಿಕಾರಿಗಳಾಗಿದ್ದ ಎಂ. **ಶಾಮರಾಯರು** ಅನೇಕ ಕನ್ನಡಲೇಖಕರನ್ನೂ ಸಂಸ್ಥೆಗಳನ್ನೂ ಎತ್ತಿ ಹಿಡಿದವರು. ಶಿಕ್ಷಣ ರಂಗವು ಅವರ ಮುಖ್ಯ ಕಾರ್ಯಕ್ಷೇತ್ರವಾಗಿದ್ದಿತು. ಮೈಸೂರಿನ ಸ್ಥಿತಿಗತಿಯನ್ನು ಚೆನಾಗಿ ಬಲ್ಲವರಾಗಿದ್ದ ಅವರು 'ಮೈಸೂರು ದೇಶದ ಚರಿತ್ರೆ'ಯನ್ನು ಬರೆದಿದ್ದಾರೆ. ಅದು ಅನೇಕ ವರ್ಷಗಳ ವರೆಗೆ ಪಠ್ಯವಾಗಿ ಮುಂದುವರಿಯಿತು. ಜೊತೆಗೆ 'ವಿದ್ಯಾದಾಯಿನೀ' ಎಂಬ ಶ್ರೇಷ್ಠ ಮಟ್ಟದ ಸಾಹಿತ್ಯಿಕ ಹಾಗೂ ಶೈಕ್ಷಣಿಕ ಪತ್ರಿಕೆಯನ್ನು ಹೊರಡಿಸಿದರು. ಕನ್ನಡವನ್ನು ಕಟ್ಟಿ ಬೆಳೆಸುವ ಅವರ ಕಾರ್ಯವು ೨೦ನೆಯ ಶತಮಾನದಲ್ಲಿಯೂ ಮುಂದುವರಿಯಿತು.

---

* ಭಾರತದ ವಿವಿಧ ಭಾಷಾ ವಾಙ್ಮಯಗಳ ೧೮೯೩ರ ವಾರ್ಷಿಕ ಸಮೀಕ್ಷೆಯಲ್ಲಿ ಈ ಸಾಹಿತ್ಯ ಕಾರ್ಯದ ಬಗ್ಗೆ ಬಂದ ಮಾತುಗಳು ಮನನೀಯವಾಗಿವೆ :

The most gratifying features of the year's publications are to be found in the attempts made by young men who have received a high university education, to publish old Kannada works whose existence has hitherto not been known and translations of standard works of English & Sanskrit literature. The promoters of the Granthamala and the Kavyamanjari are doing excellent service by concentrating the efforts of modern educated men and Pandits desirous to improve and enrich modern Kannada Literature.[೮]

ಶಾಮರಾಯರು ೧೮೯೮ರಲ್ಲಿ ಕರ್ನಾಟಕ ಗ್ರಂಥಮಾಲೆಯ ಹೊಣೆಯನ್ನು ಬಾಪು ಸುಬ್ಬರಾಯನಿಗೆ (೧೮೬೭–೧೯೨೧) ಬಿಟ್ಟುಕೊಟ್ಟಂತೆ ತಿಳಿಯುತ್ತದೆ. ಈತನು ಮಹಾರಾಜಾ ಕಾಲೇಜಿನಲ್ಲಿ ಇತಿಹಾಸದ ಅಧ್ಯಾಪಕನಾಗಿದ್ದನು. ಗ್ರಂಥಮಾಲೆಯ ವತಿಯಿಂದ ಪ್ರಕಟವಾದ ಮೊದಲ ಪುಸ್ತಕ 'ಚಂಡಮಾರುತವು' ಅವನದೇ. 'ಸಿಂದಬಾದದ ನಾವಿಕ, ನಿರ್ಭಾಗ್ಯ ಮುರಾದ' ಇವು ಅವನ ಇನ್ನೆರಡು ಗದ್ಯ ಕೃತಿಗಳು. 'ವಿದ್ಯಾದಾಯಿನೀ' ಪತ್ರಿಕೆಯ ಮುನ್ನಡೆಯಲ್ಲಿಯೂ ಇವನ ಅಂಗವಿದ್ದಿತು. ಅಪ್ಪಣ್ಣ ಶೆಟ್ಟಿಯು ಜಿ.ಟಿ.ಎ. ದಲ್ಲಿ 'ರೈಟರ್' ಎಂದು ಕೆಲಸಕ್ಕಿದ್ದನು. ಹೈದರ್ ಅಲಿಯನ್ನು ಕುರಿತು ವಿಲ್ಕ್ಸ್ ಮೊದಲಾದ ಚರಿತ್ರಕಾರರಿಂದ ಹಾಗೂ ಪರ್ಶಿಯನ್ ದಾಖಲೆಗಳಿಂದ ವಿಷಯವನ್ನು ಸಂಗ್ರಹಿಸಿ, ಆಧುನಿಕ ರೀತಿಯಲ್ಲಿ ಅವನ ಚರಿತ್ರೆಯನ್ನು ಬರೆದಿದ್ದಾನೆ.

'ಕರ್ಣಾಟಕ ಕಾವ್ಯಮಂಜರಿ'ಯ ಸಂಚಾಲಕರಾಗಿ ಪ್ರಾಚೀನ ಕಾವ್ಯಗಳನ್ನು ಪ್ರಕಟಿಸಿದ ಎಂ.ಎ.ರಾಮಾನುಜಯ್ಯಂಗಾರ್ (೧೮೬೨–೧೯೩೭) ಹಾಗೂ ಎಸ್.ಜಿ. ನರಸಿಂಹಾಚಾರ್ಯ (೧೮೬೨–೧೯೦೭) ಇವರ ಸಾಹಿತ್ಯ ಸೇವೆಯು ಚಿರಸ್ಮರಣೀಯವಾದುದು. ಆ ಮುನ್ನ ಹಳಗನ್ನಡ ವಾಙ್ಮಯವನ್ನು ಹೊರತರುವಲ್ಲಿ ಕೆಲವು ಮಿಶನರಿ ಜನರೂ ಸರಕಾರೀ ಅಧಿಕಾರಿಗಳೂ ಕೆಲಸ ಮಾಡಿದ್ದೇನೊ ಸರಿ. ಆದರೆ ಲಭ್ಯವಿರುವ ನೂರಾರು ಹಳಗನ್ನಡ ಕಾವ್ಯಗಳನ್ನು ಮನದಂದಾಗ ಇವರಿಬ್ಬರಿಗೆ ಅದು ನಿಧಾನದ ನಡಿಗೆಯಾಗಿ ತೋರಿತು. ಈ ಕಾವ್ಯಗಳ ನಿಯಮಿತವಾದ ಪ್ರಕಟಣೆಗೆ ಜನತೆಯ ಪುರಸ್ಕಾರ ದೊರೆತೀತೆಂಬ ಭರವಸೆಯಿಲ್ಲದಿದ್ದರೂ ಮುಂದುವರಿದುದು ಅವರ ಕಾರ್ಯನಿಷ್ಠೆಗೆ ಹಿರಿಯ ನಿದರ್ಶನವಾಗಿದೆ. ಈ ಕೆಲಸದಲ್ಲಿ ಎಂ.ಕೆ. ತಿರುಮಲಾಚಾರ್ ಹಾಗೂ ಕೆಲವು ಸಾಹಿತ್ಯಿಕ ಮಿತ್ರರು ಬೆಂಬಲವಿತ್ತರು. 'ಕರ್ಣಾಟಕ ಕಾವ್ಯಮಂಜರಿ'ಯಿಂದ ಒಂದೊಂದು ಗ್ರಂಥ ಹೊರಬೀಳುತ್ತಲೇ ಮುಂಬಯಿ, ಮದ್ರಾಸ, ಮೈಸೂರ ಸೀಮೆಗಳಲ್ಲಿಯ ಮೇಲ್ದರ್ಜೆಯ ಕನ್ನಡ ಪರೀಕ್ಷೆಗಳಿಗೆ ಅವು ಪಠ್ಯಗಳಾಗಿ ಆಯ್ಕೆಯಾಗುತ್ತಿದ್ದುದು ಎಂ.ಎ.ಆರ್.–ಎಸ್.ಜಿ.ನ. ಅವರ ಕೆಲಸದ ಮಹತ್ವವನ್ನು ಬಿಂಬಿಸುತ್ತದೆ. ಕ್ರಿ.ಶ. ೧೮೯೨ರಿಂದ ಆರು ವರ್ಷಗಳವರೆಗೆ ನಡೆದು ಈ ಮಾಲೆಯು ತಡೆದು ನಿಂತಿತು. ಆದರೆ ಒಂದೆರಡು ವರ್ಷಗಳಲ್ಲಿ ಈ ಪ್ರಕಟಣೆಯ ಕಾರ್ಯವು 'ಕರ್ಣಾಟಕ ಕಾವ್ಯಕಲಾನಿಧಿ' ಎಂಬ ಹೆಸರಿನಲ್ಲಿ ಮತ್ತೆ ಆರಂಭವಾಗಿ ಎರಡು ದಶಕಗಳ ಕಾಲ ಮುಂದುವರಿಯಿತು. ರಾಮಾನುಜಯ್ಯಂಗಾರ್ ಹಾಗೂ ನರಸಿಂಹಾಚಾರ್–ಇಬ್ಬರೂ ಕೂಡಿ ಕೈಗೊಂಡಿದ್ದ ಇನ್ನೊಂದು ಯೋಜನೆಯೆಂದರೆ 'ಮಹಾಭಾರತದ ಕಥಾಪ್ರಸಂಗ'ಗಳ ಗದ್ಯಾನುವಾದ.

**ಎಂ.ಎ. ರಾಮಾನುಜಯ್ಯಂಗಾರರು** ವೆಸ್ಲಿಯನ್ ಶಾಲೆಯಲ್ಲಿ, ಅನಂತರ ಮಹಾರಾಣಿ ಕಾಲೇಜಿನಲ್ಲಿ ಅಧ್ಯಾಪಕರಿದ್ದರು. ಕೆಲವು ಕಾಲ ಸರಕಾರದ ಭಾಷಾಂತರಕಾರರೂ ಆಗಿದ್ದು

ನಿವೃತ್ತರಾದರು. ತಮಿಳು, ಸಂಸ್ಕೃತಗಳಲ್ಲಿಯೂ ಅವರಿಗೆ ಪಾಂಡಿತ್ಯವಿದ್ದಿತು. ಹಳಗನ್ನಡದ ರತ್ನಭಂಡಾರವನ್ನು ಬಹಿರಂಗ ಪಡಿಸುವುದನ್ನು ತಮ್ಮ ಜೀವಿತದ ಹಿರಿಯ ಉದ್ದೇಶವಾಗಿಟ್ಟುಕೊಂಡು ಕಾಲು ಶತಮಾನದ ವರೆಗೆ ಅದರಲ್ಲಿ ನಿರತರಾಗಿದ್ದರು. 'ಕರ್ಣಾಟಕ ಕಾವ್ಯಮಂಜರಿ'ಯ ಜೊತೆಗೇ 'ಆರ್ಯಮತಸಂಜೀವಿನೀ' ಎಂಬ ಪತ್ರಿಕೆಯನ್ನು ಆರಂಭಿಸಿ (೧೮೯೪-೯೯) ಅದರಲ್ಲಿ ಹಿಂದೂ ಧರ್ಮಶಾಸ್ತ್ರ ವಿವೇಚನೆಯುಳ್ಳ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರು ಹಿರಿಯ ವಿಮರ್ಶಕರೂ ಸ್ವತಂತ್ರ ವಿಚಾರ ಸರಣಿಯುಳ್ಳವರೂ ಆಗಿದ್ದರೆಂಬ ಮಾತನ್ನು ಒತ್ತಿ ಹೇಳಬೇಕಾಗಿದೆ. ಅವರ 'ಕವಿಸಮಯ', 'ಕವಿಕಾರ್ಯಪ್ರಶಂಸೆ' ಗ್ರಂಥಗಳೂ, ಪ್ರಾಚೀನ ಕೃತಿಗಳಿಗೆ ಬರೆದ ಪೀಠಿಕೆಗಳಲ್ಲಿ ತಲೆದೋರಿದ ವಿಮರ್ಶನಗಳೂ ಈ ಮಾತಿಗೆ ಪುಷ್ಟಿಯೀಯುತ್ತವೆ. ಅವರದು ಸತ್ವಯುತವಾದ ಗದ್ಯಶೈಲಿ. ಹೊಸ ಯುಗಕ್ಕೆ ತಕ್ಕುದಾದ ಅಭಿಪ್ರಾಯಗಳನ್ನೊಳಗೊಂಡ ಅವರ 'ಪ್ರಬಂಧಾವಳಿ'ಯನ್ನು ವಿಶೇಷವಾಗಿ ಹೆಸರಿಸುತ್ತೇವೆ. ಆರೋಗ್ಯ, ಜ್ಞಾನಸಾಧನೆ, ವ್ಯವಹಾರಧರ್ಮ, ಗ್ರಂಥವಾಚನ– ಇವೇ ಮೊದಲಾದ ವಿಷಯಗಳನ್ನು ಕುರಿತು ಆ ಪ್ರಬಂಧಗಳಿವೆ. ಬದುಕಿನಲ್ಲಿ ಪದಾರ್ಪಣ ಮಾಡಲಿರುವ ಯುವಕರಿಗೆ ಜೀವನ ಮೌಲ್ಯಗಳನ್ನು ತಿಳಿಸಿಕೊಡುವ ಆಶಯವು ಈ ಕೃತಿಯ ಉದ್ದಕ್ಕೂ ತೋರಿಬರುತ್ತದೆ. "ಕನ್ನಡಭಾಷೆಯಲ್ಲಿ ಪ್ರಬಂಧರಚನೆಯೇ ಇಲ್ಲವೆಂಬ ಕೊರತೆಯನ್ನು ನಿವಾರಣಮಾಡುವುದೇ ನನ್ನ ಪ್ರಯತ್ನೋದ್ದೇಶವು ... ಸಿಕ್ಕಿದ ವಿಷಯಗಳನ್ನು ಕುರಿತು ಪ್ರಬಂಧಗಳನ್ನು ರಚಿಸುವುದರಲ್ಲಿ ಔಚಿತ್ಯ ಕಾಣಬರದೇ ಇದ್ದದರಿಂದ 'ಸುಖಸಾಧನಂ' ಎಂದರೆ ಈ ಲೋಕದಲ್ಲಿ ಮನುಷ್ಯನು ಸುಖಪಡುವುದಕ್ಕೆ ಏನೇನು ಪ್ರಧಾನ ಸಾಮಗ್ರಿಗಳು ಬೇಕಾಗಿರುವವು–ಎಂಬ ವಿಷಯಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಬರೆದಿರುವೆನು" ಎಂಬ ಅವರ ಹೇಳಿಕೆಯನ್ನು ಗಮನಿಸಬೇಕು. ವಿಚಾರಗಳ ಸ್ಪಷ್ಟತೆ ಮತ್ತು ಪ್ರತಿಪಾದನಾ ಸಾಮರ್ಥ್ಯ ಇವುಗಳಿಂದಾಗಿ ರಾಮಾನುಜಯ್ಯಂಗಾರರು ಅರುಣೋದಯದ ಪ್ರಮುಖ ಪ್ರಬಂಧಕಾರರಾಗಿದ್ದಾರೆ. ರನ್ನ ಕವಿಯ ಪರಿಚಯ ಮತ್ತು ಗದಾಯುದ್ಧದ ಪರಿಚಯವಿರುವ ಅವರ ಲೇಖವು ಹೊಸಗನ್ನಡದ ಮೊದಲ ವಿಮರ್ಶಾತ್ಮಕ ಪ್ರಬಂಧವೆಂದು ತಿಳಿಯಲಾಗುತ್ತದೆ.

ಸಹೃದಯ ವಿದ್ವಾಂಸರೆಂಬ ಖ್ಯಾತಿಯನ್ನು ಗಳಿಸಿದ್ದ **ಎಸ್.ಜಿ. ನರಸಿಂಹಾಚಾರ್ಯ**ರು ಹೊಸಗನ್ನಡದ ಕಣ್ಮಣಿಗಳಲ್ಲಿ ಒಬ್ಬರು. ಅವರ ಕಾವ್ಯಾಸಕ್ತಿಯು ಹಳತು, ಹೊಸತು ಎರಡರಲ್ಲಿಯೂ ಹರಿದು ಬಂದಿದೆ. ರಾಮಾನುಜಯ್ಯಂಗಾರರ ಜೊತೆಗೆ ಮಾಡಿದ ಕಾವ್ಯ ಸಂಪಾದನಾ ಕಾರ್ಯವಲ್ಲದೆ ಪಂಪನ 'ಆದಿಪುರಾಣ'ವನ್ನು ಪ್ರತ್ಯೇಕವಾಗಿ ಸಂಪಾದಿಸಿದ್ದಾರೆ. ಮೈಸೂರು ಪ್ರಾಚ್ಯವಿದ್ಯಾಭಂಡಾರದವರು ಒಪ್ಪಿಸಿಕೊಟ್ಟಿದ್ದ ಕಾರ್ಯವದು (೧೯೦೦). ಇದರ ಜೊತೆಗೆ ಜಗನ್ನಾಥ ವಿಜಯವನ್ನು ಕೂಡ ಸಂಪಾದಿಸಿದ್ದಾರೆ.(೧೯೦೪) ಇವುಗಳ ಸಂಪಾದನದಲ್ಲಿ ಅವರು ಹಲವು ಹಸ್ತಪ್ರತಿಗಳನ್ನು ಪರಿಶೀಲಿಸಿದ್ದಾರೆ. ಕವಿಚರಿತ್ರೆ

ಮತ್ತು ಕಾವ್ಯದ ಆಕರಗಳ ಬಗ್ಗೆ ಬೆಲೆಯುಳ್ಳ ಪೀಠಿಕೆಯನ್ನು ಬರೆದಿದ್ದಾರೆ. ಸುಪರಿಚಿತವಾದ 'ಪದ್ಯಸಾರ'ದ ರಸಪೂರ್ಣ ಪದ್ಯಗಳ ಆಯ್ಕೆಯಲ್ಲಿ ನರಸಿಂಹಾಚಾರ್ಯರ ಪಾತ್ರವೇ ಹೆಚ್ಚು ಮಹತ್ವದ್ದಾಗಿದೆ.

ಕರ್ಣಾಟಕ ಕವಿಚರಿತ್ರೆಯನ್ನು ರೂಪಿಸುವ ಕಾರ್ಯದಲ್ಲಿ 'ಎಸ್.ಜಿ.ನ.' ರಾ. ನರಸಿಂಹಾಚಾರ್ಯರಿಗೆ ಅಮೌಲ್ಯ ಸಹಾಯ ನೀಡಿರುವರು. "ಪ್ರಥಮ ಸಂಪುಟವನ್ನು ಬರೆಯುವಾಗ ನನಗೆ ವಿಶೇಷ ಸಹಾಯಕರಾಗಿದ್ದ (Collaborator) ಮ. ರಾ. ಎಸ್.ಜಿ. ನರಸಿಂಹಾಚಾರ್ಯರು ಆ ಪುಸ್ತಕ ಪ್ರಕಟವಾದ ಕೆಲವು ವರ್ಷಗಳಲ್ಲಿಯೇ ವೈಕುಂಠವಾಸಿಯಾದ ಸಂಗತಿ ವಿದಿತವಾಗಿಯೇ ಇದೆ. ಇವರಿಗಿದ್ದ ಕೂಲಂಕಷವಾದ ಭಾಷಾಪಾಂಡಿತ್ಯವೂ ಮನೋಹರವಾದ ಕವಿತಾಮಾರ್ಗವೂ ಇಂಥ ವೈದುಷ್ಯಕ್ಕೆ ಅಲಂಕಾರವಾದ ವಿನಯಸಂಪತ್ತಿಯೂ ಎಲ್ಲರ ಮನಸ್ಸನ್ನು ಆಕರ್ಷಿಸುತ್ತಿದ್ದವು. . . . ನನಗಂತೂ ಇವರ ಮರಣದಿಂದ ಬಲಭಾಗವೇ ಹೋದ ಹಾಗಾಯಿತು" ಎಂಬುದಾಗಿ ರಾ. ನರಸಿಂಹಾಚಾರ್ಯರು ಋಣ ಸಲ್ಲಿಸಿದ್ದಾರೆ.[೫] ಪ್ರಥಮ ಸಂಪುಟದಲ್ಲಿಯ ಕಾವ್ಯ ವಿಮರ್ಶನದ ಅಂಶಗಳು ಹೆಚ್ಚಾಗಿ ಎಸ್.ಜಿ.ನ. ಅವರದೇ ಇದ್ದಿರಬಹುದು.

'ಎಸ್.ಜಿ.ನ.' ಸ್ವಯಂ ಕವಿಯೂ ಹೌದು. ಕಾಳಿದಾಸನ ರಘುವಂಶದಿಂದ 'ಅಜನೃಪಚರಿತೆ, ದಿಲೀಪಚರಿತೆ' ಗಳನ್ನು ಆಯ್ದು ಷಟ್ಪದೀ ರೂಪದಲ್ಲಿ ಅನುವಾದಿಸಿದರು. ಭಾವಗೀತೆಗಳನ್ನೂ ಆಗೀಗ ಅನುವಾದಿಸಿದುದು ಕಂಡುಬರುತ್ತದೆ. ಇಂಗ್ಲಿಷ್‌ನಿಂದ ಭಾವಗೀತಗಳನ್ನು ಕನ್ನಡಕ್ಕೆ ತಂದ ಮೊದಲಿಗರಲ್ಲಿ ಅವರು ಒಬ್ಬರಾಗಿದ್ದಾರೆ. ಆಗಿನ ಪಠ್ಯಪುಸ್ತಕಗಳಲ್ಲಿ ಇಂಥ ಪದ್ಯಗಳು ಚದರಿಹೋಗಿವೆ ; ಅವುಗಳಲ್ಲಿ ಸ್ವತಂತ್ರ ರಚನೆಗಳೂ ಇವೆಯೆಂಬ ಅಂಶವು ಈಚೆಗೆ ಬೆಳಕಿಗೆ ಬಂದಿದೆ.* ಬೇರೆ ಗದ್ಯ ಗ್ರಂಥಕಾರರಿಗಾಗಿ ರಚಿಸಿದ ಪದ್ಯಗಳೂ ಹಲವಿವೆ. 'ಚಂಡಮಾರುತ'ದಲ್ಲಿಯ ಪದ್ಯಗಳು, ವರದಾಚಾರ್ಯರ ನಾಟಕಗಳಲ್ಲಿ ಬಂದ ಹಲವು ಹಾಡುಗಳು. ಇವರಿಂದ ರಚಿತವಾದವುಗಳು.[೬] ಹಾಲಿನಲ್ಲಿಯ ಸಕ್ಕರೆಯಂತೆ ಎಸ್.ಜಿ. ನರಸಿಂಹಾಚಾರ್ಯರ ಸಾಹಿತ್ಯಿಕ ಕಾರ್ಯವು ಹೀಗೆ ಅಲ್ಲಲ್ಲಿ ಸ್ನೇಹಿತರ ಬರೆಹದೊಂದಿಗೆ ಬೆರೆತುಕೊಂಡಿದೆ. ಅವರ ವಿದ್ವತ್ತಿನ ಅರಿವು ಮೈಸೂರಿನ ಹೊರಗಿನವರಿಗೂ ಮನವರಿಕೆಯಾಗಿದ್ದಿತು. ಧಾರವಾಡದಲ್ಲಿ ನೆರೆದ ಗ್ರಂಥಕರ್ತರ ಪ್ರಥಮ ಅಧಿವೇಶನಕ್ಕೆ ಇವರು ಆಯ್ಕೆಯಾದುದು ಅಂದಿನ ಲೇಖಕರಲ್ಲಿ ಇವರಿಗಿದ್ದ ಗಣ್ಯ ಸ್ಥಾನದ ದ್ಯೋತಕವಾಗಿದೆ.

---

* ಎಸ್. ಅನಂತನಾರಾಯಣರ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ' ಎಂಬ ಕೃತಿಯಲ್ಲಿಯೂ ಟಿ.ವಿ. ವೆಂಕಟಾಚಲ ಶಾಸ್ತ್ರಿಗಳ ಸಂಪಾದಿತ ಕೃತಿ ಎಸ್.ಜಿ. ನರಸಿಂಹಾಚಾರ್ಯರ ಕವಿತೆಗಳು (೧೯೮೭, ಐ.ಬಿ.ಎಚ್. ಪ್ರಕಾಶನ), ಗ್ರಂಥದಲ್ಲಿಯೂ ಇವರ ವಿವರಗಳಿವೆ

**ಆರ್. ನರಸಿಂಹಾಚಾರ್ಯರ** ಕನ್ನಡ ಕವಿಚರಿತ್ರೆಯ ಹಾಗೂ ಶಾಸನ ಇಲಾಖೆಯ ಕೆಲಸಗಳು ಸುಪರಿಚಿತವಾದವುಗಳು. 'ಕರ್ಣಾಟಕ ಕವಿಚರಿತೆ'ಯ ಮೂರು ಸಂಪುಟಗಳಲ್ಲದೆ ಹಳಗನ್ನಡದಲ್ಲಿಯ ಅಲಂಕಾರ, ವ್ಯಾಕರಣ ಗ್ರಂಥಗಳನ್ನು ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. ಶಾಸನ ಇಲಾಖೆಯ ೧೬ ವಾರ್ಷಿಕ ವರದಿಗಳು ಅವರ 'ಪ್ರಾಕ್ತನ ವಿಮರ್ಶನ ವಿಚಕ್ಷಣ'ತೆಯನ್ನು ಚೆನ್ನಾಗಿ ಬಿಂಬಿಸುತ್ತವೆ. ಅವರಿಗಿತ್ತ ಆ ಪ್ರಶಸ್ತಿ ಸಾರ್ಥಕವಾದುದು. 'ಶಾಸನಪದ್ಯ ಮಂಜರಿ'ಯೆಂಬ ಸಂಕಲನವು(೧೯೨೩) ಇವರದೇ ಆಗಿದೆ. ಲಲಿತ ಕಲೆಗಳಲ್ಲಿಯೂ ಅವರಿಗೆ ಪರಿಣತಿ ಇದ್ದಿತು. ಬೇಲೂರಿನ ಶಿಲ್ಪಕಲೆಯನ್ನು ಕುರಿತ ಇಂಗ್ಲಿಷ್ ಲೇಖವನ್ನೂ,[2] 'ಹಿತಬೋಧಿನೀ' ಪತ್ರಿಕೆಯಲ್ಲಿ ಬಂದ ಸಂಗೀತಶಾಸ್ತ್ರದ ಮೇಲಿನ ಹಲವು ಲೇಖಗಳನ್ನೂ ಈ ಸಂದರ್ಭದಲ್ಲಿ ನೆನೆಯಬಹುದು.

ನರಸಿಂಹಾಚಾರ್ಯರ ಕಾವ್ಯರಚನೆಯು 'ನೀತಿಮಂಜರಿ'ಯ ಎರಡು ಸಂಪುಟಗಳಲ್ಲಿ ಮೈವೆತ್ತು ಬಂದಿದೆ. ಕ್ರಿ.ಶ. ೧೮೮೬–೧೯೧೧ ಈ ಅವಧಿಯ, ಬಿಡುವಿನ ವೇಳೆಯಲ್ಲಿ ರಚಿತವಾದ ಪದ್ಯಗಳವು. 'ತಮಿಳಿನಲ್ಲಿ ಇರುವಷ್ಟು ನೀತಿ ಗ್ರಂಥಗಳು ಇನ್ನಾವ ಭಾಷೆಯಲ್ಲಿಯೂ ಇಲ್ಲ. ಇವುಗಳಲ್ಲಿ ಕೆಲವನ್ನು ಭಾಷಾಂತರ ಮಾಡಿದರೆ ಕನ್ನಡಿಗರಿಗೆ ಉಪಯೋಗ ಬೀಳಬಹುದು' ಎಂಬ ಆಶಯ ಅವರದಾಗಿತ್ತು. ಆ ಕಾರಣ ಅವ್ವೈಯಾರರಿಂದ* ಹಿಡಿದು ತಿರುವಳ್ಳುವರ್ ವರೆಗಿನ ಅಂಥ ಪದ್ಯಗಳನ್ನು ಅನುವಾದಿಸಿದ್ದಾರೆ.

ಕನ್ನಡ ಹಾಗೂ ತಮಿಳು ಭಾಷೆಗಳನ್ನು ತೆಗೆದುಕೊಂಡು ಎಂ.ಎ. ಮುಗಿಸಿದ ನರಸಿಂಹಾಚಾರ್ಯರು ಮದ್ರಾಸ ವಿಶ್ವವಿದ್ಯಾಲಯದಲ್ಲಿ ದ್ರಾವಿಡ ಭಾಷಾ ಸಾಹಿತ್ಯದ ಪ್ರಥಮ ಎಂ.ಎ. ಪದವೀಧರರು. ಕ್ರಮೇಣ ಅವರಿಂದ ತಮಿಳು–ಕನ್ನಡಗಳ ಸಾಹಚರ್ಯವೆನ್ನಬಹುದಾದ ಕೃತಿಗಳು ಹೊರಬಂದದ್ದಿದೆ. ಕೆಲವು ತಮಿಳು ಶಾಸನಗಳನ್ನು ಕನ್ನಡದಲ್ಲಿ ಅನುವಾದಿಸಿ 'ಎಫಿಗ್ರಾಫಿಯಾ ಕರ್ನಾಟಿಕಾ'ದಲ್ಲಿ ಪ್ರಕಟಿಸಿದ್ದಾರೆ. ಬೆಶ್ಚಿಯು ತಮಿಳಿನಲ್ಲಿ ಬರೆದಿದ್ದ ಪರಮಾರ್ಥ ಗುರುವಿನ ಕಥೆಯನ್ನು 'ನಗೆಗಡಲು' ಎಂಬ ಹೆಸರಿನಿಂದ ಕನ್ನಡದಲ್ಲಿ ನಿರೂಪಿಸಿದ್ದಾರೆ.

---

* ಈ ನೀತಿ–ಪದ್ಯಗಳನ್ನು ಅವರು ಕಂದರೂಪದಲ್ಲಿ ರಚಿಸಿದ್ದಾರೆ. ಭಾಷೆಯು ಹಳಗನ್ನಡಕ್ಕೆ ಹೆಚ್ಚು ಸಮೀಪವಾಗಿ. ವಾಚಕರಿಗೆ ಇವು ಸ್ವಲ್ಪ ಕಷ್ಟಕರವೆಂಬುದಾಗಿ ಅವರೇ ಒಪ್ಪುತ್ತಾರೆ. ಆದರೆ "ಗದ್ಯಗ್ರಂಥವು ಹೇಗಿದ್ದರೂ ಇರಲಿ, ಪದ್ಯಗ್ರಂಥವು ಯಾವಾಗಲೂ ಲಕ್ಷಣಬದ್ಧವಾಗಿಯೇ ಇರಬೇಕು– ಎಂಬ ಅಭಿಪ್ರಾಯದಿಂದಲೂ ಸಾಧ್ಯವಾದ ಮಟ್ಟಿಗೆ ಹಳಗನ್ನಡ ಪದಗಳೂ ಶೈಲಿಯೂ ವ್ಯಾಕರಣ ಮರ್ಯಾದೆಯೂ ವಾಚಕರ ಕಿವಿಗೆ ಬೀಳುತ್ತಿರಬೇಕು– ಎಂಬ ಉದ್ದೇಶದಿಂದಲೂ ಈ ಗ್ರಂಥವನ್ನು ಪೂರ್ವಕವಿಗಳ ಮಾರ್ಗವನ್ನನುಸರಿಸಿ ಬರೆದಿದ್ದೇನೆ" ಎಂಬ ಅವರ ವಿವರಣೆಯು ವಿಶಿಷ್ಟವಾಗಿದೆ. ಅದಕ್ಕೂ ಮುಂದುವರಿದು, ಱ, ೞ ಗಳನ್ನು ಪ್ರಯತ್ನಪೂರ್ವಕವಾಗಿ ಉಳಿಸಿಕೊಂಡಿದ್ದಾರೆ! ಇವನ್ನು ಕನ್ನಡ ಗ್ರಂಥಗಳಲ್ಲಿ ತರುವುದು ಅನಾವಶ್ಯಕವಾಗಿ ತೋರಿದರೂ ಪದ್ಯಗ್ರಂಥಗಳಲ್ಲಿಯಾದರೂ ತರುವುದು ಅವಶ್ಯ–ಎಂಬುದಾಗಿ ಅವರು ಭಾವಿಸಿದ್ದರು.

ಇತ್ತ 'ಹಿತಬೋಧಿನೀ' ಪತ್ರಿಕೆಯ ನಿಮಿತ್ತದಿಂದ ಎಂ.ಎಸ್. ಪುಟ್ಟಣ್ಣ, ಎಂ.ಬಿ. ಶ್ರೀನಿವಾಸಯ್ಯಂಗಾರ್, ಅದರಂತೆ ಎಂ. ವೆಂಕಟಕೃಷ್ಣಯ್ಯ ಇವರು ಬೆಂಗಳೂರಲ್ಲಿ ನಿಂತು, ಹೊಸಗನ್ನಡದ ಅಸ್ತಿವಾರವನ್ನು ಹಾಕಲು ಮುಂದಾದರು. ಶ್ರೀನಿವಾಸಯ್ಯಂಗಾರ್ ಮತ್ತು ಪುಟ್ಟಣ್ಣ–ಇವರು ಜೊತೆಯಾಗಿದ್ದುಕೊಂಡು ಸಾಹಿತ್ಯಿಕ ಕಾರ್ಯದಲ್ಲಿ ತೊಡಗಿದ್ದುದು, ಎಂ.ಎ.ಆರ್.– ಎಸ್.ಜಿ.ಎನ್. ಅವರ ಜೊತೆಯನ್ನು ನೆನಪಿಗೆ ತಂದುಕೊಡುತ್ತದೆ. 'ಹಿತಬೋಧಿನಿ'ಯ ಸಂಪಾದಕತ್ವ, 'ನೀತಿಚಿಂತಾಮಣಿ' ಮತ್ತು 'ಹಿಂದೂದೇಶದ ಚರಿತ್ರ ದರ್ಪಣ' ಹಾಗೂ ಶೆಕ್ಸ್‌ಪಿಯರನ 'Cymbeline' (ಜಯಸಿಂಹರಾಜ ಚರಿತ್ರೆ) ನಾಟಕದ ಕಥಾರೂಪ—ಇವು ಅವರಿಬ್ಬರ ಸಹಕಾರ್ಯದ ಫಲವಾಗಿವೆ. ಎಂ.ಬಿ. ಶ್ರೀನಿವಾಸಯ್ಯಂಗಾರನು ಉಪಾಧ್ಯಾಯ ವೃತ್ತಿಯಲ್ಲಿದ್ದವನು. ಕೊಡಗಿನ ಶಾಲೆಗಳಲ್ಲಿಯೂ ಕೆಲಸ ಮಾಡಿದ್ದಾನೆ. ಕೆಲವು ಶ್ರೀವೈಷ್ಣವ ಗ್ರಂಥಗಳನ್ನು ಕನ್ನಡ ಟೀಕೆಯೊಡನೆ ಪ್ರಕಟಿಸಿದ್ದುದೂ ಇದೆ.

**ಎಂ.ಎಸ್.ಪುಟ್ಟಣ್ಣ** ಅವರು (೧೮೫೪–೧೯೩೦) ಕನ್ನಡಸಾಹಿತ್ಯದ ಆಧುನಿಕ ಯುಗಕ್ಕೆ ಇನ್ನೂ ಹತ್ತಿರದಲ್ಲಿದ್ದಾರೆ. ಬಡತನದಿಂದಾಗಿ ವಿದ್ಯಾಭ್ಯಾಸವನ್ನು ಪೂರ್ಣ ಮುಗಿಸಲಾರದೇ, ಕೋಲಾರದಲ್ಲಿ ಬದುಕನ್ನು ಆರಂಭಿಸಿದರು(೧೮೭೮). ಏಳು ವರ್ಷಗಳ ಅನಂತರ ಬಿ.ಎ. ಮುಗಿಸಿದ ಮೇಲೆ ಸ್ವಪ್ರಯತ್ನದಿಂದ ಮುಂದೆ ಬಂದರು. ಉಪಾಧ್ಯಾಯ ವೃತ್ತಿಗೆ ರಾಜೀನಾಮೆಯಿತ್ತು, ಕೋರ್ಟಿನಲ್ಲಿ ಭಾಷಾಂತರಕಾರರಾದರು. ಆಮೇಲಿನ ವೃತ್ತಿಯೆಂದರೆ ಅಮಲ್ದಾರಿಕೆ (೧೮೯೭). ಈ ಮೂರೂ ವೃತ್ತಿಗಳಲ್ಲಿ ಅವರು ಪಡೆದ ಲೋಕಾನುಭವವು ಬರವಣಿಗೆಗೆ ಸಹಾಯಕಾರಿಯಾಯಿತು. ಮೊತ್ತಮೊದಲಿನ ಕೃತಿಯೆಂದರೆ ಕನ್ನಡಪಾಠಗಳ ಎರಡನೇ ಪುಸ್ತಕ (೫ನೇ ಆವೃತ್ತಿ, ೧೮೭೩). ಮೇಲೆ ಹೇಳಿದ ನೀತಿಚಿಂತಾಮಣಿ, ಹಿಂದೂದೇಶದ ಚರಿತ್ರೆಗಳಾದರೂ ಉಚ್ಚಮಟ್ಟದ ಪಠ್ಯಗಳೆಂದೇ ಹೆಸರು ಪಡೆದಿವೆ. ಅವುಗಳ ಗದ್ಯ ಶೈಲಿಯು ಇಂದಿನ ಹೊಸಗನ್ನಡ ಗದ್ಯ ಬರವಣಿಗೆಗೆ ತಳಹದಿಯಂತಿದೆ.

ಚರಿತ್ರ ಲೇಖನವು ಪುಟ್ಟಣ್ಣ ಅವರ ಮೆಚ್ಚಿನ ವಿಷಯವಾಗಿದ್ದಿತು. 'ಕಾಂಫೂಷನ ಚರಿತ್ರೆ'ಯನ್ನು ಅನೇಕ ಆಕರಗಳಿಂದ ಪರಿಶೋಧಿಸಿ, ಸ್ವತಂತ್ರ ಸರಣಿಯಲ್ಲಿ ಬರೆದಿದ್ದಾರೆ (೧೮೯೨). ಚಿತ್ರದುರ್ಗ ಮುಂತಾದ ಕಡೆಗಳಲ್ಲಿ ಅಮಲ್ದಾರರಿದ್ದಾಗ ಪಾಳೆಯಗಾರರ ವಿಷಯದಲ್ಲಿ ಆಸಕ್ತಿ ಕುದುರಿತು. ನಿವೃತ್ತ ಜೀವನದಲ್ಲಿ (೧೯೧೦–೧೯೩೦), ಹಲವು ಪಾಳೆಯಗಾರರ ಚರಿತ್ರೆಯನ್ನು ವಿಶೇಷ ಪರಿಶ್ರಮದಿಂದ ರೂಪಿಸಿದ್ದಾರೆ. ಮಧ್ಯಮ ವರ್ಗದವರ ಸೊಗಸಾದ ಚಿತ್ರಣವುಳ್ಳ 'ಮಾಡಿದ್ದುಣ್ಣೋ ಮಹಾರಾಯಾ' (೧೯೧೫) ಎಂಬ ಇವರ ಕೃತಿಯು ಆದ್ಯ ಸಾಮಾಜಿಕ ಕಾದಂಬರಿಗಳಲ್ಲಿ ಒಂದೆಂದು ಹೆಸರು ಗಳಿಸಿದೆ.

ಪುಟ್ಟಣ್ಣ ಅವರ 'ಹೇಮಚಂದ್ರ ರಾಜವಿಲಾಸ'ವನ್ನು ಪ್ರತ್ಯೇಕಿಸಿ ಹೇಳಬೇಕು. ಆ

ಮುಂಚಿನ ಇಂಗ್ಲಿಷ್ ನಾಟಕಗಳ ಅನುವಾದಕರು ಸಂಸ್ಕೃತ ಕೃತಿಗಳ ರೀತಿಯಲ್ಲಿ ಗದ್ಯ ಪದ್ಯ ಮಿಶ್ರಿತವಾಗಿ ಕನ್ನಡದಲ್ಲಿ ಬರೆಯುತ್ತಿದ್ದರು. ಆದರೆ 'ಕಿಂಗ್‌ಲಿಯರ್'ದ ರೂಪಾಂತರವಾದ ಈ ನಾಟಕವನ್ನು ಪುಟ್ಟಣ್ಣ ಪೂರ್ಣ ಗದ್ಯದಲ್ಲಿಯೇ ರಚಿಸಿದುದು ಹೊಸ ಹೆಜ್ಜೆಯಾಗಿದೆ. ಅದರಲ್ಲಿ ೧೦–೧೨ ಪದ್ಯಗಳೇನೊ ಇವೆ. ಹಾಗಿದ್ದರೂ "ಇಷ್ಟೊಂದು ಪದ್ಯಗಳನ್ನು ಎಲ್ಲಿ ಕಲಿತೆಯಾ" ಎಂಬುದಾಗಿ ಹೇಮಚಂದ್ರ (ಲಿಯರ್)ನು ವಿದೂಷಕನನ್ನು ಕೇಳುವವನಾದ್ದರಿಂದ, ಆ ಮಟ್ಟಿಗೆ ಈ ಹಾಡುಗಳ ಸೇರ್ಪಡೆಯಾಗಿದೆ. ಇಷ್ಟಕ್ಕೂ ಅವು ಹಿಂದಿನವುಗಳಂತೆ ಕಂದ ವೃತ್ತಗಳಲ್ಲಿರದೇ ಆಧುನಿಕ ಭಾವಗೀತಕ್ಕೆ ಸಮೀಪವಾಗಿವೆ.

**ಎಂ. ವೆಂಕಟಕೃಷ್ಣಯ್ಯ** ಅವರು (೧೮೪೪–೧೯೩೩) ಉಪಾಧ್ಯಾಯ ವೃತ್ತಿಯಲ್ಲಿದ್ದುಕೊಂಡೇ ರಾಜಕೀಯ ಧುರೀಣರಾಗಿಯೂ, ಪತ್ರಿಕಾಕರ್ತರಾಗಿಯೂ ನಾಡಿಗೆ ಹಿರಿದಾದ ಸೇವೆಯನ್ನು ಸಲ್ಲಿಸಿದ್ದಾರೆ. ಮರಿಮಲ್ಲಪ್ಪ ಹೈಸ್ಕೂಲಿನಲ್ಲಿ ನಾಲ್ಕು ದಶಕಗಳ ವರೆಗೆ ಅಧ್ಯಾಪಕರಾಗಿದ್ದರು (೧೮೭೬–೧೯೧೮). ಅವರ ಮುಂದಿನ ಎಲ್ಲ ಸಾರ್ವಜನಿಕ ಚಟುವಟಿಕೆಗಳಿಗೆ ಇದು ಆಶ್ರಯಸ್ಥಾನದಂತಿದ್ದಿತು. ರಾಜಕೀಯ ರಂಗದಲ್ಲಿ ದಿವಾನ್ ಸಿ. ರಂಗಾಚಾರ್ಲು ಇವರ ಗುರು. ಅವರ ಪ್ರಯತ್ನದಿಂದ ಸ್ಥಾಪಿತವಾದ ಪ್ರಜಾಪ್ರತಿನಿಧಿ ಸಭೆಯ ಸದಸ್ಯ–ಕಾರ್ಯದರ್ಶಿಯಾಗಿ ವೆಂಕಟಕೃಷ್ಣಯ್ಯನವರು ನಡೆಸಿದ ಹೋರಾಟ ಅನುಪಮವಾದುದು. 'ಮೈಸೂರಿಗಾಗಿ ಮೈಸೂರು' ಎಂಬ ಅವರ ಅಂದಿನ ಚಳುವಳಿಯಲ್ಲಿ ಕನ್ನಡದ ಹಿತರಕ್ಷಣೆಯೇ ಅಡಗಿದ್ದಿತು. ಅದಕ್ಕೆ ಅಡ್ಡಿಬಂದ ದಿವಾನರುಗಳೊಡನೆ ಅವರು ನಿರ್ಭೀತಿಯಿಂದ ಸೆಣಸಿದರು.

ತಮ್ಮ ಸುದೀರ್ಘ ಸಾರ್ವಜನಿಕ ಹೋರಾಟದಲ್ಲಿ ವೆಂಕಟಕೃಷ್ಣಯ್ಯನವರು ಪತ್ರಿಕೆಯನ್ನು ಪ್ರಭಾವಶಾಲೀ ಮಾಧ್ಯಮವನ್ನಾಗಿ ಬಳಸಿಕೊಂಡರು. 'ಹಿತಬೋಧಿನೀ' ಪತ್ರಿಕೆಯನ್ನು ವಹಿಸಿಕೊಂಡಂದಿನಿಂದ (೧೮೮೪) ಅವರ ಪತ್ರಿಕಾ ಜೀವನ ಮೊದಲಾಯಿತು. ೧೮೯೦ರಲ್ಲಿ 'ವಿದ್ಯಾದಾಯಿನಿ'ಯು ಆರಂಭವಾದಾಗ 'ಹಿತಬೋಧಿನಿ'ಯನ್ನು ನಿಲ್ಲಿಸಲಾಯಿತು. ಹೆಚ್ಚು ಪ್ರಸಾರವನ್ನು ಹೊಂದಿದ್ದ ಅವರ ಪತ್ರಿಕೆಯೆಂದರೆ 'ವೃತ್ತಾಂತ ಚಿಂತಾಮಣಿ'. ಅದು ನಿಂತುಹೋದ ಮೇಲೆ ೧೮೯೯ರಲ್ಲಿ 'ಸಾಧ್ವಿ' ಯನ್ನು ನಡೆಸುತ್ತ ಬಂದರು. ಹಲವು ಇಂಗ್ಲಿಷ್ ಪತ್ರಿಕೆಗಳನ್ನೂ ಅವರು ಹೊರಡಿಸಿದ್ದಾರೆ.

ವೆಂಕಟಕೃಷ್ಣಯ್ಯನವರ ಪತ್ರಿಕಾಧರ್ಮವು ಮುಖ್ಯತಃ ಪ್ರಜಾಜನರ ಸಂಕಷ್ಟಗಳನ್ನು ಸರಕಾರದ ಗಮನಕ್ಕೆ ತರುವುದೇ ಆಗಿದ್ದಿತು. ದಿವಾನರ, ಇತರ ಅಧಿಕಾರಿಗಳ ದುರ್ವರ್ತನೆ ಮತ್ತು ಆಡಳಿತ ದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆಯುತ್ತಿದ್ದರು. ವಿರೋಧೀ ಪಕ್ಷವೆಂಬುದು ಇಲ್ಲದಿದ್ದಾಗ ವೆಂಕಟಕೃಷ್ಣಯ್ಯನವರ ಪತ್ರಿಕೆಗಳು ಆ ಕೆಲಸ ಮಾಡಿದುವು. ಇದರ ಜೊತೆಗೆ ಸಮಾಜ ಸುಧಾರಣೆಯ ಲೇಖನಗಳನ್ನೂ ದೇಶ–ವಿದೇಶ ವಾರ್ತೆಗಳನ್ನೂ

ಪ್ರಕಟಿಸುತ್ತಿದ್ದರು. ಪ್ರಜಾಭಿವೃದ್ಧಿಯೇ ಇದೆಲ್ಲ ಬರವಣಿಗೆಯ ತಳಹದಿ. ಇವರ ನಿಶಿತ ಲೇಖನಿಯ ಪರಿಣಾಮವಾಗಿಯೇ ಮುಂದೆ ೧೯೦೮ರಲ್ಲಿ ಪತ್ರಿಕಾ ಕಾನೂನು ಜಾರಿಗೆ ಬಂದಿತು. ಆ ಕಾನೂನನ್ನು ಅವರು ತಮ್ಮ ಲೇಖನ-ಭಾಷಣಗಳ ಮೂಲಕ ಎದುರಿಸಿದ ರೀತಿಯು ಅಖಿಲ ಭಾರತದ ಗಮನವನ್ನು ಸೆಳೆಯಿತು. ವೆಂಕಟಕೃಷ್ಣಯ್ಯನವರ ಬರವಣಿಗೆಯು ಆ ಹಳೆಯ ಪತ್ರಿಕೆಗಳಿಗೇ ಮೀಸಲಾಗಿ ಇಂದು ಲಭ್ಯವಿಲ್ಲದಿದ್ದರೂ ಅವರ ಒಂದೆರಡು ಗ್ರಂಥಗಳು ಉಳಿದುಕೊಂಡಿವೆ. ಮೊದಲಿನದು 'ಧನಾರ್ಜನೆ'. ಇದು ಹಲವು ಪ್ರಬಂಧಗಳ ಸಂಗ್ರಹದಂತಿದೆ. 'ಚೋರಗ್ರಹಣ ತಂತ್ರ' ವೆಂಬ ಅವರ ಕೃತಿಯು ಕನ್ನಡದ ಮೊತ್ತಮೊದಲಿನ ಪತ್ತೇದಾರೀ ಕಾದಂಬರಿಯಾಗಿದೆ.

**ಚ. ವಾಸುದೇವಯ್ಯನವರು** (೧೮೫೨-೧೯೩೩) ಮೈಸೂರಿನ ಮತ್ತೊಬ್ಬ ತಾತರು. ಕೆಲ ಕಾಲ ಅಧ್ಯಾಪನ ವೃತ್ತಿಯಲ್ಲಿದ್ದರೂ ಶಿಕ್ಷಣ ಖಾತೆಯಲ್ಲಿ ಹೆಚ್ಚಾಗಿ ಕೆಲಸ ಮಾಡಿದವರು. 'ಹೊಸಗನ್ನಡ ಗದ್ಯಶಿಲ್ಪಿ' ಎಂದು ಅವರನ್ನು ಕರೆಯುವುದುಂಟು. ಅದಕ್ಕೆ ಕಾರಣ 'ಆರ್ಯಕೀರ್ತಿ', 'ಭೀಷ್ಮ ಚರಿತ್ರೆ' ಎಂಬ ಗ್ರಂಥಗಳಲ್ಲಿಯ ಅವರ ತೇಜಸ್ವಿಯಾದ ಬರವಣಿಗೆ.

**ಆರ್. ರಘುನಾಥರಾಯರು** ಪೂರ್ಣವಾಗಿ ಹೊಸ ದೃಷ್ಟಿಯ ಲೇಖಕರು. ಅವರು ಥಿಯಾಸಾಫಿಸ್ಟ್ ಇದ್ದುದು ಬರವಣಿಗೆಯ ಮೇಲೂ ಪರಿಣಾಮ ಮಾಡಿತು. ಸನಾತನ ಧರ್ಮದ ಗುಣ ವಿಮರ್ಶೆ, ಸ್ತ್ರೀಯರ ಏಳ್ಗೆ ಇವುಗಳ ಕುರಿತು ಪ್ರಗತಿಪರ ವಿಚಾರಗಳನ್ನು ವ್ಯಕ್ತಮಾಡಿದ್ದಾರೆ. ಈ ಬರವಣಿಗೆಯು ೨೦ನೆಯ ಶತಮಾನದ ಆರಂಭದಲ್ಲಿ ಒಡಮೂಡಿದ್ದರೆ ೧೮೯೪ರಷ್ಟು ಹಿಂದೆ ಅವರು ಕನ್ನಡಭಾಷಾಭ್ಯಾಸ ವಿಚಾರವಾಗಿ ವಿನೂತನ ಸರಣಿಯಲ್ಲಿ ಉಪನ್ಯಾಸ ಕೊಟ್ಟುದು ನಮಗೆ ಹೆಚ್ಚು ಪ್ರಸ್ತುತವಾಗಿದೆ. ಪುಸ್ತಕ ರೂಪದಲ್ಲಿ ಹೊರಬಂದ ಆ ಕೃತಿಯಲ್ಲಿ (ವ್ಯಾಕರಣೋಪನ್ಯಾಸ ಮಂಜರಿ) ಅವರ ಸ್ವತಂತ್ರ ಮನೋವೃತ್ತಿಯನ್ನು ಕಾಣುತ್ತೇವೆ. ನಿರ್ಭೀತ ಮನೋಭಾವದ ರಘುನಾಥರಾಯರು ತಮಗೆ ಕಂಡಂತೆ ರೈಸ್, ಕಿಟೆಲ್ ಮೊದಲಾದವರ ದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಮತ್ತು ಮಾರ್ಮಿಕವಾಗಿ ಎತ್ತಿ ತೋರಿಸಿದ್ದಾರೆ.

ಇಂಗ್ಲಿಷ್‌ನಲ್ಲಿಯ ಕಾದಂಬರಿ, ಕಥನಗಳನ್ನು ತಿಳಿಯಾದ ಗದ್ಯದಲ್ಲಿ ಕೊಡಮಾಡಿದ **ಆರ್. ಅಣ್ಣಾಜಿರಾಯರ**ನ್ನು ಇಲ್ಲಿ ಸ್ಮರಿಸಬೇಕು. ಇವರು ಬೆಂಗಳೂರಿನ ಕಂಟ್ರೋಲರ್ ಕಚೇರಿಯಲ್ಲಿ ಕೆಲಸಕ್ಕಿದ್ದರು. ಲ್ಯಾಂಬ್‌ನನ್ನು ಅನುಸರಿಸಿ ಶೆಕ್ಸ್‌ಪಿಯರನ Two Gentle-men of Verona ಇದನ್ನು ಕಥನ ರೂಪದಲ್ಲಿ ಬರೆದಿದ್ದಾರೆ (ಕುಸುಮಾಕರ). ಡಿಕನ್ಸ್‌ನ 'ಆಲಿವರ್ ಟ್ವಿಸ್ಟ್' ಮತ್ತು ಫೀಲ್ಡಿಂಗ್‌ನ 'ಟಾಮ್ ಜೋನ್ಸ್' ಇವನ್ನೂ ಅನುವಾದಿಸಿದ್ದಾರೆ. (ಶರಣಾಗತ ೧೯೦೫) ಇತ್ತ ಭಾರತೀಯ ಹಿನ್ನೆಲೆಯಲ್ಲಿ ರಚಿತವಾದ 'ಪರಿಕಲಾಭ್ಯುದಯ', 'ಮಹೀಮಂಡನ', 'ಮೂರು ಮುತ್ತುಗಳು' ಇವೇ ಮೊದಲಾದ ಕಥಾನಕಗಳನ್ನು ಗಣನೆಗೆ

ತೆಗೆದುಕೊಳ್ಳಬೇಕು. ಜನತೆಯ ವಾಚನದ ಒಲವನ್ನು ಅರಿತವರಾಗಿ ತಾನು ಓದಿದ್ದ ಕೆಲವು ಇಂಗ್ಲಿಷ್ ಕೃತಿಗಳನ್ನು ಹೀಗೆ ಕನ್ನಡದಲ್ಲಿ ಬರೆದುದು ಸ್ವಾಗತಾರ್ಹವಾಗಿದೆ.

ಕಳೆದ ಶತಮಾನದ ಪ್ರಮುಖ ಲೇಖಕರಲ್ಲಿ ಒಬ್ಬರಾದ **ಬಿ. ವೆಂಕಟಾಚಾರ್‍ಯರು** (೧೮೪೫–೧೯೧೪) ಸಂಸ್ಕಾರ ಮತ್ತು ಮೂಲ ಪ್ರವೃತ್ತಿಯಿಂದ ಸನಾತನಿಯೂ ಆಗಿದ್ದರು. ದೊಡ್ಡ ಸರಕಾರೀ ಹುದ್ದೆಯಲ್ಲಿದ್ದರೂ ಅವರ ಧಾರ್ಮಿಕ ಶ್ರದ್ಧೆಯು ಮಸಳಿಸಿರಲಿಲ್ಲ. ಹಲವಾರು ಸ್ತೋತ್ರಗಳನ್ನು ರಚಿಸುವುದರಲ್ಲಿ ಅದೇ ಮನೋಭಾವ ವ್ಯಕ್ತವಾಗಿದೆ. ಅವರಿಗೆ ವಂಗ ಸಾಹಿತ್ಯದ ಪರಿಚಯ ಉಂಟಾಗದೆ ಹೋಗಿದ್ದರೆ ಇಂಗ್ಲಿಷ್, ಸಂಸ್ಕೃತ, ತಮಿಳುಗಳಿಂದ ಕೆಲವು ಕೃತಿಗಳನ್ನು ಅನುವಾದಿಸಿದ್ದಲ್ಲಿಗೆ ಅವರ ಸಾಹಿತ್ಯ ಸೇವೆ ಕೊನೆಗೊಳ್ಳುತ್ತಿದ್ದಿತೇನೊ. ಆದರೆ ೧೮೭೪ರ ಸುಮಾರಿಗೆ ಅವರ ಜ್ಞಾತಿ ಬಂಧುವೊಬ್ಬನಿಂದ ವಂಗಸಾಹಿತ್ಯದ ಅಭಿವೃದ್ಧಿ ಸಾಧನೆಗಳ ಪರಿಚಯವಾದುದು ಹೊಸಗನ್ನಡದ ಒಂದು ಶುಭ ಗಳಿಗೆಯೆಂದೇ ಹೇಳಬೇಕು. ಈಶ್ವರಚಂದ್ರ ವಿದ್ಯಾಸಾಗರನ ಮೂಲಕ ವಂಗ ಭಾಷಾ ವ್ಯಾಸಂಗದ ಅನುಕೂಲತೆಗಳು ಅವರಿಗೆ ಒದಗಿ ಬಂದುವು. ವರುಷ ವರುಷಕ್ಕೆ ವಂಗೀಯ ಪುಸ್ತಕಗಳು ಅವರ ಸ್ವಂತದ ಗ್ರಂಥಭಂಡಾರಕ್ಕೆ ಸೇರತೊಡಗಿದವು. ಹಾಗೂ ತಮ್ಮ ಹೆಂಡತಿ ಮಕ್ಕಳಿಗೂ ವಂಗದೀಕ್ಷೆಯನಿತ್ತರು. ಕಲ್ಕತ್ತೆಯ ಶಶಿಭೂಷಣ ವಿದ್ಯಾನಂದನನೆಂಬವನ ಗ್ರಂಥೋದ್ಯಮ ಕಾರ್‍ಯದಲ್ಲಿ, ದೂರದಲ್ಲಿದ್ದ ಈ ಕನ್ನಡಿಗ ನಿಯಮಿತವಾಗಿ ಆರ್ಥಿಕ ಸಹಾಯ ನೀಡುತ್ತಿದ್ದರೆಂಬುದನ್ನು ಇಲ್ಲಿ ನೆನೆಯಬೇಕು. ಬಿ. ವೆಂಕಟಾಚಾರ್ಯರಿಗೆ ವಿವೇಕಾನಂದರ ಸಂಪರ್ಕವುಂಟಾಗುವುದಕ್ಕೂ ವಂಗೀಯ ಭಾಷೆಯೇ ಮೂಲ ಕಾರಣವಾಗಿದ್ದಿತು.

ಆ ಭಾಷೆಯಿಂದ ಗ್ರಂಥಾನುವಾದವನ್ನು ಕೈಗೆತ್ತಿಕೊಂಡಾಗ ವೆಂಕಟಾಚಾರ್ಯರಿಗೆ ಕಾದಂಬರಿಗಳನ್ನಷ್ಟೆ ಅನುವಾದಿಸಬೇಕೆಂಬ ವಿಚಾರವೇನೂ ಇದ್ದಿರಲಿಲ್ಲ. ಕ್ರಿ. ಶ. ೧೮೭೬ರಲ್ಲಿ ತಮ್ಮ ವಂಗ ಭಾಷಾ ಗುರು, ಈಶ್ವರಚಂದ್ರ ವಿದ್ಯಾಸಾಗರನ 'ಭ್ರಾಂತಿ ವಿಲಾಸ' ವನ್ನು ಅನುವಾದಿಸಿದರು. 'ಕಾಮೆಡಿ ಆಫ್ ಎರರ್‍ಸ್'ದ ಈ ಗದ್ಯ ರೂಪವು ಅವರು ಅನುವಾದಿಸಿದ ಪ್ರಥಮ ಬಂಗಾಲೀ ಕೃತಿಯಾಗಿದೆ. ಆಮೇಲೆ ಅವರದೇ 'ಶಾಕುಂತಲ' ಮತ್ತು 'ಸೀತಾವನವಾಸ'ದ ಕಥೆಗಳನ್ನು ಭಾಷಾಂತರಿಸಿದರು. ಮಹಿಳೆಯರ ಪ್ರೇಮ, ತ್ಯಾಗಗಳ ವಿಚಾರದಲ್ಲಿ ಆಗಿನ ಲೇಖಕರಂತೆ ಅವರಿಗೂ ಆದರವಿದ್ದಿತು. ಹರಪ್ರಸಾದಶಾಸ್ತ್ರಿಯ 'ಭಾರತ ಮಹಿಳಾ' ಎಂಬ ಕೃತಿಯ ಅನುವಾದವನ್ನು (೧೮೮೪) ಕೈಗೊಂಡದ್ದರ ಹಿನ್ನೆಲೆ ಇದುವೆ ಆಗಿದೆ.

ಮರುವರ್ಷ ಬಂಕಿಮಚಂದ್ರರ 'ದುರ್ಗೇಶ ನಂದಿನಿ'ಯ ಅನುವಾದ ಹೊರಬಂದಿತು. ಅಂದಿನಿಂದ ವೆಂಕಟಾಚಾರ್ಯರ ಅನುವಾದ ಕಾರ್ಯದಲ್ಲಿ ಹೊಸತೊಂದು ಅಧ್ಯಾಯ ಆರಂಭವಾಯಿತು. ಮುಂದಿನ ಎರಡು ದಶಕಗಳಲ್ಲಿ ಬಂಕಿಮಚಂದ್ರರ ಪ್ರಮುಖ ಕಾದಂಬರಿಗಳೆಲ್ಲ ಕನ್ನಡದಲ್ಲಿ ಕಾಣಿಸಿಕೊಂಡವು. ಕ್ರಿ. ಶ.

೧೯೦೨ರಲ್ಲಿ ಸೇವಾನಿವೃತ್ತರಾದ ಮೇಲೆ ವೆಂಕಟಾಚಾರ್ಯರ ಅನುವಾದ ಕಾರ್ಯವು ಇನಷ್ಟು ವ್ಯಾಪಕಗೊಂಡಿತು.

ಇದುವರೆಗೆ ಬಿ. ವೆಂಕಟಚಾರ್ಯರ ಸುಮಾರು ೭೫ ಕೃತಿಗಳ ಹೆಸರು ನಮಗೆ ದೊರೆತಿದ್ದು[6] ಅವುಗಳಲ್ಲಿ ಅರವತ್ತು ಕೃತಿಗಳು ಕಾದಂಬರಿ ಹಾಗೂ ಇತರ ಕಥನಗಳೇ ಆಗಿವೆ. ಮೇಲೆ ಹೇಳಿದ ಮೂವರು ವಂಗೀಯ ಲೇಖಕರಲ್ಲದೆ ರಮೇಶಚಂದ್ರ ದತ್ತ, ನನಿಲಾಲ ವಂದ್ಯೋಪಾಧ್ಯಾಯ, ಸತ್ಯೇಂದ್ರ ಕುಮಾರ, ಸತೀಶಚಂದ್ರಬಾಬು ಇವರ ಕೆಲವು ಕೃತಿಗಳನ್ನು ವೆಂಕಟಾಚಾರ್ಯರು ಅನುವಾದಿಸಿದ್ದಾರೆ. ಆದರೂ ಬಂಕಿಮನ ಕಾದಂಬರಿಗಳಿಗೇ ಅಗ್ರಪಟ್ಟ. ಅವರು ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದ ಸ್ವದೇಶಾಭಿಮಾನ, ಸದ್ಧರ್ಮನಿಷ್ಠೆ, ಸ್ತ್ರೀಯರ ಹಿರಿಮೆ-ಮುಂತಾದ ಅಂಶಗಳು ವೆಂಕಟಾಚಾರ್ಯರಿಗೂ ಆಪ್ಯಾಯಮಾನವಾಗಿದ್ದುವು.

ಇಂತು ಒಂದರ ಮೇಲೊಂದು ಪ್ರಕಟವಾಗುತ್ತ ನಡೆದ ಈ ಕಾದಂಬರಿಗಳಲ್ಲಿ ಕನ್ನಡಿಗರು ನವೀನ ಪ್ರಪಂಚವನ್ನೇ ಕಂಡರು. ಆತುರದಿಂದ ಬರಮಾಡಿಕೊಂಡರು. ಬೇರೆ ಬೇರೆ ಪಠ್ಯಪುಸ್ತಕ ಸಮಿತಿಗಳವರು ಅವನ್ನು ಆಯ್ದುಕೊಂಡರು. ನಡುಗನ್ನಡದ ಜನಪ್ರಿಯ ಕಾವ್ಯಗಳು ಮತ್ತು 'ಬತ್ತೀಸಪುತ್ಥಳಿ'ಯಂಥ ಕಥನಗಳಿಗೆ ಸೀಮಿತವಾಗಿದ್ದ ಅಂದಿನ ಕನ್ನಡಿಗರ ವಾಚನಾಭಿರುಚಿಯನ್ನು ಹೆಚ್ಚಿಸುವುದಕ್ಕೆ ವೆಂಕಟಾಚಾರ್ಯರಿಂದ ಸಂದ ಸೇವೆಯು ಅವಿಸ್ಮರಣೀಯವಾದುದು. ಜೊತೆಗೆ ಮಧ್ಯಮ ವರ್ಗದ ಜನತೆಯ ಭಾವವಿಕಾಸಕ್ಕೂ ಅವರು ಕಾರಣರಾದರು. ಕಾದಂಬರಿ (ನಾವೆಲು) ಎಂಬ ಸಾಹಿತ್ಯ ಪ್ರಕಾರವನ್ನು ಕನ್ನಡ ಸಾಹಿತ್ಯದಲ್ಲಿ ಆರಂಭಿಸಿದ ಶ್ರೇಯಸ್ಸು ಅವರಿಗೆ ಸಲ್ಲಬೇಕು.

## ೯.೨ ಕರಾವಳಿಯ ಲೇಖಕರು

ಮದ್ರಾಸ ನಗರ, ಕೊಡಗು, ಕನ್ನಡ ಜಿಲ್ಲೆಗಳು ಮತ್ತು ಮುಂಬಯಿ ನಗರ-ಈ ಸ್ಥಳಗಳಲ್ಲಿದ್ದ ಹೊಸ ಯುಗದ ಲೇಖಕರ ಪರಿಚಯವನ್ನು ಇಲ್ಲಿ ಕೊಡಬೇಕೆಂದಿದೆ. ಮೈಸೂರ ಸಂಸ್ಥಾನದಲ್ಲಿಯ ಲೇಖಕರಂತೆ ಇವರಲ್ಲಿಯೂ ಕೆಲವರು ಪರಂಪರಾಪ್ರಿಯರೂ ಇನು ಕೆಲವರು ಹೊಸಯುಗದ ಪ್ರಭಾವಕ್ಕೆ ಒಳಗಾದವರೂ ಕಂಡು ಬರುತ್ತಾರೆ.

### ೯.೨೧ ಮದ್ರಾಸದ ಕನ್ನಡ ಪಂಡಿತರು

ಮದ್ರಾಸ ನಗರದಲ್ಲಿದ್ದುಕೊಂಡು, ವಿದೇಶೀಯರ ಪ್ರೇರಣೆಯಿಂದ ಭಾಷಾಭ್ಯಾಸದ ಪುಸ್ತಕಗಳನ್ನು ಬರೆದ ಕೃಷ್ಣಮಾಚಾರಿ ಮತ್ತು ಅಡಕ್ಕಿ ಸುಬ್ಬರಾವ ಇವರ ಕಾರ್ಯವನ್ನು ಈಗಾಗಲೇ ಗಮನಿಸಿದ್ದೇವೆ <೫.೨.೨>. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರೆಸಿಡೆನ್ಸಿ ಕಾಲೇಜ ಮತ್ತು ಕ್ರಿಶ್ಚಿಯನ್ ಕಾಲೇಜುಗಳು ಪ್ರವರ್ಧಮಾನಕ್ಕೆ ಬಂದು ಅಲ್ಲಿ ಕನ್ನಡವನ್ನು ಕಲಿಸುವುದಕ್ಕೆ ವ್ಯವಸ್ಥೆಯಿದ್ದುದರಿಂದ ಹಲವು ಕನ್ನಡ ಪಂಡಿತರು ಆ

ನಗರದಲ್ಲಿ ನೆಲಸುವಂತಾಯ್ತು. ಹೈಕೋರ್ಟಿನಲ್ಲಿ ಕನ್ನಡಿಗರ ವ್ಯಾಜ್ಯಗಳು ತೀರ್ಪುಗೊಳ್ಳುತ್ತಿದ್ದಾಗ ಕೆಲವು ಕನ್ನಡ ವಕೀಲರೂ ಅಲ್ಲಿ ವಾಸವಾಗಿದ್ದರು. ಅದರಂತೆ ವಿವಿಧ ಉದ್ಯೋಗಗಳಿಗಾಗಿ ನೆಲೆಸಿದ್ದ ಕನ್ನಡಿಗರೂ ಸಾಕಷ್ಟು ಸಂಖ್ಯೆಯಲ್ಲಿದ್ದರು.

**ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿ ಮತ್ತು ಶಿವಶಂಕರಶಾಸ್ತ್ರಿ**–ಇವರು ಮೇಲೆ ಹೇಳಿದ ಕಾಲೇಜುಗಳಲ್ಲಿ ಕನ್ನಡಪಂಡಿತರಾಗಿದ್ದರು. ಸುಬ್ರಹ್ಮಣ್ಯಶಾಸ್ತ್ರಿಯು 'ಅಮರಕೋಶ'ಕ್ಕೆ ಮತ್ತು ನಿಜಗುಣರ ಗ್ರಂಥಗಳಿಗೆ ಟೀಕೆ ಬರೆದನಲ್ಲದೆ ವೈದ್ಯ, ಜ್ಯೋತಿಷ ಶಾಸ್ತ್ರಗಳಿಗೆ ಸಂಬಂಧಿಸಿದ ಗದ್ಯಕೃತಿಗಳನ್ನು ರಚಿಸಿದ್ದಾನೆ. 'ಚಾರ ದರ್ವಿಸ್' ಮಾದರಿಯ ಕತೆಯನ್ನು ಅವನು ಕನ್ನಡದಲ್ಲಿ ಬರೆದುದಕ್ಕೆ ಪ್ರಕಾಶಕರ ಅಪೇಕ್ಷೆಯೇ ಕಾರಣ. ಶಿವಶಂಕರಶಾಸ್ತ್ರಿಯಾದರೂ ತನ್ನ ಆರಂಭದ ಲೇಖನಕ್ಕೆ 'ವಿಕ್ರಮರಾಯನಚರಿತ್ರೆ, ಶಂಕರಕಥಾಮೃತ, ನಳೋಪಾಖ್ಯಾನ' ಮೊದಲಾದ ಪ್ರಾಚೀನ ಕಥೆಗಳನ್ನೇ ಆಯ್ದುಕೊಂಡನು.

**ಗರಣಿ ಕೃಷ್ಣಾಚಾರ್ಯನು** (೧೮೫೭–೧೯೧೮) ಕ್ರಿಶ್ಚಿಯನ್ ಕಾಲೇಜಿನಲ್ಲಿ (ಅನಂತರ ಬೆಂಗಳೂರ ಸೆಂಟ್ರಲ್ ಕಾಲೇಜಿನಲ್ಲಿ) ಕನ್ನಡದ ಅಧ್ಯಾಪಕನಾಗಿದ್ದನು. ಆಗಿನ ಕಾಲದ ಪ್ರಸಿದ್ಧ ವೈಯಾಕರಣಿಗಳಲ್ಲಿ ಅವನ ಗಣನೆಯಿದ್ದಿತು. ಮನೆತನವೇ ವೈಯಾಕರಣಿಗಳದ್ದು. ತಂದೆ ತಿಮ್ಮಣ್ಣಾಚಾರ್ಯನು ವ್ಯಾಕರಣಶಾಸ್ತ್ರವನ್ನು ಕಲಿಸಿದ್ದನು. ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಯು ಇವನ ಕನ್ನಡ ಗುರು. ಕೃಷ್ಣಾಚಾರ್ಯನು ಸಂಸ್ಕೃತದಲ್ಲಿ 'ಶಬ್ದರತ್ನಾವಳಿ (೧೮೭೬), ಧಾತುರತ್ನಾವಳಿ' (೧೮೮೬) ಗಳನ್ನು ರಚಿಸಿದ್ದುದರ ಜೊತೆಗೆ ಹಳಗನ್ನಡ ವ್ಯಾಕರಣ ಗ್ರಂಥವನ್ನೂ ಕನ್ನಡ ಭಾಷೆ ಮತ್ತು ಅದರ ಸಮೀಕರಣದ ಕುರಿತು ಪ್ರಬಂಧಗಳನ್ನೂ ಬರೆದಿದ್ದಾನೆ. ಅಲ್ಲದೆ, 'ನಾಗಾನಂದ ನಾಟಕ ಮತ್ತು ಮೃಚ್ಛಕಟಿಕ ಪ್ರಕರಣ' (೧೮೯೦) ಇವನ್ನು ಸಂಸ್ಕೃತದಿಂದ ಅನುವಾದಿಸಿದ್ದಾನೆ. ಸಾಮಾನ್ಯ ಓದುಗನನ್ನು ಗಮನದಲ್ಲಿರಿಸಿಕೊಂಡು ಇವೆರಡು ನಾಟಕ ಕಥೆಗಳನ್ನೂ ಬಾಣ ಕಾದಂಬರಿಯ ಸಾರಾಂಶವನ್ನೂ ಹೊಸಗನ್ನಡ ಗದ್ಯದಲ್ಲಿ ಬರೆದಿದ್ದಾನೆ. ಸಂಸ್ಕೃತದಿಂದ ಅನುವಾದಗೊಂಡ ಅವನ ಇನ್ನಿತರ ಕೃತಿಗಳೆಂದರೆ–'ಶೃಂಗಾರ ತರಂಗಿಣೀ' ಎಂಬ ಬಾಣ ಪ್ರಬಂಧ ಮತ್ತು ದಂಡಿಯ 'ಕಾವ್ಯಾದರ್ಶ'. ಇವು ೧೮೯೦ನೆಯ ದಶಕದ ಕೃತಿಗಳಾದರೆ ಆ ಮುಂದಿನ ಅವಧಿಯಲ್ಲಿ ಅವನು ಭಾರತೀಯ ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ವಿವೇಚಿಸಿ ಗ್ರಂಥಗಳನ್ನು ಹೊರತಂದಿದ್ದಾನೆ. ಚಾವಲಿ ರಾಮಶಾಸ್ತ್ರಿಯು ಸಹ ಅದೇ ಕಾಲೇಜಿನಲ್ಲಿ ಕನ್ನಡದ ಅಧ್ಯಾಪಕನಿದ್ದನು. ಅವನು 'ಕರ್ಣಾಟಕ ಛಂದೋಲಂಕಾರ ಸಾಹಿತ್ಯಲಕ್ಷಣ ಸಂಗ್ರಹ'ವನ್ನು ಬರೆದಿದ್ದಾನಲ್ಲದೆ ರುದ್ರಭಟ್ಟನ 'ಜಗನ್ನಾಥವಿಜಯ' ವನ್ನು (೧೮೯೬) ಪ್ರಥಮತಃ ಬೆಳಕಿಗೆ ತಂದನು.

**ರೆಂಟಾಲ ವೆಂಕಟಸುಬ್ಬರಾಯನು** ಮದ್ರಾಸಿನಲ್ಲಿ ವಕೀಲನಾಗಿದ್ದರೂ ಸಾಹಿತ್ಯದಲ್ಲಿ ಅಭಿರುಚಿಯನ್ನು ಬೆಳೆಯಿಸಿಕೊಂಡಿದ್ದನು. ತೆಲುಗು ಮತ್ತು ಇಂಗ್ಲಿಷ್ ಭಾಷೆಗಳಲ್ಲಿ

ಅವನ ಬರವಣಿಗೆಯು ಮೈದಾಳಿದೆ. ಕನ್ನಡದಲ್ಲಿ ಅವನು ಹೊರತಂದ 'ಕೇಸರೀ ವಿಲಾಸ' ಕಾದಂಬರಿಯನ್ನು (೧೮೯೫) ಅವನು ಏಕಕಾಲಕ್ಕೆ ಕನ್ನಡ ತೆಲುಗು–ಈ ಉಭಯ ಭಾಷೆಗಳಲ್ಲಿ ರಚಿಸಿದ್ದುದು ಒಂದು ವಿಶೇಷದ ಸಂಗತಿ. **ಸವೂರ ಮಂಗೇಶರಾಯರು** (೧೮೫೩–೧೯೧೮) ಮದ್ರಾಸದಲ್ಲಿ ನೆಲೆಸಿದ್ದ ಇನ್ನೊಬ್ಬ ಕನ್ನಡ ಪಂಡಿತರು. ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಪ್ರಾಧ್ಯಾಪಕರಿದ್ದುದರ ಜೊತೆಗೆ ಮದ್ರಾಸ ವಿಶ್ವವಿದ್ಯಾಲಯದ ಕನ್ನಡ ಪರೀಕ್ಷಾ ಮಂಡಲದ ಅಧ್ಯಕ್ಷನಿದ್ದರು. ಕೆಲವು ಕಾಲ ಮದ್ರಾಸ ಸರಕಾರದ ಕನ್ನಡ ಭಾಷಾಂತರಕಾರರೆಂದೂ ಕೆಲಸ ಮಾಡಿದುದಿದೆ. ಅವರ ಕನ್ನಡ ಪರಿಣತಿಯು ಲೇಖನ ರೂಪದಲ್ಲಿ ವಿಶೇಷವಾಗಿ ಹೊರಬಂದುದಿಲ್ಲ.

ಸುಪ್ರಸಿದ್ಧ **ಬೆನಗಲ್ ರಾಮರಾಯರು** (೧೮೭೬–೧೯೪೩) ಮದ್ರಾಸ, ಮೈಸೂರು, ಮುಂಬಯಿ ಊರುಗಳಲ್ಲಿ ಕಾರ್ಯನಿರತರಾಗಿದ್ದರೂ ಹೆಚ್ಚು ಕಾಲವನ್ನು ಕಳೆದುದು ಮದ್ರಾಸದಲ್ಲಿಯೆ (೧೮೯೪–೧೯೦೦, ೧೯೧೦–೧೯೪೦). ಮದ್ರಾಸ ವಿಶ್ವವಿದ್ಯಾಲಯದ ಎಂ.ಎ. ಪದವಿಗಾಗಿ ಅವರು ಸಾದರಪಡಿಸಿದ Renaissance in Modern Kannada ಎಂಬ ಪ್ರಬಂಧವು (೧೮೯೯) ಹೊಸಗನ್ನಡದ ಮೊದಲ ಸಮಾಲೋಚನೆಯೆನಬಹುದು. ಆ ಮುಂದೆ ರಾಮರಾಯರು ಪತ್ರಿಕೋದ್ಯಮ, ಭಾಷಾ ಸುಧಾರಣೆ, ಗ್ರಂಥರಚನೆ ಮುಂತಾದ ರಂಗಗಳಲ್ಲಿ ಉತ್ಸಾಹದಿಂದ ಕಾರ್ಯವೆಸಗಿದ್ದುದು ಸುಪರಿಚಿತವಿದೆ. ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕಾರ್ಯನಿರತರಾಗಿದ್ದ ಹೊಸಗನ್ನಡ ನೇತಾರರಲ್ಲಿ ಅವರೊಬ್ಬರು.

### ೯.೨೨ ಪಶ್ಚಿಮ ಕರಾವಳಿಯ ದೇಶೀಯರು

ಇನ್ನೀಗ ಪಶ್ಚಿಮ ಕರಾವಳಿಗೆ ಬರೋಣ. ವೆಂಕಟಾದ್ರಿ ಶಾಮರಾಯನು (೧೮೪೮–೧೯೧೩) ಅರಣ್ಯ ಶಾಖೆಯಲ್ಲಿ ಕೆಲಸಕ್ಕಿದ್ದನು. ನಾಟಕ, ಸಂಗೀತಗಳಲ್ಲಿ ಅವನಿಗೆ ವಿಶೇಷ ಆಸಕ್ತಿ ಇದ್ದಿತು. ಕೆಲವು ಪೌರಾಣಿಕ ನಾಟಕಗಳನ್ನು ಬರೆದನಲ್ಲದೆ ಶೆಕ್ಸ್‌ಪಿಯರನ As you like it ನಾಟಕವನ್ನು 'ಕಮಲಾವತೀ ಪರಿಣಯ' ಎಂಬ ಹೆಸರಿನಿಂದ ಅನುವಾದಿಸಿದ್ದಾನೆ.

**ಸಜೀಪ ರಾಮಕೃಷ್ಣಯ್ಯನು** (೧೮೪೩–೧೯೧೫) ಸೇಂಟ್ ಅಲ್ಲೊೄಸಿಯಸ್ ಕಾಲೇಜಿನಲ್ಲಿ ಕನ್ನಡ ಪಂಡಿತನಾಗಿದ್ದನು. ಫಾದರ್ ಆಗಸ್ಟಿನ್ ಮುಲ್ಲರ್ ಎಂಬ ಪಾದ್ರಿಯ ಪ್ರಭಾವಕ್ಕೆ ಒಳಗಾಗಿ ಹೋಮಿಯೊಪತಿಯ ವ್ಯಾಸಂಗ ಮಾಡಿದನು. ವೈದ್ಯನಾಗಿ ಆಮರಣ ಜನಸೇವೆಯನ್ನು ಕೈಕೊಂಡನು. ಮುಲ್ಲರನ ವೈದ್ಯಕೀಯ ಗ್ರಂಥವನ್ನು ಕನ್ನಡಿಸಿದ್ದಾನೆ ('ಹೆಚ್ಚು ವಾಡಿಕೆಯಾಗಿರುವ ರೋಗಗಳ ಉಪಶಮನಾರ್ಥವಾಗಿ ಔಷಧಗಳನ್ನು ಕೊಡುವುದರ ಕುರಿತು ಯೋಗ್ಯವಾದ ಬೋಧನೆಗಳು' ೧೮೮೭). ರಾಮಕೃಷ್ಣಯ್ಯನು

ಕೀರ್ತನ ರಂಗದಲ್ಲಿಯೂ, ದಶಾವತಾರದ ಮೇಳ ಕಟ್ಟುವುದರಲ್ಲಿಯೂ ಹೆಸರು ಪಡೆದಿದ್ದನು. ಪ್ರಾಚೀನ ಕಾವ್ಯಗ್ರಂಥಗಳ ಪ್ರತಿ ತಯಾರಿಸುವಲ್ಲಿ ಮಿಶನರಿಗಳಿಗೆ ನೆರವಾಗುತ್ತಿದ್ದನು. 'ಭಾರತಕಥಾಸಾರ', 'ಪಾಂಡವಾಶ್ವಮೇಧ' ಮತ್ತು 'ಶ್ರೀರಾಮಚರಿತ್ರೆ' ಎಂಬೀ ಪೌರಾಣಿಕ ಕಥನಗಳ ಜೊತೆಗೆ 'ವ್ಹಿಕ್ಟೋರಿಯಾ ರಾಣಿಯ ಚರಿತ್ರೆ' ಯನ್ನು ಬರೆದಿದ್ದಾನೆ. 'ಕನ್ನಡ ವಚನಕೌಮುದಿ' ಎಂಬ ಅವನ ವ್ಯಾಕರಣ ಗ್ರಂಥವು ವಿದ್ಯಾರ್ಥಿಗಳಿಗಾಗಿ ಬರೆಯಲಾದುದು (೧೮೮೫).

ಶಿವರಾಮ ಭಾರದ್ವಾಜನಿಗೂ (೧೮೪೩-೧೯೨೩) ಹೋಮಿಯೊಪತಿ ವೈದ್ಯಕೀಯದಲ್ಲಿ ಪರಿಣತಿ ಇದ್ದಿತು. ಆ ಕುರಿತು ಪ್ರತ್ಯೇಕವಾದ ಪುಸ್ತಕವನ್ನು ಬರೆದು ಪ್ರಕಟಿಸಿದ್ದಾನೆ. ಕಿಟೆಲ್ ಕೋಶದ ಅಚ್ಚುಕರಡುಗಳನ್ನು ತಿದ್ದುವಲ್ಲಿ ಈತನು ನೆರವಾದ ವಿಷಯವನ್ನು ಈ ಹಿಂದೆ ಪ್ರಸ್ತಾಪಿಸಿದ್ದೇವೆ <೪೪೫>. ಭಾರದ್ವಾಜನು ಅನೇಕ ಶಬ್ದಗಳನ್ನು ಕಿಟೆಲರಿಗೆ ಸೂಚಿಸಿದ್ದನಂತೆ. ಅವು ತಡವಾಗಿ ಕೈಸೇರಿದ್ದರಿಂದ ಸೇರಿಸಿಕೊಳ್ಳಲಾಗಲಿಲ್ಲವೆಂದು ಕಿಟೆಲ್ ವಿಷಾದಿಸಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದೆಡೆ ಯಕ್ಷಗಾನ ಕವಿಗಳೂ, ಇನ್ನೊಂದೆಡೆಯಲ್ಲಿ ಮಿಶನರಿಗಳೂ ಕನ್ನಡ ಸಾಹಿತ್ಯ ರಚನೆಯಲ್ಲಿ ತೊಡಗಿದ್ದಾಗ ಅಲ್ಲಿಯ ಸಾರಸ್ವತ ಸಮಾಜದ ಕೆಲವರು ಹೊಸಯುಗದ ವಾತಾವರಣವನ್ನು ಬರಮಾಡಿಕೊಂಡರು. ಅವರ ಮನೆಮಾತು ಕೊಂಕಣಿ; ಜೊತೆಗೆ ಮಹಾರಾಷ್ಟ್ರದಲ್ಲಿಯ ಸಾಮಾಜಿಕ ಆಂದೋಲನಗಳ ಸೆಳೆತಕ್ಕೆ ಅವರು ಹೆಚ್ಚಾಗಿ ಸಿಲುಕಿದವರು. ಆದರೂ ವ್ಯವಹಾರದ ಭಾಷೆಯಾದ ಕನ್ನಡದಲ್ಲಿ ಸಾಹಿತ್ಯ ರಚನೆಯ ಕಾರ್ಯವನ್ನು ಮಾಡಿದರು. ಹತ್ತೊಂಬತ್ತನೇ ಶತಮಾನದ ಕೊನೆಯ ಭಾಗದಲ್ಲಿ ಉಡುಪಿ, ಮೂಲ್ಕಿ, ಮಂಗಳೂರುಗಳಲ್ಲಿ ಸಂಗೀತ, ಮರಾಠೀ ನಾಟಕಗಳ ಪ್ರಯೋಗವು ಮೊದಲಾಗಿದ್ದಿತು. ಮಂಗಳಾಪುರ ನಾರಾಯಣ ರಾಮಪ್ಪ ಕಾಮತನು (ಜ ೧೮೮೭) ನಾಟಕ ಕಂಪೆನಿಯನ್ನು ಸ್ಥಾಪಿಸಿ ಮರಾಠೀ ಮತ್ತು ಕನ್ನಡ ನಾಟಕಗಳನ್ನು ರಂಗದ ಮೇಲೆ ತಂದನು. ಅವನ ವಿವಿಧ ಪೌರಾಣಿಕ ನಾಟಕಗಳು ಸಾಗ್ರ ಸಂಗೀತವಾಗಿದ್ದುವು.

ಕನ್ನಡದಲ್ಲಿ ಸ್ವತಂತ್ರ ಸಾಮಾಜಿಕ ಕಾದಂಬರಿಯನ್ನು ರಚಿಸುವಲ್ಲಿ ಮುಂದಾದ ಗುಳವಾಡಿ ವೆಂಕಟರಾವ, ಗುಳವಾಡಿ ಅಣ್ಣಾಜಿರಾವ ಹಾಗೂ ಬೋಳಾರ ಬಾಬೂರಾವ- ಈ ಮೂವರೂ ದಕ್ಷಿಣ ಕನ್ನಡದ ಸಾರಸ್ವತ ಸಮಾಜಕ್ಕೆ ಸೇರಿದವರು. ಅರುಣೋದಯದ ಬೆಳಕನ್ನು ಬರಮಾಡಿಕೊಳ್ಳುವಲ್ಲಿ ಅವರು ಇತರರಿಗಿಂತ ಹೆಚ್ಚು ಆತುರವನ್ನು ತೋರಿದರು. ಹಾಗೆಂದು ಹಳೆಯದನ್ನು ಅಸಡ್ಡೆಯಿಂದ ಕಂಡವರಲ್ಲ. ಹಳೆಯ ಪರಂಪರೆ ಹಾಗೂ ಸಂಸ್ಕಾರಗಳನ್ನು ಇಂದಿನ ಕಾಲಮಾನಕ್ಕನುಸಾರವಾಗಿ ಒರೆಗೆ ಹಚ್ಚಿ ನೋಡಿ ಅದರಲ್ಲಿ

ಅರ್ಥಹೀನವಾದದ್ದೆಂದು ತೋರುವಷ್ಟನ್ನೇ ಖಂಡಿಸುವ ಇಲ್ಲವೆ ಸುಧಾರಿಸುವ ಮನೋವೃತ್ತಿ ಅವರದು.

ಪೋಲೀಸ ಖಾತೆಯಲ್ಲಿದ್ದ **ಗುಳವಾಡಿ ವೆಂಕಟರಾಯರು** ಮೂಲತಃ ಆಸ್ತಿಕರೇ. ಗುರುಪೀಠದಲ್ಲಿ ಗೌರವನ್ನಿಟ್ಟುಕೊಂಡು ದೇವಸ್ಥಾನಗಳ ಜೀರ್ಣೋದ್ಧಾರ ಕಾರ್ಯದಲ್ಲಿ ತೊಡಗಿದ್ದವರು. ಆದರೆ ಗುರುಮಠಗಳಲ್ಲಿ ನಡೆಯುವ ಡಂಭಾಚಾರಗಳು. ಗೊಡ್ಡು ಆಚರಣೆಗಳು ಜಿಗುಪ್ಸೆಯನ್ನು ಉಂಟುಮಾಡಿದವು. ಸದ್ಧರ್ಮವು ಯಾವುದೆಂಬ ಬಗ್ಗೆ ಹೊಸ ದೃಷ್ಟಿಯಿಂದ ಯೋಚಿಸಿ. ತಮ್ಮದೇ ಆದ ನಿಲುಗಡೆಗೆ ಬಂದಿದ್ದರು. ಆ ಹಿನ್ನೆಲೆಯಲ್ಲಿ ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿಯಾದ 'ಇಂದಿರಾಬಾಯಿ ಇಲ್ಲವೆ ಸದ್ಧರ್ಮ ವಿಜಯ'ವು ರಚಿತವಾಯ್ತು. ಸ್ತ್ರೀಶಿಕ್ಷಣದ ಉಪಯುಕ್ತತೆ. ಸಮುದ್ರಯಾನ. ವಿಧವಾ ವಿವಾಹ ಮುಂತಾದ ಸುಧಾರಣಾ ವಿಚಾರಗಳು ಆ ಕಥನದಲ್ಲಿ ಪ್ರತಿಪಾದಿತವಾಗಿವೆ. ಸಾಮಾಜಿಕ ಮಹತ್ವವುಳ್ಳ ಈ ಕೃತಿಯನ್ನು. ಆಗ ಅಸಿಸ್ಟಂಟ್ ಕಲೆಕ್ಟರನಾಗಿದ್ದ ಕೌಚ್‌ಮನ್ ಇಂಗ್ಲಿಷ್‌ಗೆ ಭಾಷಾಂತರಿಸಿದನು. ಕನ್ನಡದಿಂದ ಇಂಗ್ಲಿಷ್‌ಗೆ ಅನುವಾದಗೊಂಡ ಆಧುನಿಕ ಕೃತಿಗಳಲ್ಲಿ ಇದೇ ಮೊದಲಿನದಾಯಿತು. ಗುಳವಾಡಿ ವೆಂಕಟರಾಯರು ಆ ಮುಂದೆ 'ವೇಣಮ್ಮ ನಾಗಮ್ಮರ ಸಂವಾದ', 'ಲಾಡುಪ್ರಿಯಾಚಾರ್ಯ' ಎಂಬ ಚಿಕ್ಕ ಕೃತಿಗಳನ್ನೂ 'ಭಾಗೀರಥೀ', 'ಸೀಮಂತಿನೀ' ಎಂಬ ಇನ್ನೆರಡು ಕಾದಂಬರಿಗಳನ್ನೂ ಬರೆದುದಾಗಿ ತಿಳಿಯುತ್ತದೆ.

ವಕೀಲಿ ವ್ಯವಸಾಯದಲ್ಲಿದ್ದ ಗುಳವಾಡಿ ಅಣ್ಣಾಜಿರಾಯರು ಬರೆದ 'ರೋಹಿಣಿ ಇಲ್ಲವೆ ಸಾರಸ್ವತ ಮಂಡಳ' (೧೯೦೬) ಮತ್ತು ಬೋಳಾರ ಬಾಬೂರಾಯರ 'ವಾಗ್ದೇವಿ' ಕಾದಂಬರಿಗಳಲ್ಲಿ ಇದೇ ಬಗೆಯ ಸಮಾಜ ಸುಧಾರಣಾ ದೃಷ್ಟಿಯು ಕಂಡುಬರುತ್ತದೆ. ಜೊತೆಗೆ ಸನ್ನಿವೇಶ ರಚನೆಯಲ್ಲಿ ವಾಸ್ತವತೆಯೂ. ಸಂಭಾಷಣೆಯಲ್ಲಿ ಮಾರ್ಮಿಕತೆಯೂ ತಲೆದೋರಿವೆ. ಕನ್ನಡದಲ್ಲಿ ಸ್ವತಂತ್ರ ಸಾಮಾಜಿಕ ಕಾದಂಬರಿಯ ತೇರನ್ನು ಮೊದಲಿಗರಾಗಿ ಎಳೆದ ಈ ಮೂವರು ಅಭಿನಂದನೀಯರಾಗಿದ್ದಾರೆ.

ಖ್ಯಾತನಾಮ **ಪಂಜೆ ಮಂಗೇಶರಾಯರ** (೧೮೭೪-೧೯೩೭) ಬರವಣಿಗೆಯು ಇಂಗ್ಲಿಷ್- ಪದ್ಯಗಳ ಅನುವಾದದಿಂದ ಮೊದಲಾಯಿತೆಂದು ತೋರುತ್ತದೆ. 'ರಾಮಪಂ' ಎಂಬ ಹೆಸರಿನಿಂದ 'ಸತ್ಯದೀಪಿಕೆ' ಪತ್ರಿಕೆಯಲ್ಲಿ ಹಲವು ಇಂಗ್ಲಿಷ್ ಪದ್ಯಗಳನ್ನು ಅನುವಾದ ಮಾಡಿದ್ದಾರೆ. (Oh. call my brother back to me ; 'ಮರಳಿ ನೀ ತಮ್ಮನ ಕರೆಯಪ್ಪಾ'. The better land ; 'ಉತ್ತಮ ರಾಜ್ಯ.' ಇತ್ಯಾದಿ). ಹೊಸಗನ್ನಡ ಸಣ್ಣಕತೆಗೆ ತೀರ ಹತ್ತಿರವಾದ. 'ನನ್ನ ಚಿಕ್ಕ ತಾಯಿ' ಎಂಬ ಅವರ ಬರಹವು 'ಸುವಾಸಿನಿ' ಯಲ್ಲಿ (೧೯೦೦) ಪ್ರಕಟವಾದುದು ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿಯ ಒಂದು ಮಹತ್ವಪೂರ್ಣ ಘಟನೆಯಾಗಿದೆ. ಪಂಜೆಯವರು ಅನಂತರ ರಚಿಸಿದ ಬಾಲಸಾಹಿತ್ಯ.

ಕ್ರಮಿಕ ಪುಸ್ತಕಗಳ ಪಾಠಗಳು, ಇತರ ಸರಸ ಲೇಖನಗಳು ಇಪ್ಪತ್ತನೆಯ ಶತಮಾನಕ್ಕೆ ಸೇರಿದ ಬೆಲೆಯುಳ್ಳ ಸೊತ್ತಾಗಿವೆ. ಮುದ್ದಣನ ಕೃತಿಗಳಲ್ಲಿ ಆದರವನ್ನಿಟ್ಟುಕೊಂಡು ಪ್ರೋತ್ಸಾಹಿಸಿದ್ದನ್ನೂ ಇಲ್ಲಿ ಕಾಣಿಸತಕ್ಕುದು.

**೯.೨೩ ಮುಂಬಯಿಯ ಸುಧಾರಣಾವಾದಿಗಳು**

ಉತ್ತರ ಕನ್ನಡ ಜಿಲ್ಲೆಯ ಅಂಕೋಲೆಯಲ್ಲಿ **ಲಕ್ಷ್ಮಣ ಬಾಬಣಿ ಪೈ** ಎಂಬ ವಿದ್ವಾಂಸನು ಆಗಿಹೋದನು (೧೮೫೩-೧೯೨೭). ಇಂಗ್ಲಿಷ್ ಶಿಕ್ಷಣವನ್ನು ಪಡೆದವನಾದರೂ ಮನೆತನದ ಪರಂಪರೆಯ ಪ್ರಭಾವದಿಂದಾಗಿ ಸಂಸ್ಕೃತ ಶಾಸ್ತ್ರ ಗ್ರಂಥಗಳನ್ನು ವ್ಯಾಸಂಗ ಮಾಡಿ, ಅವನು ವೇದ, ಉಪನಿಷತ್ತು, ರಾಮಾಯಣ, ಮಹಾಭಾರತಗಳನ್ನು ಆಮೂಲಾಗ್ರವಾಗಿ ಕನ್ನಡಿಸಿದನು. ಈ ಹಿಂದೆ ಮುಮ್ಮಡಿ ಕೃಷ್ಣರಾಜರ ಆಸ್ಥಾನ ವಿದ್ವಾಂಸರಿಂದ ನಡೆದ ಕಾರ್ಯವನ್ನು ಇದು ನೆನಪಿಗೆ ತರುತ್ತದೆ. ಒಬ್ಬನೇ ವ್ಯಕ್ತಿಯು, ಹೊರಗಿನ ಪ್ರೇರಣೆ ಯಾವುದೂ ಇಲ್ಲದೆ ಧಾರ್ಮಿಕ ಆಸಕ್ತಿಯಿಂದಲೂ ಕನ್ನಡದ ಮೇಲಿನ ಪ್ರೇಮದಿಂದಲೂ ಇದಕ್ಕೆ ಉದ್ಯುಕ್ತನಾದುದು ಸಾಹಸದ ಮಾತೆನ್ನಬೇಕು. ಲಕ್ಷ್ಮಣ ಬಾಬಣಿ ಪೈ ಭಗವದ್ಗೀತೆಯನ್ನು ಭಾಮಿನೀ ಷಟ್ಪದಿಯಲ್ಲಿ ಪರಿವರ್ತಿಸಿದ್ದಾನೆ. (ಅದಾಗಲೇ ಬೇರೆ ಹಲವರ ಅನುವಾದಗಳು ಸಿದ್ಧವಾಗಿದ್ದುದನ್ನು ನೋಡಿದ್ದೇವೆ.) ಯಕ್ಷಗಾನದಲ್ಲಿಯೂ ಅವನಿಗೆ ಆಸಕ್ತಿ ಇದ್ದಿತು.

ಉತ್ತರ ಕನ್ನಡಜಿಲ್ಲೆಯ ಹೊಸ ಯುಗದ ಲೇಖಕರೆನ್ನುವವರು ಮುಂಬಯಿ ನಗರದಲ್ಲಿ ನೆಲಸಿದವರಾಗಿ ಅಲ್ಲಿಯೇ ಸಾಹಿತ್ಯ ಕಾರ್ಯವನ್ನು ಕೈಗೊಂಡರು. ಹಾಗೆ ನೋಡಿದರೆ ಆ ಜಿಲ್ಲೆ ಮತ್ತು ಮುಂಬಯಿಯ ಬಂದರಗಳ ನಡುವಣ ಸಂಪರ್ಕವು ಈಸ್ಟ ಇಂಡಿಯಾ ಕಂಪನಿಯ ಕಾಲದಿಂದಲೇ ಸಾಗಿಬಂದಿದ್ದಿತು. ಅನೇಕ ಜನ ಶೇಣ್ವಿಗಳು ಕಂಪನಿಯಲ್ಲಿ ನೌಕರರಾಗಿದ್ದರು. ಉತ್ತರ ಕನ್ನಡ ಜಿಲ್ಲೆಯು ಮುಂಬಯಿ ಪ್ರಾಂತ್ಯದಲ್ಲಿ ಸೇರ್ಪಡೆಯಾದಂದಿನಿಂದ (೧೮೬೨) ಆ ಸಂಪರ್ಕವು ಇನಷ್ಟು ಹೆಚ್ಚಾಯಿತೆನ್ನಬಹುದು. ಅಂತೂ ಮುಂಬಯಿ ನಗರದಲ್ಲಿಯ ಕನ್ನಡ ಸಾಹಿತ್ಯ ಕಾರ್ಯವು ಉತ್ತರ ಕನ್ನಡ ಜಿಲ್ಲೆಯವರಿಂದಲೇ ಆರಂಭವಾಯಿತೆನ್ನಬಹುದು.

ಅವರಲ್ಲಿ **ಕರ್ಕಿ ವೆಂಕಟರಮಣಶಾಸ್ತ್ರಿ ಸೂರಿ**ಯವರ ಕಾರ್ಯವು ಎದ್ದು ಕಾಣುವಂತಹದು (ಸು. ೧೮೫೭–೧೮೯೭). ಕರ್ಕಿಯಲ್ಲಿದ್ದ ಇವರ ಮನೆತನವು ವೈದಿಕ, ವೈದ್ಯಕೀಯ ವಿದ್ಯೆಗಳಿಗೆ ಹೆಸರಾದುದು. ರಾಮಚಂದ್ರಾಪುರಮಠದ ಶ್ರೀಗಳವರಲ್ಲಿ ಇವರ ವೈದಿಕ ವ್ಯಾಸಂಗ ನಡೆಯಿತು. ಅಲ್ಲಿ ಕಲಿತ ವಿದ್ಯೆ ಮೂಲದ್ರವ್ಯವಾಗಿ ಉಳಿದು ಜೀವಮಾನದುದ್ದಕ್ಕೂ ಪ್ರಯೋಜನಕ್ಕೆ ಬಂದಿತು. ವೆಂಕಟರಮಣಶಾಸ್ತ್ರಿಗಳಿಗೆ ಸಂಚಾರದ ಹವ್ಯಾಸ. ಉತ್ತರ ಕನ್ನಡ ಜಿಲ್ಲೆ ಮತ್ತು ಪರಿಸರಗಳಲ್ಲಿ ತುಂಬಾ ತಿರುಗಾಡಿದ್ದುದು

ಜೀವನಾನುಭವವನ್ನು ಒದಗಿಸಿತು. ಜಿಲ್ಲೆಯ ಸಂಕಷ್ಟ ನಿವಾರಣೆ, ಹವ್ಯಕ ಸಮಾಜದ ಏಳಿಗೆ ಮತ್ತು ಕನ್ನಡ ಸೇವೆ–ಇವು ಅವರ ಕಣ್ಣ ಮುಂದಿನ ಗುರಿಗಳಾಗಿದ್ದುವು. ಅವು ವೆಂಕಟರಮಣಶಾಸ್ತ್ರಿಯವರನ್ನು ನಾಡಿನ ನವೋದಯ ರಂಗದಲ್ಲಿ ತಂದು ನಿಲ್ಲಿಸಿದುವು; ಮುಂಬಯಿಗೆ ಕರತಂದುವು.

ಅದು ೧೮೮೫ನೆಯ ವರುಷ. ದೇಶದ ಸ್ವಾತಂತ್ರ್ಯ, ಸಮಾಜ ಸುಧಾರಣೆಯ ಗಾಳಿ ಮುಂಬಯಿಯಲ್ಲಿ ಬೀಸುತ್ತಿದ್ದ ಕಾಲವದು. ಗೆಳೆಯ ಬೂದಿ ಮಹಾಬಲೇಶ್ವರ ಭಟ್ಟನ ನೆರವಿನಿಂದ ಗ್ರಂಥೋದ್ಯಮದಲ್ಲಿ ತೊಡಗಿದರು. ಮುಂಬಯಿಯಲ್ಲಿ ಆಗ ನೆಲಸಿದ್ದಿರಬಹುದಾದ ಹಲವು ಸಾವಿರ ಕನ್ನಡಿಗರಲ್ಲಿ ಉತ್ತರ ಕನ್ನಡಜಿಲ್ಲೆಯವರೇ ಹೆಚ್ಚಾಗಿ ಇದ್ದರು. ಅವರಲ್ಲಿ ಕೆಲವರು ಕನ್ನಡದ ಕೆಲಸವನ್ನು ಅದೇ ಆರಂಭಮಾಡಿದ್ದರು. 'ಕನ್ನಡಸುವಾರ್ತೆ' ಎಂಬ ಪತ್ರಿಕೆ ೨–೩ ವರ್ಷಗಳಿಂದ ಹೊರಡುತ್ತಿದ್ದಿತು. ಅದಕ್ಕಾಗಿ 'ಕರ್ನಾಟಕ ಪ್ರೆಸ್' ಆರಂಭವಾಗಿದ್ದಿತು. ಶಾಸ್ತ್ರಿಗಳು ಈ ರಂಗದಲ್ಲಿ ಧುಮುಕಿ ಚೈತನ್ಯವನ್ನು ತುಂಬಿದರು. 'ಭಾರತೀ ಪ್ರೆಸ್' ಸ್ಥಾಪಿಸಿ, ಆ ಮೂಲಕ ಪ್ರಕಟನಾ ಕಾರ್ಯದಲ್ಲಿ ತೊಡಗಿದರು. ಮೊತ್ತಮೊದಲ ಕೃತಿ 'ದಕ್ಷಿಣ ಯಾತ್ರಾ ಚರಿತ್ರೆ' ಎಂಬುದು ; ಉಡುಪಿಯಿಂದ ಗುರುವಾಯೂರುಗಳ ವರೆಗಿನ ಕ್ಷೇತ್ರಗಳನ್ನು ಒಂದೊ ಎರಡೊ ಪದ್ಯಗಳಲ್ಲಿ ವರ್ಣಿಸಲಾಗಿದೆ. ೩೭ ಪದ್ಯಗಳ, ಅಂಗೈಯಗಲದ ಪುಸ್ತಕವಿದು. ಆನಂತರದ ಸುಮಾರು ಇಪ್ಪತ್ತು ಕೃತಿಗಳಲ್ಲಿ ಕೆಲವನ್ನು ಅವರು ಸಂಪಾದಿಸಿ, ತಿದ್ದಿ ಪ್ರಕಟಿಸಿದರು; ಹಲವನ್ನು ಸ್ವತಃ ಬರೆದಿದ್ದರು. ಅವುಗಳಲ್ಲಿ ಯಕ್ಷಗಾನ ಪ್ರಸಂಗಗಳಿವೆ; ನಡುಗನ್ನಡ ಕಾವ್ಯಗಳಿವೆ, ಅಧ್ಯಾತ್ಮ ಕೃತಿಗಳಿವೆ. ಜೊತೆಗೆ ಹವ್ಯಕ ಇತಿಹಾಸ, ಧರ್ಮಕ್ಕೆ ಸಂಬಂಧಿಸಿದವೂ ಇವೆ. ಈ ನಿಮಿತ್ತದಿಂದ ಅವರು ಜಿಲ್ಲೆಯ ಅನೇಕ ಕವಿ, ಲೇಖಕರನ್ನು ಬೆಳಕಿಗೆ ತಂದರು. ಅವರ ಸ್ವಂತದ ಪುಸ್ತಕಗಳೆಂದು 'ಪ್ರಾಚೀನ ನಾಟ್ಯಕಥಾರ್ಣವ' (೧೮೮೮), 'ಅನಾರ್ಯರ ವಿವರ' ಮತ್ತು 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಇವನ್ನು ಹೆಸರಿಸಬೇಕು. ಮೊದಲಿನದರಲ್ಲಿ ಸಂಸ್ಕೃತ ನಾಟಕ ಕಥೆಗಳಿವೆ. 'ಅನಾರ್ಯರ ವಿವರ' ವು ಹಿಂದೂಗಳಲ್ಲಿ ಶೂದ್ರರ ಸ್ಥಾನಮಾನವನ್ನು ಐತಿಹಾಸಿಕವಾಗಿ ನಿದರ್ಶಿಸುವ ಸ್ವತಂತ್ರ ಪ್ರಬಂಧವಾಗಿದ್ದು, ೧೮೮೦ನೆಯ ದಶಕದಲ್ಲಿ ಆ ಬಗೆಯ ಪ್ರಬಂಧವು ಅಪೂರ್ವವಾಗಿದ್ದಿತು. ಹವ್ಯಕ ಸಮಾಜದಲ್ಲಿದ್ದ ಕನ್ಯಾವಿಕ್ರಯವನ್ನು ಕಟುವಾಗಿ ಟೀಕಿಸುವ 'ಇಗ್ಗಪ್ಪ ಹೆಗಡೆ ಪ್ರಹಸನ'ವು ಕನ್ನಡದ ಆದ್ಯ ಸಾಮಾಜಿಕ ನಾಟಕವೆಂಬ ಮನ್ನಣೆಯನ್ನು ಪಡೆದಿದೆ.(೧೮೮೭)

ಇದಕ್ಕಿಂತ ಹೆಚ್ಚಿನ ಮನಣೆಯು ಅವರ ಪತ್ರಿಕೋದ್ಯಮಕ್ಕೆ ಸಲ್ಲಬೇಕು. 'ಹವ್ಯಕ ಸುಬೋಧ' ಮತ್ತು 'ಹಿತೋಪದೇಶ' ಎಂಬ ಆ ಪತ್ರಿಕೆಗಳ ಹೆಸರು ಹಳೆಯ ಕಾಲದ್ದೆನಿಸಿದರೂ ಅವುಗಳಲ್ಲಿ ವಿಷಯ ವಿವೇಚನೆ ಮತ್ತು ಪತ್ರಿಕಾ ಧೋರಣೆಗಳು ಹೊಸ ಯುಗಕ್ಕೆ ಅನುಸಾರವಾಗಿಯೆ ಇದ್ದುವು. ಕ್ರಿ.ಶ. ೧೮೮೮ರ ಜನೆವರಿಯಿಂದ ಹೊರಡಲಾರಂಭಿಸಿದ

'ಹಿತೋಪದೇಶ' ಮಾಸಿಕದ ಉದ್ದೇಶವು ಮೂಲತಃ ಎಳೆಯರ ಮಾನಸಿಕ ವಿಕಾಸ ಎಂಬುದಾಗಿತ್ತು. ಚರಿತ್ರೆ, ಪ್ರಚಲಿತ ವಿಷಯಗಳು, ವೈಜ್ಞಾನಿಕ ಲೇಖನಗಳು ಅದರಲ್ಲಿ ಪ್ರಕಟವಾಗುತ್ತಿದ್ದುವು. ಅದರ ವಿಶೇಷ ಆಕರ್ಷಣೆ ವ್ಯಂಗ್ಯಚಿತ್ರಗಳಲ್ಲಿದ್ದಿತು. ಕನ್ನಡದಲ್ಲಿ ವ್ಯಂಗ್ಯಚಿತ್ರಗಳನ್ನು ಮೊತ್ತಮೊದಲಿಗೆ ವೆಂಕಟರಮಣಶಾಸ್ತ್ರಿಗಳೇ ಬಳಸಿದ್ದಾರೆಂದು ತೋರುತ್ತದೆ.

'ಹವ್ಯಕ ಸುಬೋಧ'ವು ಶ್ರೇಷ್ಠಮಟ್ಟದ ಸಾಪ್ತಾಹಿಕವಾಗಿದ್ದಿತು. ಕೇವಲ ೨೫೦ ಪ್ರತಿಗಳಿಂದ ಮೊದಲಾದ ಈ ಪತ್ರಿಕೆಯ ಪ್ರಸಾರವು ನಾಲ್ಕು ವರ್ಷಗಳಲ್ಲಿ ಸಾವಿರಕ್ಕೆ ಮುಟ್ಟಿದ್ದಿತು. (ಆಗಿನ ಕಾಲದ ಪತ್ರಿಕೆಗಳ ಸಾಮಾನ್ಯ ಪ್ರಸಾರ ೪೦೦–೫೦೦ ಮಾತ್ರ) ಪತ್ರಿಕಾ ವ್ಯವಸಾಯದಲ್ಲಿ ಅವರದು ಕ್ಷಾತ್ರವೃತ್ತಿ. ಭಾರತೀಯರ ಸಮಸ್ಯೆಗಳು, ಬ್ರಿಟಿಶರ ಕುಟಿಲ ನೀತಿ, ಹಾಗೂ ದಬ್ಬಾಳಿಕೆ, ಕೆನರಾ ಜಿಲ್ಲೆಯ ಸಂಕಷ್ಟಗಳು, ವಿಶೇಷತಃ ಅಧಿಕಾರಿಗಳ ದುರ್ವರ್ತನೆ, ಇವನ್ನು ನಿರೂಪಿಸುವಲ್ಲಿ ಅವರು ತಮ್ಮ ಲೇಖನಿಯನ್ನು ಖಡ್ಗಕ್ಕಿಂತಲೂ ಹರಿತವಾಗಿ ಮಸೆದರು. ಕೆನರಾ ಜಿಲ್ಲೆಯ ಅರಣ್ಯಖಾತೆಯ ಅವ್ಯವಹಾರಗಳನ್ನು ಬಯಲಿಗೆಳೆದುದರ ಪರಿಣಾಮವಾಗಿಯೆ ಇರಬೇಕು – ಅವರ ಮೇಲೆ ಖಟ್ಲೆ ಹಾಕಿ, ಸರಕಾರವು ಶಿಕ್ಷೆ ವಿಧಿಸಿತು. ರಾಜಕೀಯ ಕಾರಣದಿಂದ ಶಿಕ್ಷೆಗೊಳಗಾದ ಕನ್ನಡ ಲೇಖಕರಲ್ಲಿ ವೆಂಕಟರಮಣಶಾಸ್ತ್ರಿಯೇ ಮೊದಲಿಗರು. ಆ ಮುಂದೆ ಮುಂಬಯಿಯನ್ನು ಬಿಟ್ಟು ಪುಣೆಯಲ್ಲಿ ಕೆಲ ಕಾಲ ವೈದ್ಯಕೀಯ ವೃತ್ತಿಯಲ್ಲಿದ್ದು ತೀರಿಹೋದರು (ಸು. ೧೮೯೨). ಅವರ ಈ ಲೇಖಕೀಯ ಸಾಹಸದ ಅವಧಿಯು ಕೇವಲ ಐದಾರು ವರ್ಷಗಳ ಅವಧಿಯದೆಂಬುದನ್ನು ಗಮನಿಸಿದರೆ, ಶಾಸ್ತ್ರಿಗಳ ತೀಕ್ಷ್ಣ ಬುದ್ಧಿ, ಅದ್ಭುತ ಕಾರ್ಯಶಕ್ತಿ ಮತ್ತು ಪ್ರಚಂಡ ಉತ್ಸಾಹ ಇವುಗಳ ಕಲ್ಪನೆ ಬರುತ್ತದೆ. ಧೀರ ಪತ್ರಿಕೋದ್ಯಮಿ ಹಾಗೂ ಆದ್ಯ ಸಾಮಾಜಿಕ ನಾಟಕಕಾರ ಎಂಬ ನಿಮಿತ್ತದಿಂದ ಅವರ ಹೆಸರು ಹೊಸಗನ್ನಡ ಸಾಹಿತ್ಯದಲ್ಲಿ ಶಾಶ್ವತವಾಗಿ ನಿಲ್ಲತಕ್ಕುದು. ವಿವರಗಳಿಗೆ, 'ಧೀರಪತ್ರಿಕೋದ್ಯಮಿ ಕರ್ಕಿ ವೆಂಕಟರಮಣಶಾಸ್ತ್ರಿ' ಲೇಖನ ನೋಡುವುದು. ('ಸಂಕಥನ'ದಲ್ಲಿ ಸಂಪಾದಕ : ನಾ.ದಾಮೋದರ ಶೆಟ್ಟಿ, ೨೦೦೮. ಪುಟ ೩೭೩)

ಮುಂಬಯಿಯಲ್ಲಿದ್ದ ಇನ್ನು ಹಲವು ಲೇಖಕರನ್ನು ಹೆಸರಿಸುವಾ. 'ಇಗ್ಗಪ್ಪ ಹೆಗಡೆ ಪ್ರಹಸನ'ವು ಪ್ರಕಟವಾದ ವರ್ಷವೆ (೧೮೮೭) ಶಿವರಾಮ ನಾರಣಪ್ಪ ಧಾರೇಶ್ವರನ 'ಕನ್ಯಾವಿಕ್ರಯ'ವು ಹೊರಬಂದಿದೆ. ಆದಕಾರಣ ಆದ್ಯ ಸಾಮಾಜಿಕ ನಾಟಕಕಾರ ಎಂಬ ಅಭಿಧಾನದಲ್ಲಿ ಧಾರೇಶ್ವರನಿಗೂ ಪಾಲು ಇದೆ. ಕೆ.ಬಿ. ಭಾಗವತ ಎಂಬವನು 'ಮನುಸ್ಮೃತಿಯ ಕನ್ನಡ ಟೀಕೆ'ಯನ್ನು ಹೊರತಂದುದು ಸಾಮಯಿಕ ಅಗತ್ಯವುಳ್ಳ ಕೃತಿಯೆನಿಸಿತು. ಅನೇಕ ಪರಂಪರಾಗತ ಧಾರ್ಮಿಕ ಆಚಾರ -ವಿಚಾರಗಳನ್ನು ಸುಧಾರಣಾವಾದಿಗಳು ಪ್ರಶ್ನಿಸುತ್ತಿದ್ದ ಕಾಲದಲ್ಲಿ, ಈ ಗ್ರಂಥವು ಸಂಬಂಧಪಟ್ಟವರಿಗೆ ಉಪಯುಕ್ತವೆನಿಸಿರಬೇಕು.

**ಶಾಮರಾವ ವಿಠ್ಠಲ ಕೈಕಿಣಿ** (೧೮೪೧-೧೯೦೫) ಸ್ವಪ್ರಯತ್ನದಿಂದ ಮುಂದೆ ಬಂದವರು. ಕೋರ್ಟಿನಲ್ಲಿ ಕನ್ನಡ ಭಾಷಾಂತರಕಾರರಾಗಿ ತನ್ನ ಬದುಕನ್ನು ಆರಂಭಿಸಿ ಮುಂದೆ ಹೈಕೋರ್ಟಿನ ಪ್ರಸಿದ್ಧ ವಕೀಲರಾಗಿ ನಿವೃತ್ತಿ ಹೊಂದಿದರು. ಮುಂಬಯಿಯ ಕನ್ನಡ ಚಟುವಟಿಕೆಗಳಿಗೆ ಅವರಿಂದ ವಿಶೇಷವಾದ ಪೋಷಣೆ ಮತ್ತು ಪ್ರೋತ್ಸಾಹ ದೊರೆತಿದೆ. ಮೇಲೆ ಹೇಳಿದ 'ಕನ್ನಡ ಸುವಾರ್ತೆ' ಪತ್ರಿಕೆಯ ಹಿಂದೆ ಅವರ ಅಂಗವಿದ್ದಿರಲು ಸಾಕು. ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಸ್ಥಾನ ದೊರೆಯುವಲ್ಲಿ ಅವರು ಮಾಡಿದ ಪ್ರಯತ್ನವನ್ನು ಈ ಹಿಂದೆ ವಿವರಿಸಿದ್ದೇವೆ <೩೨>. ನಿವೃತ್ತಿ ಜೀವನ ನಡೆಸಲು ಧಾರವಾಡಕ್ಕೆ ಬಂದಾಗ ಕರ್ನಾಟಕ ವಿದ್ಯಾವರ್ಧಕ ಸಂಘದ ಅಧ್ಯಕ್ಷರೆಂದು ಆಯ್ಕೆಗೊಂಡು (೧೮೯೦) ಬದುಕಿರುವ ವರೆಗೆ ಆ ಸ್ಥಾನದಲ್ಲಿ ಮುಂದುವರಿದರು. ಹೀಗೆ ಪದಾಧಿಕಾರಿಗಳಲ್ಲಿ ಒಬ್ಬರಿದ್ದರೂ, ಸಂಘವು ತನ್ನ ಪ್ರಥಮ ಪ್ರಕಟನೆಯಾದ 'ಉತ್ತರರಾಮಚರಿತ' ನಾಟಕವನ್ನು ಅವರಿಗೇನೆ ಅರ್ಪಿಸುವಷ್ಟು, ಮನ್ನಣೆಯ ಸ್ಥಾನವನ್ನು ಅವರು ಹೊಂದಿದ್ದರು.

ಅವರದು ಸುಸಂಸ್ಕೃತವಾದ ಬದುಕು. ಅವರ ವ್ಯಾಸಂಗ ನಿಷ್ಠೆ, ಪ್ರಗತಿಪರ ಮನೋಭಾವ, ಶಿಕ್ಷಣ ವಿಷಯದಲ್ಲಿ ಕಳಕಳಿ, ಗೌರವಾನ್ವಿತವಾದ ಅಂಶಗಳಾಗಿವೆ. ಶಾಮರಾವ ಸುಧಾರಣಾವಾದಿಯಾಗಿದ್ದರೂ ಸನಾತನ ಮಾರ್ಗದ ಒಳ್ಳೆಯ ಅಂಶಗಳನ್ನು ಬಿಟ್ಟುಗೊಡದ ಸಮನ್ವಯಕಾರರಾಗಿದ್ದರು. ಸಮಾಜ ಸುಧಾರಣೆಯ ದೃಷ್ಟಿಯಿಂದಲೇ ಕನ್ನಡದಲ್ಲಿ ಲೇಖನಿಯನ್ನು ಕೈಗೆತ್ತಿಕೊಂಡರು. ಸೋದರಳಿಯನಾದ ನಾರಾಯಣ ಗಣೇಶ ಚಂದಾವರಕರರು ವಿದೇಶಕ್ಕೆ ಹೋದ ಸಂದರ್ಭದಲ್ಲಿ ಕೇಳಿಬಂದ ಟೀಕೆ, ಬಹಿಷ್ಕಾರಗಳಿಂದಾಗಿ 'ಸಮುದ್ರ ಪರ್ಯಟನ'ವು ಹೊರಬಂದಿತು. 'ವಿಧವಾ ಪುನರ್ವಿವಾಹ'ದ ಕುರಿತ ಪುಸ್ತಕದ ಹಿನೆಲೆಯೂ ಇಂಥದೇ ಆಗಿದೆ. ಅವರ ಇನ್ನೊಂದು ಮಹತ್ವದ ಕೃತಿಯೆಂದರೆ 'ವಿಶ್ವಗುಣಾದರ್ಶ'ದ ಅನುವಾದ.

ಶಾಮರಾವ ವಿಠ್ಠಲ ಕೈಕಿಣಿಯವರ ಕೊನೆಗಾಲದ ಬರಹವಾದ 'ಪರಾಶರೀಯ ಧರ್ಮಶಾಸ್ತ್ರ'ದಲ್ಲಿ ಅವರ ವೈದುಷ್ಯದ ಪರಾಕಾಷ್ಠೆಯಿದೆ. ರಾಯಲ್ ಏಶಿಯಾಟಿಕ್ ಸೊಸೈಟಿಯ ಮುಂಬಯಿ ಶಾಖೆಗೆ ಶ್ರುತಪಡಿಸಲಾದ ಈ ವಿಸ್ತೃತ ಲೇಖವು ಅವರ ಮರಣಾನಂತರ ಪ್ರಕಟವಾಯಿತು (J BBRAS, vol.22, 1908, pp. 324–378). ಲೇಖನದ ಅರ್ಧ ಭಾಗವು ಹಿಂದೂ ಧರ್ಮಶಾಸ್ತ್ರದ ಕುರಿತು ಇದೆ. ಇನ್ನರ್ಧ ಭಾಗದಲ್ಲಿ ಪರಾಶರನ ವಿಚಾರ ಮತ್ತು ವ್ಯಾಖ್ಯಾನಕಾರ ಮಾಧವಾಚಾರ್ಯ (ವಿದ್ಯಾರಣ್ಯ) ರ ವಿಚಾರ ಬಂದಿದೆ. ಲೇಖನದ ಉದ್ದಕ್ಕೂ ಕೈಕಿಣಿಯವರ ಸ್ವತಂತ್ರ ವಿಚಾರಸರಣಿಗೆ ನಿದರ್ಶನಗಳಿವೆ. ಆಗಿನ ಕಾಲದ ಉದ್ದಾಮ ಪಂಡಿತರಾದ ಆರ್.ಜಿ. ಭಾಂಡಾರಕರರ ಕೆಲ ಅಭಿಪ್ರಾಯಗಳನ್ನು ನಿರ್ಭೀತವಾಗಿ ಖಂಡಿಸಿದ್ದಾಗಿದೆ. ಬೌದ್ಧಧರ್ಮವು ಇಳಿಮುಖವಾದಾಗ (ಕ್ರಿ. ಶ. ೨೫೦-೫೦೦) ಸ್ಮೃತಿಗಳು ಹುಟ್ಟಿದುವೆಂದು ಭಾಂಡಾರಕರರು

ಹೇಳಿದ್ದನ್ನು ಶಾಮರಾವ ಕೈಕಿಣಿಯವರು 'ಇದು ಸಂಕುಚಿತ ಭೂಮಿಕೆ; ಬುದ್ಧನಿಗಿಂತ ಮುಂಚೆಯೇ ಶ್ರುತಿ ಸ್ಮೃತಿ ಪ್ರಣೀತವಾದ ವೈದಿಕ ಧರ್ಮ ನೆಲೆಗೊಂಡಿತ್ತು' ಎಂದು ಮುಂತಾಗಿ ಪ್ರತಿಪಾದಿಸಿದ್ದಾರೆ. ಭಾಂಡಾರಕರರು ಹೇಳಿದ ಮನುಸ್ಮೃತಿಯ ಕಾಲವನ್ನೂ ಅವರು ಒಪ್ಪಿಲ್ಲ.

ವಿದ್ಯಾರಣ್ಯರ ಬಗ್ಗೆಯೂ ಇದೇ ಬಗೆಯ ಖಂಡತುಂಡ ಅಭಿಪ್ರಾಯ ವ್ಯಕ್ತವಾಗಿದೆ. 'What is most strange is that he has recognised Puranik texts as authorities superior to the precepts of the Smrities' ಎಂದು ಅವರು ಒಂದೆಡೆ ಉದ್ಗಾರವೆತ್ತಿದ್ದಾರೆ. ಮಾಧವಾಚಾರ್ಯರ ಜೀವನ ಚರಿತ್ರೆಯನ್ನು ಹೇಳುವ ಪ್ರಸಂಗದಲ್ಲಿ 'ವಿಜಯನಗರ ರಾಜ್ಯಸ್ಥಾಪನೆಗೆ ವಿದ್ಯಾತೀರ್ಥರೆಂಬುವರು ಕಾರಣರು; ವಿದ್ಯಾರಣ್ಯರಲ್ಲ. ಆ ರಾಜ್ಯದಲ್ಲಿ ಮಾಧವಾಚಾರ್ಯರು ಮಂತ್ರಿಯಾಗಿದ್ದು ತಮ್ಮ ವೃದ್ಧಾಪ್ಯದಲ್ಲಿ, ಶೃಂಗೇರಿಯ ಪೀಠಾಧಿಪತಿಗಳಾದಾಗ ಅವರಿಗೆ ವಿದ್ಯಾರಣ್ಯ ಎಂಬ ಹೆಸರು ಬಂದಿತು' ಎಂದು ಸಯುಕ್ತಿಕವಾಗಿ ಮಂಡಿಸಿದ್ದಾರೆ.*

ಮುಂಬಯಿಯ ಕನ್ನಡ ಲೇಖಕರಲ್ಲಿ **ಹಟ್ಟಿಯಂಗಡಿ ನಾರಾಯಣರಾಯರಿಗೆ** ವಿಶಿಷ್ಟ ಸ್ಥಾನವಿದೆ (೧೮೬೩-೧೯೨೧). ಮದ್ರಾಸದಲ್ಲಿ ಶಿಕ್ಷಕನಾಗಿ, ವಕೀಲನಾಗಿ ಹತ್ತು ವರುಷ ಕಳೆದ ಮೇಲೆ ಅವರು ಮುಂಬಯಿಗೆ ಬಂದುದ್ದು (೧೯೦೨). ಅಲ್ಲಿ ಪತ್ರಿಕೋದ್ಯಮಿಯಾಗಿದ್ದ ಅವರ (ಇಂಗ್ಲಿಷ್) ಬರವಣಿಗೆಯು, ೨೦ನೆಯ ಶತಮಾನದ ಆರಂಭದ ಕಾಲಕ್ಕೆ ಸೇರಿದುದು. ಹೊಸಗನ್ನಡ ಕವಿತೆಯನ್ನು ಪ್ರತಿಷ್ಠಿಸಿದವರಲ್ಲಿ ಒಬ್ಬರಾದ ನಾರಾಯಣರಾಯರು ಕೆಲವು ಸಾಹಿತ್ಯಿಕ ಪ್ರಬಂಧಗಳನ್ನೂ ಬರೆದಿದ್ದಾರೆ. ಜೊತೆಗೆ ಇಂಗ್ಲಿಷ್-ಕನ್ನಡ ಶಬ್ದಕೋಶವನ್ನು ತಯಾರಿಸುವುದರಲ್ಲಿ ತೊಡಗಿದ್ದರು. ಕೊಂಕಣಿ ಸಾಹಿತ್ಯಕ್ಕೂ ಅವರಿಂದ ಸೇವೆ ಸಂದಿದೆ.+

---

* ಇದೇ ಅಭಿಪ್ರಾಯವನ್ನು ಫಾದರ್ ಹೆರಾಸ್ ತನ್ನ Foundations of Vijayanagara Empire ಎಂಬ ಗ್ರಂಥದಲ್ಲಿ ಬೇರೆ ಆಧಾರ ಕೊಟ್ಟು ವಿವರಿಸಿದ್ದನ್ನು ನೆನೆಯಬಹುದು.

\+ ಕನ್ನಡಸಾಹಿತ್ಯ ಅಕಾಡೆಮಿಯು ೧೯೯೪ರಲ್ಲಿ 'ಹಟ್ಟಿಯಂಗಡಿ ನಾರಾಯಣರಾಯ ಸಾಹಿತ್ಯ ವಾಚಿಕೆ' ಎಂಬ ಸಂಕಲನವನ್ನು ಹೊರತಂದಿದ್ದು, ಅದರಲ್ಲಿ ಅವರ ಎಲ್ಲ ಲೇಖನಗಳೂ ಅಡಕವಾಗಿವೆ. (ಸಂಪಾದಕರು ಶ್ರೀ. ಹಾ.)

## ೯೩ ಮುಂಬಯಿ ಕರ್ನಾಟಕದವರು

### ೯೩೧ ಹಿನ್ನೆಲೆ

ವಿಜಯನಗರದ ಆಸರೆ ತಪ್ಪಿದ ಮೇಲೆ ಮುಂಬಯಿ ಕರ್ನಾಟಕದಲ್ಲಿ ಕನ್ನಡ ರಸವಾಹಿನಿಯು ಬತ್ತುತ್ತ ನಡೆಯಿತಷ್ಟೆ. ಕ್ರಿ.ಶ. ೧೮೧೮ರಂದು ಪೇಶ್ವೆಯರ ಅಸ್ತಿತ್ವ ಅಳಿದ ಮೇಲೆಯೂ ಈ ಕನ್ನಡ ಪ್ರದೇಶದಲ್ಲಿ ನೆಲೆಗೊಳಿಸಿದ್ದ ಮರಾಠೀ ಭಾಷೆಯ ಅವ್ಯಾಹತವಾದ ಬಳಕೆಗೆ ಯಾವ ಚ್ಯುತಿಯೂ ಉಂಟಾಗಲಿಲ್ಲ. ಮೇಲಾಗಿ ಈ ಭಾಗವು ರಾಜಧಾನಿಯಾದ ಮುಂಬಯಿಯಿಂದ ದೂರವಿದ್ದುದರಿಂದಲೂ ಬ್ರಿಟಿಶರು ಕನ್ನಡ ಭಾಷಾಭಿವೃದ್ಧಿಯ ದೃಷ್ಟಿಯಿಂದ ಗಮನ ಕೊಟ್ಟಿರಲಿಲ್ಲ.

ಕ್ರಿ.ಶ. ೧೮೩೫ರಷ್ಟು ಹಿಂದೆಯೇ, 'ಇದು ಕನ್ನಡ ಪ್ರದೇಶ; ಮರಾಠಿಯು ಇಲ್ಲಿಯ ತಾಯ್ನುಡಿಯಲ್ಲ' ಎಂದು ಸರಕಾರವು ನಿರ್ಣಯಕ್ಕೆ ಬಂದಿದ್ದರೂ ಆ ದಿಶೆಯಲ್ಲಿ ಸರಕಾರೀ ಪ್ರಯತಗಳು ನಡೆದುದು ೧೮೬೫ರ ಅನಂತರವೇ. ಆದರೇನು, ದೇವರು ವರವಿತ್ತರೂ ಪೂಜಾರಿಯು ಕೊಡನೆಂಬಂತೆ ಇಲ್ಲಿದ್ದ ಮರಾಠೀ ಅಧಿಕಾರಿಗಳು ಮತ್ತು ಮರಾಠೀ ಪ್ರೇಮೀ ಕನ್ನಡಿಗರು ಅದಕ್ಕೆ ಇಂಬುಗೊಡಲಿಲ್ಲ.

ಹೊಸಗನ್ನಡ ಸಾಹಿತ್ಯೋದಯಕ್ಕೆ ಇತರ ಸ್ಥಳಗಳಲ್ಲಿ ಮಿಶನರಿ ಕಾರ್ಯ, ರಾಜರ ಆಸ್ಥಾನ ಮೊದಲಾದವುಗಳು ಪ್ರೇರಣೆ ಇತ್ತಿದ್ದರೆ ಮುಂಬಯಿ ಕರ್ನಾಟಕದಲ್ಲಿ ಹೊಸ ಶಿಕ್ಷಣವೇ ಅಂಥ ಪ್ರೇರಣೆಯನ್ನು ನೀಡಿತು. ದೇಶೀಯರ ಮುದ್ರಣೋದ್ಯಮವು ಅದಕ್ಕೆ ಬೆನ್ನೆಲುಬಾಗಿ ನಿಂತಿತು. ಅಂತೂ ಮುಂಬಯಿ ಸರಕಾರದ ಶಿಕ್ಷಣ ಶಾಖೆಯು ಕುಂಟುತ್ತಲೇ ಆಗಲಿ ಕನ್ನಡದ ತೇರನ್ನು ಎಳೆಯಿತು.

ಬೇರೆ ಬೇರೆ ಊರುಗಳಲ್ಲಿ ಕನ್ನಡಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸುತ್ತ ಹೋಗುವುದೇ ಅಂದಿನ ಶಿಕ್ಷಣಾಧಿಕಾರಿಗಳ ಮೂಲೋದ್ದೇಶವಾಗಿದ್ದಿತಷ್ಟೆ. ಅದಕ್ಕಾಗಿ ಅಂಕಲಿಪಿಯಿಂದ ಮೊದಲ್ಗೊಂಡು ಪಠ್ಯ ಪುಸ್ತಕಗಳು ಬೇಕಾದುವು. ಆ ಹೊಣೆಯು ಶಿಕ್ಷಣ ಶಾಖೆಯದೇ. ಆದ್ದರಿಂದ ಅವುಗಳನ್ನು ಸಿದ್ಧಪಡಿಸುವುದಕ್ಕಾಗಿ 'ಕನ್ನಡ ಟ್ರಾನ್ಸಲೇಟರ್ ಎಕ್ಸಿಬಿಶನರ್'*[ಅ] ಕಚೇರಿಯು ಅಸ್ತಿತ್ವದಲ್ಲಿ ಬಂದಿತು. ಅದರಂತೆ ಕನ್ನಡದಲ್ಲಿ ಕಲಿಸುವ ಶಿಕ್ಷಕರ ಕೊರತೆಯೂ ಇದ್ದಿತಲ್ಲವೆ? ಆ ಕಾರಣದಿಂದ ಟ್ರೇನಿಂಗ್ ಕಾಲೇಜಿನ ಸ್ಥಾಪನೆಯಾಯಿತು. ಇವೆರಡೂ ಅಂಗಗಳನ್ನು ನೆಲೆಯೂರಿಸುವುದಕ್ಕಾಗಿ ಕನ್ನಡದಲ್ಲಿ ಕಳಕಳಿ ಇದ್ದ ಶಿಕ್ಷಣಾಧಿಕಾರಿಗಳ ಆವಶ್ಯಕತೆ ಹೆಚ್ಚಾಗಿ ಇದ್ದಿತು.

---

* ಈ 'ಎಕ್ಸಿಬಿಶನರ್' ಹುದ್ದೆಯ ಆಶಯವೇನೆಂಬುದು ಸ್ಪಷ್ಟವಾಗಿಲ್ಲ. ಪ್ರದರ್ಶಿಸಿ ಮಾರಾಟ ಮಾಡುವುದಾಗಿರಬೇಕು.

ಅಂಥ ಅಧಿಕಾರಿಗಳಲ್ಲಿ ಮೊತ್ತಮೊದಲಿನ ಹೆಸರು **ಡಬ್ಲ್ಯೂ. ಎ. ರಸೆಲ್**‌ನದು. 'ಇದು ಕನ್ನಡ ನೆಲ' ಎಂದು ತೋರಿಸಿಕೊಟ್ಟ ಮಹಾನುಭಾವನೀತ. ತನ್ನ ಕೈಕೆಳಗಿನ ಕಟ್ಟಾಳುಗಳನ್ನು ಕನ್ನಡದ ಕೃಷಿಯ ಆರಂಭದ ಕೆಲಸಗಳಲ್ಲಿ ತೊಡಗಿಸಿದನು. ಮುಂಬಯಿ ಸೆಕ್ರೆಟೇರಿಯೇಟ್‌ನಲ್ಲಿ ಮರಾಠಿಯದೇ ಮೇಲುಗೈ ಇದ್ದಾಗ, ಕನ್ನಡದ ಯಾವುದೇ ಕೆಲಸಕ್ಕಾಗಿ ಸರಕಾರದ ಒಪ್ಪಿಗೆಯನ್ನೂ ಹಣವನ್ನೂ ದೊರಕಿಸುವುದರಲ್ಲಿ ಬಹುವಾಗಿ ಶ್ರಮಿಸಿದನು.

ರಸೆಲ್ಲನ ಮೇಲ್ವಿಚಾರಣೆಯಲ್ಲಿ ಕನ್ನಡ ಶಾಲೆಗಳ ಸ್ಥಾಪನೆ ಮತ್ತು ಇನ್ಸ್‌ಪೆಕ್ಶನ್, ಕ್ರಮಿಕ ಪುಸ್ತಕಗಳ ಭಾಷಾಂತರ ಹಾಗೂ ಟ್ರೇನಿಂಗ್ ಕಾಲೇಜಿನಲ್ಲಿ ಅಧ್ಯಾಪನ–ಈ ರಂಗಗಳಲ್ಲಿ ಡೆಪ್ಯುಟಿ ಚೆನ್ನಬಸಪ್ಪ, ವೆಂಕಟ ರಂಗೋ ಕಟ್ಟಿ, ಗಂಗಾಧರ ಮಡಿವಾಳೇಶ್ವರ ತುರಮರಿ ಇವರು ಆರಂಭದಲ್ಲಿ ಮಾಡಿದ ಕಾರ್ಯವು ಮುಂದಣ ಸಾಹಿತ್ಯ ಕೃಷಿಗೆ ಪೋಷಕವಾಯಿತು.

ಮುಂಬಯಿ ಕರ್ನಾಟಕದಲ್ಲಿ ಕನ್ನಡ ಸಸಿಯ ನಿಜವಾದ ಪರಾಮರಿಕೆಯು **ಟ್ರೇನಿಂಗ್ ಕಾಲೇಜಿನ** ಆವಾರದಲ್ಲಿಯೇ ನಡೆಯಿತು. ಅಲ್ಲಿಯ ಅಧ್ಯಾಪಕರೂ, ಶಿಕ್ಷಕ ವಿದ್ಯಾರ್ಥಿಗಳೂ ಕನ್ನಡದ ಪ್ರೇಮವನ್ನು ಮೈಗೂಡಿಸಿಕೊಂಡರು. ಮುಂದಿನ ಗ್ರಂಥರಚನೆಗೆ ಅಣಿಯಾದರು. ಚೆನ್ನಬಸಪ್ಪನವರ ಅನಂತರ ಟ್ರೇನಿಂಗ್ ಕಾಲೇಜಿಗೆ ಮುಖ್ಯಸ್ಥರಾಗಿ ಬಂದ ಹುಯಿಲಗೋಳ ಭುಜಂಗರಾವ ಮತ್ತು ಅನಂತರದ ಪ್ರಿನ್ಸಿಪಾಲ್, ವೈಸ್ ಪ್ರಿನ್ಸಿಪಾಲ್, ಹಾಗೂ ಇತರ ಅಧ್ಯಾಪಕರೆಲ್ಲರೂ ಕನ್ನಡ ಭಾಷೆ ಸಾಹಿತ್ಯಗಳನ್ನು ಪೋಷಿಸಿಕೊಂಡು ಬಂದಿದ್ದಾರೆ. ಅವರಲ್ಲಿ ಅನೇಕರು ಸ್ವತಃ ಪುಸ್ತಕಗಳನ್ನು ರಚಿಸಿದ್ದಾರೆ. ಕಾಲೇಜಿನಲ್ಲಿ ಮೊದಲು ಕಾರಕೂನನಾಗಿದ್ದ ಗುರುಬಸಪ್ಪ ಫಕೀರಪ್ಪ ಹಳಕಟ್ಟಿ–ಇವನು ಸಹ ಕನ್ನಡ ಗ್ರಂಥರಚನೆಗೆ ಮನಸ್ಸುಗೊಟ್ಟನು. ಇತ್ತ ಶಿಕ್ಷಣ ಖಾತೆಯ ಡೆಪ್ಯುಟಿ ಮತ್ತು ಅಸಿಸ್ಟಂಟ್ ಇನಸ್ಪೆಕ್ಟರರು, ಚೆನ್ನಬಸಪ್ಪನು ಹಾಕಿಕೊಟ್ಟಿದ್ದ ಕನ್ನಡ ನಿಷ್ಠೆಯ ಹಾದಿಯಲ್ಲಿಯೇ ಮುನ್ನಡೆದಿದ್ದಾರೆ. ಅವರಲ್ಲಿ ರಾವಜೀ ಬಾಳಾಜೀ ಕರಂದೀಕರ, ಪಾಂ. ವೆಂ. ಚಿಂತಾಮಣಿ–ಪೇಟಕರ, ವಿನಾಯಕರಾವ ಜೋಶಿ ಮುಂತಾದ ಶೈಕ್ಷಣಿಕ ಅಧಿಕಾರಿಗಳ ಮನೆಮಾತು ಮರಾಠಿಯಾಗಿದ್ದರೂ ಕನ್ನಡದ ಬೆಳವಣಿಗೆಗಾಗಿ ಅವರು ಪರಿಶ್ರಮಿಸುವಂತಾದುದು ಗಮನಾರ್ಹವಾಗಿದೆ.

ಇತ್ತ ಸ್ಥಳೀಯ ಹೈಸ್ಕೂಲುಗಳಲ್ಲಿ ಶಿಕ್ಷಣವನ್ನು ಮುಗಿಸಿಕೊಂಡು ಮಧ್ಯಮ ವರ್ಗದ ಕನ್ನಡಿಗರು ಪುಣೆ, ಮುಂಬಯಿಗೆ ಹೋಗಿ ಕಾಲೇಜನ್ನು ಸೇರಿ ಪದವೀಧರರಾಗಿ ಬರತೊಡಗಿದ್ದರು. ಇವರೂ ಟ್ರೇನಿಂಗ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದವರೂ ಸೇರಿ ಧಾರವಾಡದಲ್ಲಿ ೧೮೯೦ರಲ್ಲಿ **ಕರ್ನಾಟಕ ವಿದ್ಯಾವರ್ಧಕ ಸಂಘವನ್ನು** ಸ್ಥಾಪಿಸಿದರು. ಕರ್ನಾಟಕದ ಸಾಂಸ್ಕೃತಿಕ ಇತಿಹಾಸವನ್ನು ಬರೆಯಬೇಕಾದ ಯಾವುದೇ ಸಂದರ್ಭವಿರಲಿ ಅದರಲ್ಲಿ ಈ ಸಂಘದ ಕಾರ್ಯವನ್ನು ಉಲ್ಲೇಖಿಸದೆ ಮುಂದುವರಿಯುವಂತಿಲ್ಲ.

ನಾಡಿನ ಅರುಣೋದಯ ಕಾಲದಲ್ಲಿ ಕನ್ನಡತನದ ಧ್ವಜವನ್ನು ಬಲವಾಗಿ ಎತ್ತಿಹಿಡಿದ ಸಂಸ್ಥೆಯಿದು.

ಇದೇ ಕಾಲಕ್ಕೆ ಮೈಸೂರು ಸಂಸ್ಥಾನದಲ್ಲಿ ಕನ್ನಡ ಭಾಷೆಯ ಅಭಿವೃದ್ಧಿ ಹಾಗೂ ಕನ್ನಡ ಗ್ರಂಥಗಳ ರಚನೆ ಸಾಕಷ್ಟು ನಡೆದಿದ್ದಿತೆಂಬುದನ್ನು ನೋಡಿದ್ದೇವೆ. ಕನ್ನಡದ ಅಭಿಮಾನಿಗಳು ಅಲ್ಲಿ ಬೇಕಾದಷ್ಟು ಜನರಿದ್ದರು. ಆದರೆ ಕೆ. ಕೃಷ್ಣಕುಮಾರರ ಮಾತಿನಲ್ಲಿ ಹೇಳುವುದಾದರೆ 'ಮೈಸೂರಿನಲ್ಲಿ ಕರ್ನಾಟಕತ್ವಕ್ಕೂ ಕನ್ನಡಕ್ಕೂ ಸಂಬಂಧವಿಲ್ಲವೆಂಬಂತೆ ಕನ್ನಡ ಸಾಹಿತ್ಯವು ಮಾತ್ರ ಬೆಳೆದುಕೊಳ್ಳುತ್ತಿತ್ತು-ಗಿಡದ ಮೇಲ್ಬೆಳಸಿನ ಹಾಗೆ. ಉತ್ತರ ಕರ್ನಾಟಕದಲ್ಲಿ ಕನ್ನಡವು ಕೇವಲ ಒಂದು ಮೇಲು ಹೊದಿಕೆಯ ಆವರಣದಂತೆ ಬೆಳೆದರೆ ಸಾಲುವಂತಿರಲಿಲ್ಲ. ಹಾಗೆ ಬೆಳೆಯುವುದು ಸಾಧ್ಯವೂ ಇರಲಿಲ್ಲ..... ಕನ್ನಡ ನುಡಿಯ ಹೆಚ್ಚಳ, ಬೆಳಿಗೆ, ಏಳಿಗೆಗಳು ಕೇವಲ ಒಂದು ಗುರಿ ಮಾತ್ರ ಆಗಿ ಉಳಿಯದೆ ಕರ್ನಾಟಕತ್ವದ ಜಾಗೃತಿಗೆ ಒಂದು ಸಾಧನವೂ ಆಗಬೇಕಾಗಿದ್ದಿತು.'[೧೦]

ಇತ್ತ ಇಲ್ಲಿಯ ಕನ್ನಡಿಗರು ಮರಾಠಿಯ ವಾತಾವರಣದಲ್ಲಿ ತಮ್ಮ ನಾಡಿನಲ್ಲಿಯೇ ಹೊರನಾಡಿನ ಕನ್ನಡಿಗರಂತೆ ಬಾಳಬೇಕಾದ ಪರಿಸ್ಥಿತಿ ಬಂದೊದಗಿದಾಗ, ಕನ್ನಡ ನುಡಿಯ ಬಗ್ಗೆ ಅವರಲ್ಲಿ ಅಭಿಮಾನವು ಜಾಗೃತವಾಯಿತು. ಸ್ವಜನರಲ್ಲಿಯೇ ಕನ್ನಡದ ಬಗ್ಗೆ ಉದಾಸೀನತೆ ಇರುವುದನ್ನು ಕಂಡು ಅವರಲ್ಲಿದ್ದ ಕೆಚ್ಚು ಸಿಡಿದೆದ್ದಿತು. ಜೊತೆಗೆ ಕೆಲವು ಬ್ರಿಟಿಶ್ ಅಧಿಕಾರಿಗಳ ಹಾಗೂ ಮಿಶನರಿಗಳ ಪ್ರಯತ್ನದ ಫಲವಾಗಿ ನಾಡು ಮತ್ತು ನುಡಿಯ ಪ್ರಾಚೀನತೆ ಹಾಗೂ ವಿಸ್ತಾರಗಳು ತಿಳಿಯ ಬಂದು, ಮುಂದಿನ ಕನ್ನಡದ ಕೈಂಕರ್ಯಕ್ಕೆ ಸ್ಥೈರ್ಯವನ್ನು ತಂದುಕೊಟ್ಟಿತು.

## ಕರ್ನಾಟಕ ವಿದ್ಯಾವರ್ಧಕ ಸಂಘ

ಯುದ್ಧರಂಗದಲ್ಲಿ ಸೋಲು ಉಂಟಾಗಿ ಬೆದರಿದ್ದ ಸೈನಿಕರಲ್ಲಿ ಯಾರೊಬ್ಬನು ಧೈರ್ಯದಿಂದ ಧ್ವಜವನ್ನು ಎತ್ತಿಹಿಡಿದಾಗ ಇತರರು ಅದನ್ನು ಸುತ್ತುವರಿದು ಪುನಃ ವೀರಾವೇಶವನ್ನು ಹೊಂದಿ ಯುದ್ಧಕ್ಕೆ ಅಣಿಯಾಗುವಂತೆ ಅಂದಿನ ಕನ್ನಡ ಲೇಖಕ, ಕಾರ್ಯಕರ್ತರ ಸ್ಥಿತಿಯಾಯಿತು. ಕರ್ನಾಟಕ ವಿದ್ಯಾವರ್ಧಕ ಸಂಘವೇ ಕನ್ನಡ ಧ್ವಜದ ಸ್ತಂಭವಾಯಿತು. ಕನ್ನಡಾಭಿಮಾನೀ ಲೇಖಕರು ಅದನ್ನು ಸುತ್ತುವರಿದರು. ಆ ಮೂಲಕ ಸಂಘಕ್ಕೂ ಬಲವನ್ನು ತಂದು ಕೊಟ್ಟರು.

ಸಂಘದ ಸ್ಥಾಪನೆಯ ವಿಚಾರವು ಮೊದಲಲ್ಲಿ **ರಾಮಚಂದ್ರ ಹಣಮಂತ ದೇಶಪಾಂಡೆ** ಇವರಲ್ಲಿ ಮೂಡಿತು (೧೮೮೭). ಮುಂದಿನ ಎರಡು ವರ್ಷ 'ಜೋಳಿಗೆ ಹಿಡಿದುಕೊಂಡು' ಅವರು ನಿಧಿಯನ್ನು ಸಂಗ್ರಹಿಸತೊಡಗಿದರು. ಸಂಘದ ಪ್ರಾರಂಭೋತ್ಸವದ ದಿನ ಮಾಡಿದ ಅವರ ಭಾಷಣದಲ್ಲಿಯ ಕೆಲವು ವಿಚಾರಗಳು ಸಂಘದ ಕಾರ್ಯೋದ್ದೇಶವನ್ನು ತಿಳಿಸುವಂತಿವೆ:

"ಹಿಂದೂಸ್ಥಾನದ ಎಲ್ಲ ಭಾಷೆಗಳಲ್ಲಿ ಕನ್ನಡವು ಹಳೆಯದಿರುತ್ತದೆ. ಕನ್ನಡ ಮಾತನಾಡುವ ಜನರ ಸಂಖ್ಯೆಯು ೧ ಕೋಟಿ ೧೦ ಲಕ್ಷ ಇರುತ್ತದೆ. ೭ನೆಯ ಶತಮಾನದಿಂದ ಈ ಭಾಷೆಯಲ್ಲಿ ಎಷ್ಟೋ ಹೆಸರಾದ ಕವಿಗಳು ಆಗಿಹೋದರು. ಅವರಿಂದ ದೊಡ್ಡ ದೊಡ್ಡ ಗ್ರಂಥಗಳು ರಚಿಸಲ್ಪಟ್ಟಿವೆ. ಆದರೂ ಅವುಗಳನ್ನು ಓದಬೇಕೆನ್ನುವ ಲವಲವಿಕೆಯು ಈಗಿನ ಕನ್ನಡಿಗರಲ್ಲಿ ತಕ್ಕಷ್ಟು ಇಲ್ಲ. ಇದರಿಂದ ಹೊಸ ಗ್ರಂಥಗಳಾಗುವುದು ಒತ್ತಟ್ಟಿಗೆ ಇರಲಿ! ಇದ್ದ ಹಳೆ ಗ್ರಂಥಗಳು ಕೂಡಾ ಮೂಲಿಗೆ ಬೀಳುತ್ತಲಿವೆ."[೧೧]

ಈ ಪ್ರಸಂಗದಲ್ಲಿ ಕನ್ನಡಿಗರ ಜನಸಂಖ್ಯೆಯನ್ನು ಹೇಳುವಾಗಿನ ಅಖಿಲ ಕರ್ನಾಟಕ ದೃಷ್ಟಿಯನ್ನು ಗಮನಿಸಬೇಕು. ಇಂಥ ಸಮಗ್ರ ಕರ್ನಾಟಕದ ಕಲ್ಪನೆಯು ಆ ಕಾಲಕ್ಕೆ ನಾಡಿನ ಕೆಳಗಿನ ಭಾಗಗಳಲ್ಲಿ ಕಂಡುಬಂದುದಿಲ್ಲ. ಸಂಘವು ಮೈಸೂರಿನೊಡನೆ ಮೊದಲಿನಿಂದಲೂ ನಿಕಟ ಸಂಪರ್ಕವನ್ನಿಟ್ಟು ಕೊಂಡಿದ್ದಿತು. ಕ್ರಿ.ಶ. ೧೮೯೫ರಲ್ಲಿ ನಡೆದ ನಾಲ್ಮಡಿ ಕೃಷ್ಣರಾಜರ ಪಟ್ಟಬಂಧೋತ್ಸವ ಸಮಾರಂಭಕ್ಕೆ ಸಂಘದ ಪ್ರತಿನಿಧಿಯನ್ನು ಕಳಿಸಲಾಗಿದ್ದಿತು. ಸಂಘದ ಆಮಂತ್ರಣದ ಮೇರೆಗೆ ಅದರ ೧೯೦೦ನೆಯ ವರ್ಷದ ವಾರ್ಷಿಕ ಸಭೆಗೆ ಮೈಸೂರು ಸರಕಾರವು ಎಂ. ಬಿ. ಶ್ರೀನಿವಾಸಯ್ಯಂಗಾರನನ್ನು ಕಳುಹಿಸಿದ್ದಿತು. ಇಂಥ ವಾರ್ಷಿಕ ಸಭೆಗಳ ಕಾಲಕ್ಕೆ ಹಾಗೂ ಸಾಹಿತ್ಯ ಸ್ಪರ್ಧೆಗಳನ್ನು ನಡೆಯಿಸುವುದಕ್ಕೆ ಮೈಸೂರ ಕಡೆಯ ವಿದ್ವಾಂಸರನ್ನು ಕರೆಯಿಸುವ ಪರಿಪಾಠವೇ ಇದ್ದಿತು.

ಕನ್ನಡದಲ್ಲಿ ಗ್ರಂಥರಚನೆ ಮತ್ತು ಕನ್ನಡದ ಪ್ರಸಾರ ಸಂಘದ ಮುಖ್ಯ ಧ್ಯೇಯವಾಗಿದ್ದಿತು. ಗ್ರಂಥಕರ್ತರಿಗೆ ಇನಾಮು ಕೊಡುವುದು, ಗ್ರಂಥಗಳನ್ನು ಮುದ್ರಿಸುವುದು, ಪತ್ರಿಕೆಯನ್ನು ಹೊರಡಿಸುವುದು, ಲೇಖನ ಭಾಷಣ ಸ್ಪರ್ಧೆಗಳನ್ನು ಏರ್ಪಡಿಸುವುದು ಹಾಗೂ ವಾಚನಾಲಯಗಳನ್ನು ಸ್ಥಾಪಿಸುವುದು-ಇವು ಆ ಧ್ಯೇಯದ ರೂಪರೇಷೆಗಳಾಗಿದ್ದುವು. ಕನ್ನಡ ಕಲಿಸುವ ಶಿಕ್ಷಕರಿಗೂ ಕೂಡ ತಾಯ್ನುಡಿಯಲ್ಲಿ ನಾಲ್ಕು ವಾಕ್ಯಗಳನ್ನು ಬರೆಯಲು ಬಾರದಿದ್ದ ಕಾಲವದು. ಆದಕಾರಣ ಪ್ರಬಂಧ ಲೇಖನ ಮತ್ತು ವಕ್ತೃತ್ವದ ಸ್ಪರ್ಧೆಗಳನ್ನು ನಡೆಯಿಸಿ, ತಾಯ್ನುಡಿಯಲ್ಲಿಯ ಅಭಿವ್ಯಕ್ತಿಗೆ ಪ್ರೋತ್ಸಾಹವೀಯುವುದು ಸಂಘದ ನಿಯಮಿತ ಕಾರ್ಯಕ್ರಮವೇ ಆಗಿದ್ದಿತು. ದಿ. ೯-೮-೧೮೯೧ರ ಕಾರ್ಯಕಾರೀ ಸಭೆಯ ಒಂದು ನಿರ್ಣಯದ ಪ್ರಕಾರ 'ಹೊಸ ಉಪಯುಕ್ತ ವಿಷಯದ' ಬಗ್ಗೆ ಪುಸ್ತಕ ಬರೆದವರಿಗೆ ೨೫೦ರಿಂದ ೩೦೦ ರೂ.ಗಳ ವರೆಗೆ ಎರಡು ಇನಾಮುಗಳನ್ನು ಸಾರಲಾಗಿದ್ದಿತು.

ಆಗಿನ ದಿನಗಳಲ್ಲಿ ಇದೊಂದು ದೊಡ್ಡ ಮೊತ್ತದ ಗೌರವಧನ್ನವೆನಬೇಕು. ಈ ಹಣ ಹೆಚ್ಚಾಗಿ ಬರುತ್ತಿದ್ದುದು ಶ್ರೀಸಾಮಾನ್ಯನಿಂದಲೇ. ಮರುವರ್ಷ (ದಿ. ೨೭-೯-೧೮೯೧) ಸೇರಿದ ಸಂಘದ ವಾರ್ಷಿಕ ಸಭೆಯಲ್ಲಿ ಈಯೊಂದು ಕಾರ್ಯಕಲಾಪವು ಜರುಗಿದುದನ್ನು ಗಮನಿಸಬೇಕು:

"ಕನ್ನಡದಲ್ಲಿ ಹೊಸ ಕಾದಂಬರಿಯನ್ನು, ಗಂಗಾಧರರಾಯ್ಯನವರ ಕಾದಂಬರಿಯಷ್ಟಾಗಲಿ* ಹೆಚ್ಚಾಗಲಿ ಯೆಲ್ಲಕ್ಕೂ ಉತ್ತಮವಾಗಿ ಬರಿದವನಿಗೆ ರಾ. ರಾ. ಶಾಂತವೀರಪ್ಪ ಮೆಣಸಿನಕಾಯಿ-ರೂ. ೧೦, ರಾ.ರಾ. ವಿರೂಪಾಕ್ಷಪ್ಪ ಹೂಲಿ-೧೦, ರಾ.ರಾ. ಶಿವನಪ್ಪ ದೇಸಾಯಿ-೧೦, ಈ ಪ್ರಕಾರ ಮೂವತ್ತು ರೂಪಾಯಿ ಇನಾಮು ಕೊಡುತ್ತೇವೆಂದು ಜಾಹೀರ ಮಾಡಿದ್ದನ್ನು ಸಭೆಯವರು ಆಭಾರಪೂರ್ವಕವಾಗಿ ಸ್ವೀಕಾರ ಮಾಡಿದರು". ಮುಂದೆ ೮-೧೦ ತಿಂಗಳಲ್ಲಿಯೆ 'ಸೂರ್ಯಕಾಂತ'ಎಂಬ ಹೆಸರಿನ ಸ್ವತಂತ್ರ ಕಾದಂಬರಿ ಹೊರಬಂದದ್ದು, ಸಂಘದ ಈ ಪ್ರೋತ್ಸಾಹದ ಫಲವೆನ್ನಬಹುದು.

ಗ್ರಂಥರಚನೆ, ಪ್ರಬಂಧಲೇಖನ ಮತ್ತು ಭಾಷಣ ಈ ರಂಗಗಳಲ್ಲಿಯ ಸಂಘದ ಕಾರ್ಯಕ್ರಮಗಳು ವಿಸ್ತಾರವನ್ನು ಪಡೆದುವೆಂಬುದು ೧೮೯೫ರ ಇನಾಮಿನ ಯಾದಿಯಿಂದ ಸ್ಪಷ್ಟವಾಗುತ್ತದೆ:

## ಗ್ರಂಥರಚನೆ

| ವಿಷಯ | ಹಣ ಕೊಟ್ಟವರು | ಮೊತ್ತ |
|---|---|---|
| ಸ್ತ್ರೀ ನೀತಿ-ಬೋಧಕವಾದ ೧೦೦ ಪದ್ಯಗಳ ರಚನೆ (ಯತಿಚ್ಛೇದ ಮಾಡದೆ) | ಸಂಘದಿಂದ | ರೂ. ೨೫ |
| ಸಾಯಣಾಚಾರ್ಯ ಚರಿತ್ರೆ | ರಾಘವೇಂದ್ರ ಗಂಗೊಳ್ಳಿ | ೧೫ |
| ಕನ್ನಡಿಗರಲ್ಲಿ ದೇಶಾಭಿಮಾನ, ಭಾಷಾಭಿಮಾನ ಪ್ರಬೋದಿಸುವಂಥ ೧೦೦ ಹಾಡುಗಳು | ರಾ. ಹ. ದೇಶಪಾಂಡೆ | ೨೫ |
| | ಲಿಖಿತ ಪರೀಕ್ಷೆ | |
| ಶಬ್ದಾನುಶಾಸನದ ಬಗ್ಗೆ ಪ್ರಬಂಧ | ಸಂಘದಿಂದ | ರೂ. ೩೦ |
| ಕುಮಾರವ್ಯಾಸನ ಉದ್ಯೋಗ ಪರ್ವ | ಕೇಶವರಾಜ ಚಿಟಗುಪ್ಪಿ | ೧೦ |
| ನಾಗವರ್ಮ ಕಾದಂಬರಿ | ಎಂ. ಶಾಮರಾವ (ಮೈಸೂರು) | ೧೦ |
| ಉತ್ತರರಾಮಚರಿತ್ರ ಮತ್ತು ಮಿತ್ರವಿಂದಾ ಗೋವಿಂದ ನಾಟಕ [ತುಲನೆ] | ಎಂ.ಬಿ. ಶ್ರೀನಿವಾಸಯ್ಯಂಗಾರ ಮತ್ತು ಸೆಟ್ಲೂರ ಅಡ್ವೋಕೇಟ | ೧೫ |
| | ಭಾಷಣ ಸ್ಪರ್ಧೆ | |
| ಷಡಕ್ಷರಿಯ ಕೃತಿಗಳು | ವೆಂ. ರಂ. ಕಟ್ಟಿ | ರೂ. ೧೫ |
| ಲೀಲಾವತೀ ಪ್ರಬಂಧದ ಮೊದಲೆರಡು ಅಧ್ಯಾಯಗಳ ಅರ್ಥ ವಿವರಣೆ | ಶಿರಸಪ್ಪ ಪ್ರಥಮಶೆಟ್ಟಿ | ೧೫ |

* [illegible] ಗಂ. [illegible] ಕಾದಂಬರಿಯು ಕನ್ನಡದ [illegible] ಶ್ರೇಷ್ಠವಾದ ಕೃತಿಗಳಲ್ಲೊಂದು.

| | | |
|---|---|---|
| ಪ್ರಾಚೀನ ಹಿಂದುಸ್ಥಾನ | ಶ್ರೀನಿವಾರ ದೇಸಾಯಿ | ೧೦ |
| ಕರ್ನಾಟಕಸ್ಥರಿಗೆ ಪರದೇಶ ಪ್ರವಾಸದಿಂದ ಆಗತಕ್ಕ ಲಾಭ | ಗುರಪ್ಪಶೆಟ್ಟಿ, ಧಾರವಾಡ | ರೂ. ೫ |
| ಸರಕಾರೀ ಉದ್ಯೋಗಗಳನ್ನು ಬಿಟ್ಟು ಬೇರೆ ಉದ್ಯೋಗಗಳ ವಿವರಣೆ | ಅಣ್ಣಾಜಿರಾವ ಸವದಿ, (ಅ ಮಾ ಟ್ರೇ ಕಾ. ಧಾರವಾಡ) | ೧೦ |
| ಅರ್ಥಶಾಸ್ತ್ರಭ್ಯಾಸದ ಪ್ರಯೋಜನ | ಸುಬ್ಬರಾವ ಫಡಣೀಸ, ವಕೀಲ | ೧೦ |
| ಮುಸ್ಲಿಂ ಮತ್ತು ಪೇಶ್ವೆ ರಾಜ್ಯಗಳಲ್ಲಿ ರೈತರ ಮೇಲೆ ಕರಭಾರ | ಹನುಮಂತರಾವ ಶಿರಹಟ್ಟಿ | ೫ |
| ಕನ್ನಡಿಗರಿಗೆ ಔದ್ಯೋಗಿಕ ಶಿಕ್ಷಣ ಮುನಿಸಿಪಾಲಿಟಿ ಸ್ಥಿತಿಗತಿ | ನಾ. ರಾ. ಕರಗುದರಿ, ಗುರುನಾಥ ಘಾಟಕ | ೧೦ |

'ಲೀಲಾವತಿ ಪ್ರಬಂಧ'ದಲ್ಲಿ ಹುಬ್ಬಳ್ಳಿಯ ಓರ್ವ ವ್ಯಾಪಾರಸ್ಥನ ಆಸಕ್ತಿ! 'ಪರದೇಶ ಪ್ರವಾಸದಿಂದ ಆಗತಕ್ಕ ಲಾಭದ ವಿಚಾರವಿದೆಯಲ್ಲದೆ ಹಾನಿಯದಲ್ಲ.' 'ಅರ್ಥಶಾಸ್ತ್ರ, ಔದ್ಯೋಗಿಕ ಶಿಕ್ಷಣ', 'ಮುನಿಸಿಪಾಲಿಟಿಯ ಆಗುಹೋಗುಗಳು', 'ಸರಕಾರೀ ನೌಕರಿಯೊಂದನ್ನೆ ನೆಚ್ಚಬಾರದೆಂಬ ಆಶಯ'– ಇವು ಕನ್ನಡ ಪ್ರಬಂಧ ಸ್ಪರ್ಧೆಯ ವಿಷಯಗಳು. ಇದೆಲ್ಲ ಕನ್ನಡಿಗರ ಸರ್ವಾಂಗೀಣ ಏಳಿಗೆಯನ್ನು ಗಮನದಲ್ಲಿ ಇಟ್ಟುಕೊಂಡದ್ದರ ಲಕ್ಷಣವಾಗಿದೆ; ಸಂಘವು ಈ ರೀತಿ ಪುರೋಗಾಮೀ ದೃಷ್ಟಿಯನ್ನಿರಿಸಿ ಕೊಂಡು ಮಂದಿರವನ್ನು ಕಟ್ಟುವ ಕಾರ್ಯದಲ್ಲಿ ಅದೆಂಥ ಸೂಕ್ಷ್ಮತರ ಕೆಲಸದಲ್ಲಿ ತೊಡಗಿದ್ದಿತೆನ್ನುವುದರ ಸ್ಪಷ್ಟ ನಿದರ್ಶನವಾಗಿದೆ.

ಸಂಘವು ನಿಯಮಿತವಾಗಿ ಕೈಕೊಂಡಿದ್ದ ಇನ್ನೊಂದು ಕಾರ್ಯಕ್ರಮವೆಂದರೆ 'ಕಾವ್ಯಪರೀಕ್ಷೆ'. ಪ್ರಾಚೀನ ಕಾವ್ಯಗಳ ಕೆಲವು ಭಾಗಗಳನ್ನು ಗೊತ್ತುಪಡಿಸಿ. ಅವುಗಳ ಅಭ್ಯಾಸ ಮಾಡಿದವರಿಗೆ ಪರೀಕ್ಷೆ ಇಡುವುದು; ಉತ್ತೀರ್ಣರಾದವರಿಗೆ ಇನಾಮು ಕೊಡುವುದು. ಈ ಪರೀಕ್ಷೆಗಳಿಗೆ ಪರೀಕ್ಷಕರಾಗಿ ಹೊರಗಿನ ವಿದ್ವಾಂಸರನ್ನು ಕರೆಯಿಸಲಾಗುತ್ತಿತ್ತು. ಅವರ 'ಹಾದಿಯ' ವೆಚ್ಚವನ್ನು ಕೊಡುವ ಪರಿಪಾಠವನ್ನು ಸಂಘವು ಹಾಕಿಕೊಂಡಿದ್ದಿತು.

ಇನ್ನು ಹೊಸ ಗ್ರಂಥ, ಭಾಷಣರೂಪೀ ಲೇಖನ ಮುಂತಾದವುಗಳ ಪ್ರಕಟನೆಯ ವ್ಯವಸ್ಥೆಯಾಗಬೇಕಲ್ಲ! ಸಂಘವು ಅದಕ್ಕಾಗಿ ೧೮೯೬ರಲ್ಲಿ 'ವಾಗ್ಭೂಷಣ' ಪತ್ರಿಕೆಯನ್ನು ಆರಂಭಿಸಿತು. ಅದರ ಮೂಲಕ ಮತ್ತು ಪ್ರತ್ಯೇಕ ಮುದ್ರಣದ ಮೂಲಕ ಪ್ರಸಾರ

ಕಾರ್ಯವು ಮುಂದುವರಿಯಿತು. ಸಂಘದ ನಿಯಮಿತ ಪ್ರಕಟನೆಗಳಲ್ಲದೆ, ವಾಗ್ಭೂಷಣ ಗ್ರಂಥಮಾಲೆಯಿಂದಲೂ ಪುಸ್ತಕಗಳು ಹೊರಬಂದವು. ಸಂಘದ ಮೊದಲ ಹತ್ತು ವರ್ಷಗಳಲ್ಲಿ (೧೮೯೧-೧೯೦೦)ಇಂಥ ೨೫ ಕೃತಿಗಳು ಬೆಳಕು ಕಂಡಿವೆ. ಅವುಗಳಲ್ಲಿ, ಮೇಲೆ ಹೇಳಿದ ಸೂರ್ಯಕಾಂತ (ಲ. ಭೀ. ಗದಗಕರ), ಪದ್ಮನಯನಾ (ಗಳಗನಾಥ) ಮತ್ತು ಕನ್ನಡ ಶೌರ್ಯಸಾಗರ (ಗೂಳಪ್ಪ ಅರಳಿ)-ಈ ಕೃತಿಗಳು ಸ್ವತಂತ್ರ ಕಾದಂಬರಿಗಳಾಗಿವೆ. ಮುಂಬಯಿ ಕರ್ನಾಟಕವಲ್ಲದೆ ಅನ್ಯ ಪ್ರದೇಶದ ಲೇಖಕರ ಕೃತಿಗಳನ್ನೂ ಸಂಘವು ಪ್ರಕಟಿಸಿದೆ. (ಉದಾಹರಣೆಗೆ ಬೆನಗಲ್ ರಾಮರಾವ, ಕುಂಡಲಗಿರಿಯಾಚಾರ್ಯ). ಸಂಘದ ಇನಾಮಿನ ಸುದ್ದಿಯು ದೂರದ ಊರುಗಳಲ್ಲಿಯ ಲೇಖಕರ ಲಕ್ಷ್ಯವನ್ನು ಸಹ ಸೆಳೆದಿದ್ದಿತು.

ಕರ್ನಾಟಕ ವಿದ್ಯಾವರ್ಧಕ ಸಂಘದ ಈ ಆರಂಭದ ಎತ್ತುಗಡೆಗಳ ಮಹತ್ವವನ್ನು ಶ್ರೀರಂಗರು ಈ ರೀತಿಯಾಗಿ ಎತ್ತಿ ಹೇಳಿದ್ದಾರೆ: 'ಕನ್ನಡಿಗರಿಂದಲೇ ಕನ್ನಡಕ್ಕೆ ಅನಾದರವಿದ್ದ ಕಾಲವದು. ಬೇರೆ ಬೇರೆ ಆಡಳಿತಗಳಿಗೊಳಪಟ್ಟು ಕನ್ನಡತನದ ಅರಿವು ಇಲ್ಲದ ಕಾಲವದು. ಅಂತಹ ಪರಿಸ್ಥಿತಿಯಲ್ಲಿ ಕನ್ನಡಕ್ಕೆ ಎಲ್ಲ ವಿಧವಾಗಿ ಪ್ರೋತ್ಸಾಹ ಕೊಟ್ಟು ಸಂಘವು ಕನ್ನಡ ನಾಡು-ನುಡಿಗಳ ರಕ್ಷಣೆ, ಪೋಷಣೆಗಳನ್ನು ಕೈಕೊಂಡದ್ದಲ್ಲದೆ ಅಖಿಲ-ಅದೇಕೆ?- ಅಖಂಡ ಕರ್ನಾಟಕತ್ವದ ಬೀಜವನ್ನು ಹರಗಿ ಕನ್ನಡಿಗರ ಹೃದಯದಲ್ಲಿ ಬಿತ್ತಿತು. (ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ, ಐವತ್ತು ವರುಷ ೧೯೪೧, ಪು.೧೪).

ಸಂಘವು ಒಮ್ಮೆಲೇ ಪ್ರವರ್ಧಮಾನ ಸ್ಥಿತಿಗೆ ಬರಲಿಲ್ಲ. ಕನ್ನಡಿಗರ ಅನಾಸ್ಥೆ, ಮರಾಠೀ ಪ್ರಾಬಲ್ಯ ಹಾಗೂ ಆರ್ಥಿಕ ಅನಾನುಕೂಲತೆಗಳು ಅದರ ಬೆಳವಣಿಗೆಗೆ ಆತಂಕವಾಗಿದ್ದವು. ಆದರೂ ಆರಂಭದ ಕಾರ್ಯಕರ್ತರು ಛಲದಿಂದ ಮತ್ತು ಅನೂನವಾದ ಕನ್ನಡ ನಿಷ್ಠೆಯಿಂದ ಅದನ್ನು ಮುನ್ನಡೆಸಿಕೊಂಡು ಬಂದರು.

ಮರಾಠಿಯ ಪ್ರಭಾವವನ್ನು ಪ್ರತಿಭಟಿಸುತ್ತ ಕನ್ನಡವು ಮೇಲೆದ್ದಿತಷ್ಟೆ. ಆದರೆ ಮಹಾರಾಷ್ಟ್ರೀಯರ ವಿವಿಧ ಚಟುವಟಿಕೆಗಳು ಕನ್ನಡಿಗರ ಕಾರ್ಯಕ್ಕೆ ಅಪ್ರತ್ಯಕ್ಷವಾಗಿ ಮಾರ್ಗದರ್ಶಿಯಾದುವು. ಮುಂಬಯಿ ಕರ್ನಾಟಕದವರು ಸಂಘ-ಸಂಸ್ಥೆಗಳನ್ನು ಕಟ್ಟುವ ಸಾಮಾಜಿಕ ಪ್ರಜ್ಞೆಯನ್ನು ಮಹಾರಾಷ್ಟ್ರದಿಂದಲೆ ಬೆಳೆಸಿಕೊಂಡು ಬಂದದ್ದಿದೆ. ಟಿಳಕರು ನಡೆಯಿಸುತ್ತಿದ್ದ ಗಣೇಶೋತ್ಸವವನ್ನು ಧಾರವಾಡದವರು ಆ ಕೂಡಲೆ, ೧೮೯೦ನೆಯ ದಶಕದಲ್ಲಿ ರೂಢಿಸಿದ್ದರಲ್ಲದೆ ಆಗ ಆಡಲಾಗುತ್ತಿದ್ದ ಚಿಕ್ಕ ನಾಟಕಗಳು ಪುಸ್ತಕರೂಪದಲ್ಲಿಯೂ ಬಂದಿವೆ. ಸಮಾಜ ಸುಧಾರಣೆಯ ಗಾಳಿಯಂತೂ ಮುಂಬಯಿ, ಪುಣೆಗಳಿಂದಲೇ ಇತ್ತ ಕಡೆಗೆ ಬೀಸತೊಡಗಿತು. ಕನ್ನಡದ ಶಿಕ್ಷಣಾಧಿಕಾರಿಗಳು, ಅಧ್ಯಾಪಕರು ಆ ನಗರಗಳಲ್ಲಿದ್ದು ಅಲ್ಲಿಯ ವಿವಿಧ ವಿದ್ಯಮಾನಗಳನ್ನು ಅರಿತವರಾಗಿ ಅವನು ತಾಯ್ನುಡಿಯಲ್ಲಿ ಆಚರಣೆಗೆ ತರಬಯಸಿದರು. ಶಾಂತಕಪಿಯಂಥವರು ಕನ್ನಡ ರಂಗಭೂಮಿಯ ಮೇಲೆ ಮರಾಠೀ

ನಾಟಕಗಳೇ ಹೆಚ್ಚಾಗಿ ಪ್ರದರ್ಶನವಾಗುತ್ತಿದ್ದುದನ್ನು ಕಂಡು, ಕರುಬಿ ಕನ್ನಡ ನಾಟಕಗಳನ್ನು ರಚಿಸಿದುದಿದೆ.

ಬೆಳಗಾಂವಿ, ಧಾರವಾಡ, ಸವಣೂರುಗಳಲ್ಲಿ ಕಾಣಿಸಿಕೊಂಡ ದೇಶೀಯರ ಮುದ್ರಣ ಕಾರ್ಯವು ಗ್ರಂಥ ರಚನೆಗೆ ಪೋಷಕವಾಯಿತು. ಆ ಉದ್ಯಮದಲ್ಲಿ ತೊಡಗಿದ್ದವರಲ್ಲಿ **ಅನಾಡ ಚನವೀರಪ್ಪ**ನ ಹೆಸರು ಎದ್ದು ಕಾಣುವಂತಹದು. ಅವನು ಧಾರವಾಡದ ಕಲ್ಲಚ್ಚಿನ ಮುದ್ರಣಾಲಯದಲ್ಲಿ ಮೊದಲಿಗೆ ನಾಲ್ಕೈದು ರೂ. ಸಂಬಳದ ಮೇಲಿದ್ದನು. ಯಮನೂರು, ಉಳವಿ ಮುಂತಾದ ಜಾತ್ರೆಗಳ ಕಾಲಕ್ಕೆ ಹೋಗಿ, ಪಂಚಾಂಗ ಮತ್ತಿತರ ಚಿಕ್ಕ ಹೊತ್ತಗೆಗಳ ಮಾರಾಟ ಮಾಡುತ್ತಿದ್ದನು.[೧೨] ಈ ರೀತಿಯ ಅನುಭವ ಪಡೆದ ಮೇಲೆ ೧೮೮೫ರ ಸುಮಾರಿಗೆ 'ಕರ್ನಾಟಕ ಬುಕ್ ಡಿಪೊ' ಪ್ರೆಸ್ಸನ್ನು ಸ್ಥಾಪಿಸಿದನು. ಅದುವರೆಗೆ ಈ ಭಾಗದಲ್ಲಿ ಕಲ್ಲಚ್ಚೇ ಮುಖ್ಯ ಸಾಧನವಿದ್ದಾಗ ಚನವೀರಪ್ಪನು ಅದೇ ಸ್ಥಾಪಿತವಾಗಿದ್ದ 'ಸದರ್ನ ಮರಾಠಾ ರೇಲ್ವೆಯ ಇಂಗ್ಲಿಷ್ ಮುದ್ರಣಾಲಯದ ಕಸಬುದಾರರ ನೆರವನ್ನು ಪಡೆದು ಮೊಳೆಗಳಿಂದ ಕನ್ನಡ ಮುದ್ರಣವನ್ನು ಕೈಕೊಂಡನು. 'ಕರ್ನಾಟಕ ವೃತ್ತ'ವೆಂಬ ವಾರಪತ್ರಿಕೆಯನ್ನು ಸ್ಥಾಪಿಸಿ ಅನೇಕ ವರ್ಷ ನಡೆಸಿಕೊಂಡು ಬಂದನು. ಹೀಗೆ ನಿಯಮಿತ ಗ್ರಂಥ ವ್ಯವಸಾಯಿಯಾಗಿದ್ದು ಅನೇಕ ಲೇಖಕರಿಗೆ ಹಣವನ್ನು ಕೊಡುತ್ತ ಅವರ ಬರವಣಿಗೆಗೆ ಪ್ರೋತ್ಸಾಹವಿತ್ತಿದ್ದಾನೆ. ಅವನು ಸಂಪಾದಿಸಿದ ಕೆಲವು ಪದ್ಯ ಪುಸ್ತಕಗಳು ಮತ್ತು ಲಾವಣಿಗಳು ಸಹ ದೊರೆಯುತ್ತವೆ. ಇವನ ಸಮಕಾಲೀನರಾದ ಕಲ್ಯಾಣಪ್ಪ ಮಾದನಶೆಟ್ಟಿ, ವಿಭೂತಿ ಹುಚ್ಚಯ್ಯ, ಗುರುರಾವ ಮಮದಾಪುರ ಇವರು ಸಹ ಪುಸ್ತಕೋದ್ಯಮದಲ್ಲಿಯೇ ಜೀವನವನ್ನು ಕಳೆದವರು.

ಇದಿಷ್ಟು ಹಿನ್ನೆಲೆಯಲ್ಲಿ ಮುಂಬಯಿ ಕರ್ನಾಟಕದ ಅಂದಿನ ಪ್ರಮುಖ ಲೇಖಕರ ಸಾಹಿತ್ತಿಕ ಕಾರ್ಯವನ್ನು ಪರಿಶೀಲಿಸಬೇಕಾಗಿದೆ.

### ೯೩೨ ಟ್ರೇನಿಂಗ್ ಕಾಲೇಜಿನ ಶಿಕ್ಷಕರು

ಎರಡು ದಶಕಗಳ ಕಾಲ 'ಡೆಪ್ಯುಟಿ' ಶಿಕ್ಷಣಾಧಿಕಾರಿಯಾಗಿ ಶಿಕ್ಷಣ ಕ್ಷೇತ್ರದಲ್ಲಿ ವಿಶೇಷ ಸಾಧನೆಗೈದ **ಚೆನಬಸಪ್ಪ**ನವರಲ್ಲಿ ಎದ್ದು ತೋರುವ ಗುಣಗಳೆಂದರೆ ಕೆಚ್ಚೆದೆ ಮತ್ತು ಕನ್ನಡ ನಿಷ್ಠೆ. ಇಂಗ್ಲಿಷ್ ವಿದ್ಯಾಭ್ಯಾಸಕ್ಕೆಂದು ಕೇವಲ ಮೂರು ರೂ. ಹಣ ಹಿಡಿದುಕೊಂಡು ಧಾರವಾಡದಿಂದ ಪುಣೆಗೆ ಕಲಿಯ ಹೊರಟದ್ದು ಸಾಹಸದ ಮಾತೇ ಸೈ. ತನ್ನ ಮೇಧಾವಿತನದಿಂದ ಎಂಜಿನಿಯರಿಂಗ್ ಪರೀಕ್ಷೆಯಲ್ಲಿ ಮೇಲಿನ ಸ್ಥಾನವನ್ನು ಪಡೆದು ಅದೇ ಕಾಲೇಜಿನಲ್ಲಿ ಅಧ್ಯಾಪಕರಾದರು. ಚುರುಕು ಬುದ್ಧಿಯ ಚೆನಬಸಪ್ಪ ಪುಣೆಯಲ್ಲಿಯ ಸಾಮಾಜಿಕ, ಸಾಂಸ್ಕೃತಿಕ, ವಾತಾವರಣದಿಂದ ಸ್ಫೂರ್ತಿ ಪಡೆದ ಕನ್ನಡಿಗರಲ್ಲಿ ಮೊದಲಿಗರಾಗಿ ಧಾರವಾಡಕ್ಕೆ ಹಿಂತಿರುಗಿದರು.

'ಡಿಪ್ಪಿ'ಯಾಗಿ ಚೆನಬಸಪ್ಪ ಪ್ರಾಥಮಿಕ ಶಾಲೆಗಳು, ಶಿಕ್ಷಕರು, ಟ್ರೇನಿಂಗ್ ಕಾಲೇಜ್, ಪಠ್ಯಪುಸ್ತಕ ರಚನೆ, ಮುದ್ರಣ ಮುಂತಾದ್ದರಲ್ಲಿ ಕನ್ನಡದ ಅಸ್ತಿವಾರವನ್ನು ಭದ್ರಪಡಿಸಿದ ಮಹಾನುಭಾವರು. ಮುಖ್ಯತಃ ಕನ್ನಡವೆಂದರೆ ಸಂಪೂರ್ಣ ಅಸಡ್ಡೆಯಿದ್ದ ಕಾಲದಲ್ಲಿ ತನ್ನ ಸಂಪರ್ಕಕ್ಕೆ ಬಂದವರೆಲ್ಲರಿಗೂ ಕನ್ನಡ ದೀಕ್ಷೆಯನ್ನು ಕೊಟ್ಟಿದ್ದುದು ಅವರ ಹೆಚ್ಚುಗಾರಿಕೆಯಾಗಿದೆ. ಅವರು ಹೋದ ಹೋದಲ್ಲಿ ಕನ್ನಡ ಭಾಷೆಯ ಮತ್ತು ಕರ್ನಾಟಕದ ವಿಷಯವಾಗಿ ಜನರಿಗೆ ತಿಳಿಸಿಹೇಳುವ ಯಾವ ಸಂಧಿಯನ್ನೂ ಕಳೆದುಕೊಳ್ಳುತ್ತಿದ್ದಿಲ್ಲ.[೧೩]

ಚೆನಬಸಪ್ಪನವರ ಮೆಚ್ಚಿನ ವಿಷಯವೆಂದರೆ ಗಣಿತ. ಮಕ್ಕಳಿಗಾಗಿ ಅವರು ಬರೆದ ಲೆಕ್ಕದ ಪುಸ್ತಕಗಳು ಅನೇಕ ವರ್ಷಗಳ ವರೆಗೆ ಪಠ್ಯಗಳಾಗಿದ್ದವು. ಶೇಕ್ಸ್‌ಪಿಯರನನ್ನು ಕನ್ನಡದ ಮನೆಗೆ ಮೊತ್ತಮೊದಲು ಅವರೇ ಕರೆತಂದುದು. Comedy of Errors ಮತ್ತು Macbeth ಇವುಗಳ ಕನ್ನಡ ಕಥಾರೂಪಗಳು ೧೮೭೧ರಷ್ಟು ಹಿಂದೆಯೇ ಪ್ರಕಟವಾಗಿವೆ. ಅವರೇ ಬರೆದ ಗ್ರಂಥಗಳಿಗಿಂತ ಇತರರು ಬರೆಯುವುದಕ್ಕೆ ಅವರು ಕೊಟ್ಟ ಪ್ರೋತ್ಸಾಹ ಮತ್ತು ನೆರವು ಹೇರಳವಾದದ್ದು. ಅಂಥ ಕೆಲವು ಲೇಖಕರು ತಮ್ಮ ಕೃತಿಯನ್ನು ಅವರಿಗೆ ಅರ್ಪಣ ಮಾಡಿದ್ದಾರೆ.

**ಗಂಗಾಧರ ಮಡಿವಾಳೇಶ್ವರ ತುರಮರಿ**ಯವರ ಪ್ರಾಥಮಿಕ ಶಿಕ್ಷಣವು ಮರಾಠಿಯಲ್ಲಿ ಆಗಿದ್ದರೂ ಅಥಣಿಯ ಮಡಿವಾಳ ಸ್ವಾಮಿಗಳಲ್ಲಿ ಕನ್ನಡ, ಸಂಸ್ಕೃತಗಳ ಅಭ್ಯಾಸ ಮಾಡಿ, ಆಗಿನ ಪ್ರಮುಖ ಕನ್ನಡ ವಿದ್ವಾಂಸನೆನಿಸಿದರು. ಶಿಕ್ಷಕ ವೃತ್ತಿಯಲ್ಲಿಯೇ ಅವರ ಜೀವನದ ಬಹು ಕಾಲ ಕಳೆಯಿತು (೧೮೪೮–೧೮೭೭). ಕ್ರಿ. ಶ. ೧೮೫೩ರಲ್ಲಿ ಬಂಕಾಪುರದ ಶಾಲೆಯಲ್ಲಿ ಹತ್ತು ರೂಪಾಯಿ ಸಂಬಳದ ಮೇಲೆ ಇದ್ದುದಾಗಿ ಸರಕಾರೀ ದಾಖಲೆಯೊಂದರಲ್ಲಿ ಉಕ್ತವಾಗಿದೆ. ಮುಂದೆ ಹನುಗುಂದ ಮುಂತಾದ ಊರುಗಳಲ್ಲಿ ಮುಖ್ಯಾಧ್ಯಾಪಕರಾಗಿದ್ದರು. ಸ್ವಪ್ರಯತ್ನದಿಂದ ಇಂಗ್ಲಿಷ್ ಭಾಷೆಯನ್ನೂ ಕಲಿತರು. ಪರಿಣಾಮವಾಗಿ ಸರಕಾರೀ ಭಾಷಾಂತರಕಾರರೆಂದು ನೇಮಕವಾದರು (೧೮೬೫). ಆಗ ಮೇಲ್ಮಟ್ಟದ ಹಲವು ಪಠ್ಯಪುಸ್ತಕಗಳು ಹೊರಬಂದವು. ಅವರ ಯೋಗ್ಯತೆ, ಅನುಭವಗಳನ್ನು ಗುರುತಿಸಿ ೧೮೭೦ರ ಸುಮಾರಿಗೆ ಟ್ರೇನಿಂಗ್ ಕಾಲೇಜದ ಉಪ-ಮುಖ್ಯಾಧ್ಯಾಪಕರನ್ನಾಗಿ ಮಾಡಲಾಯಿತು.

ಕನ್ನಡ ಕೋಶವೊಂದನ್ನು ಸಿದ್ಧಪಡಿಸಲು ಸರಕಾರವು ಇವರನ್ನು ಗೊತ್ತುಮಾಡಿ ಅದಕ್ಕಾಗಿ ನಾಲ್ಕು ಸಾವಿರ ರೂಪಾಯಿಯ ಸಹಾಯ ಧನವನ್ನು ಮಂಜೂರು ಮಾಡಿತು.[೧೪] ಅದುವೆ 'ಶಬ್ದ ಮಂಜರಿ' (೧೮೭೬).* ಹಳಗನ್ನಡ ಶಬ್ದಗಳ ಅರ್ಥಕ್ಕೆ ಅದು ಒಂದು ಪ್ರಮಾಣ ಕೃತಿ ಎನಿಸಿದೆ. 'ಕನ್ನಡ ಕವಿತಾ ಸಂಗ್ರಹ'ಕ್ಕೂ ಅವರು ವಿಶೇಷ ಪರಿಶ್ರಮ

---

* ಈ 'ಶಬ್ದಮಂಜರಿ'ಯನ್ನು ಕನ್ನಡಪುಸ್ತಕ ಪ್ರಾಧಿಕಾರದವರು ಮರುಮುದ್ರಣ ಮಾಡಿದ್ದಾರೆ (೧೯೯೯).

ಪಡಬೇಕಾಗಿ ಬಂದಿತು. ಇಪ್ಪತ್ತು ಕವಿಗಳ ಸುಮಾರು ೭೦ ಕಾವ್ಯ ಭಾಗಗಳನ್ನು ಆಯ್ದುಕೊಟ್ಟಿರುವುದಾಗಿ ಹೇಳಿದ್ದಾರೆ. ಹಳಗನ್ನಡದ ಹಸ್ತಪ್ರತಿಗಳನ್ನು ಹುಡುಕಿಕೊಂಡು ಹೋಗಿ, ಆ ಕವಿಗಳ ಚರಿತ್ರೆಯನ್ನು ಸೇರಿಸಿ ವಿವರವಾದ ಟಿಪ್ಪಣಿಗಳೊಡನೆ ಅದನ್ನು ಸಿದ್ಧಪಡಿಸುವಲ್ಲಿ ಹಲವಾರು ವರ್ಷಗಳೇ ಬೇಕಾದವು (೧೮೬೩-೭೨). ಈ ಕವಿತಾ ಸಂಗ್ರಹದಲ್ಲಿಯ ಅರ್ಧ ಭಾಗವನ್ನು ಷಡಕ್ಷರಿಯೇ ಆಕ್ರಮಿಸಿದ್ದಾನೆ. ಅವನ 'ರಾಜಶೇಖರ ವಿಳಾಸ'ದ ಎರಡು ಆಶ್ವಾಸನಗಳಿಗೆ ಟೀಕೆಗಳನ್ನು ಬರೆದು ಪ್ರತ್ಯೇಕವಾಗಿ ಪ್ರಕಟಿಸಿದ್ದರಲ್ಲಿಯೂ ಷಡಕ್ಷರಿಯು ತುರಮರಿಯವರ ನೆಚ್ಚಿನ ಕವಿಯೆಂಬುದು ವ್ಯಕ್ತವಾಗುತ್ತದೆ. ಹೊಸಗನ್ನಡದಲ್ಲಿ ತುರಮರಿಯವರ ಹೆಸರು ಶಾಶ್ವತವಾಗಿ ಉಳಿಯುವುದಕ್ಕೆ ಕಾರಣ- ಅವರ '**ಬಾಣ ಕಾದಂಬರಿ**'ಯ ಅನುವಾದ. ಇದು ಮುಂಬಯಿ ಕರ್ನಾಟಕದಲ್ಲಿ ಹೊಸಗನ್ನಡ ಗದ್ಯವು ನೆಲೆಗೊಳ್ಳತೊಡಗಿದುದರ ಸ್ಪಷ್ಟ ನಿದರ್ಶನವಾಗಿದೆ. ಅವರ 'ಕನ್ನಡ ಕವಿತಾ ಪದ್ಧತಿ'ಯು ಛಂದಶ್ಶಾಸ್ತ್ರವನ್ನು ವಿವರಿಸುತ್ತದೆ.

ಇವರ ಸಮಕಾಲೀನರೂ ದೊಡ್ಡ ಪಂಡಿತರೂ ಆದ **ಶಾಂತವೀರ ರಾಚಿದೇವ ಕಿತ್ತೂರ** (೧೮೨೦-೧೮೮೫), ಕಿತ್ತೂರ ಸಂಸ್ಥಾನಿಕರು ನಡೆಸುತ್ತಿದ್ದ ಸಂಸ್ಕೃತ ಪಾಠಶಾಲೆಯಲ್ಲಿ ಕಲಿತರು. ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಮೈಸೂರಿಗೆ ಹೋಗಿದ್ದುದಾಗಿ ತಿಳಿಯುತ್ತದೆ. ಬೆಳಗಾಂವಿಯ ಸರ್ದಾರ್ ಹೈಸ್ಕೂಲಿನಲ್ಲಿ(೧೮೬೧-) ಅವರು ಕೆಲವು ಕಾಲ ಶಿಕ್ಷಕರಾಗಿ ಕೆಲಸ ಮಾಡಿದ ಮೇಲೆ ಟ್ರೈನಿಂಗ್ ಕಾಲೇಜಿಗೆ ಅವರ ವರ್ಗವಾಯಿತು. ಅವರ ಕನ್ನಡ ವಿದ್ವತ್ತಿನ ಉಪಯೋಗವು ಶಿಕ್ಷಕರಿಗೆ ದೊರೆಯಲೆಂಬ ಆಶಯದಿಂದ, ಚೆನಬಸಪ್ಪನವರೇ ಅಲ್ಲಿಗೆ ಅವರನ್ನು ಕರೆಯಿಸಿದ್ದರು. ತುರಮರಿ, ಅನ್ನದಾನೀಶ್ವರ ಅರಳೆಲೆಮಠ ಮತ್ತು ಕಿತ್ತೂರ-ಈ ಮೂವರೂ ಒಟ್ಟಾಗಿ ಕನ್ನಡ ಸಾಹಿತ್ಯ ಸೇವೆಯಲ್ಲಿ ನಿರತರಾಗಿದ್ದರೆಂದು ಹೇಳಲಾಗುತ್ತದೆ.[೧೫]

ಲಭ್ಯವಿರುವ ಇವರ ಇನ್ನೊಂದು ಕೃತಿಯೆಂದರೆ 'ರಾಜಶೇಖರ ವಿಳಾಸ'ದ ೨ನೆಯ ಆಶ್ವಾಸದ ಟೀಕೆ. 'ಶಾಂತವೀರ ಛಂದಸ್ಸು' ಎಂಬುದನ್ನು ಬರೆದದ್ದಾಗಿ ಮೇಲಿನ ಟೀಕಾಗ್ರಂಥದ ಕೊನೆಯ ಪದ್ಯಗಳಿಂದ ತಿಳಿಯುತ್ತದೆ. ತಮ್ಮ ವಿದ್ವತ್ತು ಮತ್ತು ಸಜ್ಜನಿಕೆಗಳಿಂದ ಸಮಕಾಲೀನರಲ್ಲಿ ಶಾಂತವೀರರು ಆದರಣೀಯರಾಗಿದ್ದರು. ಕೆಲವು ಉದಯೋನ್ಮುಖ ಶಿಷ್ಯರನ್ನು ಹೊಂದಿದ್ದು ಅವರಲ್ಲಿ ಕನ್ನಡ ಪ್ರೇಮವನ್ನು ತುಂಬಿದರು. ಕಿಟೆಲ್, ವುರ್ಥ್ ಮುಂತಾದವರಿಗೆ ಕನ್ನಡದ ಅಭ್ಯಾಸ ಮಾಡಿಸಿದುದು ಇವರ ಹೆಚ್ಚುಗಾರಿಕೆಯಾಗಿದೆ. ಫ್ಲೀಟರೊಡನೆಯೂ ಇವರಿಗೆ ನಿಕಟ ಸಂಪರ್ಕವಿದ್ದಿತು. ಹಳಗನ್ನಡ, ಕಾವ್ಯ ಮತ್ತು ಶಾಸನಗಳನ್ನು ಓದುವಲ್ಲಿ, ಪದ್ಯಗಳಿಗೆ ಅರ್ಥ ಹೇಳುವಲ್ಲಿ ಶಾಂತವೀರ ಕಿತ್ತೂರರು ಸಹಾಯ ಸಲ್ಲಿಸಿರಬೇಕು. ಇತ್ತ ಫ್ಲೀಟರ ಸದ್ಗುಣಗಳಿಗೆ ಮೆಚ್ಚಿ 'ನವರತ್ನಹಾರ'ವೆಂಬ ಪದ್ಯಮಾಲಿಕೆಯಲ್ಲಿ ಅವರ ಪ್ರಶಂಸೆ ಮಾಡಿದುದೂ ಕಂಡುಬರುತ್ತದೆ.

ತಂದೆಯ ಬಳಿಯಲ್ಲಿ ಸಂಸ್ಕೃತ ಕಾವ್ಯಶಾಸ್ತ್ರಗಳನ್ನೂ ಆಯುರ್ವೇದವನ್ನೂ ಕಲಿತಿದ್ದ **ವೆಂಕಟ ರಂಗೋ ಕಟ್ಟಿಯವರು** ವೈದಿಕನಾಗಿ ಚರಿತಾರ್ಥವನ್ನು ಸಾಗಿಸುತ್ತಿದ್ದರೇನೊ. ಪ್ರಾಥಮಿಕ ಮಟ್ಟದ ಮರಾಠೀ ಶಿಕ್ಷಣವನ್ನು ಮುಗಿಸಿ ಪುಣೆಯನ್ನು ಸೇರಿದರು. ಅಲ್ಲಿ ಕಲಿಯುತ್ತಿದ್ದಾಗ ಮತ್ತು ಅದೇ ಊರಿನ ಟ್ರೇನಿಂಗ್ ಕಾಲೇಜಿನಲ್ಲಿ ಅಧ್ಯಾಪಕನಿದ್ದಾಗ ಚಿಪಳೂಣಕರ ಮುಂತಾದ ಮಹಾರಾಷ್ಟ್ರೀಯರ ಸಾಮಾಜಿಕ ಚಟುವಟಿಕೆಗಳ ಕ್ರಮವನ್ನು ಮೆಚ್ಚಿದ್ದರು. 'ಮತ ಧರ್ಮದ ಸ್ಥಾನವನ್ನು ಕ್ರಮವಾಗಿ ಭಾಷಾ ಸಂಸ್ಕೃತಿಯು ಪಡೆಯುತ್ತಿರುವುದನ್ನು' ಕಂಡುಕೊಂಡರು.[೧೬] ಅಂಥ ಪರಿಸರದಲ್ಲಿ ಅವರು ಪೂರ್ಣವಾಗಿ ಮಹಾರಾಷ್ಟ್ರೀಯರಾಗಿದ್ದರೆನ್ನಬಹುದು. ಆ ಅವಧಿಯಲ್ಲಿ 'ಅರೇಬಿಯನ್ ನೈಟ್ಸ್'ನ್ನು ಕನ್ನಡದಲ್ಲಿ ಅನುವಾದಿಸಿದ್ದರೂ ಮರಾಠಿಯಲ್ಲಿದ್ದಷ್ಟು ವಾಚನ-ಲೇಖನ ಪರಿಣತಿಯು ಕನ್ನಡದಲ್ಲಿ ಅವರಿಗಿರಲಿಲ್ಲ.

ಲೇಖನ ಕಾರ್ಯದಲ್ಲಿ ಸಹಜ ಪ್ರವೃತ್ತಿಯುಳ್ಳವರಾಗಿದ್ದ ಕಟ್ಟಿಯವರು ಸುರುವಿಗೆ ಮರಾಠಿಯಲ್ಲಿಯೇ ಬರೆಯಲುಪಕ್ರಮಿಸಿದರು! ಮೊದಲ ಪುಸ್ತಕ 'ನರತನು'— ಆರೋಗ್ಯಶಾಸ್ತ್ರಕ್ಕೆ ಸಂಬಂಧಪಟ್ಟುದು (೧೮೭೧). ಇದು ಪೇಂಟರ್ ಎಂಬವನು ಬರೆದಿದ್ದ ಇಂಗ್ಲಿಷ್ ಕೃತಿಯ ರೂಪಾಂತರ. ಆಮೇಲಿನದು 'ಸವಾಯಿ ಮಾಧವರಾಯಾಂಚೇ ನಾಟಕ'. 'This is a much better performance than his translation indicating that the author had some literary talent' ಎಂಬುದಾಗಿ ಮರಾಠೀ ಸಾಹಿತ್ಯ ಚರಿತ್ರೆಯ ಪುಸ್ತಕವೊಂದರಲ್ಲಿ ಅಭಿಪ್ರಾಯಪಡಲಾಗಿದೆ.[೧೭] ಪೇಶ್ವೆಯರ ಇತಿಹಾಸದಲ್ಲಿ ಅನೇಕ ಪ್ರಸಂಗಗಳು ಮನೋವೇಧಕವಾಗಿದ್ದು, ಈ ನಾಟಕವು ಅಂಥದೊಂದು ಘಟನೆಯನ್ನು ಆಧರಿಸಿದೆ. ಹೀಗಿದ್ದು ಸ್ವತಂತ್ರವಾದ ಐತಿಹಾಸಿಕ ನಾಟಕವನ್ನೂ, ಕನ್ನಡಿಗನೊಬ್ಬನು ಮಹಾರಾಷ್ಟ್ರೀಯರಿಗಾಗಿ ಬರೆದುದಾಗಿದೆ. ಈ ನಾಟಕ ರಚನೆಯ ಮೂಲ ಪ್ರೇರಣೆ ಇಂತಿದ್ದಿತು:

'ನಾನು ಇಂಗ್ರೇಜಿಯಲ್ಲಿ ಆಗಲಿ ಅಥವಾ ಸಂಸ್ಕೃತದಲ್ಲಿಯಾಗಲಿ ನಾಟಕಗಳನ್ನು ಬಹಳಷ್ಟು ಓದಿಲ್ಲ. ಮರಾಠೀಯಲ್ಲಿ (ಸ್ವತಂತ್ರ) ಗ್ರಂಥವನ್ನು ರಚಿಸುವ ಯತ್ನವನ್ನು ಈ ಮೊದಲು ಎಂದೂ ಮಾಡಿಲ್ಲ. ಮರಾಠೀ ಭಾಷೆಯು ನನ್ನ ಮಾತೃಭಾಷೆಯೂ ಅಲ್ಲ. ಹೀಗಿದ್ದರೂ ನಾನು ಪ್ರಥಮದಲ್ಲಿಯೇ ಈ ನಾಟಕವನ್ನು ರಚಿಸುವ ಯತ್ನವನ್ನು ಮಾಡಿದುದು ಒಟ್ಟಿನಲ್ಲಿ ಅಪ್ರಯೋಜಕವೆನಿಸಬಹುದು. ಆದರೆ ನನ್ನ ಮನಸ್ಸಿನಲ್ಲಿ ಅಂಥ ಆಕಾಂಕ್ಷೆ ತಲೆದೋರಿತಾದ್ದರಿಂದ ನಾನು ಬರೆಯಲೇಬೇಕಾಯಿತು. ಆದರೆ ನನ್ನಲ್ಲಿ ಎಷ್ಟೋ ನ್ಯೂನತೆಗಳಿದ್ದರೂ ಈ ಗ್ರಂಥದಲ್ಲಿ ಅವು ಇರಬೇಕೆಂದೇನೂ ಇಲ್ಲ'.*

* ಮರಾಠಿಯಲ್ಲಿದ್ದುದರ ಅನುವಾದವಿದು.

ಕಟ್ಟಿಯವರು ನೆಪೋಲಿಯನ್ ಬೋನಾಪಾರ್ಟನ ಚರಿತ್ರೆಯನ್ನು ಮರಾಠಿಯಲ್ಲಿ ಬರೆದುದಾಗಿ ತಿಳಿಯುತ್ತದೆ. ಆದರೆ ಅದರ ಮುದ್ರಿತ ಪ್ರತಿ ಲಭ್ಯವಿಲ್ಲ. ಇತ್ತ ಮರಾಠಿಯಿಂದ ಕನ್ನಡಕ್ಕೆ ಹಲವು ಪಠ್ಯಪುಸ್ತಕಗಳನ್ನು ಅನುವಾದಿಸಿದ್ದಲ್ಲದೆ ವ್ಯಕ್ತಿತ್ವ ಕಲೆ ಮುಂತಾದ ಪುಸ್ತಕಗಳನ್ನೂ ಕನ್ನಡದಲ್ಲಿ ಇಳಿಸಿದ್ದಾರೆ. ತಾಯ್ನುಡಿಯ ಸಹಜ ಪ್ರೇಮವು ಅದೆಂತು ಸುಮ್ಮನುಳಿದೀತು? ಜೊತೆಗೆ ರಸೆಲ್ ಮತ್ತು ಚೆನಬಸಪ್ಪ ಅವರ ಪ್ರೋತ್ಸಾಹಗಳು ಅವರನ್ನು ಮುಂದೆ ಕನ್ನಡದ ಕಾರ್ಯಕ್ಕೆ ಸಜ್ಜುಗೊಳಿಸಿದವು.

ಕನ್ನಡ ಅಧ್ಯಾಪಕರ ಕೊರತೆ ಇದ್ದಾಗ, ಇವರ ಮನೆ ಮಾತು ಕನ್ನಡವೆಂಬುದೊಂದೆ ಕಾರಣದಿಂದ, ಪುಣೆಯಿಂದ ಹೊನ್ನಾವರದ ಇಂಗ್ಲಿಷ್ ಶಾಲೆಗೆ ವರ್ಗ ಮಾಡಲಾಯಿತು. ಕನ್ನಡ ಸಾಹಿತ್ಯದ ಅಭ್ಯಾಸವು ಆಗಿನಿಂದ ಮೊದಲಾಯಿತೆನ್ನಬಹುದು. ಮುಂದಿನ ೨೫ ವರ್ಷಗಳಲ್ಲಿ, ಟ್ರೇನಿಂಗ್ ಕಾಲೇಜಿನ ಅಧ್ಯಾಪಕರಾಗಿ, ಸರಕಾರೀ ಭಾಷಾಂತರಕಾರರಾಗಿ ಶಿಕ್ಷಣ ಖಾತೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದ್ದರು. ವಾಚನ, ವ್ಯಾಕರಣ, ಭೂಗೋಲ, ಆರೋಗ್ಯ, ವಿದ್ಯೆ, ಗಣಿತ ಇವೆಲ್ಲ ವಿಷಯಗಳ ಮೇಲೂ ಇವರು ಪಠ್ಯಪುಸ್ತಕಗಳನ್ನು ಬರೆದಿದ್ದಾರೆ. ಮುಂಬಯಿ ಕರ್ನಾಟಕದ ಆಗಿನ ಪಠ್ಯಗಳು ಹೆಚ್ಚಾಗಿ ಮರಾಠಿ, ಇಂಗ್ಲಿಷ್‌ನಿಂದ ಅನುವಾದಗೊಳ್ಳುತ್ತಿದ್ದಾಗ ವೆಂಕಟ ರಂಗೋ ಕಟ್ಟಿಯವರು ಅವುಗಳಲ್ಲಿ ಹೊಸ ವಿಷಯಗಳನ್ನು ಸೇರಿಸುವ ಸ್ವಾತಂತ್ರ್ಯ ವಹಿಸಿದರು. ಆ ಪ್ರದೇಶದ ಇತಿಹಾಸವನ್ನು ಕಲಿಸಬೇಕೆಂಬ ಶೈಕ್ಷಣಿಕ ನಿಯಮಾವಳಿ ಇದ್ದರೂ ಕನ್ನಡ ಸೀಮೆಗೆ ಅನ್ವಯಿಸುವ ಪ್ರತ್ಯೇಕ ಇತಿಹಾಸ ಪುಸ್ತಕವಿರಲಿಲ್ಲ. ಕಟ್ಟಿಯವರು ಕರ್ನಾಟಕದ ಇತಿಹಾಸವನ್ನು ಪ್ರಥಮತಃ ಬರೆದು ಕರ್ನಾಟಕತ್ವದ ಬೀಜವನ್ನು ಅಂದಿನ ಕನ್ನಡಿಗರಲ್ಲಿ ಊರಿದರು. ಈ ದಿಶೆಯಲ್ಲಿ ಹೊರಬಂದ ಅವರ ಇನ್ನೊಂದು ಕೃತಿ–'ಮುಂಬಯಿ ಕರ್ನಾಟಕದ ಗೆಝೇಟಿಯರ್'. ಇದು ಒಟ್ಟಿನಲ್ಲಿ ಸರಕಾರೀ ದಾಖಲೆಗಳ ಅನುವಾದವಾಗಿದ್ದರೂ ಆ ಪ್ರದೇಶವನ್ನು ಸಮಷ್ಟಿಯಾಗಿ ಕಣ್ಣ ಮುಂದೆ ಇರಿಸಿಕೊಂಡದ್ದಾಗಿದೆ. ಅಲ್ಲಲ್ಲಿ ಸ್ವಂತದ ವಿಚಾರಗಳನ್ನೂ ಸೇರಿಸಿದ್ದಾರೆ.

ವೆಂಕಟ ರಂಗೋ ಕಟ್ಟಿಯವರು ಕೈಗೊಂಡ ಪತ್ರಿಕಾ ವ್ಯವಸಾಯವು ಕನ್ನಡ ಸಾಹಿತ್ಯಕ್ಕೆ ಸಂದ ವಿಶೇಷ ಕಾಣಿಕೆ. ಶಿಕ್ಷಣದ ಮಹತ್ವವನರಿತಿದ್ದ ಅವರು ಕನ್ನಡ ಜನತೆಯ ಬೌದ್ಧಿಕ ವಿಕಾಸವಾಗಬೇಕು; ವಿಜ್ಞಾನ, ಇತಿಹಾಸ ಮುಂತಾದವುಗಳಲ್ಲಿಯ ಹೊಸ ಹೊಸ ವಿಚಾರಗಳನ್ನು ಅರಿಯಬೇಕು, ಎಂಬ ದೃಷ್ಟಿಯಿಂದ ಪತ್ರಿಕಾ ರಂಗಕ್ಕೆ ಇಳಿದರು. ಕ್ರಿ. ಶ. ೧೮೬೧ರಲ್ಲಿ ಆರಂಭವಾದ (ಕನ್ನಡ) 'ಜ್ಞಾನಬೋಧಕ' ಪತ್ರಿಕೆಯಲ್ಲಿ ಇವರ ಲೇಖನಗಳೇ ಹೆಚ್ಚಾಗಿ ಇದ್ದುವೆನ್ನಬಹುದು. ಶಿಕ್ಷಣ ಶಾಖೆಯ ಮುಖಪತ್ರದಂತಿದ್ದ 'ಕನ್ನಡಶಾಲಾಪತ್ರಕವು' ಸರಕಾರೀ ಪರಿಪತ್ರಗಳನ್ನೂ ವರ್ಗಾವರ್ಗಿಯದನೂ ಹೇಳುವುದಕ್ಕಷ್ಟೇ ಇದ್ದಾಗ, ಅದರಲ್ಲಿ ಬೇರೆ ಬೇರೆ ಲೇಖನಗಳನ್ನು ಸೇರಿಸುವಲ್ಲಿ ಅವರು ಮುಂದಾದರು.

ಅನಂತರ 'ಶೋಧಕ', 'ಲೋಕಶಿಕ್ಷಕ'ವೆಂಬ ಪತ್ರಿಕೆಗಳನ್ನು ತಾವೇ ಹೊರಡಿಸಿದರು. ಲೋಕಶಿಕ್ಷಣವೇ ಅವುಗಳ ಉದ್ದೇಶವಾಗಿದ್ದಿತು. ಮುಂದೆ 'ಕರ್ನಾಟಕ ಪತ್ರ' ಹಾಗೂ 'ಚಂದ್ರೋದಯ'ಇವುಗಳ ಹೊಣೆಯನ್ನು ಕೆಲಕಾಲ ವಹಿಸಿಕೊಂಡರು. ಧಾರವಾಡದ ಇನ್ನೊಂದು ಸುಪ್ರಸಿದ್ಧ ಪತ್ರಿಕೆಯಾಗಿದ್ದ 'ಕರ್ನಾಟಕ ವೃತ್ತ'ದೊಡನೆಯೂ ಅವರ ನಿಕಟ ಸಂಬಂಧವಿದ್ದಿತು. ಹೀಗೆ ಪತ್ರಿಕೆಗಳ ಶೈಕ್ಷಣಿಕ ಮಹತ್ವವನ್ನರಿತು ಕಾರ್ಯೋದ್ಯುಕ್ತರಾದ ಅವರಿಂದ ಮುಂಬಯಿ ಕರ್ನಾಟಕದಲ್ಲಿಯ ಆರಂಭದ ಪತ್ರಿಕಾರಂಗಕ್ಕೆ ಅನುಪಮ ಸೇವೆ ಸಂದಿದೆ.

ತಾನು ಶುದ್ಧ ವೈದಿಕ ಸಂಪ್ರದಾಯದವನಿದ್ದರೂ ಸಮಾಜ ಸುಧಾರಣೆಯು ವಿಶೇಷತಃ ಸ್ತ್ರೀಯರ ಅಭ್ಯುದಯವು ಕಟ್ಟಿಯವರ ಹೃದಯಸ್ಥ ವಿಷಯವಾಗಿದ್ದಿತು. ಸಮಾರಂಭವೊಂದರಲ್ಲಿ ಓರ್ವ ವಿಧವಾ ಬಾಲಿಕೆಯು ತಿರಸ್ಕೃತಳಾಗಿ ಅಳುತ್ತ ಕುಳಿತಿದ್ದ ಸನ್ನಿವೇಶವು ಅವರ ಮನಸ್ಸನ್ನು ವಿಶೇಷವಾಗಿ ಕದಡಿತಂತೆ. ಆಗ ಕಟ್ಟಿಯವರು ಬಾಲ ವೈಧವ್ಯ ಮತ್ತು ಕೇಶವಪನದ ವಿಚಾರವಾಗಿ ಧಾರವಾಡದ 'ಮಿತ್ರ ಸಮಾಜ'ದಲ್ಲಿ ಭಾಷಣ ಮಾಡಿದುದಲ್ಲದೆ 'ವಿಧವೆಯರ ಇತಿಹಾಸ'ವೆಂಬ ಪುಸ್ತಕವನ್ನು ಬರೆದರು. ಮರುವರ್ಷ 'ವಿಧವಾವಪನ ಅನಾಚಾರ ಮಂಡನ'ವೆಂಬ ಕೃತಿಯನ್ನು ಕನ್ನಡ, ಮರಾಠೀ–ಎರಡೂ ಭಾಷೆಗಳಲ್ಲಿ ಬರೆದು ತಮ್ಮ ವಿಚಾರಗಳನ್ನು ವ್ಯಾಪಕವಾಗಿ ವ್ಯಕ್ತಗೊಳಿಸಿದರು. ವಿಧವಾವಪನಕ್ಕೆ ಸಂಬಂಧಿಸಿದ ಯೋಗ್ಯವಾದ ಸ್ಮೃತಿಗಳ ಆಧಾರಗಳನ್ನು ತೋರಿಸಿದವರಿಗೆ ೫೦೦ ರೂ. ಗಳ ಎರಡು ಬಹುಮಾನಗಳನ್ನು ಸಾರಿದರು! ಸಮಾಜ ಸುಧಾರಣೆಯ ಈ ಅಂಶವು ಅವರಲ್ಲಿ ಇಷ್ಟರ ಮಟ್ಟಿಗೆ ತೀವ್ರವಾಗಿದ್ದಿತು. ಇದರಿಂದಾಗಿ ಅವರು ಗುರುಮಠದ ಕ್ಷೋಭೆಗೆ ಗುರಿಯಾಗಿ ಬಹಿರಂಗವಾಗಿ ಕ್ಷಮೆ ಯಾಚಿಸುವ ದುಃಸ್ಥಿತಿಯೊದಗಿತು. ಸಮಾಜ ಸುಧಾರಣೆಯ ದೃಷ್ಟಿಯಿಂದ ಇವರು ಬರೆದ 'ಆರು ಬೆರಳಿನ ಕುರುಹು' ಎಂಬ ನಾಟಕವೊಂದಿದೆ. ಇದನ್ನು ನಾಟಕವೆಂದು ಕರೆಯುವುದಕ್ಕಿಂತ ಸಾಮಾಜಿಕ ಸಮಸ್ಯೆಗಳ ಸಂಭಾಷಣಾ ರೂಪವೆನ್ನುವುದೇ ಸರಿಯಾದೀತು.

ವೆಂಕಟ ರಂಗೋ ಕಟ್ಟಿಯವರು ೧೮೯೦ರಲ್ಲಿ ಸೇವಾ ನಿವೃತ್ತರಾದರು. ಆದರೆ ಕನ್ನಡದ ಸೇವೆಯಿಂದ ಅಲ್ಲ. ಅದೇ ವರ್ಷ ಸ್ಥಾಪಿತವಾದ ವಿದ್ಯಾವರ್ಧಕ ಸಂಘದ ಚಟುವಟಿಕೆಗಳಲ್ಲಿ ವಿಶೇಷವಾಗಿ ಭಾಗವಹಿಸಿದರು. ಸುರುವಿಗೆ ಅದರ ಉಪಾಧ್ಯಕ್ಷರೂ, ೧೮೯೮–೯೯ರಲ್ಲಿ ಅಧ್ಯಕ್ಷರೂ ಆಗಿದ್ದರು. ನಿವೃತ್ತರಾದ ಮೇಲೂ ಗ್ರಂಥರಚನೆ, ಪತ್ರಿಕಾ ವ್ಯವಸಾಯಗಳು ಮುಂದುವರಿದುವು. 'ವಾಗ್ಭೂಷಣ'ದಲ್ಲಿ ಕೊಲ್ಹಾಪುರ ಛತ್ರಪತಿಯ ಇತಿಹಾಸದ ಬಗ್ಗೆ ಲೇಖನಾವಳಿ ಬಂದಿತು. ಮೇಲೆ ಹೇಳಿದ 'ಆರು ಬೆರಳಿನ ಕುರುಹು' ಇದೇ ಕಾಲದ ರಚನೆ.

ಕಟ್ಟಿಯವರ ಕನ್ನಡ ನಿಷ್ಠೆಯು ಆಗಿನ ಯಾವುದೇ ಕನ್ನಡ ಸಾಹಿತಿಗಿಂತ ಕಡಿಮೆಯೇನಲ್ಲ. ಆದರೂ ಅವರು ಮರಾಠೀ ಪಕ್ಷಪಾತಿಯೆಂಬ ಟೀಕೆಗೆ ಗುರಿಯಾಗ ಬೇಕಾಯಿತು. ಅವರ ಬೌದ್ಧಿಕ ವಿಕಾಸವು ಮರಾಠೀ ಸಾಹಿತ್ಯ ವಾಚನ ಹಾಗೂ ಮರಾಠಿಗರ ಪ್ರಗತಿಪರ ಸಾಮಾಜಿಕ ಚಟುವಟಿಕೆಗಳಿಂದ ಪ್ರೇರಿತವಾದದ್ದು. ಹೀಗಾಗಿ ಮರಾಠಿಯ ಬಗ್ಗೆ ಅವರಲ್ಲಿ ಆದರದ ಭಾವನೆ ಇದ್ದುದು ಸಹಜವೇ. ಆ ಭಾಷೆಯ ಮತ್ತು ಅದರ ಸಾಹಿತ್ಯದ ವ್ಯಾಸಂಗವು ಪ್ರಗತಿಪರರೆಲ್ಲರಿಗೂ ಅವಶ್ಯವೆಂದು ನಂಬಿದ್ದ ಅವರು ಕನ್ನಡ ಶಾಲೆಗಳಲ್ಲಿ ಮರಾಠಿಯನ್ನು ಕಲಿಸುವ ಪರಿಪಾಠವಿರಬೇಕೆಂಬ ಅಭಿಪ್ರಾಯದವರಾಗಿದ್ದರು. ಇದು ಮುಂಬಯಿ ಕರ್ನಾಟಕದ ಅಂದಿನ ಕನ್ನಡ ಮುಂದಾಳುಗಳಲ್ಲಿ ವಿರಸವನ್ನು ತಂದೊಡ್ಡಿತು.

ಕಟ್ಟಿಯವರ ಕನ್ನಡ ನಿಷ್ಠೆಯ ಬಗೆಯನ್ನು ತುಸು ವಿವರವಾಗಿ ಪರಿಶೀಲಿಸೋಣ. ಕನ್ನಡವನ್ನು ಅಶುದ್ಧವಾಗಿ ಅಥವಾ ಅರ್ಧಮರ್ಧವಾಗಿ ಮಾತನಾಡುವುದು ಅವರಿಗೆ ಸೇರುತ್ತಿದ್ದಿಲ್ಲ. ಅವರ ಮಾತಿನಲ್ಲಿಯೆ ಹೇಳುವುದಾದರೆ ಕನ್ನಡ ಅಭಿಮಾನಿಗಳೆಂದು ಎದೆಗೆ ಕೈ ಹಚ್ಚಿಕೊಳ್ಳುವವರು ಕನ್ನಡ ವಾಕ್ಯಗಳನ್ನು ಮರಾಠೀ ಶಬ್ದಗಳಿಂದ ಬರೆಯುವರು. ಮರಾಠೀ ಶಬ್ದಗಳನ್ನು ಎಗ್ಗಿಲ್ಲದೆ ಉಪಯೋಗಿಸುವರು. ಆದರೂ ತಾವು ಬರೆಯುವ ಭಾಷೆಯು ಅಚ್ಚಗನ್ನಡವೆಂದು ಅವರು ಅಭಿಮಾನ ವಹಿಸುವರು'.[೧೮] ಅವರ ದೃಷ್ಟಿಯಲ್ಲಿ ಕನ್ನಡದ ಅಭಿಮಾನವೆಂದರೆ ಮರಾಠಿಯ ದ್ವೇಷವಾಗಿದ್ದಿಲ್ಲ. ಇತ್ತ ಮರಾಠಿಗೆ ಹೋಲಿಸಿಕೊಂಡು ಕನ್ನಡದಲ್ಲೇನಿದೆ ಎಂಬ ಹೀನಾಯವನ್ನೂ ಅವರು ತಳೆದಿರಲಿಲ್ಲ. ಅಷ್ಟೇ ಅಲ್ಲ. ಕನ್ನಡಿಗರ ಸಾಧನೆಯು ಕೆಲವೊಂದು ರಂಗಗಳಲ್ಲಿ ಮಹಾರಾಷ್ಟ್ರೀಯರಿಗಿಂತಲೂ ಮಿಗಿಲು ಎಂದು ಹೇಳುವಷ್ಟು ಸ್ವಾಭಿಮಾನಿಯೂ ಆಗಿದ್ದರು.*

---

* 'ಶೋಧಕ' ಪತ್ರಿಕೆಯ ಪ್ರಥಮ ಸಂಪಾದಕೀಯದಲ್ಲಿ (೧೮೭೫) ಅವರು ಬರೆದ ಮಾತುಗಳು ಈ ಸಂದರ್ಭದಲ್ಲಿ ಗಮನಿಸುವಂತಿವೆ. ಅದು ಕಟ್ಟಿಯವರ ಕನ್ನಡ–ಮರಾಠಿ ನಿಲುಮೆಯನ್ನು ತಿಳಿಸುವುದರ ಜೊತೆಗೆ, ಅದರಿಂದ ಕರ್ನಾಟಕದ, ವಿಶೇಷತಃ ಮುಂಬಯಿ ಕರ್ನಾಟಕದ ಅಂದಿನ ಸ್ಥಿತಿಗತಿಯ ಮಾರ್ಮಿಕ ಚಿತ್ರಣವನ್ನೂ ಕೊಡುತ್ತದೆ :

'ಕೊಲ್ಲಾಪುರ, ಬೀದರ, ನೀಲಗಿರಿ, ಪಶ್ಚಿಮ ಸಮುದ್ರ ಈ ೪ ಮರ್ಯಾದೆಗಳ ಮಧ್ಯದಲ್ಲಿ ವಿಸ್ತಾರವಾಗಿ ಹಬ್ಬಿದ ಸೀಮೆಯು ಕರ್ನಾಟಕವೆಂದೆನಿಸಿಕೊಳ್ಳುತ್ತದೆ. . .ಈ ದೇಶದ ಕ್ಷೇತ್ರಫಲವು ಸು. ೬೬,೦೦೦ ಚೌಕು ಮೈಲು, ಜನಸಂಖ್ಯೆ ೭೭ ಲಕ್ಷ. ಆದರೆ ನಮ್ಮ ನೆರೆಯಲ್ಲಿದ್ದ ಮಹಾರಾಷ್ಟ್ರ ದೇಶವು ಇದಕ್ಕೂ ಚಿಕ್ಕದಿದ್ದಾಗ್ಯೂ ಇವೆರಡು ದೇಶಗಳ ಈಗಿನ ಸ್ಥಿತಿಗತಿಗಳನ್ನು ಸರಿನೋಡಲಾಗಿ ಅತಿ ಖೇದಕರವಾದ ವ್ಯತ್ಯಾಸವು ಕಂಡುಬರುತ್ತದೆ. ಮಹಾರಾಷ್ಟ್ರದಲ್ಲಿ ನಾಲ್ಕೈದು ಕಾಲೇಜುಗಳೂ ಬಹುಶಃ ಪ್ರತಿ ಜಿಲ್ಲೆಗೊಂದರಂತೆ ಹಾಯಸ್ಕೂಲುಗಳೂ, ೨೦೦೦ಕ್ಕಿಂತ ಹೆಚ್ಚು ಇತರ ಶಾಲೆಗಳೂ ಇರುತ್ತವೆ. ಕರ್ನಾಟಕದಲ್ಲಿ ಕಾಲೇಜುವೆಂಬ ಹೆಸರೇ ಗೊತ್ತಿಲ್ಲ. ಹಾಯಸ್ಕೂಲುಗಳು (ಮೈಸೂರು, ಮದ್ರಾಸುಗಳಿಗೆ ಶೇರಿದ ಭಾಗಗಳು ಸಹಿತ) ಐದಾರಕ್ಕಿಂತ ಹೆಚ್ಚಿಲ್ಲ. ಇತರ ಶಾಲೆಗಳು (ಪ್ರಾಥಮಿಕ)ಯೆಲ್ಲ ಕೂಡಿ ಆರೇಳುನೂರರೊಳಗೇ.

ಕ್ರಿ.ಶ. ೧೯೦೯ರಲ್ಲಿ ಮರಣ ಹೊಂದಿದ ಕಟ್ಟಿಯವರು ನಾಲ್ಕು ದಶಕಗಳ ವರೆಗೆ ಕನ್ನಡಕಾರ್ಯದಲ್ಲಿ ಅವ್ಯಾಹತವಾಗಿ ನಿರತರಾಗಿದ್ದರು. ಶಾಂತಕವಿಯೊಬ್ಬರನ್ನು ಬಿಟ್ಟರೆ, ಮುಂಬಯಿ ಕರ್ನಾಟಕದಲ್ಲಿ ಇವರಷ್ಟು ವ್ಯಾಪಕವಾಗಿ ಕನ್ನಡ ಗ್ರಂಥೋದ್ಯಮದಲ್ಲಿ ತೊಡಗಿದ ಸಮಕಾಲೀನರು ಇನ್ನಾರೂ ಇಲ್ಲ. ಜೊತೆಗೆ ಸ್ವತಂತ್ರ ವಿಚಾರ ಸರಣಿ ಮತ್ತು ಸಾಮಾಜಿಕ ಪ್ರಜ್ಞೆಗಳನ್ನು ಹೊಂದಿದ್ದ ಇವರು ಅರುಣೋದಯ ಕಾಲದ ಸಾಹಿತಿಗಳಲ್ಲಿ ಸ್ಮರಣೀಯರಾಗಿದ್ದಾರೆ.

### ೯.೩.೩ ನಾಟಕಕಾರರು

ಮುಂಬಯಿ ಕರ್ನಾಟಕದ ರಂಗಭೂಮಿಯು ಯಾವ ರಾಜಾಶ್ರಯವೂ ಇಲ್ಲದೆ ಬೆಳೆದು ಬಂದಿತು. ಅದೂ ಚಾಮರಾಜೇಂದ್ರ ನಾಟಕ ಸಭೆಯು ಸ್ಥಾಪಿತವಾಗುವ ಮೊದಲೇ. ಮರಾಠೀ ನಾಟಕಗಳ ಆಗಾಗಿನ ಪ್ರಯೋಗವೇ ಅದಕ್ಕೆ ಮುಖ್ಯ ಪ್ರೇರಣೆ. ಕನ್ನಡದಲ್ಲಿ ನಾಟಕಗಳಿಲ್ಲವಲ್ಲ-ಎಂಬ ಸಾತ್ವಿಕ ಛಲದಿಂದಲೂ ಕೆಲವರು ನಾಟಕಗಳನ್ನು ರಚಿಸುವುದಕ್ಕೆ ಮುಂಬಂದರು. ಆಗಿನ ಸಂಗೀತ ಪರಂಪರೆಯು ಅದಕ್ಕೆ ಪೋಷಕವಾಯಿತು. ಅಂಥವರಲ್ಲಿ ಚುರಮರಿ ಶೇಷಗಿರಿರಾಯರು ಮೊದಲಿಗರಾಗಿದ್ದಾರೆ.

---

ಮಹಾರಾಷ್ಟ್ರದಲ್ಲಿ ೩೦ಕ್ಕಿಂತ ಹೆಚ್ಚು ವರ್ತಮಾನ ಪತ್ರಗಳೂ ಸುಮಾರು ೨೦ ಮಾಸಿಕ ಪುಸ್ತಕಗಳೂ ಸದ್ಯಕ್ಕೆ ನಡೆಯುತ್ತಿವೆ. ಕರ್ನಾಟಕ ಭಾಷೆಯಲ್ಲಿ ಯರಡಕ್ಕಿಂತ ಹೆಚ್ಚು ವರ್ತಮಾನ ಪತ್ರಗಳಿಲ್ಲ. ಅವೂ ಬೆಂಗಳೂರು ಸೀಮೆಯ ಹೊರಗೆ ಯಾರಿಗೂ ಗೊತ್ತಿಲ್ಲ ಮಾಸಿಕ ಪುಸ್ತಕವೂ ಇರುತ್ತದೆಂದು ಆಸೆ ಮಾಡಲಿಕ್ಕೆ ಮಾತ್ರ ಒಂದುಂಟು, ಅದೂ ಹುಟ್ಟಿವೊಂದು ವರ್ಷವೂ ಪೂರ್ಣವಾಗಿರುವುದಿಲ್ಲ. ಈ ಮುಂತಾದ ಸಂಗತಿಗಳಿಂದ ಈ ಯೆರಡು ದೇಶ ನಿವಾಸಿಗಳ ಸಾಂಪ್ರತ ಸ್ಥಿತಿಯಲ್ಲಿ ತೋರಿಬರುವ ಮಹದಂತರವ ನೋಡಿ ಕೆಲ ಜನ ಕರ್ನಾಟಕರು ಬಹು ಖೇದಪಡುವುದನ್ನೂ, ಮಹಾರಾಷ್ಟ್ರರು ಹೆಮ್ಮೆಯಿಂದ ಅವರನ್ನು ಧಿಕ್ಕರಿಸುವುದನ್ನೂ ನಾವು ಆಗಾಗ್ಗೆ ನೋಡುತ್ತೇವೆ.

. . . .ಇದರಿಂದ ಕರ್ನಾಟಕರು ಮಂದಮತಿಗಳೆಂಬುದಾಗಿ ಸಿದ್ಧವಾಗಲರಿಯದು.. ಕರ್ನಾಟಕವಲ್ಲಿ ಇಂಗ್ಲಿಷ್ ವಿದ್ಯವನ್ನು ಪ್ರಸಾರವು ಕಡಿಮೆಯಾಗಿರುವುದು. ಈ ನ್ಯೂನತೆಯಲ್ಲಿ ಸಹ ಕರ್ನಾಟಕದ ಸಂತೋಷಪಡಿಸತಕ್ಕಂಥಾದ್ದೊಂದು ಸಂಗತಿಯೇನೆಂದರೆ ಅವರಲ್ಲಿ ಇಂಗ್ಲಿಷ ವಿದ್ಯದ ಪ್ರಸಾರವು ಕಡಿಮೆಯಾಗಿದ್ದ ಪ್ರಮಾಣದಂತೆಯೇ ಇಂಗ್ಲಿಷರ ದುರ್ವ್ಯಸನಗಳೂ ದುರಾಚಾರಗಳೂ ಕಡಿಮೆಯಾಗಿರುತ್ತವೆ.

ಆದರೆ ಸ್ವದೇಶದ ವಿದ್ಯಾಬುದ್ಧಿಗಳೆಲ್ಲಾ ಮಹಾರಾಷ್ಟ್ರರನ್ನು ಕರ್ನಾಟಕರನ್ನು ಯಮರು ಬದುರು ಕುಳ್ಳಿರಿಸಿ ವಿಚಾರಿಸಲಾಗಿ ಕರ್ನಾಟಕರ ಗೌರವವು ಕಂಡುಬರುತ್ತದೆ. . . .ಶ್ರೀಮಚ್ಛಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು, ವಿದ್ಯಾರಣ್ಯ ಭಟ್ಟಾಚಾರ್ಯರು, ಜೋಪದೇವ ಇತ್ಯಾದಿ ಮಹಾಮಹಾ ಪ್ರತಾಪಿಗಳೆಂದೆನಿಸಿಕೊಂಡ ಅನಿರ್ವಾಚ್ಯ ವಿದ್ವಾಂಸರು ಈ ಕರ್ನಾಟಕವಲ್ಲಿಯೆ ಹುಟ್ಟಿ ಬೆಳೆದರು. ಮಹಾರಾಷ್ಟ್ರದಲ್ಲಿ ಇವರ ಯೋಗ್ಯತೆಯ ಜನ ಬಹುತರವಾಗಿ ಯಾರೂ ಆಗಲಿಲ್ಲೆಂದು ಹೇಳಬಹುದು. . . ಪ್ರಕೃತಕ್ಕೆ ಸಹ ನ್ಯಾಯ, ವ್ಯಾಕರಣ, ವೇದಾಂತ, ಜ್ಯೋತಿಷ್ಯ, ಧರ್ಮಶಾಸ್ತ್ರ ಮುಂತಾದ ಶಾಸ್ತ್ರಗಳಲ್ಲಿ ಪಾರಂಗತರಾದ ಜನರು ಕರ್ನಾಟಕದಲ್ಲಿ ಹೊರಟಸ್ಪರ ಚತುರ್ಥಾಂಶ ಜನರು ಸಹ ಮಹಾರಾಷ್ಟ್ರಗಳಲ್ಲಿ ಹೊರಡರೆಂದು ಶೋಧಕರಿಗೆ ತಿಳಿದುಬರುವುದೆಂಬುದಕ್ಕೆ ಸಂದೇಹವಿಲ್ಲ. ಮೈಸೂರು, ಉಡುಪಿ, ಶೃಂಗೇರಿ, ಸ್ವಾದಿ, ಮಂತ್ರಾಲಯ, ಗದ್ವಾಲ, ಬಾಗಲಕೋಟೆ, ಮುಧೋಳ, ಗಲಗಲಿ, ಖೇಡ ಮುಂತಾದ ಸ್ಥಳಗಳು ಈಗ್ಯೂ ವಿದ್ಯಾಪೀಠಗಳೆಂದೆನಿಸಿಕೊಳ್ಳುತ್ತವೆ."

ಶೇಷಗಿರಿರಾಯರು (೧೮೩೭–೧೮೮೪) ಕಲಾಭಿಜ್ಞ ಮನೆತನದಲ್ಲಿ ಜನಿಸಿದ್ದವರು. ತಂದೆ ರಾಮಚಂದ್ರರಾಯರು ಆಗಿನ ಕಾಲದ ಪ್ರಸಿದ್ಧ ಗವಯಿಯಾಗಿದ್ದರಿಂದ ಮನೆಯಲ್ಲಿ ಸಂಗೀತದ ಸಂತತ ಧಾರೆ ಕೇಳಿಬರುತ್ತಿತ್ತು. ಅವರು ಆಶುಕವಿಯೂ ಆಗಿದ್ದರೆಂದು ತಿಳಿಯುತ್ತದೆ. ಶೇಷಗಿರಿರಾಯರು ಸಂಗೀತ ಪ್ರೇಮ ಹಾಗೂ ಆಶುಕವಿತ್ವವನ್ನು ತಂದೆಗಿಂತ ಒಂದು ತೂಕ ಹೆಚ್ಚೇ ಮೈಗೂಡಿಸಿಕೊಂಡಿದ್ದರು. ವೃತ್ತಿಯಲ್ಲಿ ಅವರು ಎಂಜಿನಿಯರ್. ಅವರ ನೌಕರಿಗೂ ಕಲಾಭಿಜ್ಞತೆಗೂ ಯಾವ ಸಂಬಂಧವೂ ಇರಲಿಲ್ಲ. ತನ ನೌಕರಿಯ ಮಹತ್ವದ ವರ್ಷಗಳನ್ನು ಮುಂಬಯಿಯಲ್ಲಿ ಕಳೆದು ಅಲ್ಲಿ ಇದ್ದಾಗಲೇ ಗ್ರಂಥರಚನೆ ಮಾಡಿದರಾದ್ದರಿಂದ ಮುಂಬಯಿಯ ಆದ್ಯ ಕನ್ನಡ ಸಾಹಿತಿಯೆಂದು ನಾವು ಇವರನ್ನೇ ಗಣಿಸತಕ್ಕುದು.

ಶೇಷಗಿರಿರಾಯರದು ಸುಸಂಸ್ಕೃತವಾದ ಬದುಕು; ಮನಃಪ್ರವೃತ್ತಿಯು ಸಂವೇದನಾ ಶೀಲವಾದುದು. ನೌಕರಿಯಲ್ಲಿ ಯಾವುದೊ ಆಘಾತವೊದಗಿ ತನ್ನ ಹುಟ್ಟೂರಾದ ಧಾರವಾಡಕ್ಕೆ ಬಂದರು. ಮಧ್ಯ ವಯಸ್ಸಿನಲ್ಲಿ ಹೆಂಡತಿ ತೀರಿಹೋಗಿ, ಇದ್ದ ಇಬ್ಬರು ಹೆಣ್ಣುಮಕ್ಕಳು ಗಂಡನ ಮನೆಯನ್ನು ಸೇರಿದಾಗ ಆ ಭಾವಜೀವಿಗೆ ಏಕಾಂತವೇ ಜೊತೆಗೂಡಿತು. ಗಳಿಕೆಯೆಲ್ಲ 'ಮೆಡಿಕಲ್'ಗೆ ಹೋಗುವ ಬುದ್ಧಿವಂತ ವಿದ್ಯಾರ್ಥಿಗಳಿಗಾಗಿ 'ಸ್ಕಾಲರ್‌ಶಿಪ್' ರೂಪದಲ್ಲಿ ಉಳಿಯಿತು. ಸಂಗೀತದಷ್ಟೆ ಗ್ರಂಥವಾಚನವನ್ನು ಅವರು ಮೆಚ್ಚಿಕೊಂಡಿದ್ದರು. ಮನಸ್ಸು ಅಂತರ್ಮುಖಿಯಾಗುವುದಕ್ಕೆ ಅದೂ ನೆರವಾಯಿತು. ಜೊತೆಗೆ ವೈಜ್ಞಾನಿಕ ಹವ್ಯಾಸಗಳೂ ಕೆಲವು ಇದ್ದುವು. ಅಂಥ ಪ್ರಯೋಗದಲ್ಲಿದ್ದಾಗ ಅಪಘಾತವಾಗಿ ತೀರಿಕೊಂಡರು.

ಶೇಷಗಿರಿರಾಯರ ಒಲವನ್ನು ಕನ್ನಡ ಸಾಹಿತ್ಯ ರಚನೆಯತ್ತ ತಿರುಗಿಸಿದ ಶ್ರೇಯಸ್ಸು ಚೆನಬಸಪ್ಪರಿಗೆ ಸಲ್ಲುತ್ತದೆ. ಇಬ್ಬರೂ ಎಂಜಿನಿಯರಿಂಗ್ ಕಲಿತವರಿದ್ದು, ಆತ್ಮೀಯ ಸ್ನೇಹಿತರಾಗಿದ್ದರು. ಕೆಲವೇ ಜನ ವಿದ್ಯಾವಂತ ಕನ್ನಡಿಗರೆನಿಸಿದ ನಾವು ಕನ್ನಡವನ್ನು ಅಲಕ್ಷಿಸಬಾರದೆಂಬುದು ಚೆನಬಸಪ್ಪರ ಸ್ನೇಹದ ಒಸಗೆಯಾಗಿದ್ದಿತು. ಶೇಷಗಿರಿರಾಯರು ಪ್ರಥಮತಃ ಜೈಮಿನಿಭಾರತದ ಮೊದಲ ಸಂಧಿಯನ್ನು ಮರಾಠಿಗೆ ಭಾಷಾಂತರಿಸಿ 'ವಿವಿಧ ಜ್ಞಾನವಿಸ್ತಾರ' ಪತ್ರಿಕೆಯಲ್ಲಿ ಪ್ರಕಟಿಸಿದರು (ಸಂಪುಟ ೧, ೧೮೬೮ ಪು. ೧೦೯). ಅದೂ ಕನ್ನಡದ ಕೆಲಸವೇ. ಅದರ ಸುರುವಿಗೆ 'ಜೈಮಿನಿ ಭಾರತ'ದ ಪರಿಚಯವನ್ನು ಕೊಟ್ಟು ಕವಿಯ ಯಮಕ ಪ್ರಾಸದ ಹೆಚ್ಚಳವನ್ನು ಹೇಳಲಾಗಿದೆ. ಆರಂಭದ ಪದ್ಯಗಳ ಅನುವಾದ ಇಂತಿದೆ:

> ಶ್ರೀ ಲಕ್ಷ್ಮೀ ವಧುಚ್ಯಾ ಸುಲೋಚನ ಚಕೋರಾಂ ನಿತ್ಯ ಸಂತೋಷ್ಟೀ–
> ಸಂತೀನ್ ಹೃತ್ಕುಮುದಾಂ ಪುರೇ ವಿಕಸನೀ ಭಾಗ್ಯಾಂಬುಧೀಂ ವಾಢವೀ
> ಕಾರುಣ್ಯಾಮೃತ ಯುಕ್ತಮಂದ ಹಸನೇ ಜ್ಯಾಣೇ ಪ್ರಕಾಶೀಕವಾ
> ಐಸಾ ಜೊ ಮುಖ ಚಂದ್ರಮಾ ಹರಿ ತುಝಾ ಆನಂದ ದೇವೊ
> ಮಲಾ ॥

ಕರ್ಣಾಟ ಜಾತ ಕವಿಚೈತ್ರವನಾಸಿ ಚೂತ
ಲಕ್ಷ್ಮೀಶ ನಾಂವ ಮಜ ಭಾರದವಾಜ ಗೋತ್ರ
ವಿದ್ವತ್ಸಭಾವಲಯ ತೋಷ್ವಣ್ಯಾ ನಿಮಿತ್ತೇ
ಕೇಲೀ ಕೃತೀ ಸುಜನ ಸೇವುನಿ ಏಕ ಚಿತ್ತೇ ॥

ಮರುವರ್ಷವೇ ಅವರು 'ಶಾಕುಂತಲ'ವನ್ನು ಕನ್ನಡಿಸಿದರು (೧೮೬೯).* ಹೊಸಗನ್ನಡದ ಪ್ರಥಮ ನಾಟಕವೆಂಬ ಹೆಗ್ಗಳಿಕೆ ಇದಕ್ಕೇನೆ ಸಲ್ಲತಕ್ಕುದು. ಇದುವರೆಗಿನ ಶಾಕುಂತಲದ ಅನುವಾದಗಳಲ್ಲಿ ಇದುವೆ ಮೊದಲಿನದು. ಅದು ಮೂಲದಲ್ಲಿಯ ಗದ್ಯಕ್ಕೆ ಗದ್ಯ, ಪದ್ಯಕ್ಕೆ ಪದ್ಯವೆಂಬ ರೀತಿಯಲ್ಲಿ ಅನುವಾದವಾಗಿರದೇ, ಆಗಿನ ಕಾಲದಲ್ಲಿ ಉತ್ತರ ಕರ್ನಾಟಕದೊಳಗೆ ಪ್ರಚಲಿತವಿದ್ದ ದೇಶೀ ಹಾಡಿನ ಪರಂಪರೆಗೆ ಗ್ರಂಥಸ್ಥ ರೂಪವನ್ನು ಕೊಡಲಾಯ್ತು. ಕಾಳಿದಾಸನ ಗದ್ಯ ಸಂಭಾಷಣೆಗಳನ್ನು ಕೂಡ ಅಲ್ಲಲ್ಲಿ ಹಾಡುಗಳನ್ನಾಗಿ ಪರಿವರ್ತಿಸಿದ್ದು, ಆ ಮೂಲಕ ಜನತೆಯ ಸಂಗೀತದ ಒಲವಿಗೆ ಕನ್ನಡಿ ಹಿಡಿದಿದ್ದಾರೆ. ಜೊತೆಗೆ ಆ ಹಾಡುಗಳು ಭಾವಪೂರ್ಣವೂ ಸರಳವೂ ಆಗಿದ್ದುದರಿಂದ ವಿವಾಹ ಮುಂತಾದ ಪ್ರಸಂಗಗಳಲ್ಲಿ ಬಿಡಿ ಬಿಡಿಯಾಗಿ ಹಾಡುವಷ್ಟು ಅವು ಜನಪ್ರಿಯತೆಯನ್ನು ಪಡೆದುವು. ಅದರಲ್ಲಿಯ ರಾಗ, ಧಾಟಿಗಳನ್ನು ಕೆಲಮಟ್ಟಿಗೆ ಸ್ವೀಕರಿಸಿ, ಹತ್ತು ವರ್ಷದ ನಂತರ ರಚಿಸಲಾದ ಕಿರ್ಲೋಸ್ಕರ್ ಅಣ್ಣಾಸಾಹೇಬನ ಮರಾಠೀ 'ಶಾಕುಂತಲ'ವು ಅಲ್ಲಿಯ ರಂಗಭೂಮಿಯ ಮೇಲೆ ಸುವಿಖ್ಯಾತವಾಯ್ತು.

ಶೇಷಗಿರಿರಾಯರು 'ಮೃಚ್ಛಕಟಿಕ'ವನ್ನು ಅನುವಾದಿಸಿದ್ದಾರೆ. ಆದರೆ ಅದು ಸಂಪೂರ್ಣವಾಗಿ ಗದ್ಯನಾಟಕ. ಜೊತೆಗೆ ಹೆನ್ರಿ ಫೀಲ್ಡಿಂಗನ ಕೃತಿಯೊಂದನ್ನು 'ಸುಂದರಾ ನಾಟಕ' ವೆಂಬ ಹೆಸರಿನಲ್ಲಿ ಪರಿವರ್ತಿಸಿದ್ದುದಾಗಿ ತಿಳಿಯುತ್ತದೆ.

ಶೇಷಗಿರಿರಾಯರ ಕಕ್ಕನ ಮಗ **ಗುಂಡೋ ಕೃಷ್ಣ ಚುರಮುರಿಯೂ** ನಾಟಕ ರಚನೆಯಲ್ಲಿ ಒಲವನ್ನು ತೋರಿ, ಒಥೆಲೋವನ್ನು 'ರಾಘವೇಂದ್ರರಾವ ನಾಟಕ'ವೆಂಬುದಾಗಿ ಪರಿವರ್ತಿಸಿದ್ದಾನೆ (೧೮೮೫). ಶೇಷಗಿರಿರಾಯರು ಎರಡು ಸನಿವೇಶಗಳಲ್ಲಿ ಮಾತ್ರ ಬಳಕೆಯ ಸಂಭಾಷಣೆಯನ್ನು ತಂದುದಾದರೆ ಗುಂಡೋ ಕೃಷ್ಣನು ಇಡೀ ನಾಟಕವನ್ನು ಆಡುಮಾತಿನಲ್ಲಿ ಬರೆದಿದ್ದುದರಿಂದ ಆ ಕೃತಿಯ ಸ್ಥಾನವು ಇನ್ನಷ್ಟು ವಿಶಿಷ್ಟವಾಗಿದೆ. ಬಳಕ ಮಾತಿನ ಸತ್ವ, ಜೀವಂತಿಕೆಗಳನ್ನು ಆಳವಾಗಿ ಗುರುತಿಸಿದ ಕೈಲಾಸಂ ಕಾಲಕ್ಕಿಂತ ಇಪ್ಪತ್ತೈದು ವರ್ಷ ಮೊದಲೇ ಈ ಚುರಮರಿದ್ವಯರ ನಾಟಕಗಳು ಆಧುನಿಕ ನಾಟಕಗಳ ಬಗೆಯನ್ನು ಮೈಗೂಡಿಸಿಕೊಂಡಿವೆ.

---

* ಈ ಕೃತಿಯು ೨೦೦೭ರಲ್ಲಿ ನಾಟಕ ಅಕಾಡೆಮಿಯ ಸಹಯೋಗದಲ್ಲಿ ಬೆಂಗಳೂರಿನ ಭಾಗ್ಯಲಕ್ಷ್ಮಿ ಪ್ರಕಾಶನದಿಂದ ಪ್ರಕಟವಾಗಿದ್ದು, ಡಾ॥ ಶ್ರೀನಿವಾಸ ಹಾವನೂರರು ಅದನ್ನು ಸಂಪಾದಿಸಿದ್ದಾರೆ. ಈ ಕೃತಿಯಲ್ಲಿ ಚುರಮುರಿಯವರ ಶಾಕುಂತಲವನ್ನು ಕನ್ನಡದ ಮೊದಲ ನಾಟಕವೆಂದು ಉಲ್ಲೇಖಿಸಲಾಗಿದೆ. ಈ ಕೃತಿಯಲ್ಲಿ ನಾಟಕದ ಜೊತೆಗೆ, ಡಾ॥ ಭೀಮರಾವ್ ಚಿಟಗುಪ್ಪಿಯವರ, ಚುರಮುರಿಯವರ ಜೀವನ ಹಾಗೂ ಶಾಕುಂತಲ ನಾಟಕದ ಕುರಿತ ಸಮೀಕ್ಷೆಯನ್ನು ಒದಗಿಸಲಾಗಿದೆ.

ಗುಂಡೋ ಕೃಷ್ಣ ಚುರಮುರಿಯು ಹುಬ್ಬಳ್ಳಿಯ ಕಾಟನ್ ಜಿನ್ ಫ್ಯಾಕ್ಟರಿಯಲ್ಲಿ ಓರ್ವ ಸಾಮಾನ್ಯ ನೌಕರನು. ಈ ನಾಟಕವಲ್ಲದೆ ಬೇರೊಂದನ್ನು ಬರೆದಂತಿಲ್ಲ. ಇದರ ರಚನೆಯ ಕಾರಣವನ್ನು ಹೀಗೆ ವಿವರಿಸಿದ್ದಾನೆ:

"ನಮ್ಮ ಸ್ವಭಾಷೆಯು ಕ್ಷಯ ರೋಗಿಯಂತೆ ಅತಿ ಸೂಕ್ಷ್ಮ ಅವಸ್ಥೆಯನ್ನು ತಾಳಿರುವುದು ನಾವೆಲ್ಲರೂ ದಿನ ಒಂದಕ್ಕೆ ನೋಡುತ್ತಲಿದ್ದೇವೆ. ಹೀಗಿದ್ದು ದೊಡ್ಡ ದೊಡ್ಡ ಕರ್ನಾಟಕ ದೇಶಸ್ಥ ವಿದ್ವಾಂಸರೆಂಬ ವೈದ್ಯರೆಲ್ಲರು ಕರುಣವಿಲ್ಲದೆ ಅದನ್ನು ಸಾಯಗೊಡುತ್ತಲಿರುವದನ್ನು ಕಂಡು ಜೀವವು ನಿಲ್ಲದೆ, ಒಟ್ಟಿಗೆ ಮೂರೇ ಔಷಧಗಳನ್ನು ಬಲ್ಲ ದಡ್ಡ ವೈದ್ಯನಾದ ನಾನು ಅದನ್ನು ಬದುಕಿಸುವುದಕ್ಕೆ ಯತ್ನ ಮಾಡತೊಡಗಿದ್ದೇನೆ... ಕನ್ನಡ ಭಾಷೆಯು ಉತ್ಕರ್ಷಕ್ಕೆ ಬರುವದಕ್ಕೆ ಬೇಕಾಗಿರುವ ಸಾಧನಗಳಲ್ಲಿ ಮನೋರಂಜಕ ಕಥೆಗಳ ಪುಸ್ತಕಗಳನ್ನು ಬರೆಯುವದು ಮೊದಲಿನ ಉಪಾಯವೆಂದು ನನ್ನ ಬುದ್ಧಿಗೆ ತೋರುತ್ತದೆ. ಇದೇ ಗ್ರಹಿಕೆಯಿಂದ ನಾನು ಈ ಕಥೆಯನ್ನು ಬರೆದಿದ್ದೇನೆ. ಈ ಕಥೆಯು ನಾನು ಕಲ್ಪಿಸಿದ್ದಲ್ಲ. ಇಂಗ್ಲಿಷ್ ಭಾಷೆಯಲ್ಲಿ ಇರುವ ಶೇಕ್ಸ್‌ಪಿಯರನೆಂಬ ಒಬ್ಬ ಮಹಾಕವಿಯಿಂದ ರಚಿತವಾದ ಅಥೆಲ್ಲೊ ಎಂಬ ಶೋಕರಸ ಪ್ರಧಾನವಾದ ಒಂದು ನಾಟಕದ ಆಧಾರದಿಂದ ಬರೆದದ್ದಿರುತ್ತದೆ.... ಚೋರ ಕವಿಯು, ಇಂಗ್ಲಿಷ ಭಾಷೆಯನ್ನರಿಯದವನು, ಯೋಗ್ಯತೆ ಇಲ್ಲದೆ ಕೀರ್ತಿಯನ್ನು ಅಪೇಕ್ಷಿಸುವಾತನು-ಎಂಬ ಮತ್ಸರಿಗಳ ಟೀಕೆಗೆ ಹೆದರದೆ ಭಾಷಾಭಿಮಾನಕ್ಕಾಗಿ ಏನೊ ಒಂದು ಪ್ರಕಾರದ ಈ ಪುಸ್ತಕವನ್ನು ಓದುವುದಕ್ಕಾಗಿ ಉಂಟುಮಾಡಿದ್ದೇನೆ."

ಬಿ. ವೆಂಕಟಾಚಾರ್ಯರು ಇದೇ ಬಗೆಯ ವಿಚಾರಗಳನ್ನು ಅದೇ ೧೮೮೫ನೆಯ ವರ್ಷ ವ್ಯಕ್ತಪಡಿಸಿದ್ದನ್ನು <೯೧೫> ಗಮನಿಸಬೇಕು. ಆರಂಭಕಾರರಲ್ಲಿಯ ಲೇಖನ ಜಾಗೃತಿಯ ಸಮಾನ ಗುಣಧರ್ಮವನ್ನು ಇಲ್ಲಿ ನಾವು ಕಾಣುತ್ತೇವೆ.

**ಗುರುರಾವ ರಾಘವೇಂದ್ರ ಮಮದಾಪುರನು** ಆ ಕಾಲದ ಇನ್ನೊಬ್ಬ ನಾಟಕಕಾರನು. ಹಲವು ಪೌರಾಣಿಕ ನಾಟಕಗಳನ್ನು ಬರೆದು, ಅಂದಿನ ನಾಟಕ ಕಂಪೆನಿಗಳಿಗೆ ಪೂರೈಸಿದ್ದಾನೆ (೧೮೮೦ನೆಯ ದಶಕ). 'ಇಂದಿರಾ ನಾಟಕ', 'ಇಂದ್ರಸಭಾ', 'ಬಲಸಿಂಹ-ತಾರಾ ನಾಟಕ', 'ಕೃಷ್ಣಾಕುಮಾರಿ', 'ಪ್ರಮೀಲಾ ಸ್ವಯಂವರ'-ಈ ಕೃತಿಗಳು ಸಾಗ್ರ ಸಂಗೀತ ನಾಟಕಗಳಾಗಿದ್ದು ರಂಗದ ಮೇಲೆ ಪ್ರದರ್ಶಿತವಾಗಿ ಅವನಿಗೆ ಜನಪ್ರಿಯತೆಯನ್ನು ತಂದುಕೊಟ್ಟವು. ಅವನು ಗ್ರಂಥೋದ್ಯಮಿಯೂ ಹೌದು. ಪ್ರಸಾದರಾಘವ ಪ್ರೆಸ್ಸಿನ ಮಾಲಿಕನಿದ್ದು, 'ಲೋಕ ಬಂಧು' ಎಂಬ ಪತ್ರಿಕೆಯನ್ನು ಹಲವು ವರ್ಷ ನಡೆಸಿಕೊಂಡು ಬಂದನು.

ಮುಂಬಯಿ ಕರ್ನಾಟಕದ ಆರಂಭದ ನಾಟಕ ಕಂಪೆನಿಗಳಲ್ಲಿ ಹಲಸಗಿಯದೂ ಒಂದು. ಅದಕ್ಕೆ ಪ್ರೇರಕನಾಗಿ ನಿಂತವನು ಅಗಳಗಟ್ಟಿ ವೆಂಕಣ್ಣಾಚಾರ್ಯ. ಅವನ ಕಾವ್ಯನಾಮವು ಶ್ರೀನಿವಾಸ ಎಂಬುದಾಗಿತ್ತು. ಸಂಸ್ಕೃತವನ್ನು ಚೆನ್ನಾಗಿ ಓದಿಕೊಂಡಿದ್ದನು.

ಮುಖ್ಯತಃ ಅವನು ಅದ್ವಿತೀಯ ನಟನು. ರಂಗ ಪ್ರಯೋಗಕ್ಕೆಂದು 'ಕೀಚಕವಧ, ದ್ರೌಪದೀ ವಸ್ತ್ರಾಹರಣ, ಭಸ್ಮಾಸುರ ವಧೆ' ಮುಂತಾದ ಪ್ರಸಂಗಗಳನ್ನಾಯ್ದು ನಾಟಕಗಳನ್ನು ರಚಿಸಿದನು. ಇವಾವ ಕೃತಿಗಳೂ ಅಚ್ಚಾದಂತಿಲ್ಲ.

ಉಜ್ವಲ ಪ್ರತಿಭೆಯ **ಶಾಂತಕವಿಗಳು** (೧೮೫೬–೧೯೨೦) ಅಂದಿನ ಪ್ರಮುಖ ಸಾಹಿತಿಗಳಲ್ಲಿ ಅಗ್ರಗಣ್ಯರು. ನಿಜವಾದ ಹೆಸರು **ಬಾಳಾಚಾರ್ಯ ಸಕ್ಕರಿ**. ಕ್ರಿ.ಶ. ೧೮೭೫ರ ವರೆಗಿನ ಅವಧಿಯು ಅವರ ಬಾಲ್ಯ ಮತ್ತು ಮಾಸ್ತರಿಕೆಯ ಆರಂಭಕ್ಕೆ ಸಂಬಂಧಿಸಿದುದು. ಅನಂತರದ ಏರಿಕೆಯ ಕಾಲದಲ್ಲಿ (೧೮೯೫ರ ವರೆಗೆ) ಅವರು ಅನೇಕ ಕೃತಿಗಳನ್ನು ರಚಿಸಿದರು. ಮುಂದಿನ ಎರಡು ದಶಕಗಳಲ್ಲಿ ಸಾಂಸಾರಿಕ ತಾಪತ್ರಯಗಳಿಂದ ಬಳಲಿದವರಾಗಿ ನಿರ್ವಿಣ್ಣರಾಗಿದ್ದರು. ಆಲೂರ ವೆಂಕಟರಾವ ಮೊದಲಾದವರು ಕರ್ನಾಟಕದ ಜಯಭೇರಿಯನ್ನು ಮೊಳಗಿಸತೊಡಗಿದ್ದರಿಂದ ೧೯೧೫ರ ಸುಮಾರಿಗೆ ಶಾಂತಕವಿ ತಮ್ಮ ಇಳಿ ವಯಸ್ಸಿನಲ್ಲಿ ಪುನಃ ಕನ್ನಡದ ಸೇವೆಗೆ ಅಣಿಯಾದರು.

ಪಂಡಿತ ಮನೆತನದಲ್ಲಿ ಜನಿಸಿದ್ದ ಬಾಳಾಚಾರ್ಯರು ಬಾಲ್ಯದಲ್ಲಿ ಸಂಸ್ಕೃತ ಕಾವ್ಯ, ನಾಟಕಗಳ ಅಭ್ಯಾಸ ಮಾಡಿದ್ದರು. ಮೈಸೂರಿನ ಆಸ್ಥಾನದಲ್ಲಿದ್ದಂತಹ ಅನುಕೂಲತೆಗಳು ಮುಂಬಯಿ ಕರ್ನಾಟಕದಲ್ಲಿ ಇದ್ದಿದ್ದರೆ ಅವರೂ ಒಬ್ಬ ಶಾಸ್ತ್ರವೇತ್ತರಾಗುತ್ತಿದ್ದರೇನೊ. ಬಡತನವೂ ಅದಕ್ಕೆ ಆತಂಕವನ್ನುಂಟುಮಾಡಿತು. ಅದರಿಂದ ಒಳ್ಳೆಯದೇ ಆಯಿತೆನ್ನಬೇಕು. ಅವರ ಜನ್ಮಜಾತ ಪ್ರವೃತ್ತಿಯು ಜಾನಪದ ಹಾಡುಗಳ ಮತ್ತು ಆಟಗಳ ಕಡೆಗೆ ಒಲಿದಿದ್ದಿತಾದ್ದರಿಂದ ಆ ಮೂಲಕ ಅವರಿಂದ ಕನ್ನಡ ಸಾಹಿತ್ಯಕ್ಕೆ ಅನುಪಮ ಸೇವೆ ಸಲ್ಲುವುದು ಸಾಧ್ಯವಾಯಿತು.

ಬಡತನದಿಂದಾಗಿ ಬಾಳಾಚಾರ್ಯರು ಇಂಗ್ಲಿಷ್ ವಿದ್ಯೆಯನ್ನು ಕಲಿಯಲಾಗದೇ ಪ್ರಾಥಮಿಕ ಶಾಲಾ ಮಾಸ್ತರನಾಗಿಯೆ ಉಳಿದರು. 'ಬಂಗಾರದಂಥ ಹಗಲಿನ ಆಯುಷ್ಯವನ್ನು ಶಾಲೆಯ ವಿದ್ಯಾರ್ಥಿಗಳೊಡನೆ ತಲೆಯೊಡೆಯುತ್ತ ಕಳೆಯುತ್ತಿರುವುದಾಗಿ' ಒಂದೆಡೆ ಹೇಳಿದ್ದರೂ[೧೯] ಅದು ಆ ವೃತ್ತಿಯ ಬಗೆಗಿನ ಅಸಡ್ಡೆಯೇನಲ್ಲ. ಬದಲಾಗಿ ಲೇಖನ ಕಾರ್ಯದಲ್ಲಿ 'ವೇಳ್ಯದ ಅಭಾವ'ವನ್ನು ಗಮನಿಸಿ ಹಾಗೆ ಆಡಿದುದಾಗಿದೆ.

ಬಾಳಾಚಾರ್ಯರು ಶಾಂತಕವಿಯಾದುದು 'ಮುಕುಂದ ದಾನಾಮೃತ'ವೆಂಬ ಕೀರ್ತನೆಯ ಮೂಲಕ. ಕನ್ನಡದಲ್ಲಿ ಕೀರ್ತನೆಗಳಿಲ್ಲವಾಗಿ ಆಕ್ಷೇಪಿಸಿದಾಗ ಹೊರಹೊಮ್ಮಿದ ಕೃತಿಯಿದು. ಶಾಂತಕವಿಗಳು ಮುಂದೆಯೂ ಹಲವಾರು ಕೀರ್ತನೆಗಳನ್ನು ರಚಿಸಿದರು. ಅವರ ಕೊನೆಯ ಕೃತಿಯೆನ್ನಬಹುದಾದ 'ವಿದ್ಯಾರಣ್ಯ ವಿಜಯ'ವೂ ಕೀರ್ತನ ರೂಪದಲ್ಲಿಯೆ ಇದೆ. ಕೀರ್ತನೆಯು ಅವರ ಮೆಚ್ಚಿನ ಸಾಹಿತ್ಯ ರೂಪವಾಗಿದ್ದಿತು. ಅಲ್ಲದೆ ಕೀರ್ತನಕಾರರಾಗಿ ತಮ್ಮ ವಾಗ್ಮಿತೆಯಿಂದ ಜನತೆಯ ಚಿತ್ತವನ್ನು ಬಹುವಾಗಿ ಆಕರ್ಷಿಸಿದ್ದರು.

ಕೀರ್ತನೆಗಳ ರಚನೆಯ ಹಿನ್ನೆಲೆಯನ್ನು ಅವರ 'ಗಜೇಂದ್ರ ಮೋಕ್ಷ'ದ ಪ್ರಸ್ತಾವನದಲ್ಲಿ ಕಾಣಬಹುದು: "ಶ್ರೀಮನ್ನಾರಾಯಣನ ಗುಣಗಳನ್ನು ಕೊಂಡಾಡುವ ವಿಷಯದಲ್ಲಿ ಅನೇಕ ಮಾರ್ಗಗಳಿರುತ್ತವೆ. ವೀಣಾ ಮೃದಂಗಾದಿ ಸಂಗೀತ ಸಾಹಿತ್ಯಗಳೊಂದಿಗೆ ರಂಗಸ್ಥಲದಲ್ಲಿ ನಿಂತು ಹರಿಕೀರ್ತನವನ್ನು ಮಾಡುವುದು ಆ ಅನೇಕ ಮಾರ್ಗಗಳೊಳಗಿನದೇ ಒಂದಾಗಿರುವದು. ಈ ದಿವ್ಯ ಮಾರ್ಗದ ವಿಷಯದಲ್ಲಿ ಸ್ವತಂತ್ರವಾದ ಗ್ರಂಥಗಳು ದುರ್ದೈವಿಗಳಾದ ನಮ್ಮ ಕನ್ನಡ ಭಾಷೆಯಲ್ಲಿ ಇಲ್ಲದಿರುವುದರಿಂದ ನಮ್ಮ ದೇಶದ ಕೀರ್ತನಕಾರರು ಮೋರೋಪಂತರ ಮಹಾರಾಷ್ಟ್ರ ಆರ್ಯ. ಅಮೃತರಾಯರ ಮಹಾರಾಷ್ಟ್ರ ಕಟಾವ, ಕಬೀರದಾಸರ ಹಿಂದುಸ್ತಾನೀ ದೊಹರೇ ಮುಂತಾದವುಗಳನ್ನು ತೆಗೆದುಕೊಂಡು ಅವುಗಳ ಅರ್ಥವನ್ನು ಕನ್ನಡಮಾತಿನಿಂದ ಹೇಳುತ್ತ ಕೀರ್ತನೆ ಮಾಡುತ್ತಾರೆ. ಹೀಗೆ ಬತ್ತ ಮೊಸರು ಕಲಿಸಿದಂತೆ ಕೀರ್ತನೆ ಮಾಡುವುದರಿಂದ ಕನ್ನಡಭಾಷೆಯ ಗೌರವವು ಕಡಿಮೆ ಆಗುತ್ತದೆ. ಅದು ಆಗಬಾರದೆಂಬ ಅಭಿಮಾನದಿಂದ ನಾವು ಆ ಗ್ರಂಥವನ್ನು ರಚಿಸಿರುತ್ತೇವೆ."

ಕೀರ್ತನೆಯು ಯಕ್ಷಗಾನದ ತಾಳಮದ್ದಳೆಗೆ ಸಮೀಪವಾದುದು. ಕೀರ್ತನೆಯಲ್ಲಿಯೂ ವೇಷ, ಕುಣಿತಗಳಿರುವುದಿಲ್ಲ. ಹಿಮ್ಮೇಳ, ಹಾಡು ಮತ್ತು ಸಂಭಾಷಣಾ ಸಹಿತವಾದ ಕಥಾ ಪ್ರಸಂಗ ಕಂಡುಬರುತ್ತದೆ. ಪಾತ್ರಧಾರಿಯು ಮಾತ್ರ ಒಬ್ಬನೇ.

ಶಾಂತಕವಿಗಳ ನಾಟಕ ರಚನೆಗೆ ಕೀರ್ತನೆಯೇ ನಾಂದಿಯಾಯಿತು. ಮರಾಠೀ ನಾಟಕಗಳನ್ನು ಕನ್ನಡಿಗರು ಅತಿಯಾಗಿ ನೆಚ್ಚಿಕೊಂಡದ್ದನ್ನು ಕಂಡು ಗದುಗಿನ ಕೆಲ ನಾಟ್ಯವಿಲಾಸಿಗಳೂ ಶಾಂತಕವಿಯೂ ಜೊತೆಗೂಡಿದರು. ಲಭ್ಯವಿದ್ದ ನಟರನ್ನು ಗಮನಿಸಿ 'ಉಷಾಹರಣ' ನಾಟಕವು ಸಿದ್ಧವಾಯಿತು (೧೮೭೫). ಅದು ರಂಗದ ಮೇಲೆ ಬಂದಾಗ ಶಾಂತಕವಿಗಳ ಹೆಸರು ಬೆಳಗಿತು. ಅನಂತರದ ಕೃತಿರಚನೆಗೆ ಪ್ರೋತ್ಸಾಹವನ್ನಿತ್ತಿತು. ಮುಂದಿನ ಎರಡು ದಶಕಗಳಲ್ಲಿ ನಮಗೆ ಅವರ ಕಾವ್ಯ, ನಾಟಕಗಳ ಸುರಿಮಳೆಯೇ ಕಂಡುಬರುತ್ತದೆ. ಮೊದಲ ಹತ್ತು ವರ್ಷಗಳಲ್ಲಿಯೆ ೬೩ಕ್ಕೆ ಮೇಲ್ಪಟ್ಟು ಕೃತಿಗಳನ್ನು ರಚಿಸಿದ್ದಾರೆ! ಅದಕ್ಕೆ ಕಾರಣ, ಅವಸರ ಮಾಡುವ ತನ್ನ 'ವಿಲಕ್ಷಣ ಸ್ವಭಾವ' ಎಂದು ಶಾಂತಕವಿ ಹೇಳಿದ್ದಾರೆ. ಅದೂ 'ಸೂಟಿಯ ದಿವಸ ಇಲ್ಲವೆ ರಾತ್ರೀ ಕಾಲದಲ್ಲಿ ಅಲ್ಪಸ್ವಲ್ಪ ಬರೆದು'ದಂತೆ. ಹೇಗೂ ಇರಲಿ, ಅವರು ಕವಿತ್ವದಲ್ಲಿ ಹಾಗೂ ಸನ್ನಿವೇಶ ನಿರ್ಮಾಣದಲ್ಲಿ ಅದೆಷ್ಟು ಪ್ರಬುದ್ಧರಿದ್ದರೆಂಬುದನ್ನು ಆ ಕೃತಿಸಮುದಾಯವು ತೋರಿಸುತ್ತದೆ.

ಅವರ ನಾಟಕಧ್ವಜವು ಊರೂರಲ್ಲಿ ಮೆರೆಯತೊಡಗಿತು. ಕ್ರಿ.ಶ. ೧೮೮೧ರಲ್ಲಿ ಬೆಳಗಾಂವಿಯಲ್ಲಿ ಅವರನ್ನು ಸಾರ್ವಜನಿಕವಾಗಿ ಮೆರವಣಿಗೆ ಮಾಡಲಾಯಿತು. ಧಾರವಾಡದಲ್ಲಿಯೂ ಸತ್ಕಾರ ಸಭೆ ಜರುಗಿತು. ಕನ್ನಡ ನಾಟಕಕಾರನಿಗೆ ಸಂದ ಜನತೆಯ ಈ ಗೌರವ ಪುರಸ್ಕಾರಗಳು ಅಭಿಮಾನಾಸ್ಪದವಾಗಿವೆ.

ಅನಂತರ ಎಂದರೆ ಅಗಡಿ ಗ್ರಾಮದಲ್ಲಿ ಮಾಸ್ತರರಾಗಿ ಬಂದ ಹತ್ತು ವರ್ಷಗಳು (೧೮೮೬-೧೮೯೫) ಶಾಂತಕವಿಗಳ ಜೀವನದ ಸುವರ್ಣ ಕಾಲವೆನ್ನಬಹುದು. ಆನಂದವನದ ಶೇಷಾಚಲ ಸಾಧುಗಳ ಸಾನಿಧ್ಯದ ಜೊತೆಗೆ ಅಗಡಿಯ ದೇಸಾಯಿ, ಶಿಶುನಾಳ ಶರೀಫ ಸಾಹೇಬ, ಮೂಡಲಪಾಯದ ಖ್ಯಾತಿಯ ಶರಣಪ್ಪ-ಇವರ ಸಂಪರ್ಕ ಬಂದು, ಶಾಂತಕವಿಗಳ ವ್ಯಕ್ತಿತ್ವವು ಇನ್ನಷ್ಟು ಬೆಳಗಿತು. ಅಗಡಿಯಲ್ಲಿದ್ದಾಗಲೇ ಅವರು 'ವಿರಹತರಂಗ', 'ಮೇಘದೂತ' ಕಾವ್ಯಗಳ ಅನುವಾದವನ್ನು ಮುಗಿಸಿದರು. ಸಂಸ್ಕೃತದಲ್ಲಿಯ ಈ ರಸಕೃತಿಗಳ ಕಾವ್ಯಗುಣವನ್ನು ಮೊದಲಿಗೆ ಮೆಚ್ಚಿದ ಕನ್ನಡಕವಿಯೆಂದರೆ ಶಾಂತಕವಿಯೇ. ಅಗಡಿಯನ್ನು ಬಿಡುವಾಗ ಅವರಿಗೆ ಆದರಪೂರ್ವಕವಾದ ವಿದಾಯ ಸಂದಿತು. ಒಂದು ಮನೆ ಹಾಗೂ ಕೆಲವು ಜಮೀನುಗಳು ದತ್ತಿಯಾಗಿ ದೊರೆತುವಂತೆ. ಕನ್ನಡಿಗರ ರಸಿಕತಾ ಪ್ರಜ್ಞೆಗೆ ಇದು ಇನ್ನೊಂದು ಸಾಕ್ಷಿಯಾಗಿದೆ.

ಶಾಂತಕವಿ ಆರ್ಥಿಕವಾಗಿ ಅನುಕೂಲ ಸ್ಥಿತಿಯಲ್ಲಿರಲಿಲ್ಲ. ನಾಲ್ವತ್ತು ವರ್ಷಗಳ ನೌಕರಿಯ ಕೊನೆಗಾಲದಲ್ಲಿ ಅವರಿಗೆ ಸಿಗುತ್ತಿದ್ದ ಸಂಬಳ ೨೨ ರೂಪಾಯಿ ಮಾತ್ರ. ಬಡತನದ ಜೊತೆಗೇ ಬೆಳೆದು ಬಂದ ಸಂಸಾರದ ಭಾರವು ಶಾಂತಕವಿಯಂಥವರ ಚೇತನವನ್ನು ಸಹ ಕುಗ್ಗಿಸಿತು. ರಾಷ್ಟ್ರೀಯ ಜಾಗೃತಿಯು ತಲೆದೋರುತ್ತಿದ್ದ ಕಾಲವದು. "ಒಂದು ಕಾಲಕ್ಕೆ ಎತ್ತುಂ ಪೊತ್ತರೆ ತಾಳಲಾರದಷ್ಟು ಗ್ರಂಥಗಳನ್ನು ರಚಿಸಿದ ಸಾಹಿತಿಯೇ ಇಂದು ಬತ್ತಲ್ ದೀಪದ ಬತ್ತಿ, ಹೊಯ್ಯಲಕಟಾ ಸ್ನೇಹಾಂಶವೇ ದುರ್ಲಭಂ" ಎಂದು ನಿಡುಸುಯ್ಯುವ ಪರಿಸ್ಥಿತಿ ಬಂದೊದಗಿತು.[೨೦] ಬೋಧರಾಯಾಚಾರ್ಯ ಸವಣೂರ, ಭಿಷ್ಟೋ ಪದಕಿ, ಲಕ್ಷ್ಮಣ ರಾಘವೇಂದ್ರರಾವ ನಾಯಿಕ, ಬಾಳಾಜಿ ಅಣ್ಣೇಗೇರೀಕರ-ಇವರೇ ಮೊದಲಾದವರು ಅವರ ಕೃತಿಗಳಿಗೆ ಲುಬ್ಧರಾಗಿ ಅವರ ಕಷ್ಟದ ದಿನಗಳಲ್ಲಿ ನೆರವಾದುದನ್ನು ಉಲ್ಲೇಖಿಸಬೇಕು. ಶಾಂತಕವಿ ಬರೆದ ಕೃತಿಗಳ ಮುದ್ರಣ, ಮಾರಾಟಗಳನ್ನು ಅವರಲ್ಲಿ ಕೆಲವರು ಉತ್ಸಾಹದಿಂದ ಕೈಕೊಂಡರು.

ಎಣ್ಣೆ ತೀರುತ್ತ ಬಂದ ದೀಪವು ಕೊನೆ ಗಳಿಗೆಯಲ್ಲಿ ಹೆಚ್ಚು ಪ್ರಕಾಶಿಸುವಂತೆ ಇಳಿವಯಸ್ಸಿನಲ್ಲಿ ಶಾಂತಕವಿಗಳ ಕವನ ಸ್ಫೂರ್ತಿಯು ಮರಳಿ ಚಿಮ್ಮಿ ಬಂದಿತು. ಆಲೂರ ವೆಂಕಟರಾಯರ 'ಕರ್ನಾಟಕ ಗತವೈಭವ'ದ ಪ್ರಕಟನೆಯು ಅದಕ್ಕೊಂದು ನಿಮಿತ್ತವಾಯಿತು. ಆ ಸಂದರ್ಭದಲ್ಲಿ ತಮ್ಮ 'ವಿದ್ಯಾರಣ್ಯ ವಿಜಯ'ವನ್ನು ಶಾಂತಕವಿಯು ಊರೂರಲ್ಲಿ ಕೀರ್ತನೆ ಮಾಡುತ್ತ ನಡೆದಾಗ ಸಾಕಷ್ಟು ಜನ ಜಾಗೃತಿಯಾಯಿತೆಂದು, ಆ ಕೃತಿಯ ಪ್ರಕಾಶಕರಾದ ಆಲೂರ ವೆಂಕಟರಾಯರು ಮುನ್ನುಡಿಯಲ್ಲಿ ಕಾಣಿಸಿದ್ದಾರೆ. ಅದರಲ್ಲಿ ಬಂದ 'ರಕ್ಷಿಸು ಕರ್ನಾಟಕ ದೇವಿ' ಎಂಬ ಹಾಡು ಮುಂದಿನ ಎರಡು ದಶಕಗಳ ಕಾಲ ಮುಂಬಯಿ ಕರ್ನಾಟಕದಲ್ಲಿ ನಾಡಗೀತೆಯಾಗಿದ್ದಿತು.

ಶಾಂತಕವಿಗಳ ಕೃತಿಗಳೆಲ್ಲವೂ ಪೌರಾಣಿಕ ಪ್ರಪಂಚಕ್ಕೆ ಸಂಬಂಧಿಸಿದುವು. ಸಹಜ ಕವಿತ್ವ, ವಾಗ್ಮಿತೆ, ವಾಸ್ತವ ಸಂಭಾಷಣೆಗಳಿಂದಾಗಿ ಅವರ ಕೃತಿಗಳು ವಿಶೇಷ ಮನ್ನಣೆ ಪಡೆದುವು. ಅವರು ಸ್ವಭಾವತಃ ರಸಿಕರಾದುದರಿಂದ ಶೃಂಗಾರವು ಅವರ ಕೃತಿಯ ಪ್ರಧಾನ ಲಕ್ಷಣವಾಯಿತು.

ಸುರುವಿಗೆ ಹೇಳಿದಂತೆ ಶಾಂತಕವಿಗಳ ಮೂಲ ಚೇತನವು ಜನಾಭಿಮುಖವಾಗಿದ್ದಿತು. ಸಾಮಾನ್ಯ ಜನತೆಗಾಗಿಯೇ ತನ ಕಾವ್ಯ, ನಾಟಕಗಳ ರಚನೆಯಾಗಬೇಕೆಂಬುದು ಅವರ ಕಣ್ಣ ಮುಂದಿನ ಸ್ಪಷ್ಟ ಗುರಿಯಾಗಿದ್ದಿತು. ಹಳೆಯ ಪಂಡಿತರು ಮತ್ತು ಇಂಗ್ಲಿಷ್ ವಿದ್ಯಾವಂತರು ಕನ್ನಡ ಸೇವೆ ಮಾಡುತ್ತಿಲ್ಲವೆಂದು ಅವರ ತಕರಾರು ಇದ್ದಿತು. "ಎಲ್ಲಿರುವುದಭಿಮಾನ, ಕನ್ನಡಿಗರೇ ಪೇಳಿ, ಸುಳ್ಳೆ ಬಡಬಡಿಸುವಿರಿ ಸಭೆಗಳಲ್ಲಿ ಗುರು ಪರಿಶ್ರಮದಿನಾಂಗ್ಲೇಯ ಭಾಷೆಯ ಕಲಿತು ಧರಿಸಿ ಪದವಿಗಳನ್ನುಪಜೀವಿಸುವಿರೇ ಹೊರತು ತದ್ಭಾಷೆಯುದ್ಗ್ರಂಥಗಳ ಕನ್ನಡದಿ ಪರಿವರ್ತನಂಗೊಳಿಸಲಿಲ್ಲವಲ್ಲಾ" ಎಂದು ಪದ್ಯವೊಂದರಲ್ಲಿ ಹೇಳಿದ್ದಾರೆ. ಇದೇ ವಿಚಾರವು ಅವರ ಇನ್ನು ಕೆಲವು ಕೃತಿಗಳಲ್ಲಿಯೂ ವ್ಯಕ್ತವಾಗಿದೆ.* ಹೀಗೆ ಕನ್ನಡಾಭಿಮಾನವೇ ಶಾಂತಕವಿಗಳ ಸಾಹಿತ್ಯ ಕಾರ್ಯದ ಪ್ರೇರಕ ಶಕ್ತಿಯಾಗಿದ್ದಿತು. ಕನ್ನಡದಲ್ಲಿ ಗ್ರಂಥಗಳು ಹೆಚ್ಚಾಗಬೇಕು ಅನ್ಯ ಭಾಷೆಗಳಲ್ಲಿ ಇದ್ದ ಉತ್ತಮ ಕೃತಿಗಳನ್ನು ಕನ್ನಡಕ್ಕೆ ತರಬೇಕು. ಎಲ್ಲೆಲ್ಲಿಯೂ ಕನ್ನಡದ ಪ್ರಚಾರವಾಗಬೇಕು ಎಂಬುದು ಅವರ ನರನಾಡಿಗಳಲ್ಲಿ ಸೇರಿಹೋಗಿದ್ದಿತು. ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ ಜರುಗಬೇಕಿದ್ದಾಗ (೧೯೧೯) ಆರ್ಥಿಕ ಅಭಾವದಿಂದ ಕಾರ್ಯಕರ್ತರು ಒದ್ದಾಡುತ್ತಿದ್ದರು. ಆಗ ಈ 'ಕನ್ನಡದ ದಾಸಯ್ಯ' ಒಂದು ಕೈಯಲ್ಲಿ ಊರುಗೋಲು ಇನ್ನೊಂದು ಕೈಯಲ್ಲಿ ಜೋಳಿಗೆ ಹಿಡಿದುಕೊಂಡು ಊರೂರು ತಿರುಗಿದನು. ಮನೆ ಮನೆಗಳ ಬಾಗಿಲ ಮುಂದೆ ನಿಂತು 'ಬೇಡಲು ಕನ್ನಡ ದಾಸಯ್ಯ ಬಂದಾನೆ. ನೀಡಿರವ್ವಾ ತಡಮಾಡದಲೆ' ಎಂದು ಹಾಡಿದರು.

ಕನ್ನಡ ಮಾತಿನ ತಂದೆ ತಾಯಿಗಳಿಂದ
ಚೆನ್ನ ಚೆನ್ನೆಯರೆಲ್ಲ ಹುಟ್ಟಿದಿರಿ

---

* ಉದಾಹರಣೆಗೆ 'ಸೀತಾರಣ್ಯ ಪ್ರವೇಶ ನಾಟಕ'ದ ಪ್ರಸ್ತಾವನೆ: ಇಂದಿನ ಕನ್ನಡ ವಿದ್ವಾಂಸರು ಕನ್ನಡದ ಅಭಿವೃದ್ಧಿಯ ವಿಚಾರದಲ್ಲಿ ಅಲಕ್ಷ್ಯ ಮಾಡುತ್ತಿದ್ದಾರೆಂದು ಆಕ್ಷೇಪಿಸುತ್ತ – "...ಎಷ್ಟು ಮಾಡಿದರೂ ಅವರು ಪಂಡಿತರೇ ಪಂಡಿತರು. ಅವರಂತೆ ನಮ್ಮಿಂದ ಹ್ಯಾಗೆ ಆದೀತು? ಅವರ ಮುಗುಳು ನಗೆಯ ಒಂದೆರಡು ಶಬ್ದಗಳಿಂದ ಆದಷ್ಟು ಕಾರ್ಯವು ನಮ್ಮಂಥವರ ಇಡೀ ಜೀವಿತದಿಂದಲೂ ಆಗಲಿಕ್ಕಿಲ್ಲ. ಆದರೆ ಅಂಥ ಅರಸು ಪಂಡಿತರಿಗೆ ಅಣಕಿಸಿ ಅವರಲ್ಲಿ ಗ್ರಂಥ ರಚನೆಯ ಈರ್ಷ್ಯೆಯನ್ನು ಉತ್ಪನ್ನ ಮಾಡುವ ವಿಚಾರದಿಂದ, ಕನ್ನಡಭಾಷೆಯನ್ನು ಊರ್ಜಿತಗೊಳಿಸುವ ಅಭಿಲಾಷೆಯವರಾದ ನಾವು ಕನ್ನಡಭಾಷೆಯಲ್ಲಿ ೬೩ ಗ್ರಂಥಗಳನ್ನು ರಚಿಸಿದ್ದೇವೆ."

ಕನ್ನಡ ದೇಶದಿ ದೊಡ್ಡವರಾದಿರಿ
ಕನ್ನಡ ದಿಂದಲೆ ಶ್ರೀಮಂತರಾದಿರಿ
ಕನ್ನಡ ದೇಶದಿ ಹೆಸರಾದಿರಿ
ಅನ್ಯ ಭಾಷೆಗಳಂತೆ ಕನ್ನಡಭಾಷೆಗೆ
ಉನ್ನತಿಕೆಯ ತರಬೇಕೆಂದು
ಹೊನ್ನು ಕೂಡಿಸಲಿಕ್ಕೆ ಬಂದಿಹನಾತನು
ಮನ್ನಿಸಿ ನೀವೆಲ್ಲ ಕೊಡಬೇಕು
ಹೊಟ್ಟೆಗಿಲ್ಲದ ಬಂದ ದಾಸಯ್ಯನಿವನಲ್ಲ
ಕೊಟ್ಟುದ ಬಿಟ್ಟು ಹೋಗುವನಲ್ಲವು
ದಿಟ್ಟಿಸಿ ದಿಟ್ಟಿಸಿ ಕೂಡ ಬಂದ ಕೈಗಳ–
ನೊಟ್ಟು ಸೇರಿಸಿ ಪದ ಕಟ್ಟುವನು. [೨೧]

–ಅವರ ಅಂತ್ಯಕಾಲಕ್ಕೆ (೧೯೨೦) ಒಂದು ವರ್ಷ ಹಿಂದೆ ಕಟ್ಟಿದ ಪದ್ಯವಿದು.

ಹಳೆಯ ಕಾಲದ ಕನ್ನಡಪಂಡಿತ ಮಂಡಲಿಯಲ್ಲಿ **ಧೋಂಡೊ ನರಸಿಂಹ ಮುಳಬಾಗಲರದು** ಎದ್ದು ಕಾಣುವ ಹೆಸರು. ವ್ಯಾಕರಣ, ಛಂದಸ್ಸುಗಳ ಮೇಲೆ ಅಚ್ಚುಕಟ್ಟಿನ ವಿವೇಚನೆಯನ್ನು ಮಾಡಿದುದಲ್ಲದೆ, ಸಂಸ್ಕೃತ ನಾಟಕಗಳನ್ನು ಸೊಗಸಾದ ಶೈಲಿಯಲ್ಲಿ ಕನ್ನಡಕ್ಕೆ ಅಳವಡಿಸಿದ ಖ್ಯಾತಿ ಅವರದು. ಮುಖ್ಯವಾಗಿ ಟ್ರೇನಿಂಗ್ ಕಾಲೇಜಿಗೆ ಬಂದ ನೂರಾರು ವಿದ್ಯಾರ್ಥಿಗಳಿಗೆ ಕನ್ನಡದ ದೀಕ್ಷೆಯನಿತ್ತರು. ಧಾರವಾಡ ಹೈಸ್ಕೂಲಿನಲ್ಲಿ ಅಧ್ಯಾಪಕರಿದ್ದಾಗಲೇ ಸಂಸ್ಕೃತ, ಇಂಗ್ಲಿಷ್ ಕೃತಿಗಳ ರಸಾನುಭವವನ್ನು ಹೊಂದಿದ್ದರು. ಸಾಮಾನ್ಯ ಜನರ ಮನೋರಂಜನಾರ್ಥವಾಗಿ ಕನ್ನಡದಲ್ಲಿ ಯೋಗ್ಯ ಪುಸ್ತಕಗಳಿಲ್ಲವಲ್ಲ–ಎಂಬ ಕೊರಗು* ಇವರನ್ನೂ ರಚನೆಗೆ ಪ್ರೇರಿಸಿತು. ಕನ್ನಡ ಪದ್ಯರಚನೆಯಲ್ಲಿ ಅವರದು ಸಹಜ ಪ್ರವೃತ್ತಿ. ಹಾದಿ ಹಿಡಿದು ಸಾಗಿದಾಗಲೂ ಬಾಯಿಯಲ್ಲಿ ಕವಿತೆಯ ಹೊಳಹು ಮಿನುಗುತ್ತಿದ್ದಿತಂತೆ. 'ಹಿತೋಪದೇಶ'ವನ್ನು ಪದ್ಯದಲ್ಲಿಯೆ ಅನುವಾದಿಸಿದರು. 'ಉತ್ತರರಾಮಚರಿತ್ರೆ'ಯನ್ನು ಅನುವಾದಿಸಿದಾಗ, ಮೂಲದ ಪದ್ಯಗಳನ್ನು

---

* 'ಇಂಗ್ಲಿಷ್ ವಿದ್ಯಾಪ್ರೇಮಿಗಳಿಗೆ, ನಮ್ಮ ಬಡ ಕನ್ನಡನುಡಿಯನ್ನು ನೋಡುವ ಪ್ರಸಂಗವೇ ಬರುವುದಿಲ್ಲ. ಸರ್ವಾಲಂಕಾರಭೂಷಿತೆಯಾದ ಸುಂದರಿಯು ಬೇಕಾದದ್ದನ್ನೆಲ್ಲ ಕೊಟ್ಟು, ಸವಿ ಮಾತುಗಳನಾಡುತ್ತ ಸಮೀಪದಲ್ಲಿರುವಾಗ ಮುಪ್ಪಿನ ತಾಯಿಯ ಕಡೆಗೆ ಆರು ನೋಡುತ್ತಾರೆ? ಇನ್ನು ನಮ್ಮ ದೇಶಭಾಷೆಯನ್ನು ಮಾತ್ರ ಕಲಿತ ವಿದ್ವಜ್ಜನರಾದರೂ ಈ ಕೊರತೆಯನ್ನು ನಿವಾರಿಸಬೇಕೆಂದರೆ ಅವರೆಲ್ಲ ಬಹುಶಃ ಬಡವರು. ಹಗಲಿರುಳು ಸರಕಾರದ ಸೇವೆಯಲ್ಲಿ ಅಥವಾ ಗೃಹಕೃತ್ಯದ ತೊಂದರೆಗಳಲ್ಲಿ ಮುಳುಗಿರುತ್ತಾರೆ. ಈ ಅಪೂರ್ಣತ್ವದ ಒಂದು ಅಕ್ಷಾಂಶವನಾದರೂ ಪೂರ್ಣ ಮಾಡಬೇಕೆಂದು ನನ್ನ ಮನಸ್ಸು ಹವಣಿಸುತ್ತದೆ. ('ವೇಣೀಸಂಹಾರ'ದ ಪೀಠಿಕೆ).

ಪದ್ಯರೂಪದಲ್ಲಿಯೇ ಇಡಲಾಗಿದ್ದಿತು. ಕ್ರಿ. ಶ. ೧೮೭೯ರಲ್ಲಿ ರಚಿತವಾದ ಈ ಕೃತಿಯು ಬೆಳಕನ್ನು ಕಾಣುವುದಕ್ಕೆ ೧೪ ವರ್ಷಗಳು ಹಿಡಿದುವು. ಆ ಅವಧಿಯಲ್ಲಿ ಶಿಕ್ಷಣ ಖಾತೆಯ ವರಿಷ್ಠ ಅಧಿಕಾರಿಯಾಗಿದ್ದ ಚ್ಯಾಟ್‌ಫೀಲ್ಡ್ ಎಂಬವನಿಗೆ ಹಸ್ತಪ್ರತಿಯನ್ನು ಕಳಿಸಿದಾಗ ಸರಕಾರದಿಂದ ಧನಸಹಾಯವನ್ನು ಒದಗಿಸಲಾಗದೇ ಅದು ಮರಳಿ ಬಂದಿತು. ಆದರೂ ಹೈಸ್ಕೂಲಿನಿಂದ ಟ್ರೇನಿಂಗ್ ಕಾಲೇಜಿಗೆ ಬಡತಿ ಸಿಗುವಲ್ಲಿ ಅದು ನೆರವಾಯಿತು! ಇವರ ಹೆಸರನ್ನು ಶಿಫಾರಸು ಮಾಡುತ್ತ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲ್ ಭುಜಂಗರಾಯರೂ ಜಿಲ್ಲಾ ಶಿಕ್ಷಣಾಧಿಕಾರಿಯಾದ ರೊದ್ದ ಶ್ರೀನಿವಾಸರಾಯರೂ ಈ ಅನುವಾದ ಕೃತಿಯ ಉತ್ತಮಿಕೆಯನ್ನು ಎತ್ತಿ ಹೇಳಿದ್ದರು. ಮುಂದೆ ಈ ಪತ್ರವ್ಯವಹಾರದಲ್ಲಿ ರಸೆಲ್ಲನ ಅಂಗವೂ ಇದ್ದಿತಾದ್ದರಿಂದ, ಅದೇ ಚ್ಯಾಟ್‌ಫೀಲ್ಡ್‌ನಿಂದ ೨೦೦ ರೂಪಾಯಿಗಳ ಪಾರಿತೋಷಕವು ದೊರೆಯಿತು. ವಿದ್ಯಾವರ್ಧಕ ಸಂಘವು ತನ್ನ ಮೊದಲ ವರ್ಷದಲ್ಲೇ ಪ್ರಕಟಿಸ ಮುಂಬಂದು ಈ ಕೃತಿಯನ್ನು ಗೌರವಿಸಿತು.

ಮೇಲಣ ವಿವರಗಳಿಂದ ಆಗಿನ ಕಾಲದ ಗ್ರಂಥರಚನೆ, ಪ್ರಕಟನೆಗಳ ಸ್ಥಿತಿಗತಿಯ ಕಲ್ಪನೆ ಬರಲು ಸಾಕು. ಮುಳಬಾಗಲರು ಹತಾಶರಾಗುವ ಪರಿಸ್ಥಿತಿಯಿರಲಿಲ್ಲ. ಕ್ರಿ.ಶ. ೧೮೮೩ರಲ್ಲಿ ಅವರ 'ವೇಣೀಸಂಹಾರದ' ಅನುವಾದವು ಮುದ್ರಿತವಾಗಿದ್ದಿತು. ಹಾಗೂ ಸರಕಾರವು ಅದರ ೨೫೦ ಪ್ರತಿಗಳನ್ನು ಕೊಂಡದ್ದರ ಮೂಲಕ ನೆರವಾಗಿದೆ. ಮುಳಬಾಗಲರು ಅದೇ ರೀತಿಯಲ್ಲಿ 'ಮೃಚ್ಛಕಟಿಕ' (೧೮೮೬) ಹಾಗೂ 'ಮಾಲವಿಕಾಗ್ನಿಮಿತ್ರ'ಗಳನ್ನು ಕನ್ನಡಿಸಿದರು.**

ಹೀಗೆ ಕನ್ನಡ ಗ್ರಂಥಗಳಿಗೆ ಆಗೀಗ ಸಹಾಯಧನ ದೊರೆಯುತ್ತಿತ್ತು. ಮುಳಬಾಗಲರು ತಮ್ಮ 'ವೇಣೀ ಸಂಹಾರ'ದ ಪ್ರಸ್ತಾವನೆಯಲ್ಲಿ ಈ ಕುರಿತು ಕೃತಜ್ಞತೆಯನ್ನು ವ್ಯಕ್ತಪಡಿಸಿದ ಬಗೆ ಇಂತಿದೆ: 'ಸದ್ಯಕ್ಕೆ ಕನ್ನಡಿಗರು ಧನಲೋಭದಿಂದಾಗಲಿ ಅಜ್ಞಾನದಿಂದಾಗಲಿ ಸ್ವಭಾಷಾ ಗ್ರಂಥಗಳಿಗೆ ಉತ್ತೇಜನ ಕೊಡದಿದ್ದರೂ ಕನ್ನಡ ಕಮಿಟಿಯಲ್ಲಿ ಪಾಸಾದ ಪುಸ್ತಕಗಳಿಗೆ ವಿದ್ಯಾಖಾತೆಯಿಂದ ಏನಾದರೂ ಉತ್ತೇಜನ ದೊರೆಯುತ್ತಿರುತ್ತದೆ. ಇದೊಂದು ಮಾತ್ರ ಕನ್ನಡ ಗ್ರಂಥಕಾರರ ಮನೋರಥಕ್ಕೆ ಮಾರ್ಗವಾಗಿದೆ.

ಆದರೆ 'ಉತ್ತರರಾಮ ಚರಿತ್ರೆ'ಯ ಅನುವಾದದ ಮೇಲ್ಮಟ್ಟವನ್ನು ಅವರ ಇತರ ಮೂರು ಕೃತಿಗಳು ಉಳಿಸಿಕೊಳ್ಳಲಿಲ್ಲ. ಅವುಗಳಲ್ಲಿ ಮೂಲದ ಪದ್ಯಗಳೆಲ್ಲ ಗದ್ಯರೂಪದಲ್ಲಿ ಬಂದಿವೆ. ಇವು ಮೂರು ನಾಟಕಗಳು ಪೂರ್ಣ ಗದ್ಯದಲ್ಲಿಯೆ ಇವೆ. ಸಾಮಾನ್ಯ

---

** ಈ ಕೃತಿಯ ಎರಡನೆಯ ಆವೃತ್ತಿಯನ್ನು (೧೮೯೩) ಕೊಲ್ಲಾಪುರದ ಶಾಹೂ ಮಹಾರಾಜರಿಗೆ ಅರ್ಪಿಸಲಾಯಿತು. ಅದಾವ ಕಾರಣವೋ ಆಗಿನ ಈ ಸಂಸ್ಥಾನಿಕರು ಕನ್ನಡದ ವಿಷಯದಲ್ಲಿ ಆದರ ಭಾವ ಹೊಂದಿದ್ದರು. ಸುರಪುರದ ಆನಂದದಾಸರಿಗೆ ಅವರಿಂದ ಸನ್ಮಾನ ಸಂದುದನ್ನೂ, ವೆಂಕಟ ರಂಗೋ ಕಟ್ಟಿಯವರು ಈ ಸಂಸ್ಥಾನಿಕರ ಇತಿಹಾಸ ಬರೆದುದನ್ನೂ ನೆನೆಯಬಹುದು.

ವಾಚಕರಿಗೆ ವಾಚನೀಯವಾಗಬೇಕೆನ್ನುವ ದೃಷ್ಟಿ ಇದರ ಹಿಂದೆ ಇದ್ದಿತು. ಮುಳಬಾಗಲರ ಇನ್ನೊಂದು ಹಿರಿಯ ಸಾಹಿತ್ಯ ಕಾರ್ಯವೆಂದರೆ ಕನ್ನಡದ ಅಭ್ಯಾಸ ಮಾಡುವವರಿಗೆ ಉಪಯುಕ್ತವೆನಿಸುವಂತೆ ವ್ಯಾಕರಣ, ಛಂದಸ್ಸು ಮತ್ತು ಲೇಖನಕ್ರಮಗಳ ಬಗ್ಗೆ ಪುಸ್ತಕಗಳನ್ನು ರಚಿಸಿದುದು. ನವೀನ ರೀತಿಯ ವಿಶ್ಲೇಷಣೆ ಮತ್ತು ತಿಳಿಯಾದ ನಿರೂಪಣೆ ಇವುಗಳಿಂದಾಗಿ ಅವು ಇಂದಿಗೂ ಪಠನೀಯವಾಗಿವೆ.

## ೯೩೪ ಕರ್ನಾಟಕ ವಿದ್ಯಾವರ್ಧಕ ಸಂಘದವರು

ಮುಂಬಯಿ ಕರ್ನಾಟಕ ಭಾಗದಲ್ಲಿಯ ಸಂಸ್ಕೃತಿ ಸಂವರ್ಧನೆಯ ಕಾಲದಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಪಾತ್ರವೇನೆಂಬುದನ್ನು ಈ ಹಿಂದೆ ವಿವರಿಸಿದ್ದೇವೆ<೯೩>. ಸಂಘದ ಸ್ಥಾಪನೆ, ಬೆಳವಣಿಗೆಗಳ ಕಾರ್ಯದಲ್ಲಿ ಟ್ರೇನಿಂಗ್ ಕಾಲೇಜಿನ ಕನ್ನಡಾಭಿಮಾನಿಗಳು ಪ್ರಮುಖವಾಗಿ ದುಡಿದಿದ್ದಾರೆ. ಆ ಶಿಕ್ಷಣ ಸಂಸ್ಥೆಯ ವೆಂಕಟ ರಂಗೋ ಕಟ್ಟಿ, ಗು.ಫ. ಹಳಕಟ್ಟಿ, ಶಾಂತಕವಿ, ಧೋ.ನ. ಮುಳಬಾಗಲ- ಇವರೆಲ್ಲ ಸಂಘಕ್ಕೆ ಸಂಬಂಧಪಟ್ಟವರೇ ಆಗಿದ್ದಾರೆ. ಸಂಘವನ್ನು ಬಲಪಡಿಸಿ ಅದರಿಂದ ಸಾಹಿತ್ಯಿಕ ಪ್ರಯೋಜನವನ್ನು ಹೊಂದಿದ್ದಾರೆ. ಈ ಕಾಲೇಜಿನಲ್ಲಿ ಇತಿಹಾಸದ ಅಧ್ಯಾಪಕರಾಗಿದ್ದ ರಾ.ಹ. ದೇಶಪಾಂಡೆಯವರು ಸಂಘದ ಸಂಸ್ಥಾಪಕರೆಂಬುದನ್ನೂ ನೋಡಿದ್ದೇವೆ <೯೩>. ಸಂಘದ ಏಳ್ಗೆಗಾಗಿ ಅವರು ತಮ್ಮ ಜೀವನವನ್ನೇ ಮುಡಿಪಾಗಿಟ್ಟವರಾದ್ದರಿಂದ, ಇಲ್ಲಿ ಅವರ ಸಾಹಿತ್ಯಿಕ ಕಾರ್ಯವನ್ನು ತುಸು ವಿವರವಾಗಿ ಪರಿಶೀಲಿಸಬೇಕೆಂದಿದೆ.

**ರಾ.ಹ. ದೇಶಪಾಂಡೆ** (೧೮೬೧-೧೯೩೦) ಎಂ.ಎ. ಪದವಿಯನ್ನು ಪಡೆದ ಮುಂಬಯಿ ಕರ್ನಾಟಕದವರಲ್ಲಿ ಮೊದಲಿಗರು. ಅವರದು ಜ್ವಲಂತವಾದ ಕನ್ನಡಾಭಿಮಾನ. ರಾಷ್ಟ್ರೀಯ ಮನೋವೃತ್ತಿಯವರೂ ಅಹುದು. ಯೋಗ್ಯತೆ, ಅನುಭವಗಳಿದ್ದರೂ ಪ್ರಾಯಶಃ ಆ ನಿಮಿತ್ತದಿಂದಾಗಿ ಟ್ರೇನಿಂಗ್ ಕಾಲೇಜಿನ ಮುಖ್ಯಾಧಿಕಾರಿಯ ಹುದ್ದೆ ಸಿಕ್ಕದೇ ಹೋಗಿರಲು ಸಾಕು. ವ್ಹಾಯಿಸ್-ಪ್ರಿನ್ಸಿಪಾಲ್ ಆಗಿ ನಿವೃತ್ತಿ ಹೊಂದಿದರು. ಅವರು ಕಲಿಸುತ್ತಿದ್ದ ವಿಷಯ - ಇತಿಹಾಸ. ಆದ್ದರಿಂದ ಅವರ ಗ್ರಂಥರಚನೆಯು ಇತಿಹಾಸ, ಜೀವನ ಚರಿತ್ರೆಗಳಿಗೇ ಮೀಸಲಾಯಿತು. ಇತಿಹಾಸಕೃತಿಗಳ ಪ್ರಸಾರದಿಂದಲೇ ಕನ್ನಡಿಗರ ಏಳ್ಗೆಯು ಆಗುತ್ತದೆಂದು ಗಟ್ಟಿಯಾಗಿ ನಂಬಿದ್ದ[೨೨] ಈ ಲೇಖಕರು ಭಾರತದ ಸಮಗ್ರ ಇತಿಹಾಸವನ್ನು ಕನ್ನಡದಲ್ಲಿ ಬರೆಯುವ ಯೋಜನೆಯನ್ನಿಟ್ಟುಕೊಂಡಿದ್ದರು. ಅದರ ಒಂದು ಭಾಗವಾಗಿ 'ಮೊಗಲರ ಇತಿಹಾಸ'ವು ಹೊರಬಂದಿತು. ಅವರ ಬದುಕಿನ ಉತ್ತರಾರ್ಧದಲ್ಲಿ 'ಕರ್ನಾಟಕ ಸಾಮ್ರಾಜ್ಯ'ದ ಹಲವು ಸಂಪುಟಗಳು ಪ್ರಕಟವಾದುವು. ನಾಡಿನ ಇತಿಹಾಸವನ್ನು ಇಷ್ಟು ವ್ಯಾಪಕವಾಗಿ ಆ ಹಿಂದೆ ಯಾರೂ ಬರೆದಿರಲಿಲ್ಲ.

ಮಹಾಪುರುಷರ ಜೀವನ ಸಾಧನೆಗಳು ಅವರ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನು ಉಂಟುಮಾಡಿದ್ದುವು. ಅವರು ಕನ್ನಡ ವಾಚಕರಿಗೆ ತಿಳಿಸಿಕೊಡುವ ಆಶಯದಿಂದ ಚರಿತ್ರ ಲೇಖನಕ್ಕೆ ತಿರುಗಿದರು. ಚೈತನ್ಯನ ಚರಿತ್ರೆಯಿಂದ ಆರಂಭಿಸಿ (೧೮೯೧) ಅವರು ಅನೇಕ ವ್ಯಕ್ತಿಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಕೋಲಂಬಸನ ಚರಿತ್ರೆಯನ್ನು ಬರೆಯತೊಡಗಿದ್ದು, ಅದು ಪೂರ್ಣ ಮುಗಿಯಲಿಲ್ಲ. ಆ ಹಸ್ತಪ್ರತಿಯಲ್ಲಿ* ದೇಶ ಸಂಚಾರದ ವಿಷಯವಾಗಿ ಕನ್ನಡಿಗರ ಅನಾಸ್ಥೆಯ ಕುರಿತು ಹೇಳಿದ ಮಾತುಗಳನ್ನು ಗಮನಿಸಬೇಕು :

"ನಮಗೆ ಪ್ರವಾಸವೆಂದರೆ ಮೈಮೇಲೆ ಮುಳ್ಳು ಬರುತ್ತದೆ; ದೇಶಾಟನೇಚ್ಛೆಯು ಕನಸಿನಲ್ಲಿಯಾದರೂ ಬರುವದಿಲ್ಲ. ಊರು ಮನೆಗಳನ್ನು ಬಿಟ್ಟು ಕೆಲ ದಿವಸಗಳ ವರೆಗಾದರೂ ಬೇರೆ ಕಡೆಗೆ ಹೋಗುವದೆಂದರೆ ನಮಗೆ ಜೀವದ ಸುತ್ತು ಬರುತ್ತದೆ. ಪರದೇಶಗಳಿಗೆ ಹೋಗುವದಂತಿರಲಿ; ನಮ್ಮ ಕರ್ನಾಟಕದೆಲ್ಲ ಭಾಗಗಳನ್ನು ನೋಡದೆ ಇದ್ದವರು ಪುಷ್ಕಳ ಜನರಿರುತ್ತಾರೆ. ಎಷ್ಟೋ ಮಂದಿ ಮೈಸೂರವರು ಧಾರವಾಡವನ್ನು ನೋಡಿಲ್ಲ ಮತ್ತು ನೋಡಲೆಳಸುವದಿಲ್ಲ. ಎಷ್ಟೋ ಮಂದಿ ಧಾರವಾಡದವರು ಹೈದರಾಬಾದನ್ನು ನೋಡಿಲ್ಲ; ಮತ್ತೆಷ್ಟೋ ಮಂದಿ ಹೈದರಾಬಾದಿನವರು ಮದರಾಸನ್ನು ನೋಡಿಲ್ಲ. ಆದುದರಿಂದ, ಮನೆ ಹಿಡಿದುಕೊಂಡಿರುವವರು ಹೆಡ್ಡರಾಗುವರೆಂಬ ಪಾಶ್ಚಿಮಾತ್ಯರ ಗಾದೆಯಂತೆ ನಮ್ಮ ಕನ್ನಡಿಗರು ಹೆಡ್ಡರೂ ಮುಂಗಾಣದವರೂ ಹೇಡಿಗಳೂ ಸ್ವಾರ್ಥಪರರೂ ಆಗಿರುತ್ತಾರೆ.... ಪಾಶ್ಚಿಮಾತ್ಯರ ಅನುಕರಣವನ್ನು ಮಾಡಲಿಕ್ಕೆ ಧೈರ್ಯ ಸಾಲದೆ ನಾವು, ಪಾಶ್ಚಿಮಾತ್ಯರು ದೇವತಾ ಮನುಷ್ಯರು ಅಥವಾ ಸೀತಾದೇವಿಯಿಂದ ವರವು ಪಡೆದ ವಾನರರ ವಂಶದವರೆಂದೆನಿಸಿ ನಮ್ಮ ಹೇಡಿತನವನ್ನೂ ಹೆಡ್ಡತನವನ್ನೂ ಮುಚ್ಚಿಕೊಳ್ಳಲಿಕ್ಕೆತ್ತುಗಡೆ ಮಾಡುತ್ತೇವೆ. ಈ ತಪ್ಪು ತಿಳುವಳಿಕೆಯು ಹೋಗುವ ಬಗೆ ಹೇಗೆ? ಕನ್ನಡಿಗರು ಪಾಶ್ಚಿಮಾತ್ಯರಂತೆ ಸಾಹಸಿಕರೂ ಪರೋಪಕಾರಲೋಲುಪರೂ ಧೈರ್ಯ ಶಾಲಿಗಳೂ ಆಗಲಿಕ್ಕುಪಾಯಗಳಾವವು?"

ಇಂಥ ಉಪಾಯಗಳಲ್ಲಿ ಮಹಾಪುರುಷರ ಹಾಗೂ ಸಾಹಸ ವೀರರ ಚರಿತ್ರೆಯನ್ನು ಬರೆದು ಪ್ರಚುರಪಡಿಸುವುದು ಒಂದೆಂದು ರಾ. ಹ. ದೇಶಪಾಂಡೆ ಅವರು ನಂಬಿದ್ದರು. ಜೀವನ ಚರಿತ್ರೆ ಹಾಗೂ ಇತಿಹಾಸ ಬರವಣಿಗೆಯ ಮೂಲಕ ಜನತೆಗೆ ಹೊಸ ವಿಚಾರಧಾರೆಯನ್ನು ಒದಗಿಸಬೇಕೆಂಬುದೇ ಅದರ ಹಿನ್ನೆಲೆಯಾಗಿದ್ದಿತು.

'ಕನ್ನಡ ಸಾಹಿತ್ಯದ ಇತಿಹಾಸ ರಚನೆಯೂ ಸಿದ್ಧವಾಗುತ್ತಲಿದೆ' ಎಂಬ ಪ್ರಕಟನೆಯನ್ನು ೧೮೯೫ರಲ್ಲಿ ಅವರು ಕೊಟ್ಟಿದ್ದರು. ಆದರೆ ಅದು ಪೂರ್ಣಗೊಂಡು ಹೊರಬಂದಂತಿಲ್ಲ.

---

* ಈ ಹಸ್ತಪ್ರತಿಯು ಅವರ ಮೊಮ್ಮಗ ಪ್ರೊ. ಕೆ. ಎಸ್. ದೇಶಪಾಂಡೆ ಅವರ ಹತ್ತಿರವಿದೆ.

ಬಾಯಿಲೆಕ್ಕದ ಪುಸ್ತಕವನ್ನು ಅವರು ರಚಿಸಿದುದು (೧೮೯೬) ಅವರ ಬೋಧನಾಸಕ್ತಿಗೆ ನಿದರ್ಶನ.

ರಾ.ಹ. ದೇಶಪಾಂಡೆ ಸ್ವತಃ ಬರೆದುದರ ಜೊತೆಗೆ ಇತರರನ್ನು ಬರೆಯುವುದಕ್ಕೆ ಪ್ರೇರಿಸಿ ಸಕ್ರಿಯ ಪ್ರೋತ್ಸಾಹವನ್ನಿತ್ತುದೂ ಒಂದು ಕೊಡುಗೆಯಾಗಿದೆ. ಸಂಘದ ಸ್ಥಾಪನೆಯ ಮರುವರ್ಷವೇ ತಮಿಳು-ಕನ್ನಡ ವಾಚನ ಪುಸ್ತಕಗಳನ್ನು ಬರೆದವರಿಗೆ ೫೦ ರೂಪಾಯಿಗಳ ಇನಾಮು ಕೊಡಬೇಕೆಂದು ಸೂಚಿಸಿದ ದೇಶಪಾಂಡೆಯವರ ವಿಶಾಲ ದೃಷ್ಟಿಯು ಗೌರವಾರ್ಹವಾದುದು. ಆ ಪುಸ್ತಕವೂ ಪ್ರಕಟವೂ ಆಗಿದೆ. ಸಂಘದ ಆರಂಭದ ಕಾರ್ಯಕಲಾಪಗಳ ವರದಿಗಳಲ್ಲಿ ದೇಶಪಾಂಡೆಯವರು ಧನ ಸಹಾಯ ಮಾಡಲು ಮುಂಬಂದ ಹಲವಾರು ಪ್ರಸಂಗಗಳಿವೆ. ಅಖಿಲ ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡು ಮೈಸೂರಿನ ಅನೇಕ ಸಾಹಿತ್ಯಿಕರೊಡನೆ ಸಂಪರ್ಕ ಬೆಳೆಸಿದರು. ಕನ್ನಡಭಾಷಾ ಭೇದವನ್ನು ಸಮನ್ವಯಗೊಳಿಸಲು ಅವರು ವಿಶೇಷ ಪ್ರಯತ್ನಪಟ್ಟರು (೧೯೧೦ನೆಯ ದಶಕದಲ್ಲಿ). ಕನ್ನಡದ ಬೆಳವಣಿಗೆಗಾಗಿ ಯೋಜನಾಬದ್ಧವಾಗಿ ಶ್ರಮಿಸಿದ ರಾ.ಹ. ದೇಶಪಾಂಡೆ ಅರುಣೋದಯ ಕಾಲದ ಚಿರಸ್ಥಾಯೀ ಲೇಖಕರಾಗಿದ್ದಾರೆ.

ಸಂಘವನ್ನು ಕಟ್ಟಿದವರಲ್ಲಿ ಗುರುಬಸಪ್ಪ ಫಕೀರಪ್ಪ ಹಳಕಟ್ಟಿಯನ್ನೂ ಸೇರಿಸತಕ್ಕುದು. ಶಿಕ್ಷಣ ಖಾತೆಯ ಕಚೇರಿಯಲ್ಲಿ ಕೆಲಸಕ್ಕಿದ್ದುಕೊಂಡೇ ಸಾಹಿತ್ಯಿಕ ಸೇವೆಯನ್ನು ಮಾಡಿದ್ದಾನೆ. ಭೂಮಿತಿಯ ಇತರ ಪಠ್ಯಪುಸ್ತಕಗಳನ್ನೂ ಚರಿತ್ರೆಯ ಗ್ರಂಥಗಳನ್ನೂ ಬರೆದಿದ್ದಾನೆ. ಸಂಘದ ಯೋಜನೆಗಳಲ್ಲಿ ಪಾಲುಗೊಂಡಿದ್ದಾನೆ.

ವಿದ್ಯಾವರ್ಧಕ ಸಂಘದ ಪ್ರೋತ್ಸಾಹ ಹಾಗೂ ಪ್ರಯೋಜನಗಳನ್ನು ಪಡೆದ ಲೇಖಕರಲ್ಲಿ ಪ್ರಾಥಮಿಕ ಶಿಕ್ಷಕರಿದ್ದಾರೆ; ಸರಕಾರೀ ನೌಕರರಿದ್ದಾರೆ; ವಕೀಲರೂ ಇದ್ದಾರೆ. ಅವರಲ್ಲಿ ಹಲವರು ಜನಪ್ರಿಯ ಕಥೆಗಳನ್ನು ಹೇಳುವಲ್ಲಿ ಆಸ್ಥೆ ತೋರಿದರು. ಹನುಮಂತ ಕೇಶವ ಹುಯಿಲಗೋಳ, ಭೀಮರಾವ ಸಿಂಗಿತ, ವ್ಯಾಸರಾವ ರೊದ್ದ, ಕೃಶ್ರೀ. ಹುನಗುಂದ, ಹನುಮಂತರಾವ ಸಗರ ಇವರು ಅನ್ಯಭಾಷೆಗಳಿಂದ ವಿವಿಧ ಕಥೆಗಳನ್ನೂ ಸಂಸ್ಕೃತ, ಇಂಗ್ಲಿಷ್ ನಾಟಕಗಳ ಕಥಾಸಾರವನ್ನೂ ಅನುವಾದಿಸಿ ವಾಚನಾಭಿರುಚಿಯನ್ನು ಹೆಚ್ಚಿಸಲು ಕಾರಣರಾದರು. ಇವುಗಳಲ್ಲಿಯ ಅನೇಕ ಕೃತಿಗಳನ್ನು ವಿದ್ಯಾವರ್ಧಕ ಸಂಘವೇ ಪ್ರಕಟಿಸಿ ಪ್ರೋತ್ಸಾಹಿಸಿದೆ. ಸಂಘದ ಪಾರಿತೋಷಕ ಯೋಜನೆಯು ಸ್ವತಂತ್ರ, ಐತಿಹಾಸಿಕ ಕಾದಂಬರಿಗಳ ರಚನೆಗೆ ಎಡೆಮಾಡಿಕೊಟ್ಟಿತು. ಈ ಮೊದಲು ಹೇಳಿದ ಗದಗಕರ, ಅರಳಿ ಇವರ ಜೊತೆಗೆ ಗಳಗನಾಥರನ್ನೂ ಈ ಮಾಲಿಕೆಯಲ್ಲಿ ಸೇರಿಸಬೇಕು. ಅವರು ತಮ್ಮ ಪ್ರಥಮ ಕಾದಂಬರಿಯಾದ 'ಪದ್ಮನಯನಾ'ದ ಪ್ರಸ್ತಾವನೆಯಲ್ಲಿ 'ಪಾರಿತೋಷಕದ ಆಶೆಯನ್ನು ತೋರಿಸಿ ಈ ಕಾದಂಬರಿಯನ್ನು ಬರೆಯಲಚ್ಚಿದ ಕರ್ನಾಟಕ ವಿದ್ಯಾವರ್ಧಕ ಸಂಘದ ಉಪಕಾರವನ್ನೂ ಇದನ್ನು ಬರೆಯುವ ವಿಷಯವಾಗಿ ಯೋಗ್ಯ ಉಪದೇಶ

ಮಾಡಿದ ಗುರುವರ್ಯ ರಾ. ಸಾ. ರಾಮಚಂದ್ರ ದೇಶಪಾಂಡೆಯವರ ಉಪಕಾರವನ್ನೂ ಸ್ಮರಿಸದೆ ಇರೆನು' ಎಂದಿದ್ದಾರೆ. ಈ ರೀತಿಯ ಪ್ರೋತ್ಸಾಹ, ಪ್ರೇರಣೆಗಳು ಒಂದು ತಲೆಮಾರಿನಿಂದ ಇನ್ನೊಂದಕ್ಕೆ ಸಾಗಿ ಬಂದುವು. ಅದರಿಂದ ಉತ್ತರ ಕರ್ನಾಟಕದಲ್ಲಿ ಹೊಸಗನ್ನಡ ಸಾಹಿತ್ಯವು ಬಾಲ್ಯಾವಸ್ಥೆಯನ್ನು ದಾಟಿಕೊಂಡು ಪ್ರೌಢ ದೆಸೆಯನ್ನು ಹೊಂದಲಾರಂಭಿಸಿತು.

### ೯೩೫ ಉತ್ತರ ಕರ್ನಾಟಕದ ಇತರತ್ರ

ಹೈದರಾಬಾದ ಕರ್ನಾಟಕದಲ್ಲಿ ಸಾಹಿತ್ಯಿಕ ಚಟುವಟಿಕೆ ಕಂಡುಬರುವುದಿಲ್ಲ. ಅದರ ಕಾರಣವೆಂದರೆ ಆಗಿನ ದಿನಗಳಲ್ಲಿ (ಮುಂದೆ ೧೯೨೦ನೆಯ ದಶಕದ ವರೆಗೂ) ಕನ್ನಡ ಮೂಲಕವಾದ ಶಿಕ್ಷಣವೇ ಇರಲಿಲ್ಲ.

ಇತ್ತ ಬಳ್ಳಾರಿ ಜಿಲ್ಲೆಯೂ ಸಾಹಿತ್ಯದ ದೃಷ್ಟಿಯಿಂದ ಬಡವಾದದ್ದೇ. ಮದ್ರಾಸ ಪ್ರಾಂತದ ಒಂದು ಜಿಲ್ಲೆಯಾಗಿದ್ದರೂ, ಕರಾವಳಿ ಜಿಲ್ಲೆಗಳಲ್ಲಿ ಕಂಡುಬಂದ ಸಾಹಿತ್ಯ ಸೃಷ್ಟಿ ಈ ಜಿಲ್ಲೆಯಲ್ಲಿ ಗೌಣವಾಗಿದ್ದಿತು. ಹಾಗೆ ನೋಡಿದರೆ ಕ್ರೈಸ್ತಮೂಲವಾದ ಹೊಸಗನ್ನಡ ಸಾಹಿತ್ಯಕ್ಕೆ ಇದುವೆ ಮೂಲ ಸೆಲೆ. ಆದರೆ ದೇಶೀಯರು ಕನ್ನಡ ಸಾಹಿತ್ಯ ನಿರ್ಮಾಣದಲ್ಲಿ ಎದ್ದು ಕಾಣುವಂತೆ ಕೆಲಸ ಮಾಡಿಲ್ಲವೆನುವುದು ನಿಜ ಸಂಗತಿ. ಇದರ ಇನ್ನೊಂದು ಕಾರಣವೆಂದರೆ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಜನಿಸಿದ ವಿದ್ಯಾವಂತರು, ಸಾಹಿತ್ಯದಲ್ಲಿ ಒಲವಿದ್ದವರು ಬೆಂಗಳೂರಲ್ಲಿ ನೆಲೆಸುವ ಒಲವನ್ನು ತೋರಿದುದು.

ರಂಗಭೂಮಿಯ ವಿಷಯದಲ್ಲಿ ಮಾತ್ರ ತೆಲುಗು ಭಾಷಿಕರೊಡನೆ ಕನ್ನಡಿಗರೂ ಸ್ಪರ್ಧಿಸುತ್ತ ಮೇಲ್ನಡೆಯನ್ನು ಹೊಂದಿದ್ದರು. ಉದಾಹರಣೆಗೆ, ತಾಡಪತ್ರಿ ರಾಘವಾಚಾರ್ಯರಂತಹರು ಬರಿಯೆ ಅಭಿನಯಿಸುವುದಲ್ಲ, ನಾಟಕರಚನೆಗೂ ಅವರು ತೊಡಗುವ ಆವಶ್ಯಕತೆ ಇದ್ದಿತು. ನಾಟಕಕಾರರಲ್ಲಿ ಒಬ್ಬರನ್ನು ಮಾತ್ರ ಇಲ್ಲಿ ಪರಿಚಯಿಸುವೆ. ಅವರೇ ಚಿತ್ತವಾಡಿಗೆಯ ಹನುಮಂತಗೌಡರು.

ಕ್ರಿ.ಶ. ೧೮೫೭ರಲ್ಲಿ ಜನಿಸಿದ ಹನುಮಂತ ಗೌಡರಿಗೆ ಅಭಿನಯದ ಗೀಳು. ಆದರೆ ಆಡಲು ಕನ್ನಡ ನಾಟಕಗಳೇ ಇರಲಿಲ್ಲವಾದ್ದರಿಂದ ತಾವೇ ರಚಿಸಿದರು.* ಪ್ರಮೀಲಾರ್ಜುನೀಯ, ಸುಭದ್ರಾರ್ಜುನೀಯ, ಪ್ರಚ್ಛನ್ನ ಪಾಂಡವೀಯ, ಭೋಜ ಚರಿತ್ರೆ, ಉತ್ತರರಾಮಚರಿತ್ರೆ–ಮೊದಲಾದ ಪೌರಾಣಿಕ ನಾಟಕಗಳನ್ನು ರಚಿಸಿದ್ದಾರೆ. ಜೊತೆಗೆ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಪಟ್ಟ ಐತಿಹಾಸಿಕ ನಾಟಕಗಳೂ ಇವರಿಂದ

---

* ಇದರ ವಿವರಗಳು ಅವರ ಡೈರಿಯಲ್ಲಿದ್ದು ಅವರ ನಾಟಕ ಹಸ್ತಪ್ರತಿಗಳು ಪ್ರೊ. ಧ್ರುವನಾರಾಯಣ ಅವರಲ್ಲಿ ಲಭ್ಯವಿವೆ. ಹನುಮಂತ ಗೌಡರ ನಾಟಕಗಳಾವವೂ ಮುದ್ರಣಗೊಂಡಂತಿಲ್ಲ.

ರಚಿತವಾಗಿವೆ. ತೆಲುಗಿನಲ್ಲಿಯೂ ಅವರ ಲೇಖನಿ ಹರಿದಾಡಿದೆ. ಆಂಗ್ಲಭಾಷೆಯಲ್ಲಿಯ 'Guide to the Ruins of Hampi' ಎಂಬುದನ್ನೂ ಗಣಿಸಬೇಕು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಹೊರಡತೊಡಗಿದಂದಿನಿಂದ ಅದರ ಆರಂಭಿಕ ಸಂಪುಟಗಳಲ್ಲಿ ಅವರ ಬರಹಗಳನ್ನು ಕಾಣಬಹುದಾಗಿದೆ.

## ಸಂದರ್ಭ ಸೂಚಿ

೧. 'ಚಾಮರಾಜೇಂದ್ರ ಒಡೆಯರ ಚರಿತ್ರೆ' ಯಲ್ಲಿ ಉದ್ಧೃತ.
೨. Karnataka Sabdanusasanam; ed. by. B.L. Rice. Introduction.
೩. ಗ್ರಂಥಕರ್ತರ ಚರಿತ್ರಕೋಶ. ಪು. ೩.
೪. Report on Publications Issued and Registered, 1893. p. 107
೫. ಕರ್ಣಾಟಕ ಕವಿಚರಿತೆ. II, ಮುನ್ನುಡಿ, ಪು. ೨೯.
೬. ಕನ್ನಡ ಪ್ರಭ; ೧೫-೯-೧೯೬೮: ಡಿ.ವಿ.ಜಿ.
೭. ಅದೇ.
೮. ದಯಾಸಾಗರ ಎಂ. ವೆಂಕಟಕೃಷ್ಣಯ್ಯ, ಪು. ೧೦೭.
೯. ಕನ್ನಡನುಡಿ, ೧೯೬೯ ಎಪ್ರಿಲ್–ಮೇ, ಪು. ೫೦–೫೨.
೧೦. ಗಳಗನಾಥ, (ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರಕಟನೆ) ಪು. ೪೮.
೧೧. ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ; ಐವತ್ತು ವರುಷ
೧೨. ವಾಗ್ಭೂಷಣ, ಫೆಬ್ರುವರಿ ೧೯೬೪ : ಮುದವೀಡು ಕೃಷ್ಣರಾಯರು.
೧೩. ಚನಬಸವಪ್ಪ ಬಸವಲಿಂಗಪ್ಪ ಧಾರವಾಡ ಇವರ ಚರಿತ್ರೆಯು.
೧೪. ಅದೇ.
೧೫. ಜೀವನ ಶಿಕ್ಷಣ, ಸಂಪುಟ ೯೩ (೧೯೫೭/೫೮) ವೀ.ರು. ಕೊಪ್ಪಳ, ಪು.೬೧
೧೬. ಸಂಯುಕ್ತ ಕರ್ನಾಟಕ, ದಿ. ೫-೬-೧೯೬೬: ವೆಂಕಟೇಶ ಸಾಂಗಲಿ.
೧೭. History of Modern Marathi Literature, p.141
೧೮. ಕನ್ನಡ ಲಘುವ್ಯಾಕರಣ; ಪೀಠಿಕೆ.
೧೯. ಸೀತಾರಣ್ಯಪ್ರವೇಶ ನಾಟಕ; ಪ್ರಸ್ತಾವನಾ.
೨೦. ಕನ್ನಡ ನುಡಿ, ೧೯೬೬: ವೆಂಕಟೇಶ ಸಾಂಗಲಿ.
೨೧. ವಾಗ್ಭೂಷಣ, ಸಂಪುಟ ೨೨(೧೯೧೮), ನಂ. ೮.
೨೨. ಬೀರಬಲ್ಲನ ಚರಿತ್ರೆ, ಪ್ರಸ್ತಾವನೆ.

ಪ್ರಕರಣ : 1

# ಸಿದ್ಧತೆ

ಇದುವರೆಗಿನ ವಿವೇಚನೆಯಲ್ಲಿ ಹೊಸಗನ್ನಡ ಸಾಹಿತ್ಯದ ಹಿನ್ನೆಲೆಯನ್ನೂ ಆ ಕಾಲದ ಸಾಹಿತ್ಯ ನಿರ್ಮಾಪಕರ ಕಾರ್ಯ ಬಗೆಯನ್ನೂ ನೋಡಿದೆವು. ಇನ್ನೀಗ ಆಗಿನ ಸಾಹಿತ್ಯ ಕೃತಿಗಳ ಸ್ಥೂಲ ಸಮೀಕ್ಷೆಯನ್ನು ಮಾಡುತ್ತ ಆಧುನಿಕ ಕನ್ನಡ ಸಾಹಿತ್ಯವು ಸಾಗಿಬಂದ ಆರಂಭದ ನಡೆಯನ್ನು ಗುರುತಿಸೋಣ.

## ೧೧. ವಿದೇಶಗಳಲ್ಲಿ ಕನ್ನಡದ ಸೊಲ್ಲು

ಕನ್ನಡ ಭಾಷೆಗೆ ಪಾಶ್ಚಾತ್ಯ ಸಂಪರ್ಕವು ಕ್ರಿಸ್ತ ಶಕದ ಆರಂಭದಿಂದಲೇ ಮೊದಲಾಯಿತು. ಎರಡನೆಯ ಶತಮಾನದ ಒಂದು ಗ್ರೀಕ್ ಪ್ರಹಸನದಲ್ಲಿ ಕನ್ನಡ ವಾಕ್ಯಗಳ ಹಾಗೂ ಮಲ್ಪೆ, ಉದ್ಯಾವರ ಬಂದರಗಳ ಉಲ್ಲೇಖಗಳು ಕಂಡುಬಂದಿವೆ. ಅದರಂತೆ, ವಾಣಿಜ್ಯದ ಮೂಲಕ ೧೦-೧೧ ಶತಮಾನಗಳಿಂದ ಅರಬ್ ಜನರ, ಅನಂತರ ೧೫ನೆಯ ಶತಮಾನದಿಂದ ಯೂರೋಪ ದೇಶದವರ ಸಂಪರ್ಕ ಉಂಟಾಯಿತು. ಇಂಥ ವಿದೇಶೀಯರಲ್ಲಿ ಅರಬ್, ಪೋರ್ತುಗೀಜ್ ಮತ್ತು ಇಂಗ್ಲಿಷ್ ಭಾಷಿಕರ ಒಡನಾಟವು ನಮ್ಮ ನುಡಿಯ ಮೇಲೆ ಪರಿಣಾಮವನ್ನುಂಟುಮಾಡಿದೆ. ಅನೇಕ ಅರಬ್ಬೀ ಮತ್ತು ಪೋರ್ತುಗೀಜ ಶಬ್ದಗಳು ವಿಜಯನಗರ ಸಾಮ್ರಾಜ್ಯ ಕಾಲದಿಂದಲೇ ನಮ್ಮ ನುಡಿಯಲ್ಲಿ ಸೇರಿಕೊಂಡಿವೆ. ಕೃಷ್ಣದೇವರಾಯನ ಕಾಲದಿಂದಂತೂ ಗೋವೆ-ಕರ್ನಾಟಕಗಳ ನಡುವೆ ನಿಯಮಿತವಾದ ವಾಣಿಜ್ಯ ಸಂಬಂಧವಿದ್ದಿತು. ಮುಂದುವರಿದ ಈ ಸಂಪರ್ಕದ ಪರಿಣಾಮವಾಗಿ ಅನಾನಸು, ಕಂದೀಲು, ಚಾವಿ, ಜುಗಾರು, ಪರಾತ, ಪಿಂಗಾಣಿ, ಪೇರಲ, ಲಿಂಬೆ ಮುಂತಾದ ಅನೇಕ ಪೋರ್ತುಗೀಜ ಶಬ್ದಗಳು ಕನ್ನಡದಲ್ಲಿ ಪ್ರವೇಶಿಸಿ ಇಂದಿಗೂ ದಿನಬಳಕೆಯಲ್ಲಿವೆ.

ಅದರಂತೆ ಕನ್ನಡ ಶಬ್ದಗಳೂ ಪೋರ್ತುಗೀಜ ಭಾಷೆಯಲ್ಲಿ ಸೇರಿಕೊಂಡಿವೆಯೆನ್ನುವುದು ಮಹತ್ವದ್ದು. ಪ್ರವಾಸಿಯಾಗಿ ಬಂದಿದ್ದ ಲೋಪ್ಸ್ ಬರೆದಿಟ್ಟ (ಕ್ರಿ.ಶ. ೧೫೨೫) Chronica de Bisnaga- (ವಿಜಯನಗರದ ಇತಿವೃತ್ತ)-ದಲ್ಲಿ ಕೆಲವು ಕನ್ನಡ ಶಬ್ದಗಳು ನುಸುಳಿಕೊಂಡಿವೆ. ಉದಾಹರಣೆಗೆ, ಬಟಗಡಲೆ, ಬಡಗ,

ಕಾಲುದಾರಿ, ಕಾರೆಳ್ಳು ಇತ್ಯಾದಿ. ಈ ಬಗೆಯ ಶಬ್ದಗಳನ್ನು ಉಚ್ಚಾರದ ಕಿಂಚಿತ್ ವ್ಯತ್ಯಾಸದೊಡನೆ ಹಳೆಯ ಪೋರ್ತುಗೀಜ ಶಬ್ದಕೋಶಗಳಲ್ಲಿ ಕಾಣಬಹುದು.[੭]

ಈ ಸಂಪರ್ಕದ ಇನ್ನೊಂದು ಪರಿಣಾಮವೆಂದರೆ, ಕನ್ನಡ ನಾಡಿಗೆ ಆಗಮಿಸಿದ್ದ ಆಗಿನ ವಿದೇಶೀಯರು ತಮ್ಮ ಗಮನಕ್ಕೆ ಬಂದ ಕನ್ನಡ ಶಬ್ದಗಳನ್ನು ಬರೆದಿಟ್ಟುಕೊಳ್ಳುತ್ತಿದ್ದುದು. ಅಡೆಲುಂಗ್ ಎಂಬ ಜರ್ಮನಿಗನು, ಜಗತ್ತಿನ ಸುಮಾರು ೫೦೦ ಭಾಷೆಗಳಲ್ಲಿ ಬೈಬಲ್ ವಾಣಿಯು ಅದೆಂತು ಬಂದಿದೆಯೆಂದು ತೋರಿಸುವ ದೃಷ್ಟಿಯಿಂದ ಆ ಭಾಷೆಗಳಲ್ಲಿಯ ಒಂದೊಂದು ಅವತರಣಿಕೆಯನ್ನು ತನ್ನ Mithridates oder allgemine Sprac hen-kunde mit dem Vater unser als Sprachprobe in bey nahe funfhunden Sprachen und Mundarten (Berlin, 1806) ಎಂಬ ಪುಸ್ತಕದಲ್ಲಿ ಕೊಟ್ಟಿದ್ದಾನೆ. ಕನ್ನಡ ಅವತರಣಿಕೆಗೆ ಪೀಠಿಕಾರೂಪವಾಗಿ ನಾಲ್ಕು ಮಾತು ಬರೆಯುತ್ತ ಆ ಹಿಂದೆ ಕನ್ನಡ ಶಬ್ದಗಳ ಪಟ್ಟಿ ಮಾಡಿದ್ದ ಕೆಲವು ವಿದೇಶೀಯರ ಹೆಸರುಗಳನ್ನು ಕಾಣಿಸಿದ್ದಾನೆ. ಅವನ ಪ್ರಕಾರ, ಜೆ. ಎಫ್. ಫ್ರಿಜ್ ಎಂಬವನು ೩೬ ಕನ್ನಡ ಶಬ್ದಗಳನ್ನೂ ಅಂಕಿಗಳನ್ನು ತನ್ನ Orientalischer und Occidentalischer Sprachmeister (Leipzig, 1748) ಗ್ರಂಥದ ೨೧೨ನೆಯ ಪುಟದಲ್ಲಿ ಉಲ್ಲೇಖಿಸಿದ್ದಾನೆ. ಅದರಂತೆ ಫ್ರಾಂರಿಝ್ ಕಾರ್ಲ್ ಆಲ್ಟರ್ ಎಂಬವನ ಶಬ್ದ ಮತ್ತು ಅಂಕಿಗಳ ಸಂಗ್ರಹವು Ueber die samskrdamische Sprache (Vienna, 1709)ದಲ್ಲಿ ಬಂದಿದೆ. ಆ ಶಬ್ದಗಳನ್ನು ರಶಿಯಾದಲ್ಲಿ ಸಿದ್ಧವಾಗಿದ್ದ ಒಂದು ತುಲನಾತ್ಮಕ ಶಬ್ದಕೋಶದಿಂದ ತೆಗೆದುಕೊಂಡದ್ದಾಗಿ ಆಲ್ಟರ್ ಹೇಳಿದ್ದಾನೆ. ಎಂದರೆ ಆ ಕಾಲದಲ್ಲಿ ಕನ್ನಡದ ಸೊಲ್ಲು ಕ್ಷೀಣವಾಗಿಯಾದರೂ ರಶಿಯದ ಸೀಮೆಯನ್ನು ಮುಟ್ಟಿದ್ದಿತು! ಅದೇ ಶತಮಾನದ ಲೊರೆಂರ್ಝೊ ಹಾರ್ವಸ್ ಎಂಬ ಸ್ಪೇನಿಶ್ ಮಿಶನರಿಯು ಸಿದ್ಧಪಡಿಸಿದ ಬಹುಭಾಷಾ ಕೋಶದಲ್ಲಿ (Vocabulario polyglotto con prolegomeni Sopra piu di cl lingue, Cesena, 1786, p. 163 ff) 63 ಕನ್ನಡ ಶಬ್ದಗಳು ನಮೂದಾಗಿವೆ.

ಈ ರೀತಿಯ ಶಬ್ದ ಸಂಗ್ರಹವನ್ನು ಅದೇಕೆ ಮಾಡುತ್ತಿದ್ದರು? ವಾಣಿಜ್ಯ ಅಥವಾ ಮತಪ್ರಸಾರ ಕಾರ್ಯಕ್ಕೆಂದು ಬಂದ ಯೂರೋಪಿಯನ್ನರು ತಾವು ಸಂಚರಿಸಿದ ಪ್ರದೇಶದ ಜನರ ಆಚಾರ ವಿಚಾರಗಳನ್ನೂ ಕಲಿತ ಹೊಸ ಶಬ್ದಗಳನ್ನೂ ಬರೆದಿಡುವುದು ಸ್ವಾಭಾವಿಕವೇ. ಆದರೆ ಅಡೆಲುಂಗ್ ಕೊಟ್ಟಿದ್ದ ಕಾರಣವು ತುಸು ಬೇರೆಯಾಗಿದ್ದು, ಅಂದಿನ ವಿದೇಶೀ ಪ್ರವಾಸಿಗರ ವಿಶಿಷ್ಟ ಮನೋಧರ್ಮವನ್ನು ಸೂಚಿಸುತ್ತದೆ. ಹಲವು ಶತಮಾನಗಳಿಂದ ಅರಬ್ ಮತ್ತು ಮಾಪಿಳ್ಳೈ ಜನರು ಕೆನರಾ ಕರಾವಳಿಯನ್ನು ಕಾಯಂ ವಾಸಸ್ಥಳವನ್ನಾಗಿ ಮಾಡಿಕೊಂಡಿದ್ದು ಅವರು ಆ ಪ್ರದೇಶದ ಭಾಷೆಯ ಮೇಲೆ ಯಾವ ಪರಿಣಾಮವನ್ನು ಬೀರಿದರು; ಅದರಂತೆ ಆ ಭಾಷಿಕ ಪ್ರಭಾವವು ಅರಬ್ಬೀಯರ ಮೇಲೆ

ಯಾವ ರೀತಿ ಉಂಟಾಯಿತು-ಎಂಬುದನ್ನು ತಿಳಿಯುವ ಉತ್ಸುಕತೆಯೇ ಅದಕ್ಕೆ ಕಾರಣವೆಂದು ಅಡೆಲುಂಗ್ ಅನ್ನುತ್ತಾನೆ.*

ಇಂತು ೧೯ನೆಯ ಶತಮಾನಕ್ಕಿಂತ ಮೊದಲೇ ವಿದೇಶೀಯರು ಕನ್ನಡ ನುಡಿಯ ವಿಚಾರವಾಗಿ ಆಗೀಗ ಆಸಕ್ತಿ ವಹಿಸಿದ್ದರೆನ್ನುವುದಕ್ಕೆ ಮೇಲಿನ ಉಲ್ಲೇಖಗಳನ್ನು ಕೊಡಲಾಯಿತು. ಇವು ಬರಿ ಶಬ್ದ, ಅಂಕಿಗಳ ಉಲ್ಲೇಖವಾದರೆ ನಿಯಮಿತವಾದ ವಾಕ್ಯ ರಚನೆಯುಳ್ಳ ಒಂದು ಕನ್ನಡ ಅವತರಣಿಕೆಯನ್ನು (ಬೈಬಲ್ ವಾಣಿ) ಅಡೆಲುಂಗ್ ತನ್ನ ಪುಸ್ತಕದಲ್ಲಿ ಕೊಟ್ಟಿರುವನು. ಕ್ರಿ.ಶ. ೧೮೦೬ನೆಯ ವರ್ಷದಷ್ಟು ಹಿಂದೆ ಅದನ್ನು ಬರೆದವನು ಬೆಂಜಮಿನ್ ಶುಲ್ಜ್ ಎಂಬ ಡೇನಿಶ್ ಮಿಶನರಿ. ತಮಿಳುನಾಡಿನಲ್ಲಿದ್ದ ಶುಲ್ಜ್ ಅದಾವಾಗ ಕರ್ನಾಟಕಕ್ಕೆ ಬಂದು ಕನ್ನಡವನ್ನು ಕಲಿತನು ಎಂಬುದು ತಿಳಿಯದು. (ಅವನ ಚರಿತ್ರೆ ಇರುವ ಕೆಲವು ಪುಸ್ತಕಗಳಲ್ಲಂತೂ ಅದರ ಪ್ರಸ್ತಾಪ ಬಂದಿಲ್ಲ.) ಅದೇನಿದ್ದರೂ ಲಭ್ಯವಿರುವ ಹಳಗಾಲದ ಹೊಸಗನ್ನಡ ಬರವಣಿಗೆಯಾದುದರಿಂದ ಅದನ್ನು ಇದ್ದುದಿದ್ದಂತೆ ಇಲ್ಲಿ ಉದ್ಧರಿಸಲಾಗಿದೆ.+

"ವೈಕುಂಠದಾಗ ಇಹೊ ನಮ್ಮ ತಂದಿ ನಿಮ್ಮ ಹೆಸರು ಪರಿಶಿಕೊಂಬೊ ಹಾಗೆ ನಿಮ್ಮ ರಾಜ್ಯ ಬರಲಿ. ನಿಮ್ಮ ಸ್ರೇಟ್ಟ ವೈಕುಂಠದಾಗೆ ಹೇಗೆ ಮಾಡಿಸಿಕೋ ಬೇಕೋ ಹಾಗೆ ಭೂಮಂಡಲದಾಗೆ ಮಾಡಿಸಿಕೊಬೇಕು. ಅಂದಂದೆ ನಮ್ಮ ಅನ್ನ ನಮ್ಮಗೆ ಈ ಹೊತ್ತಿಗೆ ಕೊಡಬೇಕು. ನಮ್ಮ ಸಾಲಗಡಿಗೆ (ಗಳಿಗೆ) ನಾವು ಹ್ಯಾಗೆ ತಾಳಿಕೊತೆವೊ ನೀವು ಹಾಗೆವೆ ನಮ್ಮ ಸಾಲ ನಮ್ಮಗೆ ತಾಳಿಕೊಳ್ಳಿ. ನಮ್ಮನ ಶೋದಿನಿವಳಗೆ [? Schodinivalage) ಪ್ರವೇಶ ಮಾಡಬೇಡಿ. ಆದರೆ ಕೆಟ್ಟದರ ವಳಗಿಂದ ನಮ್ಮನ ರಕ್ಷಿಸಿಕೊಳ್ಳಿ. ಅದೇನು ಅಂದರೆ ರಾಜ್ಯವಂನು ಸೊರವರಿನು [sorawarinu] ಮಹಿಮನು. ನಿಮಗೆ ಪ್ರತ್ಯಂತರವು ಇರಬೇಕು, (ಅ)ಹುದು". ++

ವಿದೇಶೀಯರು ತಮ್ಮ ನೆಲದ ಅಡಿಯಲ್ಲಿ ಚೆಲ್ಲಿದ ಈ ಕನ್ನಡದ ಕಾಳುಗಳನ್ನು ನೋಡಿದೆವು. ಇನ್ನು, ನಮ್ಮ ದೇಶದಲ್ಲಿಯೇ ನಡೆದ ಹೊಸಗನ್ನಡದ ಬಿತ್ತನೆಯನ್ನು ಪರಿಶೀಲಿಸುವ.

---

*Da die Arabischen Mapulets in diesem Lande Seit vielen Jahrhundcrten ihren Haupsiz gehabt haben, so wunschte Man zu Wissen, was Fuxrinflus sie auf die Landerprache, oder diese auf die ihrige gehabt (p-215 of Mithridates. . . . .)

+ ರಂ.ಶ್ರೀ.ಮುಗಳಿಯವರು ವಿದೇಶ ಪ್ರವಾಸದಲ್ಲಿದ್ದಾಗ (೧೯೩೪) ನನಗಾಗಿ ಬ್ರಿಟಿಶ್ ಮ್ಯೂಸಿಯಮ್‌ನ ಗ್ರಂಥಾಲಯದಲ್ಲಿ ಅಡೆಲುಂಗನ ಪುಸ್ತಕವನ್ನು ದೊರಕಿಸಿ, ಮೇಲಿನ ವಿವರಗಳನ್ನು ಒದಗಿಸಿರುವರು.

++ ಮೂಲವು ರೋಮನ್ ಲಿಪಿಯಲ್ಲಿದ್ದು, ಕೆಲವು ಶಬ್ದಗಳ ಅರ್ಥವಾಗುವುದಿಲ್ಲ.

## ೧೨ ಹತ್ತೊಂಬತ್ತನೆಯ ಶತಮಾನದ ಸಾಹಿತ್ಯದ ಕಾಲವಿಭಾಗ

ಹೊಸಗನ್ನಡ ಗದ್ಯದಲ್ಲಿ ಬೈಬಲ್ ಅನುವಾದಕ್ಕೆ ಅಣಿಯಾದ ಜಾನ್ ಹ್ಯಾಂಡ್ಸ್ ನಮ್ಮಲ್ಲಿಗೆ ಬಂದ ೧೮೦೯ನೆಯ ವರ್ಷವನ್ನು ಪಾಶ್ಚಾತ್ಯ ಪ್ರಭಾವದ ದೃಷ್ಟಿಯಿಂದ ಹೊಸಗನ್ನಡ ಸಾಹಿತ್ಯದ ಆರಂಭ ವರ್ಷವೆಂದು ತಿಳಿಯುವಾ. ಇತ್ತ ಹೊಸಗನ್ನಡ ಸಾಹಿತ್ಯದ ಮುಖ್ಯ ಲಕ್ಷಣವೆನಿಸಿದ ಸ್ವತಂತ್ರ ಸಾಮಾಜಿಕ ಕಾದಂಬರಿಯಾದ 'ಇಂದಿರಾಬಾಯಿ' ೧೮೯೯ರಲ್ಲಿ ಹೊರಬಂದಿತು. ಹೀಗೆ ೧೮೧೦ರಿಂದ ೧೮೯೯ರ ವರೆಗಿನ ಅವಧಿಯನ್ನು ಹೊಸಗನ್ನಡ ಸಾಹಿತ್ಯದ ಅರುಣೋದಯದ ಕಾಲವೆಂದು ತಿಳಿಯಬೇಕು. ಅದರ ಹಂತಹಂತದ ಬೆಳವಣಿಗೆಯನ್ನು ಗುರುತಿಸಲು ಈ ರೀತಿಯಾದ ಕಾಲಖಂಡಗಳನ್ನು ಮಾಡಿಕೊಳ್ಳಬಹುದು:-

(ಅ) ೧೮೧೦ರಿಂದ ೧೮೪೦ : ನಸುಕಿನ ಕಾಲ

(ಆ) ೧೮೪೧ರಿಂದ ೧೮೮೦ : ಮುಂಬೆಳಗಿನ ಕಾಲ

(ಇ) ೧೮೮೧ರಿಂದ ೧೮೯೯ : ಹೊಂಬೆಳಗು (ನವೋದಯ ಕಾಲ)

(ಅ) ನಸುಕಿನ ಕಾಲದಲ್ಲಿ ಕತ್ತಲೆಯ ಮಬ್ಬು ಹರಿದಿರುವುದಿಲ್ಲ ತಾನೇ ಮೊದಲಿನ ಮೂರು ದಶಕಗಳಲ್ಲಿ ಇದೇ ಪರಿಸ್ಥಿತಿ ಇದ್ದಿತು. ಪಾಶ್ಚಾತ್ಯ ರೀತಿಯ ಶಿಕ್ಷಣ ಕ್ರಮವು ಇನ್ನೂ ರೂಢವಾಗಿರಲಿಲ್ಲ. ಲಂಡನ್ (೧೮೧೧). ವೆಸ್ಲಿಯನ್ (೧೮೨೧) ಮತ್ತು ಬಾಸೆಲ್ (೧೮೩೪) ಇವು ಮೂರು ಮಿಶನ್ ಸಂಸ್ಥೆಗಳು ನಾಡಿನಲ್ಲಿ ನೆಲೆಗೊಂಡಿದ್ದುವಾದರೂ ಈ ಅವಧಿಯಲ್ಲಿ ಲಂಡನ್ ಮಿಶನ್‌ದವರು ಮಾತ್ರ ಗ್ರಂಥರಚನೆಯಲ್ಲಿ ತೊಡಗಿದ್ದರು. ಅವರಲ್ಲಿ ಕೂಡ, ಶಬ್ದಕೋಶಕಾರನಾದ ರೀವ್ಹನ ಕಾರ್ಯವಷ್ಟೇ ಎದ್ದು ಕಾಣುವಂತಿದ್ದಿತು. ಇತ್ತ ದೇಶೀಯರಲ್ಲಿ ಕೃಷ್ಣಮಾಚಾರಿಯನ್ನುಳಿದು ಇನ್ನಾರೂ ಹೊಸಗನ್ನಡ ಸಾಹಿತ್ಯದತ್ತ ಗಮನಕೊಟ್ಟಿರಲಿಲ್ಲ.

(ಆ) ಕ್ರಿ.ಶ.೧೮೪೦-೪೧ನೆಯ ವರ್ಷದಿಂದ ಬೆಂಗಳೂರಿನಲ್ಲಿ ಸರಕಾರೀ ಪ್ರೆಸ್. ಮತ್ತು ಮಿಶನರಿ ಮುದ್ರಣಾಲಯಗಳು ಅಸ್ತಿತ್ವದಲ್ಲಿ ಬಂದು ಪುಸ್ತಕ ಪ್ರಕಟನೆಯು ಆರಂಭಗೊಂಡಿತಾದ್ದರಿಂದ ಸಾಹಿತ್ಯೋದಯದ ಮುಂಬೆಳಗಿನ ಕಾಲವನ್ನು ಆ ವರ್ಷದಿಂದ ಗಣಿಸಲಾಗಿದೆ. ಮುಂದಿನ ನಾಲ್ವತ್ತು ವರ್ಷಗಳಲ್ಲಿ ಹಲವು ವೈಶಿಷ್ಟ್ಯಪೂರ್ಣ ಸಂಗತಿಗಳನ್ನು ಕಾಣುತ್ತೇವೆ. ಆದ್ಯ ಕನ್ನಡ ಪತ್ರಿಕೆಯಾದ 'ಮಂಗಳೂರು ಸಮಾಚಾರ'ವು ೧೮೪೩ರಲ್ಲಿ ಹೊರಬಂದಿತು. ಗ್ಯಾರೆಟ್ ಸಂಪಾದಿತ ಭಗವದ್ಗೀತೆಯ ವಿಶಿಷ್ಟ ಆವೃತ್ತಿಯು ಅದೇ ದಶಕದ ಪ್ರಕಟನೆಯಾಗಿದೆ (೧೮೪೮). ಇತ್ತ ಮಂಗಳೂರಲ್ಲಿ ಹಳೆಯ ಕನ್ನಡ ಕಾವ್ಯಗಳ ಪ್ರಕಟನೆಯ ಹೊರಹನ್ನು ಹಾಕಲಾಯಿತು. ಕ್ರಿ.ಶ.೧೮೫೨ನೆಯ ವರ್ಷದಿಂದ ಬೆಂಗಳೂರಿನ ಕೆಥಲಿಕ್ ಸಂಸ್ಥೆಯ ಕನ್ನಡ ಚಟುವಟಿಕೆಗಳು ಮೊದಲಾದುವು. ಕ್ರಿ.ಶ.೧೮೫೫-೫೭ರ ಸುಮಾರಿಗೆ ಕಂಡುಬಂದ ಹೊಸ ಶಿಕ್ಷಣದ ದ್ವಿತೀಯ ಘಟ್ಟದಲ್ಲಿ ಪಾಶ್ಚಾತ್ಯ

ರೀತಿಯ ಶಿಕ್ಷಣವು ಚೆನ್ನಾಗಿ ನೆಲೆಗೊಂಡಿತು. ಮುಂದೆ, ಮುಂಬಯಿ, ಮದ್ರಾಸ ವಿಶ್ವವಿದ್ಯಾಲಯಗಳೂ ಧಾರವಾಡ, ಮೈಸೂರುಗಳಲ್ಲಿ ಟ್ರೇನಿಂಗ್ (ನಾರ್ಮಲ್) ಸ್ಕೂಲ್/ ಕಾಲೇಜುಗಳೂ ಸ್ಥಾಪಿತವಾಗಿ ಕನ್ನಡದ ಅಭಿವೃದ್ಧಿಗೆ ಕಾರಣವಾದವು.

ಆರಂಭದಿಂದಲೇ ಅಧಿಕೃತ ಬೈಬಲ್ ಅನುವಾದಕ್ಕಾಗಿ ಶ್ರಮಿಸುತ್ತಿದ್ದ ಮಿಶನರಿಗಳು ೧೮೬೫ರಲ್ಲಿ ಅದನ್ನು ಹೊರತಂದರು. ಮೊತ್ತದಲ್ಲಿ ಅದು ಕನ್ನಡದಲ್ಲಿಯ ಬಹು ದೊಡ್ಡ ಗದ್ಯದ ಬರವಣಿಗೆಯಾಗಿದೆ. ಕ್ರಿ.ಶ. ೧೮೬೭ರಲ್ಲಿ ಗ್ರಂಥ ವಿಷಯಕ ಕಾಯಿದೆಯ ಆಚರಣೆಯಲ್ಲಿ ಬಂದುದು ವಾಙ್ಮಯ ಬೆಳವಣಿಗೆಯ ಕುರುಹಾಗಿದೆ. ಮರುವರ್ಷ ಮುಮ್ಮಡಿ ಕೃಷ್ಣರಾಜರು ತೀರಿಕೊಂಡದ್ದರಿಂದ ಸಾಂಪ್ರದಾಯಿಕ ಸಾಹಿತ್ಯದ ಪೋಷಣೆಗೆ ತುಸು ಪೆಟ್ಟು ಬಿದ್ದರೂ ಆಸ್ಥಾನ ವಿದ್ವಾಂಸರ ಕನ್ನಡ ಲೇಖನ ಕಾರ್ಯವು ಯಥಾಪ್ರಕಾರ ಮುಂದುವರಿಯಿತು.

ಕ್ರಿ.ಶ. ೧೮೭೫ನೆಯ ವರ್ಷವು ಒಂದು ಮಹತ್ವದ ಮೈಲುಗಲ್ಲಾಗಿದೆ. ಆ ವರ್ಷ ಬಿ.ವೆಂಕಟಾಚಾರ್ಯರ ಬಂಗಾಲೀ ಅನುವಾದ ಕಾರ್ಯವು ಮೊದಲಾಯಿತು. ಕನ್ನಡ ಸಾಹಿತ್ಯದ ಸಮಗ್ರ ನೋಟವನ್ನು ಕಿಟೆಲ್ ಕೊಡಮಾಡಿದುದು ಆ ವರ್ಷವೇ. ಇತ್ತ ದೇಶೀಯರು ಗ್ರಂಥೋದ್ಯಮದಲ್ಲಿ ಹೆಚ್ಚು ಹೆಚ್ಚಾಗಿ ಆಸ್ಥೆ ವಹಿಸಿದುದನ್ನೂ, ಕನ್ನಡ ಪತ್ರಿಕೆಗಳ ಪ್ರಸಾರ-ವಾಚನಗಳು ಹೆಚ್ಚಿದುದನ್ನೂ ಇದೇ ಅವಧಿಯಲ್ಲಿ ಕಾಣುತ್ತೇವೆ.

(ಇ) ಹೊಂಬೆಳಗಿನ ಈ ವೇಳೆಗೆ (೧೮೮೧-) ಎಲ್ಲೆಲ್ಲಿಯೂ ಇಂಗ್ಲಿಷ್ ಶಾಲೆಗಳ ಸ್ಥಾಪನೆಯಾಗಿ, ಹೊಸ ರೀತಿಯ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚುತ್ತ ನಡೆಯಿತು. ಅವರ ಚಿಕಿತ್ಸಕ ಮನೋಭಾವದಿಂದಾಗಿ ಸಮಾಜ ಸುಧಾರಣೆಯ ವಿಚಾರಗಳು ಹೊರಸೂಸಿದುವು. ಚಾಮರಾಜರು ವಯಸ್ಸಿಗೆ ಬಂದು ಅಧಿಕಾರ ಸೂತ್ರಗಳನ್ನು ವಹಿಸಿದ ಗಳಿಗೆಯು ಹೊಂಬೆಳಕಿನ ಅಥವಾ ನವೋದಯದ ಆರಂಭಕ್ಕೆ ನಿಮಿತ್ತವಾಯಿತು. ರಾಜರ ಪ್ರೋತ್ಸಾಹದಿಂದ ಸ್ಥಾಪಿತವಾದ **ಕರ್ಣಾಟಕ ನಾಟಕ ಸಭಾ ಮತ್ತು ಭಾಷೋಜ್ಜೀವಿನೀ** ಸಂಸ್ಥೆಗಳು ಕನ್ನಡದ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ ಘಟ್ಟಗಳಾಗಿವೆ. ಪ್ರಾಚ್ಯವಸ್ತು ಸಂಶೋಧನ ಕಛೇರಿ ಹಾಗೂ ಓರಿಯಂಟಲ್ ಲೈಬ್ರರಿ ಇವು ನಾಡಿನ ಇತಿಹಾಸ, ವಾಙ್ಮಯಗಳ ಸಂಶೋಧನೆಗೆ ವಿಸ್ತಾರವಾದ ಭೂಮಿಕೆಯನ್ನು ಒದಗಿಸಿದುವು. ಬಿಬ್ಲಿಯಾಥೆಕಾ ಕರ್ನಾಟಿಕಾ, ಎಪಿಗ್ರಾಫಿಯಾ ಕರ್ನಾಟಿಕಾ ಮತ್ತು ಕರ್ಣಾಟಕ ಕಾವ್ಯಮಂಜರಿ- ಈ ಪ್ರಕಟನ ಮಾಲಿಕೆಗಳು ಕನ್ನಡದ ಪ್ರೌಢ ದೆಶೆಯನ್ನು ನೆನಪಿಗೆ ತಂದುಕೊಟ್ಟುವು. ಇತ್ತ ಕಿಟೆಲ್ ಕೋಶವು ಹೊರಬಂದು ಕನ್ನಡ ಭಾಷೆ, ಸಾಹಿತ್ಯಗಳ ಹಿಂದಿನ ವೈಭವದ ಕಟ್ಟಡಕ್ಕೆ ಕಳಸವನ್ನಿಟ್ಟಂತಾಯಿತು. ಅತ್ತ ಮುಂಬಯಿ ಕರ್ನಾಟಕದಲ್ಲಿ ಸ್ಥಾಪಿತವಾದ ಕರ್ನಾಟಕ ವಿದ್ಯಾವರ್ಧಕ ಸಂಘವು (೧೮೯೦) ಹೊಸ ಪೀಳಿಗೆಯ ಲೇಖಕರಿಗೆ ಉತ್ತೇಜನ ಕೊಡತೊಡಗಿತು.

ಮೂರನೆಯ ನವೋದಯ ಕಾಲದ ಲೇಖಕರಲ್ಲಿ ಸ್ವತಂತ್ರ ಮನೋಭಾವ ಹಾಗೂ ಸಾಮಾಜಿಕ ಪ್ರಜ್ಞೆಗಳು ಒಡಮೂಡಿದುದರ ನಿದರ್ಶನವೆಂದರೆ, 'ಚಂದ್ರೋದಯ' (ಧಾರವಾಡ), 'ಹಿತಬೋಧಿನೀ' (ಬೆಂಗಳೂರು) ಮತ್ತು 'ಕನ್ನಡ ಸುವಾರ್ತೆ' (ಮುಂಬಯಿ) ಎಂಬ ಪತ್ರಿಕೆಗಳ ಪ್ರಕಟನೆ. ಸ್ವತಂತ್ರ ಸಾಮಾಜಿಕ ನಾಟಕಗಳ ಆರಂಭದ ವರ್ಷವೆಂದರೆ ೧೮೮೭. ಕಾದಂಬರೀ ಸಾಹಿತ್ಯ ಪ್ರಕಾರವನ್ನು ಜನಪ್ರಿಯಗೊಳಿಸಲು ಕಾರಣವಾದ ಮೊದಲ ಕೃತಿಯೆಂದರೆ 'ದುರ್ಗೇಶ ನಂದಿನೀ' (೧೮೮೫). ಅಲ್ಲಿಂದ ಬಿ. ವೆಂಕಟಾಚಾರ್ಯರು ಒಂದರ ಮೇಲೊಂದು ಬಂಗಾಲಿ ಕಾದಂಬರಿಯನ್ನು ವಾಚಕರಿಗೆ ಪೂರೈಸಿದ್ದಾರೆ. ಮುಂಬಯಿ – ಕರ್ನಾಟಕದಲ್ಲಿ ಒಬ್ಬಿಬ್ಬರು ಆರಂಭಿಸಿದ ಕಾದಂಬರೀ ಲೇಖನ ಕಾರ್ಯವನ್ನು ಗಳಗನಾಥರು ಮುಂದುವರಿಸಿದರು. ಇದೇ ಕಾಲಕ್ಕೆ ಮೈಸೂರು ಸಂಸ್ಥಾನದಲ್ಲಿ ಐತಿಹಾಸಿಕ (ಅದರಂತೆ ಪತ್ತೇದಾರಿ) ಕಾದಂಬರಿಗಳ ಸ್ವತಂತ್ರ ರಚನೆಯು ಕಾಣಿಸಿಕೊಂಡಿತು. ಪ್ರಗತಿಪರ ದೃಷ್ಟಿಯುಳ್ಳ ಗುಳವಾಡಿಯವರು ಸಾಮಾಜಿಕ ಕಾದಂಬರಿಯನ್ನು ಕೈಗೆತ್ತಿಕೊಂಡರು. ಅಲ್ಲಿಗೆ, ಎಂದರೆ ೧೯೦೦ಕ್ಕೆ ಸಂಧಿಕಾಲದ ಸಾಹಿತ್ಯ ರಚನೆಯು ಮುಗಿದು, ಇಂದು ನಾವು ತಿಳಿದಿರುವ ಹೊಸಗನ್ನಡ ಸಾಹಿತ್ಯ ಸ್ವರೂಪವು ಸುಸ್ಪಷ್ಟವಾಗಿ ಗೋಚರವಾಯಿತು.

ಈ ತಡಿಕೆಯಲ್ಲಿ ನಾವು ಅಂದಿನ ಸಾಹಿತ್ಯ ಸಮೀಕ್ಷೆಯನ್ನು ಕೈಗೊಳ್ಳಬೇಕಾಗಿದೆ. ಒಂಬತ್ತು ದಶಕಗಳ ಈ ಅವಧಿಯಲ್ಲಿ ೧೫೦೦ಕ್ಕೆ ಮೇಲ್ಪಟ್ಟು ಪುಸ್ತಕಗಳೂ ಸುಮಾರು ೮೦ ಪತ್ರಿಕೆಗಳೂ ಹೊರಬಂದಿವೆ. ಈ ಪುಸ್ತಕಗಳಲ್ಲಿ ಪ್ರಾಚೀನ ಕೃತಿಗಳ ಪರಿಷ್ಕೃತ ಮುದ್ರಣ, ಅನುವಾದಗಳು ಮತ್ತು ಪಠ್ಯಪುಸ್ತಕಗಳು – ಇವುಗಳ ಸಂಖ್ಯೆಯೇ ದೊಡ್ಡದು. ಸ್ವತಂತ್ರ ವಿಚಾರದ ಅಭಿವ್ಯಕ್ತಿಯ ಕೃತಿಗಳು ಒಟ್ಟಿನಲ್ಲಿ ಕಡಿಮೆ. ಪ್ರಾಚೀನ ಕೃತಿಗಳ ಪರಿಷ್ಕರಣ, ಸಂಕಲನ ಕಾರ್ಯಗಳಲ್ಲದೆ, ಭಾಷೆಯ ಅಭ್ಯಾಸದ ಸಾಧನ, ಕವಿತೆ, ನಾಟಕ, ವಿವಿಧ ಗದ್ಯಬರವಣಿಗೆ, ಪತ್ರಿಕೆಗಳು ಮತ್ತು ಕಥಾನಕ–ಎಂಬುದಾಗಿ ಅಂದಿನ ಬರವಣಿಗೆಯನ್ನು ವಿಂಗಡಿಸಿ ಇನ್ನು ಮುಂದೆ ಪರಿಚಯಿಸಬಯಸಿದೆ. ಜೊತೆಗೆ ಅವುಗಳಲ್ಲಿ ಬಂದ ಹೊಸ ವಿಚಾರಗಳನ್ನು ಎತ್ತಿ ತೋರಿಸುವ ಪ್ರಯತ್ನ ಮಾಡಲಾಗಿದೆ.

## ೧೩. ಪ್ರಾಚೀನ ಕೃತಿಗಳ ಪರಿಷ್ಕರಣ

'ಪಂಡಿತರಿಂ ಪರಿಷ್ಕರಿಸಲ್ಪಟ್ಟು' ಇಲ್ಲವೆ 'ಪಂಡಿತರಿಂದ ಪರಿಶೋಧಿತವಾಗಿ' ಎಂಬ ವಿಶೇಷಣವು ೧೯ನೆಯ ಶತಮಾನದ ಅನೇಕ ಪ್ರಕಟನೆಗಳ ಮೊದಲ ಪುಟದಲ್ಲಿ ಕಣ್ಣಿಗೆ ಬೀಳುತ್ತದೆ. ದೇಶೀಯರಿಂದ ಪರಿಷ್ಕರಣಗೊಂಡ ಪುಸ್ತಕಗಳ ವೈಶಿಷ್ಟ್ಯವಿದು. ಸಂಸ್ಕೃತ, ಕನ್ನಡಗಳಲ್ಲಿಯ ಅನೇಕ ಪ್ರಾಚೀನ ಕೃತಿಗಳನ್ನು ಟೀಕೆ–ಟಿಪ್ಪಣಿ, ಗದ್ಯಾನುವಾದಗಳೊಡನೆ ಸಂಪಾದಿಸಿ, ಮುದ್ರಿಸಲಾಯಿತು. ಸ್ವಧರ್ಮಾಭಿಮಾನ, ಪಠ್ಯಪುಸ್ತಕಗಳ

ಬೇಡಿಕೆ, ಅದರಂತೆ ಪರಂಪರಾನುಗತವಾಗಿ ತಾವು ಕಲಿತ ವಿದ್ಯೆಯನ್ನು ಜನತೆಗೆ ತಿಳಿಸಿಕೊಡಬೇಕೆನ್ನುವ ಅಪೇಕ್ಷೆ–ಇವು ಇಂಥ ಕೃತಿಗಳ ಪ್ರಕಟನೆಗೆ ಪ್ರೇರಣೆಯಿತ್ತವು.

ಗ್ರಂಥ ಪರಿಷ್ಕರಣ/ಪ್ರಕಟನ ಕಾರ್ಯದಲ್ಲಿ ವಿದೇಶೀಯರ ಪಾತ್ರವು ಬೆಲೆಯುಳ್ಳದ್ದು. ಗ್ಯಾರೆಟ್, ಬಿ ಎಲ್, ರೈಸನಂತಹ ಅಧಿಕಾರಿಗಳಿಗೆ, ಅದು ಅವರ ಸರಕಾರೀ ಕೆಲಸದ ಒಂದು ಅಂಗವೇ ಆಗಿದ್ದಿತು. ಇತ್ತ ಮಿಶನರಿಗಳಿಗೆ ಸ್ವಮತ ಪ್ರಸಾರವೇ ಭಾರತದ ಪ್ರಾಚೀನ ಗ್ರಂಥಗಳಲ್ಲಿ ಆಸ್ಥೆಯನ್ನು ಕುದುರಿಸುವುದಕ್ಕೆ ಕಾರಣವಾಯಿತು. ಕೆಲವು ಸಂದರ್ಭಗಳಲ್ಲಿ ಇದು ಅತ್ಯಂತ ಸೂಕ್ಷ್ಮವಾಗಿ ವ್ಯಕ್ತವಾಗಿದೆ. ದಕ್ಷಿಣ ಭಾರತದಲ್ಲಿ ಪ್ರೊಟೆಸ್ಟಂಟ್ ಮಿಶನರಿಗಳ ೧೮೫೮ರ ಸಮ್ಮೇಳನದಲ್ಲಿ ಮಂಡಿಸಲಾದ ಈ ಅಭಿಪ್ರಾಯವನ್ನು ಗಮನಿಸಬೇಕು :

"These works, if well edited in an attractive form and accompanied with well-digested introductions and notes, subjecting the contents to a critical investigation in the light of the word of God. . .they might serve to supplant the old pernicious editions in some measure and subject to the influence of the Gospel, such as all won't to entrench themselves behind their Shastras, or at least counteract the effects of their holdings among their disciples"[೨]

ಉದಾಹರಣೆಯೆಂದು, ಗ್ಯಾರೆಟ್ ವಿಶಿಷ್ಟ ರೀತಿಯಲ್ಲಿ ಸಂಪಾದಿಸಿದ 'ಭಗವದ್ಗೀತೆ'ಯನ್ನು ನೋಡಬಹುದು. ಅದರಲ್ಲಿ ಗೀತೆ ಮತ್ತು ಹಿಂದೂ ಧರ್ಮಕ್ಕೆ ಸಂಬಂಧಿಸಿದ ವಿಚಾರಗಳ ಕಟು ವಿಮರ್ಶೆಯು ಬಂದಿದೆ. ಜಿ. ವುರ್ತ್ ಚೆನ್ನಬಸವಪುರಾಣದ ಸಾರವನ್ನು ಇಂಗ್ಲಿಷ್‌ನಲ್ಲಿ ಕೊಡುವಾಗ, ಪಡುವಣದಿಂದ ಮಹಾತ್ಮನೊಬ್ಬ ಬಂದು ದೇಶವ ಉದ್ಧಾರಮಾಡುವನೆಂಬ ಕಾಲಜ್ಞಾನದ ಒಂದು ಸಣ್ಣ ಮಾತನ್ನು ಹಿಗ್ಗಿಸಿ ಕ್ರಿಸ್ತನಿಗೆ ಅನ್ವಯಿಸಿದ್ದಾನೆ.

ವಿದೇಶೀಯರ ಉದ್ದೇಶ ಏನೇ ಇರಲಿ, ಅವರ ವಿಶ್ಲೇಷಣ ಕ್ರಮ ಹಾಗೂ ವಿಮರ್ಶನ ದೃಷ್ಟಿ–ಇವುಗಳಿಂದಾಗಿ ಅನೇಕ ಕನ್ನಡ, ಸಂಸ್ಕೃತ ಗ್ರಂಥಗಳು ಪರಿಷ್ಕರಣಗೊಂಡು ಜ್ಞಾನ ಪ್ರಸಾರಕ್ಕೆ ಕಾರಣವಾದುವು. ಇಂಥದೇ ಕಾರ್ಯದಲ್ಲಿ ದೇಶೀಯ ವಿದ್ವಾಂಸರ ಉದ್ದೇಶವು ಹೆಚ್ಚಾಗಿ ಪಾಮರ ವಾಚಕರಿಗೋ, ಶಾಲಾ ವಿದ್ಯಾರ್ಥಿಗಳಿಗೋ ಪುಸ್ತಕಗಳನ್ನು ಒದಗಿಸುವುದೆಂದಿದ್ದಿತ್ತು. ಕೆಲವರಲ್ಲಿ ಗ್ರಂಥಸಂಪಾದನೆಗೆ ಬೇಕಾದ ವೈದುಷ್ಯವಿದ್ದರೂ ಕಟ್ಟುನಿಟ್ಟಿನ ಶಾಸ್ತ್ರೀಯ ದೃಷ್ಟಿ ಅವರಲ್ಲಿ ತೋರಿಬಂದಿಲ್ಲ. 'ಪಂಡಿತರಿಂ ಪರಿಶೋಧಿತ

ಮಾದುದು' ಹೆಸರಿಗೆ ಮಾತ್ರ.* ಈ ಮಾತಿಗೆ ಶಾಂತವೀರ ಕಿತ್ತೂರ, ಬಿ. ಮಲ್ಲಪ್ಪ, ಕುಂಡಲಗಿರಿಯಾಚಾರ್ಯ ಹಾಗೂ ಇನ್ನೂ ಒಬ್ಬಿಬ್ಬರು ಅಪವಾದವಾಗಿದ್ದಾರೆ.

ಸಂಸ್ಕೃತ, ಕನ್ನಡ ಗ್ರಂಥಗಳ ಪರಿಷ್ಕರಣ ಕಾರ್ಯವನ್ನು ಧಾರ್ಮಿಕ ವಾಙ್ಮಯ ಹಾಗೂ ಕಾವ್ಯ ಎಂಬುದಾಗಿ ವಿಭಾಗಿಸಬಹುದು. ಉಪನಿಷತ್ತುಗಳು, ಯೋಗ, ಧರ್ಮಶಾಸ್ತ್ರ ಇವುಗಳಲ್ಲಿ ಭಗವದ್ಗೀತೆಗೆ ವಿಶೇಷ ಪ್ರಾಶಸ್ತ್ಯ. ತುಪ್ಪಳ ವೆಂಕಟಾಚಾರ್ಯನು ಅದರ ವಿಶಿಷ್ಟವಾದ ಆವೃತ್ತಿಯನ್ನು ಹೊರತಂದಿದ್ದು (೧೮೯೮/೧೯೦೧), ಅದರಲ್ಲಿ ದ್ವೈತ, ಅದ್ವೈತ, ಮತ್ತು ವಿಶಿಷ್ಟಾದ್ವೈತ ಈ ಮೂರು ಮತಗಳ ದೃಷ್ಟಿಕೋನವನ್ನು ಬಿಂಬಿಸುವ ೧೨-೧೩ ವಿವಿಧ ಟೀಕೆಗಳನ್ನು, ಅಗತ್ಯವಿದ್ದಲ್ಲೆಲ್ಲ ಮಾತ್ರ ಕೊಡುತ್ತ ಹೋಗಿದ್ದಾನೆ. ಗ್ಯಾರೆಟ್‌ನ ಆವೃತ್ತಿಯಲ್ಲಿ ಪಾಶ್ಚಾತ್ಯ ಭೂಮಿಕೆ ಕಂಡುಬಂದರೆ, ಇದರಲ್ಲಿ ಪೌರ್ವಾತ್ಯ ದೃಷ್ಟಿಯ ತುಲನಾತ್ಮಕ ಅಭ್ಯಾಸಕ್ಕೆ ಅವಕಾಶವಿದೆ. ಇತ್ತ ಬರಿ ಶಬ್ದಾರ್ಥ ಮತ್ತು ಟಿಪ್ಪಣಿಗಳಿಂದ ಕೂಡಿದ ಕೆಲವು ಆವೃತ್ತಿಗಳೂ ಇವೆ. ಕೃಷ್ಣರಾಜವಾಣೀವಿಲಾಸ ಮಾಲಿಕೆಯಲ್ಲಿ ಬಂದ ಭಗವದ್ಗೀತೆಯು ಗದ್ಯದಲ್ಲಿದ್ದುದು ಒಂದು ವಿಶೇಷ. ಪದ್ಯರೂಪವಾಗಿ ಭಗವದ್ಗೀತೆಯನ್ನು ಹಾಡಿದವರೆಂದು ಕೃಷ್ಣದಾಸ, ಆನಂದದಾಸರು, ಮಂದರ್ತಿ ಶೇಷ, (೧೨೯೯-೧೮೨೮), ಅರಕಲಗೂಡು ಕೃಷ್ಣಪ್ಪ, ಲಕ್ಷ್ಮಣ ಬಾಬಣಿ ಪೈ ಮತ್ತು ಕಣಿಲೆ ಪುಟ್ಟಪ್ಪ ಇವರನ್ನು ಒಟ್ಟಿಗೆ ನೆನೆಯತಕ್ಕುದು.

ಜೈನ, ಸ್ಮಾರ್ತ, ವೈಷ್ಣವ, ವೀರಶೈವರನ್ನುಳಿದು ಇತರ, ಅಕ್ಕಸಾಲಿಗ, ಆರ್ಯವೈಶ್ಯ, ವಿಶ್ವಕರ್ಮರು ಮುಂತಾದ ಮತ ಪಂಥಗಳವರು ವಿವಿಧ ಪುರಾಣಗಳಿಂದ ತಮ್ಮ ಮತದ ಹೆಚ್ಚಳವನ್ನು ಹೇಳುವ ಭಾಗಗಳನ್ನು ಆಯ್ದು ಗದ್ಯಾನುವಾದದೊಡನೆ ಪ್ರಕಟಿಸಿದುದು ವಿಶೇಷದ ಸಂಗತಿಯಾಗಿದೆ. (ಉದಾಹರಣೆಗೆ 'ಉತ್ತರ ಸಹ್ಯಾದ್ರಿಯೊಳಗಿನ ಹವ್ಯಕ, ದ್ರಾವಿಡ ಬ್ರಾಹ್ಮಣರ ಉತ್ಪತ್ತಿಯ ಇತಿಹಾಸವು'; 'ಪಂಚಾಳ ಜಾತಿಗಳ ಉತ್ಪತ್ತಿಯು')

ಇನ್ನು ಅದ್ವೈತ ಕೃತಿಗಳಲ್ಲಿ, ಶಂಕರಾಚಾರ್ಯ, ಸುರೇಶ್ವರಾಚಾರ್ಯ, ವಿದ್ಯಾರಣ್ಯ, ಸಾಯಣರ ಗ್ರಂಥಗಳಂತೂ ಸರಿಯೇ. ಅವರಿಗಿಂತ ಈಚಿನವರಾದ ವಾಸುದೇವಯತಿ, ಶಾಲ್ಯದ ಕೃಷ್ಣರಾಜ ಇವರ ಕೃತಿಗಳೂ ಕಾಣಿಸಿಕೊಂಡಿವೆ. ಶಾಲ್ಯದ ಕೃಷ್ಣರಾಜನ **ಅನುಭವ ರಸಾಯನ**ವನ್ನು ಪ್ರತ್ಯೇಕವಾಗಿ ಹೆಸರಿಸಬೇಕು. ಗದ್ಯಪದ್ಯಮಿಶ್ರಿತವಾದ ಈ ಕೃತಿಯು ಗುರು-ಶಿಷ್ಯ ಸಂವಾದ ರೂಪದಲ್ಲಿ ಅದ್ವೈತ ತತ್ವಗಳನ್ನು ಬೋಧಿಸುತ್ತವೆ. ಆದರೆ ಈ

---

* ಕೆಲವು ಪರಿಷ್ಕರಣಕಾರರು ಈ ಅವಕಾಶದ ದುರುಪಯೋಗ ಮಾಡಿಕೊಂಡದ್ದಿದೆ. ನಿಜಗುಣಶಿವಯೋಗಿಗಳ 'ವಿವೇಕ ಚಿಂತಾಮಣಿ'ಯನ್ನು ೧೮೬೩ರಲ್ಲಿ ಸಂಪಾದಿಸಿದವರೊಬ್ಬರು (ಬೆಂಗಳೂರು) ನೂರು ಪುಟಗಳಷ್ಟು ಮೂಲದಲ್ಲಿಲ್ಲದ ವಿಷಯವನ್ನು ಅದೇ ಗದ್ಯಶೈಲಿಯಲ್ಲಿ ಸೇರಿಸಿದ್ದಾರೆ. ವಿವರಗಳಿಗೆ ಜಿ.ಎಂ. ಉಮಾಪತಿಶಾಸ್ತ್ರಿಯವರಿಂದ ಸಂಪಾದಿತವಾದ ಅದರ ೧೯೬೨ರ ಆವೃತ್ತಿಯನ್ನು ನೋಡಬಹುದು.

ವಿವೇಚನೆಯಲ್ಲಿ ಕ್ರಿಶ್ಚಿಯನ್ ವಿರೋಧೀ ವಿಚಾರಗಳಿವೆಯೆಂದು ಕಿಟೆಲ್ ತನ್ನ ಸಾಹಿತ್ಯ ಚರಿತ್ರ ಲೇಖನದಲ್ಲಿ ಹೇಳಿದ್ದಾನೆ. ಆ ಕೃತಿಯನ್ನು ಪರಿಶೀಲಿಸಿದ ಮೇಲೆ ಅದು ನಿಜವೆಂದು ನಮಗೆ ತೋರಲಿಲ್ಲ. ೧೮ನೆಯ ಶತಮಾನದ ಕೊನೆಯಲ್ಲಿ ಬರೆಯಲಾದ ಆ ಕೃತಿಯಲ್ಲಿ ಇಷ್ಟರಮಟ್ಟಿಗೆ ಕ್ರೈಸ್ತಮತ ಖಂಡನೆಯನ್ನು ವ್ಯಕ್ತಪಡಿಸುವಂತಹ ಪರಿಸ್ಥಿತಿಯು ಆಗ ನಮ್ಮ ನಾಡಿನಲ್ಲಿ ಇರಲೂ ಇಲ್ಲ.

ವೀರಶೈವ ಮತದ ತತ್ತ್ವಗಳನ್ನು ಪ್ರತಿಪಾದಿಸುವ ಸಂಸ್ಕೃತ ಗ್ರಂಥಗಳು ಅನುವಾದಗೊಂಡದ್ದಕ್ಕೆ ಅನ್ಯ ಮತೀಯರ ಆ ಬಗೆಯ ಪ್ರಕಟನೆಗಳು ಪ್ರಚೋದನೆಯಿತ್ತಿರಲು ಸಾಕು. ಜೊತೆಗೆ ಮತತತ್ವಗಳನ್ನು ಸುಲಭವಾದ ಕನ್ನಡದಲ್ಲಿ ಕೊಡುವುದಂತೂ ಸರಿಯೇ. ಹೀಗಾಗಿ 'ಆದಿವೀರ ಮಾಹೇಶ್ವರ ಮೂಲ ಪೀಠಿಕೆ, ದಶಗ್ರಂಥಿ ಶಿವಜ್ಞಾನ, ವೀರಶೈವಾನ್ವಯ ಚಂದ್ರಿಕೆ, ವೀರಶೈವ ದೀಕ್ಷಾವಿಧಿ, ವೀರಶೈವ ಧರ್ಮಸಿಂಧು'* ಇವು ಕೆಲವು ಮಹತ್ವದ ಟೀಕಾ ಗ್ರಂಥಗಳಾಗಿವೆ. ನಿಜಗುಣಶಿವಯೋಗಿಗಳ ಕೃತಿಗಳು ಕಳೆದ ಶತಮಾನದ ಜನಕ್ಕೆ ವಿಶೇಷ ಆಪ್ಯಾಯಮಾನವಾದ್ದರಿಂದ, ಅವುಗಳ ಹಲವಾರು ಆವೃತ್ತಿಗಳು ಬೆಳಕು ಕಂಡವು. ಅದ್ವೈತಿಗಳಲ್ಲಿ ಮಹಲಿಂಗರಂಗನ 'ಅನುಭವಾಮೃತವು' ಪ್ರಥಮತಃ ಮುದ್ರಿತವಾದ ಹಳಗನ್ನಡ ಕಾವ್ಯವೆನಿಸಿದೆ. (ಕಲ್ಲಚ್ಚು, ಸು. ೧೮೪೦) ಕಳೆದ ಶತಮಾನದಲ್ಲಿ ಸಂಸ್ಕೃತದಲ್ಲಿಯೂ ಅದು ಅನುವಾದಗೊಳ್ಳುವಷ್ಟು ಖ್ಯಾತಿಯನ್ನು ಹೊಂದಿದ್ದಿತು. ಇದೇ ರೀತಿಯ ಪ್ರಾಶಸ್ತ್ಯವು 'ಹರಿಕಥಾಮೃತಸಾರ'ಕ್ಕೆ ಇದ್ದಿತೆಂಬುದನ್ನು ನೋಡಿದ್ದೇವೆ.

ಹಳಗನ್ನಡ ಕಾವ್ಯಗಳ ಮುದ್ರಣವನ್ನು ಮೊದಲಿಗೆ ಕೈಕೊಂಡ ಮಿಶನರಿಯೆಂದರೆ ಮೆವ್‌ಗ್ಲಿಂಗ್. ಆ ಮುಂದಿನ ಹೆಜ್ಜೆ ಗ್ಯಾರೆಟ್‌ನದು. ಇತ್ತ ಶಾಲೆಗಳಿಗೆ ಪಠ್ಯಗಳನ್ನು ಒದಗಿಸುವ ದೃಷ್ಟಿಯಿಂದ ಉತ್ತಮ ರೀತಿಯಲ್ಲಿ ಅವುಗಳನ್ನು ಅಣಿಗೊಳಿಸಿದವರೆಂದರೆ ಶಾಂತವೀರ ಕಿತ್ತೂರ ಹಾಗೂ ಗಂಗಾಧರ ತುರಮರಿ ಅವರು. ಕ್ರಿ.ಶ. ೧೮೭೧-೭೨ರ ಸುಮಾರಿಗೆ ಅವರು 'ರಾಜಶೇಖರ ವಿಳಾಸ'ದ ಒಂದೊಂದು ಆಶ್ವಾಸಗಳನ್ನು ಹೊರತಂದರು. ಅನ್ವಯ ಭಾವಾರ್ಥಗಳ ಜೊತೆಗೆ ಛಂದಸ್ಸು, ವ್ಯಾಕರಣ, ಅಲಂಕಾರ ಮತ್ತಿತರ ಅಂಶಗಳನ್ನು ಪ್ರತಿ ಪದ್ಯಕ್ಕೂ ವಿವರಿಸಿದ್ದಾರೆ.**

---

* ಉದಾಹರಣೆಗೆ 'ವೀರಶೈವ ಧರ್ಮಸಿಂಧು'ವಿನ ಕನ್ನಡ ರೂಪವನ್ನು ಹೊರತಂದ ಪ್ರಕಾಶಕನ ಮನೋಗತವಿಂತಿದ್ದಿತು: "ಎಲ್ಲ ವೀರಶೈವರು ಒಂದೇ ಪ್ರಕಾರವಾಗಿ ನಡೆದುಕೊಳ್ಳುವುದಕ್ಕೆ ತಿಳಿಯುವುದರ ದೆಶೆಯಿಂದ ಈ ಗ್ರಂಥವು ಎಲ್ಲರಿಗೆ ಅವಶ್ಯವಾಗಿ ಬೇಕೇ ಬೇಕು. ಇದಲ್ಲದೆ ವೀರಶೈವ ಹಿರೇಮಠದಯ್ಯ... ಅವರಂತು ಇದನ್ನು ಸಂಗ್ರಹಿಸದೆ ಎಂದಿಗೂ ಬಿಡಲಾಗದೆಂದು ನನ್ನ ಪ್ರಾರ್ಥನೆ ಅದೆ. ಯಾಕೆಂದರೆ ಇವರು ನಡೆಸುವ ವೈದಿಕ ಕರ್ಮಗಳು ಭಿನ್ನ ಭಿನ್ನ ಕಂಡು ಬಂದದರಿಂದ ಒಂದೇ ಪ್ರಕಾರ, ಇಡುವುದಕ್ಕಾಗಿ ಇದೊಂದು ಸಾಧನವಿದ್ದಂತೆ ಅದೆ."

** "ಶಾಂತವೀರದೇವನು ಗುರುಕಾರುಣ್ಯಾನುಸಾರವಾದ ಯಥಾಮತಿಯಿಂದ ಈ [illegible]ನೆಯ ಸಂಧಿಯನ್ನು ವಿವರಿಸಿ, ಶ್ಲೋಕದಲ್ಲಿ ಚರಣ, ಪ್ರಾಸವೃತ್ತನಾಮಂಗಳಿಂದಲೂ

ಆದರೆ ಗ್ರಂಥ ಸಂಪಾದನೆಗೆ ಇಂದಿನ ಶಾಸ್ತ್ರೀಯ ಸ್ವರೂಪವನ್ನು ತಂದುಕೊಟ್ಟವರು ಎಫ್. ಕಿಟೆಲ್ ಮತ್ತು ಬಿ.ಎಲ್. ರೈಸರು. ಕಿಟೆಲರ ಗ್ರಂಥಸಂಪಾದನದ ಮೇಲ್ಮೆಯು ಅವರ 'ಛಂದೋಂಬುಧಿ' (೧೮೭೫) 'ಶಬ್ದಮಣಿದರ್ಪಣ' (೧೮೭೨) ಈ ಆವೃತ್ತಿಗಳಲ್ಲಿ ವ್ಯಕ್ತವಾಗಿದೆ. ಆ ಪೂರ್ವದಲ್ಲಿ 'ಪಂಚತಂತ್ರ'ವನ್ನು ಶಾಲಾಮಕ್ಕಳಿಗೆಂದು ಸಿದ್ಧಪಡಿಸಿ, ಅದಕ್ಕೆ ಸುದೀರ್ಘ ಮುನ್ನುಡಿ ಬರೆದು ಪಂಚತಂತ್ರ ಕಥೆಗಳ ಮೂಲ, ಪಾಠಾಂತರ ಮೊದಲಾದವುಗಳನ್ನು ವಿವೇಚಿಸಿದ್ದಾರೆ. ಮುಂದೆ ೧೮೯೦ರಲ್ಲಿ ರೈಸರು 'ಶಬ್ದಾನುಶಾಸನ'ವನ್ನು ಇದೇ ರೀತಿಯಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ.

ಗ್ರಂಥ ಸಂಪಾದನ ಕಾರ್ಯದಲ್ಲಿ ದೇಶೀಯರು ಹಾಗೆ ಪರಿಶ್ರಮಪಡಲಿಲ್ಲ; ಅವರಲ್ಲಿ ಇದಕ್ಕೆ ಬೇಕಾದ ಪಾಂಡಿತ್ಯ, ಸತ್ಯಾನ್ವೇಷಣೆ ದೃಷ್ಟಿಗಳು ಇರಲಿಲ್ಲ, ಎಂದು ಭಾವಿಸಲಾಗದು. ಕೆಲ ಭಾವಗಳ ಸೂಕ್ಷ್ಮ ಅರ್ಥವನ್ನು ದೇಶೀಯ ಪಂಡಿತರು ಗ್ರಹಿಸಿದಷ್ಟು ವಿದೇಶೀಯರಿಗೆ ಅದು ಸಾಧ್ಯವಿರಲಿಲ್ಲ. ಇಂಥ ಸಂದರ್ಭಗಳಲ್ಲಿ ಫ್ಲೀಟ್, ಕಿಟೆಲ್, ರೈಸರು ಅಗತ್ಯವಾಗಿ ಮತ್ತು ಧಾರಾಳವಾಗಿ ದೇಶೀಯರ ನೆರವನ್ನು ಪಡೆದಿದ್ದಾರೆಂಬುದನ್ನು ಮಗುದೊಮ್ಮೆ ಹೇಳಬಯಸಿದೆ.

ಗ್ರಂಥಪರಿಷ್ಕರಣ ವಿಚಾರದಲ್ಲಿ ಸಹ, ಹಸ್ತಪ್ರತಿಗಳನ್ನು ಕಲೆಹಾಕಿ ಸರಿಯಾದ ಪಾಠಾಂತರವನ್ನು ಕಂಡುಕೊಳ್ಳಬೇಕೆನ್ನುವ ಪ್ರಜ್ಞೆ ಕೆಲವರಾದರೂ ದೇಶೀಯರಲ್ಲಿ ಇದ್ದಿತು. ಕಿಟೆಲರ ಗ್ರಂಥಸಂಪಾದನೆಯ ಕಾಲಾವಧಿಯಲ್ಲಿಯೆ 'ವೃಷಭೇಂದ್ರವಿಜಯ'ವು ಹೊರಬಂದಿದ್ದು, ಅದರ ಸಂಪಾದಕ ಹೊ. ವೆಂಕಟ್ರಾಮ ಶಾಸ್ತ್ರಿಯು ಹಸ್ತಪ್ರತಿಗಳನ್ನು ಕಲೆಹಾಕಿ ಪಾಠಾಂತರಗಳನ್ನು ಗುರುತಿಸ ಪ್ರಯತ್ನಿಸಿದ್ದುದು ಕಂಡುಬರುತ್ತದೆ.*

---

ಅನ್ವಯದಲ್ಲಿ ಶ್ಲೇಷಾರ್ಥ ತದ್ಭವ ಶಬ್ದಾರ್ಥ ಸಮಾಸಗಳಿಂದಲೂ ಶಾಸ್ತ್ರ ವಿಷಯದಲ್ಲಿ ಕೌಮುದಿ. ಸಾರಸ್ವತ, ಶಬ್ದಮಣಿದರ್ಪಣ ಮೊದಲಾದ ಸಂಸ್ಕೃತ ಕರ್ಣಾಟಕ ವ್ಯಾಕರಣಗಳ ಸೂತ್ರಾರ್ಥಗಳಿಂದಲೂ ಶಾಂತವೀರ ಛಂದಸ್ಸು, ನಾಗವರ್ಮ ಛಂದಸ್ಸುಗಳ ನೇಮಗಳಿಂದಲೂ ಕುವಲಯಾನಂದ ಚಂದ್ರಿಕಾ ಮೊದಲಾದಲಂಕಾರಗಳ ವ್ಯಾಖ್ಯಾನಗಳಿಂದಲೂ ನವರಸಗಳಿಂದಲೂ ಧ್ವನಿಗಳಿಂದಲೂ ನೋಟ [notes] ದಲ್ಲಿ ಪುರಾಣಾಂತರ ಕಥೆಗಳಿಂದಲೂ ಕೋಶದಲ್ಲಿ ಸಂಸ್ಕೃತ ಕರ್ಣಾಟ ಶಬ್ದಗಳ ಉತ್ಪತ್ತ್ಯಗಳಿಂದಲೂ ಸಂಯುಕ್ತವಾಗಿ ಸುಲಭ ಭಾಷೆಯೊಳಗೆ ಟೀಕಿಸಿದನು."–ಸಟೀಕಾ ರಾಜಶೇಖರ ವಿಳಾಸ. ಎರಡನೆಯ ಆಶ್ವಾಸದ ಪೀಠಿಕೆ (೧೮೭೭).

* "ಇದರ ಮೂಲಪ್ರತಿಗಳನ್ನು ಸಂಪಾದಿಸಲಿಕ್ಕೆ ಯತ್ನಿಸುವಲ್ಲಿ ಅವು ಪ್ರಾಯಶಃ ದುರ್ಲಭಗಳಾಗಿ ಕಾಣಬಂದವು. ಕಥಂಚಿತ್ ಸಂಪಾದಿಸಿದ ಯೆರಡು ಮೂರು ಪ್ರತಿಗಳೊಳು ಸ್ಖಾಲಿತ್ಯಗಳೂ ಅರ್ಥವ್ಯತ್ಯಾಸಗಳೂ ತುಂಬಿಯಿದ್ದವು. ಅವುಗಳನ್ನು ಪರಿಷ್ಕರಿಸಲಿಕ್ಕೆ ಪ್ರಯತ್ನಿಸಿದಾಗ ಅ ಪ್ರತಿಗಳಲ್ಲಿ ಪರಸ್ಪರ ಪಾಠಭೇದಗಳು ಮಿತಿಯಿಲ್ಲದಷ್ಟು ಕಾಣಬಂದವು. ಅಂತು ನನ್ನ ಪರಿಷ್ಕರಣೋದ್ಯೋಗವು ನವೀನ ಗ್ರಂಥರಚನೆಗಿಂತಲೂ ಶ್ರಮಸಾಧ್ಯವಾಗಿಯಿತ್ತು. ಈ ಗ್ರಂಥವು ಈ ಸ್ಥಿತಿಯಲ್ಲಿರಲ್ಯಾತಕ್ಕೆಂದು ವಿಚಾರಿಸುವಲ್ಲಿ ಇದು ಒಂದು ಮತವನ್ನು ಕುರಿತದ್ದಾಗಿಯೂ ಅನ್ಯಮತದೂಷಕವಾಗಿಯೂ ಯಿರುವುದರಿಂದ ಯಿತರಗಳಾದ ಕನ್ನಡ ಕಾವ್ಯಗಳೋಪಾದಿಯಲ್ಲಿ ಯಿದು ಸರ್ವಜನ ಪರಿಗ್ರಹ ವಿಷಯವಲ್ಲದೆ ಯಿದರ

ಇಂತು ಕವಿರಾಜಮಾರ್ಗದಿಂದ ಹಿಡಿದು ಬಿಡಿ ಹಾಡುಗಳ ವರೆಗಿನ ಹಳೆಯ ವಾಙ್ಮಯವು ಸಂಪಾದಿತವಾಗಿ ಹೊರಬಂದಿತು. ಅದರಲ್ಲಿ ದಾಸರ ಪದಗಳು, ಲಕ್ಷ್ಮೀಶನ ಜೈಮಿನಿಭಾರತ, ಕುಮಾರವ್ಯಾಸಭಾರತ, ಷಡಕ್ಷರಿಯ ಕಾವ್ಯಗಳು ಒಂದಕ್ಕಿಂತ ಹೆಚ್ಚು ಮುದ್ರಣವನ್ನು ಕಂಡವು. ದಾಸರ ಹಾಡುಗಳು ಇಂಗ್ಲಿಷ್, ಜರ್ಮನ್ ಮತ್ತು ಮರಾಠೀ ಭಾಷೆಗಳಲ್ಲಿಯೂ ಅನುವಾದಗೊಂಡವು. ಚಾರ್ಲಸ್ ಗ್ರೋವರನು ದಕ್ಷಿಣ ಭಾರತದ 'ಜಾನಪದ ಹಾಡು'ಗಳ ತನ್ನ ಸಂಕಲನದಲ್ಲಿ ಕೊಟ್ಟಿರುವ ಅನೇಕ ಪದಗಳು ದಾಸರ ಹಾಡುಗಳೇ ಆಗಿವೆ. ಅಚ್ಚರಿಯ ಸಂಗತಿಯೆಂದರೆ ಇಂದು ಪ್ರಾಮುಖ್ಯವನ್ನು ಪಡೆದಿರುವ ಕೆಲವು ವೀರಶೈವ ಕೃತಿಗಳು – ವಿಶೇಷತಃ ಅಲ್ಲಮ, ಬಸವಾದಿಗಳ ವಚನಗಳು,** ಹರಿಹರನ ರಗಳೆಗಳು ಹಾಗೂ ರಾಘವಾಂಕನ ಕಾವ್ಯಗಳು ಆಗ ಬೆಳಕಿಗೆ ಬಾರದಿದ್ದುದು. ಇವುಗಳಲ್ಲಿ ಎಲ್ಲವೂ ಅಜ್ಞಾತವಿದ್ದುವೆಂದೇನೂ ಅಲ್ಲ. ಅದರಂತೆ ಪಂಪಭಾರತ ಮತ್ತು ಭರತೇಶವೈಭವ – ಇವೂ ಬೆಳಕು ಕಾಣಲಿಲ್ಲವಲ್ಲ ?

## ಸಂದರ್ಭಸೂಚಿ

1. Glossario Luso-Asiatico. Vol. 1-2: ಅಕಾರಾದಿಯಾಗಿ ಬಂದ ಆ ಶಬ್ದಗಳನ್ನು ಹುಡುಕಿ, ಕನ್ನಡಕ್ಕೆ ಸಂಬಂಧಿಸಿದವುಗಳನ್ನು ಆಯ್ದುಕೊಂಡಿದೆ.
2. Proceedings, South India Missionary Conference, 1858: J. Hoch. ನ ಲೇಖನದಿಂದ.

---

ಪ್ರತಿಗಳೀದೇಶದಲ್ಲಿ ಅತಿ ವಿರಳವಾಗಿಯೂ ಪಾಮರರಾದ ಲೇಖಕ ಪಾಠಕರಿಂದ, ಯಿದ್ದವು ಸಹ ಅಶುದ್ಧಗಳಾಗಿಯೂ ಯಿರುವುದಕ್ಕೆ ಕಾರಣವಾಯಿತೆಂದು ಸ್ಪಷ್ಟವಾಗುತ್ತದೆ. . .

ನನಗೆ ಸಿಕ್ಕಿದ ಮೂರು ಪ್ರತಿಗಳೊಳು ಒಂದು ಪ್ರತಿಯಲ್ಲಿ ಮಾತ್ರ ಕಂಡುಬಂದ, ಪರಂತು. . . . . ಸ್ವಾರಸ್ಯ ಚಮತ್ಕೃತಿಗಳುಳ್ಳ ಕೆಲವು ಪದ್ಯಗಳು ಮಿಕ್ಕ ಎರಡು ಪ್ರತಿಗಳಿಲ್ಲದೆಯಿದ್ದಾಗ್ಯೂ ಅವುಗಳನ್ನು ಅವಶ್ಯ ಅಂಗೀಕರಿಸಬೇಕಾಯಿತು. ಆಧುನಿಕ ಶೈಲಿಗೆ ವಿರುದ್ಧಗಳಾದ ಕೆಲವು ವಾಕ್ಯ ಸಂದರ್ಭಗಳು, ಒಂದೊಂದು ಪ್ರಕರಣದಲ್ಲಿ ಕಾಣಬರುತ್ತವೆ. ಆದರೆ ಅವುಗಳು ಪ್ರಾಚೀನ ಪಾಠಗಳೆಂತಲೂ ಹಾಗೆಯೇ ಓದಿಕೊಳ್ಳತಕ್ಕವುಗಳೆಂತಲೂ ಅನೇಕ ಪಂಡಿತರು ಅಭಿಪ್ರಾಯ ಪಡುವುದರಿಂದ ಅವುಗಳ ಗೋಜಿಗೆ ಹೋಗಲಿಲ್ಲವು." (ಮುನ್ನುಡಿಯಿಂದ)

** ಬಸವೇಶ್ವರ ವಚನಗಳ : ಪ್ರಥಮ ಸಂಗ್ರಹ ಪ್ರಕಟವಾದದ್ದು ೧೮೮೯ ರಷ್ಟು ತಡವಾಗಿ. ೮ ಮರಿಶಂಕರಯ್ಯನವರು ಅದರ ಸಂಪಾದಕರು.

ಪ್ರಕರಣ : 2

# ಭಾಷಾಭ್ಯಾಸ

ಹೊಸಗನ್ನಡ ಸಾಹಿತ್ಯೋದಯದ ಕಾಲದಲ್ಲಿ ಭಾಷಾಭ್ಯಾಸವು ಒಂದು ವ್ಯಾಪಕವಾದ ಚಟುವಟಿಕೆಯಾಗಿದ್ದಿತು. ಕನ್ನಡವನ್ನು ಕಲಿಯಲೇಬೇಕಾಗಿದ್ದ ವಿದೇಶೀಯರಿಗೂ ದೇಶೀಯ ವಿದ್ಯಾರ್ಥಿಗಳಿಗೂ ವ್ಯಾಕರಣ, ಕೋಶಗಳ ಹಾಗೂ ವಾಚನಕ್ಕೆ ಸಹಾಯಕವಾಗುವ ಪುಸ್ತಕಗಳ ಅಗತ್ಯವಿದ್ದಿತು. ಆ ಕಾರಣ ಹಿಂದೆಂದೂ – ಮುಂದೆ ೨೦ನೆಯ ಶತಮಾನದಲ್ಲಿ ಸಹ, ಕಂಡು ಬಾರದಷ್ಟು ಸಂಖ್ಯೆಯಲ್ಲಿ ಕೋಶ ವ್ಯಾಕರಣಾದಿಗಳು ಹುಟ್ಟಿಕೊಂಡವು. ಅವುಗಳಲ್ಲಿ ಮುಖ್ಯವಾದವುಗಳನ್ನು ಪರಿಶೀಲಿಸೋಣ.

## 21 ವ್ಯಾಕರಣಗಳು

ಅಧಿಕಾರಿಗಳು ಮತ್ತು ಮಿಶನರಿ ಜನರ ಉಪಯೋಗಾರ್ಥವಾಗಿ, ಕೇರಿ, ಮೆಕ್ಕೆರೆಲ್ ಹಾಗೂ ಹಡ್ಸನ್ – ಇವರು ರಚಿಸಿದ ವ್ಯಾಕರಣಗಳು ಮುಖ್ಯವಾದವುಗಳು. **ವಿಲಿಯಮ್ ಕೇರಿಗೆ** ತನ್ನ ವಿವಿಧ ಚಟುವಟಿಕೆಗಳಲ್ಲಿ (A Grammar of the Kurnata Language) ಕನ್ನಡವನ್ನು ಕಲಿಯಲು ತಕ್ಕ ವ್ಯವಧಾನವಿರಲಿಲ್ಲ. ಅವನು ರಚಿಸಿದ ಕನ್ನಡ ವ್ಯಾಕರಣದಲ್ಲಿ ಲಿಪಿಯ ದೃಷ್ಟಿಯಿಂದ ತೆಲುಗಿನ, ಹಾಗೂ ಶಬ್ದಪ್ರಯೋಗದ ದೃಷ್ಟಿಯಿಂದ ಮರಾಠೀ ಭಾಷೆಯ ಪ್ರಭಾವವು ಕಂಡುಬರುತ್ತದೆ. ಅವನು ಕೊಟ್ಟ ಕನ್ನಡ ವರ್ಣಮಾಲೆಯಲ್ಲಿ ಎ, ಒ, –ಇವುಗಳ ಪ್ರಸ್ತಾಪವಿಲ್ಲ. ಅದರಿಂದಾಗಿ ಈ ಸ್ವರಗಳಿರುವ ಯಾವುದೇ ಶಬ್ದಗಳನ್ನು ಕೊಡುವಲ್ಲಿ ತಪ್ಪುಗಳಾಗಿವೆ. ಉದಾಹರಣೆಗೆ 'ದೆವತಾ', 'ಅವನಿಗೊಸ್ಕರ'. ಇತ್ತ ಅವನು ಮಾಡಿಕೊಂಡಿದ್ದ ವಿಷಯವಿಭಾಗವೂ ಸಮರ್ಪಕವಾಗಿಲ್ಲ. ನಾಮಪದದ ಲಿಂಗ, ವಚನ, ವಿಭಕ್ತಿಗಳನ್ನು ಹೇಳಿಯಾದ ಮೇಲೆ ಸರ್ವನಾಮವು ಬರಬೇಕು. ಆದರೆ ಮಧ್ಯದಲ್ಲಿ ವಿಶೇಷಣದ ವಿಚಾರ ಬಂದಿದೆ. ಸಂಧಿ ಪ್ರಕರಣವು ಪುಸ್ತಕದ ಕೊನೆಯಲ್ಲಿದೆ. ವಾಕ್ಯರಚನಾ ವಿಧಾನದ ಪ್ರಸ್ತಾಪವೇ ಇಲ್ಲ !

'ಳ' ಅಕ್ಷರದ ಉಚ್ಚಾರಕ್ಕೆ ಸಮಾನವಾದದ್ದು ಇಂಗ್ಲಿಷ್‌ನಲ್ಲಿ ಇಲ್ಲವೆಂದು ಕೇರಿಯು ಹೇಳುತ್ತಾನೆ; ಅದು ನಿಜವೇ. ಆದರೆ ಕನ್ನಡದಲ್ಲಿಯೂ 'ಲಳಯೋಃರಭೇದ'ವನ್ನು ಗ್ರಹಿಸಿ, 'ಳ' ಬರುವಲ್ಲಿ 'ಲ'ವನ್ನೆ ಕೊಟ್ಟಿದ್ದಾನೆ. ಉದಾಹರಣೆಗೆ : ಮಕ್ಕಲು, ಮಕ್ಕಳು. ಅದರಂತೆ ಕೊಲ್, ಕೊಳ್ – ಇವುಗಳ ಅಂತರವೂ ಅವನಿಗೆ ತಿಳಿದಿಲ್ಲ (ಪು. ೧೨೪).

ವ್ಯಾಕರಣವಿಚಾರಗಳಲ್ಲಿಯೂ ಅನೇಕ ತಪ್ಪು ವಿಧಾನಗಳು ಕಂಡುಬರುತ್ತವೆ. 'ಮುಂದೆ' ಎನ್ನುವುದರ ಬಗ್ಗೆ, ಅವನ ವಿವರಣೆ ಇಂತಿದೆ :-

"ಮುಂದೆ, or according to some grammarians ಮುಂಚೆ or ಮೊದಲ್ಲಿ before, in first place, in the presence of, past future.. Exam : ಮುಂದೆ ಊಟಾ, ಮುಂಚೆ ಊಟಾ, or ಮೊದಿಲ್ಲಿ ಊಟಾ, eat first. ಮುಂದೆ ಕಾಶಿಗೆ ಹೋಗಿದ್ದೆ. I formerly went to Kashee. ಮುಂದೆ ಪುಸ್ತಕ ಬಿಚ್ಚಿಕೊಂಡು ಒದು ಹೆಳುತೆನೆ. I will lay the book before me, and read. ಈ ಕಾರ್ಯವು ಮುಂದೆ ಮಾಡುವಾ. we will do this thing first"

ಅವನು ಕೊಟ್ಟಿರುವ 'ಇದು' ಸರ್ವನಾಮದ ವಿಭಕ್ತಿ ವಚನಗಳನ್ನು ಗಮನಿಸುವುದು;

| ಏ. ವ. | ಬ.ವ. |
|---|---|
| ಇದು | ಇವು |
| ಇದರನ್ನು | ಇದರಗಳನ್ನು |
| ಇದರಿಂದ | ಇದರಗಳಿಂದ |

ಇನ್ನು, ಕೆಲವು ಶಬ್ದ, ವಾಕ್ಯಗಳ ಅಪಾರ್ಥಕ್ಕೆ ಮಾದರಿಗಳು ಇಲ್ಲಿವೆ :-

ಗೊಲ್ಲ–a female cow-keeper

ವೊದು–a female speaker

ಅಗಲಕ್ಕೆ [ಆಗಲಿಕ್ಕೆ]ಹೋಗುತ್ತೇನೆ–I shall be

ಕೇರಿಯ ವ್ಯಾಕರಣವು ಎಷ್ಟೊಂದು ದೋಷಯುಕ್ತವಾಗಿತ್ತೆನ್ನುವುದು ಇದರಿಂದ ಸ್ಪಷ್ಟವಾಗಬಲ್ಲದು. ವ್ಯಾಕರಣ ರಚನೆಯು ಅವನಿಗೆ ಯಾಂತ್ರಿಕ ಕೆಲಸವಾಗಿದ್ದಿತು*. ಈ ಕೃತಿಯ ಸಹಾಯದಿಂದ ಯಾವ ವಿದೇಶೀಯನೂ ಕನ್ನಡವನ್ನು ಕಲಿಯುವುದು ಸಾಧ್ಯವಿರಲಿಲ್ಲ! ಆದರೆ ಈ ಪುಸ್ತಕವು ದೂರದ ಬಂಗಾಲದಲ್ಲಿ ಮುದ್ರಿತವಾಗಿದ್ದರಿಂದಲೂ, ಇತ್ತ ದಕ್ಷಿಣ ಭಾರತದಲ್ಲಿ ಮೆಕ್ಕೆರೆಲ್‌ನ ವ್ಯಾಕರಣವು ಅನಿತರಲ್ಲಿ ಸಿದ್ಧವಾದದ್ದರಿಂದಲೂ, ಇದರ ಹೆಚ್ಚಿನ ಪ್ರತಿಗಳು ಅಚ್ಚಿನ ಮನೆಯಲ್ಲಿಯೆ ಕಾಲಕ್ರಮೇಣ ನಶಿಸಿ ಹೋಗಿರಬೇಕು. ಹೊಸಗನ್ನಡದ ಆದ್ಯ ಕೃತಿಯೆಂಬ ಐತಿಹಾಸಿಕ ಮಹತ್ತ್ವವಷ್ಟೆ ಅದರ ಪಾಲಿಗೆ ಉಳಿದಿದೆ.

---

* ವಿಲಿಯಮ್ ಕೇರಿಗೆ ಭಾರತರಮಣ ಮತ್ತು ಸುಬ್ಬರಾವ – ಎಂಬವರು ಕನ್ನಡ ವಿಷಯದಲ್ಲಿ ಸಹಾಯಕರಿದ್ದರೆಂದು ತಿಳಿಯುತ್ತದೆ. ಈ ವ್ಯಾಕರಣ ರಚನೆಯಲ್ಲಿ ಇಬ್ಬರದೂ ಅಂಗವಿರಬೇಕು. ಆದರೆ ಇವರಿಬ್ಬರ ಕನ್ನಡ ಪರಿಜ್ಞಾನವೂ ಸಂದೇಹಾಸ್ಪದವೇ ಆಗಿದೆ. ಅರ್ಥಾತ್ ಕೇರಿಯ ಎದ್ದುಕಾಣುವ ತಪ್ಪುಗಳನ್ನು ಅವರಾದರೂ ತಿದ್ದಬಹುದಿತ್ತು.[೧]

ಜಾನ್ ಮೆಕ್ಕೆರಲ್ ಕರ್ನಾಟಕದಲ್ಲಿ ಅಧಿಕಾರಿಯಿದ್ದುದರಿಂದಲೂ ಅನಂತರ ಮದ್ರಾಸದಲ್ಲಿ ಸರಕಾರಿ ಭಾಷಾಂತರಕಾರನಿದ್ದದರಿಂದಲೂ ಅವನಿಗೆ ಕನ್ನಡ ಭಾಷೆಯ ಪರಿಚಯವಿದ್ದಿತು. ಆ ಕಾರಣದಿಂದ ಕೇರ್ರಿಯ ವ್ಯಾಕರಣದಲ್ಲಿ ಕಂಡುಬರುವ ಬಾಲಿಶವಾದ ತಪ್ಪುಗಳು ಇವನ A Grammar of the Carnataca Languageನಲ್ಲಿ ಇಲ್ಲ. ಕೇಶಿರಾಜನ 'ಶಬ್ದಮಣಿದರ್ಪಣ'ವನ್ನು ಅಭ್ಯಾಸಮಾಡಿ ಮೆಕ್ಕೆರಲ್ ಅದನ್ನು ಸ್ಥೂಲವಾಗಿ ಅನುಸರಿಸಿದ್ದಾನೆ. ಪ್ರಯೋಗಗಳನ್ನು ಕೊಡುವಾಗ ಹಳಗನ್ನಡ, ಹೊಸಗನ್ನಡ–ಈ ಎರಡೂ ಬಗೆಯ ಉದಾಹರಣೆಗಳನ್ನು ಕೊಟ್ಟಿದ್ದುದು ಔಚಿತ್ಯಪೂರ್ಣವಾಗಿದೆ.

ಕನ್ನಡ ವ್ಯಾಕರಣದ ಅಭ್ಯಾಸಕ್ಕೆ ಸಂಬಂಧಿಸಿದ ಅವನ ಕೆಲವು ವಿಚಾರಗಳನ್ನು ಗಮನಿಸಬೇಕು :

-In the Carnataca Language there are no words that, strictly speaking, can be termed as adjectives.

-There are no relative pronouns.

-The irregular verbs in Carnataca are not very numerous. The irregularity is, in general, found in the past tense, in the second form of the future, in the past gerund and particle."

ಇವು ಅವನ ಸ್ವಂತದ ಅಭ್ಯಾಸದಿಂದ ಹೊರಹೊಮ್ಮಿದ ಅಭಿಪ್ರಾಯಗಳು. ಹೊಸಗನ್ನಡ ವ್ಯಾಕರಣದ ಬಗ್ಗೆ ಮೊದಲ ಬಾರಿಗೆ ಈ ಬಗೆಯ ಸಮಾಲೋಚನೆ ಕಂಡುಬರುತ್ತಿದೆಯಾದ್ದರಿಂದ ಈ ಕೃತಿಯು ಮಹತ್ವದ್ದಾಗಿದೆ. ವಾಕ್ಯರಚನೆಯ ಪ್ರಕರಣದಲ್ಲಿ ಅವನ ವಿಶೇಷ ಪರಿಶ್ರಮವು ಎದ್ದು ತೋರುತ್ತದೆ. ವಿದೇಶೀಯ ಅಭ್ಯಾಸಿಗಳನ್ನು ಗಮನದಲ್ಲಿಟ್ಟುಕೊಂಡು ಮೆಕ್ಕೆರಲ್ ಆ ಪ್ರಕರಣವನ್ನು ವಿಸ್ತಾರವಾಗಿ ಬರೆದಿದ್ದಾನೆ. ಪುಸ್ತಕದ ಕೊನೆಯಲ್ಲಿ ಅನುಬಂಧರೂಪವಾಗಿ ಕನ್ನಡ ಅಂಕಿಗಳು, ತೂಕ–ಅಳತೆ, ತಿಥಿ–ಸಂವತ್ಸರಗಳನ್ನು ಕೊಟ್ಟಿರುವುದರಿಂದ ಪುಸ್ತಕದ ಉಪಯುಕ್ತತೆಯು ಹೆಚ್ಚಿದೆ.

ಮೆಕ್ಕೆರಲ್‌ನ ಕೃತಿಯು ವ್ಯಾಕರಣದ ಎಲ್ಲ ಅಂಗಗಳನ್ನು ಒಳಗೊಂಡಿದ್ದರೂ ನಿರೂಪಣೆಯು ವ್ಯವಸ್ಥಿತವಾಗಿರಲಿಲ್ಲ. ಕೇವಲ ಹೊಸಗನ್ನಡ ಅಭ್ಯಾಸ ಮಾಡುವವರಿಗೆ ಅನಗತ್ಯವಾದ ಅನೇಕ ವಿವರಗಳು ಅದರಲ್ಲಿದ್ದುವು. ಹೀಗಾಗಿ ಕೈಪಿಡಿ ಸ್ವರೂಪದ ವ್ಯಾಕರಣವೊಂದನ್ನು ಹಡ್ಸನ್ ಸಿದ್ಧಗೊಳಿಸಿದನು (An Elementary Grammar of the Kannada Language). ಇದರಲ್ಲಿ ಮೆಕ್ಕೆರಲ್‌ನ ಸ್ಥೂಲ ಅನುಕರಣೆಯಿದ್ದರೂ ಸುವ್ಯವಸ್ಥಿತವಾದ ವಿಷಯ ವಿಭಜನೆ ಮತ್ತು ಸಂಕ್ಷಿಪ್ತತೆ–ಇವು ಹಡ್ಸನ್ ವ್ಯಾಕರಣದ ವೈಶಿಷ್ಟ್ಯಗಳಾಗಿವೆ. ಪ್ರತಿಯೊಂದು ಉದಾಹೃತ ಶಬ್ದ/ವಾಕ್ಯವನ್ನು ಕನ್ನಡದೊಂದಿಗೆ ಇಂಗ್ಲಿಷ್ ಲಿಪಿಯಲ್ಲಿ (transliteration) ಕೊಡಲಾಗಿದೆ. ಜೊತೆಗೆ ಭಾಷಾಂತರವನ್ನು ಕೊಟ್ಟಿದ್ದಾನೆ.

ಮೆಕ್ಕೆರಲ್ ಸಂಬಂಧಾರ್ಥಕ ಸರ್ವನಾಮಗಳಿಲ್ಲವೆಂದು ಹೇಳಿದ್ದರೆ ಹಡ್ಸನ್ possessive ಸರ್ವನಾಮಗಳನ್ನೂ ಆ ಗುಂಪಿಗೆ ಸೇರಿಸಿದ್ದಾನೆ. ಕ್ರಮವಿರಹಿತ (irregular) ಕ್ರಿಯಾಪದಗಳು ನೂರರಷ್ಟು ಇವೆಯೆಂದು ಅವುಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ಹೀಗೆ ಈ ವ್ಯಾಕರಣವು ನಿಷ್ಕೃಷ್ಟ ರೀತಿಯಲ್ಲಿ ಹೊರಬಂದು ಜನಪ್ರಿಯವಾಯಿತು.

ಹೊಸಗನ್ನಡಕ್ಕೆ ಸಂಬಂಧಿಸಿ, ಕನ್ನಡಿಗರಿಗಾಗಿ ಕನ್ನಡ ಭಾಷೆಯಲ್ಲಿಯೆ ವ್ಯಾಕರಣವನ್ನು ಬರೆದ ಹೆಗ್ಗಳಿಕೆ ಎಸ್. ಕೃಷ್ಣಮಾಚಾರಿಯವರದು.* ಸಂಸ್ಕೃತ, ತಮಿಳು, ಮಲೆಯಾಳ ಭಾಷೆಗಳ ವ್ಯಾಕರಣಗಳನ್ನು ಓದಿಕೊಂಡಿದ್ದುದಾಗಿ ಅವರು ಪೀಠಿಕೆಯಲ್ಲಿ ಹೇಳಿದ್ದಾರೆ. ಶಬ್ದಮಣಿದರ್ಪಣ, ಶಬ್ದಾನುಶಾಸನಗಳನ್ನು ಸಹ ಅವರು ಪರಿಶೀಲಿಸಿದರಲ್ಲದೆ, ಅಲ್ಲಲ್ಲಿ ಅವನ್ನು ಪ್ರಸ್ತಾಪಿಸಿದ್ದಾರೆ. ಗ್ರಂಥಸ್ಥವಾದ ಭಾಷೆಗೆ ವ್ಯಾಕರಣವನ್ನು ರಚಿಸುವ ಕ್ರಮವು ಸಾಮಾನ್ಯವಾದುದು. ಅವರ ಕಾಲಕ್ಕೆ ಹೊಸಗನ್ನಡವು ಗ್ರಂಥಸ್ಥವಾಗಿರಲಿಲ್ಲ. ಆದ್ದರಿಂದ ಆಗಿನ "ಹಿರಿಯರು ಮಾತನಾಡಿಕೊಳ್ಳುವ ಮಾತಿಗೇ" ಅವರು ವ್ಯಾಕರಣವನ್ನು ಸಿದ್ಧಪಡಿಸಬೇಕೆಂದರು. ಅಲ್ಲದೆ ದೇಶದಲ್ಲಿ ಮಾತನಾಡುವ ಮಾತಿಗೆ ಲಕ್ಷಣ ತಿಳಿಯದೇ ಗ್ರಂಥದ ಮಾತಿಗೆ ಲಕ್ಷಣ ತಿಳಿದು ಪ್ರಯೋಜನವಿಲ್ಲ ಎಂಬುದೂ ಅವರ ನಿಲುಮೆಯಾಗಿದ್ದಿತು.

ಸಂಸ್ಕೃತ ವ್ಯಾಕರಣ ವಿಧಾನವೆಂಬ ಕನ್ನಡಕವನ್ನು ಧರಿಸಿಯೆ ಹಿಂದಿನ ವಿದ್ವಾಂಸರು ಕನ್ನಡ ಭಾಷಾ ವ್ಯಾಕರಣವನ್ನು ವಿವೇಚಿಸಿದ್ದರೆ, ಕೃಷ್ಣಮಾಚಾರಿ ಅದಕ್ಕೆ ಪ್ರತ್ಯೇಕವಾದ ಅಸ್ತಿತ್ವವನ್ನು ಕೊಡಲು ಯತ್ನಿಸಿದ್ದಾರೆ. ಅವರು ಮೆಕ್ಕೆರೆಲ್‌ನ ವ್ಯಾಕರಣವನ್ನು, ಅದರಂತೆ ಎಲಿಸ್‌ನ ದಕ್ಷಿಣ ಭಾರತ ಭಾಷಾವಿಷಯಕ ಪ್ರಬಂಧವನ್ನು ಓದಿರಲು ಸಾಕು. ಎಲಿಸ್‌ನನ್ನು ಅನುಸರಿಸಿ, ಕನ್ನಡವು ಸಂಸ್ಕೃತಜನ್ಯವಲ್ಲವೆಂಬ ಮಾತನ್ನು ಹೇಳಿದ್ದಾರೆ. ಔತ್ತರೇಯ ಭಾಷೆಗಳು ಸಂಸ್ಕೃತದಿಂದ ಹುಟ್ಟಿಕೊಂಡಂತೆ ತಮಿಳಿನಿಂದ (ದ್ರವಿಡ) ಕನ್ನಡ ಮೊದಲಾದ ದಕ್ಷಿಣ ಭಾರತದ ಭಾಷೆಗಳು ಹುಟ್ಟಿದುವು ಎಂಬ ಅಂಶವನ್ನು ಪೀಠಿಕೆಯಲ್ಲಿ ಈ ರೀತಿಯಾಗಿ ವಿವರಿಸಿದ್ದಾರೆ.

"ದ್ರವಿಡವೂ ಸಂಸ್ಕೃತವೂ ಸ್ವಭಾವದಿಂದಲೂ ವಿಕಾರವನ್ನೈದಿಯೂ ಕೇರಳ ತೌಳವ ಕರ್ಣಾಟಕಾಂಧ್ರಗಳೆಂಬ ನಾಲ್ಕೂ ಭಾಷೆಗಳಾದವು. ಇವು ದ್ರವಿಡಾಭಾಸವುಳ್ಳದ್ದರಿಂದಲೇ ಈ ಭಾಷೆಗಳೂ ದ್ರವಿಡವೂ ಸೇರಿ ಪಂಚದ್ರಾವಿಡವೆಂಬ ಪ್ರಸಿದ್ಧಿಯನ್ನು ಹೊಂದಿದವು. . . .ಈ ನಾಲ್ಕಕ್ಕೂ ಅದು ಮೂಲ ಭಾಷೆಯಾಯಿತು."

---

* 'ಹೊಸಗನ್ನಡ ನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವು' ಎಂಬದರ ಹೆಸರು. ಈ ಪುಸ್ತಕವನ್ನು ಕುರಿತು ತೀ.ನಂ.ಶ್ರೀ. ಅವರು ವಿವರವಾಗಿ ವಿವೇಚಿಸಿದ್ದಾರೆ. (AFFRICATES IN KANNADA SPEECH AND OTHER LINGUISTIC PAPERS, C. I. I. L. Mysore- 1994, PAGE 67-78)

ಕನ್ನಡ ಹಾಗೂ ತಮಿಳು ಶಬ್ದಗಳ ಹೋಲಿಕೆಯನ್ನು ಗಮನಿಸಿ ಕೃಷ್ಣಮಾಚಾರಿಯವರು ಮೇಲಿನ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಆಧುನಿಕ ಭಾಷಾಶಾಸ್ತ್ರ ದೃಷ್ಟಿಯು ಅವರಲ್ಲಿ ಮೂಡಿರಲಿಲ್ಲ. ಒಂದು ಭಾಷೆಯ ಸ್ವತಂತ್ರ ಅಸ್ತಿತ್ವಕ್ಕೆ ಅದರ ಶಬ್ದ ಸ್ವರೂಪವೊಂದೇ ಮುಖ್ಯವಲ್ಲವೆಂಬುದು ಅವನ ಗಮನಕ್ಕೆ ಬಂದುದಿಲ್ಲ. ಆದರೂ ಕನ್ನಡ ವ್ಯಾಕರಣವನ್ನು ಕುರಿತು ಸ್ವತಂತ್ರವಾಗಿ ಪರ್ಯಾಲೋಚಿಸುವ ಒಲವನ್ನು ತೋರಿದ್ದಾರೆ.

ಕನ್ನಡ ಭಾಷೆಗೆ ಸಂಸ್ಕೃತ, ತಮಿಳುಗಳೆರಡೂ ಕಾರಣಗಳೆಂಬುದು ಅವರ ನಿಲುಮೆಯಾಗಿದ್ದಿತು:

"ಸಂಸ್ಕೃತವಾರ್ಯ್ಯ ಭಾಷೆಯಾದ್ದರಿಂದಲೂ ಆರ್ಯಾವರ್ತಾ ದೇಶವಾದ ವಿಂಧ್ಯ ಹಿಮವತ್ಪರ್ವತ ಮಧ್ಯದಲ್ಲಿ, ಪೂರ್ವದಲ್ಲಿ ಮಾತನಾಡುತ್ತಿದ್ದರು. ಈಗ ಸ್ವಲ್ಪ ಕೆಟ್ಟು ಪಂಚಗೌಡ ಮೊದಲಾದ ಆ ದೇಶಭಾಷೆಗಳು ಸಂಸ್ಕೃತಾಪಭ್ರಂಶವಾಗಿವೆ; ಮತ್ತೂ ಆ ಭಾಷೆಯಲ್ಲಿ ವೇದವದೆ; ಆ ಭಾಷೆಗೆ ವ್ಯಾಕರಣ ಶಾಸ್ತ್ರವಿದೆ. ಹಾಗಾಗಿ ಪೂರ್ಣ ಭಾಷೆಯಾಯಿತು. ತಿಗುಳೂ ಆ ಮೇರೆಗೆ ದಕ್ಷಿಣ ಸಮುದ್ರ ತೀರದಲ್ಲಿ ಪ್ರಸಿದ್ಧವಾದ್ದರಿಂದಲೂ ಈ ಭಾಷೆಯಲ್ಲಿ ವೇದವಿರುವದ್ದರಿಂದಲೂ ಈ ಭಾಷೆಗೆ ವ್ಯಾಕರಣಶಾಸ್ತ್ರ ಪ್ರವರ್ತಕರು ಅಗಸ್ತ್ಯ ಋಷಿಯಾದ್ದರಿಂದಲೂ ಇದರಲ್ಲೂ ಸಕಲ ಶಬ್ದಗಳಿಗೂ ಅವಯುವಾರ್ಥವಿರುವದ್ದರಿಂದ ಈ ದ್ರವಿಡ ಭಾಷೆಯೂ ಅನಾದಿ ಭಾಷೆಯೇ. ಆರ್ಯಾವರ್ತಾ ದೇಶಕ್ಕೂ ದ್ರಮಿಡ ದೇಶಕ್ಕೂ ಮಧ್ಯದಲ್ಲಿರುವ ಆಂಧ್ರ, ಕರ್ಣಾಟಕ, ತೌಲವ, ಕೇರಳ ದೇಶಗಳಲ್ಲಿ ಸಂಸ್ಕೃತ ದ್ರಮಿಡ ಶಬ್ದಗಳು ಯಥಾವಸ್ಥಿತವಾಗಿಯೂ ವಿಕಾರವನ್ನು ಹೊಂದಿಯೂ ಪ್ರಯೋಗಿಸಲ್ಪಡುತ್ತದೆ. . . .ಆದರೆ ಶಬ್ದಾನುಶಾಸನ, ಶಬ್ದಮಣಿದರ್ಪಣ ಮುಂತಾದ ಕರ್ಣಾಟಕ ವ್ಯಾಕರಣವ ಮಾಡಿದವರಿಗೆ ಸಂಸ್ಕೃತದಲ್ಲಿ ಮಾತ್ರ ಪರಿಚಯವಿದ್ದು ದ್ರಮಿಡದಲ್ಲಿ ಪರಿಚಯವಿಲ್ಲದ್ದರಿಂದ ಸಂಸ್ಕೃತದಲ್ಲಿ ಬಂದಂಥಾ ತತ್ಸಮ, ತದ್ಭವ ಶಬ್ದಗಳಿಗೆ ಮಾತ್ರ ವಿಧಿಯನ್ನು ಹೇಳಿದರು." (ತತ್ಸಮ ಪ್ರಕರಣ)

ಈ ಭೂಮಿಕೆಯ ಮೇಲಿಂದ ಅವರು ಅನೇಕ ಕನ್ನಡ ದೇಶ್ಯ ಶಬ್ದಗಳಿಗೆ ತಮಿಳು ಶಬ್ದಗಳೇ ಮೂಲವೆಂಬ ವಿಧಾನವನ್ನು ಮುಂದುವರೆಸಿಕೊಂಡು ಹೋಗಿದ್ದಾರೆ. ಹಾಗೂ ತಮಿಳು ಶಬ್ದಗಳು ಮತ್ತು ಅವುಗಳ 'ತದ್ಭವ' (ಕನ್ನಡ) ರೂಪಗಳನ್ನೂ ಕೊಟ್ಟಿದ್ದಾರೆ. (ಉದಾ: ಮನೈ=ಮನೆ, ಮರಂ=ಮರ, ಚೇರ್=ಸೇರು ಇತ್ಯಾದಿ) ಆದರೆ ತಮಿಳನ್ನೂ ಒಳಗೊಂಡ ಮೂಲದ್ರಾವಿಡ ಭಾಷೆಯೊಂದು ಇದ್ದಿತೆಂಬುದನ್ನು ಅರಿಯಲು ನಾವು ಕಾಲ್ಡವೆಲ್‌ನ ಗ್ರಂಥ ಪ್ರಕಟಣೆಯವರೆಗೂ ಕಾಯಬೇಕಾಯಿತು. (೧೮೫೬)

ಅನಂತರ ಹೊಸಗನ್ನಡ ವ್ಯಾಕರಣವನ್ನು ವಿಸ್ತಾರವಾಗಿ ಪ್ರತಿಪಾದಿಸಿದ ಶ್ರೇಯಸ್ಸು **ಧೋಂಡೊ ನರಸಿಂಹ ಮುಳಬಾಗಲ**ರಿಗೆ ಸಲ್ಲಬೇಕು. ಅವರ 'ಕನ್ನಡ ಕಯ್ಪಿಡಿ'ಯ ಪೂರ್ವಾರ್ಧ ಉತ್ತರಾರ್ಧಗಳು ೧೮೮೦ರಲ್ಲಿ ಬೆಳಕಿಗೆ ಬಂದವು (ಮರುಮುದ್ರಣ,

೧೯೫೬). ಇದು "ಕನ್ನಡ ಶಿಕ್ಷಣಾಲಯ (ಟ್ರೇನಿಂಗ್ ಕಾಲೇಜ)ದ ವಿದ್ಯಾರ್ಥಿಗಳಿಗೂ ಹಾಯಸ್ಕೂಲ ವಿದ್ಯಾರ್ಥಿಗಳಿಗೂ ಕನ್ನಡ ನುಡಿಯ ಅಧ್ಯಾಪಕರಿಗೂ ಕನ್ನಡದ ಸತ್ಯಜ್ಞಾನವಾಗಬೇಕೆಂಬುದ್ದೇಶದಿಂದ 'ಶಬ್ದಮಣಿದರ್ಪಣ', 'ಶಬ್ದಾನುಶಾಸನ' ಮುಂತಾದ ಪ್ರಸಿದ್ಧವಾದ ಪ್ರಾಚೀನ ಗ್ರಂಥಗಳಾಧಾರದಿಂದಲೂ ಸ್ವಾನುಭವದಿಂದಲೂ ರಚಿಸಲ್ಪಟ್ಟಿದೆ."

ದ್ರಾವಿಡ ಭಾಷಾ ವಿಚಾರದಲ್ಲಿ ಆ ಕಾಲಕ್ಕೆ ನಡೆದ ಸಂಶೋಧನೆಗಳನ್ನು ಪ್ರಸ್ತಾಪಿಸದೇ ಹಳೆಯ ವ್ಯಾಕರಣ ಪ್ರಕ್ರಿಯೆಗಳನ್ನು ಹೊಸ ಕಾಲದ ನುಡಿಗೆ ಅನುಸಾರವಾಗಿ ವಿವೇಚಿಸಿದ್ದಾಗಿದೆ. ಹೊಸಗನ್ನಡಕ್ಕೆ ಅನ್ವಯಿಸುವ ಮಟ್ಟಿಗೆ ಹಳಗನ್ನಡ ವ್ಯಾಕರಣ ನಿಯಮಗಳನ್ನು ಉಳಿಸಿಕೊಂಡು ಲೇಖಕರು ಇಲ್ಲಿ ಒಂದು ಬಗೆಯ ಸಮನ್ವಯವನ್ನು ಸಾಧಿಸಿದ್ದಾರೆ. ಕನ್ನಡಕ್ಕೆ ಐ, ಔ ಸ್ವರಗಳು ಸಹಜವಾದುವಲ್ಲ ಎಂದು ಭಾವಿಸಿ ಪುಸ್ತಕದ ಶೀರ್ಷಿಕೆಯನ್ನು 'ಕೈಪಿಡಿ' ಎನ್ನದೆ 'ಕಯ್ಪಿಡಿ' ಎಂದು ಬರೆಯುವ ಮಟ್ಟಿಗೆ ಸ್ವಂತಿಕೆಯನ್ನು ತೋರಿದ್ದಾರೆ. ಸುವ್ಯವಸ್ಥಿತವಾದ ನಿರೂಪಣೆ ಮತ್ತು ಸ್ವತಂತ್ರ ವಿಚಾರ ಸರಣಿ ಈ ಗ್ರಂಥದ ವೈಶಿಷ್ಟ್ಯಗಳಾಗಿವೆ.

ವಾಕ್ಯರಚನೆಯನ್ನು ವಿಸ್ತಾರವಾಗಿ ಪ್ರತಿಪಾದಿಸಿದುದು ಈ ಗ್ರಂಥದ ಇನ್ನೊಂದು ವೈಶಿಷ್ಟ್ಯವಾಗಿದೆ. ಉತ್ತರಾರ್ಧವು ಅದಕ್ಕೆ ಮೀಸಲು. ಇಂಗ್ಲಿಷ್ ಪ್ರಭಾವದಿಂದ ಹೊಸಗನ್ನಡ ವಾಕ್ಯರಚನೆಯಲ್ಲಿ ಆದ ಮಾರ್ಪಾಡುಗಳನ್ನು ಗಮನದಲ್ಲಿರಿಸಿಕೊಂಡು ಮುಳಬಾಗಲರು ಇದರ ವಿವೇಚನೆ ಮಾಡಿದ್ದಾರೆ. ಈ ವಿಷಯವನ್ನು ಇಷ್ಟೊಂದು ಆಳವಾಗಿ ಪ್ರತಿಪಾದಿಸಲಾದ ಇನ್ನಾವ ಸಮಕಾಲೀನ ವ್ಯಾಕರಣವೂ ಇಲ್ಲ. ಈ ವಿಭಾಗದ ಕರ್ಮಣೀ ಪ್ರಯೋಗ ಪ್ರಕರಣ, ಅನ್ವಯ ಪ್ರಕರಣಗಳಲ್ಲಿ ಅವರ ಸ್ವತಂತ್ರ ವಿಚಾರ ಸರಣಿಯು ಇನ್ನಷ್ಟು ಬೆಳಗಿದೆ. ಹೊಸಗನ್ನಡ ನುಡಿಯ ಅಭ್ಯಾಸದಲ್ಲಿ ಇದೊಂದು ಕೈಬಿಡಲಾಗದ ಮಹತ್ವಪೂರ್ಣ ಗ್ರಂಥವೆನಿಸಿದೆ.

ಇದಕ್ಕಿಂತಲೂ ಪರಿಪೂರ್ಣವಾದ, ಹೆಚ್ಚು ವ್ಯಾಪಕವಾದ ಕನ್ನಡ ವ್ಯಾಕರಣ ಗ್ರಂಥ **ಕಿಟೆಲ್**ರದು – ಇಂಗ್ಲಿಷ್‌ನಲ್ಲಿದೆ (A Grammar of the Kannada Language). 'ಶಬ್ದಮಣಿದರ್ಪಣ'ವೇ ಇದಕ್ಕೆ ಮೂಲ ತಳಹದಿಯಾಗಿದೆ. ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದ ಯಾವ ಅಂಶವನ್ನೂ ಬಿಡದೆ ಕಿಟೆಲ್ ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ. ದ್ರಾವಿಡಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ಅನೇಕ ಅಂಶಗಳು ಪ್ರಾಸಂಗಿಕವಾಗಿ ಬಂದಿವೆ. ಸುವ್ಯವಸ್ಥಿತವಾದ ನಿರೂಪಣೆ ಮತ್ತು ಸ್ವತಂತ್ರ ವಿಚಾರಸರಣಿ ಈ ಗ್ರಂಥದ ವೈಶಿಷ್ಟ್ಯಗಳಾಗಿವೆ. ಕನ್ನಡ ನುಡಿಯ ಬೆಳವಣಿಗೆಯನ್ನು ಗಮನದಲ್ಲಿರಿಸಿಕೊಂಡು ವ್ಯಾಕರಣದ ಎಲ್ಲ ವಿಧಿಗಳನ್ನೂ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಈ ಮೂರೂ ಅವಸ್ಥೆಗಳಲ್ಲಿ ನಿರೂಪಿಸಿದ್ದಾಗಿದೆ. ಕನ್ನಡ ಭಾಷೆಯ ಐತಿಹಾಸಿಕ ಹಾಗೂ ತೌಲನಿಕ ಅಭ್ಯಾಸದ ಸುಸ್ಪಷ್ಟ ಪ್ರಯತ್ನವಿದು. ಮುಂದುವರಿದು ಕಿಟೆಲ್ ಅನೇಕ ಧಾತುಗಳ ಮತ್ತು ಪ್ರತ್ಯಯಗಳ

ಪ್ರಾಗೈತಿಹಾಸಿಕ ರೂಪಗಳನ್ನು ಆರಿಸಿಕೊಂಡು ಹೋಗಿದ್ದಾರೆ. ಸಂಬಂಧಾರ್ಥಕ ಸರ್ವನಾಮ (ನಿಯಮ ನಂ.೧೭೮, ೧೮೫), ನಿಷೇಧಾರ್ಥ ಕ್ರಿಯಾಪದ (ಸಂ. ೨೧೦) ಮುಂತಾದ ವ್ಯಾಕರಣ ಪ್ರಕ್ರಿಯೆಗಳನ್ನು ವಿವರಿಸುವಲ್ಲಿ. ಅವರು ಸ್ವತಂತ್ರವಾಗಿ ಪರ್ಯಾಲೋಚಿಸಿ, ಮೌಲಿಕ ಅಭಿಪ್ರಾಯಗಳನ್ನು ನೀಡಿದ್ದಾರೆ.[೨]

## 33 ಶಾಲಾ ವ್ಯಾಕರಣ

ಮೇಲೆ ಹೇಳಿದ ವ್ಯಾಕರಣಗಳಲ್ಲಿ ಹೆಚ್ಚನವು 'ವಿದ್ಯಾರ್ಥಿ'ಗಳ ಉಪಯೋಗಕ್ಕಾಗಿಯೆ ಇದ್ದರೂ, ಅವುಗಳ ವಿಷಯ ಪ್ರತಿಪಾದನೆಯು ಪ್ರೌಢವಾದುದು. ಹೀಗೆ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳ ಮಟ್ಟದಲ್ಲಿ ರಚಿತವಾದ ಹಲವಾರು ವ್ಯಾಕರಣಗಳು ೧೯ನೆಯ ಶತಮಾನದಲ್ಲಿ ಹೊರಬಂದಿವೆ. ಆ ಕೆಲವುಗಳಲ್ಲಿಯೂ ಹೊಸ ವಿಚಾರ ಸರಣಿ ತಲೆದೋರಿದೆಯಾದ್ದರಿಂದ, ಇಲ್ಲಿ ಪರಿಶೀಲಿಸಬಯಸಿದೆ.

ಶಾಲಾ ವ್ಯಾಕರಣಗಳಲ್ಲಿ ಕಾಲಿನ್ ಕ್ಯಾಂಬೆಲ್‌ನ ಕನ್ನಡ ವ್ಯಾಕರಣ ಸಾರವೇ (೧೮೪೧) ಮೊದಲಿನದೆಂದು ಕಾಣುತ್ತದೆ. ಹತ್ತಾರು ಆವೃತ್ತಿಗಳನ್ನು ಕಂಡ ಆ ಕೃತಿಯನ್ನು ಮೈಸೂರಿನ ಶಾಲೆಗಳಲ್ಲೆಲ್ಲ ಉಪಯೋಗಿಸುತ್ತಿದ್ದರು. ಇತ್ತ ಮದ್ರಾಸ ಪ್ರಾಂತದ ಕನ್ನಡ ಶಾಲೆಗಳಲ್ಲಿ ಕೊಸ್ಟಾ, ಕೀಸ್ ಮತ್ತು ತ್ಸಿಗ್ಲರ್ ಬರೆದ ವ್ಯಾಕರಣಗಳು ಬಳಕೆಯಲ್ಲಿದ್ದವು. ಮಿಶನರಿಗಳು ರಚಿಸಿದ ವ್ಯಾಕರಣ ಪುಸ್ತಕಗಳು ಪ್ರಶ್ನೋತ್ತರ ರೂಪವಾಗಿದ್ದು, ಆ ಮೂಲಕ ವಿಷಯವನ್ನು ಅತಿ ಸುಲಭಗೊಳಿಸುವ ಪ್ರಯತ್ನವು ಕಂಡುಬರುತ್ತದೆ. ಮುಂಬಯಿ ಸರಕಾರದ ಶಿಕ್ಷಣ ಖಾತೆಯು ೧೮೪೪ರಷ್ಟು ಹಿಂದೆಯೇ 'Rudiments of Canarese Grammar' ಪುಸ್ತಕವನ್ನು ಹೊರತಂದಿದ್ದಿತಾದರೂ ಶಾಲೆಗಳಲ್ಲಿ ಅದರ ಬಳಕೆ ಹೆಚ್ಚಾಗಿರಲಿಲ್ಲ. ಈ ದಿಶೆಯಲ್ಲಿ ವೆಂಕಟ ರಂಗೋ ಕಟ್ಟಿಯವರ 'ಲಘು ವ್ಯಾಕರಣ'ವೇ ಹೆಚ್ಚು ಉಪಯುಕ್ತವಿದ್ದಿತು.

ಮಾಧ್ಯಮಿಕ ಶಾಲಾ ಮಟ್ಟದಲ್ಲಿ ಹೆಸರಾಂತ ವ್ಯಾಕರಣಗಳೊಳಗೆ 'ಕರ್ಣಾಟಕ ವಾಗ್ವಿಧಾಯಿನಿ'ಯೇ ಮೊದಲಿನದು(೧೮೬೯). ಇದೂ ಪ್ರಶ್ನೋತ್ತರ ರೂಪದಲ್ಲಿದೆ. ಅನಂತರದ ಪ್ರಮುಖ ವ್ಯಾಕರಣವೆಂದರೆ ಬಿ. ಮಲ್ಲಪ್ಪನವರ ಶಬ್ದಾದರ್ಶ. ವ್ಯಾಕರಣದ ನಿರ್ದುಷ್ಟ ನಿಯಮಗಳಿಗಾಗಿ ಇದು ಸುಪರಿಚಿತವಾದುದು. ಎಂ. ಬಿ. ಶ್ರೀನಿವಾಸಯ್ಯಂಗಾರರು ವ್ಯಾಕರಣ ವಿಷಯವನ್ನು ಇನ್ನಷ್ಟು ಸುಲಭಗೊಳಿಸುವ ದೃಷ್ಟಿಯಿಂದ 'ವಾಚಕ ಬೋಧಿನಿ'ಯನ್ನು ರಚಿಸಿದರು. ಇದರಲ್ಲಿ ನಿಯಮಗಳಿಗಿಂತ ಉದಾಹರಣೆಗಳು, ಅಭ್ಯಾಸಗಳೇ ಹೆಚ್ಚಾಗಿ ಇವೆ. ಈ ಮೂರು ವ್ಯಾಕರಣಗಳು ಹಲವು

ದಶಕಗಳ ವರೆಗೆ ಪಠ್ಯವಾಗಿ ಉಳಿದವು. ಇವು ಸರಕಾರೀ ಶಾಲೆಯ ಪ್ರಕಟಣೆಗಳಾದರೆ ಬೇರೆ ಕೆಲವರು ಖಾಸಗಿಯಾಗಿ ವ್ಯಾಕರಣ ಪುಸ್ತಕಗಳನ್ನು ಬರೆದಿದ್ದಾರೆ.*

ಮುಂಬಯಿ ಕರ್ನಾಟಕದಲ್ಲಿ, ನುಡಿಗಟ್ಟು (೧೮೯೨) ಆ ಮನ್ನಣೆಯನ್ನು ಹೊಂದಿದ್ದಿತು. ಮುಳಬಾಗಲರಿಂದ ವಿರಚಿತವಾದ ಈ ವ್ಯಾಕರಣವು 'ಕನ್ನಡ ಕಯ್ಪಿಡಿ'ಯ ಸಂಗ್ರಹರೂಪವೇನೂ ಅಲ್ಲ. ಇದರ ನಿರೂಪಣೆಯು ಸ್ವತಂತ್ರವಾದುದು. ಅಕ್ಷರ, ಶಬ್ದ, ವಾಕ್ಯ–ಎಂಬ ಮೂರು ವಿಭಾಗ ಮಾಡಿ 'ವ್ಯಾಕರಣ ವೃಕ್ಷ'ವನ್ನು ಕೊಟ್ಟದ್ದು ಇದರ ವೈಶಿಷ್ಟ್ಯಗಳಲ್ಲೊಂದು. ಅಲ್ಲದೆ, ಭಾಷೆ, ವ್ಯಾಕರಣಗಳ ಮೇಲಿನ ವ್ಯಾಖ್ಯೆಯನ್ನು ಒಳಗೊಂಡಿದ್ದುದು, ಇತರ ವ್ಯಾಕರಣ ಪುಸ್ತಕಗಳಲ್ಲಿ ಕಂಡು ಬಾರದ ಅಂಶವಾಗಿದೆ.

ಬಾಸೆಲ್ ಮಿಶನ್ನಿನ ಜಿ. ವುರ್ತ್ ಹಳಗನ್ನಡ ಅಭ್ಯಾಸಕ್ಕೆ ನೆರವಾಗಲೆಂದು **ಹಳಗನ್ನಡ ವ್ಯಾಕರಣ ಸೂತ್ರಗಳು** ಎಂಬ ಕೈಪಿಡಿಯನ್ನು ರಚಿಸಿದನು (೧೮೬೯). ಅದರಲ್ಲಿ ವ್ಯಾಕರಣದ ಜೊತೆಗೆ ಛಂದಸ್ಸು, ಅಲಂಕಾರಾದಿ ವಿಷಯಗಳೂ ಬಂದಿವೆ. ಎಲ್ಲವೂ ಸುಸ್ಪಷ್ಟವಾಗಿ ಸೂತ್ರರೂಪವಾಗಿ ನಿರೂಪಿತವಾಗಿವೆ. ಅಭ್ಯಾಸಿಗಳಿಗೆ ಇಂದಿಗೂ ಉಪಯುಕ್ತವಾಗಿವೆ.+

ಇನ್ನೊಬ್ಬ ಮಿಶನರಿ ತ್ಸಿಗ್ಲರರ A Practical key to the Canarese Language ಎಂಬುದು ಸ್ವತಂತ್ರ ಸರಣಿಯ ಇನ್ನೊಂದು ಕೃತಿ. ದಿನಬಳಕೆಯ ಒಂದು ನೂರು ಶಬ್ದಗಳನ್ನು ತೆಗೆದುಕೊಂಡು ಒಂದೊಂದರ ವಿವಿಧ ಪ್ರಯೋಗಗಳನ್ನು ವಾಕ್ಯರೂಪದಲ್ಲಿ ಕೊಟ್ಟಿದೆ.

ಐವತ್ತೆಂಟನೆಯ 'ಕೂಡು' ಶಬ್ದದ ವಿವಿಧ ರೂಪಗಳಿವೆ :

"ಇಲ್ಲಿ ಬಂದು ಕೂತುಕೊಳ್ಳಿರಿ.
ಯಾಕೆ ಅಲ್ಲಿ ಕೂಡ್ರುತ್ತೀರಿ ?
ಎಲ್ಲಿ ಕೂಡ್ರಲಿ?
ಕೆಳಗೆ ಕೂಡಬೇಡ.
ಮೇಲೆ ಕೂಡ್ರಿ,
ಎಲ್ಲಿ ಕೂತರೂ ಒಂದೇ.
ನೀವು ಹೇಳಿದಲ್ಲಿ ಕೂಡ್ರುತ್ತೇನೆ.
ರಾತ್ರಿಯೆಲ್ಲಾ ಕೂತು ಏನು ಮಾಡಿದಿರಿ ?

---

* ಮುನ್ಶಿ ಶ್ರೀನಿವಾಸಯ್ಯನು ವ್ಯಾಕರಣ ವಿಷಯವನ್ನು ಪದ್ಯದಲ್ಲಿ ಬರೆದಿದ್ದರೂ, ವೆಸ್ಲೆಯನ್ನರು ಟಿಪ್ಪಣಿ ಸಹಿತವಾಗಿ ಮುದ್ರಿಸಿ ಅದನ್ನು ತಮ್ಮ ಶಾಲೆಗಳಲ್ಲಿ ಬಳಸುತ್ತಿದ್ದರು.

+ ಇದರಲ್ಲಿ ಕಿಟೆಲ್ಲರ ಹೆಸರಿಲ್ಲ. ಆದ್ದರಿಂದ ಅವರ ಕರ್ತೃತ್ವ ಸಂಶಯಾಸ್ಪದವಾಗಿದೆ.

ನಾ ಕೂತುಕೊಂಡಿದ್ದಿಲ್ಲ.
ನಾ ರಾತ್ರಿಯಲ್ಲಿ ಕೂತುಕೊಳ್ಳುವನಲ್ಲ.
ಇದು ಕೂಡ್ರುವ ಮನೆ."

ಜೊತೆಗೆ ಈ ವಾಕ್ಯಗಳ ಭಾಷಾಂತರ, ಲಿಪ್ಯಂತರ (transliteration) ಕೂಡ ಇವೆ.

ಇದರ ಪೀಠಿಕೆಯ ಸವಿಯೇ ಬೇರೆ. 'Not to be turned over' ಎಂದು ಆರಂಭವಾಗುವ ಈ ನಿವೇದನೆಯಲ್ಲಿ ಗಣಿತ, ವ್ಯಾಕರಣಗಳಂತಹ ನೀರಸ ವಿಷಯಗಳನ್ನು ರೋಚಕವಾಗಿಸುವ ತ್ರಿಗ್ಗರನ ಜಾಣ್ಮೆಯನ್ನು ನಾವು ಕಾಣುತ್ತೇವೆ.

ಬೆಳಗಾಂವಿಯ ಹೈಸ್ಕೂಲಿನಲ್ಲಿ ಶಿಕ್ಷಕನಾಗಿದ್ದ ಬಾಳಶಾಸ್ತ್ರಿ ನರೇಗಲ್ ವಿರಚಿಸಿದ 'ವಾಣೀಮುಕುರ'ವನ್ನು ಪ್ರತ್ಯೇಕವಾಗಿ ಉಲ್ಲೇಖಿಸಬೇಕು (೧೮೮೪); 'ಇಂಗ್ಲಿಷ್' ಮತ್ತು ಕನ್ನಡಿ [ಹಾಗೇ ಇದೆ] ವಿದ್ಯಾರ್ಥಿಗಳಿಗಾಗಿ 'ಅತಿ ದೊಡ್ಡದಾಗಿ' 'ಬಹು ಶ್ರಮದಿಂದ' ಇದು ರಚಿತವಾಯ್ತೆಂದು ಪುಸ್ತಕದ ಸುರುವಿಗೇ ಹೇಳಲಾಗಿದೆ. ಉಪೋದ್ಘಾತದಲ್ಲಿ ಅವನು ಹೇಳಿದ ಮಾತುಗಳಿವು:

"ಬಾಲವ್ಯಾಕರಣ, ಶಾಲಾವ್ಯಾಕರಣ, ಕೃಷ್ಣಮಾಚಾರ್ಯರ ವ್ಯಾಕರಣ, ವಾಗ್ವಿಧಾಯಿನಿ ಮತ್ತು ಶಬ್ದಮಣಿದರ್ಪಣ ಮುಂತಾದ ಹಲವು ಗ್ರಂಥಗಳಿರುತ್ತಿರಲಿಕ್ಕೆ ಇದನ್ನು ಮಾಡುವುದಕ್ಕೆ. . . [ಕಾರಣವೆಂದರೆ] ಈಗಿನ ಕಾಲಕ್ಕನುಸರಿಸಿ ಬರುವಂಥ ಎಲ್ಲ ಪ್ರಕಾರದ ಸಂಶಯಗಳನ್ನು ದೂರಮಾಡುವಂಥ ಪೂರ್ಣವಾದ ಗ್ರಂಥವು ಮೇಲೆ ಹೇಳಿದವುಗಳಲ್ಲಿ ಒಂದೂ ಇಲ್ಲ . . . ಕನ್ನಡದಲ್ಲಿ ಗ್ರಂಥಗಳನ್ನು ಬರೆಯುವ ಲವಲವಿಕೆಯ ಹೆಚ್ಚು ಹೆಚ್ಚು ಆಗುತ್ತ ನಡೆದಿದೆ. ಇಂಥ ಕಾಲದಲ್ಲಿ ವ್ಯಾಕರಣದ ಯೋಗದಿಂದ ಭಾಷೆಯ ನಿಯಮವನ್ನು ಮಾಡತಕ್ಕದ್ದು. . . .ಇದೇ ಹೇತುವಿನಿಂದ ಈ ಪುಸ್ತಕವನ್ನು ಮಾಡಿದೆನು. . . .ಇಂದಿನವರೆಗೆ ಭಾಷೆಯ ನಿಯಮದ ಕೆಳಗೆ ತರುವುದಕ್ಕೆ ಯಾರೂ, ಎಂದೂ ಪ್ರಯತ್ನಿಸದೇ ಇದ್ದುವಂಥಹವುಗಳನ್ನು ನಿಯಮದ ಕೆಳಗೆ ಬರುವಂತೆ ಮಾಡಿ ಯಾವತ್ತು ಪ್ರಕಾರದ ಸಂಶಯಯುಕ್ತವಾದ ಅಡಚಣೆಗಳು ದೂರಾಗುವಂತೆ ಕೈಲಾದ ಮಟ್ಟಿಗೆ ಪ್ರಯತ್ನಿಸಿರುತ್ತೇನೆ. . . .ಹೊಸ ಹೊಸ ನಿಯಮಗಳನ್ನು ಮಾಡಿ ಇದನ್ನು ಮುಗಿಸಿರುತ್ತೇನೆ".

ನರೇಗಲ ಬಾಳಶಾಸ್ತ್ರಿಯ ಉದ್ದೇಶವು ಸ್ತುತ್ಯವಿದ್ದರೂ ಅದನ್ನು ನಿರ್ವಹಿಸುವ ಯೋಗ್ಯತೆ ಅವನಲ್ಲಿರಲಿಲ್ಲ. ಕೃತಿಯನ್ನು ದೊಡ್ಡದಾಗಿ ಮಾಡಹೊರಟು ಅನವಶ್ಯಕ ವಿವರಗಳನ್ನು ತುಂಬಿದ್ದಾನೆ. ಅವನು ಹೇಳಿದ ಹೊಸ ಹೊಸ ನಿಯಮನಗಳೆಂದರೆ ಇಂಥವೇ ಆಗಿವೆ! ಕಾಲ್ಡ್‌ವೆಲ್‌ನನ್ನು ಅನುಸರಿಸಿ ಕನ್ನಡವು ದ್ರಾವಿಡ ಭಾಷೆಗೆ ಸೇರಿದುದೆಂದು ವಿವರಿಸಿಯಾದ ಮೇಲೆ 'ಸಂಸ್ಕೃತಕ್ಕೂ ಕನ್ನಡಿಗೂ ಯೇನೂ ಸಂಬಂಧವಿರುವುದಿಲ್ಲ'

ಎಂದು ಅಭಿಪ್ರಾಯಪಡುವಷ್ಟು ಇದರಲ್ಲಿಯ ವಿಷಯವು ಬಾಲಿಶವಾಗಿದೆ. 'ಕನ್ನಡ' ಶಬ್ದವನ್ನೆ ಕನ್ನಡಿ, ಕನ್ನಡು ಎಂದು ತಪ್ಪಾಗಿ ಬರೆದ ಈ ವ್ಯಾಕರಣದಿಂದ ಹೆಚ್ಚಿನದೇನನ್ನೂ ನಿರೀಕ್ಷಿಸುವಂತಿಲ್ಲ.

ಕಾರವಾರದಲ್ಲಿ ಶಿಕ್ಷಕನಾಗಿದ್ದ ಮೂಡಭಟ್ಕಳ ಇಂಗ್ಲಿಷ್ ಭಾಷೆಯಲ್ಲಿ ಬರೆದ ಹೊಸಗನ್ನಡ ವ್ಯಾಕರಣವು (೧೮೯೯) ಬೇರೆ ಉದ್ದೇಶದಿಂದ ಕೂಡಿದೆ. ಕನ್ನಡ ವ್ಯಾಕರಣ ಪ್ರಶ್ನೆಗಳಿಗೆ ಇಂಗ್ಲಿಷ್‌ನಲ್ಲಿ ಉತ್ತರ ಕೊಡಬೇಕಾದ ಮುಂಬಯಿ ವಿಶ್ವವಿದ್ಯಾಲಯದ ಮೆಟ್ರಿಕ್ ವಿದ್ಯಾರ್ಥಿಗಳಿಗಾಗಿ ಇದು ರಚಿತವಾಯ್ತು. ಜೊತೆಗೆ ಕನ್ನಡೇತರರೂ ಕನ್ನಡವನ್ನು ಕಲಿಯುವುದಕ್ಕೆ ಇದು ನೆರವಾಗಲೆಂದು ಲೇಖಕನ ಹಾರೈಕೆಯಾಗಿದೆ. ನಿರೂಪಣೆಯಲ್ಲಿ ಹೊಸ ಅಂಶವಿಲ್ಲದಿದ್ದರೂ ಪರ್ಯಾಯವಾಗಿ ಕನ್ನಡ ಇಂಗ್ಲಿಷ್ ವ್ಯಾಕರಣಾಂಶಗಳ ತುಲನೆ ಬಂದಿದೆ. ಕಾರವಾರದಲ್ಲಿದ್ದ ಇನ್ನೊಬ್ಬ ಶಿಕ್ಷಕ ನರಸಿಂಹ ಮಾಧವ ಮಹಿಷಿಯು ಇದೇ ದೃಷ್ಟಿಯನ್ನಿಟ್ಟುಕೊಂಡು Prosody of the Kannada Language ಹೊರ ತಂದಿದ್ದಾನೆ (೧೮೯೩).

ಅಂದಿನ ಶಾಲಾ ವ್ಯಾಕರಣ ಪುಸ್ತಕಗಳಲ್ಲಿ **ಟಿ.ಜಿ. ಮಾಬೆನ್** ಇವನ ಕನ್ನಡ ವ್ಯಾಕರಣ ಬೋಧಿನಿ ಅನೇಕ ದೃಷ್ಟಿಯಿಂದ ಮಹತ್ವಪೂರ್ಣವೆನಿಸಿದೆ. ಇದರ ವಿಷಯ ವಿವೇಚನೆಯು ಹೊಸ ಹಾದಿಯನ್ನು ಹಿಡಿದಿದ್ದು, ನಿರೂಪಣೆಯಲ್ಲಿ ನವೀನ ವಿಧಾನಗಳನ್ನು ಅನುಸರಿಸಲಾಗಿದೆ. ಅದಕ್ಕಿಂತ ಹಿಂದಿನ ಹಲವು ವ್ಯಾಕರಣಗಳು ಪ್ರಶ್ನೋತ್ತರ ರೂಪದಲ್ಲಿದ್ದುದನ್ನು ಪ್ರಸ್ತಾಪಿಸಿ ಆ ಕ್ರಮವು ಬಾಯಿಪಾಠ ಮಾಡುವುದಕ್ಕಷ್ಟೇ ಯೋಗ್ಯವಲ್ಲದೆ, ಅದರಿಂದ ವ್ಯಾಕರಣದ ಬಗ್ಗೆ ಹುಡುರ ಆಸ್ಥೆ ತಗ್ಗುವುದೆಂದು ಮಾಬೆನ್ ಟೀಕೆ ಮಾಡಿದ್ದಾನೆ. ಜೊತೆಗೆ ಅದರಲ್ಲಿ ನಿಜವಾದ ಆಸಕ್ತಿಯನ್ನು ಕುದುರಿಸುವ ದೃಷ್ಟಿಯಿಂದ ಮೊದಲು ಉದಾಹರಣೆಗಳನ್ನು ಹೇಳಿ, ಅಲ್ಲಿಂದ ಅದಕ್ಕೆ ಸಂಬಂಧಿಸಿದಂತೆ ನಿಯಮಗಳನ್ನು ಸೂತ್ರರೂಪದಲ್ಲಿ ಹೇಳುವ ವಿಧಾನವನ್ನು ಪ್ರಥಮತಃ ಅನುಸರಿಸಿದ್ದಾನೆ. ಒಂದು ಭಾಷೆಯ ವ್ಯಾಕರಣ ಗೊತ್ತಿದ್ದವರಿಗೆ ಇನ್ನೊಂದು ಭಾಷೆಯ ವ್ಯಾಕರಣದ ಅಭ್ಯಾಸದಲ್ಲಿ ಮೊದಲು ಸೂತ್ರ, ಅನಂತರ ಪ್ರಯೋಗಗಳು–ಎಂಬ ಕ್ರಮವು ಸರಿಹೋಗುವುದಲ್ಲದೆ ಮೊದಲ ಬಾರಿಗೆ ಕಲಿಯುವವರಿಗೆ ತದ್ಧಿತ, ಕಾರಕ, ಯೋಗವಾಹ ಮುಂತಾದ ಅಪರಿಚಿತ ಹೆಸರುಗಳು ಅವರನ್ನು ಹೆದರಿಸಬಹುದೆಂದು ಮಾಬೆನ್ ವಿವರಣೆ ನೀಡಿದ್ದಾನೆ. ಹೀಗೆ ಅವನು ವಿದ್ಯಾರ್ಥಿಗಳ, ಅದರಂತೆ ಶಿಕ್ಷಕರ ಸೌಲಭ್ಯವನ್ನು ತನ್ನ ಕಣ್ಣ ಮುಂದೆ ಇರಿಸಿಕೊಂಡಿದ್ದುದು ಅವನ ವಿವೇಚನೆಯಲ್ಲಿ ಸುವ್ಯಕ್ತವಾಗಿದೆ. ಶಿಕ್ಷಕರಿಗಾಗಿ ಅಲ್ಲಲ್ಲಿ ವಿವರ ಸೂಚನೆಗಳೂ ಇವೆ.

ವಿಷಯ ವಿಭಾಗದಲ್ಲಿಯೂ ಮಾಬೆನ್ ಹಿಂದಿನ ವ್ಯಾಕರಣಕಾರರಿಗಿಂತ ಬೇರೆ ದಾರಿ ಹಿಡಿದಿದ್ದಾನೆ. ಎಲ್ಲಕ್ಕೂ ಮೊದಲಿಗೆ ಅಕ್ಷರ ಪ್ರಕರಣವಿರುವುದು ವಾಡಿಕೆ. ಆದರೆ

ಅವನ ದೃಷ್ಟಿಯಲ್ಲಿ ಕಾರಕವೇ ವ್ಯಾಕರಣದ ಅಸ್ತಿವಾರ. 'ಕಾರಕ' ಗಳ ದೆಸೆಯಿಂದಲೇ ವಿಭಕ್ತಿಗಳಿಗೆ ಕರ್ತೃ ಕರ್ಮ ಎಂಬೀ ಹೆಸರುಗಳು ಬಂದಿವೆ ಎಂಬುದನ್ನೂ ವಿಭಕ್ತಿಗಳನ್ನು ಕಲಿಸದೆ ನಾಮಪದವನ್ನು ಕಲಿಸುವುದು ಬಹು ಪ್ರಯಾಸವಾಗಿರುತ್ತದೆಂಬುದನ್ನೂ ತಿಳಿದು ಕಾರಕಗಳನ್ನು ಮೊದಲು ಕಾಣಿಸಿ, ಸಾಮಾನ್ಯ ವಾಕ್ಯ ವಿಭಜನೆಯ ವಿನ್ಯಾಸವನ್ನು (analysis and synthesis of sentences) ವಿವರಿಸಿದ್ದಾನೆ.

ಅದರಂತೆ ಸಂಧಿಯ ವಿಚಾರ. 'ಸಂಧಿಯನ್ನು ಗ್ರಹಿಸಲಿಕ್ಕೆ ತಕ್ಕಷ್ಟು ವ್ಯಾಕರಣ ಗೊತ್ತಿರಬೇಕು. ಆದುದರಿಂದ ಸಂಧಿಯನ್ನು ಅಕ್ಷರ ಖಂಡದೊಂದಿಗೆ ವಿವರಿಸದೆ ಕೊನೆಯಲ್ಲಿ ಅಂದರೆ ದೇಶ್ಯ, ಅನ್ಯದೇಶ್ಯ ಶಬ್ದಪ್ರಕರಣದಲ್ಲಿ ಕೊಟ್ಟಿದ್ದಾನೆ. ಅಕ್ಷರ ಪ್ರಕರಣವು ಹೆಚ್ಚು ವಿವರಗಳನ್ನೊಳಗೊಂಡು ಪರಿಪೂರ್ಣವೆನಿಸಿದೆ. ವಿದ್ಯಾರ್ಥಿಗಳು ಬರಹದಲ್ಲಿ ಮಾಡುವ ತಪ್ಪುಗಳ ದೃಷ್ಟಿಯಿಂದ ಕೆಲವು ಉಪಯುಕ್ತ ಸೂಚನೆಗಳನ್ನು ಕೊಟ್ಟಿದ್ದಾನೆ. ಬಿಂದುವನ್ನು ಪಂಕ್ತಿಯ ಆದಿ ಅಂತ್ಯದಲ್ಲಿ ಬರೆಯಬಾರದು; ಅರ್ಕಾವೊತ್ತಿನ ಮೊದಲು ದೀರ್ಘವನ್ನು ಬರೆಯವುದು ತಪ್ಪು (ಕೇರ್ – ಕೆರ್ೀ), ಎಂದಿದ್ದಾನೆ. ಅದರಂತೆ ಕೈಯಲ್ಲಿ, ಗೈಯದೆ ಎಂದು ಬರೆಯವುದು ಸರಿಯಲ್ಲ; ಮಧ್ಯದ ಯಕ್ಕೆ ಯ ಒತ್ತು ( ್ಯ ) ಬರಬೇಕು' ಎನ್ನುತ್ತಾನೆ (ಕೈಯ್ಯಲ್ಲಿ, ಗೈಯ್ಯದೆ). ಇಂಥ ತಪ್ಪುಗಳನ್ನು ಇಂದಿಗೂ ಮಾಡುವುದು ಕಂಡು ಬರುತ್ತದೆಯಾದ್ದರಿಂದ ಅವನ ಸೂಚನೆಗಳಿಗೆ ಮಹತ್ವವಿದೆ.

ಮಾಬೆನ್ ಅಲ್ಲಲ್ಲಿ ತನ್ನ ಸ್ವಂತದ ವಿಚಾರಗಳನ್ನೂ ಟಿಪ್ಪಣಿ ರೂಪದಲ್ಲಿ ಸೇರಿಸಿದ್ದುದು ಕಂಡುಬರುತ್ತದೆ. 'ಅನುನಾಸಿಕವನ್ನು ಹಕಾರಕ್ಕಿಂತ ಮೊದಲು ಉಚ್ಚರಿಸುವುದುಂಟು, ಆದರೆ ಅನುನಾಸಿಕವನ್ನು ಒತ್ತಾಗಿ ಬರೆಯುವಲ್ಲಿ ಕನ್ನಡ ಬರಹಕ್ಕೆ ಒಂದು ಕ್ರಮವಿದ್ದಂತೆ ತೋರುವುದು' ಎಂಬ ಅವನ ಊಹೆ ಒಟ್ಟಿನಲ್ಲಿ ಸರಿಯೇ. ಕನ್ನಡದಲ್ಲಿ ವಿಭಕ್ತಿಗಳು ಐದು ಮಾತ್ರ ಎಂದು ಹೇಳಿ (ಪು. ೩೧) ಪಂಚಮೀ ಸಪ್ತಮೀ ವಿಭಕ್ತಿಗಳ ಪ್ರತ್ಯಯಗಳಾದ 'ದೆಸೆಯಿಂದ' ಮತ್ತು 'ಅಲ್ಲಿ' ಎಂಬವು ಅನುಕ್ರಮವಾಗಿ ಒಂದು ನಾಮಪದ, ಅವ್ಯಯಗಳಿಂದ ಸಿದ್ಧವಾದವುಗಳು ಎಂದು ತೋರಿಸಿಕೊಟ್ಟಿದ್ದಾನೆ. 'ಮರದಿಂದ', 'ಮರದಲ್ಲಿ', ಎಂಬವು ವಿಭಕ್ತಿ ಪದಗಳೆಂದು ಅನ್ನಿಸಿಕೊಂಡರೆ, ಮರಕ್ಕಿಂತ, ಮರದ ಮೇಲೆ, ಮರದ ಕೆಳಗೆ, ರಾಮನಲ್ಲಿಂದ, ಮಾಡುವಲ್ಲಿ–ಎಂಬಿವು ಕೂಡ ವಿಭಕ್ತಿಗಳೆಂದು ಯಾಕೆ ಅನ್ನಿಸಿಕೊಳ್ಳಬಾರದು? ಎಂಬ ಅವನ ಪ್ರಶ್ನೆಯಲ್ಲಿ ತಥ್ಯವಿದೆ.

ಹಾಗೆಂದು ಮಾಬೆನ್ ತನ್ನ ವ್ಯಾಕರಣ ಪುಸ್ತಕದಲ್ಲಿ ಅವನ್ನು ಬಿಟ್ಟುಕೊಡನು! "ಕನ್ನಡ ವ್ಯಾಕರಣವನ್ನು ಕಲಿಯುವುದರಲ್ಲಿ ಬಹು ಬಲಗೊಂಡಿರುವ ಏಳು ವಿಭಕ್ತಿಗಳ ಪಟ್ಟಿಯನ್ನು ಕೆಡಿಸಿದರೆ ವ್ಯಾಕರಣ ವಿದ್ಯೆಯಲ್ಲಿ ಬಹಳ ಹೆಚ್ಚು ಕಡಿಮೆಯಾದಂತೆ ತೋರುವುದು. ಆದ ಪ್ರಯುಕ್ತ. . . . .ಇಂಥ ಕೆಲವು ಅಸಂಗತಗಳನ್ನು ವಾಚಕರಿಗೆ ತೋರಿಸಿಕೊಟ್ಟಿದೆ ಅಷ್ಟೆ".

ವಾಕ್ಯರಚನೆಯ ಪ್ರಕರಣದಲ್ಲಿ ಅವನು ಕೊಟ್ಟ ಅಭ್ಯಾಸಗಳು ಔಚಿತ್ಯದಿಂದ ಕೂಡಿವೆ. ಒಂದನ್ನು ಇಲ್ಲಿ ಕೊಡುತ್ತೇವೆ:–

"೨೩ನೆಯ ಅಭ್ಯಾಸ–

–ಅವನು ಅಷ್ಟು ಗಟ್ಟಿಗನೊ? ಅವನಷ್ಟು ಗಟ್ಟಿಗನೊ?

–ನೀನಾದರೂ ಅದನ್ನು ಮಾಡಲಿಲ್ಲ; ನೀನು ಸಹಾ ಅದನ್ನು ಮಾಡಲಿಲ್ಲ.

–ತತ್ಕಾಲ; ತಕ್ಷಣ

–ಅವನು ಹೋದನು; ಅವನೂ ಹೋದನು; ಅವನೇ ಹೋದನು; ಅವನಾಗಿ ಹೋದನು; ಅವನಾದರೂ ಹೋದನು.

ಮೇಲಿನ ಪದ/ವಾಕ್ಯ ಸಮುದಾಯದಲ್ಲಿಯ ವ್ಯತ್ಯಾಸವನ್ನು ವಿವರಿಸಲು ವಿದ್ಯಾರ್ಥಿಗಳನ್ನು ಕೇಳಿದುದು ಮಾಬೆನ್ನನ ಸೂಕ್ಷ್ಮ ದೃಷ್ಟಿಗೆ ನಿದರ್ಶನವಾಗಿದೆ.

ಇನ್ನು, ಕನ್ನಡ ಬರಹದ ಸ್ವರೂಪವನ್ನು ಕುರಿತು ಅವನ ಸ್ವತಂತ್ರವಾದ ಊಹೆ ಇಂತಿದೆ :–

"A Comment : ಕೈಬರಹದ ಅಕ್ಷರಗಳೆಲ್ಲಾ ಎಡಗಡೆ ವಾಲುತ್ತವೆ; ಮಾತ್ರವಲ್ಲ, ಎಡಗಡೆಗೆ ಬರಿಯುವುದು ಅಭ್ಯಾಸವಾಗಿ ಹೋದದ್ದರಿಂದ 'ತ'ದ ಒತ್ತು ( ್ತ ), ತಲೆಕಟ್ಟುಗಳನ್ನು ಬಹು ಉದ್ದವಾಗಿ ಎಳಿಯುವುದೂ ರೂಢಿಯಲ್ಲಿ ಅದೆ. ಪುರಾತನದ ಕನ್ನಡ ಅಕ್ಷರಗಳಿಗೂ ಈಗಿನವುಗಳಿಗೂ ರೂಪದಲ್ಲಿ ವಿಪರೀತ ಹೆಚ್ಚು ಕಡಿಮೆ ಕಾಣುತ್ತದೆ. ಈ ಎಲ್ಲಾ ಕಾರಣಗಳಿಂದ ಕನ್ನಡ ಬರಹ ರೂಪವನ್ನು ಮುಂಚೆ ಬಲಗಡೆಯಿಂದ ಎಡಗಡೆಗೆ ಹಿಂದೂಸ್ತಾನಿಯಂತೆ ಬರಿಯುತ್ತಿದ್ದರೆಂತಲೂ ಅನಂತರ ಸಂಸ್ಕೃತ ಪಂಡಿತರು ಸಂಸ್ಕೃತದಂತೆ ಎಡಗಡೆಯಿಂದ ಬಲಗಡೆಗೆ ಬರಿಯತೊಡಗಿ ಅಕ್ಷರಗಳ ರೂಪವನ್ನಾದರೂ ಕೆಡಿಸಿದರೆಂತಲೂ ಊಹಿಸಬಹುದು".

'ವ್ಯಾಕರಣ ಬೋಧಿನಿ'ಯಲ್ಲಿ ಬಂದ ಕೆಲವು ಹೊಸ ಅಂಶಗಳು ಚರ್ಚಾಸ್ಪದವಿರಬಹುದು. ಆದರೆ ಮಾಬೆನ್ನನ ಸ್ವತಂತ್ರ ವಿಚಾರ ಸರಣಿಯಿಂದಾಗಿ ಅದೊಂದು ಗಣನೀಯ ವ್ಯಾಕರಣ ಗ್ರಂಥವಾಗಿದೆ. ಅವನ ಕಾಲಕ್ಕೆ ನೆಲೆಗೊಂಡಿದ್ದ ದ್ರಾವಿಡಮೂಲವಾದ ನವೀನ ಭಾಷಾ ವಿಚಾರಗಳನ್ನು ಕನ್ನಡಕ್ಕೆ ಅನ್ವಯಿಸುತ್ತ ಅವನ್ನು ಮುಂದೊಯ್ದವರಲ್ಲಿ ಮಾಬೆನ್ ಮೊದಲಿಗನೆಂದು ನಮಗೆ ತೋರುತ್ತದೆ.*

## ೨೩. ಶಬ್ದಕೋಶಗಳು

ಪ್ರಾಚೀನ ಕಾವ್ಯಶಾಸ್ತ್ರಗಳ ವ್ಯಾಸಂಗದಲ್ಲಿ ನಿಘಂಟುವಿಗೆ ವಿಶೇಷವಾದ ಮನ್ನಣೆ ಇದ್ದಿತು. ಹಿಂದಿನ ಕಾಲದಲ್ಲಿ ಅಮರಕೋಶವನ್ನು ಪ್ರತಿಯೊಂದು ಮನೆ, ಶಾಲೆಯಲ್ಲಿ

* ಈ ವ್ಯಾಕರಣ ಪುಸ್ತಕವನ್ನು ಪ್ರಸಾರಗೊಳಿಸಿದಲ್ಲಿ ತುಂಬಾ ಪ್ರಯೋಜನಕಾರಿಯಾಗುವುದು

ಕಡ್ಡಾಯವಾಗಿ ಕಲಿಸುತ್ತಿದ್ದುದನ್ನು ನೆನೆಯಬೇಕು. ಶಬ್ದಾರ್ಥ ಪರಿಜ್ಞಾನವು ಶಾಸ್ತ್ರಾಭ್ಯಾಸಕ್ಕೆ ಅತ್ಯವಶ್ಯ ಎಂಬುದನ್ನು ಪೂರ್ವಜರು ಮನಗಂಡಿದ್ದರು. ಹೀಗಾಗಿ ಅಮರಕೋಶಕ್ಕೆ ಟೀಕೆಗಳು ಮತ್ತು ವೈದ್ಯಕೀಯ ಮುಂತಾದ ವಿಷಯಗಳ ಮೇಲಿನ ೨೫-೩೦ ಸಂಸ್ಕೃತ ಕನ್ನಡ ನಿಘಂಟುಗಳು ಹಳಗನ್ನಡ ವಾಙ್ಮಯದಲ್ಲಿ ಕಂಡುಬರುತ್ತವೆ. ಒಂದೆರಡನ್ನುಳಿದು, ಅವು ಪದ್ಯರೂಪದಲ್ಲಿವೆ. ಈ ಹಳೆಯ ಕೋಶಗಳ ಉದ್ದೇಶವು ಅಮರಕೋಶದಂತೆ ಸಮಾನಾರ್ಥಕ ಪದಗಳ ಪಟ್ಟಿಯನ್ನು ಕೊಡುವುದಿದ್ದಿತಲ್ಲದೆ ಇಂದಿನ ಶಬ್ದಕೋಶದಂತೆ ಯಾವುದೇ ಒಂದು ಶಬ್ದದ ಅರ್ಥವನ್ನು ಕಂಡುಹಿಡಿಯುವುದಕ್ಕಲ್ಲ. ೧೮ನೆಯ ಶತಮಾನದಲ್ಲಿದ್ದ ಶಾಲ್ಯದ ಕೃಷ್ಣರಾಜನ 'ಅಕ್ಷರಾದಿ ನಿಘಂಟು' ಅಕಾರಾದಿಯ ಪ್ರಥಮ ಪ್ರಯತ್ನಗಳಲ್ಲಿ ಒಂದಾಗಿದೆ. ಇಂಥ ಸಾಂಪ್ರದಾಯಿಕ ಕೋಶಗಳು ೧೯ನೆಯ ಶತಮಾನದಲ್ಲಿಯೂ ರಚಿತವಾಗಿದ್ದು, (ಲಕ್ಷ್ಮಣ ಪಂಡಿತನ ವೈದ್ಯ ನಿಘಂಟು ಮತ್ತು ಕೃಷ್ಣಮಾಚಾರಿಯ ಧಾತುಮಂಜರಿ, ಶಬ್ದಮಂಜರಿಗಳು) ಅಕ್ಷರಾನುಕ್ರಮಣಿಕೆಯ ಉಪಯುಕ್ತತೆಯು ಅವರಿಗೂ ಮನದಟ್ಟಾಗಿತ್ತು, ಎಂದು ಹೇಳಬಹುದು.

ಸಂಖ್ಯಾರತ್ನಮಾಲಾ (ಕನ್ನಡ ಟೀಕಾಸಹಿತ) ಎಂಬುದು (ಕ್ರಿ.ಶ.೧೮೪೯) ಮುಮ್ಮಡಿ ಕೃಷ್ಣರಾಜರು ಸಂಪಾದಿಸಿ ಸಿದ್ಧಪಡಿಸಿದ ಒಂದು ವಿಶಿಷ್ಟ ಶಬ್ದಕೋಶವಾಗಿದೆ. ನಮ್ಮ ಧರ್ಮಶಾಸ್ತ್ರದಲ್ಲಿ ವೈದ್ಯಕೀಯ. ಜ್ಯೋತಿಷಗಳಲ್ಲಿ ಅನೇಕ ವಿಷಯಗಳ ಸಂಖ್ಯೆಗಳು ಬರುತ್ತವೆ. ಉದಾಹರಣೆಗೆ, ತ್ರಿಕಾಲಗಳು, ಚತುರ್ವಿಧ ಪುರುಷಾರ್ಥಗಳು, ಷಡ್ರಿಪುಗಳು, ನವಗ್ರಹಗಳು, ೧೩ ತಾಂಬೂಲ ಗುಣಗಳು, ೬೪ ಕಲೆಗಳು, ೬೬ ಪುರಾತನರು(೬೩ ಅಲ್ಲ) ಇತ್ಯಾದಿ. ಹದಿಮೂರು ತಾಂಬೂಲ ಗುಣಗಳು ಯಾವವು ಎಂದು ತಿಳಿದುಕೊಳ್ಳಬೇಕೆನಿಸಿದರೆ ಈ ಗ್ರಂಥದಲ್ಲಿ ೧೩ ಅಂಕಿಯ ಪ್ರಕರಣ ಮತ್ತು ಅದರಲ್ಲಿ ಉಲ್ಲೇಖಿಸಲಾದ ವರ್ಗವನ್ನು ತೆರೆದರೆ ಆ ವಿವರಗಳು ದೊರೆಯುತ್ತವೆ. ಹೀಗೆ ೧ರಿಂದ ೧೨೦ರವರೆಗಿನ ಸಂಖ್ಯೆಗಳನ್ನೊಳಗೊಂಡ ನಾನಾ ವಿಷಯಗಳ ಹೆಸರುಗಳು ದೊರೆಯುತ್ತವೆ. ಈ ಎಲ್ಲ ವಿಷಯಗಳ ಅಕಾರಾದಿ ಸೂಚಿಯು ಆರಂಭದಲ್ಲಿ ಇದೆ. ಆಧುನಿಕ ರೀತಿಯ, ಇಂದಿಗೂ ಉಪಯುಕ್ತವಾಗಬಲ್ಲ ಹಾಗೂ ಇತರ ಯಾವುದೇ ಭಾರತೀಯ ಭಾಷೆಗಳಲ್ಲಿ ದೊರೆಯದಿದ್ದಿರಬಹುದಾದ, ಅಪೂರ್ವ ಶಬ್ದಕೋಶವಿದು.

### ೨೩೧ ಇಂಗ್ಲಿಷ್ - ಕನ್ನಡ ಶಬ್ದಕೋಶಗಳು

ಇತ್ತ ವಿದೇಶೀಯರ ಭಾಷಾಭ್ಯಾಸಕ್ಕೆ ವ್ಯಾಕರಣ ಮತ್ತು ಶಬ್ದಕೋಶ ಇವು ಒಂದಕ್ಕೊಂದು ಪೂರಕವಾದ ಸಾಧನೆಗಳಷ್ಟೆ ಆದಕಾರಣ ಇಂಗ್ಲಿಷ್-ಕನ್ನಡ ಶಬ್ದಕೋಶಗಳ ರಚನೆಯ ಪ್ರಯತ್ನಗಳು ಆರಂಭದಿಂದಲೇ ಕಂಡುಬರುತ್ತವೆ. ಭಾಷಾದೃಷ್ಟಿಯಿಂದ

ಬೈಬಲ್ ಅನುವಾದದಲ್ಲಿ ನೆರವಾಗುವ ವಿಶಿಷ್ಟ ಉದ್ದೇಶದಿಂದ ಭಾರತಕ್ಕೆ ವಿಲಿಯಮ್ ರೀವ್ ಬಂದನಷ್ಟೇ. ಆ ನಿಮಿತ್ತದಿಂದ ಅವನು ಹೊಸಗನ್ನಡದ ಆದ್ಯ ಕೋಶಕಾರನಾಗಿದ್ದಾನೆ.

ಇಂದು ನಾವು ಕಾಣುತ್ತಿರುವ ಶಬ್ದಾರ್ಥ, ಶಬ್ದ ವ್ಯುತ್ಪತ್ತಿ ಮತ್ತು ಪ್ರಯೋಗ ಸಹಿತನಾದ ಕನ್ನಡ ಕೋಶಗಳು ರೀವ್‌ನ ಕಾಲದಲ್ಲಿ ಒಂದಾದರೂ ಇರಲಿಲ್ಲ. ಆದ್ದರಿಂದ ಅವನ ಕೆಲಸ ಎಷ್ಟು ಗುರುತರವಾದದ್ದೆಂಬುದನ್ನು ಕಲ್ಪಿಸಬಹುದು. ಅದರ ನಿರ್ವಹಣೆಯಲ್ಲಿ ಅವನಿಗಿದ್ದ ಬಾಹ್ಯ ತೊಂದರೆಗಳನ್ನು ಈ ಹಿಂದೆ ನೋಡಿದ್ದೇವೆ. ಅಲ್ಲದೆ. ಅವನ ಉದ್ದೇಶವು ಬರಿಯ ಶಬ್ದಾರ್ಥ ಹೇಳದೆ ಕನ್ನಡ ನುಡಿ ಮತ್ತು ಜನಜೀವನದ ಬಗ್ಗೆ ಹೆಚ್ಚಿನ ಪರಿಚಯವನ್ನು ತನ್ನ ದೇಶಬಾಂಧವರಿಗೆ ಮಾಡಿಕೊಡಬೇಕೆಂದಿದ್ದಿತು.

ಹೊಸದಾಗಿಯೆ ಆಗಲಿ, ಒಂದು ಇಂಗ್ಲಿಷ್-ಫ್ರೆಂಚ್ ಕೋಶವನ್ನು ತಯಾರಿಸುವುದು ಸುಲಭ. ಏಕೆಂದರೆ ಅವುಗಳ ಬಾಂಧವ್ಯ ತೀರ ಹತ್ತಿರದ್ದು. ಆದರೆ ಸಂಪೂರ್ಣವಾಗಿ ವಿಭಿನ್ನವಾದ ಕನ್ನಡದ ಶಬ್ದಸಂಪತ್ತನ್ನು ಇಂಗ್ಲಿಷ್‌ಗೆ ಅನ್ವಯಿಸಿ ಹೇಳುವುದು ದುಸ್ಸಾಧ್ಯದ ಕೆಲಸವೆಂಬ ಅವನ ವಿಚಾರವು ಸರಿಯಾದುದೇ. ಇಲ್ಲಿಯ ಜನತೆಯ ಬದುಕು ಮತ್ತು ನಾಗರಿಕತೆಗಳು ಯೂರೋಪ ದೇಶದವರಿಗಿಂತ ಭಿನ್ನ. ಭಾಷಾವಿಧಾನವೂ ಅಷ್ಟೇ ಅಪರಿಚಿತ. ಅಲ್ಲಿಯ ಹೊಸ ಶೋಧಗಳು, ವಿಚಾರಗಳು ಇಲ್ಲಿಯ ಜನಕ್ಕೆ ಎಳ್ಳಷ್ಟೂ ತಿಳಿಯದ ಪರಿಸ್ಥಿತಿ. ಇದು ಸಾಲದೆಂಬಂತೆ ಸಂಸ್ಕೃತ, ಹಿಂದೂಸ್ತಾನೀ, ಮರಾಠೀ ಮತ್ತು ದ್ರಾವಿಡ ಭಾಷೆಗಳ ಪ್ರಭಾವವನ್ನೂ ಪ್ರಾದೇಶಿಕ ಭೇದವನ್ನೂ ಒಳಗೊಂಡಿರುವ ಕನ್ನಡ ಶಬ್ದಗಳ ಸ್ವೀಕರಣವು ರೀವ್‌ನಿಗೆ ಮತ್ತಷ್ಟು ಕಷ್ಟಕರವೆನಿಸಿತು. ಅದರಂತೆ ಉಚ್ಚಾರಭೇದವೂ ಅವನಿಗೆ ದೊಡ್ಡ ಅಡಚಣೆಯಾಗಿ ಪರಿಣಮಿಸಿತು.

ಇವನ್ನೆಲ್ಲ ಮನದಂದು ರೀವ್ ತನ್ನ ಇಂಗ್ಲಿಷ್-ಕನ್ನಡ ಕೋಶದಲ್ಲಿ ಇಂಗ್ಲಿಷ್ ಶಬ್ದಗಳಿಗೆ ಅರ್ಥವನ್ನು ಕೊಡುವಲ್ಲಿ ತೊಂದರೆಯುಂಟಾದಾಗ, ಕನ್ನಡ ಅರ್ಥವನ್ನು ಒಂದಕ್ಕಿಂತ ಹೆಚ್ಚು ಶಬ್ದಗಳಲ್ಲಿ ವಿಸ್ತರಿಸಿ ಹೇಳಿದ್ದಾನೆ. ಇಲ್ಲವೆ ಕನ್ನಡಿಗರ ಉಪಯೋಗದ ದೃಷ್ಟಿಯಿಂದ ಅನಗತ್ಯವಾದ ಇಂಗ್ಲಿಷ್ ಶಬ್ದಗಳನ್ನು ಬಿಟ್ಟುಕೊಟ್ಟಿದ್ದಾನೆ. ಅದರಂತೆ ಇಂಗ್ಲಿಷ್ ಶಬ್ದಕ್ಕೆ ಅರ್ಥವನ್ನು ಹೇಳುವಲ್ಲಿ ಶುದ್ಧ ಕನ್ನಡ ಶಬ್ದ. ಅದಿಲ್ಲದಿದ್ದರೆ ಸಂಸ್ಕೃತ ಶಬ್ದಗಳನ್ನು ಕೊಡಬೇಕೆಂದನು. ಆಡಳಿತಕ್ಕೆ ಸಂಬಂಧಿಸಿದ ಶಬ್ದಗಳಿಗೆ ಹಿಂದುಸ್ತಾನೀ ಶಬ್ದಗಳನ್ನು ಆಯ್ದುಕೊಂಡನು.

ರೀವ್‌ನ ಈ ಪ್ರಥಮ ಕೋಶದ ವೈಶಿಷ್ಟ್ಯವೆಂದರೆ ಒಂದು ಇಂಗ್ಲಿಷ್ ಶಬ್ದಕ್ಕೆ ಅರ್ಥವನ್ನು ಹೇಳುತ್ತಾ ತದುತ್ಪಾದಿತ ಶಬ್ದಗಳನ್ನು ಜೊತೆಗೆ ಕೊಟ್ಟಿದ್ದಾನೆ. "When I have come to any generic term, it has occurred to me that.. . .all the species comprehended under the genus could be collected together in

one view" ಎಂಬ ಅವನ ನಿಲುಮೆಯಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಅನೇಕ ಅಂಶಗಳನ್ನು ವಿದೇಶೀ ವಾಚಕರಿಗೆ ವಿವರಿಸುವ ಉದ್ದೇಶವು ಕಂಡುಬರುತ್ತದೆ. ಒಂದು ಉದಾಹರಣೆ : Dictionary-ಎಂಬುದಾಗಿ ಅಕಾರಾದಿ ಕೋಶ, ನಿಘಂಟು ಎಂಬ ಅರ್ಥ ಹೇಳಿದ ಮೇಲೆ, 'ಅಮರಕೋಶ, ರಾಯಮಕುಟ, ದ್ವಿರೂಪ ಕೋಶ, ಅಭಿದಾನರತ್ನಮಾಲೆ', ಅವುಗಳ ಪರಿಚಯ ಮಾಡಿಕೊಡುವಂಥ ಒಂದೊಂದು ವಾಕ್ಯವನ್ನೂ ಸೇರಿಸಿದ್ದಾನೆ. ಜೊತೆಗೆ 'ಕರ್ಣಾಟಕ ಶಬ್ದಮಂಜರಿ, ಕಬ್ಬಿಗರ ಕೈಪಿಡಿ' ಇವುಗಳ ಉಲ್ಲೇಖವೂ ಇದೆ. ಅದರಂತೆ Idol ಎಂಬುದರ ಅರ್ಥವನ್ನು ವಿಗ್ರಹ, ಮೂರ್ತಿ ಎಂದು ಹೇಳಿದುದಲ್ಲದೆ ಅವುಗಳ ಸ್ವರೂಪವನ್ನು ವಿವರಿಸಿ ಅನಂತರ ಕನ್ನಡಿಗರು ಪೂಜಿಸುವ ಜನಪ್ರಿಯ ದೇವ, ದೇವತೆಗಳನ್ನು ಹೆಸರಿಸಿದ್ದಾನೆ.

ಮುನ್ನುಡಿಯಲ್ಲಿ ರೀವ್ ಕನ್ನಡ ಶಬ್ದಗಳ ಉಪಯೋಗ, ವಾಕ್ಯರಚನೆ-ಇವುಗಳ ಕುರಿತು ತನ್ನ ದೇಶಬಾಂಧವರಿಗೆ ವಿವರವಾದ ಮಾರ್ಗದರ್ಶನ ನೀಡಿದ್ದಾನೆ. ಹಳಗನ್ನಡ ಶಬ್ದಗಳು ಹೊಸಗನ್ನಡ ರೂಪಕ್ಕೆ ತಿರುಗುವಾಗ ಆಗುವ ಬದಲಾವಣೆಗಳನ್ನು ಉದಾಹರಣೆಗಳಿಂದ ವಿಶದೀಕರಿಸಿದ್ದಾನೆ. ಅದರಂತೆ ಪ್ರಾದೇಶಿಕ ಭೇದವುಳ್ಳ ಶಬ್ದಗಳ ಪಟ್ಟಿಯನ್ನು ಕೊಟ್ಟಿದ್ದಾನೆ. "ಸಾಕು" ಎಂಬುದಕ್ಕೆ 'ಸಂರಕ್ಷಿಸು' ಮತ್ತು 'ಬೇಡ' ಎಂಬೆರಡು ವಿಭಿನ್ನವಾದ ಅರ್ಥವಿದೆಯಷ್ಟೆ. ಎರಡು-ಮೂರು ಅರ್ಥ ಹೊಂದುವ ಇಂಥ ಅನೇಕ ಶಬ್ದಗಳ ಪಟ್ಟಿಯನ್ನು ಕೊಟ್ಟು ಅವುಗಳ ಬಗ್ಗೆ ಜಾಗರೂಕತೆ ವಹಿಸಬೇಕು ಎಂದಿದ್ದಾನೆ.

ನ-ಣ, ಟ-ಠ, ಲ-ಳ ಮುಂತಾದವುಗಳ ಉಚ್ಚಾರ ಭೇದದತ್ತ ಇಂಗ್ಲಿಷ್ ಓದುಗರ ಗಮನವನ್ನು ಸೆಳೆದು, A careless neglect of these points has given rise to the most egregious blunders. By giving the sound of one letter instead of another, the words frequently assume a diametrically opposite and often the most obscene meaning. . . .A good ear for music and no small pains in observing how a native scholar pronounces these difficult vocables are required in order to attain success-ಎಂದು ಉಪದೇಶಿಸಿದ್ದಾನೆ.

ಪೀಠಿಕೆಯಲ್ಲಿ ರೀವ್ ಕೊಟ್ಟಿರುವ ಇನ್ನು ಕೆಲವು ಪಟ್ಟಿಕೆಗಳು ಅನುಕರಣಾವ್ಯಯ, ದ್ವಿರುಕ್ತಿಯ ಶಬ್ದ, ಸಂಬಂಧಾರ್ಥದ ಸರ್ವನಾಮ-ಇವುಗಳಿಗೆ ಸಂಬಂಧಿಸಿವೆ. 'ಪಾಶ್ಚಾತ್ಯ ಭಾಷೆಗಳಿಗಿಂತ ಕನ್ನಡದಲ್ಲಿ ಅನುಕರಣಾವ್ಯಯಗಳು ಹೆಚ್ಚಿನ ಸಂಖ್ಯೆಯಲ್ಲಿವೆ' (ಪು.೫೧); 'ವಿಶೇಷಣ ಮತ್ತು ಅವ್ಯಯಗಳು ಮೂಲ ರೂಪದಲ್ಲಿ ಇರುವುದು ಕಡಿಮೆ'-ಎಂಬಿವೇ ಮೊದಲಾದ ಅವನ ಹೇಳಿಕೆಗಳು ಗಮನಾರ್ಹವಾಗಿವೆ.

ಇಂಗ್ಲಿಷ್ ಶಬ್ದದ ನೇರವಾದ ಅರ್ಥವನ್ನಷ್ಟೆ ತಿಳಿಯಬೇಕೆಂದವರಿಗೆ ರೀವ್‌ನ

ಇಂಗ್ಲಿಷ್-ಕನ್ನಡ ಕೋಶದ ವಿಸ್ತಾರವಾದ ತಳಹದಿಯು ಅಡಚಣೆಯಾಗುವಂತಹದಿತ್ತು. ಆದಕಾರಣ. ಗ್ಯಾರೆಟ್‌ನ ನೇತೃತ್ವದಲ್ಲಿ (೧೮೪೨ - ೪೪) ಕೇವಲ ಶಬ್ದಾರ್ಥವನ್ನು ಹೇಳುವ ಸಣ್ಣ ಪ್ರಮಾಣದ ಇಂಗ್ಲಿಷ್-ಕನ್ನಡ ಕೋಶವೊಂದು ಸಿದ್ಧವಾಯಿತು. (Manual, English-Canarese Dictionary). ರೀವ್‌ನ ಕೋಶವನ್ನು ತಳಹದಿಯಾಗಿಟ್ಟುಕೊಂಡು ಪ್ರತ್ಯೇಕವಾಗಿ ಇದನ್ನು ರಚಿಸಲಾಗಿದೆ. ಅಂತೆಯೇ ರೀವ್ ಕೊಟ್ಟಿದ್ದ ಅನೇಕ ಶಬ್ದಗಳನ್ನು ಬಿಡಲಾಗಿದೆ; ಹೆಚ್ಚಿನವನ್ನು ಸೇರಿಸಲಾಗಿದೆ. ಸೂಕ್ತವಾಗಿ ಕನ್ನಡ ಶಬ್ದಗಳು ತಮಗೆ ದೊರೆಯದಿದ್ದಲ್ಲಿ ಮಾತ್ರ ರೀವ್‌ನನ್ನು ಅನುಸರಿಸಿದ್ದು ಕಂಡುಬರುತ್ತದೆ.

ಈ ಕೋಶದ ಮೊದಲ ಆವೃತ್ತಿಯಲ್ಲಿ ಕೇವಲ ಹತ್ತು ಸಾವಿರ ಶಬ್ದಗಳಿದ್ದು ಪ್ರತಿ ಆವೃತ್ತಿಯಲ್ಲಿ ಹೆಚ್ಚೆಚ್ಚು, ಶಬ್ದಗಳನ್ನು ಸೇರಿಸಲಾಯಿತು. ಕನ್ನಡ ಶಬ್ದಗಳ ಅಕ್ಷರಿಕೆಯಲ್ಲಿ ಸುರುವಿಗೆ ಕಂಡುಬಂದ ತಪ್ಪುಗಳನ್ನು ಕ್ರಮೇಣ ತಿದ್ದಲಾಗಿದೆ. ಮೂಲ ಶಬ್ದಗಳ ಹಿಂದೆ ಮತ್ತು ಮುಂದೆ ಪ್ರತ್ಯಯಗಳನ್ನು ಹಚ್ಚುವುದರ ಮೂಲಕ ಸಾಧಿತವಾದ ಶಬ್ದಗಳನ್ನು ಕೊಟ್ಟದ್ದಿದೆ. ಅದರಂತೆ ಕ್ರಿಯಾಪದಗಳಿಗೆ ಸಂಬಂಧಿಸಿಯೂ ಇಂಥ ಸಾಧಿತ ಪದಗಳ ಹೆಚ್ಚಳವನ್ನು ಕಾಣುತ್ತೇವೆ. ಉದಾಹರಣೆಗೆ Pay ಎಂಬ ಧಾತುವಿಗೆ 'ಸಂಬಳಾ ಕೊಡು', 'ಸಾಲಾ ತೀರಿಸು' ಎಂಬ ಅರ್ಥಗಳಷ್ಟೆ ಸುರುವಿಗೆ ಇದ್ದುವು. ಮುಂದೆ ನಾಲ್ಕನೆಯ ಆವೃತ್ತಿಯಲ್ಲಿ (೧೮೬೫) Pay tribute, - tax - damages, - respects, - off ಇವುಗಳಿಗೂ ಅರ್ಥ ಹೇಳಲಾಗಿದೆ.

ಕೈಪಿಡಿರೂಪದ ಈ ಶಬ್ದಕೋಶವು ವಿದೇಶೀಯರಿಗೆಂದು ಇರದೆ ಶಾಲಾ ವಿದ್ಯಾರ್ಥಿಗಳಿಗಾಗಿ ಇದ್ದಿತೆಂಬುದನ್ನು ಗಮನಿಸತಕ್ಕುದು. ಮೈಸೂರ ಸಂಸ್ಥಾನದಲ್ಲಿಯ ಆರಂಭಕಾಲದ ಇಂಗ್ಲಿಷ ಶಾಲೆಗಳಲ್ಲಿ ಈ ಕೋಶವನ್ನು ಅತ್ಯಂತ ವ್ಯಾಪಕವಾಗಿ ಬಳಸಲಾಗುತ್ತಿತ್ತು ಅತ್ತ, ಮಂಗಳೂರಲ್ಲಿದ್ದ ವಾಲ್ಜ್, ತ್ಸಿಗ್ಲರ್, ಕ್ರಿಸ್ತಾನುಜವಾತ್ಸ-ಈ ಮಿಶನರಿಗಳು ಸೇರಿ, ಬೇರೊಂದು ಶಾಲಾ ನಿಘಂಟನ್ನು ಹೊರತಂದರು. ಕ್ರಿ.ಶ. ೧೮೮೮ರಂದು ತ್ಸಿಗ್ಲರ್ ಅದರ ಪರಿಷ್ಕೃತ ಆವೃತ್ತಿಯನ್ನು ಪ್ರಕಟಿಸಿದ ಮೇಲೆ ಮುಂದಿನ ನಾಲ್ಕೈದು ದಶಕಗಳವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಹಾಗೂ ಮುಂಬಯಿ ಕರ್ನಾಟಕದ ವಿದ್ಯಾರ್ಥಿ ವೃಂದಕ್ಕೆ ಅದುವೆ ಮಹತ್ವದ ನಿಘಂಟು ಎಂದು ಮುಂದುವರಿಯಿತು.

ಕೆಲವು ದೇಶೀಯರು ಇಂಗ್ಲಿಷ್-ಕನ್ನಡ ಕೋಶರಚನೆಗೆ ತೊಡಗಿದರು. ಆದರೆ ಅವು ಹೆಚ್ಚಾಗಿ ನಿರ್ದಿಷ್ಟ ವಿಷಯಗಳಿಗೆ ಮಾತ್ರ ಮೀಸಲಾಗಿದ್ದವು. ಅವರಲ್ಲಿ ಎಸ್. ರಾಮಸ್ವಾಮಿಯು ಮೊದಲಿಗನಾಗಿದ್ದಾನೆ. ಅವನ 'Grammatical vocabulary in English and Canerese, Classified under the various parts of speech' ಎಂಬುದು ವಿಶಿಷ್ಟ ಕೋಶವಾಗಿದೆ. ಅಪ್ಪಾಸ್ವಾಮಿ ಪಿಳ್ಳೆ ಎಂಬುವನು ಶಾಲೆಯಲ್ಲಿ

ಕಲಿಸುವ ಇತಿಹಾಸ, ಭೂಗೋಲ ಮತ್ತು ವಿಜ್ಞಾನ ವಿಷಯಗಳಿಗೆ ಸಂಬಂಧಿಸಿದ ಶಬ್ದಗಳಿಗೆ ಮಾತ್ರ ಕನ್ನಡ ಅರ್ಥವನ್ನು ಕೊಟ್ಟಿದ್ದಾನೆ (೧೮೬೭), ರಾಜಗೋಪಾಲ ಪಿಳ್ಳೆಯ ಇಂಗ್ಲಿಷ್-ಕರ್ನಾಟಕ ವೈದ್ಯ ಚಿಂತಾಮಣಿಯಲ್ಲಿ ಲ್ಯಾಟಿನ್, ತೆಲುಗು ತಮಿಳು ಭಾಷೆಗಳಲ್ಲಿ ಔಷಧಿಯ ಹೆಸರುಗಳಿವೆ. ಇಂಥ ಕೋಶಗಳನ್ನು ಮೊದಲ ಬಾರಿಗೆ ಪ್ರಯೋಗವೆಂಬಂತೆ ರಚಿಸಲಾಯಿತು. ಹಾಗಾಗಿ ಅವು ಹೆಚ್ಚು ಕಾಲ ಉಳಿಯಲಿಲ್ಲ.

## 232 ಕನ್ನಡ-ಇಂಗ್ಲಿಷ್ ಕೋಶಗಳು

ಇನ್ನು ಕನ್ನಡ-ಇಂಗ್ಲಿಷ್ ಕೋಶದ ವಿಚಾರದಲ್ಲಿಯೂ ರೀವ್‌ನೇ ಮೊದಲಿಗನಾಗಿದ್ದಾನೆ. ಶಬ್ದಾರ್ಥವನ್ನು ಕೊಡುವಲ್ಲಿ, ಪ್ರಥಮ ಕೋಶದಲ್ಲಿಟ್ಟುಕೊಂಡ ಉದ್ದೇಶವೇ ತೋರಿ ಬರುತ್ತದೆ. ಎಂದರೆ ಒಂದು ಕನ್ನಡ ಶಬ್ದಕ್ಕೆ ಸಂಬಂಧಿಸಿದ ಹಲವಾರು ಪೂರಕ ಅಂಶಗಳನ್ನು ಇಲ್ಲಿಯೂ ಕೊಡಲಾಗಿದೆ. ಆದರೆ ಸಂಸ್ಕೃತ, ತೆಲುಗು, ಹಿಂದುಸ್ತಾನೀ ಹಾಗೂ ಹಳೆಯ ಕನ್ನಡ ಕಾವ್ಯಗಳಲ್ಲಿಯ ಶಬ್ದಗಳನ್ನು ಆಯ್ಕೆಮಾಡಿಕೊಳ್ಳುವಲ್ಲಿ ಅವನು ಸಮಸ್ಯೆಗೊಳಗಾದನು. ತಾನು ಒಳನಾಡಿನಲ್ಲಿರದೆ ಹಲವಾರು ಭಾಷಿಕರಿದ್ದ ಬಳ್ಳಾರಿ, ಬೆಂಗಳೂರು ನಗರಗಳಲ್ಲಿ ಇದ್ದುದರಿಂದ ಕನ್ನಡಿಗರಲ್ಲಿ ಬಳಕೆಯಲ್ಲಿರುವ ಶಬ್ದಗಳಾವುವೆಂಬುದು ಗೊತ್ತಾಗದೆ ಹೋಯಿತೆಂದು ವಿಷಾದಿಸಿದ್ದಾನೆ. ಮತ್ತು ತನ್ನ ಕೋಶದಲ್ಲಿ ಅನೇಕ ಶುದ್ಧ ಕನ್ನಡ ಪದಗಳ ಕೈ ಬಿಟ್ಟುದನ್ನು ಅವನು ಒಪ್ಪಿಕೊಂಡಿದ್ದಾನೆ. ಸಾಲದ್ದಕ್ಕೆ, ಸಂಸ್ಕೃತ, ತೆಲುಗು ಕೋಶಗಳಲ್ಲಿದ್ದ ಎಷ್ಟೋ ಶಬ್ದಗಳನ್ನು ಅವು ಕನ್ನಡದಲ್ಲಿಯೂ ಬಳಕೆಯಲ್ಲಿರಬಹುದೆಂಬ ಅಂದಾಜಿನಿಂದ ಸೇರಿಸಿಕೊಂಡಿರುವನು.

ಕನ್ನಡ-ತೆಲುಗಿನ ವಿಚಾರದಲ್ಲಿ ಅವನು ಹೇಳಿದ ಮಾತು ಚರ್ಚಾಸ್ಪದವಾಗಿದೆ.

"The affinity between the Teloogoo and Carnataka Languages is so great that frequently it is only necessary to change an intial or an inflection to make the correspondence complete; therefore, where the definitions in Campbell's Teloogoo Dictionary appeared full and accurate, the author has, in such cases, adapted them into his own work, with little or no alteration".

ರೀವ್ ತನ್ನ ಕನ್ನಡ-ಇಂಗ್ಲಿಷ್ ಕೋಶವನ್ನು ಸಿದ್ಧಪಡಿಸುವ ಕಾಲಕ್ಕೆ ಕೆಲವೇ ಹಳಗನ್ನಡ ಕಾವ್ಯಗಳ ಕಾಗದ ಪ್ರತಿಗಳು ಲಭ್ಯವಿದ್ದುವು. (ಅವುಗಳಿಂದ ಪ್ರಯೋಗ ವಾಕ್ಯಗಳನ್ನೇನೋ ಆಯ್ದುಕೊಂಡಿದ್ದನು.) ಆದರೆ ಗ್ರಂಥವು ಇನ್ನಷ್ಟು ದೊಡ್ಡದಾಗಬಹುದೆಂಬ ಕಾರಣದಿಂದ ಬಿಟ್ಟುಕೊಟ್ಟನಂತೆ. ಆದರೂ ಗಾದೆ ಮಾತುಗಳನ್ನೂ ಬಳಕೆಯ ವಾಕ್ಯಗಳನ್ನೂ ಕೊಟ್ಟಿದ್ದಾನೆ. ಅವನ ಇಂಗ್ಲಿಷ್-ಕನ್ನಡ ಕೋಶಕ್ಕೆ ಹೋಲಿಸಿದಾಗ

ಈ ಕೋಶದ ಮೌಲಿಕತೆಯು ಕಡಿಮೆಯಾಗಿ ತೋರುವುದು. ಬಳಕೆಯಲ್ಲಿಲ್ಲದ ಅನೇಕ ಶಬ್ದಗಳನ್ನು ಒಳಗೊಂಡಿದ್ದುದೂ ಅಗತ್ಯಕ್ಕಿಂತ ಹೆಚ್ಚಿನ ವಿವರಗಳನ್ನು ಕೊಟ್ಟಿದ್ದುದೂ ಇದರ ಮುಖ್ಯ ದೋಷಗಳಾಗಿವೆ.

ಗ್ಯಾರೆಟ್‌ನಿಗೆ ಮಾತ್ರ ಈ ಕೋಶವು ಒಟ್ಟಿನಲ್ಲಿ 'ಸ್ವಯಂಪೂರ್ಣವೂ ಪ್ರಾಮಾಣ್ಯವೂ' ಆಗಿ ತೋರಿತು. ವಿದ್ಯಾರ್ಥಿಗಳ ಉಪಯೋಗಾರ್ಥವಾಗಿ ಅವನು ಇಂಗ್ಲಿಷ್-ಕನ್ನಡ ಕೋಶವನ್ನು ಪ್ರತ್ಯೇಕವಾಗಿ ರಚಿಸಿದ್ದರೂ, ಕನ್ನಡ-ಇಂಗ್ಲಿಷ್ ಕೋಶಕ್ಕಾಗಿ ರೀವ್‌ನ ಕೃತಿಯನ್ನೇ ತೆಗೆದುಕೊಂಡು ಮೇಲೆ ಹೇಳಿದ ದೋಷಗಳನ್ನು ತಿದ್ದಿಕೊಳ್ಳುತ್ತ ಸಂಕ್ಷೇಪಿಸಿ ಹೊರತಂದನು.

ಮುಂದೆ ಸ್ಯಾಂಡರ್ಸನ್ನನು ರೀವ್‌ನ ಕೃತಿಯಲ್ಲಿಯ ಬಹುತರ ಎಲ್ಲ ಶಬ್ದಗಳನ್ನು ಉಳಿಸಿಕೊಂಡು ತಿದ್ದಿ ಬೆಳೆಸಿದ ಆವೃತ್ತಿಯನ್ನು ೧೮೫೮ರಲ್ಲಿ ಪ್ರಕಟಿಸಿದನು. ಆ ಕೋಶದಲ್ಲಿ ಸ್ಯಾಂಡರ್ಸನ್ ಅನೇಕ ಶಬ್ದಗಳನ್ನು ಹೊಸದಾಗಿ ಸೇರಿಸಿದ್ದಾನೆ. ಮುಖ್ಯವಾಗಿ ಅರ್ಥವನ್ನು ಹೆಚ್ಚು ವಿಶದಗೊಳಿಸಿದ್ದಾನೆ. ಮತ್ತು ಅನೇಕ ಶಬ್ದಗಳ ವ್ಯುತ್ಪತ್ತಿಯನ್ನು ಹೇಳಲು ಪ್ರಯತ್ನಪಟ್ಟಿದ್ದಾನೆ. ಅಲ್ಲದೆ, ರೀವ್‌ನ ಕೋಶದಲ್ಲಿಯ ಅಕ್ಷರಿಕೆಯ ತಪ್ಪುಗಳನ್ನೂ ತಿದ್ದಿ ಸಮರ್ಪಕವಾದ ಕೋಶವನ್ನು ಕೊಡಮಾಡಿದ್ದಾನೆ.

ಕನ್ನಡ ಕೋಶ ರಚನೆಯಲ್ಲಿ ಮುಂದಿನ ಹೆಜ್ಜೆ ಕಿಟೆಲ್‌ರದು. ಸ್ಯಾಂಡರ್ಸನ್ನನ ಕೋಶದಲ್ಲಿ ಸುಮಾರು ೨೩ ಸಾವಿರ ಶಬ್ದಗಳಿದ್ದರೆ ಕಿಟೆಲ್ ಅದರ ಮುಮ್ಮಡಿ ಶಬ್ದಗಳನ್ನು ಕಲೆ ಹಾಕಿದ್ದಾರೆ. ಕೆಲವು ಪ್ರಮುಖ ಹಳಗನ್ನಡ, ನಡುಗನ್ನಡ ಕೃತಿಗಳಲ್ಲಿಯ ಮತ್ತು ಮೈಸೂರ ಭಾಗಕ್ಕೆ ವಿಶಿಷ್ಟವಾದ ಅನೇಕ ಬಳಕೆಯ ಶಬ್ದಗಳು ಇಲ್ಲದುದರ ಕೊರತೆಯನ್ನು ಬಿಟ್ಟರೆ ಇದರ ಶಬ್ದ ಸಂಗ್ರಹವು ಒಟ್ಟಿನಲ್ಲಿ ಪರಿಪೂರ್ಣವಾಗಿದೆ. ದ್ರಾವಿಡ ಭಾಷಾ ಶಾಸ್ತ್ರವನ್ನೂ ಸಂಸ್ಕೃತದಲ್ಲಿಯ ಸಾಹಿತ್ಯ, ಶಾಸ್ತ್ರಗ್ರಂಥಗಳನ್ನೂ ಅರಿತವರಿದ್ದದರಿಂದ ಶಬ್ದಗಳಿಗೆ ಕೊಟ್ಟಿದ್ದ ವ್ಯುತ್ಪತ್ತಿಯಲ್ಲಿ ತಪ್ಪುಗಳು ತೀರ ಅಪರೂಪವಾಗಿ ಸಿಗುತ್ತವೆ. ಮುಖ್ಯತಃ ಒಂದು ಶಬ್ದದ ಮರ್ಮವನ್ನು ಗ್ರಹಿಸಿರುವುದರಲ್ಲಿ ಅವರಿಗಿದ್ದ ವೈದುಷ್ಯವು ಬೆರಗುಗೊಳಿಸುವಂತಹುದು. ಹೀಗೆ ವಿಪುಲ ಶಬ್ದಸಂಗ್ರಹ, ಪ್ರಯೋಗ ವಿವರ, ವ್ಯುತ್ಪತ್ತಿ ಮತ್ತು ಸಂಸ್ಕೃತ/ದ್ರಾವಿಡ ಭಾಷಾ ತುಲನೆ-ಇವು ಈ ಮಹಾನ್ ಕೃತಿಯ ವೈಶಿಷ್ಟ್ಯಗಳಾಗಿವೆ.

ಮದ್ರಾಸ ಸರಕಾರವು ತನ್ನ Manual of Administration ಇದರ ಮೂರನೆಯ ಸಂಪುಟವಾಗಿ ಒಂದು ವಿಶಿಷ್ಟ ಕೋಶವನ್ನು ಹೊರತಂದಿತು. (Glossary containing a classification of terminology, a gazetterer and an economic dictionary of the province and other information) ಆಗಿನ ಮದ್ರಾಸ್ ಪ್ರಾಂತದಲ್ಲಿ ಇಂಗ್ಲಿಷ್ ಅಲ್ಲದೆ, ಬೇರೆ ೧೬ ಭಾಷೆಗಳು ಪ್ರಚಲಿತವಿದ್ದುದರಿಂದ ಅವುಗಳ ಮತ್ತು ಇಂಗ್ಲಿಷ್‌ನ ನಡುವೆ ಸಂಪರ್ಕವನ್ನು ಕಲ್ಪಿಸಿ ಆಡಳಿತಕ್ಕೆ ಅನುವು ಮಾಡಿಕೊಡುವುದೇ

ಅದರ ಉದ್ದೇಶವಾಗಿದ್ದಿತು. ಆಡಳಿತದ ವಿವಿಧ ಅಂಗಗಳಲ್ಲಿ ಅನೇಕ ದೇಶೀ ಶಬ್ದಗಳು ಇಂಗ್ಲಿಷ್ ನುಡಿಕಟ್ಟಿನಲ್ಲಿ ಸೇರಿಕೊಂಡು Indo-Anglian ಶಬ್ದಸೃಷ್ಟಿ ಬೆಳೆಯುತ್ತ ನಡೆದಿದ್ದಿತು. ಇಂಥ ಶಬ್ದಗಳು ಪ್ರಾಂತದ ಬೇರೆ ಭಾಷೆಗಳಲ್ಲಿ ಯಾವ ರೂಪದಲ್ಲಿವೆಯೆಂಬುದನ್ನು ತಿಳಿಸಿಕೊಡುವ ಹೇತುವೂ ಇಲ್ಲಿ ಕಂಡುಬರುತ್ತದೆ. ಜೊತೆಗೆ, ಭೌಗೋಲಿಕ, ಆರ್ಥಿಕ, ಜ್ಯೋತಿಷ, ಧಾರ್ಮಿಕ ಮುಂತಾದ ವಿವಿಧ ಶಬ್ದಗಳ ಮೂಲಕ ಜನಜೀವನದ ಪರಿಚಯವನ್ನು ಮಾಡಿಕೊಡುವ ಪ್ರಯತ್ನವೂ ಇಲ್ಲಿದೆ. 'ಮುಕ್ಕುವ'- ಇದು ಒಂದು ಮೀನುಗಾರರ ಜಾತಿಯೆಂಬುದಾಗಿ ಅರ್ಥವನ್ನು ಕೊಟ್ಟು ಆಮೇಲೆ ದಕ್ಷಿಣ ಕನ್ನಡ ಮತ್ತು ಮಲಬಾರಗಳಲ್ಲಿ ಇರುವ ಆ ಜನರ ಜೀವನ, ರೂಢಿ ಸಂಪ್ರದಾಯಗಳನ್ನು ವಿಶದವಾಗಿ, ಹೇಳಿದೆ. ಅದರಂತೆ ಅಳಿಯ ಸಂತಾನದ ೧೪ ಕಟ್ಟಳೆಗಳ ವಿವರಗಳನ್ನೂ ಆ ಶಬ್ದದ ಅಡಿಯಲ್ಲಿ ಕಾಣಬಹುದು.

ಮಾದರಿಗಾಗಿ ಬೇರ ಕೆಲವು ಶಬ್ದಗಳನ್ನು ಇಲ್ಲಿ ಕೊಡುತ್ತೇವೆ :

ABRONY ——Chivari, Conc; ಮಜ್ಜಿಗೆ ಸೊಪ್ಪು ಗಿಡ majjigesoppugida, (Can); ಅಬ್ರೋಣಿ-abroni, (Too); Kottokka, (Mal);. . . .Kadambu, (Tam.) Title from Tooloo, (Can.) from (Majjige, (Can). buttermilk+soppu, (Can) leaf + gida, (Can) plant). (Nal-) from (Kotta,(Mal.)kernel+Koya, Mal. fruit) (Can), also (Abrange gida). . . Title otherwise Buttermilk leaf plant, paniclcd grewia. Botannically Grewia. [Dharmanam] Microcos, linn tillacae [Vircsham, 27]. . .small shrub.

ACASAULY (ಅಕಸಾಲಿ-akasali, obl; ಅಕಸಾಲಿಗ-Akasaliga, pers. sing; ಕಸಾಲೇರು-Pers Fl.(Can) Caste title, canerese; goldsmiths. first subdivision of the Panchaular or Cummawar. The Corresponding terms are (Hind.): Badye,(Tel.): cumsauly, (tam.) & (Mal.): Tattaum [jaunty]"

* Conc-ಕೊಂಕಣಿ; Can-ಕನ್ನಡ; Too-ತುಳು; Tam-ತಮಿಳು; Mal-ಮಲೆಯಾಳಿ; Pers. sing-person singular; Hind-ಹಿಂದಿ

'ಕೆಪಸಿ' ಎಂಬುದು ಉತ್ತರ ಕನ್ನಡ ಜಿಲ್ಲೆಯಲ್ಲಿ ಮತ್ತು ಪಶ್ಚಿಮ ಬೆಟ್ಟದಲ್ಲಿ ಏಳು ಸಾವಿರ ಘೂಟಿನ ಮೇಲೆ ಬೆಳೆಯುವಂಥ ಗಿಡವೆಂದು ಅದನ್ನು ವರ್ಣಿಸಿ ಆ ಶಬ್ದದ ಮೂಲವು ಕನ್ನಡದ್ದೆಂದು ಹೇಳಲಾಗಿದೆ. ಅದಕ್ಕೆ ಸಮಾನವಾದ ಶಬ್ದವು ಬೇರೆ ದ್ರಾವಿಡ ಭಾಷೆಗಳಲ್ಲಿ ಅಥವಾ ಮರಾಠಿಯಲ್ಲಿ ದೊರೆಯುವುದಿಲ್ಲವಾದ್ದರಿಂದ ಅದು ಕನ್ನಡಕ್ಕೆಯೆ ವಿಶಿಷ್ಟವಾದ ಶಬ್ದವಾಯಿತು. ಆದರೆ ಕಿಟೆಲ್ ಮೊದಲ್ಗೊಂಡು, ಪ್ರಚಲಿತವಿದ್ದ ಕನ್ನಡ ಕೋಶಗಳಲ್ಲಿ ಅದಕ್ಕೆ ಅರ್ಥವು ದೊರೆಯುವುದಿಲ್ಲ. 'ಲೋಳೆಸರ' ಎಂಬ ವನಸ್ಪತಿಗೆ 'ಕತ್ತಾಳೆ' ಎಂಬ ಕನ್ನಡ ಹೆಸರಿದೆಯಂತೆ. ಈ ಕತ್ತಾಳೆಯೂ ಕನ್ನಡ ಶಬ್ದಕೋಶದಲ್ಲಿ ಕಂಡು ಬಂದಿಲ್ಲ. ಇನ್ನೂ ಅನೇಕ ಕನ್ನಡ ಶಬ್ದಗಳು ಈ ಕೋಶಕ್ಕೆ ಮಾತ್ರ ಮೀಸಲಾಗಿದ್ದು, ಅದರ ವಿವರವಾದ ಪರಿಶೀಲನೆಯಿಂದ ಅನೇಕ ಅಪೂರ್ವ ಕನ್ನಡ ಶಬ್ದಗಳು ದೊರೆಯಬಹುದಾಗಿದೆ.

ಕಿಟೆಲ್‌ಗಿಂತ ಪೂರ್ವದಲ್ಲಿ ಉಲ್ಲಾಳ ನರಸಿಂಗರಾಯರು Kisamvar Glossary of Kanerese Words ಎಂಬ ಕೋಶವನ್ನು ಅದೇ ಬಾಸೆಲ್ ಮಿಶನ್ ಪ್ರೆಸ್ಸಿನಲ್ಲಿ ಮುದ್ರಿಸಿ (೧೮೯೧) ಪ್ರಕಟಿಸಿದ್ದನ್ನು ಉಲ್ಲೇಖಿಸಬೇಕು. ಈ ಕೃತಿಯ ವೈಶಿಷ್ಟ್ಯವು ಶಬ್ದಗಳ ವಿಷಯವಾರು ವಿಂಗಡನೆಯಲ್ಲಿದೆ. ಆಡಳಿತ ಕಚೇರಿಯಲ್ಲಿರುವವರಿಗೆ ಮತ್ತು ಭಾಷಾಂತರಕಾರರಿಗೆ ಇಂಗ್ಲಿಷ್ ಶಬ್ದಗಳ ಪ್ರತಿಯಾಗಿ ಕನ್ನಡ ಶಬ್ದಗಳು ಬೇಗ ದೊರೆಯಬೇಕೆನ್ನುವ ದೃಷ್ಟಿಯಿಂದ ಈ ಕೋಶದ ರಚನೆಯಾಯ್ತು.

ಅಂಥ ವಿಶಿಷ್ಟ ಶಬ್ದಗಳ ಸಂಗ್ರಹಕ್ಕಾಗಿ ವಿಲ್ಸನ್ನನ Glossary of Indian Terms, ಚಾಮೀರನ Land Tenures of Canara, ರೈಸರ Mysore & Coorg ಹಾಗೂ ಮುಂಬಯಿ ಸರಕಾರದ ಗೆಜೆಟಿಯರ್ ಸಂ.೧೫–ಇವನ್ನು ಪರಿಶೀಲಿಸಿದ್ದರು. Accounts ದಿಂದ ಹಿಡಿದು weights & measures ವರೆಗಿನ ೨೬ ವಿಷಯಗಳಿಗೆ ಸಂಬಂಧಿಸಿದ ಸುಮಾರು ಐದು ಸಾವಿರ ಶಬ್ದಗಳು ಇದರಲ್ಲಿವೆ. A comprehensive and handy work of reference of practical utility ಎಂಬುದಾಗಿ ನರಸಿಂಗರಾಯರು ತಮ್ಮ ಕೃತಿಯನ್ನು ವಿಶ್ಲೇಷಿಸಿಕೊಂಡಿದ್ದಾರೆ. 'Comprehensive' ಎನ್ನಲಾಗದಿದ್ದರೂ ಕೈಕೊಂಡ ಪ್ರಯತ್ನ ಸ್ತುತ್ಯವಾದುದು. ಮುಂದೆ ೧೯೩೦ನೆಯ ದಶಕದಲ್ಲಿ ಮದ್ರಾಸ ಸರಕಾರವು ಇದೇ ಬಗೆಯ ಆಡಳಿತ ಕೋಶವನ್ನು ಕೈಕೊಳ್ಳುವ ವರೆಗೆ ಇದರದೇ ಬಳಕೆ.

ಪಾಂ. ವೆಂ. ಚಿಂತಾಮಣಿ–ಪೇಟಕರ ಇವರ ಸಂಸ್ಕೃತ ಕನ್ನಡ ಶಬ್ದ ವ್ಯುತ್ಪತ್ತಿ ಇನ್ನೊಂದು ವಿಶಿಷ್ಟ ಕೃತಿಯಾಗಿದೆ. ಮೂಲತಃ ಪಠ್ಯಪುಸ್ತಕವೆಂದು ಇದ್ದರೂ ಇದು ಮೌಲಿಕ ರಚನೆಯಾಗಿದೆ. ಸಂಸ್ಕೃತ, ಕನ್ನಡ ಎರಡೂ ಸೇರಿ ೬೫೯ ಪ್ರಕೃತಿಗಳೂ ಅದರಿಂದ ಸಾಧಿತವಾದ ಸುಮಾರು ೪೫೦೦ ಶಬ್ದಗಳೂ ಇದರಲ್ಲಿ ಸಮಾವೇಶವಾಗಿವೆ. ಕನ್ನಡದಲ್ಲಿ ಸಾಧಾರಣ ಪ್ರಚಾರದಲ್ಲಿರುವ ಇವೆಲ್ಲ ಶಬ್ದಗಳ ವ್ಯುತ್ಪತ್ತಿಯು ಗೊತ್ತಾಗಬೇಕೆಂಬುದು ಲೇಖಕನ ಆಶಯವಾಗಿದ್ದಿತು.

## ೨೪ ಭಾಷಾಭ್ಯಾಸದ ಇತರ ಸಾಧನಗಳು

ವ್ಯಾಕರಣ, ಕೋಶಗಳಲ್ಲದೆ ಕನ್ನಡ ಭಾಷಾಭ್ಯಾಸಕ್ಕೆ ನೆರವಾಗುವ ಇನ್ನು ಕೆಲವು ಪುಸ್ತಕಗಳು ಪ್ರಕಟವಾಗಿವೆ. ಸಂಭಾಷಣೆ ಹಾಗೂ ಬೇರೆ ವಾಕ್ಯ ಸಮುದಾಯಗಳ ಮೂಲಕ ಕನ್ನಡ ಶಬ್ದಗಳ ಹಾಗೂ ವ್ಯಾಕರಣದ ಜ್ಞಾನ ಮಾಡಿಕೊಡುವುದೇ ಇಂಥ ಪುಸ್ತಕಗಳ ಉದ್ದೇಶ. ಅವುಗಳಲ್ಲಿ ಜಾನ್ ರೀಡ್‌ನ ಇಂಗ್ಲಿಷ್ ಭಾಷೆಯನ್ನು ಕಲಿಯುವುದಕ್ಕೆ ಸಹಾಯವು ಎಂಬುದನ್ನು ಮೊದಲಿಗೆ ಹೆಸರಿಸಬೇಕು. ಇದರಲ್ಲಿ ವಾಚನ, ವ್ಯಾಕರಣ, ಗಣಿತ, ಜ್ಯೋತಿಷ ಮತ್ತು ಭೂಗೋಲ–ಮುಂತಾದ ವಿಷಯಗಳ ಮೇಲಿನ ನಾಲ್ಕು ಪಾಠಗಳಿವೆ. ಪಾಠದ ಸುರುವಿಗೆ ಕೆಲವು ಇಂಗ್ಲಿಷ್ ಶಬ್ದಗಳು ಹಾಗೂ ಅವುಗಳ ಕನ್ನಡ

ಅರ್ಥವನ್ನು ಕೊಟ್ಟು, ಅನಂತರ ಮೇಲಣ ವಿಷಯಗಳಿಗೆ ಸಂಬಂಧಿಸಿದ ವಾಕ್ಯ ಸಮುದಾಯವನ್ನು ಭಾಷಾಂತರದೊಂದಿಗೆ ಕೊಡಲಾಗಿದೆ. ಅವುಗಳ ಉದ್ದೇಶವನ್ನು ಅವನ ಮಾತಿನಲ್ಲಿಯೆ ಹೀಗೆ ಹೇಳಬಹುದು: "ವಾಕ್ಯಗಳಿಗೋಸ್ಕರ ಆರಿಸಿ ತೆಗೆದುಕೊಳ್ಳಲ್ಪಟ್ಟ ಸಂಗತಿ-ವುದ್ಯೋಗಗಳಲ್ಲಿ ವುಪಯೋಗವಾಗುವುದಕ್ಕೂ ಬುದ್ಧಿಯನ್ನು ವೃದ್ಧಿ ಮಾಡುವುದಕ್ಕೂ ಹೃದಯವನ್ನು ಶುದ್ಧಿ ಮಾಡುವುದಕ್ಕೂ ಹೇತುವೆಯಾಗಿ ಯೋಚಿಸಲ್ಪಟ್ಟಿದೆ."

ವ್ಯಾಕರಣ ವಿಭಾಗದಲ್ಲಿ ವ್ಯಾಕರಣದ ಅಂಶವನ್ನು ವಿವರಿಸುವ ಇಂಗ್ಲಿಷ್ ವಾಕ್ಯ ಮತ್ತು ಅದರ ಭಾಷಾಂತರದ ಬಗೆಯು ನೋಡುವಂತಹದಿದೆ :-

"The positive degree expresses the quality of an object without increase or diminution as, A hard stool. ಪೊಸೆಟಿವ್ ಎಂಬ ಸಾಧಾರಣ ಸ್ಥಿತಿಯು ವಸ್ತುವಿನ ಹೆಚ್ಚು ಕಡಿಮೆಗಳನ್ನು ತೋರಿಸದೆ ಅದರ ಸಹಜ ಸ್ಥಿತಿಯನ್ನು ತಿಳಿಸುತ್ತದೆ. ಯಿದಕ್ಕು ಉದಾಹರಣೆಗಳು : ಘಟ್ಟಿಯಾದ ಕಲ್ಲು".

ಇನ್ನು ಕೆಲವು ಭಾಷಾಂತರದ ಮಾದರಿಗಳನ್ನು ಗಮನಿಸಬೇಕು :

"It is a worthy present; ಅದು ಯೋಗ್ಯವಾದ ಉಚಿತವು.

Call the barber to shave me: ನನ್ನನ್ನು ಕ್ಷೌರ ಮಾಡಲು ಕ್ಷೌರಿಕನನ್ನು ಕರಿ.

Without delay, prepare breakfast; ಆಲಶ್ಯವಿಲ್ಲದೆ ಉದಯ ಭೋಜನವನ್ನು ಸಿದ್ಧಮಾಡು".

ತ, ಟ ಗಳ ಅಂತರದ ವಿಷಯಗಳಲ್ಲಿ ರೀವ್‌ನ ಎಚ್ಚರಿಕೆಯನ್ನು ಅವನು ಪಾಲಿಸಿಲ್ಲ. ಟಕಾರ ಅವನಿಗೆ ಸಂಪೂರ್ಣ ವರ್ಜ್ಯವಾಗಿದೆ. ಮೇಲಿನ ಅಂಶಗಳ ಮೇಲಿಂದ ರೀಡ್‌ನಿಗೆ ಕನ್ನಡದಲ್ಲಿ ತಕ್ಕ ಪರಿಣತಿ ಇದ್ದಿಲ್ಲವೆನಿಸಬಹುದು. ಆದರೆ ಅವನ ಕಾಲದಲ್ಲಿ ಹೊಸಗನ್ನಡದ ಗದ್ಯ ಬರವಣಿಗೆಯು ಇನ್ನೂ ರೂಪುಗೊಂಡಿಲ್ಲವೆಂಬುದನ್ನೂ ನೆನೆದಿರತಕ್ಕುದು.

ಭೂಗೋಲ ಪಾಠದಲ್ಲಿ ಬಂದಿರುವ ಕೆಲವು ಹೇಳಿಕೆಗಳು ಆಧಾರರಹಿತವಾಗಿವೆ. "ಇಪ್ಪತ್ತೆರಡು ಸಂವತ್ಸರಗಳ ಕೆಳಗೆ ಕಚ್, ಗುಜರಾತ್ ಸೀಮೆಗಳಲ್ಲಿ ಮಾತ್ರವೆ ೪೦೦೦ ಹೆಂಣು ಪಿಳ್ಳೆಗಳು ಪ್ರತಿ ಸಂವತ್ಸರ ಕೊಲ್ಲಲ್ಪಟ್ಟಿದ್ದಾರೆಂದು ಎಣಿಸಲ್ಪಟ್ಟಿತು. ಗಂಗಾನದೀ ತೀರದಲ್ಲಿ ಅನೇಕ ವ್ಯಾಧಿಗ್ರಸ್ತರೂ ಮುದುಕರೂ ಪ್ರವಾಹದಿಂದ ಬೊಡುಕೊಂಡು[?] ಹೋಗಲ್ಪಡುವುದಕ್ಕೂ ಮೃಗಗಳಿಂದ ಭಕ್ಷಿಸಲ್ಪಡುವುದಕ್ಕೂ ಹೊರಗೆ ಹಾಕಲ್ಪಟ್ಟಿದ್ದಾರೆ. ಯೀ ಮರ್ಯಾದೆಗಳು ನಾನಾ ವಿಧವಾದ ನರಹತ್ಯೆಗಳಾಗಿವೆ ಮತ್ತು ಯೀ ದೇವರಿಗೆ ಕೋಪವೆಬ್ಬಿಸುವ ಕಾರಣಗಳಾಗಿವೆ."

ಎದ್ದು ಕಾಣುವ ಒಂದು ಅಂಶವೆಂದರೆ ಈ ಭಾಷಾಭ್ಯಾಸದ ಪುಸ್ತಕದುದ್ದಕ್ಕೂ

ಕಂಡುಬರುವ ಕ್ರೈಸ್ತ ಪ್ರಸಾರ ದೃಷ್ಟಿ, ಬೈಬಲಿನ ಉಕ್ತಿಗಳು, ಕ್ರಿಸ್ತನ ಜೀವನಕ್ಕೆ ಸಂಬಂಧಿಸಿದ ಅಂಶಗಳು, 'ದೇಶಾಂತ್ರಿಯ ಪ್ರಯಾಣ'ದಿಂದ ಉದ್ಧೃತ ಭಾಗಗಳು–ಇವನ್ನು ಧಾರಾಳವಾಗಿ ಕಾಣಬಹುದು. 'ನಮ್ಮ ಜೀವನವು ಒಂದು ಸ್ವಪ್ನವಿದ್ದಂತೆ. ಅದು ಜೇಡನ ಬಲೆಯಂತೆ ಭಂಗುರವಾದುದು; 'ಅಪರಾಧವನ್ನು ಕುರಿತು ಬೊಂಕುವುದರಿಂದ ಅದರ ಕೇಡುಯೆರಡರಷ್ಟು ಆಗುವುದು' ಎಂಬೀ ಸಾಮಾನ್ಯ ಸ್ವರೂಪದ ನೀತಿಯ ಮಾತುಗಳೂ ಕೆಲವಿವೆ.

ಜೊತೆಗೆ ಹಿಂದೂ ಆಚಾರ ವಿಚಾರಗಳ ಬಗ್ಗೆ ಅಸಹಿಷ್ಣುತೆಯ ಅಂಶಗಳೂ ಹಣಿಕಿಕ್ಕಿವೆ. ವ್ಯಾಕರಣ ವಿಭಾಗದ ೧೯ನೆಯ ಪಾಠವು ವಿಗ್ರಹ ಪೂಜೆಯನ್ನು ಖಂಡಿಸುತ್ತದೆ. ಪುಸ್ತಕದ ಕಡೆಯ ಭಾಗದಲ್ಲಿ 'ಯೇಸು ಕ್ರಿಸ್ತನಲ್ಲದೆ ಬೇರೆ ರಕ್ಷಕನ್ಯಾವನು ಯಿಲ್ಲ. ಕ್ರಿಸ್ತ ಧರ್ಮವಲ್ಲದೆ ಬೇರೆ ನಿಜವಾದ ಧರ್ಮವು ಯಾವುದು ಇಲ್ಲ' ಎಂಬ ಮಾತೂ ಬರುತ್ತದೆ.*

ಕನ್ನಡಿಗರು, ಕನ್ನಡ ವಿದ್ಯಾರ್ಥಿಗಳು ಇಂಗ್ಲಿಷನ್ನು ಕಲಿಯುವುದಕ್ಕೆ ಸಹಾಯಕವಾಗಲೆಂದು ಈ ಕೃತಿ ಇದ್ದುದಾದರೆ, ಇಂಗ್ಲಿಷ್ ಅಧಿಕಾರಿಗಳು, ಇತರರು ಕನ್ನಡವನ್ನು ಕಲಿಯವುದಕ್ಕೆ ನೆರವಾಗಲು ಹಲವು ಪುಸ್ತಕಗಳು ರಚಿತವಾಗಿವೆ. ಮುನ್ಶಿ ಶ್ರೀನಿವಾಸಯ್ಯನು ವೆಸ್ಲೆಯನ್ನರ ಕನ್ನಡ ಗುರುವಾಗಿದ್ದುಕೊಂಡು Village dialogues ಎಂಬ ಕೃತಿಯನ್ನು ರಚಿಸಿದನು (೧೮೫೭). ಇನ್ನೊಂದು ಎಸ್. ಬಿ. ಕೃಷ್ಣಸ್ವಾಮಿ ಅಯ್ಯಂಗಾರನ Dialogues on Revenue matters. . . .ಎಂಬುದು (೧೮೬೦). ಕನ್ನಡವನ್ನು ಕಲಿಯುವ ಬ್ರಿಟಿಶ್ ಅಧಿಕಾರಿಗಳ ಸೂಚನೆಯ ಮೇರೆಗೆ ಹಲವು ವರ್ಷಗಳ ಹಿಂದೆಯೇ ಇದು ರಚಿತವಾಗಿದ್ದಿತು. ಇದರಲ್ಲಿ ಜಮಾಬಂದಿ, ಮಳೆ, ಬೆಳೆ ಮುಂತಾದ ವಿಷಯಗಳ ಬಗ್ಗೆ ಹಳ್ಳಿಗರೊಡನೆ ನಡೆಸಬಹುದಾದ ಸಂಭಾಷಣೆಯ ಕನ್ನಡ–ಇಂಗ್ಲಿಷ್

---

* ಇಂಥ ಪಠ್ಯಪುಸ್ತಕಗಳಲ್ಲಿ ಕ್ರೈಸ್ತ ವಿಚಾರಗಳನ್ನು ಯಾವ ರೀತಿಯಾಗಿ ತರಬೇಕೆನ್ನುವ ಬಗ್ಗೆ ಅಂದಿನ ಒಬ್ಬ ಮಿಶನರಿಯ ನಿಲುಮೆಯು ಇಂತಿದ್ದಿತು :

Our primer should contain Scripture names as well as other names, & our school readers represent the language of the Bible. as well as that of secular works. Our manuals of grammar and composition should take particular notice of the formation of Scripture's sentences, & of new terms introduced by the translation of the Scripture, as well as of words used, in consequence with a somewhat modified signification. Even our arithemtic books might render a service. if in connection with others, Biblical weights & measures were employed and now and then chronological questions taken from the Bible, introduced. Above all, the works on geography, history & natural sciences should contain all the neceessary information within their compass to render the world of God. in its historical and geographical allusions [1]

ರೂಪಗಳಿವೆ. ಹಳ್ಳಿಗರ ಭಾಷೆಯಲ್ಲಿಯೇ ಕನ್ನಡ ವಾಕ್ಯಗಳಿವೆ. ಜೊತೆಗೆ ಆಡಳಿತ, ಎಂಜಿನಿಯರಿಂಗ್, ನ್ಯಾಯಾಂಗಗಳಲ್ಲಿ ಬಳಕೆಯಾಗಿರುವ ಶಬ್ದಗಳ ಪಟ್ಟಿಯೂ ಇದೆ.

ಕನ್ನಡ, ಇಂಗ್ಲಿಷ್ ಇವುಗಳನ್ನುಳಿದು ಬೇರೆ ಭಾಷೆಗಳ ವ್ಯಾಕರಣಾದಿಗಳನ್ನೂ ಕನ್ನಡದಲ್ಲಿ ಬರೆಯಲಾಗಿದೆ. ಮೈಸೂರಿನ ತಿರುನರಸೀಪುರದ ವಿ. ನರಸಿಂಹಮೂರ್ತಿಯು ತಮಿಳು ಭಾಷಾಭ್ಯಾಸದ ಮೊದಲನೇ ಪುಸ್ತಕವನ್ನು ಬರೆದನು. ಆದರೆ ಅದರ ಪ್ರಕಟನೆ? ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘವು ಅದನ್ನು ಪ್ರಕಟಿಸಿತು (೧೮೯೬).

## ೨೫ ಲ್ಯಾಟಿನ್ ಅಭ್ಯಾಸ

ಕನ್ನಡದಲ್ಲಿ ಹೀಗೆ ಕಾಣಿಸಿಕೊಂಡ ಇನ್ನೊಂದು ಭಾಷೆಯೆಂದರೆ, ಲ್ಯಾಟಿನ್. ಬೆಂಗಳೂರಲ್ಲಿಯ ರೋಮನ್ ಕೆಥಲಿಕ್ 'ಸೆಮಿನರಿ'ಯಲ್ಲಿ ಕಲಿಯುವ ದೇಶೀಯ ಮಿಶನರಿಗಳಿಗಾಗಿ ಲ್ಯಾಟಿನ್-ಕನ್ನಡ ಕೋಶಗಳು ಲತೀನು ವ್ಯಾಕರಣದ ಮತ್ತು ಲ್ಯಾಟಿನ್‌ದಲ್ಲಿ ಕನ್ನಡ ಛಂದಸ್ಸಿನ ವಿವರಗಳು ರಚಿತವಾದುವು. ಬೌತೆಲೊ ವಿರಚಿತ ಲತೀನು ವ್ಯಾಕರಣದಲ್ಲಿ ಅಕ್ಷರ, ಶಬ್ದ ಮತ್ತು ವಾಕ್ಯರಚನೆ-ಎಂಬ ಭಾಗಗಳಿವೆ. ಆ ಭಾಷೆಯ ವಿಭಕ್ತಿ ರೂಪವನ್ನು ವಿವರಿಸುವ ಭಾಗವನ್ನು ಮಾದರಿಗಾಗಿ ಇಲ್ಲಿ ಕೊಡುತ್ತಿದ್ದೇವೆ :

'ಲತೀನಿನಲ್ಲಿ ನಾಮವಾಚಕವೂ ಗುಣವಾಚಕವೂ ಸರ್ವನಾಮವೂ ಕೃದ್ವಾಚಿಯಾಗಿ ಆರು ವಿಧಗಳಾಗಿ ಪ್ರತ್ಯಯಗಳನ್ನು ಪ್ರಕೃತಿಗೆ ಕೂಡಿಸಿಕೊಳ್ಳುವುದರಿಂದ ಆರು (cases) ವಿಭಕ್ತಿಗಳೆಂದು ತಿಳಿಯತಕ್ಕುದು ಅವು ಯಾವುವೆಂದರೆ :

| | | |
|---|---|---|
| 1. Nominativus | ಕರ್ತೃ ವಿಭಕ್ತಿ. . . . | (ಸಂಸ್ಕೃತದಲ್ಲಿ ಪ್ರಥಮ) |
| 2. Genitivus | ಸಂಬಂಧ ವಿಭಕ್ತಿ | (ಷಷ್ಠಿ) |
| 3. Dativus | ಸಂಪ್ರದಾನ ವಿಭಕ್ತಿ | (ಚತುರ್ಥಿ) |
| 4. Accusativus | ಕರ್ಮ ವಿಭಕ್ತಿ | (ದ್ವಿತೀಯ) |
| 5. Vocativus | ಸಂಬೋಧನ | (ಸಂಬೋಧನ) |
| 6. Ablativus | ಅಪಾದನ ವಿಭಕ್ತಿ | (ಪಂಚಮಿ) |

ಕನ್ನಡದಲ್ಲಿ ಇನ್ನು ಬೇರೆ ಯೆರಡು ವಿಭಕ್ತಿಗಳುಂಟು: ಅದಾಗಿ ಅಧಿಕರಣ ವಿಭಕ್ತಿ (ಸಪ್ತಮಿ); ಮತ್ತು ಕರಣ ವಿಭಕ್ತಿ (ತೃತೀಯ). ಆದರೆ ಲತೀನು ಭಾಷೆಯಲ್ಲಿ ಸಪ್ತಮಿ ವಿಭಕ್ತಿಯ ಅರ್ಥವು in ಯೆಂಬ ಉಪಸರ್ಗದಿಂದಲೂ ತಿಳಿಸಲ್ಪಡುತ್ತದೆ. ಉದಾಹರಣೆ: (ಸಪ್ತಮಿ)-ತೋಟದಲ್ಲಿ, in horto. (ತೃತೀಯ)-ದೂತನಿಂದ, per nuntium, a nuntio".

ಕನ್ನಡ-ಲ್ಯಾಟಿನ್ ಮತ್ತು ಲ್ಯಾಟಿನ್-ಕನ್ನಡ ಕೋಶಗಳ ರಚನೆಯು ಹೆಚ್ಚು ಮಹತ್ವದ್ದಾಗಿದೆ. ಅವುಗಳನ್ನು ಸಿದ್ಧಪಡಿಸಿದವರ ಹೆಸರನ್ನು ಆ ಪುಸ್ತಕಗಳಲ್ಲಿ ಸ್ಪಷ್ಟವಾಗಿ

ಕಾಣಿಸಿಲ್ಲ. ಲ್ಯಾಟಿನ್-ಕನ್ನಡ ಕೋಶದಲ್ಲಿ 'ಮೈಸೂರಿನ 'ವಿಕಾರ್ ಎಪಾಸ್ಟಿಲಿಕ್' ಎಂದಷ್ಟೇ ಅದರ ಲೇಖಕನೆಂದು ಉಲ್ಲೇಖವಿದೆ. ಅರ್ಥಾತ್ ಈ ಹಿಂದೆ ಪ್ರಸ್ತಾಪಿಸಿದ <೪೧೨> ಇ.ಎಲ್. ಚಾರ್ಬೊನಾ ಅದರ ಕರ್ತೃವೆಂದಾಯಿತು. ಅವೆರಡೂ ಕೋಶಗಳಲ್ಲಿ ಒಂದಕ್ಕೊಂದು ಸಂಬಂಧವಿರುವುದರಿಂದ ಎರಡನೆಯದನ್ನೂ ಅವನೇ ತಯಾರಿಸಿರಬೇಕು.

ಕನ್ನಡ-ಲ್ಯಾಟಿನ್ ಶಬ್ದಕೋಶದ ರಚನೆಯು ತುಲನಾತ್ಮಕವಾಗಿ ಸುಲಭವಿದ್ದಿತು. ರೀವ್ ಮತ್ತು ಗ್ಯಾರೆಟ್ ಇವರ ಕನ್ನಡ ಇಂಗ್ಲಿಷ್ ಕೋಶಗಳಲ್ಲಿ ಕೊಡಲಾದ ಕನ್ನಡ ಪದಗಳನ್ನು ಮುಂದಿಟ್ಟುಕೊಂಡು ಅವಕ್ಕೆ ಲ್ಯಾಟಿನ್‌ದಲ್ಲಿ ಅರ್ಥವನ್ನು ಹೇಳಿದ್ದಾಗಿದೆ. ಅರ್ಥವನ್ನು ಹೇಳುವಲ್ಲಿಯೂ ರೀವ್, ಗ್ಯಾರೆಟ್ ಇವರ ಪದ್ಧತಿಯನ್ನೇ ಅನುಸರಿಸಿದುದು ಕಂಡುಬರುತ್ತದೆ.

ಲ್ಯಾಟಿನ್ - ಕನ್ನಡ ಕೋಶ ರಚನೆಯಲ್ಲಿ ಮಾತ್ರ ಸಾಕಷ್ಟು ಸ್ವಂತಿಕೆ ಇದೆ. ಇದಾದರೂ ಸೆಮಿನರಿಯಲ್ಲಿ ಲ್ಯಾಟಿನ್ ಭಾಷೆಯನ್ನು ಕಲಿಯುವವರಿಗಾಗಿ ಇದ್ದಿತು. ಜೊತೆಗೆ ಹಳ್ಳಿಗಳಿಗೆ ಹೋಗಿ ಬೋಧನೆ ಮಾಡುತ್ತಿದ್ದ ಮಿಶನರಿಗಳಿಗೂ ಉಪಯೋಗವಾಗಬಹುದು-ಎಂದು ಆ ಕೋಶಕಾರನು ಹಾರೈಸಿದ್ದಾನೆ. ಕನ್ನಡದಲ್ಲಿ ಅರ್ಥವಿಸಬಹುದಾದ ಶಬ್ದಗಳ ಆಯ್ಕೆಯ ದೃಷ್ಟಿಯಿಂದ ಇದರ ಸಂಪಾದನವು ಹೆಚ್ಚು ಪರಿಶ್ರಮದ್ದಾಗಿತ್ತು. ದೇಶ, ಕಾಲಗಳ ಮೂಲಕವಾದ ಶಬ್ದಗಳಲ್ಲಿಯ ಭೇದ, ಅದರಂತೆ ಅನ್ಯಭಾಷಾ ಶಬ್ದಗಳ ಬಳಕೆ - ಇವು ಅವನಿಗೂ ಸಮಸ್ಯೆಯಾಗಿ ಪರಿಣಮಿಸಿದ್ದುವು. ಕಾರಣ ಲ್ಯಾಟಿನ್ ಪದಗಳಿಗೆ ಅರ್ಥವನ್ನು ಕೊಡುವಾಗ ಅವನು ಕನ್ನಡಿಗರಲ್ಲಿ ರೂಢಿಯಲ್ಲಿರುವ ಶಬ್ದವನ್ನು, ಅದು ಒಂದು ವೇಳೆ ಹಿಂದುಸ್ತಾನಿಯದೇ ಇರಲಿ, ಸಂಸ್ಕೃತವೇ ಆಗಿರಲಿ ಅದನ್ನು ಮೊದಲಿಗೆ ಕೊಟ್ಟಿದ್ದಾನೆ. ಆ ಮಾನದಿಂದ ಲ್ಯಾಟಿನ್‌ಗೆ ಪ್ರತಿಯಾದ ಸಂಸ್ಕೃತ ಶಬ್ದಗಳ ಆಯ್ಕೆಯು ಒಟ್ಟಿನಲ್ಲಿ ಕಡಿಮೆಯದೇ ಆಗಿದೆ. ಆದರೆ ಯಾವುದೊಂದು ಇಂಗ್ಲಿಷ್ ಶಬ್ದವು ಕನ್ನಡಿಗರಲ್ಲಿ ಬಳಕೆಯಲ್ಲಿದ್ದರೂ ಅದನ್ನು ಲ್ಯಾಟಿನ್ ಪದದ ಅರ್ಥವಾಗಿ ಕೊಡಹೋಗಿಲ್ಲ.

ಹತ್ತೊಂಬತ್ತನೆಯ ಶತಮಾನಕ್ಕೆ ಮಾತ್ರ ಸೀಮಿತವಾದ ಸಾಹಿತ್ಯಿಕ ಕಾರ್ಯಗಳಲ್ಲಿ ಕನ್ನಡ-ಲ್ಯಾಟಿನ್ ಭಾಷಾಭ್ಯಾಸವೂ ಒಂದು. ಹಾಗೆ ಹೊರಬಂದ ಕೃತಿಗಳಲ್ಲಿ ಈ ಲ್ಯಾಟಿನ್-ಕನ್ನಡ ಕೋಶವು ಹೊಸಗನ್ನಡದ ಅರುಣೋದಯ ಕಾಲದ ಗಣನೀಯ ಗ್ರಂಥಗಳಲ್ಲಿ ಒಂದಾಗಿದೆ.

## ಸಂದರ್ಭ ಸೂಚಿ


1. Calcutta Review, May 1942:163-66
2. Indian Antiquary. 35 (1906), p.64
3. Proceedings, South India Missionary Coference, 1858: J.Hoch. p.276

ಪ್ರಕರಣ : 3

# ಹೊಸ ಕವಿತೆ

## ೩೧ ಕವಿತಾ ಸಂಗ್ರಹಗಳು

ಕ್ರಿ.ಶ. ೧೮೬೦ರ ಸುಮಾರಿಗೆ ಪ್ರಚಲಿತವಿದ್ದ ಗದ್ಯ-ಪದ್ಯ ಸಂಗ್ರಹಗಳ ಕಲ್ಪನೆ ಹೊಸ ಯುಗದ್ದಾದರೂ ಹಳಗನ್ನಡ ಕಾಲದಲ್ಲಿ ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರಗಳು ಇದ್ದುದು ಒಂದು ವಿಶೇಷವೇ. ಹತ್ತೊಂಬತ್ತನೆಯ ಶತಮಾನದಲ್ಲಿ ಈ ಅಂಶದತ್ತ ಮೊದಲಿಗೆ ಗಮನ ಕೊಟ್ಟವರು ಮಿಶನರಿಗಳು: ಪ್ರಾಥಮಿಕ ಮಟ್ಟದ ತಮ್ಮ ಕನ್ನಡ ಅಭ್ಯಾಸ ಮುಗಿದ ಮೇಲೆ, ಅವರ ಮುಂದಿನ ವ್ಯಾಸಂಗ ಕನ್ನಡ ಕಾವ್ಯಗಳನ್ನು ಕುರಿತದ್ದು. ಆಗ ಅವನ್ನು ತಾವಾಗಲೀ ದೇಶೀಯರಿಂದಾಗಲೀ ಬರೆದು, ಬರೆಯಿಸಿ ಇಟ್ಟುಕೊಳ್ಳುತ್ತಿದ್ದರು. ಅಂಥ ಒಂದು ಸಂಕಲನವು ೧೮೨೫ರಷ್ಟು ಹಿಂದೆ ಸಿದ್ಧವಾಗಿದ್ದು ಆ ಹಸ್ತಪ್ರತಿಯು ಬೆಂಗಳೂರಿನ ಯುನೈಟೆಡ್ ಥಿಯಾಲಾಜಿಕಲ್ ಕಾಲೇಜ ಲೈಬ್ರರಿಯಲ್ಲಿ ಇದೆ. ಇದನ್ನು ಲಂಡನ್ ಮಿಶನರಿಗಳು ಸಿದ್ಧಪಡಿಸಿರಬೇಕು. ಅದರಲ್ಲಿ 'ಜ್ಞಾನಸಿಂಧು, ಬಸವಪುರಾಣ, ಚೋರಬಸವ ಚರಿತ್ರೆ, ಅಖಂಡೇಶ್ವರ ವಚನ, ವಿವೇಕ ಚಿಂತಾಮಣಿ'-ಮುಂತಾದವುಗಳಿಂದ ಪದ್ಯಗಳನ್ನಾರಿಸಿ ಪ್ರತಿ ಮಾಡಿದ್ದಿದೆ.

ಕ್ರಮಿಕ ಪುಸ್ತಕವೆಂಬ ಕಾರಣದಿಂದಲೂ ಕವನ ಸಂಗ್ರಹಗಳ ಅಗತ್ಯ ಬಿದ್ದಿತು. ಸೂಕ್ತ ರೀತಿಯಲ್ಲಿ ಸಂಪಾದಿಸಿ ಹೊರತರುವ ಕೆಲಸವನ್ನು ಬಾಸೆಲ್ ಮಿಶನ್ನಿನವರು ಮೊದಲಿಗೆ ಕೈಕೊಂಡರು. ಮೊವ್‌ಗ್ಲಿಂಗ್ ದಾಸರ ಪದಗಳನ್ನು ೧೮೪೮ರಲ್ಲಿ ಸಂಗ್ರಹಿಸಿ, ಕಲ್ಲಚ್ಚಿನಲ್ಲಿ ಹೊರ ತಂದಿದ್ದರೂ ಅದರಲ್ಲಿ ಸಂಪಾದನ ಕಾರ್ಯ ಎಂಬುದು ಇರಲಿಲ್ಲ. ಆ ಕೆಲಸವನ್ನು ಕೈಕೊಂಡ ಶ್ರೇಯೋಭಾಗವು ಜಿ. ವುರ್ತ್‌ರಿಗೆ ಸಲ್ಲುತ್ತದೆ. ತನ್ನ ಪ್ರಾಕಾವ್ಯಮಾಲಿಕೆಯಲ್ಲಿ ೧೫-೧೬ ಜನ ಕವಿಗಳನ್ನು ಆಯ್ದುಕೊಂಡು ಬ್ರಾಹ್ಮಣ, ವೀರಶೈವ, ಜೈನ ಜೊತೆಗೆ ಕ್ರೈಸ್ತ-ಎಂಬುದಾಗಿ ವರ್ಗೀಕರಣ ಮಾಡಿದ್ದಾರೆ. ಹೀಗೆ ಧಾರ್ಮಿಕವಾಗಿ ಕನ್ನಡ ಸಾಹಿತ್ಯವನ್ನು ಅವಲೋಕಿಸಿದವರಲ್ಲಿ ವುರ್ತ್ ಮೊದಲಿಗರು. ಕವಿಗಳ ಕಾಲಾವಧಿಯು ಮಾತ್ರ ಹಿಂದೆ ಮುಂದೆ ಆಗಿದೆ. ಆಗ ಅನೇಕ ಕವಿಗಳ ಕಾಲವು ಗೊತ್ತೂ ಇರಲಿಲ್ಲ.

ಇಡೀ ಸಂಗ್ರಹದ ವಿಷಯಾನುಕ್ರಮಣಿಕೆಯು ಪರಿಶೀಲನಾರ್ಹವಾಗಿದೆ.

**(ಅ) ಬ್ರಾಹ್ಮಣ ಸಾಹಿತ್ಯ**

೧. ಜೈಮಿನಿ ಭಾರತ: ಕುದುರೆಯ ಸಂಚಾರ, ಮಯೂರಧ್ವಜನ ಕಥೆ, ಚಂದ್ರಹಾಸನ ಕಥೆ.
೨. ಕುಮಾರವ್ಯಾಸ ಭಾರತ: ಬಕಾಸುರ ವಧೆ
೩. ರಾಮಾಯಣ:ಸೀತಾಪಹರಣ
೪. ಭಾಗವತ: ಕಥಾಸಾರ
೫. ಅನುಭವಾಮೃತ: ವಿವಿಧ. (ಸುರುವಿಗೆ ಅದ್ವೈತ ವೇದಾಂತದ ಮೇಲೆ ವ್ಯುರ್ತ್‌ರ ಸುದೀರ್ಘ ಟೀಕೆಯಿದೆ.)
೬. ಸೋಮೇಶ್ವರ ಶತಕ
೭. ದಾಸರ ಪದಗಳು : ಕನಕದಾಸ, ಪುರಂದರದಾಸ

**(ಆ) ವೀರಶೈವ ಸಾಹಿತ್ಯ**

೧. ಬಸವಪುರಾಣ
೨. ಚನ್ನಬಸವ ಪುರಾಣ
೩. ಸರ್ವಜ್ಞನ ಪದಗಳು
೪. ರಾಜಶೇಖರ ವಿಳಾಸ; ಪ್ರಕೃತಿ ವರ್ಣನೆಯ ಪದ್ಯಗಳು

**(ಇ) ಜೈನ ಸಾಹಿತ್ಯ**

೧. ಶಾಸ್ತ್ರಸಾರ
೨. ಧರ್ಮಪರೀಕ್ಷ (ಅತಿ ಹೆಚ್ಚಿನ ಪದ್ಯಗಳನ್ನು ಇದರಿಂದ ಆಯಲಾಗಿದೆ.)

**(ಈ) ದೇಶೀ ಕ್ರೈಸ್ತ ಪದಗಳು**

(ಒಟ್ಟು ಪದ್ಯಗಳು ೧೭೦೧)

ಹಳಗನ್ನಡ ಕಾವ್ಯಗಳಾವುವೆಂಬುದನ್ನು ಮೇಲಿನ ಪಟ್ಟಿಯಿಂದ ಕಂಡುಕೊಳ್ಳುತ್ತೇವೆ. 'ಜೈಮಿನಿ ಭಾರತ' ಮತ್ತು 'ಸರ್ವಜ್ಞನ ವಚನ'ಗಳ ವಿಶೇಷ ಜನಪ್ರಿಯತೆಯನ್ನು ಅವರು ಮನಗಂಡಿದ್ದರಾದ್ದರಿಂದ ಅದಕ್ಕಾಗಿ ಹೆಚ್ಚು ಪದ್ಯಗಳನ್ನು ಮೀಸಲಿರಿಸಿದ್ದುದು ಸರಿಯೆ. ಆದರೆ 'ಧರ್ಮಪರೀಕ್ಷೆ' ಯಿಂದ ಅತಿ ಹೆಚ್ಚಿನ ಪದ್ಯಗಳನ್ನು ಆಯುಕೊಂಡದ್ದರ ಕಾರಣವು ಪ್ರಾಯಶಃ ಅದರಲ್ಲಿರುವ ಅನ್ಯಮತ ದೂಷಣೆಯಿಂದಾಗಿ. ಮಿಶನರಿಯಾದ ಅವರಿಗೆ ಅದು ಇಷ್ಟವಾದದ್ದೇ ಆಗಿತ್ತು.

ಈ ಸಂಕಲನ ಪಠ್ಯವನ್ನು ಸಿದ್ಧಗೊಳಿಸಲು ಮದ್ರಾಸ ಶಿಕ್ಷಣ ಶಾಖೆಯು ಅವರಿಗೆ ಆದೇಶವಿತ್ತಿದ್ದಿತು. ಹಾಗೆಂದು ವುರ್ತ್ ಹಿಂದೂಮತದ ಖಂಡನೆ, ಸ್ವಮತದ ಶ್ರೇಷ್ಠತೆ ಇವನ್ನು ತರಲು ಸಂಕೋಚಪಟ್ಟುಕೊಂಡಿಲ್ಲ. 'ಅನುಭವಾಮೃತ' ಪದ್ಯಭಾಗದ ಸುರುವಿಗೆ ವೇದ, ವೇದಾಂತ ಇತ್ಯಾದಿ ಮಾತುಗಳನ್ನು ಹೇಳಿ, ಷಡ್ದರ್ಶನದಲ್ಲಿಯ ದೋಷಗಳಿವು-ಎಂಬುದಾಗಿ ಪಟ್ಟಿ ಮಾಡಿದ್ದಾನೆ. ಮತ್ತು "ಈ ದರ್ಶನಗಳನ್ನು ಮಾಡಿದವರು ಒಂದು ತರಹ ರೋಗದಲ್ಲಿ ಬಿದ್ದಿದ್ದರು ಎಂದು ತೋರುತ್ತದೆ. ಅಂಥ ರೋಗದಲ್ಲಿ ಬಿದ್ದವರು ಹೇಳಿದ ಮಾತಿನ ಮೇಲೆ ಭರವಸೆ ಇಡಲಾಗದು. ಚಂದಾಗಿ ಶೋಧಿಸಿ ನೋಡತಕ್ಕದ್ದು. ಬಹಳವಾಗಿ ಅವರ ಮಾತು ವಿದ್ಯಕ್ಕೂ ಸರ್ವಾನುಭವಕ್ಕೂ ವಿರೋಧವಾಗುವುದು" ಎಂದು ಟೀಕಿಸಿದ್ದಾರೆ.

ಈ ಸಂಕಲನದಲ್ಲಿ ಬಂದ ಪ್ರತಿಯೊಂದು ಪದ್ಯದ ಸಾರವನ್ನು ಇಂಗ್ಲಿಷ್‌ನಲ್ಲಿ ಕೊಡಲಾಗಿದೆ. ಟಿಪ್ಪಣಿಗಳೂ ಇವೆ. ಪುಷ್ಪಮಾಲಿಕಾ, ಎಂಬ ಶಬ್ದಕೋಶವೂ ಇದೆ. ಇವೆಲ್ಲ ಅಂಶಗಳಿಂದಾಗಿ ಅದೊಂದು ಉಪಯುಕ್ತವಾದ ಕವನ ಸಂಗ್ರಹವೆನಿಸಿತು. ಇದರ ಪ್ರಕಟಣೆಯ ವರ್ಷ ೧೮೬೮. ಕಿಟೆಲ್ ಸಂಪಾದಿತ (ಸಣ್ಣ) ಕರ್ನಾಟಕ ಕಾವ್ಯ ಮಾಲೆಯು ೧೮೬೪ರಲ್ಲಿ ಪ್ರಕಟವಾಗಿದ್ದರೂ ವುರ್ತ್‌ನ ಕಾರ್ಯವೇ ಮೊದಲಿನದು. ಏಕೆಂದರೆ ೧೮೬೨ರಲ್ಲಿಯೇ ಅದು ಸಿದ್ಧವಾಗಿದ್ದಿತೆಂಬುದಕ್ಕೆ ಆಂತರಿಕ ಪ್ರಮಾಣಗಳಿವೆ. (ಪು. ೩೪೯ರಲ್ಲಿ ಹಾಗೂ ಚನ್ನಬಸವಪುರಾಣ, ರಾಜಶೇಖರವಿಳಾಸಗಳ ಕಾಲವನ್ನು ಹೇಳುವಲ್ಲಿ), ವುರ್ತ್ ಅಸ್ವಸ್ಥಗೊಂಡು ತನ್ನ ದೇಶಕ್ಕೆ ಹಿಂತಿರುಗಿದ್ದರಿಂದ ಗ್ಯಾರೆಟ್ ಅದಕ್ಕೆ ಟಿಪ್ಪಣಿ ಸೇರಿಸಿ ಬೆಂಗಳೂರಿನಲ್ಲಿ ಮುದ್ರಿಸಿ ಅದನ್ನು ಹೊರತರುವಲ್ಲಿ ವಿಳಂಬವಾಯಿತು. ಅಂತೂ ಮದ್ರಾಸ ಕನ್ನಡಿಗರಿಗಾಗಿ ಇದ್ದ ಈ ಕೃತಿಯು ಬಾಸೆಲ್ ಮಿಶನರಿಯಿಂದ ಸಂಪಾದಿತವಾಗಿ ಮೈಸೂರು ಸರಕಾರದ ಅಚ್ಚುಕೂಟದಿಂದ ಹೊರಬಂದಿತು; ಮತ್ತದು ಪಠ್ಯವೆಂದು ಹೆಚ್ಚಾಗಿ ಬಳಕೆಯಲ್ಲಿದ್ದುದು ಧಾರವಾಡದಲ್ಲಿ! ಅಖಿಲ ಕರ್ನಾಟಕ ಮಟ್ಟದ ಅಪ್ರಾರ್ಥಿತ ಸಹಕಾರಕ್ಕೆ ಇದೊಂದು ನಿದರ್ಶನ.

ಕಿಟೆಲ್ ಕೈಗೊಂಡ ಆಧುನಿಕ ರೀತಿಯ ಗ್ರಂಥಸಂಪಾದನಾ ಕಾರ್ಯದಲ್ಲಿ ಸಣ್ಣ ಕರ್ನಾಟಕ ಕಾವ್ಯಮಾಲೆಯು ನಾಂದಿಯಂತಿದೆ. ಮೇಲೆ ಹೇಳಿದ ಆಕರಗಳೇ ಕಿಟೆಲ್‌ಗೆ ಆಗ ದೊರೆತಿದ್ದುವು. ಆದರೆ ಈ ಪದ್ಯಗಳನ್ನು ವಿವಿಧ ವಿಷಯಾನುಸಾರ ಆಯ್ದುದರಲ್ಲಿ ಕಿಟೆಲ್‌ರ ವೈಶಿಷ್ಟ್ಯವಿದೆ. ದೇಶವರ್ಣನೆ, ಸಮುದ್ರ, ಬೇಟೆ, ಯುದ್ಧ, ಜೀವನ, ಸಂಸಾರ, ಸ್ತ್ರೀ–ನ[illegible] ಇವೇ ಮುಂತಾದವು ಆ ವಿಷಯಗಳು. ಇವುಗಳ ಛಂಧಸ್ಸನ್ನು ವಿವರಿಸುತ್ತ (ಛಂದೋವಿದ್ಯೆ) ಕಿಟೆಲ್ ಮುಖಾರಿ, ಭೈರವಿ, ಆನಂದ ಭೈರವಿ ಮೊದಲಾದ ರಾಗಗಳ ಗಣಗಳನ್ನು, ಗುರುತಿಸುವ ಪ್ರಯತ್ನ ಮಾಡಿದ್ದಾನೆ. ಸುರುವಿಗೆ ೬೨ ಪುಟಗಳಿದ್ದ ಈ ಸಂಕಲನವು ಕಿಟೆಲರ ಕನ್ನಡ ವ್ಯಾಸಂಗ ಬೆಳೆದಂತೆಲ್ಲ ಪುಷ್ಟಿಗೊಂಡಿತು. ಇನೆಯ

ಆವೃತ್ತಿಯು(೧೮೭೪; ೪೦೧ಪುಟಗಳು) 'ಸಣ್ಣ' ಎಂಬ ವಿಶ್ಲೇಷಣವಿಲ್ಲದೆ ಹೊರಬಂದದ್ದು ಸ್ವಾಭಾವಿಕವೇ ಸೈ. ಕವಿ ಪರಿಚಯ. ಟಿಪ್ಪಣಿ, ಶಬ್ದಕೋಶಗಳು ಸೇರ್ಪಡೆಯಾದವು. ಇದೇ ಶಬ್ದಕೋಶವೇ ಮುಂದೆ ಕಿಟೆಲ್‌ರ ಬೃಹತ್‌ಕೋಶದ ಮಾತೃಕೆಯಾಯಿತು.

ಈ ಸಂಕಲನದಲ್ಲಿಯ ದೊಡ್ಡ ದೋಷವೆಂದರೆ, ಹಿಂದೂ ದೇವತೆಗಳನ್ನು ಮತ್ತಿತರ ಇಂಥವೇ ಅಂಶಗಳನ್ನು ಹೇಳುವ ಶಬ್ದಗಳನ್ನು ತೆಗೆದುಹಾಕಿ ಪದ್ಯಗಳನ್ನು ವಿದ್ರೂಪಗೊಳಿಸಿದುದು. ಹೀಗೆ ಬದಲಾವಣೆ ಮಾಡಿದ ಸ್ಥಳಗಳಲ್ಲಿ ಕೆಲವೆಡೆ ಅರ್ಥಹೀನವೂ ವ್ಯಾಕರಣವಿರೋಧವೂ ಆದ ಪದಗಳನ್ನು ಬಳಸಲಾಗಿದೆ. 'ಸೋಮೇಶ್ವರ ಶತಕ'ಕ್ಕೆ ಆ ಹೆಸರನ್ನು ಕೊಟ್ಟಂಥ 'ಹರಹರಾ ಶ್ರೀ ಚೆನ್ನಸೋಮೇಶ್ವರಾ' ಎಂಬ ಪ್ರತಿ ಪದ್ಯದ ಅಂತ್ಯಭಾಗವನ್ನು ತೊಡೆದುಹಾಕಿ ಬೇರೊಂದು ಶಬ್ದ ಸಮೂಹವನ್ನು ಸೇರಿಸಲಾಗಿದೆ. ಉದಾಹರಣೆಗೆ-

'ಶಿವನೇ ದೈವಜಗಂಗಳೊಳ್ ಹರಹರಾ ಶ್ರೀ ಚೆನ್ನಸೋಮೇಶ್ವರಾ"-ಮೂಲ. 'ದಿವಭೂಪಾಲಕನೇ ಕಣಾ ನರನರಾ ಕೇಳ್ಬುದ್ಧಿಯಂ ಪೇಳ್ವುದಾ' - ಕಿಟೆಲ್ ಮಾಡಿದ ಬದಲಾವಣೆ, ಇದು ಬೇರೊಂದೆಡೆ 'ಚೆನ್ನಕೇಶವನ ಪಾದವನು' ಎಂಬುದನ್ನು 'ಚೆನ್ನುಗಿನ್ನು ದೇವ್ರ ಪಾದ' ಎಂದು ತಿದ್ದಿದುದರಲ್ಲಿ ಶಬ್ದದ ಸೊಗಸೇ ಹೊರಟುಹೋಗಿದೆ. ಇದರಂತೆ 'ಒದರಿದವು ದೇಗುಲದ ವಾದ್ಯಂಗಳು' ಎಂಬ ಮೂಲದ ಸಾಲನ್ನು 'ಒದರಿದರು ನೇಗಿಲಂ ಬಡಿವ ಜನರು' ಎಂದು ತಿದ್ದಿದುದು ಹಾಸ್ಯಾಸ್ಪದವಾಗಿ ಕಾಣುತ್ತದೆ-ದೇಗುಲವೂ ಬೇಡವಾಯಿತಲ್ಲ ಎಂದು. ದ್ವಿಜ, ವಿಶ್ವಕರ್ಮ ಎಂಬ ಪದಗಳೂ ಮಿಶನರಿಗಳ ಈ ಧಾರ್ಮಿಕ ಸಂಕುಚಿತತೆಗೆ ಬಲಿಯಾದುವು.*

ಅನಂತರದ ಮಹತ್ವದ ಸಂಕಲನಕಾರ ಎಂದರೆ ಗಂಗಾಧರ ಮಡಿವಾಳೇಶ್ವರ ತುರಮರಿ. ಅವರು (ಕವಿತಾ ಸಂಗ್ರಹವು, ೧೮೭೪). "ಕಾವ್ಯದಲ್ಲಿ ರಸವೊದಗುವುದು. ಕಾಳಗದಲ್ಲಿ ಜಯಹೊಂದುವುದು ಎಲ್ಲರಿಗೂ ಸಾಧಿಸದು. 'ಕಾವ್ಯಕ್ಕೆ ಕಾಲ, ತಪಸ್ಸಿಗೆ ಮುಪ್ಪು-ಶೋಭೆ' [ಎಂಬ] ಗಾದೆಯುಂಟು. . .ಕರ್ನಾಟಕ ಭಾಷಾಭಿಜ್ಞರೆಂತಲೂ ರಸಿಕರೆಂತಲೂ ಹೆಸರು ಪಡೆದವರ ಗ್ರಂಥಗಳನ್ನು ಓದುವುದು ನಮಗೆ ಅತ್ಯವಶ್ಯಕವು. ಆದುದರಿಂದ ಅಂಥವರ ಗ್ರಂಥಗಳನ್ನು ಕೈಲಾದ ಮಟ್ಟಿಗೆ ಕೂಡಿಸಿ ಅವುಗಳಲ್ಲಿರುವ ಮೇಲಾದ ವಿಷಯುಗಳನ್ನೂ ಪದ್ಯಗಳನ್ನೂ ಆರಿಸಿಕೊಂಡು ಇದೊಂದು ಕವಿತಾಸಂಗ್ರಹವೆಂಬ ಪುಸ್ತಕವ ಮಾಡಿದ್ದೇವೆ. . .ಆರಂಭದಲ್ಲಿ ಪ್ರಸಿದ್ಧವಾದ ಕವಿಗಳ ಚರಿತ್ರೆಗಳನ್ನು ತಿಳಿದಮಟ್ಟಿಗೆ ವಿವರಿಸಿದ್ದೇವೆ." ಹೀಗೆಂದು ಕವಿತಾ ಸಂಗ್ರಹದ ಉದ್ದೇಶಗಳನ್ನು ಹೇಳಿದ್ದಾಗಿದೆ. ಈ ಸಂಗ್ರಹದಲ್ಲಿ ಬಾಸೆಲ್ ಮಿಶನ್ನಿನವರಿಗೆ ದೊರೆತಿದ್ದ ಕೃತಿಗಳಲ್ಲದೇ

* ಮಿಶನರಿಗಳ ಈ ಪ್ರವೃತ್ತಿಯನ್ನು ಗರಣಿ ಕೃಷ್ಣಾಚಾರ್ಯನಂಥ ಪಂಡಿತ ವರ್ಗದವರೂ ಕೆಲವು ದೇಶೀಯ ವಿದ್ಯಾವಂತರೂ ಆ ಕಾಲಕ್ಕೆ ಸಭೆ ಜರುಗಿಸಿ ಖಂಡಿಸಿದುದಿದೆ.

ರಾಘವೇಶ್ವರ ಕಾವ್ಯ, ಸುರಂಗ ಕಾವ್ಯ, ನನ್ನಯ ಕಾವ್ಯ, ಹರಿಹರನ ಗಿರಿಜಾಕಲ್ಯಾಣ. ಷಡಕ್ಷರಿಯ ಇತರ ಕೃತಿಗಳು ಹಾಗೂ ಸರ್ಪಭೂಷಣ ಮೊದಲಾದವರ ಹಾಡುಗಳಿವೆ. ಸಮಕಾಲೀನರ ಪದ್ಯಗಳೂ ಸಮಾವೇಶಗೊಂಡಿವೆ. ಇದರಲ್ಲಿ ಬಂದ ಕುಮಾರವಿಭು, ರಾಮಬ್ರಹ್ಮಾನಂದ, ಗುರುಬಸವ ಮೊದಲಾದವರು ೧೯ನೆಯ ಶತಮಾನದವರು. 'ವಿಕ್ಟೋರಿಯಾ ಮಹಾರಾಣಿ'ಯ ಮೇಲಿನ ಕವಿತೆಯು ತುರಮರಿಯವರದೇ ಇರಬಹುದು. ಅವರು ಹೀಗೆ ಆಯ್ದುಕೊಂಡ ಪದ್ಯಭಾಗಗಳು ಹೆಚ್ಚು ವೈವಿಧ್ಯದಿಂದ ಕೂಡಿವೆ. ರಸಭರಿತವಾದ ಭಾಗಗಳನ್ನೇ ಕೊಡಬೇಕೆಂದು ಇಟ್ಟುಕೊಂಡದ್ದು ತಕ್ಕಮಟ್ಟಿಗೆ ಸಾರ್ಥಕವಾಗಿದೆ. ಇದಕ್ಕಿಂತ, ಪ್ರಾಚೀನ ಕಾವ್ಯಲಕ್ಷಣಗಳನ್ನು ಎಂದರೆ ರಸ, ರೀತಿ, ಅಲಂಕಾರ, ಕವಿಸಮಯಾದಿಗಳನ್ನು ಚೆನ್ನಾಗಿ ತೋರ್ಪಡಿಸುವಂಥ ಪದ್ಯಗಳ ಆಯ್ಕೆಗೆ ಅವರು ಹೆಚ್ಚು ಗಮನ ಕೊಟ್ಟಿದ್ದಾರೆ. ಜೊತೆಗೆ ವೃತ್ತಗಳ ವೈವಿಧ್ಯವನ್ನು ತೋರಿಸಲೆಂದೇ, 'ವೃಷಭೇಂದ್ರ ವಿಜಯ'ದ ಕಾವ್ಯಭಾಗಗಳು ಬಂದಿವೆ. ಇತ್ತ ವಿಕ್ಟೋರಿಯಾ ರಾಣಿಯ ಮೇಲಿನ ಪದ್ಯಬಂಧವು ಆಧುನಿಕವೇನಲ್ಲ. ವಿವಿಧ ಅಕ್ಷರವೃತ್ತಗಳಲ್ಲಿ ರಚಿತವಾದದ್ದು.

ಷಡಕ್ಷರಿಯು ತುರಮರಿಯವರ ನೆಚ್ಚಿನ ಕವಿಯೆಂಬುದು ನಿಸ್ಸಂಶಯ; ಗ್ರಂಥದ ಅರ್ಧ ಭಾಗವು ಅವನಿಗೆ ಮೀಸಲು. ಇತ್ತ ದಂತಕಥೆ, ಐತಿಹ್ಯಗಳ ಆಧಾರದ ಮೇಲೆ ಕೆಲವು ಕವಿಗಳ ಚರಿತ್ರೆಯನ್ನು ಹೇಳುವ ಪ್ರಯತ್ನ ಮಾಡಿದುದು ಸ್ತುತ್ಯವೇ. ಹಾಗೆ ಹೇಳಿದ ಹೆಚ್ಚಿನ ಅಂಶಗಳು ಮಾತ್ರ ತಪ್ಪು ತಪ್ಪಾಗಿವೆ. (ಉದಾಹರಣೆಗೆ–ಉತ್ತರ ಭಾರತವನ್ನು ಬರೆದವ, ಛಾಯಣ್ಣ; ಪುರಂದರದಾಸರು ಸ್ಮಾರ್ತ ಬ್ರಾಹ್ಮಣ; ನಿಜಗುಣರು ಬಸವೇಶ್ವರನಿಗಿಂತ ಹಿಂದಿನವರು).

ಹಿರಣ್ಯಗರ್ಭ ವಿರಚಿತವಾದ 'ವಿಶ್ವಕೃತಿ ಪರೀಕ್ಷಣ'ವು ತನ್ನ ಬಾಹ್ಯ ಹಾಗೂ ಅಂತರಂಗ ಸ್ವರೂಪದಲ್ಲಿ ವಿಚಿತ್ರವಾದ ಕೃತಿಯಾಗಿದೆ. ಅದರ ಕಾಲವನ್ನು ಕವಿಚರಿತಕಾರರು ೧೮೭೩ ಎಂದು ಹೇಳಿದ್ದಾರೆ. ಆದರೆ ಚುರಮುರಿಯವರ ಶಾಕುಂತಲದ ಪದ್ಯಗಳು ಉದಾಹೃತವಾಗಿರುವುದರಿಂದ ಈ ಕೃತಿಯು ೧೮೭೭ರ ಅನಂತರದ್ದೆನ್ನಬೇಕು. ಇದರಲ್ಲಿ 'ಲೀಲಾವತಿ ಪ್ರಬಂಧ', 'ಚಂದ್ರಪ್ರಭ ಪುರಾಣ'ಗಳ ಕಾವ್ಯಭಾಗಗಳೂ ತಾನೇ ಬರೆದ 'ಸರಸ್ವತೀ ಪ್ರಬಂಧ'ದ ಒಂದು ಅಧ್ಯಾಯವೂ ಸಮಾವೇಶವಾಗಿವೆ. ಜೊತೆಗೆ 'ಕುಮಾರವ್ಯಾಸ ಭಾರತ', 'ರಾಜಶೇಖರ ವಿಳಾಸ', 'ಜೈಮಿನಿಭಾರತ'ಗಳ ಪದ್ಯಗಳೂ, ಆಧುನಿಕರ ಕೆಲವು ಪದಗಳೂ ತೌಲನಿಕವಾಗಿ ಕೊಡಲ್ಪಟ್ಟಿವೆ.

ಆದರೆ ಜೈನನಾದ ಹಿರಣ್ಯಗರ್ಭನ ಮೂಲ ಆಶಯವು ಅಗ್ಗಳ, ನೇಮಿಚಂದ್ರರ ಗರಿಮೆಯನ್ನು ತೋರ್ಪಡಿಸುವುದೇ ಆಗಿದ್ದಿತು. ಅದಕ್ಕಾಗಿ ಇತರರ ಕೃತಿಗಳ ದೋಷಗಳನ್ನು ಎತ್ತಿ ಹೇಳುವುದು ಅವನಿಗೆ ಅನಿವಾರ್ಯವೆನಿಸಿತು. ಇದುವೆ ಅವನ ಕೃತಿ ಪರೀಕ್ಷಣದ ನಿಲುಮೆ. ಒಟ್ಟಿನ ೧೨೫ ಪುಟಗಳ ಈ ಸಂಗ್ರಹದಲ್ಲಿ ೫೫ ಪುಟಗಳು ಈ ಬಗೆಯ ಪರೀಕ್ಷಣಕ್ಕೆ ವಿನಿಯೋಗವಾಗಿವೆ.

ಹಿರಣ್ಯಗರ್ಭನ ಪ್ರಕಾರ ಪ್ರಪಂಚದಲ್ಲಿ ಐದು ಬಗೆಯ ಕವಿಗಳಿದ್ದಾರೆ. (ಕವಿ ಪಂಚಕ) (೧) ಸುರ ಕವಿಗಳು – ವೇದದ ಋಷಿಗಳು. (೨) ವರ ಕವಿಗಳು–ಶ್ರುತಿ, ಸ್ಮೃತಿಕಾರರು. (೩) ನರ ಕವಿಗಳು–ಉತ್ಕೃಷ್ಟವಾದ ಪುರಾಣ, ನಾಟಕ, ಪ್ರಬಂಧಗಳನ್ನು ಬರೆದ ನರರು. ಉದಾಹರಣೆಗೆ, ಸಂಸ್ಕೃತದಲ್ಲಿ, ಸಮಂತಭದ್ರ, ಭಾಸ್ಕರಾಚಾರ್ಯ, ಬಾಣ, ಕಾಳಿದಾಸರು; ಕನ್ನಡದಲ್ಲಿ, ನೇಮಿಚಂದ್ರ ಅಗ್ಗಳರು, (೪) ತಸ್ಕರ ಕವಿಗಳು – ಅನ್ಯರಿಂದ ಭಾವಗಳನ್ನೂ ವಾಕ್ಯಗಳನ್ನೂ ಕದ್ದು ಬರೆಯುವವರು (೫) ಕರ್ದಮ ಕವಿಗಳು–ಯಾವ ವಿದ್ಯೆಯೂ ಇಲ್ಲದೆ, ವ್ಯಾಕರಣ ಜ್ಞಾನವೂ ಇಲ್ಲದೆ ಪದ್ಯವನ್ನು ಹೊಸೆಯುವವರು. ಹೇಗಿದೆ ಈ ವರ್ಗೀಕರಣ !

ಅಗ್ಗಳ, ನೇಮಿಚಂದ್ರರ ಜೊತೆಗೆ, ಲಕ್ಷ್ಮೀಶ, ಕುಮಾರವ್ಯಾಸರನ್ನೂ ನರಕವಿಗಳ ಸಾಲಿಗೆ ಸೇರಿಸಿದ್ದಾನೆ. 'ಚಂದ್ರಪ್ರಭ ಪುರಾಣ'ವು ಭಾವ ಬಂಧುರ; 'ಲೀಲಾವತಿ ಪ್ರಬಂಧ'ವು ನವರಸ ಪರಿಪೂರ್ಣ; 'ಜೈಮಿನಿ ಭಾರತ'ವು ಪದಚಾತುರ್ಯ ಯುಕ್ತ; ಮತ್ತು 'ಕುಮಾರವ್ಯಾಸ ಭಾರತ'ವು ಕಥಾ ಕೌತುಕೋದಯಕರವು–ಎಂಬುದಾಗಿ ಅವನ್ನು ವಿಶ್ಲೇಷಿಸಿದ್ದಾನೆ. ಲಕ್ಷ್ಮೀಶ, ಕುಮಾರವ್ಯಾಸರ ಕೃತಿಗಳಲ್ಲಿ ದೋಷಗಳಿವೆ;* ಆದರೂ ಅವು ರಸವತ್ಕೃತಿಗಳಾದ್ದರಿಂದ ಕ್ಷಮ್ಯ; ಎನ್ನುತ್ತಾನೆ. ಅದೇ, ನೇಮಿಚಂದ್ರ–ಅಗ್ಗಳರಲ್ಲಿ ದೋಷಗಳೇ ಇಲ್ಲವಂತೆ.

'ಕರ್ನಾಟಕದಲ್ಲಿ ಬಹಳವಾಗಿ ತಸ್ಕರ ಕವಿಗಳುಂಟು. ಅವರ ಪ್ರಬಂಧಗಳು ಮುದ್ರಾಕ್ಷರಗಳಿಂದಲೆ ಪ್ರಸಿದ್ಧವಾದವುಗಳು' ಎಂದು ಹೇಳಿ, 'ರಾಜಶೇಖರ ವಿಳಾಸ' ಹಾಗೂ 'ಚೆನ್ನಬಸವ ಪುರಾಣ'ದ ಕರ್ತೃಗಳನ್ನು ತಸ್ಕರ ಕವಿಗಳೆಂದು ಕರೆದಿದ್ದಾನೆ. ಏಕೆಂದರೆ ಅವರು ಅಗ್ಗಳ–ನೇಮಿಚಂದ್ರರ ಭಾವಗಳನ್ನು ಇದ್ದುದಿದ್ದಂತೆ ಸ್ವೀಕರಿಸಿದವರೆಂದು ಹೇಳಿ, ಉದಾಹರಣೆಗಳನ್ನೂ ಕೊಟ್ಟಿದ್ದಾನೆ. 'ಚೆನ್ನಬಸವಪುರಾಣ'ದ ಕರ್ತೃ 'ಜೈಮಿನಿ ಭಾರತ'ದಿಂದಲೂ ಭಾವಗಳನ್ನು ತೆಗೆದುಕೊಂಡಿದ್ದಾನೆಂದು ಹೇಳಿದ ಹಿರಣ್ಯಗರ್ಭನಿಗೆ ಲಕ್ಷ್ಮೀಶನು ಈಚಿನವನೆಂಬುದು ಗೊತ್ತಿರಲಿಲ್ಲ. ಅಲ್ಲದೆ ಕವಿಸಮಯದಿಂದಾಗಿ ನಮ್ಮ ಪೂರ್ವಕವಿಗಳ ವರ್ಣನಾ ರೀತಿಯು ಬಹುಮಟ್ಟಿಗೆ ಸಮಾನವಾದುದು–ಎಂಬುದನ್ನೂ ಈ ಪರೀಕ್ಷಕನು ಅರಿಯದೇ ಹೋದನು.

ಕರ್ದಮ ಕವಿ ವಿಚಾರದಲ್ಲಿ ಮಿಶನರಿ ಜನರ ಪದ್ಯರಚನೆಯು ಅವನಿಗೆ 'ಮಾದರಿಯಾಗಿ' ಕಂಡಿದೆ. ಅವನ ಅಭಿಪ್ರಾಯದಲ್ಲಿ, ಅವರ ಕವಿತೆ ರುಚಿಕರ ವಚನವಿಲ್ಲದ, ಅರ್ಥಸ್ವಾರಸ್ಯವು ಹೊರಡದ ಬಾಲ ಕವಿತ್ವ. ಚುರುಮರಿಯುವರ ಶಾಕುಂತಲದಲ್ಲಿಯ ಮತ್ತು ಮುಂಬಯಿ ಶಿಕ್ಷಣ ಶಾಖೆಯ ಪತ್ರ್ಯಗಳಲ್ಲಿನ ಕೆಲವು ಪದ್ಯಗಳೂ ಈ ಜಾತಿಯುವಿವೆ–ಎಂದಿದ್ದಾನೆ ಹಿರಣ್ಯಗರ್ಭ. ಇವೆಲ್ಲ ಅಭಿಪ್ರಾಯಗಳು ಮೋಜಿನವು ಎಂದಷ್ಟೆ ಗ್ರಹಿಸಬೇಕು.

ಜೈನ ಪದ್ಯ ಸಂಗ್ರಹಗಳಲ್ಲಿ 'ನೀತಿಸಾರ'ವನ್ನು ಹೆಸರಿಸಬೇಕು. ಬ್ರಹ್ಮಸೂರಿಯ ಮಗ ಜ್ಞಾನೇಶ್ವರ ಪಂಡಿತನು ಇದನ್ನು ವಿವಿಧ ಕವಿಕೃತಿಗಳಿಂದ ಸಂಕಲಿಸಿದ್ದ. ಇದರಲ್ಲಿ ನೀತಿ ವಿಷಯಕ ಪದ್ಯಗಳಿವೆ (೧೮೯೫). ಕನ್ನಡ ಸಾಹಿತ್ಯಕ್ಕೆ ಜೈನಕವಿಗಳ ಕಾಣ್ಕೆಯ ವಿಷಯವಾಗಿ ವಿಸ್ತಾರವಾದ ಒಂದು ಲೇಖನವು ಇಲ್ಲಿ ಪೀಠಿಕೆಯಾಗಿ ಬಂದಿದೆ.

ಹರಿದಾಸರ ಹಾಡುಗಳ ಹಲವಾರು ಸಂಕಲನಗಳು ೧೯ನೆಯ ಶತಮಾನದಲ್ಲಿ ತಲೆದೋರಿದುದು ಒಂದು ಎದ್ದು ಕಾಣುವ ಸಂಗತಿ. ಮೊವ್‌ಗ್ಲಿಂಗ್ ಅದನ್ನು ಆರಂಭಿಸಿದವ ಎಂಬುದನ್ನು ನೋಡಿದ್ದೇವೆ. ಮಹತ್ವದ ಆಮೇಲಿನ ಸಂಗ್ರಹವೆಂದರೆ, ಮಡಕಶಿರದ ಬಾಲಕೃಷ್ಣರಾಯನಿಂದ ಸಂಪಾದಿತವಾದ 'ಪುರಂದರದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಎರಡು ಸಂಗ್ರಹಗಳು. ಮದ್ರಾಸದಲ್ಲಿ ಮುದ್ರಣಗೊಂಡ (೧೮೬೫) ಈ ಕೃತಿಗಳು ತೆಲುಗು ಲಿಪಿಯಲ್ಲಿವೆ. ೧೬ನೆಯ ಶತಮಾನದ ಸುಪರಿಚಿತ ದಾಸರಲ್ಲದೆ ವಿಜಯದಾಸರ ಪೀಳಿಗೆಯ ೧೦-೧೨ ಜನ ದಾಸರುಗಳ ಪದ್ಯಗಳನ್ನೂ ಆಯ್ದುಕೊಟ್ಟದ್ದಿದೆ.

## 32 ಸಂಧಿಕಾಲದ ಕವಿತೆ

ಇನ್ನೀಗ ಕಳೆದ ಶತಮಾನದ ಕಾವ್ಯನಿರ್ಮಿತಿಗೆ ಬರೋಣ. ಅದು ಮೊತ್ತದಲ್ಲಿ ಬಹು ದೊಡ್ಡದು. ಪೌರಾಣಿಕ ಕಥನ, ಮತಧರ್ಮ ನಿರೂಪಣೆ, ಭಕ್ತಾದಿಗಳ ಚರಿತ್ರೆ, ಯಕ್ಷಗಾನ ಮುಂತಾದವುಗಳ ಮೂಲಕ ಪದ್ಯರಚನೆಯು ಮುಂದೆ ಸಾಗಿತು. ಅದರಂತೆ ದಾಸವಾಙ್ಮಯ, ಜನಪದ ಗೀತೆಗಳು ಮತ್ತು ಶೃಂಗಾರದ ಹಾಡುಗಳು ಸಹ ವಿಪುಲ ಸಂಖ್ಯೆಯಲ್ಲಿ ದೊರೆಯುತ್ತವೆ. ಹೀಗೆ ಹಿಂದೆಂದೂ ಅಷ್ಟರಮಟ್ಟಿಗೆ ಬೆಳಕಿಗೆ ಬಂದಿರದ ಹಾಡುಗಳ ವೈವಿಧ್ಯವು ಬೆರಗುಗೊಳಿಸುವಂತಿದೆ.

ಆದರೆ ಆಯ್ದುಕೊಂಡ ವಸ್ತುವಿನಲ್ಲಿ ಮತ್ತು ಹೇಳಿದ ರೀತಿಯಲ್ಲಿ ಹೊಸತನವಿಲ್ಲ. ಹಳೆಯ ಸಂಸ್ಕೃತ ಹಾಗೂ ಕನ್ನಡ ಕಾವ್ಯಗಳ ವ್ಯಾಸಂಗದಿಂದ ಬಂದ ಪರಿಜ್ಞಾನವೇ ಆಗಿನ ಕವಿತೆಯ ಮೂಲದ್ರವ್ಯವಾಗಿತ್ತಲ್ಲದೆ ಸ್ವಾನುಭವವಲ್ಲ. ಕಾವ್ಯವಸ್ತುವು ಪುರಾಣಗಳಲ್ಲಿಯ ಅತಿಮಾನುಷ ಹಾಗೂ ಆಧಿದೈವಿಕ ಅಂಶಗಳನ್ನೇ ಹೆಚ್ಚಾಗಿ ಒಳಗೊಂಡಿದ್ದಿತು. ಬುದ್ಧಿಯ ಬೆಡಗಿನಿಂದ ಹೊಮ್ಮಿದ ಉಕ್ತಿ ಚಮತ್ಕಾರ ಮತ್ತು ಕಾವ್ಯಶಾಸ್ತ್ರದ ನಿಯಮಗಳ ಕಟ್ಟುನಿಟ್ಟಿನ ಅನುಸರಣೆ-ಇವುಗಳಿಂದಾಗಿ ಕಾವ್ಯಮಾರ್ಗವು ಕೃತಕವಾಯಿತು.

ಜೊತೆಗೆ ಪದ್ಯಬಂಧವು ಶಿಥಿಲಗೊಂಡಿತು. ಅದಕ್ಕೆ ಭಾಷಾಪರಿವರ್ತನೆಯೇ ಮುಖ್ಯ ಕಾರಣ. ಹಳಗನ್ನಡ ಭಾಷೆಯ ಬಿಗುವು ನಡುಗನ್ನಡ, ಹೊಸಗನ್ನಡದ ವೇಳೆಗೆ ಸಾಕಷ್ಟು ಸಡಲಿದ್ದಿತು. ಚಂಪೂ ಮತ್ತು ಇತರ ಕಡೆಗೆ ಕಂಡುಬಂದ ಅಕ್ಷರವೃತ್ತಗಳಿಗಂತೂ ಈ ನುಡಿಕಟ್ಟು ಹೊಂದಿಕೊಳ್ಳುವಂತಿರಲಿಲ್ಲ. ಮಾದರಿಯೆಂದು, ೧೯ನೆಯ ಶತಮಾನದ

ಉತ್ತರಾರ್ಧದಲ್ಲಿ ರಚಿತವಾದ ಮತ್ತೇಭವಿಕ್ರೀಡಿತದ ಈ ಪದ್ಯವನ್ನು ಕೊಡುತ್ತೇವೆ. 'ಯಂ ಶೈವಾ ಸಮುಪಾಸತೇ' ಎಂಬ ಸುಪ್ರಸಿದ್ಧ ಶಾಸನ ಪದ್ಯದ ಅನುವಾದವಿದು :

> ಶಿವನೆಂದಾವನ ಶೈವರಾಶ್ರಯಿಪರೊ ನೈಯಾಯಿಕರ್ತರ್ಕನೆಂ-
> ನುವರಂ ಬೊಮ್ಮಮೆನುತ್ತೆ ವೇದವಿದರರ್ಹನ್ನೆಂದು ಜೈನರ್ಕಳು-
> ತ್ಸವದಿಂ ಬುದ್ಧನೆನುತ್ತೆ ಬೌದ್ಧಮತ ಸಂಜಾತರ್ಕಳೊಲ್ದಾರ ಮಾ-
> ಧವನೆಲ್ಲಾ ಜಗದಾಣ್ಮನೆಮ್ಮನನಿಶಂ ಪಾಲಿಕ್ಕೆ ನಾರಾಯಣಂ ॥

ಹತ್ತೊಂಬತ್ತನೆಯ ಶತಮಾನವು ಈ ಬಗೆಯ ಸಂಪ್ರದಾಯನಿಷ್ಠವಾದ ಕಾವ್ಯರಚನೆಯನ್ನು ಉಳಿಸಿಕೊಂಡು ಬಂದಂತೆ ಹೊಸ ಬಗೆಯ ಕವಿತೆಗೂ ಜನ್ಮವೆತ್ತಿದೆ. ಲೇಖಕನ ಸ್ವಾನುಭವದ ಅಭಿವ್ಯಕ್ತಿಗೆ ಇಂಬು ದೊರೆತು ಧರ್ಮವೊಂದೇ ಪ್ರಧಾನ ವಿಷಯವೆಂಬ ಪ್ರಮೇಯವು ಮೆಲ್ಲನೆ ಹಿಮ್ಮೆಟ್ಟತೊಡಗಿತು.

ಹಳೆಯ ವೃತ್ತಗಳಲ್ಲಿ ಬರೆದಿದ್ದರೂ ಲೇಖಕನ ಸ್ವಾನುಭವವನ್ನು ಒಳಗೊಂಡ ಚಿಕ್ಕ ಕೃತಿಯನ್ನು ಇಲ್ಲಿ ಕೊಡಬಯಸಿದೆ. ಅದರ ಹೆಸರು 'ಶ್ರೀಕೃಷ್ಣವರ್ಷವರ್ಧಂತೀ ಶತಕ'. ಮುಮ್ಮಡಿ ಕೃಷ್ಣರಾಜರ ಹುಟ್ಟುಹಬ್ಬದ ಒಂದು ಸಮಾರಂಭವನ್ನು ನೋಡಲೆಂದು ಶ್ರೀ ವಾಸ ಎಂಬ ಕವಿಯು ಹೆಂಡತಿ ಮಕ್ಕಳೊಡನೆ, ತನ್ನ ಹುಟ್ಟೂರಾದ ಗೋಕರ್ಣದಿಂದ ಹೊರಟು ಮೈಸೂರಿಗೆ ಬರುತ್ತಾನೆ. ಅಲ್ಲಿಯ ಚಾಮುಂಡಿ ಬೆಟ್ಟದ ವನಶ್ರೀ, ಬಳಿಯಲ್ಲಿಯ ಕೆರೆ, ಕೋಟೆ, ರಾಜಮಾರ್ಗ, ಅರಮನೆ, ಅಲ್ಲಿಯ ಚಿತ್ರಗಳು ಇವನ್ನೆಲ್ಲ ತೋರಿಸಿಕೊಂಡು ಬರುತ್ತಾನೆ. ಅನಂತರ ಕೆರೆಯ ಮೇಲೆ ಸಂಧ್ಯಾವಂದನೆ ಮುಗಿಸಿ ನಂದನರ ಸಹಿತ ರುಚಿ ಭೋಜನವ ಮಾಡಿ, ನಿಜಸತಿ ರಚಿತ ಶಯನದಲ್ಲಿ, ನರಹರಿಯನ್ನು ನೆನೆಯುತ್ತಾ ಮಲಗುವನು. ಮರುದಿನ ನಸುಕಿನಲ್ಲಿ ಮಂಗಳ ವಾದ್ಯಗಳು ಮೊಳಗುತ್ತಲೂ ಬೇಗ ಮಕ್ಕಳನ್ನು ಎಬ್ಬಿಸಿ, ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಹೊರಡುತ್ತಾನೆ. ದಾರಿಯಲ್ಲಿ ಪುರನಾರಿಯರು ಹೊರಡುವ ಸಂಭ್ರಮದಲ್ಲಿ ಇದ್ದದ್ದು ಕೇಳಬರುತ್ತದೆ:

> ಗಂಗಮ್ಮ ನೀನೇಟಿ, ರಂಗನಾಯಕಿ ಬಾರ,
> ನಿಂಗಮ್ಮ ಬರುವಿಯೊ, ಸಾವಿತ್ರಿ ತಡವೇಕೆ
> ಸಿಂಗಮ್ಮ ನಿಮ್ಮತ್ತೆಯೇಕೆ ಬರಲಿಲ್ಲವೆ, ಗೌರಿ ನೀನೆಲ್ಲಿ ಪೋಪೆ
> ತಂಗಿ ಜಡೆಗಟ್ಟುವೆನು ಬೇಗೇಳು ಬಾಗಮ್ಮ
> ಸಿಂಗರಿಸಿಕೊಳ್ಳೆ ಯಲಮೇಲ ಮಂಗಮ್ಮ ನೀಂ
> ಮಂಗಳ ಸ್ನಾನಮಂ ಗೈಯೆಂಬ ಮುತ್ತೈದೆಯರ ಕೂಗು.

ಕಿವಿಗೆ ಕೇಳಿಸಿತಂತೆ. ಈ ಕೆಳಗಿನದು ವೃದ್ಧ ಮುತ್ತೈದೆಯವರ ಬಣ್ಣನೆ:

ಬಾಯಳೊಂದಾದರುಂ ಹಲ್ಲಿಲ್ಲದಗಿಯುವರ-
ನಾಯಾಸದಿಂದಲ್ಲಿಗಲ್ಲಿ ನಡುವೆತ್ತುವ
ಕಾಯವಂ ನಡುಗಿಸುತ ಕೋಲೂಜಿ ನಡೆವವರ ಬಿಳುವಲೆಯ ಕಟ್ಟುವರನು
ರಾಯನಿಗೆ ಗೋಧಿ ಕಲ್ಲೆಣ್ಣೆ ಶಾಸ್ತ್ರಂಗಳಂ
ಗೈಯಲೋಸುಗ ತಮ್ಮ ಮರಿಮಕ್ಕಳೊಡನೆ ಸುನಿ-
ಕಾಯದಿಂದ್ಯೆತಪ್ಪ ವೃದ್ಧ ಮುತ್ತೈದೆಯರ ತಂಡಮಂ ನೋಡು ಕಾಂತೆ ॥

ಇದೇ ಬಗೆಯ ಸೂಕ್ಷ್ಮ ಅವಲೋಕನದಿಂದ ಕವಿಯು ಇತರ ಜನರ ವರ್ಣನೆ ಮಾಡಿದ್ದಾನೆ. ರಾಣೀವಾಸದ ವರ್ಣನೆ ಬೇಕಲ್ಲ. ಅಲ್ಲಿಗೆ ಹೋಗಿ ಬಂದ ಓರ್ವ ಸ್ತ್ರೀ, ಇವನ ಹೆಂಡತಿಗೆ ಹೇಳಿದಂತೆ ವಿವರಿಸಿ ಔಚಿತ್ಯವನ್ನು ಉಳಿಸಿಕೊಂಡಿದ್ದಾನೆ! ಮುಂದೆ, ಮುಖ್ಯ ಸಮಾರಂಭ ಕಾಲದಲ್ಲಿ ಆಸ್ಥಾನಕ್ಕೆ ಬಂದಾಗ ಮಕ್ಕಳಿಗೆ ಇಂಗ್ಲಿಷ್ ವಾದ್ಯಗಳನ್ನು ವರ್ಣಿಸತೊಡಗುವನು. ಆದರೆ ಅಷ್ಟರಲ್ಲಿ 'ಜರ್ನಲ್ಲು, ಕರ್ನಲ್ಲು ಮೊದಲಾದ ಸರದಾರ-ರೈತಂದರಂತೆ! ರಾಜನ ಸನ್ಮಾನಾರ್ಥ ತೋಪುಗಳು ಹಾರಿದಾಗ ಅದರ ಹೊಗೆಯಲ್ಲಿ ಜನಸಮೂಹವೆ ಕಾಣದಾಯ್ತು. ಆಗ ಕವಿಗೆ ಹೆಂಡತಿ-ಮಕ್ಕಳ ಕಾಳಜಿ! "ನೀನೆಲ್ಲಿಪ್ಪೆ? ಮಕ್ಕಳೆಲ್ಲಿ? ಪ್ರಳಯದೊಳಗಾರ್ಭಟಪ ಮೇಘರವಗಳ ತೆರದಿ ಮೊಳಗುತಿವೆ ತೋಪುಗಳು. ಬಾಲಕರ್ ಬೆದುರುವರ್, ನಿಲಲು ಕೂಡದು. ಬೇಗ ಮಕ್ಕಳನ್ನೆತ್ತಿಕೊ" ಎಂದು ಹೇಳುತ್ತಾನೆ. ಅಂತೂ ಉತ್ಸವದ ಕಾರ್ಯಕ್ರಮ ಮುಗಿಯುತ್ತದೆ. ಹೊರಗೆ ಬಂದಮೇಲೆ ನಂದನರನ್ನು ಕುರಿತು 'ಸಂತೋಷವಾಯಿತೆ ನಿಮಗೆಂದು ಕೇಳುತ್ತಾ' ಹಿಂತಿರುಗುವನು.

ಹಳತು-ಹೊಸತು ಎರಡನ್ನೂ ಮೇಳವಿಸಿಕೊಂಡ ಸಂಧಿಕಾಲದ ಅದರಂತೆ ಕಲ್ಪಕತೆಯಿಂದ ಕೂಡಿದ ಸೊಗಸಾದ ಕೃತಿರಚನೆಯಿದು. ೧೮೫೦ನೆಯ ದಶಕದಲ್ಲಿ ರಚಿತವಾದ ಈ ಕೃತಿಯು ಕನ್ನಡದಲ್ಲಿ ಇಡಿಯಾಗಿ ಬಂದ ಪ್ರಥಮ ಪ್ರವಾಸ ಗ್ರಂಥವೂ ಆಗಿದೆ !

ಪ್ರಚಲಿತವಾದ ಯಾವುದೇ ಸಾಮಾನ್ಯ ಅಂಶವನ್ನು ತಾನು ಕಂಡಂತೆ ತನಗೆ ಅನಿಸಿದಂತೆ ಹೇಳುವ ಈ ಹೊಸ ವಿಚಾರ ಪ್ರಣಾಲಿಯೇ ಭಾವಗೀತೆಗೆ ಪ್ರೇರಕವಾಯಿತು. ಇಂಥ ಭಾವಗೀತೆಯು ಕನ್ನಡಕ್ಕೆ ಹೊಸದೇನಲ್ಲ. ದಾಸರ ಹಾಡುಗಳೆಂದರೆ ಅವರ ಭಕ್ತಿಭಾವದ ಅನುಭವವಾಣಿಯೇ ಸೈ. ಅವುಗಳಿಗೂ ಇಂದಿನ ಭಾವಗೀತೆಗಳೂ ಇರುವ ಅಂತರವೆಂದರೆ ದಾಸರ ಮೂಲ ದೃಷ್ಟಿಯು ಮತಧರ್ಮ, ಭಗವದ್ಭಕ್ತಿಗಳಲ್ಲಿ ನೆಲೆಗೊಂಡದ್ದಾಗಿತ್ತು. ಪರಂಪರಾಗತ ಕವಿಕರ್ಮದಲ್ಲಿ ವೈಯಕ್ತಿಕ ಭಾವನೆಗಳು ಕಾವ್ಯದಲ್ಲಿ ಮೂಡುವುದಕ್ಕೆ ತಕ್ಕ ಅವಕಾಶವಿರಲಿಲ್ಲ. ಅದೇ, ಹೊಸ ಭಾವಗೀತೆಯು ಈ ಮಿತಿಗಳನ್ನು ದಾಟಿಕೊಂಡು ಸ್ವಚ್ಛಂದವಾಗಿ ಹರಿಯಬಯಸಿತು. ಮತಧರ್ಮಕ್ಕಿಂತ ಕಾವ್ಯಧರ್ಮವೇ

ಅವುಗಳ ಪ್ರೇರಣೆಯಾಯಿತು. ದೇವರನ್ನು ಕುರಿತ ಅಥವಾ ಭಕ್ತಿ ಭಾವವನ್ನು ವ್ಯಕ್ತಗೊಳಿಸುವ ದಾಸರ ಮತ್ತು ಆಗಿನ ಕೆಲವು ಶಿವಶರಣರ ಹಾಡುಗಳಿಗೂ ಆಧುನಿಕ ಕವನಗಳಿಗೂ ಇರುವ ಅಂತರ ಇದೇ ಆಗಿದೆ.

ಇನ್ನೊಂದು ಅಂತರವೆಂದರೆ ದಾಸರ ಕೃತಿಗಳು ಹಾಡಿನ ರೂಪದಲ್ಲಿ ಅಂದರೆ ಪಲ್ಲವಿ, ಅನುಪಲ್ಲವಿ ನುಡಿಗಳಲ್ಲಿವೆ. ಆಧುನಿಕ ಭಾವಗೀತದಲ್ಲಿ ಕವಿಯು ಹೇಳಬೇಕೆಂದಿರುವ ವಿಷಯವು ಕ್ರಮೇಣ ಮುಂದುವರೆಯುತ್ತಾ ಅಂತ್ಯದಲ್ಲಿ ಒಂದು ವಿಶಿಷ್ಟ ಘಟ್ಟವನ್ನು ತಲುಪಿ, ಪರಿಪೂರ್ಣವಾದ ಭಾವವೊಂದನ್ನು ನಮ್ಮ ಮುಂದೆ ನಿಲ್ಲಿಸುತ್ತದೆ.

ತುಲನಾತ್ಮಕವಾಗಿ ಜನಪದ ಹಾಡುಗಳು ಇಂದಿನ ಭಾವಗೀತಕ್ಕೆ ಹೆಚ್ಚು ಸಮೀಪವಾಗಿದೆ. ಏಕೆಂದರೆ ಅವುಗಳ ವಿಷಯವು ಸಾಮಾನ್ಯ ಜೀವಿಗಳ ಸುಖ ದುಃಖಗಳಿಗೆ ಸಂಬಂಧಪಟ್ಟುದು. ಅಲ್ಲದೆ ಕಾವ್ಯ ಲಕ್ಷಣದ ನಿಯಮಗಳಿಗೆ ಒಳಪಡದೇ ನೇರವಾಗಿ ಸರಳ ನಿರೂಪಣೆಯು ಅವುಗಳಲ್ಲಿ ಕಂಡುಬರುತ್ತದೆ. ಇದಕ್ಕೊಂದು ಉದಾಹರಣೆ ಕೊಡುವೆ:

ಫಕೀರೇಶ ತಂದೆ । ನಾ ನಿಮ್ಮ ನಂಬಿ ಬಂದೆ  
ಪೊರೆಯಯ್ಯ ಎಂದೆ । ನಾ ನಿಮ್ಮ ಕಂದನೆಂದೆ ೧  
ಭವದಲ್ಲಿ ಬಂದೆ । ನಿಮ್ಮಗಲಿ ಬೆಂದೆ  
ದುಃಖದಿ ನೊಂದೆ । ಭವತಾಪ ಹರನೆಂದೆ ೨  
ತವನಾಮವೆಂದೆ । ನಿಜಸುಖದಿ ನಿಂದೆ  
ತೆಲಸಂಗ ಕಂದನ । ಅನುದಿನ ಸಲಹೆಂದೆ ೩

ಇದಕ್ಕಿಂತ ನೇರ ಸರಳ ಅಭಿವ್ಯಕ್ತಿ ಬೇರೆಲ್ಲಿಯೂ ನನಗೆ ನೋಡಸಿಕ್ಕಿಲ್ಲ ! ಈ ತೆಲಸಂಗ ಕಂದನು ನೆನೆದದ್ದು ಶಿರಹಟ್ಟಿ ಫಕೀರೇಶ್ವರ ಸ್ವಾಮಿಗಳನ್ನು.

ಸಾಹಿತ್ಯ ಪ್ರಪಂಚದಲ್ಲಿ ಆಂದೋಲನವು ಒಮ್ಮೆಲೆ ಹೊರಹೊಮ್ಮುವುದಿಲ್ಲ. ಹಿಂದಿನಿಂದ ನಡೆದು ಬಂದ ಪರಂಪರೆಯಲ್ಲಿಯೆ ಅವರ ಬೀಜಗಳು ಹುದುಗಿಕೊಂಡಿರುತ್ತವೆ. ಅದರಲ್ಲಿಯೂ ಸಂಪ್ರದಾಯದಲ್ಲಿ ಹೆಚ್ಚು ನಿಷ್ಠೆಯಿಂದ ಬೆಳೆದ ಕನ್ನಡಿಗರು ಹಳಗನ್ನಡ, ನಡುಗನ್ನಡಗಳ ಕಾವ್ಯಪರಂಪರೆಯನ್ನು ಒಮ್ಮೆಲೆ ಬಿಟ್ಟುಕೊಡುವುದು ಸಾಧ್ಯವಿರಲಿಲ್ಲ. ಹೀಗೆ ೧೯ನೆಯ ಶತಮಾನದ ಕಾವ್ಯವು ಮೂಲದಲ್ಲಿ ಹಳೆಯ ಜಾಡನ್ನು ಹಿಡಿದೇ, ಹೊಸ ರೀತಿಯತ್ತ ಸಾಗಲು ಹವಣಿಸುತ್ತಿತ್ತು.

ಹಳೆಯ ಹಾಗೂ ಹೊಸ ಕಾವ್ಯಬಂಧವನ್ನು ಜೊತೆಯಾಗಿ ಹೆಣೆದುಕೊಂಡು ಬಂದ ಶ್ರೇಯಸ್ಸು ಕಾವ್ಯದ ಗೇಯತೆಗೆ ಸಲ್ಲಬೇಕು. ಕಂದ, ಷಟ್ಪದಿ, ಅಕ್ಷರ ವೃತ್ತಗಳಂಥ ಪರಿಚಿತ ಛಂದೋರೂಪಗಳಂತಿರಲಿ, ಜನಸಾಮಾನ್ಯರಲ್ಲಿ ಹರಿದುಬಂದ ಅನೇಕ ರಾಗದ

ಮಟ್ಟುಗಳು ಶತ ಶತಮಾನಗಳಿಂದ ಉಳಿದುಕೊಂಡು ಬಂದಿವೆ. ಅವುಗಳ ಭಾಷೆ, ಹೆಸರುಗಳು ಬದಲಾಗಬಹುದು. ಆದರೆ ಛಂದೋಲಯವು ಒಂದೇ ಆಗಿ ನಿಂತಿದೆ. ದಾಸರ ಸಾವಿರಾರು ಸಂಖ್ಯೆಯ ಮಟ್ಟುಗಳು, ಅದರಂತೆ ಹಳ್ಳಿಗರ ಹಾಗೂ ಯಕ್ಷಗಾನ ಭಾಗವತರ ಪರಿಚಯದ ಹಲವಾರು ಧಾಟಿಗಳು ಆಧುನಿಕ ಕವಿಗಳ ವರೆಗೂ ದಾಟಿಕೊಂಡು ಬಂದಿವೆ. ವಿವಿಧ ಕಾಲದಲ್ಲಿ ರಚಿತವಾದ ತ್ರಿಪುಡೆಯ ಈ ಪದ್ಯಗಳನ್ನು ನೋಡಬಹುದು. (ಅದರ ಛಂದೋಲಕ್ಷಣವಿಂತಿದೆ: ಮಾತ್ರೆಗಳು–೩.೪ ೩.೪।೩.೪೩.೨ ಅಥವಾ ೩.೪।೩.೪× ಮೂರು ಸಲ +೩.೨

ಪಾಲಯಾಚ್ಯುತ ಪಾಲಯಾಜಿತ।ಪಾಲಯಾ ಕಮಲಾಲಯಾ
ಲೀಲಾಯಾದ್ಭುತ ಬೋಧರಾಂಬುರು।ಹೋದರಸ್ವಜನೋದರ

**– ವಾದಿರಾಜರು (೧೬ನೆಯ ಶತ)**

ಎಂದು ಕಾಬೆನೂ ಎನ್ನ ಸಲಹುವ।ತಂದೆ ಉಡುಪಿಯ ಜಾಣನಾ

**– ಪ್ರಸನ್ನವೆಂಕಟದಾಸ (೧೭ನೆಯ ಶತ)**

ಮಗನೆ ನೀನಿಂತಳಿಯೆ ಸೈರಿಪೆ।ನೆಂತು ಪೇಳ್ವೆ ಶಂಕರಾ

**– ಷಡಕ್ಷರಿ (೧೭ನೆಯ ಶತ)**

ತಂಪುಗಾಳಿಯು ಬೀಸುತಿರಲುರೆ।ತಾಳದಲೆ ತಳಮಳಿಸುತಿರುವಳು

**– ಚುರಮುರಿ ಶೇಷಗಿರಿರಾಯ (೧೮೭೦)**

ಗಿರಿಜೆ ವರನನು ಬಯಸಿ ಬಂದಳು
ಹರನನು–ಶಶಿಧರನನುಽ
ಹರನ ತಪವನು ಮುರಿಯ ಬಂದನು
ಮಾರನುಽ–ಸುಕುಮಾರನುಽ

**– ಎಸ್.ಜಿ. ನರಸಿಂಹಾಚಾರ್(೧೯೦೭)**

ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೊ

**– ಪಂಜೆ ಮಂಗೇಶರಾಯ (ಸು. ೧೯೨೫)**

ಇನ್ನೊಂದು ವೃತ್ತದ ಉದಾಹರಣೆ : ಪ್ರಾಣೇಶವಿಠ್ಠಲ ವಿರಚಿತ 'ಪಾರ್ಥ ವಿಲಾಸ'ವೆಂಬ ಖಂಡ ಕಾವ್ಯದಲ್ಲಿ ಆರ್ಯಾವೃತ್ತದ ಪದ್ಯವೊಂದಿದೆ. (ಸುಭದ್ರಾಹರಣಕ್ಕೆಂದು ಪಾರ್ಥನು ಸನ್ಯಾಸಿ ವೇಷವನ್ನು ತಾಳಿಬಂದಾಗ ಕೃಷ್ಣನು ಬಲರಾಮನಿಗೆ ಹೇಳುವ ಮಾತಿದು.)

ಅಣ್ಣಾ, ಹಿರಿಯರು ನೀವಿರಲಿಕ್ಕೆ
ಸಣ್ಣವ ಎನಗಾ ಚಿಂತ್ಯಾಕೆ

ಸನ್ಯಾಸಿಯ ಕರತಂಡಾಗಾರದಿ
ಹೆಣ್ಣುಗಳಿದ್ದಲ್ಲಿಡಬೇಕೆ

ಇದೇ ವೃತ್ತ ಧಾಟಿಯಲ್ಲಿರುವ ಅಂಬಿಕಾತನಯದತ್ತರ ಈ ಪದ್ಯವನ್ನು ಗಮನಿಸಬೇಕು:–

ಉತ್ತರ ಧ್ರುವದಿಂ ದಕ್ಷಿಣ ಧ್ರುವಕು
ಚುಂಬಕ ಗಾಳಿಯು ಬೀಸುತಿದೆ.
ಸೂರ್ಯನ ಬಿಂಬಕೆ ಚಂದ್ರನ ಬಿಂಬವು
ರಂಬಿಸಿ ನಗೆಯಲಿ ಮೀಸುತಿದೆ.

## 33 ರಂಗಭೂಮಿಯ ಹಾಡುಗಳು

ಕಳೆದ ಶತಮಾನದಲ್ಲಿ ರಚಿತವಾದ ಅನೇಕ ಹಾಡುಗಳಿಗೆ ಜಾನಪದ ರಂಗಭೂಮಿಯು ಪ್ರಮುಖ ಪ್ರೇರಣೆಯನ್ನು ಒದಗಿಸಿತು. ಆ ಕಾಲದಲ್ಲಿ ರಚಿತವಾದ ಪೌರಾಣಿಕ ನಾಟಕಗಳು ಇಂಥ ಹಾಡುಗಳನ್ನು ಒಳಗೊಂಡಿವೆ. ಈ ಬಗೆಯ ಹಾಡುಗಳಿಂದಲೇ ಪ್ರಸಿದ್ಧಿ ಹೊಂದಿದ್ದ ಚುರಮುರಿ ಶೇಷಗಿರಿರಾಯರ ಶಾಕುಂತಲದಲ್ಲಿ, ಅಷ್ಟಿಷ್ಟಲ್ಲ; ೮೦ ಹಾಡುಗಳಿವೆ. ಪ್ರತಿಯೊಂದು ಹಾಡಿನ ರಾಗ, ತಾಳಗಳನ್ನೂ ಅದೇ ರಾಗ-ತಾಳದ ಪೂರ್ವ ಪರಿಚಯದ ಇನ್ನೊಂದು ಹಾಡಿನ ಪ್ರಥಮ ಚರಣ/ಪಲ್ಲವಿಯನ್ನೂ ಕೊಡಲಾಗಿದೆ. ಅದರ ಮೂಲಕ ಕನ್ನಡದ ಅನೇಕ ಅಜ್ಞಾತ ಹಾಡುಗಳ ಅಸ್ತಿತ್ವವು ನಮಗೆ ತಿಳಿದು ಬಂದಂತಾಗಿದೆ. ಒಂದೆರಡು ಕಡೆಗಳಲ್ಲಿ 'ಚಿಕ್ಕದೇವನ ಪದದಂತೆ' 'ಹೇಮಾದ್ರೀಶನ ಕನ್ನಡ ಅಷ್ಟಪದಿಯೊಳಗಿನ ಪದದಂತೆ' ಎಂಬುದಾಗಿ ವಿಶೇಷಿಸಲಾಗಿದೆ. ಈ ಕವಿದ್ವಯರು ಯಾರು ಮತ್ತು ಅವರು ಬರೆದ ಕೃತಿಗಳಾವುವೆಂಬುದು ಮುದ್ರಿತ ರೂಪದಲ್ಲಿ ಬೆಳಕಿಗೆ ಬಂದಿಲ್ಲ.* ಅದಂತಿರಲಿ. ಶೇಷಗಿರಿರಾಯರು ಮಾದರಿಗಾಗಿ ಕೊಟ್ಟ ಶೃಂಗಾರ ವಿರಹಗಳಿಗೆ ಸಂಬಂಧಪಟ್ಟ ಪದ್ಯಗಳಲ್ಲಿ ಕೆಲವನ್ನು ಕೃಷ್ಣನ ಗೋಪಿಕಾ ವಿಲಾಸಕ್ಕೆ ಮೀಸಲೆಂಬುದಾಗಿ ಥಟ್ಟನೆ ಗುರುತಿಸಬಹುದು. ಅವುಗಳ ಆಕರವೆಂದರೆ–ಅಪರಾಳ ತಮ್ಮಣ್ಣನ 'ಶ್ರೀಕೃಷ್ಣ ಪಾರಿಜಾತ'. ಉಳಿದವುಗಳ ಆಕರವಾವುದೆಂಬುದು ತಿಳಿಯದು. ಏನಿದ್ದರೂ ರಸಿಕ ಜನತೆಯ ಬಾಯಿಯಲ್ಲಿ ಇವು ಇದ್ದುವೆಂದೇ ಅವುಗಳ ಮೊದಲಿನ ಚರಣಗಳನ್ನೂ, ಧಾಟಿಯನ್ನೂ ಶೇಷಗಿರಿರಾಯರು ಉಲ್ಲೇಖಿಸಿದ್ದಾರೆ. ಅವು ಹೊಸಗನ್ನಡದ ಪ್ರೇಮ ಕವನಗಳ ಮಾದರಿಯಿಂದ ಬೇರ್ಪಡಿಸಲಾಗದಂತಿವೆ. ಪ್ರೇಮಿಗಳ ಬಗೆಯನ್ನು ಕ್ರಮಬದ್ಧವಾಗಿ ಚಿತ್ರಿಸುವ ರೀತಿಯಲ್ಲಿ ಕೆಲವನ್ನು ಇಲ್ಲಿ ಕೊಡುತ್ತೇವೆ :–

---

* ಈ ಬಗ್ಗೆ ಹೆಚ್ಚಿನ ಮಾಹಿತಿಗೆ ನೋಡಿ: 'ವೆಂಕಟಕವಿ ಒಂದು ಟಿಪ್ಪಣಿ' – ಎಸ್.ಶಿವಣ್ಣ, [illegible], ಕಸಾಪ – ೨೦೦೨.

ಒಂದು ಗಂಡು ತನ್ನ ಕನ್ಯೆಯನ್ನುದ್ದೇಶಿಸಿ ಹೇಳುವ ಮಾತಿದು :–

ಮುದ್ದು ಬಾಲೆ ಬಾರ ಬಾರೆ ಬಾ
ನಿನ್ನ ಮುಖದ ಲಾವಣ್ಯವನ್ನು ನೋಡಿ
ಹುಣ್ಣಿಮೆ ದೊರೆಯು ಸಣ್ಣನಾಗಿ ಶಿವನನ್ನು ಸೇರಿದಾ.

ಬಾಲೆಯೇನೋ ಹತ್ತಿರ ಬರುತ್ತಾಳೆ. ಆದರೆ ಅನ್ಯ ಸ್ತ್ರೀಯರ ಮಧ್ಯದಲ್ಲಿ ಅವನನ್ನು ಕಂಡು ಹೋಗಿಬಿಡುತ್ತಾಳೆ :–

ಹರಹರಾ ಆದರಿಸದಾದೆ
ಸ್ತ್ರೀ ಸಮೂಹದೊಳೆನ್ನ ಕಾಣುತ್ತ
ಸರಿದಳೆತ್ತಲೊ ರೋಷದಿ.

ಆದರೆ ಅದು ಕ್ಷಣಿಕ. ಮತ್ತೊಮ್ಮೆ ಆಕೆ ಸುಳಿದಾಗ–

ತಿರುಗಲಿಲ್ಲೆನ್ನ ಮನ ವನಿತೆಯ ಬಳಿಗ್ಹೋಗೀ
ಮರುಗಿ ಮರುಗಿ ಮರುಗೀ ದಣಿದೆ ನಾನಿದಕಾಗೀ

ಎಂದುಕೊಳ್ಳುತ್ತಾನೆ. ಕೊನೆಗೊಮ್ಮೆ ಆಕೆಯು ಹತ್ತಿರ ಬಂದು ತೋರಿದ ಮಮತೆಯ ಕುರುಹು ಮರೆಯದಂತಹುದು–

ಮರೆಯಲಾರೆನೆ ಮಮತೆ ಮರೆಯಲಾರೆನೆ
ಮರೆಯಲಾರೆ ಮದುವೆಯೊಳಗೆ
ನೆರೆದವರೊಳು ಸರಿದು ಬಂದು ತನ್ನ
ಬೆರಳುಂಗರದಲಿರಿದು ಮುಸುಕು
ಮರೆಯಲಿ ಮುಖದಿರುಹಿದವಳ.

ಇವು ಬೇರೆ ಬೇರೆ ಸಂದರ್ಭಗಳಲ್ಲಿ ಕೊಡಲಾದವು. ಕೇವಲ ಆರಂಭದ ಚರಣಗಳು ಅಷ್ಟರಿಂದಲೆ ಈ ಶೃಂಗಾರ ಚಿತ್ರವನ್ನು ಹೆಣೆಯಲಾಯಿತು. ಇನ್ನು ಹೆಣ್ಣಿನ ದೃಷ್ಟಿಯಿಂದ ನೋಡೋಣ :–

ಹೇಗಿರಲೆ ನಾನು, ಕಾಂತಾ ಎನಗೆ ಎರವಾದನೆ
ಸಣ್ಣವಳೆಂದೆನ್ನ ಬಣ್ಣಿಸಿ ಕರೆದೊಯ್ದು ಬಣ್ಣದ ಮಾತಾಡಿ ಪೋದನೆ.

ಬೆದರಬ್ಯಾಡೋ ಮದನಸುಂದರಾ
ಆ ಸಖಿಯ ಭಯದಿ
ಬೆದರ ಬ್ಯಾಡೊ ಪ್ರಿಯಾಽ ಚದುರೆಯ
ಕಡೆಯವರು ಎನ್ನ
ಸದನಽದ ಕಡೆ ಸುಳಿಯುದಿಲ್ಲಾ

ಮದನ ಕದನದೊಳುಃ ಮನದಿ.
ಬೆಳಗಾದ ಮ್ಯಾಲೆ ಬ್ಯಾಸರಿಸುವುದೊಳಿತೆ ಸುಂದರಾ
ಉಳಿಸೆನ್ನ ಮಾನ ವಂದಿಸುವೆ
ಮೋಹಾಬ್ಧಿ ಚಂದಿರಾ.

ಇದು ಒಲಿದು ಬಂದ ಹೆಣ್ಣಿನ ಭಾವವಾದರೆ ವೇಶ್ಯಾವಾಟಿಯಲ್ಲಿದ್ದವಳೊಬ್ಬಳ ಅಳಲಿನ ಬಗೆ ಇಂತಿದೆ :-

ಯಾಕೆ ಪ್ರಾಯವು ಬಂತಮ್ಮಾ ?
ಚಿಕ್ಕವಳು ನಾ ಹ್ಯಾಗ ತಾಳಲೆ ಹೆತ್ತಮ್ಮಾ
ಮದಗಜಗಮನೆಯರು ಮಲಗುವ ವೇಳೆ
ಸದನಕೆ ಕರೆದೊಯ್ವರು.

ರಂಗಭೂಮಿಯ ಹಾಡುಗಳಲ್ಲಿ, ವಿನೋದವನ್ನು ಹೊರಡಿಸುವಂಥ ಪದ್ಯಗಳೂ ಅಲ್ಲಲ್ಲಿ ಕಾಣುತ್ತವೆ. ಕಣಿಂಬಲೆ ಬಾಳಾಚಾರ್ಯ ವಿರಚಿತ ಪದ್ಮಾವತೀ ಪರಿಣಯ ನಾಟಕದಲ್ಲಿ ವಿದೂಷಕ ಮತ್ತು ಅವನ ಸಂಗಡಿಗರು ಆಕಾಶರಾಜನ ಪಟ್ಟಣದಲ್ಲಿ ಮದುವೆಯ ಊಟಕ್ಕೆ ಹೊರಟಾಗ ಹಾಡಿದ ಕೋರಸ್ ಒಂದಿದೆ. "ರಾಗ-ಇಂಗ್ಲಿಷ್ ನೋಟು-ತಾಳ ಚಾಪು"! ಅದರ ಕೆಲ ಪದ್ಯಗಳು ಇಂತಿವೆ :-

ಅಳೊನ ಮನೆಯಲ್ಲಿ ಮ್ಯಾಳಗಳೆನುತಿರ
ಕೂಳುಗಳ್ ಬಿಡುವೆ ವಂದ್ವರ್ಷ
ಘಾಳಿ ಮಳಿ ಬಿಸಿಲು ಛಳಿ
ತಾಳುತೆ ವೋಡ್ವೆವು ಬಲ್ ಹರ್ಷಾ ॥
. . . . . . . . .
ಬಡಿಸ ಬಂದವರನೆ ಹಿಡಿದು ಪಾತ್ರೆಗಳನೆ
ಯಡಿಯಡಿಯಲಿ ಬೊಗ್ಗಿಸಬೇಕು
ಹೊಡಿದರೆ ನೋವು ತಡೆಯುತ ನಾವ್
ವಡಲೊಡಿಯಾ ಬಗ್ಗಿಸಬೇಕು.

## 34 ಲಾವಣಿ, ದುಂದುಮೆಗಳು

ಲಾವಣಿ, ದುಂದುಮೆ ಮುಂತಾದ ಜನಪದ ಹಾಡುಗಳ ರಚನಾ ಕಾಲವನ್ನು ಖಚಿತಪಡಿಸಿ ಹೇಳುವುದು ಶಕ್ಯವಿಲ್ಲ. ೧೯ನೆಯ ಶತಮಾನದಲ್ಲಿ ಪ್ರಚುರದಲ್ಲಿದ್ದ ಜಾನಪದ ಹಾಡುಗಳಿಗೂ ಇದು ಅನ್ವಯಿಸುವುದು. ಆದರೆ ಸಂದರ್ಭದ ಮೇಲಿಂದ ಕೆಲವನ್ನು ಮಾತ್ರ ಹಾಗೆಂದು ಹೇಳಬಹುದು. ಉದಾಹರಣೆಗೆ, ಫ್ಲೀಟ್ ಸಂಗ್ರಹಿಸಿದ ಹೆಚ್ಚಿನ

ಲಾವಣಿಗಳು ಆ ಅವಧಿಯಲ್ಲಿ ರಚಿತವಾದುವುಗಳು ಮತ್ತು ಅಂದಿನ ಜನಜೀವನಕ್ಕೆ ಸಂಬಂಧಪಟ್ಟವುಗಳು.

'ಹುಟ್ಟುವಳಿಯ ಮೇಲೆ ತೆರಿಗೆ'ಯನ್ನು (Income tax) ಹಾಕಿದಾಗ ಹೊರಹೊಮ್ಮಿದ ಲಾವಣಿ ಇದು :–

ಏನು ಹೇಳಲಿ ಜನ್ಮದ ಗೋಳಾ
ಇಂಗರಜಿ ಉಪದರ ಆದೀತು ಬಹಳಾ
ಬಡವರು ಅಳತಾರೊ ಗಳಾಗಳಾ
ಮಾಡತಾರೊ ಚಿಂತಿ ॥

. . . . . . .

ಕಠಿಣ ಬಡವರದ ತುಂಬೋದು ಹೊಟ್ಟಿ
ಮಾರಿ ಕೊಟ್ಟಾರೊ ನೂಲುವ ರಾಟಿ
ದುಡ್ಡಿನ ಆಶೆ ಹತ್ತಿತ ಸರಕಾರಕ

. . . . . . .

ಹಲಗೀ ಕುಂಟೆ ರೇಸಮಿ ಪಟ್ಟಿ
ಭಾಂಡೇ ಸಾಮಾನಾ ಜಮಾನು ಪಾಟಿ
ಲಿಲಾವ ಮಾಡಸ್ಯಾರು ಕಿಮ್ಮತ ಕಟ್ಟಿ
ಭಾಳ ಕೆಟ್ಟಾರಂಣಾ ಸರಕಾರಾ
ಬಡವರು ತಂದರ ಕಣ್ಣೀರಾ
ಹೆಂತಾ ವ್ಯಾಳೆ ತಂದಿ ಈಶ್ವರಾ
ನಮಗ ಯಾರದು ಇಲ್ಲಾ ಆಧಾರಾ.

ಬಡ ರೈತರ ಸ್ಥಿತಿ ಹೀಗಾದರೆ ಸಾವಕಾರ ಜನರು ತಮ್ಮ 'ವಸ್ತಾವಡವಿ' ತೆಗೆದಿಟ್ಟು 'ಹರಕ ಧೋತರ. ಅಂಗಿಯ ತೊಟ್ಟು' ಬಂಗಲೆಗೆ ಎಡತಾಕಿದರಂತೆ. ಹುಬ್ಬಳ್ಳಿಯಲ್ಲಿಯ ಕಮರೀಪೇಟೆಯ ಮುಸಲ್ಮಾನರು ಈ ತೆರಿಗೆಯನ್ನು ಕೊಡುವುದಿಲ್ಲವಾಗಿ ಹಟ ಹಿಡಿದು ಮಸೀದೆಯಲ್ಲಿ ಅಡಗಿ ಕುಳಿತರು :–

ಮಸಲರು ಎಲ್ಲಾ ಕುಂತಾರ ಕೂಡಿ
ಮಾಸೂದಿ ಒಳಗ ಮಸಲತ ಮಾಡಿ
ಕಾ[ಕಹಾ] ಹೈ ಧುಂಡಕರ ಲಕಾವ್ ಅರೆ ಲಕಡಿ
ಹಿಂದಕ ಸರದರ್ರಿ ಅನುಮಾನ ಮಾಡಿ
ಮಸಲತ್ತ ಹಾಕಿದರ ಹೀಂಗ
ಭೇಷಕ್ ಹೊಡ್ಯೋಣು ಬಂದವರ

ಆದರ, ಬೇಡಿ ಹಾಕ್ತಾನ ನಮಗ
ಮತ್ತೇನ ಮಾಡ್ಯಾರ ಇದಕಿಂತ

ಸರಕಾರವು ಹೀಗೆ ಹುಕುಮ್ ಮಾಡಿದರೂ ಅದನ್ನು ಜಾರಿಯಲ್ಲಿ ತರಬೇಕಾಗಿದ್ದ ಅಧಿಕಾರಿಗಳಲ್ಲಿ ಒಬ್ಬನು ಒಳ್ಳೆಯವನಿದ್ದನು. ಆಗ ಮುಸಲ್ಮಾನರು,

ಬಂಗಲೇಕ ಬಂದ ಎಲ್ಲಾರು ಕೂಡ್ಯಾರು
ಕೇಳರಿ ಆಗ
'ತುಮ ಖಾವಂದ ಅರಜ ಇ ಸುನ್ನಾ'
ಹಮಾರೆ ಪಟ್ಟಿ ಮಾಫ್ ತುಮ್ ಕರನಾ
ನಿಂತುಕೊಂಡೆ ನೋಡಿದಾನ ಬಡವರನಾ
ಕರುಣ ಹೊಟ್ಯಾಗ
ಸಾಹೇಬ ನೋಡಿದಾನ ಸೋಸಿ
ಲಗು ಮಾಡಿ ಅರಜಿ ಕುಡರಿಂತಾನ ಬರಶಿ
ಅವನ ಹೊಟ್ಯಾಗ ಆತ ಕಸಿವಿಸಿ
ಬೆಂಕಿ ಬಿದ್ದಾಂಗ
ಹೆಂಗಸರ ಉಟ್ಟಂತಾ ಹರಕ ಪರಕ ಶೀರಿ
ನಿಂತುಕೊಂಡು ನೋಡಿದನ ಲಯಿಶವರಿ
ಮುಸಲರು ಅಂತಾರ 'ಅಲ್ಲಾ',
ವರಸಾ ಗೋದಿ ಅಕ್ಕಿ ಉಂಡಿಲ್ಲಾ
ನಮ್ಮ ಪರಿಪಾಟಲಾ ಶಿವನೆ ಬಲ್ಲಾ. . . . .

ಅವರು ಮುಸಲ್ಮಾನರಾದರೂ ಸಂಕಟ ಬಂದಾಗ ನೆನೆಯುವುದು ಶಿವನನ್ನು! ಇದನ್ನು ಬರೆದ ಕವಿ ಹುಬ್ಬಳ್ಳಿಯ ಗುರುಸಿದ್ಧನೆಂಬವನು. ಸರಕಾರವನ್ನು ಬೈದುದರ ಭಯವಿಲ್ಲದೆ ತನ್ನ ಹೆಸರನ್ನು ಸ್ಪಷ್ಟವಾಗಿ ಕೃತಿಯ ಕೊನೆಯಲ್ಲಿ ಹೇಳಿದ್ದಾನೆ. ಆಗಿನ ಕಾಲದ ಅನೇಕ ವಿದ್ಯಾವಂತರು ನಮ್ಮನ್ನಾಳುವ ಘನ ದಯಾಳು ಬ್ರಿಟಿಷ್ ಸರಕಾರವೆಂದು ದೀನರಾಗಿ ಭಾವಿಸುತ್ತಿದ್ದಾಗ ಈ ಕವಿಯ, ಅದರಂತೆ ಹಳ್ಳಿಯ ಜನತೆಯ ಸ್ಪಷ್ಟವಾದಿತ್ವವು ಪ್ರಶಂಸನೀಯವಾಗಿದೆ.

ಕಿತ್ತೂರಿಗೆ ಸಂಬಂಧಿಸಿದ ಲಾವಣಿಗಳಲ್ಲಿಯೂ ನರಗುಂದ, ಮುಂಡರಗಿ ಬಂಡಾಯದ ಲಾವಣಿಗಳಲ್ಲಿಯೂ ಈ ತರದ ಕೆಚ್ಚು ತೋರಿ ಬರುತ್ತದೆ. ಇನ್ನು ಪ್ಲೇಗು, ಬರಗಾಲದಂತಹ ಪ್ರಚಲಿತ ಸಮಸ್ಯೆಗಳು ಲಾವಣಿ ರೂಪದಲ್ಲಿ ಕಾಣಿಸಿಕೊಂಡಿವೆ. ಅವುಗಳನ್ನು ರಚಿಸಿದ ಗುಬ್ಬಿ ಗುರುಸಿದ್ದಪ್ಪ, ಡಿ. ಶ್ರೀನಿವಾಸಮೂರ್ತಿರಾವ, ಅಣ್ಣಾರಾವ ಸವದಿ, ಕರಡೀಗುಡ್ಡದ ಫಕೀರಪ್ಪ–ಇವರನ್ನು ಸ್ಮರಿಸಬೇಕು. ಲೋಕಮಾನ್ಯ ಟಿಳಕರು

ಬದುಕಿದ್ದಾಗಲೇ ಅವರ ಜೀವನಕಾರ್ಯವನ್ನು ಲಾವಣಿಯ ರೂಪದಲ್ಲಿ ಚಿತ್ರಿಸಿದ್ದು ಸಹ ಕಂಡುಬರುತ್ತದೆ (೧೮೯೯). ಧಾರ್ಮಿಕ ಪದ್ಯಗಳನ್ನು ಬರೆಯುವಲ್ಲಿಯೂ ಲಾವಣಿ ರೂಪವನ್ನು ಬಳಸಿದುದಿದೆ.

ಇವನ್ನುಳಿದು ಆಗಿನ ಲಾವಣಿ, ದುಂದುಮೆಗಳ ಪ್ರಧಾನ ಲಕ್ಷ್ಯವು ಶೃಂಗಾರದತ್ತ ಇದ್ದಿತೆಂದು ಹೇಳಬಹುದು. ಅಂಥ ಅನೇಕ ಲಾವಣಿಗಳು ಹತ್ತೊಂಬತ್ತನೆಯ ಶತಮಾನದಲ್ಲಿಯೇ ರಚಿತವಾಗಿ ಅಂದಿನ 'ಒಂದಾಣೆ ಮಾಲೆ'ಯಾಗಿ ಮುದ್ರಣದ ಸೌಲಭ್ಯವನ್ನು ಪಡೆದುವು. 'ದಿಲ್ ಖುಷ್ ಗಾಯನ'. 'ಮನೋರಂಜಕ ಪವಗಳು' ಎಂಬ ಹೆಸರಿನಿಂದಲೂ ಅವು ಪ್ರಚಲಿತವಿದ್ದುವು. ಇನ್ನು ಮುದ್ರಣವಾಗದೇ ಜನಬಳಕೆಯಲ್ಲಿದ್ದವುಗಳು ಅವೆಷ್ಟೋ. (ಇವು ಹಸತಪ್ರತಿಯ ರೂಪದಲ್ಲಿದ್ದು, ಹೈದರಾಬಾದ, ಧಾರವಾಡ ಮತ್ತು ಮೈಸೂರುಗಳಲ್ಲಿಯ ಹಸ್ತಪ್ರತಿಯ ಭಂಡಾರಗಳಲ್ಲಿ ಕೆಲವು ದೊರೆಯುತ್ತವೆ.)

ಉತ್ತರ ಕರ್ನಾಟಕದಲ್ಲಿ ಬಾಳಿದ ಕುಂದಗೋಳ ಬಸವಲಿಂಗನ ಮುದ್ರಿತ ಹೋಳಿ ಪದಗಳು ಇಲ್ಲಿ ಉಲ್ಲೇಖನೀಯವಾಗಿವೆ. ಇವುಗಳಿಗೆ 'ರಶಿಕರ ಮನೋರಂಜನಾರ್ಥವಾಗಿ' ಎಂಬ ಹಣೆಪಟ್ಟಿ ಇರುತ್ತಿತ್ತು. ಈ ಬಗೆಯ ಕವಿತೆಗಳು ಸಾಮಾನ್ಯ ಮಟ್ಟದವೇ ಆದರೂ ಹೊಸತನದ ಅಂಶಗಳು ಅಲ್ಲಲ್ಲಿ ದೊರೆಯುತ್ತವೆಂದಷ್ಟೇ ಅವುಗಳನ್ನು ಇಲ್ಲಿ ನೆನೆಯಲಾಗಿದೆ.

ಅಂಥ ಒಂದು ಪುಸ್ತಕದಲ್ಲಿ 'ರಾಮ ರಾವಣರ ಯುದ್ಧ, ಹುಬ್ಬಳ್ಳಿ ಮರ್ಕಟಗಳ ದುಂದುಮೆ' ಎಂಬ ಹಾಡುಗಳಿವೆ. ರಾಮ ರಾವಣರ ಯುದ್ಧದಲ್ಲಿ ಸೀತೆಯೂ ಭಾಗವಹಿಸುತ್ತಾಳೆ. 'ಕುಸುಮಲೋಚನೆ ಸೀತೆ ನಸುನಕ್ಕು ಬಾಣವ ಯಸೆಯಲು ರಾವಣ ವಸುಧೆಗೆ ಬಿದ್ದನಂತೆ! ಅಲ್ಲಿಂದ ರಾಮನು ಹನುಮಂತನೊಡಗೂಡಿ, 'ಬಸವನ ದಯದಿಂದ' ರಾವಣನ ಸಂಹಾರ ಮಾಡುತ್ತಾನೆ.

ಅದೇ ಪುಸ್ತಕದಲ್ಲಿಯ ಹುಬ್ಬಳ್ಳಿಯ ಮಂಗಗಳ ವರ್ಣನೆಯು ವಾಸ್ತವಾಂಶಗಳಿಂದ ಕೂಡಿದೆ :–

ಸಬ್ಬದೇಶದೊಳಿಂಥಾ ಹೆಚ್ಚಿನ ಮರ್ಕಟ<br>
ಅಬ್ಬರಿಸುತ್ತ ಹಾರ್‍ಯಾಡುವವು । ತಮ್ಮ<br>
ಹುಬ್ಬು ಹಾರಿಸಿ ಹಲ್ಲು ಕಿಸಿಯುವವು । ಮತ್ತೆ<br>
ತಬ್ಬುಬ್ಬಿ ಎಲ್ಲೆಲ್ಲು ಕೂಡುವವು । ಮೈಯ<br>
ವುಬ್ಬುತ ಕೊಬ್ಬುತ ಹಬ್ಬುತ ವಳಗೆಲ್ಲ<br>
ಹುಬ್ಬಳ್ಳಿಯೊಳು ಮಂಗ ಹುಡದಿಯಾಡಿದವೊ ॥೧॥<br>
ಮತ್ತೆ ನಾ ಬಸುರೆಂದು ಬುತ್ತಿ ಬೋನವನು<br>
ಚಿತ್ತಿಟ್ಟು ಹದವಾಗಿ ಮಾಡಿದ್ದೇವೆ । ಅದ<br>
ಕೊತ್ತಿಲೆ ಬೆಳ್ಳುಳ್ಳಿ ಬೆರಸಿದ್ದೇನೆ । ತೆಗ

ಸುತ್ತಿಲೆ ಯಾರಿಲ್ಲ ಕುಳಿತಿದ್ದೆನೆ । ವಳ್ಳೆ
ಹೊತ್ತು ನೋಡಿ ಬಂದು ಮುತ್ತಿಕೊಂಡಿತು । ವಂದು
ತುತ್ತಾರ ಬಿಡಲಿಲ್ಲ ತುಡುಗಿನ ಮಂಗಾ ॥೧೩॥
ಹುಡುಗೇರೆಲ್ಲರು ಕೂಡಿ ಕಡಲಿ ಕೊಬ್ಬರಿ ಕಬ್ಬು
ಹಿಡಕೊಂಡು ಹೋಗಲು ತುಡಕಿತವ್ವಾ । ಗಲ್ಲ
ಹಿಡಿದೆಂನ ಮಾರಿಯ ನೋಡಿತವ್ವಾ । ದೊಡ್ಡ
ಕಡವನಂತ ಮೂಳಾ ಕಾಲಾಗ ಬಂದಿತು
ಉಡಿಯ ಚೆಲ್ಲಿಕೊಂಡು ವೋಡಿತು ಮಂಗಾ ॥೧೪॥

ಈ ಮಂಗಚೇಷ್ಟೆಯು ಇದಕ್ಕೂ ಮುಂದುವರಿದು ಅಶ್ಲೀಲದ ಅಂಚನ್ನು ಮುಟ್ಟಿದೆ. ಶಿಶುನಾಳ ಶರೀಫ ಸಾಹೇಬರು ಓರ್ವ ಶ್ರೇಷ್ಠ ಜಾನಪದ ಕವಿ. ಹಳ್ಳಿಗರನ್ನು ನೆರೆಯಿಸಿ, ಅಶು ಕವಿತೆಗಳನ್ನು ಸಹಜ ಸ್ಫೂರ್ತಿಯಿಂದ ರಚಿಸಿ ಹಾಡುವುದರ ಮೂಲಕ ಬೆಳಕಿಗೆ ಬಂದರು. ಪಾರಮಾರ್ಥಿಕ ಸಿದ್ಧಿಯು ಹೆಚ್ಚಿದಂತೆ ಜನಾದರಣೀಯರಾದರು. ತೀರ ಸಾಮಾನ್ಯ ಅಂಶಗಳಿಗೆ ಆಧ್ಯಾತ್ಮದ ಮೆರುಗನ್ನು ಕೊಟ್ಟು ಪದ್ಯ ರಚಿಸಿದ್ದುದು ಅವರ ವೈಶಿಷ್ಟ್ಯವಾಗಿದೆ. ಕಪ್ಪೆ, ಕುದುರೆ, ತಿಗಣೆ, ಶಾಲಾಕಟ್ಟಡ-ಮುಂತಾದವುಗಳನ್ನು ಕುರಿತ ಅವರ ಪದ್ಯಗಳಲ್ಲಿ ಪಾರಮಾರ್ಥ ದೃಷ್ಟಿಯ ರೂಪಕ, ಪ್ರತಿಮೆಗಳನ್ನು ನಾವು ಕಾಣುತ್ತೇವೆ.

ಹುಬ್ಬಳ್ಳಿಯಲ್ಲಿ ಹೊಸದಾಗಿ ಬಟ್ಟೆಯ ಗಿರಣಿಯು ಆರಂಭವಾಯಿತು. ಅದರ ಉದ್ದನೆಯ ಹೊಗೆ ಕೊಳವೆ, ಒಳಗಿದ್ದ ತಿರುಗುವ ಚಕ್ರ ಇತ್ಯಾದಿಗಳನ್ನು ಸೃಷ್ಟಿ, ಆತ್ಮ, ಜೀವಗಳಿಗೆ ಅನ್ವಯಿಸಿ ಶರೀಫರು ಹೇಳಿದ ಬಗೆಯು ಅಚ್ಚರಿಗೊಳಿಸುವಂತಿದೆ.

ಗಿರಣಿ ವಿಸ್ತಾರ ನೋಡಯ್ಯ
ಇದಕೆ ಶರಣು ಮಾಡಯ್ಯ ॥
. . . . . .
ಜಲವು, ಅಗ್ನಿಯು, ವಾಯುವು ಒಂದಾಗಿ
ಕಲೆತು ಒಳ್ಳೆ ಚೆಂದದಿ ನೆಲ-
ದಿಂದ ಗಗನಕ್ಕೆ ಮುಟ್ಟಿ ಕಾಂಬುವ
ನಿಲಿಸಿದಾ ನಡು ಕಂಭವೊ ಹೊಗೆ ಬಿಂಬವೊ ॥೨॥
ಒಳಗೊಂದು ಬೇರೆ ಆಕಾರಾ
ತಿಳಿದುಕೊ ನೀ ಚಮತ್ಕಾರಾ
ದಳಗೊಳೊಂಬತ್ತರ ಸುಚಕ್ರದಿ
ಸುಳಿವ ಸೂತ್ರದ ದಾರಿಯಲ್ಲಿ
ಒಳಗೆ ಹೊರಗಿನ ಕೊಳವಿಯೊ ಇದರಳವಿಯೊ ॥೩॥

ಆಲಿಯೊಳಿಟ್ಟರಳೆ ಹಿಂಜಿ
ಅಲ್ಲಿ ಆದವು ಹಂಜಿ
ಗಾಲಿಯೊಂದರ ಮೇಲೆ ಬ್ರಹ್ಮದ
ಕೀಲಮೂಲದ ಸುಷುಮ್ನೆಯಲ್ಲಿ
ಜೋಲುತ್ತಿರುವುದು ನೋಡು ನಾಡಿ
ಅಲ್ಲಿ ಆಗೋದು ಆತ್ಮ ತುಕ್ಕಡಿ ॥೪॥
ಪರಬ್ರಹ್ಮದ ಪಟ್ಟಾವೇನೊ
ಮರೆವ ಪ್ರಾಣದ ಪರಿವೆಯ ಮರೆತಿಟ್ಟವೇನೊ
ಧರೆಯೊಳು ಶಿಶುನಾಳ ಪುರದ್ಯೆ-
ಸಿರಿಯನಾ ದೇವಾಂಗ ಋಷಿಯಿಂ-
ಸರಸದಿ ನೇಯಿಸಿದ್ದಚ್ಚಡ ಹೊಚ್ಚಿತೊ
ಜಗ ಮುಚ್ಚಿತೊ ॥೫॥

ಹೀಗೆಯೇ ಚೇಳು ಕಡಿದಾಗ, ಹಾವನ್ನು ತುಳಿದಾಗ, ಸಂತೆಗೆ ಹೋಗುವ ಮುದುಕಿಯನ್ನು ಕಂಡಾಗ–ಒಂದೇ ಎರಡೇ ಬದುಕಿನ ಯಾವ ಸಣ್ಣ ಸಂಗತಿಯಿದ್ದರೂ ಶರೀಫರು ಅದರಲ್ಲಿ ಸಾರ್ವಕಾಲಿಕ ಸತ್ಯವನ್ನು ಕಂಡಿದ್ದಾರೆ. ಅದು ಕಟ್ಟಿದ ಕವಿತೆಯಲ್ಲ. ತಾನಾಗಿ ಹೊರಹೊಮ್ಮಿದ ಉಸಿರು. ಬೇಂದ್ರೆಯವರ ಮಾತಿನಲ್ಲಿ ಹೇಳುವುದಾದರೆ ಅದು 'ಹಳ್ಳಿಪಳ್ಳಿಯ ಓಣಿ ಓಣಿಯೊಳಗಿನ ಮಾತು. ಕಥೆಗಳನ್ನೂ ರೂಪಕದ ಅವಯವಗಳನ್ನಾಗಿ ಮಾಡಿ ಆತ್ಮದ ರಂಗುರೂಪನ್ನು ನಿರೂಪಿಸುವ ಯೋಗ್ಯ ಕುಶಲವಾಣಿ'.

ಮುಂಬಯಿ ಸರಕಾರದ ಶಿಕ್ಷಣ ಖಾತೆಯಲ್ಲಿ ಹಿರಿಯ ಹುದ್ದೆಯಲ್ಲಿದ್ದ ಸವದಿ ಅಣ್ಣಾರಾಯನು ಪ್ಲೇಗಿನ ವಿಷಯದಲ್ಲಿ ಲಾವಣಿಯನ್ನು ರಚಿಸಿದುದು ವಿಚಿತ್ರವೆನಿಸಬಹುದು. ಏನಿದ್ದರೂ ಈ ರೋಗದ ವಿಷಯವಾಗಿ ಹಳ್ಳಿಗರನ್ನು ಎಚ್ಚರಿಸುವುದಕ್ಕೆ ಲಾವಣಿ ರೂಪವೇ ಪ್ರಭಾವಶಾಲಿಯಾಗಿ ಕಂಡಿರಬೇಕು. ಕೆಲವು ಪದ್ಯಗಳನ್ನು ನೋಡೋಣ :

ಪಿಡುಗು ಬಾರದ ಹಂಚಿಕೆ ಹೇಳುವೆ, ಕೂತು ಕೇಳಿರಿ ನೀವೆಲ್ಲ
ಒಡಿಯನ ನಂಬಿ ತಪ್ಪದೆ ನಡೆದರೆ ಸುಖವಾಗೋದು ಸಂಶಯವಿಲ್ಲ ॥೧॥

ಪ್ಲೇಗಿನ ಹುಳವು ನೆಲದ ಮೇಲೆ ತಾ ಹುಬ್ಬುವದೆಂದು ತಿಳಕೊಂಡು
ಬೇಗನೆ ಮೊಚ್ಚೆ ಬೂಟು ಕಾಲ್ಮರಿ ಜೋಡನು, ಹೋಗಿರಿ ಮೆಟ್ಟಿಕೊಂಡು ॥೨॥

ಬೆಳಕು ಗಾಳಿಗಳು ಹೋಗದ ಕಡೆಯಲಿ ರೋಗ ಬಂದು ತಾ ಸೇರುವದು
ಹೊಲಸು ನಾತ ಹಾರಿ ಹೋಗಲಿಕೆ ಬೆಳಕಿಂಡಿ ಕಿಟಕಿಗಳು ಮಾಡುವದು ॥೩॥

ಇಲಿಗಳು ಪಟಪಟ ಸಾಯುವ ಮನೆಗಳ ಬಿಟ್ಟು ಹೋಗಿರಿ ಬಲು ದೂರ
ಇಲಿಗಳು ಪಿಡುಗಿನ ಬೀಜವ ಬಿತ್ತುವವೆಂದು ತಿಳಿಯಿರಿ ನೀವ್ ಪೂರ ॥೮॥

ಹಸನಾದೂಟ ಹಸನಾದುಡುಪು ಹಸನಾದ ಮನೆಯಲ್ಲಿರುವರಿಗೆ
ಮಿಸುಕಿನ ಪಿಡುಗಿನ ಕಾಟವ್ಯಾತಕೆ ತಿಳಿಯಿರಿ ಕಾರಣ ನೀವಿದಕೆ ॥೭॥

ಗಡಿಬಿಡಿ ಮಾಡದೆ ಹಗಲಿರುಳೆನ್ನದೆ ಬೇಡಿಕೊಂಡರೆ ಸರ್ವ ಜನ
ಪಿಡುಗಿನ ಕಾಟವ ದೂರ ಓಡಿಸಿ ಸಲಹುವ ನಮ್ಮನು ಭಗವಾನ ॥೧೦॥

ಈ ವಿದ್ಯಾವಂತ ಲಾವಣಿಕಾರನು ದ್ವಿತೀಯ ಪ್ರಾಸವನ್ನು ಅದೆಂತು ಕಟ್ಟುನಿಟ್ಟಾಗಿ ಪಾಲಿಸಿದ್ದಾನೆಂಬುದನ್ನು ಗಮನಿಸಬೇಕು.

ಅನೇಕ ಕಾವ್ಯ - ನಾಟಕಗಳನ್ನು ರಚಿಸಿದ ಶಾಂತಕವಿಗಳು ಹಲವಾರು ದುಂದುಮೆಗಳನ್ನು ರಚಿಸಿದುದು ಗಮನಿಸಬೇಕಾದ ಸಂಗತಿ. ಅವುಗಳಲ್ಲಿ ಶ್ರೀಕೃಷ್ಣನು ಮೋಹಿನೀ ರೂಪವನ್ನು ಧರಿಸಿ ಶಿವನನ್ನು ಮರುಳುಗೊಳಿಸಿದ ದುಂದುಮೆಯು ಹೃದ್ಯವಾಗಿದೆ. ಇವೆಲ್ಲ ಪದ್ಯಗಳು ಯಥಾಪ್ರಕಾರ 'ರಶಿಕರ ಮನೋರಂಜನಾರ್ಥವಾಗಿ'ಯೆ ಇದ್ದವುಗಳು. ಶಾಂತಕವಿಗಳು ೧೯೦೦ನೆಯ ವರ್ಷದ ಸುಮಾರಿಗೆ ರಚಿಸಿದ ಒಂದು ಲಾವಣಿಯ ಕೆಲ ಪದ್ಯಗಳನ್ನು ಇಲ್ಲಿ ಕೊಡುತ್ತಿದ್ದೇವೆ:-

ಹೊಲಾ ಹೋಡೀತಿ ಹಸನ ಮಾಡತೀ
ಬೀಜಾ ಹಾಕತೀ ಕಾಯಿಸತೀ
ಬೆಳೀ ನೋಡತೀ ಕೋಲಿಗೆ ಬಂತಂತಿ
ಹೆರವರ್ ಚಂಡಿಯಾಡಿದರ ಯಾರಿಗ್ಹೇಳತಿ ನೀ ಯಾರಿಗ್ಹೇಳತಿ ।

ಹಗಲೆಲ್ಲ ದುಡೀತಿ ಹೈರಾಣ ಆಗತೀ
ರಾತರಿನ್ಯಾಗ ನಿದ್ದಿ ಬಂದು ನೀ ಬೀಳತೀ
ಮನಿ ತುಂಬಿ ಬಾಳೇವು ಹಾಂಗ ಬಿದ್ದಿರತ್ರೈತಿ
ಬೆಳತಂಕ ಮನಿ ಕಾಯಾಕ್ಯಾರಿಗ್ಹೇಳಿರತೀ

ಹೆಣತಿನ್ನ ಮಾಡಿಕೊಂತಿ ಮನೀ ತುಂಬಿಸಿಕೊಂತಿ
ಮನದಾಗ ಮಾರಿ ನೋಡಿ ಬಾಳ ಹಿಗ್ಗತೀ
ಬಾಳೇವ ಮಾಡೇನಂತಿ ಎಲ್ಲಾನು ಬೇಕಂತಿ
ಹೇಣತಿ ಬಾಳೇವೊಲ್ಲೆಂತ ಬಿಟ್ರ ಯಾರಿಗ್ಹೇಳತೀ

ಉಂಗುರಾ ಇಡತೀ ಉಡದಾರ ಕಟ್ಟತೀ
ಜರತಾರಿ ಪಾವಡಾ ತಿದ್ದಿ ತಿದ್ದಿ ಸುತ್ತತೀ
ಊರಾಗ್ಹರದಾಡತೀ ಬಡವರನ ಬೆದರಸತೀ
ಅಲ್ಲೇ ನಿನ್ನ ಸುಲಕೊಂಡಬಿಟ್ಟರ‍್ಯಾರಿಗ್ಹೇಳತೀ

ಸುಳ್ಳ ಮೀಸಿ ಹೊರತಿ ಮೈಯಾಗಿಲ್ಲ ಸಗತೀ
ನಿನ್ನದ ನೀನು ಕಾಯಲಾರದ್ಯಾತಕಳತೀ
ಬಡ್ಡೀನ ಬಿಡತಿ ಟೊಂಗಿಗೆ ನೀರ ಹಣಸ್ತಿ
ಗಿಡಾ ಚಿಗತ ಬರತೈತಂತ ಸುಳ್ಳೆ ಉಬ್ಬತೀ

ಮನೀಮಾರು ನನ್ನದಂತೀ ದೇಶದ ಗುರ್ತು ಇಲ್ಲವಂತಿ
ದೇಶಾ ಬಿಟ್ಟು ಮನಿಮಾರು ಎಲ್ಲಿ ತರತೀ
ದೇಶದಾಗ ಹುಟ್ಟತೀ ದೇಶದಾಗ ಬೆಳೀತಿ
ದೇಶದಾಗ ಬಾಳೇವ ಮಾಡಿ ಸತ್ತ ಹೋಗತೀ।

ಮೈಯಾಗ ಎಣ್ಣೈತಿ ಮಾರೀಮ್ಯಾಗ ಬಣ್ಣೈತಿ
ಮುದುಕಲ್ಲ ತದಕಲ್ಲ ಹರೇವೈತಿ
ಕೂಳ ಪಡಶಾ ಮಾಡತಿ ಗೂಳಿ ಹಾಂಗ ತಿರಗತಿ
ಉಡಾಳ ಮೂಳ ನಿನ್ನಿಂದುಪ್ಯಾಗ್ [ಉಪಯೋಗ] ಯಾರಿಗೇನೈತಿ?

ಮನುಷ್ಯ ಸ್ವಾರ್ಥಪರನಾಗಿ ತನ್ನ ಸ್ವಂತದ ಹಿತವೊಂದನ್ನೆ ಗಮನಿಸುತ್ತಾನೆ. ಆದರೆ ಸಮಾಜ ಜೀವಿಯಾದ ಅವನಿಗೆ ಇತರ ದೇಶಬಾಂಧವರ ನೆರವು ಅವಶ್ಯ. ತಾನು ಪರರಿಗೆ ಉಪಕಾರ ಮಾಡಿದರೆ ಅವರು ಪ್ರತ್ಯುಪಕಾರವನ್ನು ಮಾಡದೆ ಇರರು. ಉಂಡು ತಿಂದು ಪಶುವಿನಂತೆ ಬಾಳುವೆ ಸಾಗಿಸದೇ ಸಮಾಜದಲ್ಲಿ ತಾನೊಬ್ಬನೆಂಬ ಪ್ರಜ್ಞೆಯಿಂದ ಬಾಳುವೆ ಮಾಡಬೇಕು, ಎನ್ನುವಲ್ಲಿ ದೇಶಾಭಿಮಾನದ ಮೊಳಕೆಯನ್ನು ಕಾಣುತ್ತೇವೆ. ರಾಷ್ಟ್ರೀಯ ಭಾವನೆಯನ್ನು ಮೈಗೂಡಿಸಿಕೊಂಡ ಹೊಸಗನ್ನಡದ ಕವಿಗಳೊಳಗೆ ಶಾಂತಕವಿಯೇ ಆದ್ಯರೆನ್ನುವುದನ್ನು ಗಮನಿಸಬೇಕು. ಏನಿದ್ದರೂ ಕನ್ನಡ ಕವಿಗಳಲ್ಲಿ ನಾಡಿನ ಬಗ್ಗೆ ಅಭಿಮಾನವು ಕುಸುಮಿಸಿ ಅದರಿಂದ ಸಾಹಿತ್ಯ ನಿರ್ಮಿತಿಗೆ ನಿಜವಾದ ಪ್ರೇರಣೆ ದೊರೆತುದು ಇಪ್ಪತ್ತನೆಯ ಶತಮಾನದಲ್ಲಿಯೇ.

## ೩೫ ಕ್ರೈಸ್ತ ಗೀತೆಗಳು

ಕಳೆದ ಶತಮಾನದ ಭಾವಗೀತಗಳಲ್ಲಿ ಮಿಶನರಿ ಜನರ ಹಾಡುಗಳೂ ಸಮಾವೇಶಗೊಳ್ಳುತ್ತವೆ. ಇವು ಅನುವಾದಗಳು; ಸ್ವಾನುಭವದ ಸ್ವತಂತ್ರ ಭಾವಗಳಿಲ್ಲವೆಂಬುದಾಗಿ ಅವನ್ನು ಅಮುಖ್ಯವೆಂದು ತಿಳಿಯಲಾಗದು. ಹಿಂದಿನ ಕಾಲದ ಕಂದ ವೃತ್ತಾದಿ ಛಂದೋರೂಪಗಳನ್ನೂ, ದ್ವಿತೀಯ ಪ್ರಾಸವನ್ನೂ ಅನೇಕರು ಪ್ರಥಮ ಬಾರಿಗೆ ಕೈಬಿಟ್ಟದ್ದನ್ನು ಈ ಗೀತಗಳಲ್ಲಿ ಕಾಣುತ್ತೇವೆ.

ಲಂಡನ್ ಮಿಶನ್ನಿನವರು ೧೮೨೦, ೧೮೩೦ನೆಯ ದಶಕಗಳಲ್ಲಿ ಪದ್ಯರಚನೆ ಮಾಡಿರಬಹುದಾದರೂ ಅದರ ಕುರುಹು ದೊರೆತಿಲ್ಲ. ಅದೇ ಮುಂದಿನ ದಶಕದಲ್ಲಿ ಬಾಸೆಲ್ ಮಿಶನ್‌ದವರು ಆ ಕೆಲಸ ಮಾಡಿದ್ದಾರೆ. ತಮ್ಮ 'ಬೀದಿಯ ಬೋಧನೆ'ಯಲ್ಲಿ ಮತ್ತು ಚರ್ಚ್‌ನಲ್ಲಿ ಹಾಡಲೆಂದು ಅವರು ಕೆಲವು ಕನ್ನಡ ಹಾಗೂ ತುಳು ಪದಗಳನ್ನು ಸಿದ್ಧಗೊಳಿಸಿದರು. ಜರ್ಮನ್ ಭಾಷೆಯಿಂದ ಮತ್ತು ಹೆಚ್ಚಾಗಿ ಅದೇ ಧಾಟಿಯಲ್ಲಿ ಇವನ್ನು ಅನುವಾದಿಸಿದವರು ಮೊವ್‌ಗ್ಲಿಂಗ್ ಮತ್ತು ವೈಗ್ಲೆ ಮುಂತಾದವರು. ಅವರಲ್ಲಿಯೆ ಯಾರು ಮೊದಲಿಗರೆಂಬುದನ್ನು ಖಚಿತವಾಗಿ ಹೇಳಬರುವಂತಿಲ್ಲ. ಮೊದಲ ಬಾರಿ ೧೮೪೫ರಲ್ಲಿ ಪ್ರಕಟವಾದ ಮಿಶನ್ನಿನ ಪದ್ಯ ಸಂಗ್ರಹದಲ್ಲಿ ಇಂಥ ೬೮ ಕನ್ನಡ ಗೀತೆಗಳಿವೆ.

ಬಾಸೆಲ್ ಮಿಶನ್‌ದವರು ಬನ್ಯನ್ನನ ಕೃತಿಯನ್ನು ('ಯಾತ್ರಿಕನ ಸಂಚಾರ') ಅನುವಾದಿಸಿದ್ದರಷ್ಟೆ (೧೮೪೭). ಆ ಕೃತಿಯ ಅನುವಾದದ ಬಹುಭಾಗವು ವೈಗ್ಲೆಯನದೇ ಆದ್ದರಿಂದ ಅವನೇ ಅದರಲ್ಲಿಯ ಪದ್ಯಗಳನ್ನು ರಚಿಸಿರಬಹುದು. ಒಂದನ್ನು ಇಲ್ಲಿ ಕೊಡುತ್ತೇವೆ:

> ಪಾಪದ ಹೊರೆಯಿಂದೀ ಪರಿಯಂತರ
> ತಾಪವಗೊಂಡೆನು ಹೋಯಿತದು
> ಆಪತ್ತಿಲ್ಲದ ಸುಖವೆನಗಾಯಿತು
> ಈ ಪರಿಶುದ್ಧ ಸ್ಥಳವೇನೊ

ಇದು ಪಾಶ್ಚಾತ್ಯ ಧಾಟಿಯಲ್ಲಿರದೇ ಆರ್ಯಾವೃತ್ತದಲ್ಲಿದೆಯೆಂಬುದನ್ನು ಗಮನಿಸಬೇಕು. ಅಲ್ಲದೆ ದ್ವಿತೀಯ ಪ್ರಾಸವನ್ನು ಕಾಯ್ದುಕೊಂಡಿದೆ. ಮಿಶನರಿ ಜನರು ಪರಂಪರಾಗತ ಛಂದೋನಿಯಮಗಳನ್ನು ಮೀರಲು ಅಳುಕುತ್ತಿದ್ದರೆಂದೇ ಹೇಳಬೇಕು.

ಪ್ರಾರ್ಥನಾ ಪದ್ಯಗಳಲ್ಲಿ ಮಾತ್ರ ಕನ್ನಡದ ಹಳೆಯ ಧಾಟಿ, ವೃತ್ತಗಳನ್ನು ಬಿಟ್ಟುಕೊಡುವುದು ಅನಿವಾರ್ಯವಾಯಿತು. ಸ್ವದೇಶದಲ್ಲಿ ತಾವು ಕಲಿತಿದ್ದ ಧಾಟಿಯಲ್ಲಿಯೇ ಅವನ್ನು ಹಾಡುವುದು ಅವಶ್ಯವಿದ್ದಿತು. ಆರಂಭದ ಪದ್ಯಾನುವಾದಕರಲ್ಲಿ ಒಬ್ಬನಾದ ಮ್ಯೊವ್‌ಗ್ಲಿಂಗನ ಈ ಸ್ತೋತ್ರವನ್ನು ನೋಡೋಣ :–

(ನಂ ೩೧೩)*
ಸ್ತೋತ್ರವನುತ್ತಮ ದೇವರಿಗರ್ಪಿಸ ಬನ್ನಿ
ಊರ್ಧ್ವದಿ ಕರ್ತಗೆ ಮಹಿಮೆಯಾಗಲಿ ಅನ್ನಿ

ಹರುಷದಿs
ದೂತರ ಸಂಘದಲೀ
ಸ್ತೋತ್ರ ಸುಗಂಧವ ತನ್ನಿ
ಭೂದಿವಗಳಾತನ ಸ್ವಾಶ್ರಿತ ರಾಜ್ಯ
ಯಾವನು ಭೂದಿವರಾಜನ ಸಂಗಡ ವ್ಯಾಜ್ಯ
ಮಾಡುವನು?
ಆತನು ನುಡಿಯಲು
ಮರ್ತ್ಯರ ಗದ್ದಲ ತ್ಯಾಜ್ಯ

ವಿಷಮ ಚರಣದ ಈ ಪದ್ಯವು Lobe den Herren, den Machitigen Konig der Ehren ಎಂಬ ಜರ್ಮನ್ ಪ್ರಾರ್ಥನಾ ಪದ್ಯದ ಅನುವಾದ; ಮಾತ್ರವಲ್ಲದೆ ಅದೇ 'ಟ್ಯುಟನಿಕ್' ಧಾಟಿಯಲ್ಲಿ ರಚಿತವಾಗಿದೆ. ಪದಾಘಾತವು ಎರಡರಲ್ಲಿಯೂ ಒಂದೇ ಆಗಿದೆ. ನಮ್ಮ ಮಾತ್ರಾಗಣದ ಲೆಕ್ಕವು ಸ್ಥೂಲವಾಗಿ ಸಹ ಇಲ್ಲಿ ಹೊಂದುವುದಿಲ್ಲ. ಅಂತ್ಯಪ್ರಾಸವನ್ನು ಮಾತ್ರ ಅಲ್ಲಲ್ಲಿ ಕಾಣುತ್ತೇವೆ.

ವಿವಾಹ ಕಾಲದ ಆಶೀರ್ವಚನವಾಗಿರುವ ಈ ಕೆಳಗಿನ ಪದ್ಯವು ಭಾವಗರ್ಭಿತವಾದುದು :–

(ನಂ. ೧೮೯)
ಅನಂತ ದಿವ್ಯ ಪ್ರೀತಿಯು
ವಿವಾಹ ನೇಮ ಮಾಡಿತು.
ಮನುಷ್ಯ ಬುದ್ಧಿ ಅಲ್ಲ
ಸದಾ ದಯಾಳು ತಂದೆ
ವಿಧೇಯವಾದ ಜನಕೆ
ಸಹಾಯ ಮಾಡಬಲ್ಲ
ಸುಖ

* ಈ ಕ್ರಮಾಂಕದ ಪದ್ಯಗಳನ್ನು ಬಾಸೆಲ್ ಮಿಶನ್‌ದವರ 'ಕ್ರೈಸ್ತ ಗಿತಗಳು' ಎಂಬ ಈಚಿನ ಸಂಕಲನದಿಂದ (೧೯೫೦) ತೆಗೆದುಕೊಳ್ಳಲಾಗಿದೆ. ಅದರಲ್ಲಿ ಬೇರೆ ಸಂಸ್ಥೆಯ ಮಿಶನರಿಗಳ ಪದ್ಯಗಳೂ ಸೇರಿವೆ.

ದುಃಖ
ಕೊಡುವಂಥ
ತೀರದಂಥ
ಪ್ರೀತಿಯಲ್ಲಿ
ನಂಬಿರಿಹಪರದಲ್ಲಿ

ಜೆ. ಮ್ಯಾಕ್ ಸಂಪಾದಿಸಿದ 'ಬಾಲಕರ ಗೀತಗಳು' ಒಂದು ವೈಶಿಷ್ಟ್ಯಪೂರ್ಣ ಕೃತಿಯಾಗಿದೆ. ಆ ಮುಂದೆ ಪ್ರಕಟವಾದ 'ಕ್ರಿಸ್ತ ದಾಸರ ಪದಗಳು' ಎಂಬ ಹೆಸರಿನ ಮೂರು ಸಂಪುಟಗಳು ಸಹ ಎದ್ದು ಕಾಣುವಂತಿವೆ.

ಕ್ರಿಸ್‌ಮಸ್ ಕಾಲದಲ್ಲಿ ಹಾಡಲೆಂದು ರಚಿತವಾದ ಯೇಸುಕ್ರಿಸ್ತನ ಜನನ ಚೌಪದನಗಳು (೧೮೯೪) ಮತ್ತು 'ಸುರಾರಿ ಕೀರ್ತನೆ ಅಂದರೆ ಮಧುಪಾನ ನಿವಾರಕ ಸಂಘಗಳಲ್ಲಿ ಹಾಡತಕ್ಕ ೨೫ ಗೀತಗಳು' (೧೯೦೮) - ಇವನ್ನು ವಿಶೇಷವಾಗಿ ಹೆಸರಿಸತಕ್ಕದ್ದು.

ಆರಂಭದ ಕ್ರೈಸ್ತ ಗೀತಗಳು ಜರ್ಮನ್, ಇಂಗ್ಲಿಷ್ ಭಾಷೆಗಳಿಂದ ಬಂದವುಗಳಲ್ಲದೇ ಅದೇ ಧಾಟಿಗಳಲ್ಲಿ ಇದ್ದುವೆಂಬುದನ್ನೂ ಕ್ರಮೇಣ ದೇಶೀಯ ರಾಗಗಳನ್ನು ಅಳವಡಿಸಿಕೊಂಡದ್ದನ್ನೂ ಈ ಹಿಂದೆ ನೋಡಿದ್ದೇವೆ. ಹಾಗೆ ಮಾಡುವಾಗ ಮೊದಲಿಗೆ ಷಟ್ಪದಿ, ಚೌಪದಿಗಳನ್ನು ಬಳಸಿದರೂ ಮುಂದೆ ಆಧುನಿಕ ಭಾವಗೀತೆಗೆ ಸಮೀಪವೆನಿಸುವಂತಹ ರಾಗ ಮಟ್ಟುಗಳಲ್ಲಿ ಅನುವಾದಿಸಿದ್ದು ಕಂಡುಬರುತ್ತದೆ. ಇಂಥ ಹೊಸ ದೃಷ್ಟಿಯನ್ನಿಟ್ಟುಕೊಂಡು ವೆಸ್ಲಿಯನ್ನರು ಹಲವು ಗೀತ ಸಂಕಲನಗಳನ್ನು ಹೊರತಂದಿದ್ದಾರೆ. ಅವರು ಅನುವಾದಿಸಿದ 'ನಿಸ್ತಾರ ರತ್ನಾಕರ'ವು (೧೮೬೩) ಅದಾಗಲೇ ಅಖಿಲ ಭಾರತ ಮಟ್ಟದಲ್ಲಿ (ಬಂಗಾಲಿ, ಒರಿಯಾ, ತೆಲುಗು) ಪ್ರಚಾರದಲ್ಲಿದ್ದಿತು. ಮಿಸ್ ಆ್ಯನ್‌ಸ್ಟೆ ವಿರಚಿತ 'ಕೀರ್ತನೆಗಳು' (೧೮೬೯) ಎಂಬುದೂ ಇದೇ ಗುಂಪಿಗೆ ಸೇರಿದೆ. ಕ್ರೈಸ್ತ ಮತವನ್ನು ಸೇರದಿದ್ದರೂ ಬಿ.ವಿ. ಲಕ್ಷ್ಮಣಯ್ಯನೆಂಬವನು ತನ್ನ 'ಸಂಗೀತಾಮೃತ ಸಾರ'ದಲ್ಲಿ ಕ್ರೈಸ್ತ ವಿಚಾರಗಳನ್ನು ನಿರೂಪಿಸಿದುದು ಇನ್ನೊಂದು ಅಪೂರ್ವ ಸಂಗತಿಯಾಗಿದೆ.

ಕ್ರೈಸ್ತಸಾಹಿತ್ಯದ ಏಕಮೇವ ಖಂಡಕಾವ್ಯವಾದ, ಕಿಟೆಲ್ ವಿರಚಿತ **'ಕಥಾಮಾಲೆ'**ಯನ್ನು (೧೮೬೨) ವಿವರವಾಗಿ ಪರಿಶೀಲಿಸಬೇಕು. ಮಿಶನರಿ ಜನರು ದೇಶೀಯ ಕಾವ್ಯವನ್ನು ಅಭ್ಯಸಿಸಿ ದೇಸೀಯರಂತೆಯೇ ಕಾವ್ಯವನ್ನು ರಚಿಸಬೇಕೆಂಬ ನಿಲುಮೆಯ ಅನುಸಾರವಾಗಿ ಇದು ರಚಿತವಾದುದು. ಅದನ್ನು ನಿಷ್ಠೆಯಿಂದ ಅನುಷ್ಠಾನಕ್ಕೆ ತಂದುದು ಕಿಟೆಲರ

ಹೆಚ್ಚುಗಾರಿಕೆಯಾಗಿದೆ. ಕನ್ನಡ ಕಲಿಯಲಾರಂಭಿಸಿದ ಏಳೆಂಟು ವರ್ಷಗಳಲ್ಲಿಯೇ ಇಷ್ಟೊಂದು ಕವಿತ್ವಶಕ್ತಿಯನ್ನು ಪಡೆದುದು ಅವರ ಬಹುಮುಖ ಪ್ರತಿಭೆಯ ನಿದರ್ಶನವಾಗಿದೆ.

ಕಿಟೆಲ್ ಭಾರತದ ಪ್ರಾಚೀನ ಕವಿಗಳ ಮಾದರಿಯಲ್ಲಿ ತನ್ನ ಕಾವ್ಯವನ್ನು ಶ್ರೀಕಾರದ ಮಂಗಳ ಶ್ಲೋಕದಿಂದ ಆರಂಭಿಸಿದ್ದಾರೆ:-

ಶ್ರೀಜನಾರ್ಚಿತ ಸತ್ಯಸಾಕ್ಷಿಯೆ
ಭೂಜನೈಕೊ ಗುರುವೆ, ದೇವಜ,
ರಾಜಿಪವನೀ ರವಿಯೆ, ಸುಪಥವೆ, ಜೀವದಧಿಪತಿಯೇ ।
ತೇಜದುದಯವೆ, ದೇವಕಾಂತಿಯೆ
ಮೂಜಗನ್ನಾಥೇಸೊ ನಿನ್ಮುಖ
ಮಾಜಿಕೊಳ್ಳದೆ ಮೂಡು ಭಕ್ತರ ಹೃದಯಕಮಲದೊಳೂ ॥

ಮುಂದೆ ಇದರಲ್ಲಿ ಯೇಸುವಿನ ಜನನದಿಂದ ಆರಂಭಿಸಿ ಅವನ ದಿವಾರೋಹಣದ ವರೆಗಿನ ಕಥೆಯಿದೆ. ಆ ಬದುಕಿನ ವಿವಿಧ ಘಟನೆಗಳು ಕಥೆಯ ರೂಪವನ್ನು ತಾಳಿದ್ದರಿಂದ ಅದೊಂದು ಕಥಾಮಾಲೆಯಾಗಿಯಿತು. ಕವಿಯ ಗಮನ ನೇರವಾದ ಕಥಾನಿರೂಪಣೆಯಲ್ಲಿದೆಯಲ್ಲದೆ ವರ್ಣನೆಗಳಲ್ಲಿ ಅಲ್ಲ. ಉಪದೇಶದ ನುಡಿಗಳೂ ಅಲ್ಲಲ್ಲಿ ಕಂಗೊಳಿಸುತ್ತವೆ. ಮಾದರಿಯೆಂದು ೧೪ನೆಯ ಪ್ರಕರಣದಲ್ಲಿ ಬಂದ ಸಮುದ್ರ ಬಿರುಗಾಳಿಯ ವರ್ಣನೆ ಹಾಗೂ ಕ್ರಿಸ್ತನ ಪವಾಡ/ಉಪದೇಶಗಳಿರುವ ಪದ್ಯಭಾಗವನ್ನು ಇಲ್ಲಿ ಕೊಡುತ್ತಿದ್ದೇವೆ:-

ಒಂದು ದಿನದಲ್ಲೇಸು ತನ್ನೊಡ
ಬಂದ ಶಿಷ್ಯರ ಸಹಿತ ಹಡಗವ-
ನೆಂದಿನಂದದಿಯೇರಿ ಹೋಗಲಿಕಾಸಮಯದೊಳಗೇ ॥
ಸುಂದರಾನಿಲ ಶಾಂತಿಯಿದ್ದೆಡೆ
ಮುಂದಘೋರದ ಕಂಪವೇಳಲ್
ಕಂದದಿಂದಲಿ ನಿದ್ದೆ ಮಾಡುತಲೇಸು ಮಲಗಿಹನೂ ॥೧॥

ಜ್ಯೋತಿ ಮಂಡಲವಡಗಿ, ಬಿರ್ರನೆ
ವಾತ ಬೀಸಲು ಕಡಲಿನಲ್ಲತಿ
ಘಾತವಾಗುತ ಘೋರಘೋರದ ತೆರೆಗಳುಕ್ಕುತಲೆ ॥
ಘಾತವೊದಗುವ ಹಾಗೆ ಹಡಗವ

*ಜಾತಕಾತರದವರೆಗಳಾದರಿಸ-
ಲಾತನಡಿಗಡೆ ಶಿಷ್ಯರೋಡುತ ಬಂದು ಕೂಗಿದರೂ ॥೨॥

ಒಡಯ, ಯೀ ಪರಿ ತೆರೆಯು ಹಡಗವ
ಹೊಡೆಯೆ ಚಿಂತೆಯು ನಿಂಗ ಹತ್ತದೆ
ಯೊಡಮು ಹೋದೀತೀಗರೆಲ್ಲರು ನಶಿಸಿಯೇವೆನ್ನೇ ॥
ಮಡಿವ ಭಯದವರನ್ನು ತನ್ನಯ
ದಡಿಯಲೆಚ್ಚತ್ತೀಕ್ಷಿಸೇಸುವು
ನುಡಿದ ಪವನವ ಕಡಲ ಬೆದರಿಸಿ ಸುಮ್ಮನಿರಿಸಿದನೂ ॥೩॥

ಶಾಂತಿಯಾಯಿತು, ಘಾಳಿ ನಿಂತ್ರವಿ
ಕಾಂತಿ ಪಸರಿಸಿತೆಳೆಯ ಬಿಸಿಲಿಂ
ಕ್ರಾಂತಿ ಕರ್ತನು ಬಳಿಕ ಶಿಷ್ಯರಿಗೊರೆದನಿಂತೆಂದೂ
ಭ್ರಾಂತರಾದಿರಿ ಹೇಡಿಗಳೆ, ಯಾ
ಕಾಂತುಕೊಳ್ಳದೆ ನನ್ನ ಶಕ್ತಿ?
ಕ್ಷಾಂತಿ ಮಾಡುವದೆಷ್ಟೂ ಸರ್ತ್ಯಲೆ ನಿಮಪನಂಬಿಕೆಯಾ ॥೪॥

ಏಳಲ್ಕಂದದಿಂದಲಿ, ಘೋರಘೋರದ, ನಿಂತ್ರವಿಕಾಂತಿ – (ನಿಂತು+ರವಿಕಾಂತಿ) ಸರ್ತ್ಯಲೆ, ನಿಮಪನಂಬಿಕೆಯಾ – ಎಂಬೀ ಪದಗಳಲ್ಲಿ ಸಂಧಿದೋಷ, ಅಪಶಬ್ದ ಪ್ರಯೋಗ, ಶಿಥಿಲ ಜೋಡಣೆ–ಮುಂತಾದುವನ್ನು ಕಾಣಬಹುದಾದರೂ ನಡುಗನ್ನಡದ ಹಾಗೂ ಕಳೆದ ಶತಮಾನದ ಹಲವಾರು ಕವಿಗಳಲ್ಲಿ ಈ ಒಂದಿಲ್ಲೊಂದು ದೋಷಗಳು ಇಲ್ಲದಿಲ್ಲ. ಈ ಪ್ರಕರಣದ ಕೊನೆಯ ಶ್ಲೋಕವಿದು :–

ಪಾಪಸಾಗರ ದಾಟಿ ಸಗ್ಗಕೆ
ಸೋಪ ಹಡಗವನೇಸುವೊಡೆಯನು
ಕಾಪು ಕಾಯ್ವುದು; ಕಾಯದಿದ್ದರೆ ಕೇಳಿರಾಳುಗಳೇ
ದೀಪವಿಲ್ಲದ ಗಾಢದಿರುಳಲಿ

* ಜಾತಕಾತರ–ಎಂಬ ಪದಜೋಡಣೆ ವಿಚಿತ್ರವಾಗಿದೆ. ಕಿಟೆಲ್ ತನ್ನ ಟಿಪ್ಪಣಿಯಲ್ಲಿ ಅದಕ್ಕೆ 'ಹುಟ್ಟಿದ ಬಹಳ ವೇಗತ್ತ' ಎಂಬ ಅರ್ಥವನ್ನು ಕೊಟ್ಟಿದ್ದಾರೆ.

ಶಾಪದಲೆಗಳು ಹೊಡೆದು ಒಡೆಯಲು
ತಾಪದಿಂ ನೀವಲೆಗಳೊಳ್ ಮುಳುಮುಳುಗಿ ಹೋಗುವಿರಿ ॥

ವಿದೇಶೀಯನೊಬ್ಬನಿಂದ ರಚಿತವಾದದ್ದೆಂದು ಯಾರಿಗೂ ಅನ್ನಿಸದಷ್ಟು ಈ ಪದ್ಯ ದೇಶೀಯವಾಗಿದೆ.

ಕಥಾಮಾಲೆಯ ೪೭೫ ಪದ್ಯಗಳಲ್ಲಿ ಭಾಮಿನೀ, ವಾರ್ಧಕ ಷಟ್ಪದಿಗಳು ಅರ್ಧದಷ್ಟಿದ್ದರೆ ಮಿಕ್ಕುಳಿದುವು ಹಾಡಿನ ರೂಪದಲ್ಲಿವೆ. ಈ ರೂಪವನ್ನು ಆಯ್ದುಕೊಳ್ಳುವಲ್ಲಿ ವಿಶೇಷ ಕಾರಣವೇನೂ ತೋರುವುದಿಲ್ಲ. ಅಲ್ಲಿಯೂ ಕಥೆ, ಘಟನೆಗಳೇ ಇವೆ. ಕಿಟೆಲ್‌ರಿಗೆ ಪರಿಚಿತವಿದ್ದ ರಾಗವೆಂದರೆ, ಮಟ್ಟತಾಳದ ಪೂರ್ವಿರಾಗ, ೩೭ನೆಯ ಪ್ರಕರಣದ ಹಾಡಿನ ಕೆಲ ನುಡಿಗಳನ್ನು ನೋಡೋಣ :

(೩೭) ಶತ್ರುಗಳಾಗಮವು

ಒಳ್ಳೆ ಕ್ರಿಸ್ತಯೆಷ್ಟೋ ವೈರಿ ನಿನಗೆ! ॥ಪಲ್ಲವಿ॥
ವೈರಿಯಾದ ಯೂದ ಬಂದ
ಬೇರೆ ದೊಡ್ಡ ಗುಂಪಿನೊಡನೆ ॥
ಘೋರ ನೀಚ ಕಪಟ ಭಾವ
ಪೂರಿತಾತ್ಮ ತೋಟ ಪೊಕ್ಕ ॥೧॥
ವಾಡಿಕೇಲಿ ಪ್ರಾರ್ಥನೆಯ
ಮಾಡುತಿರುವನೇಸುವಲ್ಲಿ;
ಕಾಡು ಹೃದಯದವನು ಬಲ್ಲ
ನೋಡಿ ಬಂದನೊಡೆಯನೆಡೆಗೆ ॥೨॥

ಪಿತನು ತನಗೆ ನೇಮಿಸಿದ್ದು
ಹಿತವೆಯೆಂದು ಪೂರಗೈವ-
ರಿತರ ಚಿಂತೆ ಮಾಡದೇಸು
ವತುಲ ತಾಳ್ಮೆಯಿಂದ ನಿಂತ ॥೩॥

ಮುಂದೆ ಸೂಡು ದೀಪಕತ್ತಿ
ತಂದ ಕಳ್ಳ ರಥಿಕ ಗುಂಪು
ನಿಂದಿರಾತನಾರು ಬೇಕೆ-
ಲೆಂದು ಕೇಳಲೊರೆದರೆನ್ನುತ ॥೪॥

ನಾಜರೇಥಿಯೇಸೊ! ಯೇಸು
ಮಾಜದವರಿಗಾನೆ! ಯೆನಲು
ಯಾಜಕಾದಿಯವರ ಜನರು
ತೇಜಗುಂದಿ, ಬಿದ್ದರಿಳೆಗೆ ॥೫॥

ಕಥಾಮಾಲೆಯು ಹಲವಾರು ವೈಶಿಷ್ಟ್ಯಗಳನ್ನೊಳಗೊಂಡ ಅಪೂರ್ವ ಕೃತಿಯಾಗಿದೆ.–ಮೊದಲಲ್ಲಿ, ಶಾಸ್ತ್ರವೇತ್ತನಾದ ಕಿಟೆಲ್ ಕವಿತ್ವದಲ್ಲಿಯೂ ಸಿದ್ಧಹಸ್ತರೆಂಬುದು ತಿಳಿದುಬಂದದ್ದು. ಇಷ್ಟೇ ಅಲ್ಲ. ಇಷ್ಟೊಂದು ದೀರ್ಘ ಕೃತಿ ರಚನೆ ಮಾಡಿದ ಬೇರಾವ ಮಿಶನರಿಯೂ ಇಲ್ಲ.

– ಎರಡನೆಯದಾಗಿ ಇದೊಂದು ಖಂಡಕಾವ್ಯ ; ಹೊಸಗನ್ನಡದ ಮೊದಲ ಖಂಡಕಾವ್ಯ.

– ಕ್ರೈಸ್ತರಿಗೆ ಪ್ರಿಯವಾದ ಯೇಸುವಿನ ಜೀವನವನ್ನು ಭಾವುಕರು ಮನೆಯಲ್ಲಿ ಹಾಡಿಕೊಂಡು ತೃಪ್ತಿಪಡುವುದಕ್ಕೆ ಇದು ಅವಕಾಶವನ್ನೊದಗಿಸಿದ್ದುದು. ಅದು ಕಾರಣ ಕ್ರೈಸ್ತರ Liturgy ಯಲ್ಲಿ ಈ ಕೃತಿಯನ್ನು ಸೇರಿಸಿದ್ದಿದೆ.

ಕಿಟೆಲ್ ರಚಿಸಿದ ಕೆಲವು ಬಿಡಿ ಪದ್ಯಗಳೂ ಇವೆ. ಆದರೆ ಮುಂದೆ ಶಬ್ದಕೋಶ ರಚನೆಯಲ್ಲಿಯೇ ಅವರ ಲಕ್ಷ್ಯವೆಲ್ಲ ಕೇಂದ್ರೀಕೃತವಾದದ್ದರಿಂದ ಅವರ ಕವಿತ್ವವು ಹೆಚ್ಚು ಸ್ಫುಟಗೊಳ್ಳಲಿಲ್ಲ.

ವೈಗ್ಲೆ, ಮೊವ್‌ಗ್ಲಿಂಗ್, ಕಿಟೆಲ್ ಈ ಪ್ರಭೃತಿಗಳ ಅನಂತರ ಬಾಸೆಲ್ ಮಿಶನ್ನಿನ ಪ್ರಾರ್ಥನಾ ಪದ್ಯಗಳನ್ನು ಹೆಚ್ಚಾಗಿ ಅನುವಾದಿಸಿದವನೆಂದರೆ ಬಿ. ಲೂಥಿ. ಅವನ ರಚನೆಯು ಸುಭಗವಾದುದು. ಆಮೇಲೆ ದೇಶೀಯ ಕ್ರೈಸ್ತರು ಪದ್ಯಾನುವಾದಕ್ಕೆ ಮನಸ್ಸುಗೊಟ್ಟರು. ವಿದೇಶೀಯರು ಉಚ್ಚಾರದ ಸೌಲಭ್ಯಕ್ಕಾಗಿ ಶಬ್ದಗಳನ್ನು ಎಳೆಯುವ, ಸಂಕುಚಿತ ಮಾಡುವ ಇಲ್ಲವೆ ತಪ್ಪಾಗಿ ಸಂಧಿ ಮಾಡುವ ಪ್ರಮೇಯವು ಇವರ ಅನುವಾದಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ದೇಶೀಯನಾದ ಇ.ಪಿ. ಕೆರಟ್‌ನ ಈ ಪದ್ಯವನ್ನು ಗಮನಿಸುವ :–

ಅಪ್ಪಾ ತಂದೆ ವಂದನೆ
ಬಂದೆ ನಿನ್ನ ಪಾದಕೆ
ಬಡ ಬಾಲ ಪ್ರಾರ್ಥನೆ
ಕೇಳು ಸ್ವಾಮಿ ದೇವರೆ

. . . . . .

ಬಹು ಪಾಪ ಮಾಡಿದೆ

ನಿನ್ನ ಮಾತು ಕೇಳದೆ
ನೋಡಿ ಯೇಸು ಮುಖವಂ
ಮಾಡು ಪರಿಹಾರವಂ
ನನ್ನ ಮಿತ್ರಾಮಿತ್ರರಂ
ಸರ್ವ ಬಂಧು ವರ್ಗವಂ
ಲೋಕಜನರೆಲ್ಲರಂ
ನೋಡಿ ನೀಡು ಕ್ಷೇಮವಂ
ಬೇಗ ಸೊಂಪು ನಿದ್ದೆಯ
ಕೊಟ್ಟು ಇಂದು ರಾತ್ರಿಯ
ಕಾವಲಿಗೆ ದೂತರ
ಕಳುಹೆನ್ನ ಹತ್ತರ.

**('ಕ್ರೈಸ್ತ ಗೀತಗಳು' ನಂ. ೩೩೫)**

ಕೆಲವೇ ಶಬ್ದಗಳ ಸಣ್ಣ ವಾಕ್ಯಗಳು ; ಮುಗ್ಧವಾದ ಭಾವನೆ ; ಸರಳವಾದ ನಿರೂಪಣೆ-ಇವು ಈ ಪದ್ಯದ ವೈಶಿಷ್ಟ್ಯವಾಗಿವೆ. ಉತ್ತಮ ಕ್ರೈಸ್ತ ಭಾವಗೀತೆಗಳಲ್ಲಿ ಒಂದೆಂಬುದಾಗಿ ಇದನ್ನು ಎಣಿಸಬಹುದು.

ವೆಸ್ಲಿಯನ್ ಮಿಶನರಿಯಾದ ಸ್ಯಾಮ್ಯುಯೆಲ್ ಅಬ್ಬೈಜನು ಇನ್ನೊಬ್ಬ ದೇಶೀಯನಾಗಿದ್ದು ಅವನು ಸಂಕಲಿಸಿದ ಜ್ಞಾನಕೀರ್ತನೆಗಳು (೧೮೭೧) ದಾಸರ ಹಾಡುಗಳಂತೆಯೇ ಇವೆ. ಕ್ರೈಸ್ತ ಗೀತಗಳ ರಚನೆಯು ಕ್ರಮೇಣ ದೇಶೀಯವಾಗುತ್ತ ನಡೆದುದರ ಲಕ್ಷಣವಿದು. ಹೀಗೆ ಮಾಡುವಾಗ ಕೆಲವು ಮಿಶನರಿಗಳು ಜನಬಳಕೆಯಲ್ಲಿರುವ ದಾಸರ ಹಾಡುಗಳನ್ನು ವಿರೂಪಗೊಳಿಸಿದ್ದಾರೆ. 'ಮೂರ್ಖರಾದರು ಇವರು ಲೋಕದೊಳಗೆಲ್ಲಾ' ಎಂಬ ದಾಸರ ಪದವನ್ನು 'ಅರುಣೋದಯ' ಪತ್ರಿಕೆಯ ಸಂಪುಟ ೨ (೧೮೬೩) ರಲ್ಲಿ ಬದಲಿಸಿದ್ದನ್ನು ಉಲ್ಲೇಖಿಸಬಯಸುತ್ತೇವೆ. ದಾಸರ ಮುದ್ರಿಕೆಯಿದ್ದ ಕೊನೆಯ ಪದ್ಯದಲ್ಲಿ, ಅದನ್ನು ತೆಗೆದು ಯೇಸುವಿನ ಹೆಸರನ್ನು ಹಾಕಲಾಗಿದೆ. ಹಾಕಲಿ, ಹಾಗೆ ಮಾಡಿ ಅದನ್ನು 'ದಾಸರ ಹಾಡು' ಎಂದು ಕರೆದದ್ದೇಕೊ !

ಕ್ರೈಸ್ತ ಕವಿತೆಗಳ ಪ್ರಮುಖ ಅನುವಾದಕನೆಂದು ಬಿ.ಎಚ್. ರೈಸರನ್ನು ಗಣಿಸಬೇಕು. ಲಂಡನ್ ಮಿಶನ್ ಸಂಸ್ಥೆಯ ವಿವಿಧ ಜನರು ರಚಿಸಿದ ಹಾಡುಗಳಲ್ಲಿ (ಕನ್ನಡ ಸಂಗೀತಗಳು) ಇವನವೇ ಎದ್ದುಕಾಣುವಂತಿವೆ. ಇಂಗ್ಲಿಷ್‌ನಿಂದ ಪದ್ಯಗಳನ್ನು ಕನ್ನಡಕ್ಕೆ ಅನುವಾದಿಸುವಾಗ ಭಾವದಲ್ಲಿ ಹೆಚ್ಚು ಕಡಿಮೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ವಹಿಸಿದ್ದಾರೆ. ಇವರ ಕವಿತೆಗಳು ಸೌಷ್ಠವದಿಂದ ಕೂಡಿವೆ. ಗೇಯತೆ ಅವುಗಳ ಇನ್ನೊಂದು ಗುಣಧರ್ಮವಾಗಿದೆ.

ಈ ಪದ್ಯವನ್ನು ಗಮನಿಸಬೇಕು [ಅರುಣೋದಯ, ೨ (೧೮೬೩) ಪು. ೬೨]:-

ಕ್ರಿಸ್ತನ ಎರಡನೇ ಬರುವಿಕೆ

(ರಾಗ ಮುಖಾರಿ, ಆದಿ ತಾಳ)

ಮೇಘಾರೂಢನಾಗಿ ಹೋದ ಯೇಸುಕ್ರಿಸ್ತನು । ತಿರಿಗಿ
ಮೇಘಾರೂಢನಾಗಿ ಲೋಕಕಿಳಿದು ಬರುವನು ॥ ಮೇಘಾ-
ದೂತ ಸೈನ್ಯ ಸಹಿತನಾಗಿ ಪ್ರಭು ಬರುವನು । ಮಹಾ
ನೀತಿ ನ್ಯಾಯದಿಂದಲವನು ತೀರ್ಪು ಕೊಡುವನು ॥ ಮೇಘಾ-
ಕೊಳವಿ ಶಬ್ದದಿಂದ ದೂತರಾ [ರ್ವಾ] ರಿ ಬರುವರು । ಶಬ್ದ
ಕೇಳಿ ಸತ್ತ ಜನsರೆಲ್ಲರನ್ನು ದಿವ್ಯದೂತರು । ಕುರುಬ
ರಂತೆ ಹೊರಟು ಭಾಗವಾಗಿ ಏಂಗಡಿಸುವರು ॥ ಮೇಘಾ-

ಕ್ರೈಸ್ತ ಗೀತಗಳ ಛಂದಸ್ಸಿನ ಬಗ್ಗೆ ಒಂದು ಮಾತು. ತನ್ನ 'ಪ್ರಾಕ್ಕಾವ್ಯಮಾಲಿಕೆ'ಯಲ್ಲಿ ಈ ಬಗೆಯ ಅರ್ವಾಚೀನ ಪದ್ಯಗಳನ್ನು ಸೇರಿಸಿದ ವುರ್ತ್ ಈ ಕುರಿತು ವಿವರಣೆ ನೀಡಿದ್ದಾನೆ. ಅದರಲ್ಲಿ ಅವನು ಟ್ಯುಟನಿಕ್ ಪದ್ಯಗಳ ಗಣನಿಬಂಧನೆ ಮತ್ತು ಅಂತ್ಯಪ್ರಾಸ ಇವುಗಳನ್ನು ಎತ್ತಿ ತೋರಿಸಿ ವೇದಘೋಷದಲ್ಲಿಯ ಸ್ವರ ಪ್ರಸ್ತಾರಕ್ಕೂ ಈ ಹಾಡುಗಳ ಛಂದಸ್ಸಿಗೂ ತಳಕು ಹಾಕಿದ್ದಾನೆ ಮತ್ತು ಸ್ವರಭಾರವೇ ಈ ಹೊಸ ಪದ್ಯಗಳ ಜೀವಾಳವೆಂದಿದ್ದಾನೆ:

"ಗುರು ಲಘು ಭೇದಗಳಲ್ಲಿ ಈ ಪದ್ಯಗಳಿಗೂ ಮೂಲಕ್ಕೂ ವ್ಯತ್ಯಾಸವುಂಟು. ಹ್ಯಾಗಂದರೆ ಸ್ವಾಭಾವಿಕವಾಗಿ ಒಂದು ಅಕ್ಷರ ಗುರುವಾದರೂ ಸ್ವರಿತ, ಉದಾತ್ತ, ಅನುದಾತ್ತ-ಎಂಬೀ ಮೂರು ತರದ ಸ್ವರಭೇದಗಳಲ್ಲಿ ಒಂದನೇದು ಅಥವಾ ಯರಡನೇದು ಆ ಅಕ್ಷರಕ್ಕೆ ಬೀಳದ ಪಕ್ಷದಲ್ಲಿ ಅದು ಲಘುವೇ ಸರಿ. ಉದಾ-'ಓ ಕರ್ತ' ಇದರಲ್ಲಿ ಗುರು ಇದ್ದದರಿಂದ ಸ್ವರಿತ ಉದಾತ್ತಗಳು ಇಲ್ಲದ್ದರಿಂದ ಲಘುತ್ವ ಬರುವದು. ಹಾಗೂ ಸ್ವಾಭಾವಿಕವಾಗಿ ಒಂದು ಅಕ್ಷರ ಲಘುವಾದರೂ ಅಸ್ವರ ಭೇದಗಳಲ್ಲಿ ಸ್ವರಿತವಾಗಲೀ ಉದಾತ್ತವಾಗಲೀ ಆ ಅಕ್ಷರಕ್ಕೆ ಬೀಳುವ ಪಕ್ಷದಲ್ಲಿ ಅದು ಗುರು ಸರಿ. ಉದಾ-ಕರೆ. ಇಲ್ಲಿ ಲಘುವಾದರೂ ಅದಕ್ಕೆ ಉದಾತ್ತ ಹತ್ತುವುದರಿಂದ ಗುರುವಾಗುವುದು." (ಪು.೫೩೩). ಎಷ್ಟೊಂದು ಆಳವಾಗಿ ವಿವೇಚಿಸಿದ್ದಾರೆ!

ಅಂತ್ಯಪ್ರಾಸವು ಕ್ರೈಸ್ತ ಭಾವಗೀತೆಗಳ ವೈಶಿಷ್ಟ್ಯ. ಆದರೆ ಅದು ದ್ವಿತೀಯ ಪ್ರಾಸದಂತೆ ನಿಯತವಾಗಿ ಬರುವಂಥದಲ್ಲ. ಅಂತ್ಯಪ್ರಾಸದ ವೈಚಿತ್ರ್ಯಕ್ಕೆ ಇದೊಂದು ಉದಾಹರಣೆ :

ಅಗೋ ನೀ ಹೊಂದಿ ಅರ್ಕ
ಈ ರಾತ್ರಿ ಎಂಬ ಕರ್ಕ

ನಿನ ಜ್ಯೋತಿ ಅಟ್ಟಿದಂ
ನೀ ಹೋಗು ರವಿಯಾಗಿ
ನನ್ನೀಶ ಸವಿಯಾಗಿ
ನನ ಹೃದಯದಲ್ಲಿ ಮೂಡಿದಂ.

ಒಟ್ಟಿನ ಕ್ರೈಸ್ತ ಪದ್ಯ ಸಮುದಾಯದಲ್ಲಿ ನಾವು ಎರಡು ಪ್ರಕಾರಗಳನ್ನು ಕಾಣುತ್ತೇವೆ. ಹಳೆಯ ಕಂದ, ಮಾತ್ರಾವೃತ್ತ ಮತ್ತು ದಾಸರ ಕೀರ್ತನೆಗಳ ಧಾಟಿಯಲ್ಲಿ ರಚಿತವಾದಂಥವುಗಳು. 'ಯಾತ್ರಿಕನ ಸಂಚಾರ' ದಲ್ಲಿ ಬಂದ ಕೆಲವು ಪದ್ಯಗಳು, ಕಿಟೆಲರ ಖಂಡಕಾವ್ಯ ಹಾಗೂ ಬಿ.ಎಚ್. ರೈಸನ ಅನೇಕ ಸಂಗೀತಗಳು ಆರಂಭದ ಕ್ರೈಸ್ತ ಪ್ರಚಾರಕ್ಕೆ ಉದಾಹರಣೆಗಳಾಗಿವೆ. ಇನ್ನೊಂದು, ಪಾಶ್ಚಾತ್ಯ ಗೀತದ ಧಾಟಿಗಳಿಗೆ ತದ್ವತ್ ಅನುಗುಣವಾಗುವಂತೆ ರಚಿತವಾದ ಪ್ರಾರ್ಥನಾ ಪದ್ಯಗಳು. ಅಲ್ಲಿ ನಮಗೆ ಹೊಸ ಛಂದಸ್ಸು ತೋರಿ ಬರುತ್ತದೆ. ಆದರೆ ಅದು ಪಾಶ್ಚಾತ್ಯ ಸಂಗೀತಕ್ಕೆ ಅಳವಡಿಸಿಕೊಂಡಿದ್ದರ ಪರಿಣಾಮವಲ್ಲದೆ, ಹೊಸತನ್ನು ತರಬೇಕೆಂಬ ಹೇತುವಿನಿಂದಲ್ಲ.

### ೩೬ ಹೊಸ ಕವಿತೆ

ಈ ಮಧ್ಯೆ ಹೊಸಗನ್ನಡದ ಭಾವಗೀತವು–ನುಸುಳಲೊ ಬೇಡವೊ ಎಂಬಂತೆ ಇಣುಕುತಲಿದ್ದಿತು ! ಹಳೆಯ ಛಂದಸ್ಸನ್ನು ಬಿಟ್ಟುಕೊಟ್ಟು ಸ್ವತಂತ್ರವಾಗಿ ಬರೆಯಲಾದ ಕೊಡಗು ದೇಶವನ್ನು ಕುರಿತ ಈ ಪದ್ಯವನ್ನು ಗಮನಿಸತಕ್ಕುದು :

೧. ಕೊಡಗು ಸ್ವದೇಶವು
ಎಷ್ಟೋಚಂದವಾದುದು!
ಬೆಟ್ಟ ಬೆಟ್ಟ ತುದಿಯೇ
ಮಲೆನಾಡು ತೀರವೇ
ನೀಲಬಣ್ಣ ಕಡಲು
ಸುತ್ತು ಮುತ್ತು ಕಾಣ್ಬುದು

೨. ಬೆಳ್ಳಿಧಾರ ಜಲವು
ಬೆಟ್ಟದಿಂದಲಿಳಿದು
ಕಾಡು ತೋಟೆ ಗದ್ದೆಯ
ಊರು ಗ್ರಾಮ ದಾಟುವ
ಮೀನು ತುಂಬ ನದಿಯು
ಕಡಲಲ್ಲಿ ಶೇರೋದು

೩. ನದಿಮರಳೋಲಿಗೆ
ನೆಲ್ಲು ಗದ್ದೆಯಿಲ್ಲದೆ
ಗಂಧ ಕಾಪಿ ಯಾಲಕಿ
ಬಾಳೆ ಕಿತ್ತೆ ಬಗಿನಿ
ಬೆಟ್ಟದಲ್ಲಿ ಹುಟ್ಟೋದು
ಜೇನು ತುಪ್ಪ ಬಲುವು

೪. ಬೆಟ್ಟ ಕಾಡಿನೊಳಗೆ
ಆನೆ ಕಾಟಿ ಕಡವ
ನರಿ ಪುಲಿ ಕರಡಿ
ಕಾಡುಪಂದಿ ಕುರಂಗಿ
ಮನೆ ಕೊಟ್ಟೆ ಹತ್ತಿರ
ಕರು ದನ ಪುಷ್ಕಲ

೫. ಇನ್ನು ಏನು ಕಡಿಮೆ
ಕೊಡವ ಜನಾಂಗಕೆ?
ಅಷ್ಟು ಪ್ರೀತಿಮಾಡುವ
ನಂಬಿ ಸೇವಿಸಿದರೆ,
ಕರ್ತನಾದ ದೇವರ
ಸುಖ ಪೂರ್ತಿ ಜನಕೆ !
(ಕೊಡಗು ದೇಶದ ವರ್ಣನೆ–ಎ. ಗ್ರೇಟರ್, ೧೮೬೯)

## ೩.೭ ಪಠ್ಯಪುಸ್ತಕಗಳಲ್ಲಿ ಹೊಸ ಕವಿತೆ

ಹೊಸ ಕವಿತಾ ರಚನೆಗೆ ಉತ್ತಮ ಅವಕಾಶವನ್ನು ಒದಗಿಸಿದ ಇನ್ನೊಂದು ಸಾಧನವೆಂದರೆ ಪಠ್ಯಪುಸ್ತಕ. ದೊಡ್ಡ ಮಕ್ಕಳಿಗಾಗಿ ನಡುಗನ್ನಡ ಕಾವ್ಯಗಳಿಂದ ಕೆಲವು ಭಾಗಗಳನ್ನು ಆಯ್ದುಕೊಡುವುದು ಸಾಧ್ಯವಿದ್ದಿತು. ಆದರೆ ಎಳೆಯರಿಗಾಗಿ ಅತಿ ಸರಳ ಭಾವದ ಪದ್ಯಗಳನ್ನು ಪ್ರತ್ಯೇಕವಾಗಿ ರಚಿಸುವುದು ಅಗತ್ಯವೆನಿಸಿತು.

ಪಠ್ಯಪುಸ್ತಕದ ರಚನೆಯಲ್ಲಿ ಮುಂಬಯಿ ಸರಕಾರವು ಮೊದಲ ಅಡಿಯಿಟ್ಟಿತೆಂಬುದನ್ನು ನೋಡಿದ್ದೇವೆ. ಮುಂದೆ ೧೮೭೩ರಲ್ಲಿ ಪ್ರಕಟವಾದ ಕನ್ನಡ ಕವಿತೆಯ ಮೊದಲನೆಯ ಪುಸ್ತಕದಲ್ಲಿ 'ಹೆಣ್ಣು ಮಕ್ಕಳಿಗೆ ಉಪದೇಶ', 'ವಿಕ್ಟೋರಿಯಾ ರಾಣಿಯ ಸ್ತುತಿ', 'ನಾಯಿಯ ವರ್ಣನೆ', 'ಮಂಗನ ಆಟ'. 'ನನ್ನ ತಾಯಿ' ಮುಂತಾದ ನವೀನ ರಚನೆಗಳಿವೆ. ಅವು ಕಂದ, ಷಟ್ಪದಿ, ಚೌಪದಿ ಮುಂತಾದ ಪೂರ್ವ ಪರಿಚಿತ ವೃತ್ತಗಳಲ್ಲಿಯೆ ಇವೆ. ಮಾದರಿಯ ಕೆಲವು ಪದ್ಯಗಳಿವು:

**ಮಂಗನ ಆಟ**

ಒಂದು ಮಂಗವು ತನ್ನ ಕೈಯೊಳು
ಚಂದವಾಗಿಹ ಕೋಲ ಪಿಡಿಯುತ
ಅಂದದಲಿ ಗೆಜ್ಜೆಗಳ ಕಟ್ಟಿಸಿಕೊಂಡು ನಡುವಿನಲಿ
ಬಂದು ವೈಯಾರದಲಿ ನಿಂತಿಹ
ಚಂದ ಹೋತಿನ ಮೇಲೆ ಕೂಡುತ
ಮಂದಿ ನೋಡುವ ಹಾಗೆ ಪೇರಿಯ ತಿರುಗಿಸುತ್ತಿಹವು

**ನಾಯಿಯ ವರ್ಣನೆ**

ಒಂದು ನಾಯಿಯು ತನ್ನ ಬಾಯೊಳು
ಚಂದವಾಗಿರ್ದೊಂದು ರೊಟ್ಟಿಯು

ಅಂದದಿಂದಲಿ ಕಚ್ಚಿಕೊಂಡು ಹೊಳೆಯ ದಾಟುತಿರೆ
ಸಂದ ನೆರಳವ ಕಂಡು ಇದು ಮ-
ತ್ತೊಂದು ಸೊಣಗನು ಯಿದರ ಬಾಯೊಳ
ಗಿಂದ ಕಸಗೊಳಬೇಕು ರೊಟ್ಟಿಯನೆಂದು ಬಗೆಯುತ್ತ.
ಕೆಟ್ಟ ಮನಶಿನ ನಾಯಿ ತನ್ನೊಳು
ಹುಟ್ಟಿದಂಥಾ ಶಿಟ್ಟಿನಿಂದಲಿ
ಪಟ್ಟನೇ ಬಾಯ್ದೆರೆದು ನೀರೊಳು ಮೋರೆ ಮುಳುಗಿಸಿತು
ಅಪ್ಪರಲಿ ಬಾಯಿಯ ರೊಟ್ಟಿ ತಳಕೇ
ಮುಟ್ಟಿ ಹೋಯಿತು ಮನದ ಆಸೆಯು
ಕೆಟ್ಟಿತಂಣಾ ಪೇಳ್ವುದೇನತ್ಯಾಶೆ ಬಹು ಕೆಡಕು.

ಇಲ್ಲಿಯ ಮಂಗ ಹಾಗೂ ನಾಯಿಯ ಚಿತ್ರಣಗಳೇನೊ ಸ್ಪಷ್ಟವಾಗಿವೆ. ಆದರೆ ಬಂಧವು ಶಿಥಿಲವಾಗಿವೆ. ಕೆಲವೆಡೆ ಅನವಶ್ಯಕವಾಗಿ ಶಬ್ದಗಳನ್ನು ತುಂಬಿ ಪಾದ ಪೂರ್ತಿಯನ್ನು ಮಾಡಲಾಗಿದೆ. ದ್ವಿತೀಯ ಪ್ರಾಸಕ್ಕಾಗಿ ಮಾತ್ರ ರೊಟ್ಟಿಯು ಕವಿಗೆ ಚಂದವಾಗಿ ಕಂಡಿತಲ್ಲದೆ, ಅದರಲ್ಲಿ ಬೇರಾವ ಔಚಿತ್ಯವಿಲ್ಲ.

"ಕನ್ನಡವು ಜೀವಂತ ಭಾಷೆಯೇ. ಆದರೆ ಎಳೆಯ ಮಕ್ಕಳಿಗೆ ಹಚ್ಚಿದ ಪದ್ಯಗಳನ್ನು ನೋಡಿದರೆ ಹಾಗೆನಿಸುವುದಿಲ್ಲ" ಎಂಬ ಆಕ್ಷೇಪದ ದನಿಯನ್ನು ಎತ್ತಿ ಬಾಸೆಲ್ ಮಿಶನ್ನಿನ 'ಜೆ.ಬಿ.' (ಈತ ಜೆ. ಬ್ರಿಗೆಲ್ ಇರಬೇಕು) 'ಕನ್ನಡ ಕಾವ್ಯ. ಭಾಗ-೧' ಎಂಬುದನ್ನು ಪ್ರಕಟಿಸಿದ್ದಾನೆ (೧೮೯೬). ಅವನ ಪ್ರಕಾರ, ಚಿಕ್ಕವರಿಗಾಗಿ ಇರಬೇಕಾದ ಪದ್ಯಗಳ ಲಕ್ಷಣಗಳೆಂದರೆ : "Free form all bombastic & pedantic imitation of Sanskrit, freedom of expression, the elaborate phraseology and the fanciful word combination, only aiming at simplicity, clearness, naturalness and graceful, compatible with the spoken dialect."

ಇದರಲ್ಲಿ ಸಮಕಾಲೀನ ನೀರಸ ಪದ್ಯ ರಚನೆಯ ತೆಗಳಿಕೆ ಇದೆಯಲ್ಲದೆ, ಹೊಸ ಕವಿತೆಯ ಮುನ್ನೋಟವಿದೆ. ಅವನ ಸಂಗ್ರಹದಲ್ಲಿರುವ ಪದ್ಯಗಳು ಎಂಟು ಮಾತ್ರ. ಆದರೆ ಬಳಕೆಯ ಮಾತಿನ ಪದ್ಯಗಳನ್ನು ಬರೆಯ ಹೋಗಿ ಶಿಥಿಲ ಬಂಧದ, ನೀರಸ ಪದ್ಯಗಳನ್ನು ತಾನೇ ರಚಿಸಿದ್ದಾನೆ! ಇದು ಮಾದರಿ :

**೩. ಹಿರಿಯರ ಮಾತು ಮೀರಬಾರದು**

ತಂದೆಯೊಬ್ಬನು ಮಗನ ಕರದಿಂ-

ತಂದ : ನೋಡು ಮಗ ನಮ್ಮ ಕೆರೆಯೊಳ
ಗೊಂದು ಮೊಸಳೆಯ ಕಂಡೆನ್ನೈ ಮರಿ ಸಹಿತ ಇರುವುದನ್ನೂ,
ಕಂದ, ನೀನಾ ಕೆರೆಗೆ ಹೋಗದಿ-
ರೆಂದು ಬುದ್ಧಿಯ ಹೇಳಿದನು, ಮ-
ತ್ತೊಂದು ದಿನದೊಳಗಪ್ಪನಿಲ್ಲದ ಸಮಯದಲಿ ಹುಡುಗಾ ॥

ಮಕ್ಕಳಿಗೆಂದು ಪದ್ಯಗಳನ್ನು ರಚಿಸಬೇಕೆನ್ನುವಲ್ಲಿ ಸೋಸಲೆ ಅಯ್ಯಾಶಾಸ್ತ್ರಿ, ಎಂ.ಡಿ. ಅಳಸಿಂಗರಾಚಾರ್ಯ ಮತ್ತು ಜಯರಾಯಾಚಾರ್ಯ ಮುಂತಾದ ಆಸ್ಥಾನ ವಿದ್ವಾಂಸರು ಪ್ರಯತ್ನಪಟ್ಟರಾದರೂ ಮಕ್ಕಳ ಮನಸ್ಸನ್ನು ಸೆರೆಹಿಡಿಯುವಂತಹ ಪದ್ಯರಚನೆ ಅವರಿಗೆ ಅಷ್ಟೊಂದು ಸಾಧಿಸಲಿಲ್ಲ. ಇದ್ದುದರಲ್ಲಿಯೇ ಜಯರಾಯಾಚಾರ್ಯರ ಗೀತಗಳು (೧೯೦೨) ಉತ್ತಮವೆನ್ನಬಹುದು.

ಪಠ್ಯಪುಸ್ತಕಗಳಿಗಾಗಿ ವಿಶೇಷತಃ ಇಂಗ್ಲಿಷ್‌ನಿಂದ ಅನುವಾದಿಸಿ ಎಸ್.ಜಿ. ನರಸಿಂಹಾಚಾರ್ಯರು ಹಲವಾರು ಹೊಸ ಪದ್ಯಗಳನ್ನು ರಚಿಸಿದ ಅಂಶವನ್ನು ಪ್ರಸ್ತಾಪ ಮಾಡಿದ್ದೇವೆ. ಇತ್ತ ಮಿತ್ರರಿಗೆ ಕಾದಂಬರಿ, ನಾಟಕಾದಿಗಳಿಗೆ ಅವರು ಬರೆದು ಕೊಡುತ್ತಿದ್ದುದೂ ನಿಜ.[೪] <೯೧೫> ಅಂಥವುಗಳಲ್ಲಿ ಲಭ್ಯವಿರುವ ಮೊದಲ ಪದ್ಯವೆಂದರೆ 'ಶರಣು ವಿಮಲೆಯ ಚರಣಕೆ' ('ದುರ್ಗೇಶ ನಂದಿನಿ', ೧೮೮೫).

ಪಂಜೆ ಮಂಗೇಶರಾಯರು ೧೮೯೩ಕ್ಕಿಂತ ತುಸು ಮೊದಲ ಕಾಲದಿಂದ ಪದ್ಯಗಳನ್ನು ರಚಿಸುತ್ತಿದ್ದಿರಬೇಕು, ಎಂಬುದಾಗಿ ಗೋವಿಂದ ಪೈ ಊಹಿಸಿದ್ದಾರೆ. 'ಮೆಚ್ಚಿದೆನು ನಾದಲೋಲ' ಎಂಬುದನ್ನು ಕವಿಯ ವಾಣಿಯಿಂದಲೇ ಕೇಳಿದುದಂತೆ.[೫] ೧೮೯೭ರ 'ಸತ್ಯ ದೀಪಿಕೆ'ಯಲ್ಲಿ 'ಮರಳಿ ತಮ್ಮನ ಕರೆಯಪ್ಪಾ' (O! call my brother back to me) ಎಂಬ ಅನುವಾದಿತ ಕವನ ಅವರಿಂದ ಪ್ರಕಟವಾಯಿತು. ಏನಿದ್ದರೂ ಮಕ್ಕಳಿಗಾಗಿ ಅವರು ರಚಿಸಿದ ಸುಪರಿಚಿತ ಪದ್ಯಗಳು ೨೦ನೆಯ ಶತಮಾನದಲ್ಲಿಯೇ ರಚಿತವಾದವುಗಳು.

ಇಂತು ಹೊಸ ಕವಿತೆಯು ಮಿಶನರಿ ಜನರ ಪ್ರಾರ್ಥನಾ ಪದ್ಯಗಳ ಮೂಲಕ ೧೮೩೮ರ ಸುಮಾರಿಗೆ ತಲೆಯೆತ್ತಿತು. ಕ್ರಿ.ಶ. ೧೮೮೦ನೆಯ ದಶಕದಲ್ಲಿ ಕೆಲವು ನಾಟಕಗಳ ಅನುವಾದಗಳಲ್ಲಿ ಕಾಣಿಸಿಕೊಂಡಿತು ವಿದ್ಯಾರ್ಥಿಗಳ ನಿಮಿತ್ತದಿಂದ ಇಂಗ್ಲಿಷ್ ಭಾವಗೀತಗಳ ಭಾಷಾಂತರಕ್ಕೆ ಆಸ್ಪದವುಂಟಾಯಿತು. ಲಾವಣಿ, ಯಕ್ಷಗಾನ-ಇವುಗಳಲ್ಲಿಯೂ ಆಗೀಗ ಹೊಸ ಭಾವಗಳೂ, ಸಮಕಾಲೀನ ಅಂಶಗಳೂ ವ್ಯಕ್ತವಾದುವು. ಆದರೆ ೧೯ನೆಯ ಶತಮಾನದಲ್ಲಿ ಸ್ವತಂತ್ರವಾದ ಭಾವಗೀತಗಳ ರಚನೆಯಾದುದರ ಸ್ಪಷ್ಟ ಉಲ್ಲೇಖವಿಲ್ಲ. ೨೦ನೆಯ ಶತಮಾನದ ಆರಂಭದಲ್ಲಿ ಇಂಗ್ಲಿಷ್ ಭಾವಗೀತಗಳ ಅನುವಾದದ ಮೂಲಕವೇ ಅದರ ಪ್ರವಾಹ ಹರಿಯುತೊಡಗಿತು. ಈ ಕಾರ್ಯದಲ್ಲಿ ಹಟ್ಟಿಯಂಗಡಿ ನಾರಾಯಣರಾಯರು ಜೊತೆಗೂಡಿದರು. ಬಿಎಂಶ್ರೀಯವರು ಇಂಗ್ಲಿಷ್ ಗೀತಗಳನ್ನು

ಹೊರತಂದ ಕಾಲದಿಂದ (೧೯೨೪) ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಭಾವಗೀತೆಗೆ ಭದ್ರವಾದ ಸ್ಥಾನ ದೊರಕಿತು.

**ಸಂದರ್ಭಸೂಚಿ**

೧. ಸಾಹಿತ್ಯ ಮತ್ತು ವಿಮರ್ಶೆ ಪು. ೨೨
೨. ಪಂಜೆಯವರ ನೆನಪಿಗಾಗಿ, ಪು. ೩೧

## ಪ್ರಕರಣ : 4
# ನಾಟಕಗಳು

ಉಪಲಬ್ಧವಿರುವ ಕನ್ನಡ ನಾಟಕಗಳಲ್ಲಿ ಹದಿನೇಳನೆಯ ಶತಮಾನದಲ್ಲಿದ್ದ ಸಿಂಗರಾರ್ಯನ 'ಮಿತ್ರವಿಂದಾಗೋವಿಂದ'ವೇ ಮೊದಲಿನದು. ಅದಕ್ಕೂ ಹಿಂದೆ ಕೆಲವು ನಾಟಕಗಳು ರಚಿತವಾಗಿದ್ದರೂ ಅವು ಕಾಲಗರ್ಭದಲ್ಲಿ ಅಡಗಿರಬೇಕು ಎನ್ನುವ*. ಆದರೆ ಆ ಮುಂದೆಯಾದರೂ ನಾಟಕ ರಚನೆಯ ಪರಂಪರೆಯು ಕಂಡು ಬರಬಾರದೆ! ಸಿಂಗರಾರ್ಯನ ಅನಂತರ ನಮಗೆ ನಾಟಕಕಾರರು ದೊರೆಯುವುದು ೧೮೦ ವರ್ಷಗಳು ಕಳೆದ ಮೇಲೆಯೇ! ಕಾರಣವೇನೇ ಇರಲಿ, ಪ್ರಾಚೀನ ಕನ್ನಡ ಕವಿಗಳು ನಾಟಕ ರಚನೆಗೆ ಮನಸ್ಸುಗೊಡಲಿಲ್ಲವೆನ್ನುವುದು ಸ್ಪಷ್ಟವಿದೆ.

## 41 ಶಾಕುಂತಲದ ಅನುವಾದಗಳು

ಕನ್ನಡದಲ್ಲಿ ನಿಯಮಿತವಾದ ನಾಟಕ ರಚನೆಯು ೧೮೬೯ರಿಂದ, ಕಂಡುಬರುತ್ತದೆ. ಆ ವರ್ಷದ ಚುರಮರಿಯವರ 'ಅಭಿಜ್ಞಾನ ಶಾಕುಂತಲ'ದ ಅನುವಾದದಿಂದ, ಆಮೇಲೆ ೧೮೮೨ರ ಸುಮಾರಿಗೆ ಸಿದ್ಧವಾದ ಬಸವಪ್ಪಶಾಸ್ತ್ರಿಗಳ ಅನುವಾದದ ಮೇಲ್ಮೆಯನ್ನು ಮನ್ನಿಸಿ ಹಲವು ಲೇಖಗಳು ಪ್ರಕಟವಾಗಿವೆ. ಅದನ್ನು ಚುರಮರಿ ಶೇಷಗಿರಿರಾಯರ ಅನುವಾದಕ್ಕೆ ಹೋಲಿಸಿ, ಯಾವುದು ಹೆಚ್ಚು ಉತ್ತಮ ಎನ್ನುವ ಬಗ್ಗೆ ಅಭಿಪ್ರಾಯಗಳು ವ್ಯಕ್ತವಾಗಿವೆ.

---

* ಚಿತ್ತೂರಗಢದ ಮಹಾರಾಣಾ ಕುಂಭನು (೧೪೩೩–೧೪೬೮) 'ಸಂಗೀತ ರಾಜ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಅವನು ಸ್ವತಃ ಕವಿ ನಾಟಕಕಾರ ಸಂಗೀತಶಾಸ್ತ್ರಜ್ಞನಿದ್ದನೆಂದು ಅವನು ನೆಡೆಸಿದ ಕೀರ್ತಿಸ್ತಂಭದಲ್ಲಿ ಉಲ್ಲೇಖವಿದೆ. ಅವನು ಸಂಸ್ಕೃತ, ಮರಾಠೀ, ಕನ್ನಡ, ತೆಲುಗು ಭಾಷೆಗಳಲ್ಲಿ ನಾಟಕ ರಚಿಸಿರುವುದಾಗಿ ಎರಡು ಕಡೆ ಪ್ರಸಕ್ತಿ ಇದೆ. ಅವು ಯಾವುವೂ ಈಗ ಲಭ್ಯವಿಲ್ಲ.

"ಶ್ರೀ ಕರ್ನಾಟಕ ವೇದಪಾಟ ಸುಮಹಾರಾಷ್ಟ್ರಾದಿಶೇಯೋದಯು । ದ್ವಾಸೀ ಗುಂಫಮಯಲ ಚತುಷ್ಟಯಮಯಂ ಸನ್ನಾಟಕಾನಾಂ ವ್ಯಧಾತ್ ॥" – ಕೀರ್ತಿಸ್ತಂಭ

"ಸಂಸ್ಕೃತ ಭಾಷಾ ಮಹಾರಾಷ್ಟ್ರ ತ್ರೈಲಿಂಗ್ ಕರ್ಣಾಟಕ ಭಾಷಾ ಚತುಷ್ಟಯ ರಚಿತ ನಾಟಕರಾಜ ಚತುಷ್ಟಯ:" – ಸಂಗೀತರಾಜ (ಪ್ರಕಟಣೆ : ವಾರಾಣಾಸಿ, ೧೯೬೩). ಈ ಅಂಶವನ್ನು ಮೊದಲಿಗೆ ಗುರುತಿಸಿದವರು ಡಾ. ಭೀಮರಾವ ಚಿಟಗುಪ್ಪಿ.

'ಅದೆಲ್ಲಿ. . . .ಇದೆಲ್ಲಿ?' ಎಂಬ ಮಾತೂ ಪ್ರಾಂತಾಭಿಮಾನದ ಆರೋಪವೂ ಕೇಳಬಂದಿವೆ.[೧] ಅದೇನೇ ಇದ್ದರೂ ಈ ಆದ್ಯ ಕೃತಿಗಳು ೧೯ನೆಯ ಶತಮಾನದ ನಾಟಕ ಪರಂಪರೆಯನ್ನು ಪ್ರತಿನಿಧಿಸುವುದರಿಂದ ಅವನ್ನು ಸ್ವಲ್ಪ ವಿವರವಾಗಿ ಪರಿಶೀಲಿಸೋಣ.

ಇಬ್ಬರ ಅನುವಾದ ಶೈಲಿಯನ್ನು ನಿದರ್ಶಿಸುವಂತಹ ಕೆಲವು ಪದ್ಯಗಳನ್ನು ಆಯ್ದು ಇಲ್ಲಿ ಕೊಡುವೆವು :

೧. **ಸಂಸ್ಕೃತ ಮೂಲ :**
ಆಪರಿತೋಷಾದ್ವಿದುಷಾನ ಸಾಧುಮನ್ಯೇ ಪ್ರಯೋಗವಿಜ್ಞಾನಂ
ಬಲವದಪಿ ಶಿಕ್ಷಿತಾನಾಂ ಆತ್ಮನ್ಯ ಪ್ರತ್ಯಯಂ ಚೇತಃ ॥ (ನಾಂದೀ)

ಶೇಷಗಿರಿರಾಯ :
ಕಾಂತೆ ಕೇಳೊರೆಯಂತೆ ಗಂತಿನ ಗಂತದಂತನನಾಂತವರ್
ಕುಂತು ಕೇಳುತಲಂತರಂಗದಿ ಸಂತಸಂ ತಳೆದಿಂದು ಪ್ರ-
ತ್ಯಂತರಂ ಬರುವಂತಿನಂ ತಲೆದೂಗುವಾ ಪರಿಯಂತರಂ
ನಾ ತಳೆರ್ದಿಹೆ ಶಂಕೆ ಸದ್ಗುಣವಂತನಾಂ ತದನಂತರಂ ॥

ಬಸವಪ್ಪಶಾಸ್ತ್ರಿಗಳ ಅನುವಾದ :
ರಸಿಕರ್ಕಳೊಪ್ಪುವನ್ನಂ
ರಸಾಭಿನಯ ಕೌಶಲಂಗಳೊಳ್ಗಿದು ವೆನುತಾ-
ನುಸಿರಂ ವಲಮೋದಿಡ ಮಾ
ನಿಸರ್ಗಂ ತಮ್ಮೊಳಗೆ ತಮಗೆ ನಂಬುಗೆಯಿಲ್ಲಂ ॥

ಶೇಷಗಿರಿರಾಯರ ಅನುವಾದವು ಮೂಲದ್ದಕಿಂತ ವಿಸ್ತಾರವಾಗಿದೆ. ಅತಿಯಾದ ಗಮಕಪ್ರಾಸವು ಅರ್ಥ ಸುಭಗತೆಗೆ ಅಡ್ಡಿಯಾಗಿದೆ. 'ಕುಂತು' ಎಂಬ ಗ್ರಾಮ್ಯ ಪದವು ಇತರ ಪದಸರಣಿಯಲ್ಲಿ ಹೊಂದುವುದಿಲ್ಲ. ಬಸವಪ್ಪಶಾಸ್ತ್ರಿಗಳ ಅನುವಾದದಲ್ಲಿ ಅರ್ಥಸ್ಪಷ್ಟತೆ, ಪ್ರೌಢಿಮೆ ಮತ್ತು ಸಂಕ್ಷೇಪ–ಇವು ಎದ್ದು ಕಾಣುವಂತಿವೆ.

೨. **ಮೂಲ :**
ಅಲಕ್ಷ್ಯದಂತಮುಕುಲಾನನಿಮಿತ್ತ ಹಾಸ್ಯೈ-

ಅವ್ಯಕ್ತವರ್ಣ ರಮಣೀಯ ವಚಃ ಪ್ರವೃತ್ತೀನ್
ಅಂಕಾಶ್ರಯ ಪ್ರಣಯಿನಸ್ತನಯಾನ್ ವಹಂತೇ
ಧನ್ಯಾಸ್ತದಂಗ ರಜಸಾ ಮಲಿನೀ ಭವಂತಿ ॥ (ಅಂಕ ೭)

**ಬಸವಪ್ಪ ಶಾಸ್ತ್ರಿ :**

ಮೊಳೆವಲ್ ಶೋಭಿಸೆ ನಿರ್ನಿಮಿತ್ತ ಹಸಿತಂ ಚೆಲ್ವಾಗೆ ಲಾಲಾಜಲಂ
ತುಳುಕಲ್ ಬರ್ಪ ತೊದಳ್ ಮನಂಗೊಳಿಸಲಂಕಾರೋಹಕ್ಕೆಚ್ಚಿಪ ಮ-
ಕ್ಕಳನಿರ್ಕೈಗಳಿನೆತ್ತಿಕೊಂಡು ನಲಿವಿಂ ತದ್ದೇಹ ಚಂಚದ್ರಜೋ
ಮಳಿನಾಂಗರ್ಕಳೆನಿಪ್ಪ ಮಾನವರೆ ತಾಂ ಧನ್ಯರ್ ಫಲಂ ಧಾತ್ರಿಯೊಳ್

**ಶೇಷಗಿರಿರಾಯ :**

ತೋರಲೆಳೆಯಳೆ ದಂತಪಂಕ್ತಿಯು
ಕಾರಣೆಲ್ಲದೆ ನಗುವ ನುಡಿಗಳು
ಬಾರದಲೆ ತೊದಲಾಡಿ ಸವಿಯುಣಿಸುವ ಕಿವಿಗೆ ಮುದ್ದು
ಮೋರೆ ಮೇಲ್ಮಾಡುತಲಿ ಕರಕೊಂ-
ಡೇರು ಮಾಳಿಗೆಯೆಂದು ಕಣ್ಣೀರ್
ತಾರದಳುವರ್ಭಕನ ಮೈಮಣ್ ತಾಳ್ವರೇಂ ಕೃತರೊ.

ಬಸವಪ್ಪಶಾಸ್ತ್ರಿಗಳ ಪದ್ಯವು ಹಳಗನ್ನಡ/ವೃತ್ತದಲ್ಲಿದ್ದರೆ ಶೇಷಗಿರಿರಾಯರದು ನಡುಗನ್ನಡ/ಷಟ್ಪದಿಯಲ್ಲಿದೆ. 'ಕಾರಣೆಲ್ಲದೆ ನಗುವ' 'ನುಡಿಗಳು ಬಾರದಲೆ ತೊದಲಾಡಿ ಕಿವಿಗೆ ಸವಿಯುಣಿಸುವ' ಎಂಬ ಉಕ್ತಿಗಳು ಬಾಲಭಾವಕ್ಕೆ ಉಚಿತವಾದವುಗಳು. ಅಲ್ಲದೆ ಮೂಲದಲ್ಲಿಲ್ಲದ ಒಂದು ಹೊಸ ವಿಚಾರವನ್ನು ಸೇರಿಸಲಾಗಿದೆ : ತನ್ನ ಮುದ್ದು ಮೋರೆಯನ್ನು ಮೇಲೆ ಮಾಡಿ ಮಾಳಿಗೆಯನ್ನು ಏರೋಣವೆಂದು ಕಣ್ಣೀರು ತಾರದೆ ಅಳುತ್ತ ಹಟ ಮಾಡುತ್ತಾನೆ. ಈ ಅರ್ಭಕನು ಕಾಳಿದಾಸನು ಚಿತ್ರಿಸಿದ ಕುಮಾರನಿಗಿಂತ ಜೋರಿನವನಿದ್ದಾನೆ ! ಇತ್ತ ಬಸವಪ್ಪಶಾಸ್ತ್ರಿಗಳ ಅನುವಾದದಲ್ಲಿ ಯಥಾಪ್ರಕಾರ ಬಿಗುವು ಕಂಡುಬರುತ್ತದೆ. ಲಾಲಾಜಲಂ ತುಳುಕುವ ಹಾಗೂ ಇರ್ಕೈಗಳಿನೆತ್ತಿಕೊಳ್ಳುವ ಹೊಸ ಅಂಶಗಳು ಸಂದರ್ಭಕ್ಕೆ ಅನುಸಾರವಾಗಿವೆ. ಅದೇ 'ತದಂಗರಜಸಾ ಮಲಿನೀಭವಂತಿ'- ಇದರ ಕನ್ನಡ ರೂಪವಾದ ತದ್ದೇಹ ಚಂಚದ್ರಜೋಮಳಿನಾಂಗರ್ಕಳ್-ಎಂಬುದು ಮಾತ್ರ ಮೂಲಕ್ಕಿಂತಲೂ ದುರ್ಭರವಾಗಿದೆ.

೩ ಮೂಲ :
ಉನ್ನಮಿತ್ಯೈಕ ಭ್ರೂಲತಾಮಾನನಮಸ್ಯಾಃ ಪದಾನಿ ರಚಯಿಂತ್ಯಾಃ
ಕಂಟಕಿತೇನ ಪ್ರಥಯತಿಮಯ್ಯನುರಾಗಂ ಕಪೋಲೇನ ॥ (ಅಂಕ ೩)
**ಬಸವಪ್ಪಶಾಸ್ತ್ರಿ :**
ಮೃದುಪದ ಬಂಧವನೆಸಗುವ
ಸುದತಿಯು ನಿಮಿರ್ದೆತ್ತಿದೊಂದು ಪುರ್ವ ಮೆರೆವ
ವದನಂ ಪುಲಕಂಗೂಡಿದ್ದು
ಕದಪಿಂ ಕನ್ನಡಿಪುದನ್ನೊಳರ್ಪಭಿರತಿಯಂ ।
**ಶೇಷಗಿರಿರಾಯ :**
ಪದವ ರಚಿಸುತಿಹಳು ಚಂದಿರವದನೆ ಮನದೊಳು
ಹೃದಯದಾಸೆದೋರಲು ಬಲು ಹೆದರಿ ಬೆದರಿ ಚದುರಿ, ಮಧುರ ॥
ಕರದಿ ಗಲ್ಲವಿರಿಸಿ ಒಂದೇ ಕಡೆಗೆ ನೋಡುತಾ
ಬೆರಳಿನಿಂದ ಮೆಲ್ಲನೆ ಮೃದು ತಾಳ ಮೆಟ್ಟುತಾ ॥
ಸಿರಿವನೊಲಿಯೆ ಪಣೆಯೊಳು ಕರಿ
ಸುರುಳುಗುರುಳು ಉರುಳುತಿರಲು
ತವಕದಿಂದಲುಚಿತ ಸೂಚಿಸಿರಲು ಹಿಗ್ಗುತಾ
ಕವನ ರಸದಿ ಕನ್ನೆಯೊಳು ಮುಳ್ಳು ನಾಂಟುತಾ ॥
ಕವಿಯೆ ಬಾಷ್ಪ ಕಣ್ಣೊಳುಕ್ಕು-
ತಿವೆ ತನುಮತಿ ನವಯುವತಿ
. . . . . .
ಒಂದೆ ಭ್ರೂಲತೆಯ ಬಾಲೆ ಮ್ಯಾಲಕೆತ್ತುತಾ
ಹೊಂದಿ ಬರಲು ರಚನೆ, ಸ್ವರದಿ ನುಡಿಯುತಾ
ಬಂಧನ ಸೌಂದರಿಯದಾ-
ನಂದದಿಂದೆ ಮಿಂದು ಬಂದು ।

ಇಲ್ಲಿ, ಬಸವಪ್ಪಶಾಸ್ತ್ರಿಗಳು ಕಾಳಿದಾಸನ ಮೂಲದ ಚೌಕಟ್ಟಿನಲ್ಲಿಯೆ ಅನುವಾದಿಸಿದ್ದಾದರೆ, ಶೇಷಗಿರಿರಾಯರು ಕಾಳಿದಾಸನ ಕಲ್ಪನೆಯನ್ನಷ್ಟೆ ತೆಗೆದುಕೊಂಡು ಹಾಡಿನ ರೂಪದಲ್ಲಿ ವಿಸ್ತರಿಸಿದ್ದಾರೆ. 'ಕರದಿ ಗಲ್ಲವಿರಿಸಿ, ಬೆರಳಿನಿಂದ ಮೆಲ್ಲನೆ ತಾಳ ತಟ್ಟುತ್ತ ಒಂದು ಹುಬ್ಬನ್ನು ಮೇಲೆತ್ತಿ ರಚನೆಯು ಹೊಂದಿದ ಕನ್ಯೆಗೂ, ಸ್ವರದಿ ನುಡಿಯುತ್ತ ಪ್ರೇಮ ಕವನವನ್ನು ಬರೆಯ ಹೊರಟ ಆಧುನಿಕ ಕನ್ಯೆಗೂ ಇದು ಸಮಾನವಾಗಿ ಅನ್ವಯಿಸುವಂತಹದು.

ಇನ್ನೀಗ ಕೆಲವು ಗದ್ಯ ಭಾಗಗಳನ್ನು ನೋಡೋಣ. ಎರಡನೆಯ ಅಂಕದ ಆರಂಭಕ್ಕೆ ಬರುವ ವಿದೂಷಕನ ಸ್ವಗತದ ಮಾತಿದು:

**ಶೇಷಗಿರಿರಾಯ :**

ಏನ್ ನನ್ನ ಕರ್ಮಪ್ಪಾ ! ಈ ಅರಸಿನ ಬ್ಯಾಟೀ ಕಾಲಾಗ ನಾನನಕಾ ದಣದ ಹೋದ್ನಿ. ಕವವ ಚಿಗರಿ ! ಕವವ ಕಾಡಂದಿ ! ಕವವ ಹುಲಿ ! ಅಂತ ವದರಾಡಿಕೊಂತ ಚೀರಾಡಿಕೊಂತ ಈ ಅಡವ್ಯಾಗಿಂದಾ ಆ ಅಡವಿ. ಆ ಅಡವ್ಯಾಗಿಂದೀ ಅಡವಿ ಓಡಿ ಓಡಿ ಸಾಕಾತ್ನೋ ನಮ್ಮಪ್ಪಾ ! ಬಿಸಿಲಂತಿ ಆಷಾಡಮಾಸ ಕೇಳೋದ್ಯನತಿ. ರಣರಣ ಕುಟ್ಟೇ ಕುಟ್ಟೆತತಿ; ಮದ್ಯಾಣದ್ಹೊತ್ತಿನ್ಯಾಗ ವಂದ ಜರಾ ಗಿಡದ ಬುಡಕ ಕುಂತೇನಂದರ ನೆಳ್ಳಾರ ಅಽತೆ? ಅದೂ ಇಲ್ಲ. ನೀರಡಸಾಣಾ ತೊಪ್ಪಲ ಬಿದ್ದ ಕೊಳತ ಹಳದಾಸ ನೀರ ಕುಡ್ಯಾಣಾ. ಹಸುವಾಗಾಣಾ ಹೊತ್ತಲ್ಲದ್ಹೊತ್ತಿನ್ಯಾಗ ಹಸೆ ಖಂಡಾ ತಿನ್ನ್ಯಾಣಾ ! ಇವನ ಕುದರೀ ಹಿಂದ ಓಡಿ ಓಡಿ ಕೈಕಾಲೆಲ್ಲಾ ಸಂದದಪ್ಪಿ ಹೋದವು. ರಾತರಿನ್ಯಾಗ ಕಣ್ಣ ತುಂಬಾ ನಿದ್ದ್ಯಾರ ಆಕ್ಕೈತೆ ? ಅದೂ ಇಲ್ಲ. ಒಂದ ಜರಾ ಜಂಪ ಹತ್ತಿತ್ತ್ಯೊ ಇಲ್ಲೊ ಆಽಟರಾಗ ಬ್ಯಾಟೀ ಅಡೊ ಮಮ್ಮಕ್ಕಳು ವದರಾಡಿಕೊಂತ ಬಂದಕ್ಯಾಸ ಎಬ್ಬಿಸಿದರ !

**ಬಸವಪ್ಪ ಶಾಸ್ತ್ರಿ :**

ಅಯ್ಯೋ ದೈವವೇ ! ಬೇಟೆಯಲ್ಲೇ ಆಸಕ್ತನಾದ ಈ ರಾಯನ ಸ್ನೇಹದಿಂದ ಕೆಟ್ಟೆನಲ್ಲಾ ! ಇದೋ ಹುಲ್ಲೆ ! ಇದೋ ಹಂದಿ ! ಇದೋ ಹುಲಿ ! ಎನ್ನುತ್ತಾ ಮಧ್ಯಾಹ್ನದಲ್ಲಿಯೂ ಬೇಸಗೆಯಿಂದ ದಟ್ಟವಾಗಿ ಮರದ ನೆರಳಿಲ್ಲದ ಅಡವಿಗಳಲ್ಲಿ ಸುತ್ತಿ ಸಾಕಾಯಿತು. ಉದುರಿದೆಲೆಗಳಿಂದ ಒಗರಾಗಿ ಬಿಸ್ಸಗಿರುವ ಬೆಟ್ಟದ ತೊರೆಗಳ ನೀರುಗಳನ್ನೆಲ್ಲಾ ಕುಡಿದುದಾಯಿತು. ಇದು ಹೊರತಾಗಿ ಹೊತ್ತುಗೊತ್ತಿಲ್ಲದೆ ಸುಟ್ಟ ಮಾಂಸವೇ ಹೆಚ್ಚಾಗಿರುವ ಆಹಾರವು ಭುಂಜಿಸಲ್ಪಟ್ಟಿತು. ಕುದುರೆಯ ಹಿಂದೋಡಿ ಶರೀರದ ಕೀಲುಗಳೆಲ್ಲಾ ಸಡಲಿ ನೋವಿನಿಂದ ರಾತ್ರಿಯಲ್ಲಿಯೂ ನಾನು ಚೆನ್ನಾಗಿ ಮಲಗಲಿಲ್ಲ. ಆಮೇಲೆ ಬೆಳಕು ಹರಿಯುವುದಕ್ಕಿಂತ ಮುಂಚೆಯೇ ಅರಣ್ಯವನ್ನು ಆಕ್ರಮಿಸುವ ತೊತ್ತಿನ ಮಕ್ಕಳಾದ ಹಕ್ಕಿಯ ಬೇಟೆಗಾರರ ಕಲಕಲ ಧ್ವನಿಯಿಂದ ಎಚ್ಚರವಾಯಿತು.

ಇವುಗಳಲ್ಲಿ ಒಂದು ಬಳಕೆಮಾತಿನ ಗ್ರಾಮ್ಯ ಭಾಷೆಯಾಗಿದೆ. ಮೂಲದಲ್ಲಿ ವಿದೂಷಕನು ಕೆಳದರ್ಜೆಯ ಪಾತ್ರವಾಗಿ ಪ್ರಾಕೃತದಲ್ಲಿ ಮಾತಾಡುವವನಾದ್ದರಿಂದ ಅಂಥ ಸಂದರ್ಭಗಳಲ್ಲಿ ಬಳಕೆಯ ನುಡಿಯಿಂದಲೇ ಸಂಭಾಷಣೆಯ ಸೊಗಸು ಹೆಚ್ಚುವುದೆಂದು ಶೇಷಗಿರಿರಾಯರು ಭಾವಿಸಿದ್ದರು. ಇತ್ತ, ಬಸವಪ್ಪಶಾಸ್ತ್ರಿಗಳದು ಶುದ್ಧ ಗ್ರಾಂಥಿಕ ಭಾಷೆ,

ಈ ದೃಷ್ಟಿಯಿಂದ ಶಾಸ್ತ್ರಿಗಳ ಇನ್ನು ಕೆಲವು ವಿವಿಧ ಸಂದರ್ಭದ ಗದ್ಯ ಸಂಭಾಷಣೆಗಳನ್ನು ಪರಿಶೀಲಿಸತಕ್ಕದ್ದು.

ಶಕುಂತಲೆ : ಆತನುತಾಪಹರವಾದ ಲತಾಲಯವೆ, ಮನಸ್ಸು ಉಪಭೋಗಕ್ಕೋಸ್ಕರ ಪ್ರಸಂಗಿಸುವೆನು. (೩ನೇ ಅಂಕ)

ಶಕುಂತಲೆ : ಮುಖದಲ್ಲಿ ಮಧುವನ್ನೂ, ಹೃದಯದಲ್ಲಿ ವಿಷವನ್ನೂ ಧರಿಸಿರುವ ಈತನ ಕೈಸೇರಿದುದಕ್ಕೆ ನಾನು ಸ್ವಚ್ಛಂದಚಾರಿಣಿಯಾದೆನು. (೫ನೇ ಅಂಕ)

ದುಷ್ಯಂತ : ಸುಲಭವಲ್ಲದ ಸ್ಥಾನವನ್ನು ಹೊಂದಿ ಜಾರಿದುದರಿಂದ ಈ ಉಂಗುರವು ದುಃಖಪಡಿಸತಕ್ಕುದಾಗಿದೆ. (೬ನೇ ಅಂಕ)

ಮಾತಲಿ : ಎಲೈ ಆಯುಷ್ಮಂತನೇ, ದೇವತೆಗಳಿಗೆ ತಾಯಿ ತಂದೆಗಳಾದ ಇವರು ಪುತ್ರವಾತ್ಸಲ್ಯವನ್ನು ಸೂಚಿಸುವ ಲೋಚನಗಳಿಂದ ನಿನ್ನನ್ನು ನೋಡುತ್ತಿರುವರು. ಆದುದರಿಂದ ಇವರ ಸಮೀಪವನ್ನು ಸೇರು. (೭ನೇ ಅಂಕ)

ಬಸವಪ್ಪಶಾಸ್ತ್ರಿಗಳು ರಂಗಭೂಮಿಗೆಂದೇ ಈ ನಾಟಕವನ್ನು ಸಿದ್ಧಗೊಳಿಸಿದ್ದರೂ ಅದರ ಯಶಸ್ವೀ ಪ್ರಯೋಗದ ದೃಷ್ಟಿಯಿಂದ ಅವರು ಗದ್ಯ ಸಂಭಾಷಣೆಗಳ ಕಡೆಗೆ ಗಮನ ಕೊಟ್ಟಿಲ್ಲ. ಆಧುನಿಕ ನಾಟಕ ಸಂಭಾಷಣೆಗಳ ಯಶಸ್ವಿತೆಯನ್ನು ನಿದರ್ಶಿಸುವಂತಹ ಬೇರೆ ನಾಟಕಪ್ರಯೋಗಗಳು ಅವರ ಕಣ್ಣಿಗೆ ಬಿದ್ದಿರಲಿಲ್ಲ. ಮೈಸೂರ ಸಂಸ್ಥಾನದಲ್ಲಿ ಅವರೇ ಈ ದಿಶೆಯಲ್ಲಿ ಮೊದಲಿಗರಷ್ಟೆ.

ಅನುವಾದಕರಿಬ್ಬರೂ ಸಂಸ್ಕೃತದಲ್ಲಿ ನಿಷ್ಣಾತರಿದ್ದು, ಶಾಕುಂತಲದ ಸ್ವಾರಸ್ಯವನ್ನು ಪೂರ್ಣವಾಗಿ ಗ್ರಹಿಸಿದ್ದುದರಲ್ಲಿ ಸಂದೇಹವಿಲ್ಲ. ಬಸವಪ್ಪಶಾಸ್ತ್ರಿಗಳು ಮೂಲವನ್ನು ಅನುಸರಿಸುವುದರ ಕಡೆಗೆ ಹೆಚ್ಚು ಗಮನವಿತ್ತು ತಮ್ಮ ಪ್ರೌಢ ಕವಿತ್ವ ರಚನೆಯಿಂದ ಕನ್ನಡಕ್ಕೆ ಅಭಿಜಾತ ಸಾಹಿತ್ಯ ಕೃತಿಯೊಂದನ್ನು ನೀಡಿದ್ದಾರೆ: ಶೇಷಗಿರಿರಾಯರ ಅನುವಾದದಲ್ಲಿ ಮೂಲ ಭಾವದ ವಿಸ್ತರಣೆ, ಪ್ರೇಕ್ಷಕರನ್ನು ಮೆಚ್ಚಿಸುವ ದೃಷ್ಟಿ ಮತ್ತು ಸಂಗೀತಪ್ರಿಯತೆ–ಇವು ಮುಖ್ಯ ಲಕ್ಷಣಗಳಾಗಿವೆ. ಪುಣೆ, ಮುಂಬಯಿಗಳಲ್ಲಿದ್ದುಕೊಂಡು ಮರಾಠೀ ನಾಟಕಗಳನ್ನು ನೋಡಿದ್ದವರಾಗಿ. ಜೊತೆಗೆ ನಮ್ಮ ಜಾನಪದ ರಂಗಭೂಮಿಯನ್ನೂ ಅರಿತವರಾಗಿ ಅವರು ರಂಗಪ್ರಯೋಗದ ಯಶಸ್ವಿತೆಯನ್ನು ತಮ್ಮ ಗಮನದಲ್ಲಿರಿಸಿಕೊಂಡಿದ್ದಾರೆ. ಸ್ವತಃ ಸಂಗೀತಶೀಲರಿದ್ದು ನಾಟಕದಲ್ಲಿ ಸಂಗೀತವು ಯಾವ ರೀತಿಯಲ್ಲಿ ಪ್ರೇಕ್ಷಕರನ್ನು ರಂಜಿಸಬಲ್ಲುದೆಂಬುದನ್ನು ಅವರು ಅರಿತಿದ್ದರು.

ಮೂಲವನ್ನು ಚಾಚೂ ತಪ್ಪದೆ ಅನುಸರಿಸಬೇಕೆಂಬ ಕಟ್ಟುನಿಟ್ಟನ್ನು ಶೇಷಗಿರಿರಾಯರು ಹಾಕಿಕೊಂಡಿರಲಿಲ್ಲ. ಸುಲಭವಾಗಿ ಕನ್ನಡದಲ್ಲಿ ತರಲಾಗದ ಅಂಶಗಳಿದ್ದರೆ ಅವನ್ನು ಬಿಟ್ಟದ್ದೂ ಇದೆ. ಉದಾಹರಣೆಗೆ ಮೊದಲನೆಯ ಅಂಕದಲ್ಲಿ ಶಕುಂತಲೆಯ ವರ್ಣನೆ ಮಾಡುವಾಗಿನ 'ಕಿಮಿವಹಿ ಮಧುರಾಣಾಂ ಮಂಡನಂ ನಾಕೃತೀನಾಂ' ಎಂಬ ಸುಪ್ರಸಿದ್ಧ

ಉಕ್ತಿಯನ್ನು ಅವರು ಅನುವಾದಿಸಿಲ್ಲ. (ಇಂಥ ಕೈಬಿಟ್ಟ ಸಂದರ್ಭಗಳು ಕಡಿಮೆಯೆಂಬುದನ್ನೂ ಗಮನಿಸುವುದು) ಜೊತೆಗೆ ಮೂಲದ ಭಾವವನ್ನು ವಿಸ್ತರಿಸುವುದರ ಕಡೆಗೆ ಹೆಚ್ಚು ಒಲವನ್ನು ತೋರಿದ್ದಾರೆ. 'ಪದವ ರಚಿಸುತಿಹಳು' ಎಂಬ ಪದ್ಯದಲ್ಲಿ ಇದನ್ನು ನಾವು ನೋಡಿದ್ದೇವೆ. ಆದರೆ ಹೀಗೆ ಮಾಡುವಾಗ ಎಲ್ಲ ಕಡೆಗೂ ಸಮಾನವಾಗಿ ಮೂಲದ ಉನ್ನತಿಕೆಯನ್ನು ಕಾಯ್ದುಕೊಳ್ಳುವುದಾಗಿಲ್ಲ.

ಅಲ್ಲಲ್ಲಿ ಉತ್ತರ ಕರ್ನಾಟಕದ ಆಡುಮಾತನ್ನೂ ಅವರು ಬಳಸಿದ್ದುದರಿಂದ ಅವರ ಗದ್ಯ ಸಂಭಾಷಣೆಗಳು ಸತ್ವಯುತವಾಗಿವೆ. ೫–೬ನೆಯ ಅಂಕಗಳ ನಡುವಿನ ಪ್ರವೇಶಕವನ್ನು ಹಿಗ್ಗಿಸಿ ಆಧುನಿಕ ನಾಟಕಗಳಲ್ಲಿಯಂತೆ ಸಹಜ ಸಂಭಾಷಣೆಯನ್ನು ತಂದಿದ್ದಾರೆ. ಮೀಂಗುಲಿಗನು ತನ್ನ ಮೀನದ ಉದ್ಯೋಗವನ್ನು ವರ್ಣಿಸುತ್ತಿದ್ದಾಗ ಕೊತವಾಲನು ಏನು ಮಹಾಪುಣ್ಯದ ಕೆಲಸ ನೀನು ಮಾಡೋದು' ಎಂದು ಹಂಗಿಸುತ್ತಾನೆ ಆಗ ಮೀಂಗುಲಿಗನು 'ದೇವರೂ, ಅಜ್ಜ ಅರತೆಲಿ, ಮುತ್ಯ ಮುರತೆಲಿ ಇದೇ ವ್ಯಾರನೇ ಮಾಡತ ಬಂದೀವರಿ' ಎಂಬ ಮಾತಿನಲ್ಲಿ ದೇಸಿಯ ಸೊಗಸಿದೆ. ಎರಡನೆಯ ಅಂಕದಲ್ಲಿ ಅರಸನು ವಿದೂಷಕನಿಗೆ ಒಂದು ಸುಲಭವಾದ ಕಾರ್ಯದಲ್ಲಿ ತನಗೆ ಸಹಾಯಕನಾಗಬೇಕೆಂದು ವಿನಂತಿಸಿದಾಗ "ಏನು ಮೋದಕವನ್ನು ತಿನ್ನುವುದರಲ್ಲೇ? ಎಂದು ವಿದೂಷಕರು ಕೇಳುತ್ತಾನೆ. ಅದನ್ನು ಶೇಷಗಿರಿರಾಯರು ಭಾಷಾಂತರ ಮಾಡಿದ್ದು ಹೀಗೆ :–

ವಿದೂ : ಏನಪಾ ಅದು ? ಶಾವಿಗಿ ಉಣ್ಣೋದೇನು ?

ರಾಜ : ಅಡವಿಯೊಳಗೆಲ್ಲಿ ಶಾವಿಗೆಯೊ ? ನಿಲ್ಲು ಹೇಳತೇನಿ.

ಮೋದಕಕ್ಕಿಂತ ಶಾವಿಗೆಯನ್ನು ಉಣ್ಣುವುದು ಹಳ್ಳಿಗರಲ್ಲಿ ಹೆಚ್ಚು ರೂಢವಾದುದು. 'ಅಡವಿಯೊಳಗೆಲ್ಲಿ ಶಾವಿಗೆಯೊ?' ಎಂಬ ಸಹಜ ಮಾತು ಮೂಲದಲ್ಲಿ ಇಲ್ಲ. ಹೀಗೆ ಸಂಭಾಷಣೆಯ ರೀತಿಯನ್ನು ಆದಷ್ಟು ಜನಾಭಿಮುಖವನ್ನಾಗಿ ಮಾಡಬೇಕೆನ್ನುವ ವಾಸ್ತವ ದೃಷ್ಟಿಕೋಣವನ್ನು ಶೇಷಗಿರಿರಾಯರಲ್ಲಿ ಪ್ರಥಮತಃ ಕಾಣುತ್ತೇವೆ. ಮುಂಬಯಿ ಕರ್ನಾಟಕದವರು ರಚಿಸಿದ ಅನಂತರದ ಪೌರಾಣಿಕ/ಐತಿಹಾಸಿಕ ನಾಟಕಗಳಲ್ಲಿ ಸಹ ಈ ಪ್ರಜ್ಞೆಯನ್ನು ಅಲ್ಲಲ್ಲಿ ಗುರುತಿಸಬಹುದಾಗಿದೆ.

ಶಾಕುಂತಲದ ಇವೆರಡು ಅನುವಾದಗಳ ಬಗ್ಗೆ ಸಾರಾಂಶವಾಗಿ ಹೀಗೆ ಹೇಳಬಹುದು: ಮೂಲವನ್ನು ಕಟ್ಟುನಿಟ್ಟಾಗಿ ಅನುಸರಿಸುವುದು ಅತಿಯಾದಾಗ ಬಸವಪ್ಪ ಶಾಸ್ತ್ರಿಗಳ ಅನುವಾದವೂ, ಪ್ರೇಕ್ಷಕರ ದೃಷ್ಟಿಯಿಂದ ಭಾವವನ್ನು ವಿಸ್ತರಿಸಿ ಹೋದಾಗ ಶೇಷಗಿರಿರಾಯರ ಅನುವಾದವೂ ಅಲ್ಲಲ್ಲಿ ಅಸಮರ್ಪಕವಾಗಿವೆ. ಸಾಹಿತ್ಯಿಕ ದೃಷ್ಟಿಯಿಂದ ಬಸವಪ್ಪಶಾಸ್ತ್ರಿಗಳು ಪದ್ಯಗಳನ್ನು ಉತ್ಕೃಷ್ಟ ರೀತಿಯಲ್ಲಿ ಅನುವಾದಿಸಿದರು. ಆ ಪದ್ಯಗಳಲ್ಲಿ ಕಾಲಾಂಶದಷ್ಟನ್ನು ಹಾಡಿನ ರೂಪಕ್ಕೂ ತಿರುಗಿಸಿ ಟಿಪ್ಪಣಿಯೆಂದು ಕೊಟ್ಟು, ತಮ್ಮ ಪ್ರಯೋಗದ ದೃಷ್ಟಿಯನ್ನು

ವ್ಯಕ್ತಪಡಿಸಿದ್ದರೂ ಗದ್ಯ ಸಂಭಾಷಣೆಗಳತ್ತ ಆ ರೀತಿ ಗಮನವನ್ನು ಕೊಡಲಿಲ್ಲ. ಸಹಜ, ಸಜೀವ ಸಂಭಾಷಣೆಗಳನ್ನು ನಾವು ಶೇಷಗಿರಿರಾಯರಲ್ಲಿ ಯಥೇಚ್ಛವಾಗಿ ಕಾಣುತ್ತೇವೆ. ಹೀಗೆ ಒಬ್ಬರ ದೃಷ್ಟಿಯು ಮೂಲದ ಸಾಹಿತ್ಯ ಗುಣದ ಕಡೆಗಿದ್ದರೆ, ಇನ್ನೊಬ್ಬರದು ಅದರ ರಂಗಪ್ರಯೋಗದ ಕಡೆಗೆ ಹೆಚ್ಚಾಗಿ ವಾಲಿದ್ದಿತು. ಅವರಿಬ್ಬರ ದೃಷ್ಟಿಕೋಣವೇ ಬೇರೆಯಾದುದರಿಂದ ಯೋಗ್ಯತೆಯಲ್ಲಿ ಒಂದು ಹೆಚ್ಚು, ಇನ್ನೊಂದು ಕಡಿಮೆ ಎಂದು ತೀರ್ಮಾನಿಸ ಹೋಗುವುದೆಂದರೆ ಮಲ್ಲಿಗೆ ಮತ್ತು ಸಂಪಿಗೆಗಳಲ್ಲಿ ಯಾವುದು ಹೆಚ್ಚು ಚಂದ ಎಂದು ಕೇಳಿದಂತೆಯೇ ಸೈ.

ಶೇಷಗಿರಿರಾಯರ ಕೃತಿಯಲ್ಲಿಯ ಪದ್ಯಗಳ ಬಗ್ಗೆ ಹೇಳಬೇಕಾದ ಇನ್ನೊಂದು ಮಾತಿದೆ. ಕಾಳಿದಾಸನ ೧೯೦ ಶ್ಲೋಕಗಳಲ್ಲಿ ೧೨೦ರಷ್ಟು ಪದ್ಯಗಳನ್ನು ಕಂದ, ಷಟ್ಪದಿ ಹಾಗೂ ವಿವಿಧ ಅಕ್ಷರ ವೃತ್ತಗಳಲ್ಲಿ ಅನುವಾದಿಸಿದ್ದು, ಅವುಗಳೊಳಗೆ ಕೆಲವು ಹಳಗನ್ನಡ ಕಾವ್ಯಗಳಲ್ಲಿ ಕಂಡು ಬರದ ಅಪೂರ್ವ ವೃತ್ತಗಳಾಗಿವೆ. (ಅಮೃತಧ್ವನಿ, ಮದಿರಾ, ವಿಭಾವರಿ, ಪ್ರಹರ್ಷಿಣಿ, ಕಾಮದೆ, ಯೂಥಿಕಾ ಇತ್ಯಾದಿ). ಯೂಥಿಕಾ ವೃತ್ತದ ಈ ಪದ್ಯವನ್ನು ಗಮನಿಸುವುದು :-

ದೀರ್ಘಮಾದಗಸೆ ಬಾಗಿಲ ಹಿಂದಿಹ
ಅರ್ಗಳಾ, ಎನೆ ಕರಂಗಳ ತಾಳ್ದಿಹ
ಭರ್ಗನಂತಿವನ ಕೀರ್ತಿಯು ಪೃಥ್ವಿಗೆ
ಸ್ವರ್ಗದೋಳಿವನ ಧೀರತೆ ವಜ್ರಿಗೆ

ಇಲ್ಲಿ ಅಕ್ಷರ ಗಣಗಳ ಜೊತೆಗೆ ಮಾತ್ರಾಗಣವೂ ಒಟ್ಟಿನಲ್ಲಿ ಹೊಂದಿಕೊಂಡು ಆ ಮೂಲಕ ಗೇಯತೆಯ ಗುಣವನ್ನು ಕಾಯ್ದುಕೊಂಡದ್ದಿದೆ. ಅಮೃತಧ್ವನೀ ವೃತ್ತದಲ್ಲಿರುವ ಈ ಪದ್ಯವು ಹೃದ್ಯವಾಗಿದೆ :-

ಚಿಕ್ಕಯ್ಯ ಕೇಳ್ ನಿನಗೆ ತಕ್ಕದ್ದೆ ಕಾರ್ಯವು ಇದಕ್ಕಾಗಿ ನಿಮ್ಮಿರಿಯರು
ಸೊರ್ಕಿರ್ದ ರಕ್ಕಸರ ಕಕ್ಕೊಂಚಿ ಕೊಂದು ನೆಲಕಿಕ್ಕುತ್ತ ಬಂದರವರು
ಕುಕ್ಕಿಂಗೆ ಬಚ್ಚಿಡುತಲಕ್ಕರ್ತೆಯಿಂ ಒಡವರಂ ಕಾಯ್ದುದೆಜ್ಜವಿದಕೆ
ದಿಕ್ಕೀಯ ಪೌರವ ಕುಲಕ್ಕಿನ್ನದೇಂ ಬಹುದು ಮಿಕ್ಕಾದ ಭೂಪಜನಕೆ. (೨ನೆಯ ಅಂಕ)

ಆಶ್ರಮದ ತಾಪಸರು ದುಷ್ಯಂತನನ್ನು ಆಶೀರ್ವದಿಸುವ ಬಗೆಯಿದು. ಗಂಭೀರವಾದ ಸಂಸ್ಕೃತ ವೃತ್ತವನ್ನು ಸಾಮಾನ್ಯ ಪದಸರಣಿಯ ಕವಿತ್ವಕ್ಕೂ ಒಲಿಸಿಕೊಂಡುದಿದೆ. ಶ್ರೀ ವಾದಿರಾಜ ಕೃತ 'ಪ್ರೋಷ್ಠೀಶ ವಿಗ್ರಹಸು' ಎಂಬ ದಶಾವತಾರ ಸ್ತೋತ್ರದಂತೆಯೇ ಅಸಧಾಟಿಯಲ್ಲಿ ಇದನ್ನು ನುಡಿಸಬಹುದು. ಒಂದೆರಡು ಕಡೆಯಲ್ಲಿ ಬಂಧವು

ಸಡಿಲವೆನಿಸಿದರೂ ಸಂಸ್ಕೃತ ವೃತ್ತಗಳನ್ನು ಕನ್ನಡ ಹಾಡುಗಾರಿಕೆಗೆ ಒಗ್ಗಿಸಿಕೊಳ್ಳಲು ಶೇಷಗಿರಿರಾಯರು ಮಾಡಿದ ಪ್ರಯತ್ನವು ಸ್ತುತ್ಯವಾದುದು.

ಮಿಕ್ಕುಳಿದ ೮೦ ಪದ/ಹಾಡುಗಳಲ್ಲಿಯಂತೂ ಗೇಯತೆ ಮೈವೆತ್ತು ನಿಂತಿದೆ. ಮುದವೀಡು ಕೃಷ್ಣರಾಯರು ಈ ನಾಟಕದ ೩ನೇ ಆವೃತ್ತಿಯ ಪೀಠಿಕೆಯಲ್ಲಿ ಹೇಳಿದಂತೆ, ಅನೇಕ ವರ್ಷಗಳ ವರೆಗೆ ಉತ್ತರ ಕರ್ನಾಟಕದ ಮನೆಮನೆಗಳಲ್ಲಿ, ಸಾರ್ವಜನಿಕ ಉತ್ಸವ, ಜಾತ್ರೆಗಳಲ್ಲಿ ಕೇಳ ಬರುವಷ್ಟು ಈ ಹಾಡುಗಳು ಜನಜನಿತವಾಗಿದ್ದುವು.

ಈ ಪದಗಳ ರಾಗ, ಲಯಗಳ ವೈವಿಧ್ಯವು ಬೆರಗುಗೊಳಿಸುವಂತಿದೆ. ಅವು ಜನತೆಯ ಬಾಯಿಯಲ್ಲಿ ನೂರಾರು ವರ್ಷಗಳಿಂದ ಉಳಿದುಕೊಂಡು ಬಂದವುಗಳು. ಶೇಷಗಿರಿರಾಯರ ಸಂಗೀತ ಪರಿಣತಿಗೆ ನಿದರ್ಶನವಾದ ಈ ಹಾಡುಗಳಿಂದ ಅವರ ನಾಟಕದ ಸತ್ವವು ಹಿರಿದೆನಿಸಿದೆ. ನಾಟಕದಲ್ಲಿ ಬರುವ ಹಾಡುಗಾರಿಕೆಗೆ ಇದಕ್ಕಿಂತ ಹೆಚ್ಚಿನ ಪ್ರಶಸ್ತಿ ಇನ್ನಾವುದಿದೆ?

## 42 ಪೌರಾಣಿಕ ನಾಟಕಗಳು

ಮುಂದಿನ ಎರಡು-ಮೂರು ದಶಕಗಳಲ್ಲಿ ಸಂಸ್ಕೃತದ ಅನೇಕ ಪ್ರಮುಖ ನಾಟಕಗಳು ಕನ್ನಡದಲ್ಲಿ ಒಡಮೂಡಿದವು. ಅನುವಾದ ಕಾರ್ಯದಲ್ಲಿ ಹರ್ಷನ ನಾಟಕಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಸಂದಿದೆ. ಭವಭೂತಿ. ಶೂದ್ರಕ, ವಿಶಾಖದತ್ತ, ಬಾಣ, ಕ್ಷೇಮೀಶ್ವರ, ಭಟ್ಟನಾರಾಯಣ, ಧರ್ಮಸೂರಿ ಇವರ ನಾಟಕಗಳೂ ಕನ್ನಡಕ್ಕೆ ಒದಗಿ ಬಂದುವು. ಕೆಲವೊಂದು ನಾಟಕಗಳ ಎರಡು, ಒಮ್ಮೊಮ್ಮೆ ಮೂರು ಅನುವಾದಗಳು ದೊರೆಯುತ್ತವೆ (ಈ ಬಳುವಳಿಯು ಶಾಕುಂತಲದಿಂದಲೇ ಆರಂಭವಾದುದು). 'ಉತ್ತರ ರಾಮಚರಿತೆ'ಯನ್ನು ಒಂದೆಡೆ ಬಸವಪ್ಪಶಾಸ್ತ್ರಿಗಳು ಮತ್ತು ಎಸ್.ಜಿ. ನರಸಿಂಹಾಚಾರ್ಯರು ಇನ್ನೊಂದೆಡೆ ಧೋಂಡೋ ನರಸಿಂಹ ಮುಳಬಾಗಲ ಅನುವಾದಿಸಿದ್ದಾರೆ. 'ಪ್ರಿಯದರ್ಶಿಕಾ', 'ಗಿರಿಜಾ ಕಲ್ಯಾಣ', 'ವೇಣೀಸಂಹಾರ'ಗಳ ಎರಡೆರಡು ಅನುವಾದಗಳು ಹೊರಬಂದುದಕ್ಕೆ ಪ್ರಾಂತಭೇದವೆ ಕಾರಣ. ಆದರೇನು, ಕ್ಷೇಮೀಶ್ವರನ 'ಚಂಡಕೌಶಿಕ'ದ ಅನುವಾದಕರಾದ ಬಸವಪ್ಪಶಾಸ್ತ್ರಿ, ಜಯರಾಯಾಚಾರ್ಯ, ಮೋಟಗಾನಹಳ್ಳಿ ಶಂಕರಶಾಸ್ತ್ರಿ ಮತ್ತು ದೇವಶಿಖಾಮಣಿ ಅಳಸಿಂಗರಾಚಾರ್ಯ –ಈ ನಾಲ್ವರೂ ಮೈಸೂರ ಸಂಸ್ಥಾನದವರೇ.

ಇವುಗಳ ಅನುವಾದ ಕ್ರಮವು ಒಟ್ಟಿನಲ್ಲಿ ಬಸವಪ್ಪಶಾಸ್ತ್ರಿಗಳ 'ಕರ್ಣಾಟಕ ಶಾಕುಂತಲ'ವನ್ನೇ ಅನುಸರಿಸಿದೆ. ಮೂಲಕ್ಕೆ ಹೊಂದಿಕೊಂಡು, ಪದ್ಯಕ್ಕೆ ಪದ್ಯ, ಗದ್ಯಕ್ಕೆ ಗದ್ಯವನ್ನು ಕೊಟ್ಟು ಪದ್ಯಾನುವಾದದಲ್ಲಿ, ಪ್ರೇಕ್ಷಕರ ಅಭಿರುಚಿಯನ್ನು ಗಮನಿಸಿ ಕೆಲವಕ್ಕೆ ಹಾಡುಗಳನ್ನು ಅಡಿಟಿಪ್ಪಣಿಯಾಗಿ ಸೇರಿಸಿದ್ದುದು ಕಂಡುಬರುತ್ತದೆ. ಮೊದಲು ರಂಗಭೂಮಿಗೆ ಅನುಕೂಲಿಸುವಂತೆ ನಾಟಕವನ್ನು ಸಂಕ್ಷಿಪ್ತಗೊಳಿಸಿ ಅನಂತರ ಮುದ್ರಣದ

ಕಾಲಕ್ಕೆ ಅದರ ಸಂಪೂರ್ಣ ಅನುವಾದನ್ನು ಹೊರತಂದ ಸಂದರ್ಭಗಳೂ ಇವೆ. ಸಂಸ್ಕೃತ ನಾಟಕಗಳ ಎಲ್ಲಾ ಅನುವಾದಕರು ಆ ಭಾಷೆಯನ್ನು ಆಳವಾಗಿ ಅಭ್ಯಸಿಸಿದ್ದರಿಂದ ಅವರ ಅನುವಾದದಲ್ಲಿ ತಪ್ಪುಗಳಿಲ್ಲವೆಂದರೂ ಆದೀತು. ಸಂಭಾಷಣೆಯನ್ನು ಮಾತ್ರ ಅವರು ಗ್ರಂಥಸ್ಥವಾಗಿಯೆ ಬರೆದರು. ಮೂಲದಲ್ಲಿಯ ಕರ್ಮಣಿ ಪ್ರಯೋಗವು ಕನ್ನಡಕ್ಕೆ ಸಹಜವಲ್ಲವೆಂಬುದನ್ನು ತಿಳಿಯದೆ ಹೋದುದು ಅವರ ಗದ್ಯ ಸಂಭಾಷಣೆಯ ಹಿರಿಯ ದೋಷವಾಗಿದೆ.

ಈ ಅನುವಾದಿತ ನಾಟಕಗಳಲ್ಲದೆ ರಾಮಾಯಣ, ಮಹಾಭಾರತ, ಅದರಂತೆ ಬೇರೆ ಬೇರೆ ಪುರಾಣಗಳಿಂದ ಕಥಾವಸ್ತುಗಳನ್ನಾಯ್ದು ಅನೇಕರು ನಾಟಕಗಳನ್ನು ರಚಿಸಿದುದು ಕಂಡುಬರುತ್ತದೆ. ಜೊತೆಗೆ ಐತಿಹಾಸಿಕ ನಾಟಕಗಳೂ ದೊಡ್ಡ ಪ್ರಮಾಣದಲ್ಲಿ ಹೊರಬಂದಿವೆ. ನಾಟಕ ಕಂಪನಿಗಳ ಬೇಡಿಕೆಯನ್ನು ಗಮನಿಸಿ ಇವುಗಳ ಸೃಷ್ಟಿಯಾದಂತಿದೆ.

ಅಂದಿನ ಪೌರಾಣಿಕ ನಾಟಕಕಾರರಲ್ಲಿ **ಶಾಂತಕವಿಗಳ** ಕೊಡುಗೆಯು ಗಣನೀಯವಾದುದು. ಕ್ರಿ.ಶ. ೧೮೭೫ ರಿಂದ ನಾಟಕ ರಚನೆಯಲ್ಲಿ ತೊಡಗಿದ ಶಾಂತಕವಿಗಳು ಸಮಗ್ರ ಕರ್ನಾಟಕದ ಸ್ವತಂತ್ರ ನಾಟಕಕಾರರಲ್ಲಿ ಆದ್ಯರೆನ್ನಬೇಕು. ಬಸವಪ್ಪಶಾಸ್ತ್ರಿ, ಶೇಷಗಿರಿರಾಯ ಇವರಂತೆ ಯಾವುದೇ ಅನುವಾದಕ್ಕೆ ತೊಡಗದೆ ಪೌರಾಣಿಕ ಕಥಾವಸ್ತುಗಳನ್ನು ತೆಗೆದುಕೊಂಡು, ಸ್ವಂತವಾಗಿ ಅರುವತ್ತಕ್ಕೆ ಮಿಕ್ಕಿ ನಾಟಕಗಳನ್ನು ರಚಿಸಿದುದು ಕಳೆದ ಶತಮಾನದ ಸಾಹಿತ್ಯದ ಹಿರಿಯ ಸಾಧನೆಯಾಗಿದೆ. ಈ ನಾಟಕಗಳಿಗೆ ಅವರು ಆಯ್ದುಕೊಂಡ ಕಥಾವಸ್ತುಗಳು ವೀರ, ಶೃಂಗಾರ, ಕರುಣ ಮತ್ತು ಹಾಸ್ಯರಸಗಳಿಂದ ಯುಕ್ತವಾದವುಗಳು ಅದರಲ್ಲಿಯೂ ಶೃಂಗಾರಕ್ಕೆ ವಿಶೇಷ ಪ್ರಾಧಾನ್ಯ. ಜೊತೆಗೆ ಹರಿಭಕ್ತಿ ಮತ್ತು ಸದಾಚಾರ ಬೋಧನೆ-ಇವುಗಳಿಗೂ ಇಂಬು ದೊರೆತಿದೆ.

ಈ ಮೊದಲು ಸೂಚಿಸಿದಂತೆ <೯೩೩> ಶಾಂತಕವಿಗಳ ಸಾಹಿತ್ಯ ಸೃಷ್ಟಿಯು ಸಂಪೂರ್ಣವಾಗಿ ಜನಾಭಿಮುಖವಾಗಿದ್ದಿತು. ಸಂಭಾಷಣೆಯ ರೀತಿಯಲ್ಲಿಯೂ ಶಬ್ದ ಪ್ರಯೋಗದಲ್ಲಿಯೂ ಅದು ಒಡೆದು ತೋರುತ್ತದೆ. ಪ್ರೌಢಸರಣಿಯ ಸಂಸ್ಕೃತ ನುಡಿಗಳಿಂದ ಸಂಭಾಷಣೆಯು ಸಾಗಿರುವಾಗ ಬಳಕೆಯ ಹಾಗೂ ಗ್ರಾಮ್ಯ ಶಬ್ದಗಳು ಧಾರಾಳವಾಗಿ ಜೊತೆಗೂಡುತ್ತವೆ. ಅಂತೆಯೇ ಸರಕಾರ, ಕಚೇರಿಯ ಬರಖಾಸ್ತ, ಕರ್ಣಬಹದ್ದರ-ಮುಂತಾದ ಶಬ್ದಗಳನ್ನು ಕಾಣುತ್ತೇವೆ. ಪಾತ್ರಗಳು ಪೌರಾಣಿಕ ವ್ಯಕ್ತಿಗಳಾಗಿದ್ದರೂ ಅವರ ಮಾತಿನ ಮತ್ತು ವಿಚಾರ ಸರಣಿಯು ಆಗಿನ ಸಾಮಾಜಿಕ ಚಿತ್ರಣವನ್ನು ಕೊಡುವಂತಿವೆ.

ಶಾಂತಕವಿಗಳ ನಾಟಕಗಳು ಪೂರ್ಣತಃ ಜಾನಪದ ರಂಗಭೂಮಿಯ ಬಯಲಾಟಗಳಿಂದ ಪ್ರಭಾವಿತವಾದವುಗಳು. ಅವರ ಆರಂಭದ ನಾಟಕಗಳನ್ನಂತೂ ಸುಧಾರಿತ ದೊಡ್ಡಾಟಗಳೆಂದೇ ಕರೆಯಬೇಕು. ವತ್ಸಲಾಹರಣದಲ್ಲಿ ಅಭಿಮನ್ಯುವು ತಾಯಿ ಸುಭದ್ರೆಯನ್ನೆ ಸಾರಥಿಯನ್ನಾಗಿ ಮಾಡಿಕೊಂಡು ಹೊರಟಾಗ ಹೇಳುವ ಮಾತಿದು :-

ಅಭಿಮನ್ಯು : ಎಲೈ ರಥಶ್ರೇಷ್ಠ, ಈಗ ನಾನಂತೂ ಅಮ್ಮನವರ ಅಪ್ಪಣೆಯ ಮೇರಗೆ ಆರೋಹಣ ಮಾಡುತ್ತೇನೆ. . . . (ಏರಿದಂತೆ ಮಾಡಿ) ಮಾತೇ. . . . ನೋಡು, ನೋಡು! ಇನ್ನ ಬೇಗನೇ ರಥವು ಮುಂದೆ ಸಾಗಲಿ.

ನಾಟಕಗಳಲ್ಲಿ ಮೇಲಿಂದ ಮೇಲೆ ಬರುವ 'ಹಲಹಲ' 'ಧತ್ತ್ಯೆ' ಎಂಬ ಪದಗಳೂ 'ಕಲ ಹೊತ್ತು ಮುಂದೆ ಸಾಗಲಿ' ಎಂಬ ಸೂಚನೆಯೂ ದೊಡ್ಡಾಟದ ಕುಣಿತವನ್ನು ನೆನಪಿಗೆ ತರುತ್ತವೆ. ಯಾವುದೇ ರೀತಿಯ ರಂಗಸಜ್ಜಿಕೆ ಇರದೇ ಪಾತ್ರಗಳೇ ತಮ್ಮ ಮಾತಿನಿಂದಲೂ ಅಭಿನಯದಿಂದಲೂ ಸ್ಥಾನಾನಂತರ, ಕ್ರಿಯಾಂತರಗಳನ್ನು ಸೂಚಿಸುವುದು ಕಂಡುಬರುತ್ತದೆ. ಇದು ಸಹ ಅಂದಿನ ದೊಡ್ಡಾಟ/ಬಯಲಾಟಗಳ ಕ್ರಮವೇ ಆಗಿದೆ. ಜಾನಪದ ರಂಗಭೂಮಿಯು ನೂರಾರು ಶತಮಾನಗಳಿಂದ ನಡೆದುಕೊಂಡು ಬಂದಂತಹುದು. ಇಂದಿಗೂ ಹಳ್ಳಿಗಳಲ್ಲಿ ಆಗೀಗ ಅವುಗಳ ಪ್ರಯೋಗ ನಡೆಯುತ್ತಲಿದೆಯಷ್ಟೆ ಶಾಂತಕವಿಗಳ ನಾಟ್ಯರಚನೆಗೆ ಅದು ತಕ್ಕ ಹಿನ್ನೆಲೆಯನ್ನು ಒದಗಿಸಿತು.

ನವೀನ ಕಲ್ಪನೆ, ಸಂಭಾಷಣೆಯ ಸೊಗಸು ಇವುಗಳಿಂದಾಗಿ ಶಾಂತಕವಿಗಳ ಕೃತಿಗಳಲ್ಲಿ ನಾವು ಅನೇಕ ಕಡೆಗೆ ಹೊಸತನದ ಮೆರುಗನ್ನು ಕಾಣಬಹುದು. ಸುಂದೋಪಸುಂದ ನಾಟಕದಲ್ಲಿ ರಾಕ್ಷಸದ್ವಯರು ಸ್ವರ್ಗಲೋಕಕ್ಕೆ ದಾಳಿಯಿಟ್ಟು ರಂಭೆಯನ್ನು ಗತಿಗೆಡಿಸುತ್ತಾರೆ. ಆಕೆಯು ಇಂದ್ರ, ಸೂರ್ಯ, ಚಂದ್ರ, ಯಮ ಮುಂತಾದವರೆದುರು ಅದನ್ನು ಹೇಳಿಕೊಂಡು ಹಲುಬುತ್ತಿದ್ದಾಗ, ಇಂದ್ರನು ಅವಳಿಗೆ ಧೈರ್ಯ ಹೇಳುತ್ತಾನೆ. ಯಮನು "ಆ ರಾಕ್ಷಸರಂನು ವಿಧ್ವಂಸಮಾಡಿ ಬರುತ್ತೇನೆ. ನೀನು ಸರ್ವಥಾ ಚಿಂತಾಕುಂಡದಲ್ಲಿ ಧುಮುಕಬೇಡ" ಎಂದು ಆಶ್ವಾಸನ ಕೊಡುತ್ತಾನೆ. ಆದರೂ ರಂಭೆಯು ಹಲುಬುತ್ತಲೇ ಇದ್ದಾಗ ಸೂರ್ಯನು "ಎಲೈ ದಿಕ್ಪಾಲಕರುಗಳಿರಾ, ಅವಳು ಸ್ತ್ರೀಯಳು. ಅವಳನ್ನು ಸಮಾಧಾನ ಮಾಡೇ ಇಲ್ಲಿಂದ ಯೇಳಬೇಕಾದರೆ ಹರಿ ಹರ ಬ್ರಹ್ಮಾದಿಗಳಿಂದಲೂ ಆಗಲಿಕ್ಕಿಲ್ಲಾ. ಆದ್ದರಿಂದ ಆ ಹಂಬಲವನ್ನು ಬಿಟ್ಟು ಯುದ್ಧಕ್ಕೆ ಹೋಗೋಣ ನಡೆಯಿರಿ" ಎನ್ನುತ್ತಾನೆ. ದೇವತಾ ಸ್ತ್ರೀಯಾದರೇನಾಯಿತು, ರಂಭೆಯು ಇಂದಿನ ಅನೇಕ ಮನೆಗಳಲ್ಲಿ ಕಾಣುವ ರಗಳೆಯ ಹೆಂಗುಸೇ ಆಗಿದ್ದಾಳೆ–ಸೂರ್ಯದೇವನ ದೃಷ್ಟಿಯಲ್ಲಿ!

ಸೀತಾರಣ್ಯ ಪ್ರವೇಶ ನಾಟಕದಲ್ಲಿ ವೇಶ್ಯಾವಾಟಿಯ ವರ್ಣನೆ ಬರುತ್ತದೆ. ಅದರಲ್ಲಿ ಒಬ್ಬ ವಿಟನು ಕರ್ನಾಟಕದ ನದಿಗಳನ್ನೆಲ್ಲ ತನ್ನ ಮೋಹಿನಿಯಲ್ಲಿ ಆರೋಪಿಸುತ್ತಾನೆ :

"ಎಲೈ ಮಳೆಗಾಲದಲ್ಲಿ ನೀನು ಮಲಪ್ರಭಾ. ಛಳಿಗಾಲದಲ್ಲಿ ನೀನೇ ಕಾವೇರಿ. ವಸಂತಕಾಲದಲ್ಲಿ ನೀನೇ ಮಲಾಪಹಾರಿ. ಮುಂದೆ ವಿಚಾರಮಾಡಿದರೆ ನೀನೇ ಭೀಮಾ. ಅದನ್ನು ನಂಬದೆ ನಿನ್ನ ಗೊಡವೆಗೆ ಬಂದರೆ ನೀನು ಘಟಪ್ರಭಾ !" ಇತ್ತ ರಾಮನು ಸೀತೆಯನ್ನು ಬಿಡಬೇಕೆಂದು ತಮ್ಮಂದಿರೊಡನೆ ಆಪ್ತಾಲೋಚನೆಯಲ್ಲಿದ್ದಾಗ ಭರತ ಶತೃಘ್ನರು ಆಡುವ ಮಾತುಗಳಿವು :

"ಭರತ : ನಾವು ಸುಮ್ಮನಿರುವುದೇ ಲೇಸು, ಯಾಕೆಂದರೆ ಹೇಳಿಕೊಂಡದ್ದಕ್ಕೆ ದಯಾ ಬಂದರೆ ಚಿಂತೆಯಿಲ್ಲ. . .ಹಣ್ಣು ಕಾಣದೆ ಬಿಸಿಲಿನ ಬೈಲಲ್ಲಿಯ ಕೋತಿಯ ಹಾಗೆ ಅಂಗಲಾಚಿದರೆ ಏನು ಬಂದ ಹಾಗಾಯಿತು?

ಶತೃಘ್ನ : (ರಾಮನಿಗೆ) ಇಷ್ಟೊಂದು ಅವಳ ಮೇಲೆ ಉಗ್ರಶಾಸನದ ಕಿಡಿಗಳನ್ನು ಸುರಿಸುವದು ಮನದಲ್ಲಿದ್ದರೆ ಅವಳು [ದಂಡಕಾರಣ್ಯದಲ್ಲಿ] ಅಗಲಿ ಹೋದಾಗ ಗೋಳಾಡಿ ಅತ್ತಿ ಯಾಕೆ?"

ಈ ಸಂಭಾಷಣೆಯಲ್ಲಿ ನೈಜತೆ, ವಾಸ್ತವತೆಗಳನ್ನು ಗಮನಿಸಬೇಕು. ಮುಂದೆ ಸೀತೆಯು ಅರಣ್ಯಕ್ಕೆ ಹೊರಟು ನಿಂತಾಗ ಅವಳ ದಾಸಿಯೊಡನೆ ನಡೆದ ಸಂಭಾಷಣೆಯು ಮನೋಜ್ಞವಾಗಿದೆ. ದಾಸಿಯು ಸೀತೆಯ ಅಲಂಕಾರದ ಪೆಟ್ಟಿಗೆಯನ್ನು ಗಂಟಿನಲ್ಲಿ ಕಟ್ಟಿ ಇಟ್ಟಾಗ–

"ಸೀತೆ : ಒಳಗೆ ಏಕೆ ಕಟ್ಟಿದೆಯೆ? ಹೊರಡುವಾಗ ನನಗೆ ಹಾಕಿಕೊಳ್ಳಲು ಬೇಕಾಗುತ್ತದೆಂಬುದು ನಿನಗೆ ನೆನಪಾಗಲಿಲ್ಲೇನು?

ದಾಸಿ : ಹಾಗೇನಿಲ್ಲ. ಸ್ವತಃ ಸ್ವಾಭಾವಿಕವಾಗಿಯೇ ಅಲಂಕಾರದವಳಾದ ಮೇಲೆ ಹೊಸ ಅಲಂಕಾರಗಳು ಯಾತಕ್ಕೆ? ಈ ಕೋಮಲವಾದ ದೇಹ–ಮಲ್ಲಿಗೆಗೆ ಭಾರ ಮಾತ್ರ..

ಸೀತೆ : ಹಾಗಿದ್ದರೆ ಗಂಟಿನಲ್ಲಿಯಾದರೂ ಕಟ್ಟಿದುದೇಕೆ?

ದಾಸಿ : ಏನೊ ಎಂದಾದರೂ ದೇವತೆಗಳು ಮಾವಿನ ಹಣ್ಣನ್ನು ಬಯಸಿದ ಹಾಗೆ ನಿನ್ನ ಮನಕ್ಕೆ ಬಂದರೆ ಇರಲೆಂದು."

ಆದರೂ ಸೀತೆಯು ತಕ್ಕಮಟ್ಟಿಗೆ ಅಲಂಕರಿಸಿಕೊಂಡು ಈ ಚತುರ ದಾಸಿಯನ್ನು ಕೇಳುತ್ತಾಳೆ :

"ಜಾನಕಿ : ನನ್ನ ಕಿವಿಯೊಳಗಿನ ವಾಲಿ [ಓಲೆ]ಗಳು ಹ್ಯಾಗೆ ಕಾಣಿಸುತ್ತವೆ?

ದಾಸಿ : ದೇವಿ ! ನಿನ್ನ ಗಲ್ಲಗಳನ್ನು ಸರ್ವದಾ ಆಶ್ರಯಮಾಡಿಕೊಂಡು ಅಜ್ಞಾನ ಚುಂಬನ ಕೊಡಬೇಕೆಂಬುದಾಗಿ ಬಂಧುರನಾದ ಶ್ರೀರಾಮಚಂದ್ರನ ಮನಸ್ಸು ಈ ವಾಲಿಯ ರೂಪವನ್ನು ಧಾರಣಮಾಡಿಕೊಂಡು ಕೂತ ಹಾಗೆ. . . .ನಿನ್ನ ಗಲ್ಲಕ್ಕೆ ಕಾಣಿಸುತ್ತವೆ."

ಅದನ್ನು ಕೇಳಿ ಜಾನಕಿಯು ಹುಸಿ ಮುನಿಸನ್ನು ತೋರಿದ್ದರಿಂದ ದಾಸಿಯು ಪುನಃ ಹೇಳುತ್ತಾಳೆ :

"ದಾಸಿ : ದೇವೀ ! ನಾನು ನಿನ್ನ ವಾಲಿಗಳನ್ನು ವರ್ಣನ ಮಾಡಿದ್ದಕ್ಕೆ ರೋಷಲಕ್ಷಣದಿಂದ ಮಾತನಾಡುತ್ತೀ. ತುಟಿಯಲ್ಲಿ ಮಾತ್ರ ಎಳನಗೆಯು ಸೂಸಿ ಅಡಗುತ್ತದೆ. ಇದರ ಬಗೆ ಏನು ?

ಸೀತೆ : ಹೋಗೇ. ಅದೆಲ್ಲಾ ನನಗೆ ತಿಳಿಯುವುದಿಲ್ಲ. ತಿಳಿದರೂ ಹೇಳಲಿಕ್ಕೆ ಬರುವುದಿಲ್ಲ. ಬಂದರೂ ನಿನ್ನ ಮಾತಿನ ಹಾಗೆ ಸವಿಯಾಗುವುದಿಲ್ಲ. ನೀನು ಆಡುವ ಮಾತು ಮಾತ್ರ ಬಹು ರುಚಿ ನೋಡು ! ಅಂತೇ ಜೇನುತುಪ್ಪವು ನಾಚಿ ಗಡಿಗೆಯನ್ನು ಸೇರಿದೆ."

ಈ ರಸಿಕ ಸಂಭಾಷಣೆ ನಡೆದಾಗ ತೆರೆಯ ಹಿಂದೆ ರಥವನ್ನು ಅಣಿಗೊಳಿಸುತ್ತಿದ್ದ ಲಕ್ಷ್ಮಣನು ತನ್ನನ್ನ ಬೈದುಕೊಳ್ಳುವ ಚಿತ್ರಣವನ್ನು ನಾಟಕಕಾರನು ಕೊಟ್ಟಿದ್ದಾನೆ. ರಂಗದ ಮೇಲೆ ಅದು ತುಂಬ ಪರಿಣಾಮಕಾರಿಯಾಗಬಲ್ಲುದು. ಏಕ ಕಾಲದಲ್ಲಿ ನಡೆಯುವ ಇಂಥ ವೈದೃಶ್ಯದ ಸಂಭಾಷಣೆಗಳನ್ನು ಶಾಂತಕವಿಗಳ ಇನ್ನು ಕೆಲವು ನಾಟಕಗಳಲ್ಲಿ ಕಾಣುತ್ತೇವೆ.

ಮುಂಬಯಿ ಕರ್ನಾಟಕಗಳಲ್ಲಿ ಅಗಳಗಟ್ಟಿ ವೆಂಕಣ್ಣಾಚಾರ್ಯ, ಗುರುರಾವ ಮಮದಾಪುರ, ಕೃಷ್ಣಾಜಿ ಬೀಳಗಿಕರ. ನಾ.ರಾ. ಕಾಮತ. ಕೃ.ಶ್ರೀ. ಕೌಲಗಿ ಮೊದಲಾದ ನಾಟಕಕಾರರು ಪೌರಾಣಿಕ ನಾಟಕರಚನೆಯನ್ನು ಮುಂದುವರೆಸಿದರು. ಹಳಗನ್ನಡ ಶೈಲಿಯನ್ನೂ ಜಾನಪದ ರಂಗಭೂಮಿಯ ತಂತ್ರವನ್ನೂ ಬಿಟ್ಟುಕೊಡದೇ, ಹೊಸಗನ್ನಡ ಗದ್ಯದಲ್ಲಿ ಬರೆದ ನಾಟಕಗಳಿವು. ತಮ್ಮ ನಾಟಕಗಳಲ್ಲಿ ಸಂಭಾಷಣೆ ಯಾವ ರೀತಿಯಾಗಿ ಇರಬೇಕೆಂಬ ಸಮಸ್ಯೆ ಇವರಿಗಿದ್ದಿತು. ಈ ದಿಶೆಯಲ್ಲಿ ಗುರುರಾವ ಮಮದಾಪುರನ ಈ ಕೆಳಗಿನ ನಿಲುಮೆಯು ಮುಂಬಯಿ ಕರ್ನಾಟಕದ ಇತರ ಕೆಲವು ನಾಟಕಕಾರಲ್ಲಿಯೂ ಕಂಡುಬರುತ್ತದೆ :

"ಕಲೊಕ್ವಿಯಲ್ ಅಂದರೆ ಮನೆಯಲ್ಲಿ ಸ್ತ್ರೀಪುರುಷರೂ ಹುಡುಗರೂ ಆಳುಗಳೂ ಮಾತಾಡತಕ್ಕ ಗ್ರಾಮ್ಯಶಬ್ದಗಳಿಂದ ಕೂಡಿದ ಭಾಷಣಗಳನ್ನು ಇದರಲ್ಲಿ ಎಲ್ಲ ಕಡೆಗೂ ಉಪಯೋಗಿಸುವ ಅವಶ್ಯ ಕಂಡು ಬಂತು. ಹೀಗೆ ಮಾಡದಿದ್ದರೆ ಈ ನಾಟಕದಲ್ಲಿಯ ಭಾಷಣದ ರಸಮಾಧುರ್ಯವು ವಾಚಕರಿಗೆ ಏನೂ ದೊರೆಯದೆ ಕೇವಲ ನಿಬಂಧಗಳಂತೆ ಕಥಾಭಾಗ ಮಾತ್ರ ತಿಳಿಯುತ್ತಿತ್ತು. ಇದಕ್ಕೋಸ್ಕರ ಉಳಿದ ಭಾಷೆಗಳಲ್ಲಿ ಉಪಯೋಗಿಸಿದಂತೆ 'ಹೋಮ ಲ್ಯಾಂಗವೇಜ' ಅಂದರೆ ಮನಿಯಲ್ಲಿ ಮಾತಾಡುವ, ಪ್ರಚಾರದಲ್ಲಿರುವ ಭಾಷೆಯನ್ನುಪಯೋಗಿಸಿ ಗ್ರಂಥವನ್ನು ಪೂರ್ಣ ದೆಶೆಗೆ ತಂದಿರುವೆನು."

ಮೈಸೂರ ಸಂಸ್ಥಾನದಲ್ಲಿ ಇದಕ್ಕೂ ದೊಡ್ಡ ಪ್ರಮಾಣದಲ್ಲಿ ಪೌರಾಣಿಕ ನಾಟಕಗಳು ಹೊರಹೊಮ್ಮಿದವು. ಅವುಗಳಲ್ಲಿ ಬಿ.ಎಲ್. ರೈಸರ ಮೆಚ್ಚಿಕೆಯನ್ನು ಗಳಿಸಿದ್ದ. ಕರಗೋಡು ವೆಂಕಟವರದಾಚಾರ್ಯನ 'ತಪತೀಪರಿಣಯ'ವನ್ನು ಇಲ್ಲಿ ಪರಿಶೀಲಿಸೋಣ. ತಪತಿಯು ಸೂರ್ಯನ ಮಗಳು ಹಾಗೂ ಸಾವಿತ್ರಿಯ ಸೋದರಿ. ಸಂವರಣನೆಂಬ ರಾಜನು ಅವಳನ್ನು ವರಿಸುವುದು ಇಲ್ಲಿಯ ಕಥಾವಸ್ತು. ನಾರದರು ಈ ಪರಿಣಯದ ಸೂತ್ರಧಾರಕರು. ಪಾರ್ವತೇಯನೆಂಬ ಇನ್ನೊಬ್ಬ ರಾಜನು ಇಲ್ಲಿ ಖಳನಾಯಕನು. ಅವನು ಸಂವರಣ

ರಾಜನನ್ನಾಗಲೀ, ಸೂರ್ಯನ ಕೋಪವನ್ನಾಗಲೀ ಎದುರಿಸಲು ಅಸಮರ್ಥನು. ಆಗ ಮಾಯಾವಿ ಎಂಬ ಅವನ ಹಸ್ತಕನು ಸಂವರಣ, ತಪತಿಯವರ ಮಾಯಾ ಶವವನ್ನು ಸೃಷ್ಟಿಸಿ, ಅವರನ್ನು ಮೋಸಗೊಳಿಸಬೇಕೆನ್ನುತ್ತಾನೆ. ಅದು ಕೈಗೂಡುವದಿಲ್ಲ. ಐದು ಅಂಕಗಳ ನಾಟಕದ ಮೂಲ ಕಥೆಯು ಮಹಾಭಾರತದಲ್ಲಿ ಪಾರ್ಥ–ಗಂಧರ್ವ ಸಂವಾದ ರೂಪವಾಗಿದೆಯೆಂಬುದಾಗಿ ಸೂತ್ರಧಾರನು ತಿಳಿಸುತ್ತಾನೆ. ಕಥಾವಿನ್ಯಾಸದಲ್ಲಿ ನಾಟಕಕಾರನು ಹೊಸತನ ತೋರದಿದ್ದರೂ ಸಂಭಾಷಣೆಗಳಲ್ಲಿ ಮಾತ್ರ ಕೌಶಲ್ಯವೆದ್ದು ತೋರುತ್ತದೆ. ಶೃಂಗಾರವೂ ಹಣಿಕಿಕ್ಕಿ ಅಲ್ಲಲ್ಲಿ ಅಶ್ಲೀಲತೆಗೆ ಎಡೆ ಮಾಡಿಕೊಟ್ಟಿದೆ.

ಈ ಪೌರಾಣಿಕ ಕೃತಿಯಲ್ಲಿ ಕೆಲವು ಆಧುನಿಕ ಪಾತ್ರಗಳೂ ಸಾಮಾಜಿಕ ಸನ್ನಿವೇಶಗಳೂ ತೋರಿಬರುತ್ತವೆ. ಬೇಟೆಯಲ್ಲಿ ಭಾಗವಹಿಸುವವರು ದಫೇದಾರ ಶಿದ್ಧ, ಕಮಾನಾಫೀಸರ್ ಮೊದಲಾದವರು. ಅದಕ್ಕಿಂತ, ರಾಜನ ದರ್ಬಾರದಲ್ಲಿ ಸುರುವಿಗೆ ನಡೆಯುವ ಒಂದು 'ಮೊಕದ್ದಮೆ'ಯ ವಿಚಾರಣೆಯ ಸಂದರ್ಭ ಅತ್ಯಾಧುನಿಕವೆನ್ನಬಹುದು. ಸಂದರ್ಭ ಹೀಗಿದೆ: ಸದಾಚಾರದೀಕ್ಷಿತನೆಂಬ ಬ್ರಾಹ್ಮಣನ ಹೆಂಡತಿಯಾದ ರಮಣೀಮಣಿಯು ರತಿಪ್ರದರಾಯ ಎಂಬ ವಿಟನೊಡನೆ ಕೂಡಿದ್ದಳು. (ಈ ಮೂರು ಹೆಸರುಗಳ ಅನ್ವರ್ಥಕತೆಯನ್ನು ಗಮನಿಸುವುದು) ಅವಳ ಮೇಲೆ ಕೇಸು ಹಾಕಿದ್ದಾಗ ನಡೆದ ಈ ಸಂಭಾಷಣೆಯು ನಾಟಕಕಾರನ ಜಾಣ್ಮೆಯನ್ನು ತೋರ್ಪಡಿಸುತ್ತದೆ :

"ಸವಾಲು–ನೀನು ರತಿಪ್ರದರಾಯನ ಸಂಗದಿಂದ ದೂಷಿತಳಾಗಿರುವದುಂಟೋ?

ಜವಾಬು–ಆತನ ಸಂಗದಿಂದ ನಾನು ತೋಷಿತಳಾದೆನಲ್ಲದೆ ದೂಷಿತಳಾಗಲಿಲ್ಲಾ.

ಸವಾಲು–ಪರಪುರುಷನ ಸಂಗದಿಂ ತೋಷಿತಳಾದ ಮೇಲೆ ದೂಷಿತಳಾಗಲಿಲ್ಲವೆ?

ಜವಾಬು–ಸಂಗವು ಅಂತರಂಗ, ಬಹಿರಂಗವೆಂದು ಎರಡು ವಿಧ. ಅಂತರಂಗವೆಂದರೆ ಮನಸ್ಸು. ಅದು ಪತಿಯಲ್ಲೇ ಇರುವದರಿಂದಲೂ ಬಹಿರಂಗ ಸಂಗವನ್ನು ಸರ್ವ ಸಮ್ಮತಿಯಂತೆ ನಾನು ಪರಿಗ್ರಹಿಸಿದ್ದರಿಂದಲೂ ದೂಷಿತಳಲ್ಲಾ.

ಸವಾಲು–'ಸರ್ವ ಸಮ್ಮತಿ'ಯೆಂದರೆ ಏನು ?

ಜವಾಬು–ಬಳೆಗಾರಂ ಕೈಪಿಡಿಯುವದನ್ನೂ, ವೈದ್ಯರು ಸರ್ವಾಂಗಗಳಂ ಪರಿಶೋಧಿಸುವದನ್ನೂ ಸರ್ವರು ಸಮ್ಮತಿಸಿರುವುದಿಲ್ಲವೆ?

ಸವಾಲು–ಮನಸ್ಸು ಪತಿಯಲ್ಲೇ ಇದ್ದ ಮೇಲೆ ಪರಪುರುಷನ ಸಂಗವಾಗಲು ಕಾರಣವೇನು?

ಜವಾಬು–ನನ್ನ ಪತಿಯು ಸಾಮಾನ್ಯನಲ್ಲ. ಸಕಲ ಶಾಸ್ತ್ರಪಾರಂಗತನು. ವೈದಿಕ ನಿಷ್ಠನು. ಪುಣ್ಯಕಾಲ, ಪರ್ವಕಾಲ ವ್ರತ ದಿವಸ, ಪಿತೃದಿವಸ, ಹರಿದಿವಸ ಉಪವಾಸ ಮುಂತಾದ ನಿಯಮದಲ್ಲೇ ಇರುವದ್ದರಿಂದ ನನ್ನ ಕಾಮಪೂರ್ತಿ ಮಾಡಲು ವ್ಯವಧಾನವು, ಶಕ್ತಿಯು ಸಹ ಸಾಲದ್ದರಿಂದ ಅನ್ಯನಿಂದ ಕಾಮಪೂರ್ತಿ ಮಾಡಿಸಿಕೊಳ್ಳುವಾಗಲೂ

ಪತಿಯೆಂದು ಭಾವಿಸುತ್ತೇನೆ. ಲೋಕದಲ್ಲಿ ಪತಿವ್ರತೆಯರೆಲ್ಲರೂ ಕೆಲವರಿಂದ ಧರ್ಮವನ್ನು ಕೆಲವರಿಂದ ಅರ್ಥಗಳನ್ನೂ ಕೆಲವರಿಂದ ಮೋಕ್ಷವನ್ನೂ ಪಡೆಯುವುದಿಲ್ಲವೆ ? ಅವರೆಲ್ಲರೂ ದೂಷಿತರಾಗುವರೆ?

ಸವಾಲು–ಅನ್ಯನಿಂದ ನಿನ್ನ ಮನೋರಥ ಪೂರ್ತಿ ಆದಮೇಲೆ ಪತಿಯಿಂದೇನು ಪ್ರಯೋಜನ? ಬಿಟ್ಟು ಬಿಡು.

ಜವಾಬು–ಪತಿಯೇ ಪರದೈವತವೆಂದು ಹಿರಿಯರು, ಶಾಸ್ತ್ರವು ಹೇಳುವದ್ದರಿಂದ ನನ್ನ ಕಾಮವು ಯಾರಿಂದ ಪೂರ್ತಿಯಾದಾಗ್ಯೂ ಪತಿಯಿಂದಲೇ ಯೆಂದು ಭಾವಿಸುತ್ತಾ ಪತಿ ಸೇವೆಯಂ ಮಾಡುವೆನು.

ಸವಾಲು–ಅನ್ಯನೊಡನೆ ರಮಿಸುತ್ತಾ ಗಂಡನೆಂದು ಭಾವಿಸಿದರೆ ಹ್ಯಾಗೆ ಆದಾನು?

ಜವಾಬು–ಕಲ್ಲನ್ನು ಪೂಜಿಸುತ್ತಾ ದೇವರೆಂತಲೂ ಬ್ರಾಹ್ಮಣರನ್ನು ನಿಮಂತ್ರಿಸಿ ಪೂಜಿಸುತ್ತಾ ತಂದೆ ತಾಯಿಗಳೆಂತಲೂ ಕೆರೆ ಕಟ್ಟೆಗಳಲ್ಲಿ ಮುಳುಗುತ್ತಾ ಪುಣ್ಯತೀರ್ಥಗಳೆಂತಲೂ ಭಾವಿಸುವಂತೆ ನಾನು ಭಾವಿಸಲಾಗದೋ?

ಫಿರ್ಯಾದಿ ಸವಾಲು–ಈ ಹೇಳಿಕೆ ನ್ಯಾಯವಾದಾಗ್ಯೂ ನನ್ನ ಧರ್ಮಾಚರಣೆಗೆ ಅಡಚಣೆಯಾಗುತ್ತಲ್ಲವೆ?

ಜವಾಬು–ಲಗ್ನಕಾಲದಲ್ಲಿ ಅಗ್ನಿಸಾಕ್ಷಿಕವಾಗಿ 'ಧರ್ಮೇಚ, ಅರ್ಥೇಚ, ಕಾಮೇಚ' ಎಂದು ಕೈಹಿಡಿದು ಪ್ರಮಾಣಮಾಡಿ ನನ್ನ ಕಾಮಕ್ಕೆ ಅಡಚಣೆ ಮಾಡಬಹುದೆ?

ರಾಜಂ–(ನಿರುತ್ತರನಾಗಿ). ನಂಬರು ಡಿಸ್‌ಮಿಸ್. ಫಿರ್ಯಾದಿಯು ಕರ್ತವ್ಯನಿಷ್ಠನಾದ್ದರಿಂದ ಪುನರ್ವಿವಾಹಕ್ಕೆ ೧೦೦೦ ರೂ. ಇನಾಮು.

ಅಪರಾಧಿಯು–ಪತಿಯು ಪನರ್ವಿವಾಹ ಮಾಡಿಕ್ಕೊಂಡ ಮೇಲೆ ನನಿಗೆ ಗತಿಯೇನು? ನನಿಗೂ ಪುನರ್ವಿವಾಹಕ್ಕೆ ಅಪ್ಪಣೆ ಕೊಡಿಸಬೇಕು.

ರಾಜಂ–ಸ್ತ್ರೀಯರಿಗೆ ಪತಿಪೂರ್ವನಲ್ಲದೆ ಹಲವರಾಗದು.

ರಮಣಿ–ಸೋಮಾಗ್ನಿ ಗಂಧರ್ವಪುರುಷರೆಂದು ಶಾಸ್ತ್ರದಲ್ಲೇ ಹೇಳಿ ಇಲ್ಲವೆ. ದ್ರೌಪದಿಗೆ ಪಂಚ ಪತಿಗಳಲ್ಲವೆ. ವಾರ್ಷ್ಣೇಯಿಗೆ ೧೦ ಮಂದಿ ಪ್ರಾಚೇತಸರೆಂದು ಮಹಾಭಾರತದಲ್ಲಿ ಹೇಳಿ ಇಲ್ಲವೆ?

ರಾಜಂ–ಪತಿಗಳನೇಕರಾದಾಗ್ಯೂ ಲಗ್ನ ವಂದೇ ಸಾರಿಯಾಗಬೇಕು.

ರಮಣೀ–ಗಾಂಧಾರಿಗೆ ಎರಡು ಸಾರಿಯು, ಯಯಾತಿ ರಾಜನ ಮಗಳು ಮಾಧವಿಗೆ ನಾಲ್ಕು ಸಾರಿ ಮದುವೆಯಾಗಿ ನಾಲ್ಕು ಜನ ಮಕ್ಕಳನ್ನು ಪಡೆಯಲಿಲ್ಲವೆ?"

ಇದಕ್ಕೆ ನಿರುತ್ತರನಾದ ರಾಜನು ಮೊಕದ್ದಮೆಯನ್ನೆ ಮುಂದುವರಿಸುತ್ತಾನೆ !

## 43 ಇಂಗ್ಲಿಷ್ ನಾಟಕಾನುವಾದ

ಇಂಗ್ಲಿಷ್ ನಾಟಕಗಳ ಅನುವಾದವು ನಾಡಿನ ಉತ್ತರ, ದಕ್ಷಿಣಗಳಲ್ಲಿ ಏಕಕಾಲಕ್ಕೆ ಆರಂಭವಾಯಿತು. ಕಾಲೇಜು ಮಟ್ಟದಲ್ಲಿ ಇಂಗ್ಲಿಷ್ ಕಾವ್ಯ, ನಾಟಕಗಳ ಅಭ್ಯಾಸಕ್ಕೆ ವಿಶೇಷ ಅವಕಾಶವಿದ್ದುದು ಈ ನಾಟಕಾನುವಾದದ ಹಿನ್ನೆಲೆಯಾಗಿದೆ. ಕನ್ನಡದಲ್ಲಿ ಕಾಣಿಸಿಕೊಂಡ ಇಂಗ್ಲಿಷ್ ನಾಟಕಕಾರರಲ್ಲಿ ಶೇಕ್ಸ್‌ಪಿಯರನೇ ಮೊದಲಿಗನು. ಈ ಕಾರ್ಯದಲ್ಲಿ ಎ. ಆನಂದರಾಯ, ಎಂ.ಎಲ್. ಶ್ರೀಕಂಠೇಗೌಡ ಮತ್ತು ಎಂ.ಎಸ್. ಪುಟ್ಟಣ್ಣ ಅದರಂತೆ ಗುಂಡೋ ಕೃಷ್ಣ ಚುರಮುರಿ–ಏಕಕಾಲಕ್ಕೆ ಮುಂದೆ ಬಂದುದರಿಂದ (ಸು.೧೮೮೮) ಅವರೆಲ್ಲರನ್ನೂ ಮೊದಲಿಗರೆಂದು ತಿಳಿಯತಕ್ಕದು.

ಸಂಸ್ಕೃತ ನಾಟಕಾನುವಾದಗಳ ರಂಗ ಪ್ರಯೋಗವನ್ನು ಕಂಡು, ಇಂಗ್ಲಿಷ್ ಕೃತಿಗಳನ್ನೂ ಆ ರೀತಿಯಲ್ಲಿ ಅಣಿಗೊಳಿಸಬೇಕೆಂಬ ಹೇತುವಿನಿಂದ 'ಮೈಸೂರನಿವಾಸಿ' ಆನಂದರಾಯನು **'ರೋಮಿಯೊ ಎಂಡ್ ಜ್ಯೂಲಿಯಟ್'** ನಾಟಕವನ್ನು ಕೈಗೆತ್ತಿಕೊಂಡನು ('ರಾಮವರ್ಮಲೀಲಾವತಿ'). ಅವನಿಗೆ ಇಂಗ್ಲಿಷ್ ಸಾಹಿತ್ಯದ ಬಗ್ಗೆ ವಿಶೇಷ ಆದರವಿದ್ದಿತು. ಆದರೆ ಕನ್ನಡ ವ್ಯಾಸಂಗವು ಅಷ್ಟಕಷ್ಟೆ ಎಂಬುದು ಅವನ ಅನುವಾದದಿಂದ ವ್ಯಕ್ತವಾಗುತ್ತದೆ. ಸಂಸ್ಕೃತ ನಾಟಕಗಳೇ ಈ ದಿಶೆಯಲ್ಲಿ ಅವನಿಗೆ ಮಾದರಿಯಾಗಿದ್ದುವು. ಅಲ್ಲಿರುವಂತೆಯೇ ಹಾಡುಗಳನ್ನು ಸೇರಿಸಿ ಶೇಕ್ಸ್‌ಪಿಯರನ ಆ ನಾಟಕವನ್ನು ಭಾಷಾಂತರಿಸಿದನು. ರಂಗದ ಮೇಲೆಯೂ ಅದು ಕಾಣಿಸಿಕೊಂಡಿತು. ಹೊಸ ಸನ್ನಿವೇಶಗಳಿಂದ ಕೂಡಿದ ನಾಟಕವಾದ್ದರಿಂದ ಅದನ್ನು ಪ್ರೇಕ್ಷಕರು ಮೆಚ್ಚಿಕೊಂಡರು. ಆದರೆ ಅನುವಾದವು ಹಲವು ಆಭಾಸಗಳಿಗೆ ಎಡೆಗೊಟ್ಟಿತು. ಸಂಸ್ಕೃತ ನಾಟಕಗಳ ಸನ್ನಿವೇಶ, ಪಾತ್ರಗಳ ಸ್ವಭಾವ ಎಲ್ಲವೂ ನಮ್ಮ ಜನಕ್ಕೆ ಸುಪರಿಚಿತವಾದ್ದರಿಂದ ಅವುಗಳ ನೇರವಾದ ಭಾಷಾಂತರದಲ್ಲಿ ಆಭಾಸಕ್ಕೆ ಅವಕಾಶವಿಲ್ಲ. ಆದರೆ ಸಂಪೂರ್ಣ ವಿಭಿನ್ನವಾದ ಪಾಶ್ಚಾತ್ಯ ಆಚಾರ-ವಿಚಾರಗಳನ್ನು ಭಾರತೀಕರಣ ಮಾಡಹೋದಾಗ ಆ ಸಂಭವ ಹೆಚ್ಚು. 'ಇಂಗ್ಲಿಷ್‌ರಿಗೆ ಮಾತ್ರ ಅರ್ಥವಾಗುವ ಭಾಗಗಳನ್ನು ಶೇಷಾರ್ಥ ಸೂಚಕ ವಾಕ್ಯ ಭಾಗವನ್ನು ಬಿಟ್ಟಿದೆ. ಇಂಗ್ಲಿಷ್‌ರಲ್ಲಿ ಮಾತ್ರ ರೂಢಿಯಾಗಿರುವ ದೃಷ್ಟಾಂತಗಳಿಗೆ ಬದಲಾಗಿ ನಮ್ಮ ಜನಗಳಲ್ಲಿ ರೂಢಿಯಾಗಿದ್ದನ್ನು ತೆಗೆದುಕೊಂಡು. . . .ನಮ್ಮ ಜನಗಳು ಒಪ್ಪುವ ರೀತಿಯಲ್ಲಿ, ಭಾಷಾಂತರವನ್ನು ಮಾಡುವ, ಧೋರಣೆಯನ್ನು ಆನಂದರಾಯನು ಇಟ್ಟುಕೊಂಡಿದ್ದರೂ ಸಾಮರಸ್ಯಪೂರ್ಣವಾಗಿ ಬರಲಿಲ್ಲ.

ಅನುವಾದದಲ್ಲಿ ಪಾತ್ರಗಳ ಹೆಸರುಗಳನ್ನು ಮೂಲಕ್ಕೆ ಹತ್ತಿರವಾಗುವಂತೆ ಇಟ್ಟುಕೊಳ್ಳುವ ಕ್ರಮ ಅದು ಹೇಗೊ ಬೆಳೆದು ಬಂದಿತು. ಉದಾ : Romeo= ರಾಮವರ್ಮ; Balthazar=ಬಾಲಚಂದ್ರ, ಇತ್ಯಾದಿ. ಇದೇನೊ ಸರಿ. Parisನನ್ನು ಪೇಶಲಾಂಗನನ್ನಾಗಿಯೂ Abrahamನನ್ನು ಏಕಪಿಂಗನನ್ನಾಗಿಯೂ ಮಾಡಿರುವದರಲ್ಲಿ

ಅದಾವ ಔಚಿತ್ಯವಿದೆ? ಸೇವಕನೊಬ್ಬನು ಏಕಪಿಂಗನೆಂಬ ವಿಚಿತ್ರ ಹೆಸರನ್ನಿಟ್ಟುಕೊಂಡುದು ಭಾರತದ ಯಾವ ಜನಾಂಗದಲ್ಲಿ, ಅದಾವ ಕಾಲದಲ್ಲಿ ಕಂಡುಬಂದೀತು?

'ನಮ್ಮ ಜನಗಳು ಒಪ್ಪುವ ರೀತಿಯಲ್ಲಿ' ಬದಲಾವಣೆ ಮಾಡ ಹೋದುದರ ಹಾಸ್ಯಾಸ್ಪದ ಉದಾಹರಣೆಯೆಂದರೆ ವಿಷ್ಣುವು ಪ್ರತ್ಯಕ್ಷನಾಗಿ ಸತ್ತುಹೋದ ರಾಮವರ್ಮ–ಲೀಲಾವತಿಯರನ್ನು ಬದುಕಿಸಿ ಅದೃಶ್ಯನಾಗುವುದು. ಸಂಸ್ಕೃತ ನಾಟಕದಲ್ಲಿ, ನಿರ್ವಹಣ ಸಂಧಿಯನ್ನು 'ಮಧುರೇಣ ಸಮಾಪಯೇತ್' ಎಂದಿರುವುದರಿಂದ ಈ ದೃಶ್ಯದ ಸೇರ್ಪಡೆಯಾಯಿತೆಂಬ ಕಾರಣವನ್ನು ಆನಂದರಾಯನು ಕೊಟ್ಟಿದಾನೆ. ಪಾಶ್ಚಾತ್ಯ ವಿಚಾರಗಳಿಗೆ ವಿಶೇಷ ಮನಸೋತವನಿದ್ದರೂ ಅವನು ಅಷ್ಟರ ಮಟ್ಟಿಗೆ ಸಂಪ್ರದಾಯನಿಷ್ಠನಿದ್ದುದು ಅಚ್ಚರಿಯೆನಿಸಬಹುದು.

ಈ ನಾಟಕಾನುವಾದವು ಹಲವಾರು ಪ್ರಯೋಗಗಳನ್ನು ಕಂಡಿತು. ಮುಂದೆ ಆನಂದರಾಯನು 'ಮರ್ಚಂಟ್ ಆಫ್ ವೆನಿಸ್' ಮತ್ತು 'ಹ್ಯಾಮ್ಲೆಟ್' ಈ ನಾಟಕಗಳನ್ನೂ ಅದೇ ರೀತಿಯಲ್ಲಿ ಕನ್ನಡಕ್ಕೆ ತಂದನು. ಮೊದಲಿನ ನಾಟಕದ ಹೆಸರಾದರೂ ಭಾರತೀಯ ರೂಪವನ್ನು ತಳೆಯಿತು. 'ಪಾಂಚಾಲೀ ಪರಿಣಯ'. ಇದ್ದಂತೆಯೇ ಉಳಿಯಿತು. ಹ್ಯಾಮ್ಲೆಟ್‌ನ ರಾಜ್ಯದ ಭೌಗೋಲಿಕ ಪರಿಚಯ ಮಾಡಿಕೊಡುವ ಉದ್ದೇಶದಿಂದ ಅದರಲ್ಲಿಯ ಊರುಗಳ ಹೆಸರುಗಳನ್ನೂ ಹಾಗೆಯೇ ಇಡಲಾಯಿತು. ತನ್ನ ಕೆಲಸವು ಅಸಮರ್ಪಕವಾಗಿದ್ದರೂ ಚಿಂತೆಯಿಲ್ಲ; ಇಂಗ್ಲಿಷ್ ಬಾರದ ಸ್ವಬಾಂಧವರಿಗೆ ಕಿಂಚಿತ್ತಾದರೂ ಶೇಕ್ಸ್‌ಪಿಯರನ ಪ್ರತಿಭೆಯ ಪರಿಚಯ ಮಾಡಿಕೊಡಬೇಕೆನ್ನುವ ಉದ್ದೇಶವಿಟ್ಟುಕೊಂಡಿದ್ದ ಆನಂದರಾಯನು ಮೂಲವನ್ನು ಇದ್ದುದಿದ್ದಂತೆ ಅನುವಾದಿಸಿ ಬಿಟ್ಟಿದ್ದರೆ ಔಚಿತ್ಯದ ಹಾನಿಯೊದಗುತ್ತಿರಲಿಲ್ಲ.

ಶ್ರೀಕಂಠೇಶಗೌಡರಿಗೂ ಮೇಲಿನ ಸಮಸ್ಯೆಗಳೇ ಎದುರಾದವು. ಪ್ರತಾಪರುದ್ರದೇವ (ಮ್ಯಾಕ್‌ಬೆತ್) ನಾಟಕದಲ್ಲಿ ಮ್ಯಾಕ್‌ಬೆತ್ ವೀರಸೇನನಾಗಿಯೂ ಡಂಕನ್ ವಿಜಯಧ್ವಜನಾಗಿಯೂ ಪರಿವರ್ತನೆ ಹೊಂದಿದರು. ಇತರ ಪಾತ್ರಗಳೂ ಹೀಗೆ ಭಾರತೀಯ ವೇಷವನ್ನು ತೊಟ್ಟುವು. ವಿಜಯಧ್ವಜನನ್ನು ಎದುರುಗೊಳ್ಳಲು ವೀರಸೇನನೇ ಹೋಗಬೇಕಾದುದು ಸರಿಯೇ. ಆದರೆ ಮೂಲದಲ್ಲಿ ಅವನ ಅರಸಿಯು ಹೋಗುತ್ತಾಳೆ. ಅನುವಾದದಲ್ಲಿ ಹಾಗೇ ಇಟ್ಟರೆ ಆಭಾಸ ಕಾಣುತ್ತದೆ. ಹಾಗೆಂದು ಬದಲಾಯಿಸಿದರೆ ಕವಿಯ ಆಶಯಕ್ಕೆ ಭಂಗ ಬರುತ್ತದಲ್ಲವೆ? ಕೊನೆಗೆ 'ಅಂಥ ಸ್ತ್ರೀಯರು ನಮ್ಮಲ್ಲಿ ಇರಬಾರದೇಕೆ?' ಎಂಬ ನಿಲುಮೆಯನ್ನು ತಳೆಯಲಾಯಿತು. ಅದರಂತೆ ಮೂರನೆಯ

---

* ಈ ಸಂದರ್ಭದಲ್ಲಿ ಶ್ರೀಕಂಠೇಶಗೌಡರು 'ಸ್ಥಳ ಸಂಕೋಚವಾದ್ದರಿಂದ ಇದಕ್ಕೆ ಸಮಾಧಾನ ಹೇಳಲು ನಮ್ಮ ಬಾಲಿಕಾ ಪಾಠಶಾಲೆಯ ಸರಸ್ವತಿಯರಿಗೆ. . . .ಬಿಟ್ಟಿರುತ್ತೆ' ಎಂಬ ಕೊಂಕು ಮಾತನ್ನು [illegible]

ಅಂಕದಲ್ಲಿ ಬರುವ ರಾಜಮಂಡಲಿಯ ಔತಣ ಸಂದರ್ಭದ ಸುರಾಪಾನವು ಭಾರತೀಯರ ದೃಷ್ಟಿಯಿಂದ ತಪ್ಪೆನಿಸಿದರೂ ಅದು ರಾತ್ರಿಯ ಕಾಲದಲ್ಲಿ ನಡೆಯುವುದರಿಂದ ಅದನ್ನು ಕ್ಷಮ್ಯವೆಂದು ತಿಳಿಯಬೇಕಾಗಿ ಅವರು ವಿವರಣೆಯಿತ್ತಿದ್ದಾರೆ. ಈ ಬಗೆಯ ರೂಪಾಂತರವನ್ನು ಖಂಡಿಸಿ ಸಮಕಾಲೀನ ಪತ್ರಿಕೆಗಳಲ್ಲಿ ತೀಕ್ಷ್ಣ ಖಂಡನೆ, ಸಮರ್ಥನೆಗಳು ನಡೆದುವು.

ಮೂಲ ನಾಟಕವನ್ನು ಬದಲಿಸಬಾರದೆಂಬ ಈ ನಿಲುಮೆಯನ್ನು ಅವರು ತಮ್ಮ 'ಪ್ರಮೀಳಾರ್ಜುನೀಯ'ದಲ್ಲಿ ಮಾತ್ರ ಬಿಟ್ಟುಕೊಟ್ಟಿದ್ದಾರೆ. ಸಾಕಷ್ಟು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದರೆಂದೇ ತನ್ನದು Mid - Summer Night's Dreamದ ರೂಪಾಂತರವೆಂದು ಹೇಳ ಹೋಗಲಿಲ್ಲ. ಆದರೂ ಆಭಾಸವಾಗದಂತೆ ಅದನ್ನು ಭಾರತೀಕರಣ ಮಾಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಪೌರಾಣಿಕ ವ್ಯಕ್ತಿಗಳಾದ ಅರ್ಜುನ–ಪ್ರಮೀಳೆ, ರತಿ–ಮನ್ಮಥ ಇವರ ಮೂಲ ವ್ಯಕ್ತಿತ್ವವನ್ನು ಉಳಿಸಿಕೊಂಡೇ ಶೇಕ್ಸ್‌ಪಿಯರನ ನಾಟಕವನ್ನು ಕನ್ನಡಕ್ಕೆ ತಂದಿದ್ದಾರೆ. ಥೀಸಿಯಸ್–ಹಿಪ್ಪೊಲಿಟಾ ಜೋಡಿಯಲ್ಲಿ ಪ್ರಮೀಳೆಯದೇ ಮೇಲುಗೈ. ಈ ಆಭಾಸವನ್ನು ಕಳೆಯಲು ಶ್ರೀಕಂಠೇಶಗೌಡರು ಮೈಚಳಿ ಬಿಟ್ಟು, ಸನ್ನಿವೇಶ ಮತ್ತು ಸಂಭಾಷಣೆಗಳಲ್ಲಿ ಭಾರತೀಯ ವಾತಾವರಣಕ್ಕೆ ಹೊಂದಿಸಿಕೊಂಡರು. ಕೊನೆಗೆ, ಮದುವೆ ನಡೆಯುವುದು ಥೀಶಿಯಸ್‌ನ ನಗರದಲ್ಲಿ ಅಲ್ಲ; ಪ್ರಮೀಳೆಯ ರಾಜಧಾನಿಯಲ್ಲಿ.

ಈ ನಾಟಕದ ಒಂದು ವೈಶಿಷ್ಟ್ಯವೆಂದರೆ ಅದರಲ್ಲಿ ಬಂದಿರುವ ಮೇಳದವರ ನಾಟಕ ಸಿದ್ಧತೆಯನ್ನು ಕುರಿತ 'ಸಾಮಾಜಿಕ' ಸನ್ನಿವೇಶ. ಮಡಿವಳ ಮಾಚಯ್ಯ (ಬಡಗಿ), ನೆನೇಬಾರದ ನಾಗಪ್ಪ (ಹಜಾಮ), ಕುಲಾಲ ಕುಂಟಶೆಟ್ಟಿ (ಕುಂಬಾರ), ಸಂತೂರಾಮ ವಿಠೋಬ(ದರ್ಜಿ)–ಇವರೆಲ್ಲ ಸೇರಿ ನಾಟಕವೊಂದನ್ನು ಆಡುವುದಕ್ಕೆ ಉದ್ಯುಕ್ತರಾದ ಸನ್ನಿವೇಶವು ಆ ಕಾಲದಲ್ಲಿ ಮೈಸೂರಲ್ಲಿ ನಡೆಯುತ್ತಿದ್ದ ರಂಗತಾಲೀಮಿನ ಬಗೆಯನ್ನು ಅಣಕಿಸುತ್ತದೆ. ಶ್ರೀಕಂಠೇಶಗೌಡರಲ್ಲಿ ಸಾಮಾಜಿಕ ನಾಟಕವನ್ನು ಬರೆಯಬಲ್ಲ ಯೋಗ್ಯತೆಯಿತ್ತೆಂಬುದಕ್ಕೆ ಇದು ಸಣ್ಣ ನಿದರ್ಶನವಾಗಿದೆ. 'ಶೇಕ್ಸ್‌ಪಿಯರನನ್ನು ಕನ್ನಡಕ್ಕೆ ತರುವ ಯೋಚನೆ ಮಾಡುವುದಕ್ಕೆ ಪ್ರತಿ ಇವರು ಸ್ವತಂತ್ರ ನಾಟಕಗಳನ್ನು ಬರೆದಿದ್ದರೆ ಇವರ ಶಕ್ತಿ ಇದಕ್ಕಿಂತ ಹೆಚ್ಚು ಸಾರ್ಥಕವಾಗುತ್ತಿತ್ತು.' ಎಂಬ ಮಾಸ್ತಿಯವರ ಅಭಿಪ್ರಾಯವು ಸರಿಯಾದದ್ದೇ.[೨]

ಶೇಕ್ಸ್‌ಪಿಯರನ ನಾಟಕದ ಅನುವಾದದಲ್ಲಿ ಬರುವ ದೊಡ್ಡ ತೊಡಕೆಂದರೆ ಅದರಲ್ಲಿಯ ಕಾವ್ಯಮಯ ಅಂಶಗಳನ್ನೂ ಸರಳ ರಗಳೆಯ ಬಗೆಯನ್ನೂ ಸಮರ್ಪಕವಾಗಿ ಕನ್ನಡದಲ್ಲಿ ತರುವುದು. ಅವನ್ನು ಅಷ್ಟೇ ಭಾವಪೂರ್ಣವಾಗಿ ಅನುವಾದಿಸುವುದೊತ್ತಟ್ಟಿಗಿರಲಿ ಪ್ರೇಕ್ಷಕರಿಗೆ ಬೇಸರ ಬರದಂತೆ ಕನ್ನಡದಲ್ಲಿ ತಂದಿದ್ದರೆ ಸಾಕಾಗಿತ್ತು. ಆನಂದರಾಯನಿಗಂತೂ ಜಯರಾಯಾಚಾರ್ಯನು ಪದ್ಯಗಳನ್ನು

ರಚಿಸಿಕೊಟ್ಟನು. ಶ್ರೀಕಂಠೇಶಗೌಡರಿಗೂ ಕಾವ್ಯಾನುವಾದವು ನೀಗದ ಕೆಲಸವಾಗಿದ್ದಿತು. ಹೀಗಾಗಿ ಮೂಲದ ದೀರ್ಘವಾದ ಸ್ವಗತ ಭಾಷಣಗಳನ್ನು ಅರ್ಧ ಪದ್ಯದಲ್ಲಿ , ಅರ್ಧ ಗದ್ಯದಲ್ಲಿ ಹೇಳುವ ಪ್ರಯತ್ನವನ್ನು ಮಾಡಿದರೆಂದು ಕಾಣುತ್ತದೆ.

ಈ ವಿಷಯದಲ್ಲಿ ಎಂ.ಎಸ್. ಪುಟ್ಟಣ್ಣನವರು ಹೆಚ್ಚು ಸಾರಾಸಾರ ವಿಚಾರದಿಂದ ನಡೆದುಕೊಂಡಿದ್ದಾರೆ. ಕ್ರಿ.ಶ. ೧೮೮೫ರಲ್ಲಿ ಎಂದರೆ 'ರಾಮವರ್ಮ-ಲೀಲಾವತಿ'ಯ ಪ್ರಕಟನ ಕಾಲಕ್ಕೆಯೇ ಅವರು 'ಕಿಂಗ್ ಲಿಯರ್'ದ ಅನುವಾದವನ್ನು ಕೈಗೆತ್ತಿಕೊಂಡರು. (ಹೇಮಚಂದ್ರರಾಜವಿಲಾಸ). ಈ ನಾಟಕದ ಸತ್ವವಿರುವುದು ಅದರ ಆವಿದ್ಧ ಸನ್ನಿವೇಶಗಳಲ್ಲಿ. ಅದಕ್ಕೆ ಹೆಚ್ಚು ಸ್ಪಷ್ಟತೆ ಬರಲೆಂದು ಮಮೂಲಿನ ಕಂದ ವೃತ್ತಗಳನ್ನು ಬಿಟ್ಟುಕೊಟ್ಟರು. ಕಾವ್ಯಾಂಶಗಳನ್ನು ಕೂಡ, ಗದ್ಯದಲ್ಲಿ ಚೆನ್ನಾಗಿ ಹೇಳಲು ಬರುವಂತಿದ್ದವುಗಳಷ್ಟನ್ನೇ ಉಳಿಸಿಕೊಂಡರು. ಹೀಗೆ ಅವರ ಭಾಷಾಂತರವು ಮೂಲದ ಆಶಯವನ್ನು ಕೊಡುವಲ್ಲಿ, ಇತರ ಇಬ್ಬರಿಗಿಂತ ಹೆಚ್ಚು ಸಮರ್ಪಕವಾಗಿದೆ. ಈ ಗ್ರಂಥವು ಪುಟ್ಟಣ್ಣನವರ ಆರಂಭದ ಬರಹವಾಗಿದ್ದು ಆ ಕಾರಣದಿಂದ ಅವರ ಗದ್ಯ ಸಂಭಾಷಣೆಗಳು ಕೆಲವೆಡೆ ಅಸಹಜ ಹಾಗೂ ಕ್ಲಿಷ್ಟವೆನಿಸುತ್ತವೆ. ಉದಾ : "ಧೊರೆ : ಈಗ ಅವಳ ಮೌಲ್ಯ ಕಡಿಮೆಯಾಯಿತು. ಅಕೊ! ಆ ಪದಾರ್ಥ ಅಲ್ಲಿ ನಿಂತಿದೆ. ನಮ್ಮ ಆಗ್ರಹಕ್ಕೆ ಮಾತ್ರ ಸರ್ವಥಾ ಪಾತ್ರವಾಗಿರುವ ಆ ಅಲ್ಪ ಪದಾರ್ಥದಲ್ಲಿ ನಿಮ್ಮ ಅನುರಾಗಕ್ಕೆ ಪಾತ್ರವಾಗತಕ್ಕ ಗುಣ ಏನಾದರೂ ಇದ್ದರೆ, ಅಗೊ ಅಲ್ಲಿದೆ. (ಇಲ್ಲಿ 'ಪದಾರ್ಥ'ವೆಂದರೆ ಅವರ ಕಿರಿಯ ಮಗಳು ಇಂದುಕಲೆ)."

"ಇಂದುಕಲೆ : ನಿಬಿಡವಾಗಿ ತಳತಂತ್ರದಿಂದ ಅಚ್ಛಾದಿಸಲ್ಪಟ್ಟಿರುವ ದೋಷವನ್ನು ಕಾಲಗತಿಯು ವ್ಯಕ್ತಪಡಿಸುವುದು" (ಪು.೧೧).

"ಶುಕ್ಲ: ಬಹಿರಂಗವಾಗಿ ಸ್ತೋತ್ರಮಾಡಲ್ಪಟ್ಟು ಅಂತರಂಗವಾಗಿ ಅಪರಾಧಿಯಂತೆ ಪರಿಗಣಿಸಲ್ಪಡುವುದಕ್ಕಿಂತಲೂ ಈ ಸ್ಥಿತಿಯಲ್ಲಿಯೆ ಇದ್ದುಕೊಂಡು ಬಹಿರಂಗವಾಗಿ ಅಪರಾಧಿಯಂತೆ ಪರಿಗಣಿಸಲ್ಪಡುವದು ಉತ್ತಮ" (ಪು.೭೮)

ಒಥೆಲೊ ನಾಟಕವನ್ನು ಗುಂಡೋ ಕೃಷ್ಣ ಚುರಮುರಿ ಮತ್ತು ಬಸವಪ್ಪಶಾಸ್ತ್ರಿ ಇವರು ಬೇರೆಬೇರೆಯಾಗಿ ಅನುವಾದಿಸಿದ್ದಾರೆ. ('ರಾಘವೇಂದ್ರರಾವ ನಾಟಕ; 'ಶೂರಸೇನ ಚರಿತ್ರೆ'). ಈ ಮೊದಲು ಚುರಮುರಿ ಶೇಷಗಿರಿರಾಯ ಹಾಗೂ ಬಸವಪ್ಪಶಾಸ್ತ್ರಿ ಇವರ ಶಾಕುಂತಲದ ಅನುವಾದಗಳನ್ನು ತುಲನೆ ಮಾಡಿ ನೋಡಿದ್ದೇವೆ. ಶಾಕುಂತಲಾನುವಾದಗಳಲ್ಲಿ ಯಾವ ಗುಣ-ದೋಷಗಳು ತೋರಿವೆಯೋ, ಅವೇ, ಒಥೆಲೊ ಅನುವಾದದ್ವಯದಲ್ಲಿಯೂ ಒಟ್ಟಿನಲ್ಲಿ ವ್ಯಕ್ತವಾಗಿವೆ. ಬದಲಾವಣೆ ಎಂದರೆ, ಗುಂಡೋ ಕೃಷ್ಣ ಚುರಮುರಿಗೆ ಸಂಗೀತದಲ್ಲಿ ಪರಿಣತಿ ಇರಲಿಲ್ಲ. ಬಸವಪ್ಪಶಾಸ್ತ್ರಿಗಳಿಗೆ ಇಂಗ್ಲಿಷ್ ಭಾಷೆಯ ಪರಿಜ್ಞಾನವಿರಲಿಲ್ಲ. ಈ ಅಭಾವದ ಪರಿಣಾಮ ಅವರುಗಳ ಕೃತಿಗಳಲ್ಲಿ ಕಂಡುಬಾರದೆ ಇಲ್ಲ.

ಶೂರಸೇನ ಚರಿತ್ರೆಯು ಬಸವಪ್ಪಶಾಸ್ತ್ರಿಗಳ ನಾಟಕಾನುವಾದಗಳಲ್ಲೆಲ್ಲ ಅಸಮರ್ಪಕವಾದದ್ದು. ಅಲ್ಲದೆ ಅದನ್ನು ಅವರು ಪೂರ್ಣ ಮಾಡಿರಲೂ ಇಲ್ಲ. ಅಂತೂ ಅದರ ಶೈಲಿಯು ತೀರ ಅಸಮ-ವಿಷಮವಾಗಿದೆ. ವಾಕ್ಯಗಳಲ್ಲಿ ಒಮ್ಮೆ ಅತಿ ಸಂಸ್ಕೃತವಿದ್ದರೆ ಮತ್ತೊಮ್ಮೆ ಗ್ರಾಮ್ಯವೆನ್ನುವ ಶಬ್ದಗಳು ನುಸುಳಿವೆ. ಪದ್ಯರಚನೆಯಲ್ಲಿಯೂ ಅದೇ ವಿಷಮತೆ :

ಪರಿವ ನದಿ ಪಿಂದೆ ತಿರುಗದ
ಪರಿಯಿಂ ಪ್ರಳಯಾಗ್ನಿ ಸದೃಶವಹ ಮಹತ್ಕೋಪಂ
ದುರುಳೆ ನಡೆಯಿಸಿದ ಕೃತ್ಯಕೆ
ಸರಿಯಾದುದ ಮಾಡದೆಂತು ಶಾಂತಮೆನಿಕ್ಕುಂ ॥

ಈ ಪದ್ಯವು ಸರಿಯಾಗಿದ್ದರೂ ಅದರ ಹತ್ತಿರವೆ ಬಂದಿರುವ ಇನ್ನೊಂದು ಕಂದಪದ್ಯವು ಶಿಥಿಲ ಬಂಧಕ್ಕೆ ಹೇಳಿಮಾಡಿಸಿದ ಉದಾಹರಣೆಯಾಗಿದೆ.

ಏಳೀಂನೆಲೆ ಮೋಹವೆ ನೀ-
ನೇಳೆಂನಯ ಹೃದಯ ಸಿಂಹಪೀಠವ ಬಿಟ್ಟೆಂ
ನಾಲಸ್ಯವೇಕೆ ನೋಪಿದೊ
ಕಾಲಿಟ್ಟಿಂ ದ್ವೇಷಭೂಪದಸಿಂದೇರಲಾ

ಇದು ಬಸವಪ್ಪಶಾಸ್ತ್ರಿಗಳಿಂದ ರಚಿತವೆಂದು ನಂಬಲಿಕ್ಕೆ ಸಾಧ್ಯವಿಲ್ಲದಂತಿದೆ.

ರಾಘವೇಂದ್ರರಾವ ನಾಟಕದ ಕಥಾವಸ್ತು ಮತ್ತು ಘಟನೆಗಳು ಐತಿಹಾಸಿಕವಾಗಿದ್ದರೂ, ಪರಿಸರ, ಪಾತ್ರ ಕಲ್ಪನೆ ಹಾಗೂ ಭಾಷೆ, ಇವುಗಳ ವಿಚಾರದಲ್ಲಿ ಅದು ಸಮಕಾಲೀನ ನಾಟಕವಾಗಿದೆ. ಇದೊಂದು ಈ ನಾಟಕದ ಕುಂದು ಎನ್ನಬಹುದು. ಸಂಭಾಷಣೆಯಲ್ಲಿ ಮಾತ್ರ ನಾಟಕದುದ್ದಕ್ಕೂ ಉತ್ತರ ಕರ್ನಾಟಕದ ದೇಸಿಯು ಎದ್ದು ಹೊಡೆಯುತ್ತದೆ. ಅದರಲ್ಲಿ ಬರುವ ಕೃತಪುರವೆಂದರೆ ಗದಗು, ತ್ರಿಮಲರಾವ, ದೇವಜಿ, ಪಂತ, ಮುತಾಲಿಕ, ವೆಂಕೂಬಾಯಿ ಎಂಬ ಹೆಸರುಗಳು ಅಪ್ಪಟ ಧಾರವಾಡ ಕಡೆಯವು. ಬಳಕೆವಾತನ್ನು ಆದ್ಯಂತವಾಗಿ ತಂದದ್ದರಿಂದ ಪಾತ್ರಗಳು ಜೀವಂತಿಕೆಯಿಂದ ಕೂಡಿವೆ. ದೇಸಿಯನ್ನು ತರಬೇಕಾದಾಗ, ಮೂಲದಲ್ಲಿಲ್ಲದ ಅಂಶಗಳು ಸಹಜವಾಗಿ ಸಂಭಾಷಣೆಯಲ್ಲಿ ಸೇರಿಕೊಂಡಿವೆ.*

---

* ಮಾದರಿಯೆಂದು ಒಂದು ದೃಶ್ಯಭಾಗವನ್ನು ಇಲ್ಲಿ ಕೊಡುತ್ತಿದ್ದೇವೆ : ನರಸಿಂಗರಾಯನು (ಇಯಾಗೋ) ಸುಬ್ಬರಾಯನೊಂದಿಗೆ (ಕ್ಯಾಸಿಯೊ) ಅವನ ಬೇರೊಂದು ಪ್ರೇಮ ವ್ಯವಹಾರದ ವಿಷಯ ಮಾತನಾಡುತ್ತಿದ್ದಾನೆ. ಮರೆಯಲ್ಲಿ ನಿಂತು ಕೇಳುತ್ತಿರುವ ರಾಘವೇಂದ್ರರಾಯನಿಗೆ (ಒಥೆಲೊ) ತನ್ನ ಡೆಸ್ಡೆಮೋನಾಳ ವಿಷಯವನ್ನೇ ಸುಬ್ಬರಾಯ ಹೇಳುತ್ತಿದ್ದಾನೆಂಬ ಭ್ರಮೆ ಹುಟ್ಟುವಂತೆ ನರಸಿಂಗರಾಯ ಮಾತನ್ನು ಬೆಳೆಸುತ್ತಿದ್ದಾನೆ

(ಮುಂದುವರೆದಿದೆ.......)

ಈ ನಾಟಕವು ಸಂಪೂರ್ಣ ಗದ್ಯದಲ್ಲಿದ್ದು, ಅದರಲ್ಲಿ ಎರಡೇ ಪದ್ಯಗಳಿವೆ. ರಾಘವೇಂದ್ರರಾಯನ ಸೈನಿಕರು ಕೋಟೆಯನ್ನು ವಶಪಡಿಸಿಕೊಂಡಾದ ಮೇಲೆ, ಮದ್ಯಪಾನ ಸಮಾರಂಭದ ಕಾಲಕ್ಕೆ ಅವು ಬಂದಿವೆ :

"ನರಸಿಂಗರಾಯ : ಯಾರೂ ಅಲ್ಲಿ, ಹೂಂ. ಇನ್ನೊಂದು ಬಾಟ್ಲಿ ಬರಲಿ.

ಪಿಡಿಯೊಳಡಗುವ ನಡುವನಾ ಸತಿಯೊಡನೆ ಸರಸಗಳಾಡುತಾ
ಜಲಜಮುಖಿ [illegible] ಗಲ್ಲವ ಪಿಡಿದು ಚುಂಬನ ನೀಡುತಾ
ಎಡದೊಡೆಯ ಮೇಲಿರಿಸಿ ಮದನಾತುರದಿ ಮುಖವನು ನೋಡುತಾ
ಬಿಡದೆ ರಮಿಸುತಲಿಹನೆ ಗುಣಗುಣಮಂಡಿತಂ ಘನ ಪಂಡಿತಂ ॥

ಸುಬ್ಬರಾವ : ಪದವು ಬಹಳ ಸೊಗಸಾಗಿರುವುದು.

---

ನರ : ನೀವು ಅವಳನ್ನು (ತಾರಾ) ಮದುವೆಯಾಗುವಿರೆಂದು ಜನರೊಳಗಂತೂ ಬಹಳ ಜೋಬ್ದಾಟವಾಗಿದೆ.

ಸುಬ್ಬ : . . . . . [illegible] ಅವಳು ಬಂದಿದ್ದಾಳು. ನಾನು ಹೋದಹೋದಲ್ಲೆಲ್ಲ ಬರುತ್ತಾಳರೀ ! ಮೊನ್ನೆ ನಾನು ಸಮುದ್ರ ದಡದ ಮೇಲೆ ಕೃತಕಪುರದ ಒಬ್ಬ ಗೃಹಸ್ಥನೊಡನೆ ಮಾತಾಡುತ್ತ ನಿಂತಿದ್ದೆ. ಅಲ್ಲಿಗೇ ಬಂದಳಲ್ಲಾ [illegible]. ಬಂದು [illegible] ನಿಂತಳೇನು? ಇಲ್ಲ : ಬಂದವಳೇ ಕೊರಳಿಗೆ [ಅಭಿನಯಿಸುತ್ತ] ಹೀಗೆ ಅಪ್ಪಿಮುಟ್ಟಿಯನ್ನೇ ಹಾಕಿದಳು.

ರಾಘ : (ಅಡಗಿದಲ್ಲೇ) 'ಬಾರೊ, ನನ್ನ ಸುಬ್ಬರಾಯಾ' ಎಂದು ಕೊರಳಲ್ಲಿ ಹಾಗೆ ಕೈ ಹಾಕಿದ್ದಾಳು. ಅವನ ಹಾವಭಾವಗಳಿಂದ ಇದೇ ಅರ್ಥ ಹೊರಡುತ್ತದೆ.

ರಾಘ : ನನ್ನ ಕೊರಳಿಗೆ ಜಗ್ಗಿದಿದ್ದು ಹೊರಳಾಡಿದಳು. ಅತ್ತಳು, ಚೀವಟದಳು, ಹೊಡೆದಳು. ಆ ಗೃಹಸ್ಥನ ಎದುರಿಗೆ [illegible] ಮಾಡಿಬಿಟ್ಟಳು. [illegible] ಬಿಡಿಸಿಕೊಳ್ಳಬೇಕ ಹೇಳಿರಿ ! ಹಾ, ಹಾ, ಹಾ !

ರಾಘ : (ಅಡಗಿದ್ದಲ್ಲೇ) ಈಗ, ಅವಳು [illegible] ಹ್ಯಾಗೆ ಎಳೆದೊಯ್ದಳೆಂಬುದನ್ನು [illegible].

ಸುಬ್ಬ : ಅವಳ [illegible]. ಇನ್ನು ಅವಳ ಸಂಗತಿಯನ್ನೇ ಬಿಟ್ಟುಬಿಡುತ್ತೇನೆ.

ನರ : ನನ್ನ [illegible] ಕಾಣುತ್ತದೆ. ಅಕೋ ಬಂದಳು ನೋಡಿರಿ. (ತಾರಾ ಬರುತ್ತಾಳೆ)

ಸುಬ್ಬ : [illegible] ಆಗಲಿ. ಚೆಲುವೆ ಬಿರೇ. ಯಾಕರೀ ?. . . ಯಾಕೆ ನನ್ನ [illegible]?

ತಾರಾ : ನಾನ್ಯಾಕೆ ನಿಮ್ಮ [illegible] ಹತ್ತಲಿ ಬನ್ನಿ . . . . ಅನುಕೂಲವಿದ್ದರೆ [illegible] ಅಂದರೆ ಹೇಳುತ್ತೇನೆ. ಇಲ್ಲದಿದ್ದರೆ ಮರ್ಜಿ. (ಹೊರಟು ಹೋಗುತ್ತಾಳೆ).

ನರ : ಹೋಗಿರೀ, ಹೋಗಿರೀ, ಅವಳ ಕೂಡ ಹೋಗಿರಿ.

ಸುಬ್ಬ : [illegible] ಹೋಗಲಿಕ್ಕೇ ಬೇಕು. ಇಲ್ಲದಿದ್ದರೆ ಓಣೀ ಹಿಡಿದು ಒದರಿಕೊಳ್ಳುತ್ತಲೇ [illegible].

ನರ : ನಾನು ಇದನ್ನು ಮುಂಬಾಪುರದಲ್ಲಿ ಕಲಿತೆನು. ಮುಂಬಾಪುರಸ್ಥರು ಕುಡಿಯುವುದರಲ್ಲಿ ಹೆಸರಾದವರು . . . .

ಸುಬ್ಬ : ಹೂಂ, ಮುಂಬೈಯವರು ಇಷ್ಟು ಕುಡಿಯುತ್ತಾರೋ?

ನರ : ಪುಣೆಯವರು ಎಷ್ಟು ಕುಡಿದರೆ ಸತ್ತಂತೆ ಬೀಳುವರೊ ಅಷ್ಟು ಮುಂಬೈಯವರು ಸಹಜ ಕುಡಿದು ಬಿಡುತ್ತಾರೆ. . . .ಏನು ಮುಂಬೈ ಪಟ್ಟಣದ ಐಶ್ವರ್ಯವು !

ಹರಿಣಲೋಚನೆ ಗುರುಪಯೋಧರೆ ನಾಗವೇಣಿ ಸುಧಾಧರೀ
ಸರಸ ವಚನಾರವಿಂದ ಮುಖರೂಪದಲಿ ಹಿಮಕರ ಸೋದರೀ
ಪರಮ ವರ್ತುಳ ಕಂಬುಗೊರಳಿನ ತರುಣಿ ಪೂಶರನಾಟಕೆ
ನಿರುತ ಬಳಿಯಲ್ಲಿರಲು ಸುರವರ ಪುರದ ಸುಖ ನಮಗ್ಯಾತಕೆ ॥"

ಇವೇ ಆ ಎರಡು ಪದ್ಯಗಳು.

ಮೂಲ ನಾಟಕದಲ್ಲಿ ಸೈನಿಕನು ಕುಡಿಯುವ ಪರಿ, ಅರಸನ ಜಿಪುಣತನ–ಇವು ಬಂದಿದ್ದರೆ ಇಲ್ಲಿ ಅವು ಶೃಂಗಾರ ಪದ್ಯಗಳಾಗಿ ಮಾರ್ಪಟ್ಟಿವೆ. ಕುಡಿದವನು ಈ ರೀತಿ ಶೃಂಗಾರಲೋಲುಪನಾಗಿ ಗಳಹುವುದು ಸಹಜವೇ.

ನೇರವಾದ ನಾಟಕ ರೂಪದಲ್ಲದೆ, ಶೇಕ್ಸ್‌ಪಿಯರನು ನಾಟಕ ಕಥೆಗಳ ಮೂಲಕವಾಗಿಯೂ ಕನ್ನಡದಲ್ಲಿ ಕಾಣಿಸಿಕೊಂಡಿದ್ದಾನೆ. ('ಲ್ಯಾಂಬ್ಸ್ ಟೇಲ್ಸ್'–ಅನುಸರಣೆ). ಇಲ್ಲಿಯೂ ಅವಕ್ಕೆ ಭಾರತೀಯ ಆವರಣವನ್ನು ಕಲ್ಪಿಸಲಾಯಿತು. ಅದೇನಿದ್ದರೂ ಶೇಕ್ಸ್‌ಪಿಯರನ ಪ್ರಸಿದ್ಧ ಕೃತಿಗಳು ಕನ್ನಡದಲ್ಲಿ ಒಡಮೂಡಿದುದು ೧೯ನೆಯ ಶತಮಾನದ ಸಾಹಿತ್ಯ ವೈಶಿಷ್ಟ್ಯಗಳಲ್ಲಿ ಒಂದಾಗಿದೆ.

ಆದರೆ ಅವುಗಳ ಕನ್ನಡಾನುವಾದದ ಬಗೆಯನ್ನು ಆ ಕಾಲದಲ್ಲಿಯೇ ಟೀಕಿಸಲಾಯಿತು. ಶ್ರೀಕಂಠೇಶಗೌಡರ 'ಪ್ರತಾಪರುದ್ರದೇವ' ಪ್ರಕಟವಾದಾಗ 'ಭಾಷಾಭಿಮಾನಿ'ಯೊಬ್ಬನು ೧೮೯೭ರ ವಿದ್ಯಾದಾಯಿನೀ ಪತ್ರಿಕೆಯಲ್ಲಿ ಟೀಕಿಸಿದನು. ಆ ಲೇಖನಮಾಲೆ, ಪ್ರತ್ಯುತ್ತರಾದಿಗಳು ಮುಂದಿನ ಹಲವು ಸಂಚಿಕೆಗಳಲ್ಲಿ ಮುಂದುವರಿದುವು. 'ಕನ್ನಡಿಗರಿಗಾಗಿ ಬರೆಯಲ್ಪಟ್ಟ ಇಂಗ್ಲಿಷ್ ಉದ್ದಾಮ ಗ್ರಂಥ' ಎಂಬ ರಕ್ಷಾಪತ್ರದ ವಾಕ್ಯವನ್ನು ಎತ್ತಿಕೊಂಡು, 'ಈ ಕಾರ್ಯ ಒಳ್ಳೆಯದೇ. ಆದರೆ ಹಾಗೆ ಮಾಡುವವನಿಗೆ ಯೋಗ್ಯತೆ ಬೇಕಲ್ಲ'–ಎಂಬ ಮಾತಿನಿಂದ 'ಭಾಷಾಭಿಮಾನಿ'ಯ ವಿಮರ್ಶೆ ಮೊದಲಾಗುತ್ತದೆ. ಶ್ರೀಕಂಠೇಶಗೌಡರು ಈ ಕೃತಿಗೆ ಸುದೀರ್ಘ ಮುನ್ನುಡಿ ಬರೆದು, ಇಂಗ್ಲಿಷ್ ನಾಟಕಾನುವಾದ ಕ್ರಮ ಮತ್ತು ಅದರ ಭಾಷೆ ಇವುಗಳನ್ನು ಚರ್ಚಿಸಿದ್ದಾರೆ. ಅವರ ಈ ವಿಷಯಕವಾದ ನಿಲುವೆಂಯು ಭಾಷಾಭಿಮಾನಿಗೆ ಸಾಕಷ್ಟು ವಾದಾಂಶಗಳನ್ನು ಒದಗಿಸಿದೆ ;

ವ್ಯಂಗ್ಯಪೂರ್ಣವಾದ ಖಂಡನೆಗೆ ಗುರಿಯಾಗಿದೆ. ತನ್ನ ಲೇಖನಮಾಲೆಗೆ 'ಭಾಷಾಭಿಮಾನಿ'ಯು ಕೊಟ್ಟ ಶೀರ್ಷಿಕೆ : 'ಸೋಜಿಗವೆ ಪೇಳೆ ಕಬ್ಬ ಗೌಡಂ.'

ಮೊದಲನೆಯ ಆಕ್ಷೇಪ – ಶೇಕ್ಸ್‌ಪಿಯರನ ಪದ್ಯಕಾವ್ಯ ಸರಣಿಯು ಕನ್ನಡದಲ್ಲಿ ಸಮರ್ಪಕವಾಗಿ ಬಂದಿಲ್ಲವೆಂಬುದು. "ಗೌಡರು ಇನ್ನೂ ತಮಗೆ ರೂಢಿಯಿಲ್ಲದ ಪದ್ಯ ಕಾವ್ಯ ಸರಣಿಯನ್ನು ಬರೆಯ ಯತ್ನಿಸದೆ . . . .ವಚನ ರೂಪವಾಗಿಯೆ ಬರೆದಿದ್ದರೆ ನೆಟ್ಟಗಿತ್ತು." ಕಥಾವಸ್ತುವಿನಲ್ಲಿ ಮಾಡಿಕೊಂಡ ಮಾರ್ಪಾಟುಗಳಲ್ಲಿ ವೀರಸೇನ (ಮ್ಯಾಕ್‌ಬೆತ್)ನ ಬದಲು ಪ್ರತಾಪರುದ್ರದೇವನು ಕಥಾನಾಯಕನಾದುದು ಎದ್ದು ಕಾಣುವಂತಹುದು. "ಹೀಗೆ ವ್ಯತ್ಯಾಸ ಮಾಡಿದ್ದಕ್ಕೆ ಇವರು ಶೇಕ್ಸ್‌ಪಿಯರ್ ಕವಿಯ ಕ್ಷಮಾಪಣೆಯನ್ನು" ಕೇಳಬೇಕಾಗಿದ್ದಿತು.

'ಮೂಲ ಗ್ರಂಥದ ಯಾವ ಭಾಗದಲ್ಲಿ ಸ್ವಾರಸ್ಯವು ಒಪ್ಪುವುದೊ ಭಾಷಾಂತರಿಸಿದ ಗ್ರಂಥದ ಆ ಭಾಗದಲ್ಲಿ ಇಲ್ಲದಿದ್ದರೂ ಒಟ್ಟು ಗ್ರಂಥದಲ್ಲಿದ್ದರೆ ಎರಡು ಗ್ರಂಥಗಳಲ್ಲಿಯೂ ಸ್ವಾರಸ್ಯವೆಂಬುದು ಒಂದೇಯಾಗಿ ತಾನೇ ಇರುವುದು' ಎಂಬುದು ಶ್ರೀಕಂಠೇಶಗೌಡರ ನಿಲುಮೆ. ಅದಕ್ಕೆ ಉತ್ತರವಾಗಿ 'ಭಾಷಾಭಿಮಾನಿ'ಯು ರಸವೆಂಬುದು ಉಚಿತ ಸ್ಥಾನದಲ್ಲಿ ಬರತಕ್ಕಂಥಾದ್ದು; ಭಾಷಾಂತರದಲ್ಲಿ ಸಿಕ್ಕಸಿಕ್ಕಲ್ಲಿ ಇಡುವುದಾದರೆ ಹೇಗೆ–ಎಂಬ ಮರುಪ್ರಶ್ನೆಯನ್ನು ಕೇಳಿದ್ದಾನೆ.

ಭಾಷಾಂತರದ ಕ್ರಮದ ಬಗ್ಗೆ ಶ್ರೀಕಂಠೇಶಗೌಡರು ಮುನ್ನುಡಿಯಲ್ಲಿ ಹೇಳಿದ ಮಾತುಗಳ ಭಾಷಾಭಿಮಾನಿಯ ಖಂಡನೆ ಇಂತಿದೆ : "ಗ್ರಂಥಾದಿಯಲ್ಲಿ ಇವರು ಯಾವನೋ ಇಟಾಲಿಯನನೊಬ್ಬನು ಬರೆದ ವಾಕ್ಯವನ್ನು ತೆಗೆದುಕೊಂಡು, ಆ ವಾಕ್ಯವನ್ನು ಖಂಡಿಸ ಯತ್ನಿಸಿ, ಪಿಷ್ಟ ಪೇಷಣ ನ್ಯಾಯವಾಗಿ ಕೆಲವು ಕಡೆ ಹೇಳಿದದನ್ನೇ ಹೇಳಿಕೊಂಡು, ಕೆಲವೆಡೆ ತಾವು ಹೇಳಿರುವ ವಾಕ್ಯಗಳಿಗೇ ವಿರುದ್ಧವಾಗಿ ಪೂರ್ವಾಪರ ಸಂಬಂಧವಿಲ್ಲದೆ ವಿಷಯ ವಿಚಾರವನ್ನು ಮಾಡಿ, ಮುಗ್ಗರಿಸಿ ಹಳ್ಳಕ್ಕೆ ಬಿದ್ದು ಏಳ ಯತ್ನಿಸಿ ಪುನಃ ಜಾರಿ ಕುಕ್ಕರಿಸುವವನಂತೆ ಏನೊ ಉಪಕ್ರಮ ಮಾಡಿ ಪೇಚಾಡಿ ಪೇಚಾಡಿ ಕಡೆಗೆ ಎಲ್ಲಿಯೊ ವಿರಮಿಸಿರುವರು"–

ಇನ್ನೀಗ ಈ ಕೃತಿಯ ಶಬ್ದ, ವ್ಯಾಕರಣ ವಿಚಾರ : ಸಂಸ್ಕೃತದಿಂದ ನಾವು ಅನೇಕ ಶಬ್ದಗಳನ್ನು ಇದ್ದುದಿದ್ದಂತೆ ತಗೊಳ್ಳುತ್ತೇವೆ. ಅದರಂತೆ ಇಂಗ್ಲಿಷ್‌ನಿಂದಲೂ ಏಕೆ ತಗೊಳ್ಳಬಾರದು–ಎಂಬ ವಿಚಾರ ಶ್ರೀಕಂಠೇಶಗೌಡರದು. ಇದಕ್ಕೆ 'ಭಾಷಾಭಿಮಾನಿ'ಯು, 'ಕನ್ನಡ ಶಬ್ದಸ್ವರೂಪವು ಇಂಗ್ಲಿಷ್‌ಗಿಂತಲೂ ಸಂಸ್ಕೃತಕ್ಕೆ ಹತ್ತಿರವಾಗಿರುತ್ತದೆ ; ಹಾಗೂ ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯಗಳನ್ನು ಸುಲಭವಾಗಿ ಹಚ್ಚಿ ಕನ್ನಡ ವಾಕ್ಯದಲ್ಲಿ ಸರಾಗವಾಗಿ ತಗೊಳ್ಳಬರುತ್ತದೆ; ಈ ಸೌಲಭ್ಯ ಇಂಗ್ಲಿಷ್‌ಗಿಲ್ಲ' ಎಂಬ ಅಂಶದತ್ತ ಶ್ರೀಕಂಠೇಶಗೌಡರ ಗಮನವನ್ನು ಸೆಳೆದಿದ್ದಾನೆ.

'ಭಾಷಾಭಿಮಾನಿ'ಯು ತನ್ನ ದೋಷಾನ್ವೇಷಣ ಕಾರ್ಯವನ್ನು ಮುಂದುವರಿಸಿ ಈ ನಾಟಕಾನುವಾದದಲ್ಲಿ ವಿಭಕ್ತಿ ಮತ್ತು ಕ್ರಿಯಾಪ್ರತ್ಯಯಗಳು ಇಲ್ಲದಿರುವಿಕೆ; ಹಳಗನ್ನಡ, ಹೊಸಗನ್ನಡ ಪ್ರತ್ಯಯಗಳ ಕಲಬೆರಕೆ; ಗ್ರಾಮ್ಯಶಬ್ದಗಳ ಬಳಕೆ--ಇತ್ಯಾದಿ ದೋಷಗಳನ್ನು ಪುಟ ಪುಟಕ್ಕೂ ಕಂಡಿದ್ದಾನೆ ! ಇಂತಿದೆ ಅವನ ಸಮಾರೋಪ : "ಇಷ್ಟೆಲ್ಲ ವಿಚಾರ ಮಾಡಿದ ಅನಂತರದಲ್ಲಿ ಈ ಪ್ರತಾಪರುದ್ರದೇವ ಎಂಬ ಗ್ರಂಥವನ್ನು ಯಾವ ಗ್ರಂಥಗಳ ಜೊತೆಗೆ ಸೇರಿಸಬೇಕೊ ನಿಷ್ಕರ್ಷಿಸುವುದು ಪ್ರಯಾಸವಾಗಿದೆ. . . .ಸರಿಯಾದ ಭಾಷಾಂತರವೂ ಅಲ್ಲದೆ, ಸ್ವಂತವಾಗಿ ಸಂವಿಧಾನವನ್ನು ಅನುಸರಿಸಿಯೂ ಬರೆಯದೆ, ಲಕ್ಷಣ ಗ್ರಂಥವೂ ಅಲ್ಲದೆ, ಓದುವುದಕ್ಕೆ ಆಹ್ಲಾದಕರವಾಗದಂತೆ ಬರೆದ ಗ್ರಂಥವನ್ನು ಏನೆಂದು ಕರೆಯೋಣ?"

ಈ ಲೇಖನಮಾಲೆಗೆ ಶ್ರೀಕಂಠೇಶಗೌಡರು ಉತ್ತರ ಕೊಟ್ಟಂತಿಲ್ಲ. ಆದರೆ ಅವರ ಪ್ರೇರಣೆಯಿಂದ ಇದ್ದಿರಬಹುದು. ಮಹಾರಾಜಾ ಕಾಲೇಜಿನ ಕನ್ನಡ ಪಂಡಿತ ಪಿ.ಆರ್. ಕರಿಬಸವಶಾಸ್ತ್ರಿಯ ಪ್ರತ್ಯುತ್ತರವು 'ವಿದ್ಯಾದಾಯಿನಿ'ಯ ಮುಂದಿನ ಸಂಚಿಕೆಗಳಲ್ಲಿ ಪ್ರಕಟವಾಗಿದೆ. "ಇದು ರೂಪಾಂತರ, ಭಾಷಾಂತರವಲ್ಲ; ಆದಕಾರಣ ಬಹಳಷ್ಟು ಹಳಿಯುವುದು ಬೇಡ. ಇದರಲ್ಲಿಯ ಗುಣಗಳೊಂದನ್ನೂ 'ಭಾಷಾಭಿಮಾನಿ'ಯು ಗಮನಿಸಿಲ್ಲ; ಆದ್ದರಿಂದ ಇವನನ್ನು 'ದೋಷಾಭಿಮಾನಿ' ಯೆಂದು ಕರೆಯುವುದು ಸೂಕ್ತ" ಎಂದಿದ್ದಾನೆ–ಕರಿಬಸವಶಾಸ್ತ್ರಿ.

ಇಂಗ್ಲಿಷ್ ನಾಟಕಗಳ ಈ ಬಗೆಯ ಅನುವಾದ/ರೂಪಾಂತರಗಳನ್ನು 'ಭಾಷಾಭಿಮಾನಿ'ಗಿಂತಲೂ ವ್ಯಂಗ್ಯವಾಗಿ ಟೀಕಿಸಿ, ಒಂದು ಪುಸ್ತಕವೇ ಹೊರಬಂದಿತು. (ಅಕಿಂಡ್ರೇಸ್, ೧೯೧೫). ಇದನ್ನು ಬರೆದವನು 'ಇಂಗ್ಲಿಷ್–ಕನ್ನಡ ಭಾಷಾಂತರ ವೈರಿ'ಯೆಂದು ತನ್ನನ್ನು ವಿಶೇಷಿಸಿಕೊಂಡ, ಎ.ಬಿ. ಏಯಾಟ್‌ಸ್‌ನ್ ಕಿರಸನು (ಎ.ಶ್ರೀಕಂಠಯ್ಯ ಬಿ.ಎ.ಎಂಬ ಹೆಸರಿನ ತಿರುಗು ಮುರುಗು). ಅವನ ವ್ಯಂಗ್ಯ–ವಿಮರ್ಶೆಯ ಬಗೆ ನೋಡುವಂತಹದಿದೆ. ಆನಂದರಾಯನ 'ರಾಮವರ್ಮ – ಲೀಲಾವತಿ'ಯ ಬಗ್ಗೆ ಹೇಳಿದ ಮಾತುಗಳಂತಿವೆ: "ಹದಿನೆಂಟು ವರ್ಷದ ಲೀಲಾವತಿಯು ಕನ್ಯಾವಸ್ಥೆಯಲ್ಲಿ ಮುಖಕ್ಕೆ ಪರದೆ ಹಾಕಿಕೊಂಡು ಇಪ್ಪತ್ತೈದು ವರ್ಷದ ರಾಮವರ್ಮನ ಜೊತೆಯಲ್ಲಿ ಕುಣಿಯುವುದನ್ನು ನೋಡಲಾರೆವು. ಲೀಲಾವತಿಯ ಶಯನಗೃಹಕ್ಕೆ ವಯಸ್ಕನಾದ ರಾಮವರ್ಮನಿಂದ ರಾತ್ರಿ ಕಾಲದಲ್ಲಿ ನೂಲೇಣಿಯನ್ನು ಹಾಕಿಸಲಾರೆವು. ಅವಿವಾಹಿತಳಾದ ಹಿಂದೂ ಹುಡುಗಿಯು ದೇವಾಲಯಕ್ಕೆ ಹೋಗಿ ಸಂಕೇತ ವಿವಾಹ ಮಾಡಿಕೊಳ್ಳುವುದನ್ನು ನೋಡಿ ಸಹಿಸಲಾರೆವು. . .

"ಕ್ಯಾಪುಲೇಟ್ ಶಬ್ದಕ್ಕೂ ಕಾಪಿಲ ಶಬ್ದಕ್ಕೂ ಸಂಬಂಧವೇನಿರಬಹುದೆಂದು ಪ್ರಪಂಚದಲ್ಲಿರುವ ಶಬ್ದಶಾಸ್ತ್ರಗಳನ್ನೆಲ್ಲ ತಲೆಕೆಳಗಾಗಿ ಮಗಚಿ ಮಗಚಿ ಹುಡುಕಿದುದಾಯಿತು.

ಯಾವುದರಲ್ಲಿಯೂ ಆಧಾರ ಸಿಕ್ಕಲಿಲ್ಲ. ಇದರಂತೆಯೇ Montague-ಮಾಧುರ, Mercutio-ಮದನ, ಎಂಬುದಕ್ಕೂ ನಮಗೆ ಸಂಬಂಧ ತಿಳಿಯದೆ ಒಂದು ವೇಳೆ ಗ್ರಂಥಕರ್ತನ ನಿಘಂಟಿನಲ್ಲಿಯೇ ಈ ನೂತನ ವಿಚಾರಗಳು ಬರೆಯಲ್ಪಟ್ಟಿರಬಹುದೆಂದು ಊಹಿಸಿದೆವು. ಆದರೂ ಮನಸ್ಸು ಶಾಂತವಾಗಲಿಲ್ಲ. . .ಇಂಗ್ಲಿಷೂ ಸಂಸ್ಕೃತವೂ ಆರ್ಯಭಾಷೆಯ ಎರಡು ಶಾಖೆಗಳೆಂದು ನಮಗೆ ತಿಳಿದಿದ್ದರೂ ನಮ್ಮ ಅಲ್ಪಬುದ್ಧಿಯು ಈ ವಿಜಾತೀಯ ಪದಗಳಿಗೆ ಸಂಬಂಧವನ್ನು ಕಲ್ಪಿಸುವುದಕ್ಕೆ ಅಶಕ್ತವಾದುದೆಂದು ನಮಗೇ ತೋಚಿತು. ಆಮೇಲೆ ಎರಡಕ್ಕೂ 'ಪೀ' ಮೊದಲಿದ್ದುದರಿಂದ ಪೀಟರ್–ಪೀವರಾಂಗನೆಂದು ಗ್ರಹಿಸಿದೆವು. . .ಟರೆನಾಲ್ಟ್ ತ್ರೈವಿಕ್ರಮನೆಂಬುದು ಪ್ರಾಯಶಃ ಟತಯೋರಭೇದಃ ಎಂಬ ಪಾಣಿನೀ ಸೂತ್ರವನ್ನನುಸರಿಸಿ ಬರೆದಿರಬಹುದೆಂದೂ ಬಹಳ ಶ್ರಮಪಟ್ಟು ಊಹಿಸಿದೆವು! ಎರಡಕ್ಕೂ 'ಬಾಲ'ವಿದ್ದುದರಿಂದ Balthazar ಬಾಲಚಂದ್ರನೆಂದು ಸುಲಭವಾಗಿ ಗ್ರಾಹ್ಯವಾಯಿತು.

"ಶಾಕುಂತಲವನ್ನೋದಿ ನಾವು ಅದನ್ನು ಇಂಗ್ಲಿಷ್‌ಗೆ ಭಾಷಾಂತರ ಮಾಡಬೇಕೆಂದುದ್ದೇಶಿಸಿದ್ದೆವಾದ್ದರಿಂದ ಶಾಕುಂತಲ ಪಾತ್ರಗಳ ಹೆಸರುಗಳನ್ನು ಬೇಗಬೇಗ ಭಾಷಾಂತರ ಮಾಡತೊಡಗಿ ದುಷ್ಯಂತ–ಡೆಸೆಂಟ್, ಶಾಕುಂತಲ–ಷ್ಯಾಕಲ್ಟೆನ್, ಪ್ರಿಯಂವದೆ–ಪ್ರಿಂರೋಸ್, ಅನಸೂಯ–ಅನ್‌ವಿನ್ ಸ್ಯಾಮ್ಯುಯಲ್. . .ಚತುರಿಕೆ–ಚಟರ್ಟನ್ ಎಂಬುದಾಗಿ ನೂತನ ಕವಿತ್ವ ಮಾಡಿ ನಮ್ಮ ನಿಘಂಟಿಗೆ ಸೇರಿಸಿದೆವು.. .

"ಪಾಠಕ ಮಹಾಶಯ, ಈ ವಿಕಟ ಬರವಣಿಗೆಯನ್ನು ನೋಡಿ ನಿಮಗೆ ನಗು ಬರಬಹುದು. ಆದರೆ ಅದು ನಮ್ಮ ತಪ್ಪಲ್ಲ. ಈಗಿರುವ ಭಾಷಾಂತರಗಳಿಂದ ನಮ್ಮ ಮಾತೃಭಾಷೆಯಾದ ಕನ್ನಡವು ಹೊಲಸಾಗಿ ಹೋಗಿದೆ. . .ಪೇಶಲಾಂಗ ಯೆಂಬ ಹೆಸರನ್ನು ತೆಗೆದುಹಾಕಿ ಅವನ ತಂದೆಯು ಇಟ್ಟಿದ್ದ ಪ್ಯಾರಿಸ್ ಎಂಬುದನ್ನು ಊರ್ಜಿತಪಡಿಸಬೇಕೆಂಬುದೇ ನಮ್ಮ ಮತ. Black dwarf ಎಂಬುದಕ್ಕೆ ನಾವು ಶಾಮಕುಬ್ಜವೆಂದು ಹೆಸರಿಡುವವರಲ್ಲ. . .ಚಂದ್ರಹಾಸ, ವಾಮದೇವ, ದಶರಥ ಎಂಬ ಪದಗಳನ್ನು ಆಂಗ್ಲೇಯರು Moonlaugh, Left God, Ten Chariot ಎಂದು ಭಾಷಾಂತರ ಮಾಡುವುದಿಲ್ಲ. ಹೆಚ್ಚೇಕೆ? ಆಂಗ್ಲೇಯರು ಗ್ರೀಕ್, ರೋಮನ್, ಪಾರ್ಸಿ ಹಿಂದೂ ಗ್ರಂಥಗಳನ್ನು ಭಾಷಾಂತರ ಮಾಡಿರುವುದರಲ್ಲಿ ಅಂಕಿತ ನಾಮಗಳನ್ನು ಎಲ್ಲಿಯಾದರೂ ತಮ್ಮ ಮಾತೃಭಾಷೆಗೆ ಭಾಷಾಂತರ ಮಾಡಿದ್ದಾರೆಯೆ?"

**ಯಕ್ಷಗಾನದಲ್ಲಿ ಶೇಕ್ಸ್‌ಪಿಯರ್** : ೧೮೮೯ರಲ್ಲಿ ಮೊದಲ ಬಾರಿಗೆ ಶೇಕ್ಸ್‌ಪಿಯರನು 'ರಾಮವರ್ಮ ಲೀಲಾವತಿ'ಯ ಮೂಲಕ ಕಾಣಿಸಿಕೊಂಡನಷ್ಟೆ. ಅದಕ್ಕೂ ೧೫ ವರ್ಷಗಳ ಹಿಂದೆ ಅವನ As You Like It ಎಂಬ ನಾಟಕ ಯಕ್ಷಗಾನ ರೂಪದಲ್ಲಿ ಮೂಡಿ ಬಂದಿದೆ! ಅದರ ಇಡೀ ಪ್ರಸಂಗವೇನೂ ಹೊರಬಂದಿಲ್ಲ. ಆದರೆ 'ಸುಬೋಧಿನೀ'

(ಮಂಗಳೂರು) ಎಂಬ ಮಾಸಪತ್ರಿಕೆಯ ಎರಡು ಸಂಚಿಕೆಗಳಲ್ಲಿ (೧೮೭೧) ಅದರ ಕೆಲವು ಪದ್ಯಗಳು ಪ್ರಕಟವಾಗಿವೆ. 'ಸಂಕಲ್ಪ ಸಿದ್ಧಿ' ಎಂಬ ಹೆಸರಿನ ಆ ಪ್ರಸಂಗವನ್ನು ರಚಿಸಿದ ಪ್ರಸಂಗಕಾರನ ಹೆಸರೂ ಅದರಲ್ಲಿಲ್ಲ. ಆಶ್ಚರ್ಯದ ಸಂಗತಿ ಎಂದರೆ ಅವನು ಸುರುವಿಗೆ ಗಣೇಶ, ಶಂಕರಾದಿಗಳನ್ನು ಮೊದಲಿಗೆ ಸ್ತುತಿಸದೇ ಸೂರ್ಯ ದೇವನನ್ನು ಸ್ತುತಿಸಿದ್ದಾನೆ.

ಸಾಂಪ್ರದಾಯಿಕ ಕಥಾನಕವನ್ನು ಬಿಟ್ಟು 'ನಿನ್ನಿಚ್ಛೆಯೊಲಾಯ್ತು' (As You Like It) ನಾಟಕವನ್ನು ಆಯ್ದುಕೊಂಡದ್ದಕ್ಕೆ ಈ ರೀತಿ ಸಮರ್ಥನೆ ಕೊಟ್ಟಿದ್ದಾನೆ :

ಇರಲುನ್ನತಾರ್ಥ ಭಂಡಾರದೊಳ್ಮತ್ತೆ ಬಯಸಿರುವ
ಲೋಭಿಗಳಂತೆ ಹಿಂದೂ ರವೀಂದ್ರರಿಂ-
ಪರಿತೋಷವಡೆಯದನ್ಯಾಮೃತದ ಬಗೆವು-
ದ್ದೇಶೆನಲನುದಿನಂ ನದಿಯೊಳೂ
ವಿರಚಿಸಲ್ಮಜ್ಜನ ಮುಂದಾದೊಡಂ ಸಲ್ಲ-
ದಿರಬಹುದೆ ಶರನಿಧಿಸ್ನಾನಮದರಿಂ ಫಲೋ-
ತ್ಕರಿಸಿದ್ಧಿ ಕೈಗೂಡದಿಹುದೆ. . .

ನಿತ್ಯ ನದಿಯ ಸ್ನಾನ ಮಾಡುವವ ಒಂದೊಮ್ಮೆ ಸಮುದ್ರ ಸ್ನಾನ ಬಯಸಿದಂತೆ. . . ಈ ವಿಷಯದ ಆಯ್ಕೆ!

ಸರಿಯೇ, ಆದರೆ ಯಕ್ಷಗಾನ ರಚನೆಗೆ ಅಗತ್ಯವಾಗಿ ಬೇಕಾದ ವೀರ, ಶೃಂಗಾರ, ಕರುಣ ರಸಾವಿರ್ಭಾವ ಶೇಕ್ಸ್‌ಪಿಯರನ ಈ ನಾಟಕದಲ್ಲಿ ಕಂಡುಬರುವುದಿಲ್ಲ. ಅಂತೂ ಇದರ ರಚನೆಯು ರಂಗದ ಮೇಲೆ ತರುವುದಕ್ಕಾಗಿ ಇದ್ದಿರಲಾರದು.

## 44 ಸಾಮಾಜಿಕ ನಾಟಕಗಳು

ಹೊಸಗನ್ನಡದ ಮುಖ್ಯ ಲಕ್ಷಣಗಳಲ್ಲೊಂದಾದ ಸಾಮಾಜಿಕ ನಾಟಕವು ಕಳೆದ ಶತಮಾನದಲ್ಲಿಯೆ ಕಂಡುಬಂದಿತು. ಈ ಹಿಂದೆ ಹೇಳಿದಂತೆ <೯೨೩> ಆದ್ಯ ಸಾಮಾಜಿಕ ನಾಟಕವೆಂಬ ಪಟ್ಟವನ್ನು ಕರ್ಕಿ ವೆಂಕಟರಮಣಶಾಸ್ತ್ರಿಗಳ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಮತ್ತು ಶಿವರಾಮ ಧಾರೇಶ್ವರನ 'ಕನ್ಯಾವಿಕ್ರಯ' ಇವೆರಡಕ್ಕೆ ಸಮನಾಗಿ ಹಂಚಬೇಕು. ಅವುಗಳ ಪ್ರಕಟನ ಕಾಲದ ಅಂತರವು ಕೇವಲ ೧೭ ದಿನಗಳದ್ದು (ಇಗ್ಗಪ್ಪಹೆಗಡೆ, ३೧-३-೧೮೮೭; ಕನ್ಯಾವಿಕ್ರಯ, ೧೭-೪-೮೭). ಎರಡೂ ನಾಟಕಗಳು ಅಂದಿನ ಹವ್ಯಕ ಸಮಾಜದಲ್ಲಿ ರೂಢವಾಗಿದ್ದ ಕನ್ಯಾಶುಲ್ಕದ ದುಷ್ಪರಿಣಾಮವನ್ನು ಚಿತ್ರಿಸುತ್ತವೆ. ನಾಟಕಕಾರರಿಬ್ಬರೂ ಮುಂಬಯಿಯಲ್ಲಿಯೆ ನೆಲಸಿದವರು; ಪ್ರಾಯಶಃ

ಪರಸ್ಪರ ಪರಿಚಯವುಳ್ಳವರು. ಸಮಾನವಾದ ಕಥಾವಸ್ತುವನ್ನು ಒಂದೇ ಸಮಯಕ್ಕೆ ಇವರು ಕೈಗೆತ್ತಿಕೊಂಡುದು ಸೋಜಿಗವೆನಿಸುತ್ತದೆ. ಅಥವಾ ಬರೆಯುವುದಕ್ಕೆ ಮೊದಲು ಇಬ್ಬರಲ್ಲಿಯೂ ಮಾತಾಗಿರಬಹುದೆ?

ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನವು ಈಚೆಗೆ ಪುನರ್ಮುದ್ರಣಗೊಂಡದ್ದರಿಂದ ಪರಿಚಿತವಾದುದು. ಅದಕ್ಕಿದ್ದ ಇನ್ನೊಂದು ಹೆಸರು ಕನ್ಯಾವಿಕ್ರಯದ ಪರಿಣಾಮವು. ಧಾರೇಶ್ವರರ ಕೃತಿಯಂತೂ ಅದೇ ಶೀರ್ಷಿಕೆಯನ್ನು ಹೊಂದಿದೆ. ಅಂದಿನ ವಿದ್ಯಾವಂತ ಹವ್ಯಕ ಬ್ರಾಹ್ಮಣರಲ್ಲಿ ಕನ್ಯಾಶುಲ್ಕ, ವಿಷಮ ವಿವಾಹ-ಇವು ತೀವ್ರ ವಿರೋಧಕ್ಕೆ ಕಾರಣವಾಗಿದ್ದುವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಕನ್ಯಾಶುಲ್ಕವನ್ನು ತೆಗೆದುಕೊಳ್ಳಬಾರದೆಂಬ ಬಗ್ಗೆ ಮಠಾಧೀಶರು ಆಜ್ಞಾಪತ್ರವನ್ನು ಹೊರಡಿಸಿದಂತೇ ಧಾರೇಶ್ವರರ ನಾಟಕದಿಂದ ವ್ಯಕ್ತವಾಗುತ್ತದೆ. ಆದರೆ ಅವರ ಮೊಕ್ತೇಸರರು ಸಂಬಂಧಪಟ್ಟವರಿಂದ ಹಣವನ್ನು ಪಡೆದು, ಅದನ್ನು ಮರೆಮಾಡುತ್ತಿದ್ದುದರ ಪರ್ಯಾಯ ಸೂಚನೆಯು ಈ ಪ್ರಹಸನದಲ್ಲಿದೆ.

ಕನ್ಯಾಶುಲ್ಕವನ್ನು ತೆರುವುದು ಹಿಂದೂ ಸಮಾಜದ ಕೆಲವೊಂದು ವರ್ಗಗಳಲ್ಲಿ ಇದ್ದೇ ಇದೆ. ಆದರೆ ೬೦ ವರ್ಷದ ಇಗ್ಗಪ್ಪ ಹೆಗಡೆ ತನ್ನ ಮೂರನೆಯ ಮದುವೆಗಾಗಿ, ಅದೂ ತನ್ನ ಹತ್ತಿರ ಬಿಡಿಗಾಸು ಇಲ್ಲದಾಗಲೂ ಶುಲ್ಕವನ್ನು ಕೊಟ್ಟು ಹೆಣ್ಣನ್ನು ತರಬಯಸಿದುದು ಅನ್ಯಾಯದ್ದೆನಿಸುತ್ತದೆ. ಅದರಲ್ಲಿಯೇ ಮುಂದಿನ ದುರಂತದ ಸೂಚನೆಯಿದೆ. ಈ ವ್ಯವಹಾರದ ಮಧ್ಯದಲ್ಲಿದ್ದ ಗಣೇಶಭಟ್ಟನು ಜಾತಕವನ್ನು ಹೆಚ್ಚು ಕಡಿಮೆ ಮಾಡಿದ್ದಲ್ಲದೆ ಎರಡೂ ಕಡೆಯಿಂದ ಹಣವನ್ನು ಗಿಟ್ಟಿಸುತ್ತಾನೆ. ಇತ್ತ, ನಾಡಿಗರು ಒಂದಕ್ಕೆ ಎರಡು ಬರೆಯಿಸಿಕೊಂಡು ಸಾಲ ಕೊಡುತ್ತಾರೆ. ವಾಸಪ್ಪ ಹೆಗಡೆಯಂತೂ ಭಾವನಾಗಿದ್ದುಕೊಂಡೇ ಇಗ್ಗಪ್ಪನ ಎಳೆಯ ಹೆಂಡತಿ ಸಾವಿತ್ರಿಯ ಮೇಲೆ ಕಣ್ಣು ಹಾಕುತ್ತಾನೆ. ಇಳಿವಯದ ಇಗ್ಗಪ್ಪನು ಮಡಿದ ಮೇಲೆ ಸಾವಿತ್ರಿ ಗರ್ಭ ತಾಳಿ, ಹುಟ್ಟಿದ ಶಿಶುವನ್ನು ಬೀಸಾಡಿದಾಗ ಸಿಕ್ಕಿ ಬೀಳುತ್ತಾಳೆ. ಕೋರ್ಟಿನಲ್ಲಿ ನ್ಯಾಯಾಧೀಶರು ಅದರ ಮೂಲ ಕಾರಣವನ್ನು ಪರಾಮರ್ಶಿಸಿ ಸಾವಿತ್ರಿಗೆ ಅಲ್ಪ ಶಿಕ್ಷೆಯನ್ನೂ ವಾಸಪ್ಪ ಹೆಗಡೆ ಮತ್ತು ಅವನ ಹಸ್ತಕರಿಗೆ ಕಠಿಣ ಶಿಕ್ಷೆಯನ್ನೂ ವಿಧಿಸುತ್ತಾರೆ. ನಾಟಕದುದ್ದಕ್ಕೂ ಹವ್ಯಕ ಸಮಾಜದಲ್ಲಿಯ ಕುಂದುಕೊರತೆಗಳ ಬಗ್ಗೆ ಕಳಕಳಿ ಎದ್ದುತೋರುತ್ತದೆ. ಸಾವುಕಾರ ನಾಡಿಗ ಹೇಳುವಂತೆ "ಸಾಲದ ಬಡ್ಡಿ, ಹೆಂಣಿನ ತೆರ, ಲಂಚ ರುಷವತ್ತು" ಇವುಗಳಿಂದ ಆ ಜನ ಅಧೋಗತಿಗಿಳಿದಿದ್ದ ಚಿತ್ರಣವೇ ಇಲ್ಲಿದೆ. ಇದರ ಸಹಜವಾದ ಮತ್ತು ಮಾರ್ಮಿಕವಾದ ಸಂಭಾಷಣೆಗಳು ಇಂದಿನ ಯಾವುದೇ ಶ್ರೇಷ್ಠ ಸಾಮಾಜಿಕ ನಾಟಕದ ಸಂಭಾಷಣೆಗೆ ಸಮನಾಗಿವೆ.

ಕನ್ಯಾವಿಕ್ರಯದಲ್ಲಿ ಮುದಿ ವರನು ಇಲ್ಲದಿದ್ದರೂ ಶಂಭಟ್ಟನ ೯ ವರ್ಷದ ಮಗಳು ಬೆಲೆಗೆ ಇಟ್ಟ ಪಣವಾಗಿದ್ದಾಳೆ. ಅವನ ಸಂಬಂಧಿಕನೇ ಆದ ರಾಮಭಟ್ಟನು ಸುಧಾರಣಾವಾದಿ. ಅವನು ಅನುಕೂಲವಂತನಿದ್ದರೂ ತನ್ನ ಮಗನ ಮದುವೆಗಾಗಿ ಕನ್ಯಾಶುಲ್ಕವನ್ನು ಕೊಡಲು ಸಿದ್ಧನಿಲ್ಲ. ಆ ಬಗ್ಗೆ ಶಂಭಟ್ಟನ ಮನೆಯಲ್ಲಿ ಮಾತುಕತೆ ನಡೆದಾಗ ಹುಡುಗಿಯ ತಾಯಿಯು 'ಸೋದರ ನೆಂಟಸ್ಥಿಕೆಗೆ ಕೊಡಲಾರೆನೆಂದರೆ ನಡೆದೀತೆ' ಎಂದು ಬಣ್ಣದ ಮಾತಾಡುತ್ತಾಳೆ. ತಂದೆ ಶಂಭಟ್ಟನು 'ನಮಗೆ ಸಾಯುವ ಪರಿಯಂತರವೂ ಸುರಕ್ಷೆಯಿಂದ ಅಶನ ವಸನ ಶಿಕ್ಕುವಂತೆ ನಡೆಸಿಕೊಟ್ಟರೆ ತೀರಿತು. ಹೆಚ್ಚೇನು ಬೇಡ' ಎನ್ನುತ್ತಾನೆ! ಅದಕ್ಕೆ ರಾಮಭಟ್ಟನು ಕೊಟ್ಟ ಉತ್ತರ ಮಾರ್ಮಿಕವಾದುದು: "ಬಹಳ ಒಳ್ಳೇದಾಯಿತು. ನೀವೆಲ್ಲರೂ ನಮ್ಮ ಮನೆಯಲ್ಲೇ ಬಂದು ಇದ್ದು ಬಿಡಿರಿ!"

ಹೀಗೆ ಈ ಮಾತುಕತೆ ಮುರಿದರೂ ನಾರಾಯಣಭಟ್ಟನೆಂಬ ಬಡವನು ತನ್ನ ಮಗನ ಮದುವೆಗಾಗಿ ಶಂಭಟ್ಟನ ಕನ್ಯೆಯನ್ನು ಯಾಚಿಸುತ್ತಾನೆ. ಹೊಲ ಮನೆ ಒತ್ತೆ ಹಾಕಿ ಕನ್ಯಾಶುಲ್ಕವನ್ನು ತೆತ್ತು ಆ ಕನ್ಯೆಯನ್ನು ಮನೆ ತುಂಬಿಸಿಕೊಳ್ಳುತ್ತಾನೆ. ಮಗ ವಿಶ್ವಂಭರನು ದುರಾಚಾರಿ. ಅಂತೂ ಅವನು ಹರೆಯದಲ್ಲಿಯೆ ಸತ್ತುದರಿಂದ ಶಂಭಟ್ಟನ ಕನ್ಯೆಯು ಮದುವೆಯಾದ ಎರಡು ವರ್ಷಗಳಲ್ಲಿಯೇ ವಿಧವೆಯಾಗುತ್ತಾಳೆ. ಇತ್ತ ಶಂಭಟ್ಟನ ಹಣವೆಲ್ಲ ಕಳವಾಗಿ ಹೋಗುತ್ತದೆ. ಮಗಳೂ ಮುಂದೆ ಸಾಯುತ್ತಾಳೆ. ಅಂತೂ ಸಂಬಂಧಪಟ್ಟವರೆಲ್ಲರಿಗೂ ವಿಧಿಯೇ ಒಂದಿಲ್ಲೊಂದು ರೀತಿಯಲ್ಲಿ ಶಿಕ್ಷೆ ವಿಧಿಸುತ್ತದೆ.

ಇವೆರಡೂ ಕೃತಿಗಳಲ್ಲಿ ಸಂಭಾಷಣೆಯು ಹವ್ಯಕರ ಆಡುನುಡಿಯಲ್ಲಿಯೇ ಇದೆಯಾದರೂ ಧಾರೇಶ್ವರನದು ಇತರರೂ ಸುಲಭವಾಗಿ ಆಡುವಂತಿದೆ. ಸುಮಾರು ಒಂದೂವರೆ ತಾಸಿನಲ್ಲಿ ಮುಗಿಯಬಹುದಾದ ಈ ನಾಟಕದ್ವಯದ ದೃಶ್ಯಗಳ ಸಂಖ್ಯೆ ದೊಡ್ಡದು. ಹದಿನೈದು ದೃಶ್ಯಗಳಿರುವ ಇಗ್ಗಪ್ಪ ಹೆಗಡೆ ಪ್ರಹಸನವು ೧೦ ವಿವಿಧ ಸ್ಥಳಗಳಲ್ಲಿ ನಡೆಯುತ್ತದೆ. 'ಕನ್ಯಾವಿಕ್ರಯ'ದಲ್ಲಿಯೂ ಹನ್ನೊಂದು ದೃಶ್ಯಗಳಿವೆ. ರಂಗಭೂಮಿಯ ಮೇಲೆ ಅಷ್ಟು ಸುಲಭದಲ್ಲಿ ದೃಶ್ಯ ಬದಲಾವಣೆ ಸಾಧ್ಯವಿಲ್ಲ. ಕಾರಣ ಇವರು ತಮ್ಮ ನಾಟಕದ ರಂಗ ಪ್ರಯೋಗದ ಬಗ್ಗೆ ಯೋಚಿಸದೆ ಸಾಮಾಜಿಕ ಸಮಸ್ಯೆಯೊಂದನ್ನು ಸಂಭಾಷಣಾರೂಪದಲ್ಲಿ ನಿರೂಪಿಸುವ ಉದ್ದೇಶವನ್ನಷ್ಟೆ ಇಟ್ಟುಕೊಂಡಿದ್ದರೆಂಬುದನ್ನು ವಿಶೇಷವಾಗಿ ಗಮನಿಸತಕ್ಕುದು. ಸಂಭಾಷಣೆಯ ಮೂಲಕ ಕತೆ ಮುಂದುವರಿಯದಿದ್ದಾಗ ಧಾರೇಶ್ವರನು ಮುಂದಿನ ಘಟನೆಯನ್ನು ಚುಟುಕಿನಲ್ಲಿ ಹೇಳಿಕೊಂಡು ಹೋಗಿದ್ದಾನೆ. ಕೊನೆಯಲ್ಲಂತೂ ಹೀಗೆ ಹೇಳಿ ಕಥೆ ಮುಗಿಸಿದ್ದಾನೆ.

"ವಿಧವೆಯಾದ ಮಗಳು ಯೌವನವನ್ನು ಸಹಿಸಿಕೊಳ್ಳಲಾರದೆ, ಅವಿಚಾರದ ಕೃತ್ಯವನ್ನು ನಡಿಸಿದ್ದರಿಂದ ಗರ್ಭೋತ್ಪನ್ನವಾಗಲಾಗಿ ಅವಳು ಮನೆಯ ಸಮೀಪ ಭಾವಿಯಲ್ಲಿ ಹಾರಿ ಪ್ರಾಣವನ್ನು ಕಳಕೊಂಡಳು. ಆಕೆಯ ತಾಯಿಯು ಅದೇ ಮಾರ್ಗ ಅನುಸರಿಸಿದಳು. ಪಶ್ಚಾತ್ತಾಪದಿಂದ ಶಂಭಟ್ಟನು ದೇಶಾಂತರಕ್ಕೆ ಹೊರಟು ಹೋದನು."

ಇಗ್ಗಪ್ಪ ಹೆಗಡೆ ಪ್ರಹಸನದಲ್ಲಿಯೂ ಇದು ಸ್ವಲ್ಪ ಮಟ್ಟಿಗೆ ಕಂಡುಬರುತ್ತದೆ. ಮೂರನೆಯ ದೃಶ್ಯದ ಕೊನೆಗೆ ಬರುವ ಈ ಮಾತನ್ನು ಗಮನಿಸಬೇಕು :

"[ಗಣೇಶಭಟ್ಟನು] ಈ ಪ್ರಕಾರ ಹೇಳಿ ಮಲಗಲಿಕ್ಕೆ ಹೋಗುತ್ತಾನೆ. ಇತ್ತಲಾಗಿ ವಾಸಪ್ಪ ಹೆಗಡೆ, ಇಗ್ಗಪ್ಪ ಹೆಗಡೆ ಇವರು ಮರುದಿವಸ ಸಂಧ್ಯಾಕಾಲಕ್ಕೆ ಮನೆಗೆ ಸೇರುತ್ತಾರೆ. ಮರುದಿವಸ ವಾಸಪ್ಪ ಹೆಗಡೆಯು ಇಗ್ಗಪ್ಪ ಹೆಗಡೆಯ ಹತ್ತಿರ, ನೀನು ಈ ಹೊತ್ತು ಶಿರ್ಶಿಗೆ ಹೋಗಿ ರಾಯರ ಮನೆಯಲ್ಲಾಗತಕ್ಕ ಕೆಲಸವನ್ನು ತೀರಿಸಿಕೊಂಡು ಕೂತುಕೋ; ತಾನು ನಾಳೆ ಬೆಳಗ್ಗೆ ಎದ್ದು ನಾಡಿಗರ ಅಂಗಡಿಗೆ ಬರುತ್ತೇನೆಂದು ಹೇಳಿ ತನ್ನ ಮನೆಗೆ ಹೋಗುತ್ತಾನೆ."

ರಂಗಪ್ರಯೋಗವು ವೆಂಕಟರಮಣಶಾಸ್ತ್ರಿಯ ಗಮನದಲ್ಲಿರಲಿಲ್ಲವೆಂಬುದನ್ನು ತೋರಿಸಲು ಇದನ್ನು ಕಾಣಿಸಿದೆಯಲ್ಲದೆ, ಸಂಭಾಷಣೆಯ ಮೂಲಕ ಕತೆಯನ್ನು ಮುಂದೊಯ್ಯ ಬರುತ್ತಿದ್ದಿಲ್ಲವೆಂದಲ್ಲ. ಇಗ್ಗಪ್ಪ ಹೆಗಡೆಯ ಮದುವೆ ಮತ್ತು ಅವನು ಬದುಕಿದಾಗಲೇ ಆ ಕನ್ಯೆಯು ವಾಸಪ್ಪನತ್ತ ವಾಲಿದ ವಿಷಯವು ಚುಟುಕಿನ ಸಂಭಾಷಣೆಯಲ್ಲಿ ಸಹಜವಾಗಿ ಮೂಡಿ ಬಂದಿದೆ. ವಿಧವೆಯಾದ ಆಕೆಯ ಬಸಿರಿಗೆ ವಾಸಪ್ಪನೇ ಕಾರಣನೆಂಬುದೂ ಆ ಬಸಿರನ್ನು ತೆಗೆಯಿಸಿದಾಗ ಪೊಲೀಸ್ ಕೇಸ್ ಆದುದೂ ಮಡಗದ್ದೆ ದೇವಸ್ಥಾನದಲ್ಲಿ ನಡೆದ ಗುಜುಗುಜು ಹರಟೆಯಲ್ಲಿ ಕಲಾತ್ಮಕವಾಗಿ ನಿರೂಪಿತವಾಗಿದೆ.

ಈ ನಾಟಕಗಳಲ್ಲಿ ಸಂದರ್ಭಕ್ಕೆ ಉಚಿತವಾಗಿ ಅಲ್ಲಲ್ಲಿ ಪಡೆನುಡಿಗಳನ್ನು ಸೇರಿಸಿದುದು ಕಂಡುಬರುತ್ತದೆ. ಅದರಲ್ಲಿಯೂ 'ಕನ್ಯಾವಿಕ್ರಯ'ದಲ್ಲಿ ಇವುಗಳ ಸೊಗಸುಗಾರಿಕೆಯು ಹೆಚ್ಚಿನದಾಗಿದೆ. 'ಚಿನ್ನದ ಚೂರಿಯೆಂದು ಕುತ್ತಿಗೆಗೆ ಹಾಕಿಕೊಂಡಂತೆ' 'ಉಪ್ಪು ತಿಂದವ ನೀರು ಕುಡಿದಾನು' 'ತಿರುಳು ತಿಂದರೂ ಮರಳು ಹೋಗಲಿಲ್ಲ' 'ಗೋಡೆ ತೊಳೆದ ಹಾಗೆಲ್ಲ ಮಣ್ಣೇ'–ಈ ಮೊದಲಾದ ಗಾದೆಮಾತುಗಳು ಅಲ್ಲಲ್ಲಿ ಸಂದರ್ಭೋಚಿತವಾಗಿ ಬಂದಿವೆ.

ಅನಂತರ ದೊರೆಯುವ ಸಾಮಾಜಿಕ ನಾಟಕ ವೆಂಕಟ ರಂಗೋ ಕಟ್ಟಿಯವರ 'ಆರು ಬೆರಳಿನ ಕುರುಹು'. ಸ್ತ್ರೀಯರ ಏಳ್ಗೆಯ ವಿಚಾರದಲ್ಲಿ ವಿಶೇಷ ಆಸಕ್ತಿ ವಹಿಸಿದ್ದ ಈ ನಾಟಕಕಾರರು ಇದರಲ್ಲಿ ವಿಧವಾ ವಿವಾಹವನ್ನು ಎತ್ತಿ ಹಿಡಿದಿದ್ದಾರೆ. ಜೊತೆಗೆ ನರಬಲಿ ಮುಂತಾದ ಅನಿಷ್ಟ ಸಂಪ್ರದಾಯಗಳನ್ನು ಖಂಡಿಸಿ, ಸಮಾಜದಲ್ಲಿ ಆಚರಿಸತಕ್ಕ ಸುಧಾರಣೆಗಳು ಯಾವುವೆಂಬುದನ್ನು ತೋರಿಸಿದ್ದಾರೆ. ಕಥಾವಸ್ತುವು ಐತಿಹಾಸಿಕವಾದ ಹಾಗೂ ಅಂದು ಪ್ರಚಲಿತವಿದ್ದ ಸನ್ನಿವೇಶಗಳ ಕಲಬೆರಕೆಯಾಗಿದೆ. ನಾಟಕವೆಂದು ಮೆಚ್ಚಬಹುದಾದ ಅಂಶಗಳು ಇದರಲ್ಲಿಲ್ಲ. ರಂಗಪ್ರಯೋಗದ ಸೌಲಭ್ಯ ಇದರಲ್ಲಿಯೂ

ಇಲ್ಲ. ಕೇವಲ ಸಮಾಜ ಸುಧಾರಣೆಯ ವಿಚಾರಗಳ ಚರ್ಚೆಗಾಗಿ ನಾಟಕ ರೂಪವನ್ನು ಆಯ್ದುಕೊಂಡಂತಿದೆ.

ಮೇಲಣ ಮೂರು ಕೃತಿಗಳನ್ನು ಬಿಟ್ಟರೆ ಸಾಮಾಜಿಕ ನಾಟಕ ಪರಂಪರೆಯು ೧೯ನೆಯ ಶತಮಾನದ ಕೊನೆಯಲ್ಲಿ ಬೆಳೆದು ಬರಲಿಲ್ಲ. ಅದಕ್ಕೆ ಅನುಕೂಲವಾದ ಲೋಕಾಭಿರುಚಿಯ ನಿರ್ಮಾಣವಾಗಿರದಿದ್ದುದೇ ಕಾರಣವಾಗಿದೆ. ಅಂದಿನ ನಾಟಕ ಕಂಪನಿಯವರ ಒಲವು ಪೌರಾಣಿಕ ನಾಟಕಗಳ ಕಡೆಗೆ ಮಾತ್ರ ಇದ್ದಿತು. ಸಾಮಾಜಿಕ ನಾಟಕಗಳನ್ನು ಪ್ರೋತ್ಸಾಹಿಸಬೇಕಿದ್ದ ವಿದ್ಯಾವಂತರ ವರ್ಗವು ಆವಾಗ ನಿಚ್ಚಳವಾಗಿ ರೂಪುಗೊಂಡಿರಲಿಲ್ಲವಾದ್ದರಿಂದ ಅಂಥ ನಾಟಕಕಾರರು ಉದಯಿಸಲಿಲ್ಲವೇನೊ. ಸಮಗ್ರವಾದ ಸ್ವತಂತ್ರ ಸಾಮಾಜಿಕ ನಾಟಕಗಳ ಪರಂಪರೆಗಾಗಿ. ಹುಯಿಲಗೋಳ ನಾರಾಯಣರಾಯರು 'ಸ್ತ್ರೀಧರ್ಮ ರಹಸ್ಯ'ವನ್ನು ಬರೆದು ರಂಗದ ಮೇಲೆ ತರುವವರೆಗೂ ಕಾಯಬೇಕಾಯಿತು (೧೯೧೯).

## 45 ಪ್ರಹಸನಗಳು

ಸಾಮಾಜಿಕ ಅನ್ಯಾಯಗಳನ್ನು ಚಿತ್ರಿಸುವ ಕೆಲವು ಚಿಕ್ಕ ಪ್ರಹಸನಗಳು ಮೈಸೂರ ಸಂಸ್ಥಾನದಲ್ಲಿ ಪ್ರಕಟವಾದುವು. ಮುಂದಿನ ಏಕಾಂಕ ನಾಟಕ ರಚನೆಗೆ ಪೂರ್ವಭಾವಿಯಾಗಿದ್ದ ಈ ಕೃತಿಗಳಲ್ಲಿ ಕೆಲವು ತೆಲುಗಿನಿಂದ ಕನ್ನಡಕ್ಕೆ ರೂಪಾಂತರ ಹೊಂದಿದ್ದು, ಒಂದನ್ನು ಇಲ್ಲಿ ಕಾಣಿಸುತ್ತೇವೆ. ವೀರೇಶಲಿಂಗಂ ಪಂತಲು ವಿರಚಿತ "ಕಲಹಪ್ರಿಯಾ ಪ್ರಹಸನ" ವನ್ನು ಬೆನಗಲ್ ರಾಮರಾಯರು ಕನ್ನಡಿಸಿದ್ದಾರೆ (೧೮೯೮). ಕಮ್ಮಾರರು, ಮಡಿವಳರು–ಇವರ ಜೀವನ ಚಿತ್ರಣವಿದು. ಇಲ್ಲಿ ಕಲಹಪ್ರಿಯೆ ಎಂದರೆ ಅಗಸಗಿತ್ತಿ ಸುಬ್ಬಮ್ಮ, ಮದುವೆಯಾಗಲಿರುವ ಕನಕಾಂಗಿ. ವಿಶ್ವಕರ್ಮರನ್ನು ಆಕೆಯು ಅಗಲಿಸುತ್ತಾಳೆ. ಆದರೆ ಕನ್ಯೆಯ ಅಣ್ಣ ವೀರಭದ್ರನಿಂದಾಗಿ ಮದುವೆ ನೆರವೇರುತ್ತದೆ.

ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿಯು ಜ್ಯೊಂಟ್ ಸ್ಟಾಕ್ ಕಂಪೆನಿಗಳ ವ್ಯವಹರಣೆಯನ್ನು ಟೀಕಿಸುವ ಉದ್ದೇಶದಿಂದ 'ವಿಪ್ರಲಂಭಾಮೃತ ಪ್ರದರ್ಶಿನೀ' ಎಂಬ ಪರಸ್ಪರ ದ್ರವ್ಯ ಸಹಾಯದ ಕಂಪೆನಿ ನಾಟಕವನ್ನು ಬರೆದಿದ್ದಾನೆ(೧೮೯೦). ಮರುವರ್ಷ ಇದೇ ವಿಷಯವನ್ನು ಕುರಿತು ಸುಬ್ಬರಾವ ಅಚ್ಚಪ್ಪ ಎಂಬವನು 'ಪ್ರಜಾಪಕಾರಕ ಕಂಪೆನಿಗಳ ನಾಟಕ'ವನ್ನು ರಚಿಸಿದ್ದಾನೆ. ಇದು ಅಭಿನಯಕ್ಕೆಂದು ರಚಿತವಾದ ಏಕಾಂಕವೇನಲ್ಲ. ಹಾಡುಗಳು ಬೇರೆ ಇವೆ. ಹರುಷಾಂತಕ, ಮಿತ್ರಘ್ನ ಎಂಬವರು ಕಂಪೆನಿಯೊಂದನ್ನು ತೆರೆದು ಷೇರುಗಳನ್ನು ಎತ್ತಿ ಹಾಕುತ್ತಾರೆ. ಇದರಲ್ಲಿಯ ವಿಡಂಬನೆಯು ಕೃತಕವೆನಿಸುತ್ತದೆ. ಕೆಲವೆಡೆ ಮಾತ್ರ ವಾಸ್ತವ ಸಂಭಾಷಣೆಗಳಿವೆ. ಆಧುನಿಕವಾದ ನಾಟಕ ವಸ್ತುವನ್ನು ಹೊಸ ದೃಷ್ಟಿಯಿಂದ ಬರೆಯುವುದು ಸಾಧ್ಯವಾಗಿಲ್ಲ. ೧೮೯೯ರಲ್ಲಿ ಪ್ರಕಟವಾದ

'ಕವಿಕುಲಶಿರೋಮಣಿ'ಯ 'ವೈಜ್ಞಾನಿಕ ಪ್ರಹಸನ'ವು ಏಕಾಂಕ ನಾಟಕದ ಜಾತಿಗೆ ಸೇರಿದುದು. ಇವೆಲ್ಲ ಪ್ರಹಸನಗಳ ವಸ್ತು ಸಾಮಾಜಿಕ ದೃಷ್ಟಿಯಿಂದ ಪ್ರಬೋಧಕವಾಗಿದೆ. ಅಂತೂ ಇವುಗಳ ಕಾರಣದಿಂದ ಏಕಾಂಕ ನಾಟಕ ರಚನೆಯು ಪೂರ್ಣ ಸ್ವತಂತ್ರವಲ್ಲದಿದ್ದರೂ ಇಣುಕಿ ನೋಡಿತೆಂದು ಹೇಳಬಹುದು. ಕೈಲಾಸಂ 'ಟೊಳ್ಳುಗಟ್ಟಿ'ಯನ್ನು ಬರೆಯುವ ವರೆಗೆ ಪ್ರಹಸನಗಳ ರಚನೆಯು ಬಿಡಿಯಾದ ಪ್ರಯತ್ನವೆ ಆಗಿದ್ದಿತು.

## ಸಂದರ್ಭ ಸೂಚಿ

೧. ಕನ್ನಡ ನಾಟಕ, ಪು. ೧೦೫

೨. ಪ್ರಸಂಗ-೩, ಪು. ೨೪೫

# ಪ್ರಕರಣ : 5
# ಕ್ರೈಸ್ತ ಸಾಹಿತ್ಯ

ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ ಪರಂಪರೆಯು ೧೮೧೦ಕ್ಕೆ ಮುಂಚೆ ಇರಲಿಲ್ಲ. ೧೯೧೦ರ ಅನಂತರ ವಿಶೇಷವಾಗಿ ಕಂಡುಬಂದುದಿಲ್ಲ. ಕಾರಣ ೧೯ನೆಯ ಶತಮಾನವೇ ಕ್ರೈಸ್ತಸಾಹಿತ್ಯದ ಕಾಲಾವಧಿಯೆನಿಸಿದೆ. ಹೊಸಗನ್ನಡ ಸಾಹಿತ್ಯೋದಯಕ್ಕೆ ಮಿಶನರಿಗಳ ಮತಪ್ರಸಾರವೇ ಪ್ರಮುಖ ಪ್ರೇರಣೆಯಾದುದರಿಂದ ಕ್ರೈಸ್ತ ವಾಙ್ಮಯವು ಮೊತ್ತದಲ್ಲಿ ದೊಡ್ಡದು. ಆ ಸಮೂಹವನ್ನು ಬೇರೆ ಭಾಷಾ ಸಾಹಿತ್ಯಗಳಲ್ಲಿಯ ಕ್ರೈಸ್ತ ವಾಙ್ಮಯಕ್ಕೆ ಹೋಲಿಸಿದಾಗ ಕನ್ನಡವು ಹಿಂದೆ ಬಿದ್ದಿಲ್ಲವೆಂಬುದು ವಿದಿತವಾಗುವುದು. ಸುಮಾರು ೧೨೦ ಜನ ಮಿಶನರಿಗಳು ಈ ಉದ್ಯಮದಲ್ಲಿ ಅವ್ಯಾಹತವಾಗಿ ಪರಿಶ್ರಮಿಸಿದುದನ್ನು ನೆನೆದಿರಬೇಕು. ಹೇಗೂ ಧರ್ಮಾಭಿಮುಖವಾದ ಕನ್ನಡ ಸಾಹಿತ್ಯವಾಹಿನಿಯಲ್ಲಿ ಇದೂ ಒಂದು ತೊರೆಯೆಂಬಂತೆ ಹರಿದುಬಂದಿತು.

ಕ್ರೈಸ್ತ ಸಾಹಿತ್ಯವು ಹೆಚ್ಚಾಗಿ ಅನುವಾದ ಇಲ್ಲವೆ ಪರಿವರ್ತನ ರೂಪದಲ್ಲಿದೆ. ಸ್ವತಂತ್ರ ರಚನೆಯನ್ನು ಮಾಡುವ ಸಾಮರ್ಥ್ಯವು ಕರ್ನಾಟಕದ ಅಂದಿನ ಮಿಶನರಿಗಳಲ್ಲಿ ಇದ್ದಿಲ್ಲವೆಂದಲ್ಲ. ಅವರ ಮುಖ್ಯ ಉದ್ದೇಶವು ಸಾಹಿತ್ಯ ನಿರ್ಮಿತಿಯಾಗಲೀ ತಾತ್ವಿಕ ವಿವೇಚನೆಯಾಗಲೀ ಅಲ್ಲ; ಮತಪ್ರಸಾರ. ಆ ದಿಕ್ಕಿನಲ್ಲಿ ನೂರಾರು ವರ್ಷಗಳಿಂದ ಇಂಗ್ಲಿಷ್, ಜರ್ಮನ್ ಭಾಷೆಗಳಲ್ಲಿ ಸಾಕಷ್ಟು ಸಾಹಿತ್ಯವು ನಿರ್ಮಾಣವಾದದ್ದೇ ಇತ್ತು. ವಿದೇಶೀ ಭಾಷೆಗಳಲ್ಲದೆ ನೆರೆಯ ತಮಿಳು, ತೆಲುಗು ಹಾಗೂ ಮರಾಠೀ ಭಾಷೆಗಳಿಂದಲೂ ಕರ್ನಾಟಕದ ಮಿಶನರಿಗಳು ಗ್ರಂಥಗಳನ್ನು ಅನುವಾದಿಸಿದುದು ಕಂಡುಬರುತ್ತದೆ. ಇಂತು ಮತಪ್ರಸಾರದ ದೃಷ್ಟಿಯಿಂದ ದೇಶೀಯರ ಪರಿವರ್ತನಕ್ಕೆ ಉಪಯೋಗ ಬೀಳುವ ಸಾಹಿತ್ಯವು ಯಾವುದೇ ಭಾಷೆಯಲ್ಲಿರಲಿ ಅದನ್ನು ಅನುವಾದಿಸಿ ಮುದ್ರಿಸುವುದು ಅವರಿಗೆ ಸೂಕ್ತವಾಗಿ ಕಂಡಿತು. ಅಂತೆಯೇ ಅನುವಾದಗಳಲ್ಲಿ ಮೂಲ ಲೇಖಕ ಅಥವಾ ಅನುವಾದಕನ ಹೆಸರನ್ನು ಸಾಮಾನ್ಯವಾಗಿ ಹೇಳಹೋಗಿಲ್ಲ.

ಕ್ರೈಸ್ತ ಸಾಹಿತ್ಯವು ವೈವಿಧ್ಯಪೂರ್ಣವಾದುದು. ಅದರ ಪದ್ಯರೂಪವನ್ನು ಈ ಹಿಂದೆ ಪರಿಶೀಲಿಸಿದ್ದೇವೆ <೩೩೫>. ಆದರೆ ಮೊತ್ತದಲ್ಲಿ ಅದು ಗದ್ಯದಲ್ಲಿಯೆ ಹೆಚ್ಚಾಗಿ ವ್ಯಕ್ತವಾಗಿದೆ. ನೇರವಾದ ಗದ್ಯರಚನೆಯ ಜೊತೆಗೆ, ಪ್ರಶ್ನೋತ್ತರದ ಪ್ರಕಾರವನ್ನು ಮಿಶನರಿಗಳು ಬಳಕೆಯಲ್ಲಿ ತಂದರು. ಕನ್ನಡಕ್ಕೆ ಹೊಸತಾದ ಈ ರೂಪವನ್ನು ಅಂದಿನ ಶಿಕ್ಷಣ

ಕ್ಷೇತ್ರದಲ್ಲಿ ವಿಶೇಷವಾಗಿ ಅನುಕರಿಸಲಾಯಿತು. ಅದರಂತೆ ಚರಿತ್ರೆ ಮತ್ತು ಕಥನ ಕ್ರಮಗಳನ್ನು ಸಹ ಮಿಶನರಿಗಳು ತಕ್ಕಮಟ್ಟಿಗೆ ರೂಢಿಸಿದರು.

ಅರುಣೋದಯ ಕಾಲದ ಎರಡು ನೂರಕ್ಕೆ ಮಿಕ್ಕಿದ ಕ್ರೈಸ್ತ ಗ್ರಂಥ ಸಮುದಾಯವನ್ನು (ಗದ್ಯ) ಅಭ್ಯಾಸದ ಅನುಕೂಲತೆಗಾಗಿ ಹೀಗೆ ವರ್ಗೀಕರಿಸಬಹುದು :

- ಬೈಬಲ್ ಅನುವಾದ ; ಅದರ ಸಂಗ್ರಹ, ವ್ಯಾಖ್ಯೆಗಳು
- ತಾತ್ವಿಕ ಹಾಗೂ ಭಕ್ತಿಪರ ಪ್ರಬಂಧಗಳು; ಉಪದೇಶಗಳು
- ಹಿಂದೂ ಧರ್ಮದ ಟೀಕೆ. (ಪ್ರತಿ ಟೀಕೆ)
- ಸಾಂಘಿಕ : ಚರ್ಚ್ ಇತಿಹಾಸ ಮತ್ತು ಮಿಶನರಿ ಸಂಸ್ಥೆಗಳು
- ಕಥನ
- ಪ್ರಾಪಂಚಿಕ ವಿಷಯಗಳು.

## 51 ಬೈಬಲ್ ಅನುವಾದ

ಬೈಬಲಿನಲ್ಲಿ ಬಂದಿರುವ ಧರ್ಮ ವಿಚಾರವು ಚರಿತ್ರೆ, ಕಥೆ ಹಾಗೂ ವೈಯಕ್ತಿಕ ಅನುಭವಗಳ ನಿರೂಪಣೆಯ ಮೂಲಕ ವ್ಯಕ್ತವಾಗಿದೆ. ಹೀಗಾಗಿ ಅದರಲ್ಲಿ ಇತಿಹಾಸ, ಭೂಗೋಲ ಹಾಗೂ ಶತ ಶತಮಾನಗಳ ಜನಜೀವನಕ್ಕೆ ಸಂಬಂಧಿಸಿದ ಅಂಶಗಳು ಹೆಚ್ಚಾಗಿ ಕಂಡುಬರುತ್ತವೆ. ಅದರ ಭಾಷೆಯು ಸಾಹಿತ್ಯಿಕ ಸೌಷ್ಠವದಿಂದ ಕೂಡಿದುದೇನಲ್ಲ. ಶೈಲಿಯೂ ಅನೇಕ ಬಗೆಯದು. ಹಾಗೆಂದು, ಇವು ಅದರ ದೋಷಗಳೆಂದು ಪರಿಗಣಿತವಾಗದೇ ಅದಕ್ಕೆ ದೈವಿಕ ಮಹತ್ವವನ್ನು ತಂದುಕೊಟ್ಟಿವೆ. ಬೈಬಲ್ಲಿನ ಮುಖ್ಯ ಗುಣವೆಂದರೆ ನೇರವಾದ ಸರಳ ನಿರೂಪಣೆ. ಅದು ಕ್ರೈಸ್ತರ ಪ್ರಮುಖ ಧರ್ಮ ಗ್ರಂಥವಾಗಿರುವುದರಿಂದ ಜಗತ್ತಿನಲ್ಲಿಯೆ ಅತ್ಯಂತ ಪ್ರಸಾರವುಳ್ಳ ಗ್ರಂಥವೆನಿಸಿತು. ಸುಮಾರು ೯೦೦ ವಿವಿಧ ಭಾಷೆಗಳಲ್ಲಿ ಅನುವಾದಗೊಂಡು ಒಂದೊಂದು ಭಾಷೆಯಲ್ಲಿಯೂ ಅನೇಕ ಮುದ್ರಣಗಳನ್ನು ಕಂಡು ಅದರ ಲಕ್ಷಾವಧಿ ಪ್ರತಿಗಳು ಪ್ರಸಾರವಾಗಿವೆ.

ಬೈಬಲಿನ ಎರಡು ವಿಭಾಗಗಳಲ್ಲಿ, ಪೂರ್ವ ನಿರ್ಧಾರವು (ಹಳೆ ಒಡಂಬಡಿಕೆ) ದೇವದೂತನ ಆಗಮನವನ್ನು ಹಾರೈಸುತ್ತಿದ್ದ ಯೆಹೂದ್ಯರ ಅಲೆದಾಟವನ್ನು ಮುಖ್ಯವಾಗಿ ಒಳಗೊಂಡಿದೆ. ನವ ನಿರ್ಧಾರವು ಯೇಸು ಕ್ರಿಸ್ತನ ಅವತಾರ ಕಾರ್ಯಕ್ಕೆ ಸಂಬಂಧಿಸಿದುದು. ಕ್ರೈಸ್ತರ ಹೃದಯಕ್ಕೆ ಹತ್ತಿರವಾದ್ದರಿಂದ, ಕನ್ನಡ ಅನುವಾದ/ಕಥನ ಕಾರ್ಯದಲ್ಲಿ ಅದುವೆ ವಿಶೇಷ ಪ್ರಾಶಸ್ತ್ಯವನ್ನು ಪಡೆಯಿತು.

ಕ್ರಿ. ಶ. ೨ನೆಯ ಶತಮಾನದಿಂದ ಪೂರ್ಣವಾಗಿ ಅಸ್ತಿತ್ವದಲ್ಲಿ ಬಂದ ಬೈಬಲಿನ ವಿವಿಧ ಆವೃತ್ತಿಗಳು (Versions) ಕಾಲಕಾಲಕ್ಕೆ ಸಿದ್ಧವಾದುವಷ್ಟೆ. ಮಧ್ಯಯುಗೀನ ಯೂರೋಪದಲ್ಲಿ ತಲೆದೋರಿದ ಧಾರ್ಮಿಕ ಸುಧಾರಣಾ ಪಂಥದವರಿಗಾಗಿ ಬೈಬಲಿನ

ವಿಮರ್ಶಾತ್ಮಕ ಅಭ್ಯಾಸವು ನಡೆದು ಆ ಹೊಸ ಬೆಳಕಿನ ಹಿನ್ನೆಲೆಯಲ್ಲಿ ಇಂಗ್ಲಂಡಿನ ಅಧಿಕೃತ ಆವೃತ್ತಿಯು ಸಿದ್ಧವಾಯಿತು (೧೬೧೧). ಕಿಂಗ್ ಜೇಮ್ಸ್‌ನ ಹೆಸರಿನಲ್ಲಿದ್ದ ಈ ಆವೃತ್ತಿಯೇ ಕನ್ನಡಾನುವಾದಗಳಿಗೆ ಮೂಲಾಧಾರವಾಗಿದ್ದಿತು. ಮಂಗಳೂರಿನಲ್ಲಿದ್ದ ಜರ್ಮನ್ ಮಿಶನರಿಗಳೂ ಅದನ್ನೇ ಅನುಸರಿಸಿದ್ದಂತೆ ತೋರುತ್ತದೆ. ಬೈಬಲ್ ದೈವೀವಾಣಿಯಾಗಿದ್ದರೂ ಇತರ ಕೃತಿಗಳಂತೆ ಅದನ್ನೂ ಆಧುನಿಕ ರೀತಿಯ ವಿಮರ್ಶೆಗೆ ಒಳಪಡಿಸಬಹುದೆಂಬ ೧೮-೧೯ನೆ ಶತಮಾನದವರ ದೃಷ್ಟಿಕೋನದಿಂದಾಗಿ ಅನೇಕ ಹೊಸ ಮಾತುಗಳು ಬೆಳಕಿಗೆ ಬಂದುವು. ಹೀಗಾಗಿ ೧೮೮೫ರ ಸುಮಾರಿಗೆ ಇಂಗ್ಲಿಷ್ ಬೈಬಲಿನ ಇನ್ನೊಂದು ಅಧಿಕೃತ ಆವೃತ್ತಿಯನ್ನು ತರಲಾಯಿತು. ಆ ಸುಧಾರಣೆಯ ಪರಿಣಾಮವು ಮುಂದಿನ ಕನ್ನಡ ಬೈಬಲ್ ವಾಙ್ಮಯದ ಮೇಲೂ ಕಂಡುಬಂದಿತು.

ಕಳೆದ ಶತಮಾನದಲ್ಲಿ ನಡೆದ ಬೈಬಲಿನ ಕನ್ನಡ ಅನುವಾದ ಕಾರ್ಯದಲ್ಲಿ ನಾವು ಮೂರು ನಿರ್ದಿಷ್ಟವಾದ ಘಟ್ಟಗಳನ್ನು ಕಾಣುತ್ತೇವೆ:

–ಕ್ರಿ.ಶ. ೧೮೧೧ ರಿಂದ ೧೮೨೭ರ ವರೆಗಿನ ಅವಧಿಯಲ್ಲಿ ಬೈಬಲಿನ ಸಮಗ್ರ ಅನುವಾದವು ಮುಗಿದು, ೧೮೩೧ರಲ್ಲಿ ಅದರ ಮುದ್ರಣವು ಪೂರ್ತಿಗೊಂಡುದು.

–ಕ್ರಿ.ಶ. ೧೮೪೩ರಿಂದ ೧೮೫೯ರ ವರೆಗೆ ಅದರ ಪರಿಷ್ಕರಣ, ನವೀಕರಣಗಳು ನಡೆದು ಎಲ್ಲ ಪ್ರೊಟೆಸ್ಟಂಟರಿಗೂ ಮಾನ್ಯವಾದ ಆವೃತ್ತಿಯು (೧೮೬೫) ಮುದ್ರಣವಾದುದು.

–ಕ್ರಿ.ಶ. ೧೮೯೨ರ ಸುಮಾರಿಗೆ ಇನ್ನೊಮ್ಮೆ ಅದರ ನವೀಕರಣ ಪ್ರಯತ್ನ ನಡೆದು ೧೯೦೧ರಲ್ಲಿ ನವ ನಿರ್ಧಾರದ ಹೊಸ ಆವೃತ್ತಿಯು ತಯಾರಾದುದು.*

ಹ್ಯಾಂಡ್ಸ್ ಮತ್ತು ಕೇರಿ ಇವರು ಏಕಕಾಲದಲ್ಲಿ ನವನಿರ್ಧಾರದ ಅನುವಾದವನ್ನು ಕೈಕೊಂಡರು. ಅದನ್ನು ಮುಂದುವರಿಸಿದ ಹ್ಯಾಂಡ್ಸ್‌ನು ತನ್ನ ಕೆಲವು ಸಹೋದ್ಯೋಗಿಗಳ ನೆರವಿನಿಂದ ಹಲವು ಸಾವಿರ ಪುಟಗಳ ಬೈಬಲ್ ಅನುವಾದವನ್ನು ಮುಗಿಸಿದುದು ಹಿರಿಯ ಸಾಹಸವಾಗಿದೆ. 'ಈ ಕೆಲಸದಲ್ಲಿ ತಾನು ತೊಡಗದೇ ಇದ್ದ ಒಂದು ದಿನವೂ ಇಲ್ಲ' ಎಂಬುದಾಗಿ ಅವನು ನಿವೇದಿಸಿದ್ದುದು ಸತ್ಯ ಸಂಗತಿಯೇ. ಬಳ್ಳಾರಿಗೆ ಹ್ಯಾಂಡ್ಸ್‌ನ ಅನಂತರ ಬಂದ ರೀಡ್ ಅದನ್ನು ತಿದ್ದಿ ಪುನಃ ಪ್ರಕಟಿಸುವ ಎತ್ತುಗಡೆಯಲ್ಲಿದ್ದನಾದರೂ ಅವನ ಆಕಸ್ಮಿಕ ಮರಣದಿಂದ ಆ ಕೆಲಸವು ತಡೆದು ನಿಂತಿತು.

---

* ಪೂರ್ವನಿರ್ಧಾರವು ಸೇರಿದ ಇಡೀ ಬೈಬಲಿನ ಹೊಸ ಆವೃತ್ತಿಯು ತಯಾರಾದುದು ೧೯೩೪ರಲ್ಲಿ. ಇಂದಿಗೂ ಅದುವೆ ಬಳಕೆಯಲ್ಲಿದೆ. ಈಚೆಗೆ ಎಂದರೆ ೧೯೯೭ರಲ್ಲಿ 'ಪವಿತ್ರ ಬೈಬಲ್ (ಸರಳ ಭಾಷಾಂತರ)ಎಂಬ ಆವೃತ್ತಿಯು ಹೊರಟು, ಸಾಮಾನ್ಯ ವಾಚಕನೂ ಸುಲಭವಾಗಿ ತಿಳಿದುಕೊಳ್ಳುವ ರೀತಿಯಲ್ಲಿ, ಚಿತ್ರಗಳಿಂದೊಡಗೂಡಿ ಪ್ರಕಟವಾಗಿದೆ. ಇದರ ಕಮಿಟಿಯಲ್ಲಿ ಕೆಥಲಿಕ್-ಪ್ರೊಟೆಸ್ಟಂಟ್-ಎರಡೂ ಕಡೆಯ ಅನುವಾದಕರಿದ್ದುದೊಂದು ವಿಶೇಷ.

ಎರಡನೆಯ ತಲೆಮಾರಿನ ಮಿಶನರಿಗಳು ಕನ್ನಡವನ್ನು ಹೆಚ್ಚು ಚೆನ್ನಾಗಿ ಕಲಿತವರಾದ್ದರಿಂದ ಅವರಿಗೆ ಈ ಪ್ರಥಮ ಅನುವಾದವು ತೀರಾ ಅಸಮರ್ಪಕವಾಗಿ ಕಂಡಿತು. ಕನ್ನಡದ ಪ್ರಾದೇಶಿಕ ಭೇದದಿಂದಾಗಿ ಅದರಲ್ಲಿಯ ಎಷ್ಟೋ ಭಾಗಗಳು ಅನ್ಯ ಜನರಿಗೆ ಅರ್ಥವಾಗದೇ ಹೋದವು. ಆ ಕಾರಣ ಪ್ರಾಂತ ಭೇದಗಳಿಗೆ ಅನುಗುಣವಾಗಿ ಎರಡು ಬೇರೆ ಬೇರೆ ಭಾಷಾಂತರಗಳಿರಬೇಕೆಂಬ ಸೂಚನೆಯೂ ಮುಂಬಂದಿತು. ಆದರೆ ಅಂಥ ಎತ್ತುಗಡೆಯ ದುಸ್ಸಾಧ್ಯತೆಯನ್ನು ಮನದಂದು. ಮದ್ರಾಸ್ ಆಕ್ಸಿಲಿಯರಿ ಬೈಬಲ್ ಸೊಸೈಟಿಯು ೧೮೪೩ರಲ್ಲಿ ಲಂಡನ್, ವೆಸ್ಲಿಯನ್, ಬಾಸೆಲ್ ಮಿಶನ್ ಸಂಸ್ಥೆಗಳ ಪ್ರತಿನಿಧಿಗಳ ಸಭೆ ಕೂಡುವುದಕ್ಕೆ ಅವಕಾಶವಿತ್ತಿತು. ಆಗ ಬೈಬಲ್ಲಿನ ಬಳ್ಳಾರಿ ಆವೃತ್ತಿಯನ್ನು ತಿದ್ದುವುದಕ್ಕಿಂತ ಬೇರೆಯಾಗಿಯೇ ಅನುವಾದಿಸುವ ನಿರ್ಣಯ ಕೈಕೊಳ್ಳಲಾಯಿತು. ನವನಿರ್ಧಾರದ ವಿಚಾರದಲ್ಲಿ ಮೊದಲಿನ ಆವೃತ್ತಿಯ ಸುಧಾರಣೆಯು ಸಾಧ್ಯವಾಯಿತಾದರೂ ಪೂರ್ವ ನಿರ್ಧಾರದ ಅನುವಾದವನ್ನು ಮಾತ್ರ ಬಾಸೆಲ್ ಮಿಶನ್ನಿನ ವೈಗ್ಲೆ ಪ್ರತ್ಯೇಕವಾಗಿ ಕೈಗೊಂಡರು. ಅವರೇ ಕಮಿಟಿಯ ಅಧ್ಯಕ್ಷರಿದ್ದುಕೊಂಡು ಕೆಲಸವು ಭರದಿಂದ ಸಾಗಿದ್ದಾಗ ೧೮೫೪ರಲ್ಲಿ ತೀರಿಕೊಂಡರು. ಆ ವೇಳೆಗೆ ಅವರು ಪೂರ್ವ ನಿರ್ಧಾರದ ಬಹು ಭಾಗವನ್ನು ಅನುವಾದಿಸಿದ್ದರು. ಬಿ.ಎಚ್. ರೈಸ್, ಕ್ಯಾಂಬೆಲ್ ಇವರು ಅದನ್ನು ಮುಂದುವರಿಸುತ್ತ ಇನ್ನಷ್ಟು ಪರಿಷ್ಕರಿಸಿದರು. ೧೮೬೦ಕ್ಕೆ ತುಸು ಮೊದಲು ಆ ಕೆಲಸವು ಪೂರೈಸಿದುದು ಕರ್ನಾಟಕದ ಪ್ರೊಟೆಸ್ಟಂಟ್ ಮಿಶನರಿಗಳ ದೊಡ್ಡ ಸಾಧನೆಯೆನ್ನಬೇಕು. ಅದರ ಮುದ್ರಣವು ೧೮೬೫ರಲ್ಲಿ ಮುಗಿಯಿತು. ಹೊಸಗನ್ನಡ ಗದ್ಯವು ನೆಲೆಗೊಂಡಿರದ ಆ ಕಾಲದಲ್ಲಿ ಪ್ರತಿ ಶಬ್ದವನ್ನೂ ಒರೆಗೆ ಹಚ್ಚಿ ಪ್ರಾದೇಶಿಕ ಭೇದಗಳನ್ನು ಸಮನ್ವಯಗೊಳಿಸುತ್ತ ಈ ಬೃಹದ್ಗ್ರಂಥದ ಭಾಷಾಂತರವನ್ನು ಮುಗಿಸಿದುದು ಕನ್ನಡ ಸಾಹಿತ್ಯೇತಿಹಾಸದಲ್ಲಿ ಒಂದು ಅಪೂರ್ವ ಘಟನೆಯಾಗಿದೆ. ಈ ಕಾರ್ಯದಲ್ಲಿ ಅವರು ತೋರಿದ ಸಹನೆ, ಸೌಹಾರ್ದ ಹಾಗೂ ಇತರರ ಅಭಿಪ್ರಾಯಕ್ಕೆ ಮನ್ನಣೆ ಕೊಡುತ್ತ ಒಟ್ಟಾಗಿ ಸೇರಿ, ಪಟ್ಟ ಪರಿಶ್ರಮ – ಇವು ಅನುಕರಣೀಯವಾಗಿವೆ.

ಮುಂದಿನ ಮೂವತ್ತು ವರ್ಷಗಳ ವರೆಗೆ ಇದು ಏಕಪ್ರಕಾರವಾಗಿ ಬಳಕೆಯಲ್ಲಿದ್ದಿತು. ಆದರೆ ಹೆಚ್ಚು ಹೆಚ್ಚು ಜನರು, ವಿಶೇಷತಃ ದೇಶೀಯ ಮಿಶನರಿಗಳು ಇದನ್ನು ಬಳಸುತ್ತಿದ್ದಂತೆ ಅವರಲ್ಲಿ ನ್ಯೂನತೆಗಳನ್ನು ಕಂಡರು. ಇಷ್ಟರಲ್ಲಿ ಕನ್ನಡದ ಅಭ್ಯಾಸವು ವ್ಯಾಪಕವಾಗುತ್ತ ನಡೆದಿದ್ದಿತು. ಹೊಸಗನ್ನಡ ನುಡಿಗಟ್ಟು ನೆಲೆಗೊಂಡಿದ್ದಿತು. ಅತ್ತ ಇಂಗ್ಲೆಂಡದಲ್ಲಿ ಬೈಬಲ್ ವ್ಯಾಖ್ಯಾನದ ಕುರಿತು ಹೊಸ ಗಾಳಿ ಬೀಸಿದುದು ಇದೇ ಕಾಲದಲ್ಲಿ. ಆ ಕಾರಣ ಕೆಲವು ಮಿಶನರಿ ಜನರು ವಿಶೇಷತಃ ವೆಸ್ಲೆಯನ್ನರು 'ಅಪೋಸ್ತಲರ ಕೃತ್ಯ' ಮೊದಲಾದ ಭಾಗಗಳನ್ನು ಪ್ರತ್ಯೇಕವಾಗಿ ಅನುವಾದಿಸಿ, ಟೀಕೆ ಟಿಪ್ಪಣಿಗಳೊಡನೆ ಪ್ರಕಟಿಸುವುದಕ್ಕೆ ಮುಂದಾದರು.

ಹೀಗಾಗಿ ೧೯೫೨ರಲ್ಲಿ ಕನ್ನಡ ಬೈಬಲಿನ ಪರಿಷ್ಕರಣಕ್ಕೆಂದು ಮತ್ತೊಂದು ಸಂಯುಕ್ತ ಸಮಿತಿಯು ಕಾರ್ಯಪ್ರವೃತ್ತವಾಯಿತು. ಆದರೆ ಹಿಂದಿನ ಸಮಿತಿಯಲ್ಲಿದ್ದಷ್ಟರ ಮಟ್ಟಿಗಿನ ಸೌಹಾರ್ದ ಮತ್ತು ಏಕಾಭಿಪ್ರಾಯ ಇದರಲ್ಲಿ ಕಂಡುಬರಲಿಲ್ಲ. ಸಹಕಾರದ ಮನೋಭಾವ ಅವರಲ್ಲಿ ಇದ್ದಿಲ್ಲವೆಂದಲ್ಲ. ಮೇಲೆ ಕೊಟ್ಟ ಕಾರಣಗಳಿಂದಾಗಿ, ಭಿನ್ನಾಭಿಪ್ರಾಯವು ತಲೆದೋರುವುದು ಅನಿವಾರ್ಯವಾಗಿದ್ದಿತು. ಆಗ, ಎರಡು ಬೇರೆ ಬೇರೆ ಭಾಷಾಂತರಗಳಿರಬೇಕೆಂಬ ಸೂಚನೆ ಮತ್ತೊಮ್ಮೆ ಮುಂಬಂದಿತು! ಅಂಥ ಪ್ರವೃತ್ತಿಯನ್ನು ಪುನಃ ತಡೆಯಲಾಯಿತು. ಹಾಗೂ ಹೆನ್ರಿ ಹೇಗನ ಅಧ್ಯಕ್ಷತೆಯಲ್ಲಿ ಕೆಲಸವು ಮುಂದುವರಿದು ೧೯೦೧ರಲ್ಲಿ ನವನಿರ್ಧಾರದ ತಿದ್ದಿದ ಆವೃತ್ತಿಯು ಹೊರಬಂದಿತು.

ಒಂಬತ್ತು ಲಕ್ಷದಷ್ಟು ಶಬ್ದಗಳಿರುವ ಬೈಬಲ್ ಅನುವಾದದ ವಿವಿಧ ಹಂತಗಳಲ್ಲಿ ನಾವು ಕನ್ನಡ ಗದ್ಯದ ವಿಕಾಸವನ್ನು ಕಾಣಬಹುದು. ಅದರ ಬೃಹತ್ತಿನ ಮಾತಿರಲಿ ಸಂಪೂರ್ಣ ವಿಭಿನ್ನ ಸಂಸ್ಕೃತಿಯನ್ನು ರೂಪಿಸುವ ಕೃತಿಯನ್ನು ಕನ್ನಡದಲ್ಲಿ ತರುವುದು ಕಷ್ಟಸಾಧ್ಯವಾದುದು. ಬೈಬಲಿನ ಭಾಷೆಯು ಮೇಲು ನೋಟಕ್ಕೆ ಸರಳವಾಗಿ ಕಂಡರೂ ಅದರ ಖಚಿತವಾದ ಅರ್ಥವನ್ನು ಅನ್ಯ ಭಾಷೆಯಲ್ಲಿ ತರುವುದು ಕಠಿಣ. ಪ್ರಾರಂಭದ ಬೈಬಲ್ ಭಾಷಾಂತರವು ಅಸಮರ್ಪಕವಿದ್ದುದಕ್ಕೆ ಇನ್ನೊಂದು ಕಾರಣ, ಮೂಲವನ್ನು ಅತ್ಯಂತ ಕಟ್ಟುನಿಟ್ಟಾಗಿ ಅನುಸರಿಸಬೇಕೆನ್ನುವ ಪೂಜ್ಯ ಭಾವನೆ. ಯಾವ ಶಬ್ದವನ್ನೂ ಬಿಡದೆ, ಇದ್ದಕ್ಕಿದ್ದಂತೆ ಅನುವಾದಿಸಿದ್ದಾದರೆ ಅದು ಕನ್ನಡ ನುಡಿಯ ಜಾಯಮಾನಕ್ಕೆ ಹೊಂದಲಿಲ್ಲವೆಂಬ ವಿಚಾರವೇ ಬರದಷ್ಟು ಬೈಬಲ್ ವಾಣಿಯ ವಿಷಯದಲ್ಲಿ ಅವರು ಆದರವನ್ನು ತಳೆದಿದ್ದರು. ಹೀಗಾಗಿ–'to present the inspired writings in their own unaltered and undiminished beauty and prose, in language, simple, perspicuous and dignified' ಎಂಬುದೇ ಪ್ರಥಮ ಪರಿಷ್ಕರಣ ಸಮಿತಿಯ ಗುರಿಯಾಗಿದ್ದಿತು.

ಇದಕ್ಕೆ ಅನುಸರಿಸಿ ಭಾಷಾಂತರವು ಸ್ವಯಂಪೂರ್ಣ ಮೂಲಾನುಸಾರಿಯಾಗಿರ ಬೇಕಲ್ಲದೆ ಅರ್ಥ ಸ್ಪಷ್ಟತೆಗಾಗಿ ಅದನ್ನು ವಿಸ್ತರಿಸ ಹೋಗಬಾರದು. ಮೂಲದಲ್ಲಿ ಅದು ಸಂದಿಗ್ಧವಿದ್ದರೆ ಇಲ್ಲಿಯೂ ಹಾಗೆಯೇ ಇಡಬೇಕು; ಪಕ್ಷಿ, ಪ್ರಾಣಿ, ಗಿಡಬಳ್ಳಿ, ಲೋಹ, ಖನಿಜ ಮುಂತಾದ ನೈಸರ್ಗಿಕ ಅಂಶಗಳನ್ನು ಅದಕ್ಕೆ ಸಮಾನ ಅರ್ಥವಿರುವ ಬಳಕೆಯ ಕನ್ನಡ ಶಬ್ದಗಳಿದ್ದರೆ ಮಾತ್ರ ಕೊಡಬೇಕು; ಇಲ್ಲವಾದರೆ ಮೂಲ ಶಬ್ದವನ್ನೆ ಇರಿಸಬೇಕು ಎಂದೂ ನಿರ್ಧರಿಸಲಾಯಿತು.

ಇನ್ನು ಕನ್ನಡ ಭಾಷೆಯ ದೃಷ್ಟಿಯಿಂದ ಅವರು ವಿಚಾರಮಾಡಿ, ಸುಲಭವಾಗಿ ಅರ್ಥವಾಗುವ ದೇಶ್ಯ ಮತ್ತು ತದ್ಭವ ಶಬ್ದಗಳನ್ನೆ ಆಯ್ದುಕೊಳ್ಳಬೇಕು ; ಅವು ಸಿಕ್ಕದೆ ಹೋದಲ್ಲಿ ಸಂಸ್ಕೃತ ಶಬ್ದಗಳಿಗೆ ಶರಣು ಹೋಗಬೇಕು. ಗ್ರಾಮ್ಯ ಅಥವಾ ಅನ್ಯ ದೇಶ್ಯ

ಶಬ್ದಗಳನ್ನು ಅನಿವಾರ್ಯವೆಂದಿದ್ದರೆ ಮಾತ್ರ ಬಳಸಬೇಕು, ಎಂದು ಗೊತ್ತುಪಡಿಸಿಕೊಂಡರು. ಮುಂದುವರಿದು ಬೈಬಲಿನಲ್ಲಿ ಬರುವ ಹಿಬ್ರೂ, ಗ್ರೀಕ್ ಅಂಕಿತ ನಾಮಗಳನ್ನು ಆ ಭಾಷೆಗಳ ಮೂಲ ಸ್ವರೂಪದಲ್ಲಿಯೇ ಇಟ್ಟುಕೊಳ್ಳಬೇಕು ಮತ್ತು ಕನ್ನಡ ನಾಲಗೆಗೆ ಒಗ್ಗುವ ಮಟ್ಟಿಗೆ ಮಾತ್ರ ಅಕ್ಷರಿಕೆಯಲ್ಲಿ ಬದಲುಮಾಡಿಕೊಳ್ಳಬಹುದು ಎಂದು ನಿರ್ಧರಿಸಿದರು. (ಉದಾ : John ಇದರ ಮೂಲ ಹಿಬ್ರೂ ಶಬ್ದವಾದ Yohann ಎಂಬುದನ್ನು ಅನುಸರಿಸಿ ಯೋಹಾನ್ ಎಂದು ಅನುವಾದಿಸಿದರಲ್ಲದೆ, ಜಾನ್ ಎಂದು ಅಲ್ಲ.)

ಕ್ರಿ.ಶ. ೧೮೫೮ರ ದ.ಭಾ. ಪ್ರೊಟೆಸ್ಟಂಟ್ ಮಿಶನರಿ ಸಮ್ಮೇಳನದಲ್ಲಿ ಬೈಬಲ್ ಅನುವಾದದ ಸಮಸ್ಯೆಗಳ ಕುರಿತು ಪ್ರತ್ಯೇಕವಾಗಿಯೆ ಒಂದು ವಿಚಾರಗೋಷ್ಠಿ ನಡೆಯಿತು. ಅದರಲ್ಲಿ ಭಾಗವಹಿಸಿದವರ ಮುಖ್ಯ ನಿಲುಮೆಯೆಂದರೆ ಬೈಬಲ್ ಅನುವಾದದಲ್ಲಿ ಭಾರತೀಕರಣ ಬೇಡವೆಂಬುದು. ಕ್ರೈಸ್ತ ಮತಕ್ಕೆ ಸೇರಿದ ದೇಶೀಯರಿಗಾಗಿಯೇ ಅನುವಾದಿತ ಬೈಬಲ್ ಇರಬೇಕಿದ್ದರೂ ತಮ್ಮ ದೇವವಾಣಿಯನ್ನು ವ್ಯಕ್ತಪಡಿಸುವ ರೀತಿಯು ಮೂಲದಂತೆಯೇ ಇರಬೇಕು, ಎಂದರು. ಅಪೋಸ್ತಲರ ಉಪದೇಶದ ಮಾತುಗಳನ್ನು ಹಿಂದೂ ಋಷಿಗಳ ರೀತಿಯಲ್ಲಿ ಹೇಳಿದ್ದಾದರೆ, ದೇಶೀಯ ಕ್ರೈಸ್ತರಿಗೆ ಹಿಡಿಸಬಹುದಾದರೂ ಸರ್ವಥಾ ಹಾಗೆ ಮಾಡಕೂಡದು ಎಂದು ನಿರ್ಧಾರವಾಯಿತು. ಕಾಲಿನ್ ಕ್ಯಾಂಬೆಲ್ ಇನ್ನೂ ಮುಂದುವರಿದು 'ಬೈಬಲ್ ಅನುವಾದ ಕಾರ್ಯದಲ್ಲಿ ಹಿಂದೂ ಪಂಡಿತರ ನೆರವನ್ನು ಸಹ ಪಡೆಯಬಾರದು' ಎಂದು ಸೂಚಿಸಿದನು. ಅಂತೆಯೇ ಆಗಿನ ಬೈಬಲಿನ ಯಾವುದೇ ಅನುವಾದದ ಪುಸ್ತಕಗಳಲ್ಲಿ ಹಿಂದೂ ಮುನಶಿಯ ಇಲ್ಲವೆ ವ್ಯಾಕರಣ ಪಂಡಿತನ ಸಹಾಯ ಪಡೆದ ಉಲ್ಲೇಖವು ದೊರೆಯುವುದಿಲ್ಲ.

ಕ್ಯಾಂಬೆಲ್ ಮಾಡಿದ್ದ ಇನ್ನೊಂದು ಸೂಚನೆಯು ಭಾಷಾದೃಷ್ಟಿಯಿಂದ ಗಣನೀಯವಾಗಿದೆ. ಮೇಲಿಂದ ಮೇಲೆ ಬರುವ ಪದಗಳಿಗೆ, ಉದಾಹರಣೆಯಾಗಿ, Lord ಎಂಬುದಕ್ಕೆ ತಮಿಳಿನಲ್ಲಿ ಅಂದವರ್, ತೆಲುಗಿನಲ್ಲಿ ಪ್ರಭು, ಕನ್ನಡದಲ್ಲಿ ಸ್ವಾಮಿ ಎಂದು ಬೇರೆ ಬೇರೆಯಾದ ಶಬ್ದಗಳಿರುವುದರಿಂದ ಆ ಅರ್ಥವನ್ನು ಕೊಡುವ ಸಮಾನ ಶಬ್ದವನ್ನು ದಕ್ಷಿಣ ಭಾರತದ ಎಲ್ಲ ಭಾಷೆಗಳಲ್ಲಿ ಬಳಸಿ ಏಕರೂಪತೆಯನ್ನು ಸಾಧಿಸಬೇಕು– ಎಂಬುದೇ ಆ ಸೂಚನೆ. ಆದರೆ ಅದನ್ನು ಕಾರ್ಯಾಚರಣೆಯಲ್ಲಿ ತರುವುದಕ್ಕೆ ಗಮನಕೊಟ್ಟಂತಿಲ್ಲ.

ಅನುವಾದ ಕಾರ್ಯದಲ್ಲಿ ಸಮರ್ಪಕವಾದ ಶಬ್ದಗಳು ಸಿಕ್ಕದೆ ಇದ್ದಾಗ, ಮಿಶನರಿಗಳು ಕನ್ನಡ ಭಾಷೆಯನ್ನು ಜರೆದುದೂ ಇದೆ. ಹಳಗನ್ನಡವು ಅವರಿಗೆ ಬೇಡವಾಗಿತ್ತು. ಹೊಸಗನ್ನಡವು ಅವರ ಕಾಲಕ್ಕೆ ಪುಷ್ಟಿಯನ್ನು ಹೊಂದಿರಲಿಲ್ಲ. ಸಂಸ್ಕೃತದ ಸಹಾಯವನ್ನು ನಿರಾಕರಿಸಿದುದೂ ಅದಕ್ಕೆ ಕಾರಣವಾಯ್ತು. ಪರಿಣಾಮ ಮಾತ್ರ ಒಳ್ಳೆಯದೇ

ಆಯಿತೆನ್ನಬಹುದು. ಆ ನಿಮಿತ್ತದಿಂದ ಅನೇಕ ಹೊಸ ಶಬ್ದಗಳ ಸೃಷ್ಟಿಯಾಯಿತು. ಅನೇಕ ಶಬ್ದಗಳ ಪ್ರಚಲಿತ ಅರ್ಥವು ಹೊಸ ರೂಪ ತಾಳಿತು (ಉದಾ : ಒಡಂಬಡಿಕೆ, ಪ್ರಸಂಗ ಇತ್ಯಾದಿ).

ಯೂರೋಪಿಯನ್ ಭಾಷೆಗಳಲ್ಲಿ ಕಾಲಕಾಲಕ್ಕೆ ಭಾಷಾಂತರವು ನಡೆದಾಗ ಆ ಭಾಷೆಗಳ ಸ್ವರೂಪವೇ ಪರಾರ್ಪಟ್ಟು ಅವುಗಳ ಗದ್ಯಶೈಲಿಯಲ್ಲಿ ಮಹತ್ವದ ಸ್ಥಿತ್ಯಂತರಗಳಾದುವೆಂದು ಹೇಳುವುದುಂಟು. ಕನ್ನಡಕ್ಕೆ ಈ ಮಾತು ಎಷ್ಟರಮಟ್ಟಿಗೆ ಅನ್ವಯಿಸುತ್ತದೆ? ಬೈಬಲಿನ ಕನ್ನಡ ಗದ್ಯರೂಪವು ಕನ್ನಡ ಭಾಷಾ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಹೊಂದಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಮುಂದಿನ ಗದ್ಯರಚನೆಯ ಮೇಲೆ ಪ್ರಭಾವವನ್ನು ಬೀರುವ ಅವಕಾಶವೂ ಒದಗಿ ಬಂದಿದ್ದಿತು. ಆದರೆ ಅದರ ಜೊತೆಗೇ, ಕನ್ನಡ ಪುರಾಣ ಕಥನಗಳ ಗದ್ಯವು ಕಳೆದ ಶತಮಾನದಲ್ಲಿ ಬೆಳೆದು ಬಂದಿತು ಮತ್ತು ದೇಶೀಯರ ಸಾಹಿತ್ಯಿಕ ಕಾರ್ಯವು ಮುಂದುವರಿದು ಸಂಸ್ಕೃತದ ಹೆಚ್ಚಳವಿರುವ ಗದ್ಯಶೈಲಿಯು ರೂಪುಗೊಂಡು ಅದರದೇ ಮೇಲುಗೈಯಾಯಿತು. ಆ ವಿಕಾಸ ಕ್ರಮದಲ್ಲಿ ಬೈಬಲ್ ಗದ್ಯದ ಪ್ರಭಾವವು ಕನ್ನಡ ಗದ್ಯದ ಮೇಲೆ ಸ್ವಲ್ಪಮಟ್ಟಿಗೆ ಮಾತ್ರವೆ ತೋರಿಬಂದಿತು. ಅಲ್ಲದೆ, ನಮ್ಮಲ್ಲಿ ಕ್ರೈಸ್ತರ ಸಂಖ್ಯೆಯು ಕಡಮೆ ಇದ್ದುದೂ, ಮಿಶನರಿಗಳು ಮತೀಯ ಸಾಹಿತ್ಯವನ್ನುಳಿದು ಬೇರೆ ರೀತಿಯ ಗದ್ಯ ಗ್ರಂಥಗಳನ್ನು ಹೆಚ್ಚಾಗಿ ಬರೆಯದಿದ್ದುದೂ ಅದಕ್ಕೆ ಕಾರಣವಾಯಿತು.

ಅದು ಹೇಗೂ ಇರಲಿ, ಬೈಬಲಿನ ಕನ್ನಡ ಅನುವಾದ ಮಾಡುವ ಕಾಲಕ್ಕೆ ಪ್ರತಿ ಶಬ್ದದ ವಿಚಾರವಾಗಿಯೂ ಅಂದಿನ ಮಿಶನರಿಗಳು ಜಿಜ್ಞಾಸೆಯನ್ನು ತಳೆದಿದ್ದರು. ಅವರ ಕನ್ನಡ ಭಾಷೆಯ ವಿಶೇಷ ಅಭ್ಯಾಸಕ್ಕೆ ಅದು ನಿಮಿತ್ತವಾಯಿತು. ಬೈಬಲಿನ ದ್ವಿತೀಯ ಪರಿಷ್ಕರಣ ಕಾಲದಲ್ಲಿ Sarx ಎಂಬ ಗ್ರೀಕ್ ಶಬ್ದವನ್ನು ಕನ್ನಡದಲ್ಲಿ ಹೇಗೆ ಹೇಳಬೇಕೆನ್ನುವ ಬಗ್ಗೆ ಸದಸ್ಯರಲ್ಲಿ ನಡೆದ ಚರ್ಚೆಯನ್ನು ಇಲ್ಲಿ ಉದಾಹರಿಸಬಹುದು. ಇಂಗ್ಲಿಷಿನಲ್ಲಿ ಅದನ್ನು Flesh ಎಂದು ಹೇಳಿದ್ದಿದೆ. The word was made Flesh. (John 1 :14)

ಈ ಶಬ್ದವನ್ನು ಹ್ಯಾಂಡ್ಸ್ "ಆ ವಾಕ್ಯವು ಮನುಷ್ಯತ್ವವನ್ನು ಧರಿಸಿಕೊಂಡು" ಎಂಬುದಾಗಿ ಭಾಷಾಂತರಿಸಿದ್ದನು. ೧೮೬೫ರ ಆವೃತ್ತಿಯಲ್ಲಿ ಅದನ್ನು 'ಮಾಂಸ' ಎಂಬುದಾಗಿ ಅನುವಾದಿಸಲಾಯಿತು. ಆದರೆ ದ್ವಿತೀಯ ಪರಿಷ್ಕರಣ ಸಮಿತಿಯ ಒಬ್ಬ ಸದಸ್ಯನು (ಹೆಸರು ತಿಳಿಯದು) ಬರೆದ ಒಂದು ಟಿಪ್ಪಣಿಯು ಪರಿಶೀಲನೆಗೆ ಅರ್ಹವಾಗಿದೆ.

Note on Sarx

I have spent much time on the consideration on this word. The universal use of ಮಾಂಸ was unanimously decided against in the former

Committee. It was held by men of wide experience not only that it had failed to graft itself on the intelligence of the Christian Church, but that in a country like india its use had been and could only be matter both of offence and of grivous ridicule among non-Christians (See e.g., the present version of Rom. xiii, 14). . . . .In Romans, Sarx has four equivalents given to it in different places. The common one is ದೇಹ. This was decided on rather than ಶರೀರ because we were told that in Dharwar the latter word has sometimes an obscene signification. Besides this we used ವಿಷಯ ಲಂಪಟ, ನರಭಾವ, ಪ್ರಪಂಚ and ಜಡಭಾವ as the sense of the various passages required. . .

After prolonged thought and inquiry I have reached the conclusion that on the whole ಶರೀರ is the best word from which to start. The Dharwar difficulty I am infromed is not after all very serious. Now ಶರೀರ denotes the gross, sensible, pershable part of the living being. It is never used of dead flesh, as ಮಾಂಸ generally is, and it forms an excellent antithesis to ಆತ್ಮ. Hence I think that this and not ಮಾಂಸ should be the footnote in John 1:14. ಶರೀರಿಯಾದವನು connotes everything that ಮಾಂಸ connotes and escapes that predominating and (in this case) false connotation of ಮಾಂಸ.

ಹೀಗೆ flesh ಗೆ ಪ್ರತಿಯಾಗಿ ದೇಹ, ಶರೀರ, ನರಭಾವ, ವಿಷಯಲಂಪಟತ್ವ, ಪ್ರಪಂಚ, ಜಡಭಾವ ಮೊದಲಾದವುಗಳ ಅರ್ಥ ಭೇದವನ್ನು ಸೂಕ್ಷ್ಮವಾಗಿ ವಿವೇಚಿಸುತ್ತ ಈ ಮಿಶನರಿಯು 'ಶರೀರ' ಎಂಬ ಪದವನ್ನು ಶಿಫಾರಸು ಮಾಡಿದ್ದನು. ಆದರೆ ಅಂತಿಮವಾಗಿ ಸ್ವೀಕೃತವಾದದ್ದು 'ನರಾವತಾರ' ಎಂಬ ಶಬ್ದ!

ಬೈಬಲಿನ ಈ ಶಬ್ದಾರ್ಥ ನಿರ್ಣಯದ ಚರ್ಚೆಯಲ್ಲಿ ಕಿಟೆಲ್ ಸಹ ಪಾಲುಗೊಂಡಿದ್ದಾರೆ. ಇದೇ ಸುವಾರ್ತೆಯ ಅನುವಾದದ ವಿಷಯದಲ್ಲಿ ಅವರ ಅಭಿಪ್ರಾಯದ ಒಂದು ಮಾದರಿಯನ್ನು ಇಲ್ಲಿ ಕೊಡುತ್ತಿದ್ದೇವೆ.*

'In the beginning was word and the word was with God. . .' (St. John.1.1) ಎಂಬುದನ್ನು "ಆದಿಯಲ್ಲಿ ವಾಕ್ಯವಿತ್ತು; ಆ ವಾಕ್ಯವು ದೇವರ ಬಳಿಯಲ್ಲಿತ್ತು"

---

* Remarks on the translation and revision of the Gospel of St.John ಎಂಬ ಹಸ್ತಾಕ್ಷರದ ಪ್ರತಿಯಿಂದ ಇದನ್ನು ಆಯ್ದುಕೊಂಡಿದೆ. ಬಾಸೆಲಿನ ಕೇಂದ್ರ ಕಚೇರಿಯ 'Archives' ನಲ್ಲಿ ಇದು ಲಭ್ಯವಿದೆ.

ಎಂದು ಅನುವಾದಿಸಲಾಗಿದ್ದಿತು. Word ಇದನ್ನು 'ವಾಕ್ಯ' ಎಂದು ಭಾಷಾಂತರಿಸಬೇಕೆಂದು ಕಿಟೆಲ್ ತನ್ನ ಟಿಪ್ಪಣಿಯಲ್ಲಿ ಸೂಚಿಸಿದ್ದರು. ಅವರ ಸಮರ್ಥನೆ ಇಂತಿದೆ:

Both these terms (ವಾಕ್ಯ, ವಾಕ್ಕು) come from the root ವಾಕ್, to speak, to say. Vakku is the wellknown tadbhava of ವಾಕ್, voice, speech (cf. vox). ವಾಕ್ in the Veda is used as the creative power that was without a record in the beginning ವಾಕ್ಯ however does nowhere occur to express the creative pwer. . . . I add that forms like ವಾಗ್ವೇದ or ವಾಕ್ಸ್ವರೂಪ might be formed.

ಇಲ್ಲಿಯೂ ಕೂಡ, ವಾಕ್ಕು ಎಂಬುದು ಸ್ವೀಕೃತವಾಗದೇ 'ವಾಕ್ಯ'ವೇ ಉಳಿದುಕೊಂಡಿದೆ.

ಕ್ರಿ.ಶ. ೧೮೨೦, ೧೮೬೫, ೧೯೦೧ ಈ ವರ್ಷಗಳಲ್ಲಿ ಹೊರಬಂದ ಕನ್ನಡ ಬೈಬಲಿನಲ್ಲಿ, ಕನ್ನಡ ಗದ್ಯದ ವಿಕಾಸವು ಅದೆಂತು ವ್ಯಕ್ತವಾಯಿತೆಂಬುದನ್ನು ತಿಳಿಯಲೋಸುಗ ನವನಿರ್ಧಾರದ ಮತ್ತಾಯ ೧ನೆಯ ಸಂಧಿಯ ೨೦ನೆಯ ವಾಕ್ಯದ ಅನುವಾದವನ್ನು ಇಲ್ಲಿ ಕೊಡುತ್ತೇವೆ. ಮೂಲ ಇಂತಿದೆ:

But while he thought on these things, behold, the angel of the Lord appeared unto him in a dream, saying, Joseph, thou son of David, fear not to take unto thee Mary thy wife; for that which is conceived in her is of the Holy Ghost.

– ಆದರೆ ಯಿದಕ್ಕೋಸ್ಕರವಾಗಿ ಆಲೋಚನೆ ಮಾಡುತ್ತಿರುವಾಗಲು ಯಿದೋ ದೇವರ ದೂತನು ಸ್ವಪ್ನದಲ್ಲಿ ಅವನಿಗೆ ಕಾಣಿಸಲ್ಪಟ್ಟು ಹೇಳಿದ್ದೇನಂದರೆ ದಾವೀದಿನ ಮಗನಾದ ಯೋಶಫೇವಿನ ಹೆಂಡತಿ ಮರಿಯಾಂಅ ತಕ್ಕೊಳ್ಳ ಭಯಪಡಬ್ಯಾಡಯೆನಂದರೆ ಆಕೆ ಪರಿಶುದ್ಧಾತ್ಮನಿಂದ ಗರ್ಭವಂಅ ಧರಿಸಿದ್ದಾಳೆ. (೧೮೨೦)

– ಅವನು ಇವುಗಳನ್ನು ಆಲೋಚಿಸುತ್ತಿರುವಾಗ, ಇಗೋ, ಕರ್ತನ ದೂತನು ಸ್ವಪ್ನದಲ್ಲಿ ಅವನಿಗೆ ಪ್ರತ್ಯಕ್ಷವಾಗಿ, ದಾವೀದನ ಮಗನಾದ ಯೋಸೇಫನೇ, ನಿನ್ನ ಹೆಂಡತಿಯಾದ ಮರಿಯಳನ್ನು ಅಂಗೀಕರಿಸುವುದಕ್ಕೆ ಭಯ ಪಡಬೇಡ. ಯಾಕೆಂದರೆ ಅವಳಲ್ಲಿ ಉಂಟಾದುದು ಪವಿತ್ರಾತ್ಮನಿಂದಾಗಿದೆ. (೧೮೬೫)

– ಅವನು ಇದನ್ನು ಆಲೋಚಿಸುತ್ತಿರುವಾಗ ಕರ್ತನ ದೂತನು ಅವನಿಗೆ ಕನಸಿನಲ್ಲಿ ಕಾಣಿಸಿಕೊಂಡು–ಎಲೈ ಯೋಸೇಫನೇ, ದಾವೀದ ವಂಶದವನೇ, ನಿನ್ನ ಹೆಂಡತಿಯಾದ ಮರಿಯಳನ್ನು ಸೇರಿಸಿಕೊಳ್ಳುವುದಕ್ಕೆ ಅಂಜಬೇಡ. ಆಕೆಗೆ ಗರ್ಭವು ಪವಿತ್ರಾತ್ಮದಿಂದಲೇ ಆದದ್ದು. (೧೯೦೧)

೧೮೨೦ನೆಯ ವರ್ಷದ ಅನುವಾದದಲ್ಲಿ ಶಬ್ದಗಳನ್ನು ಬಿಡಿಸಿಲ್ಲ. ಪೂರ್ಣಚಿಹ್ನವನ್ನು ಸಹಿತ ಕೊಟ್ಟಿಲ್ಲ. ಅಕ್ಷರಿಕೆಯ ತಪ್ಪುಗಳೂ ಇವೆ. ೧೮೬೫ರ ಅನುವಾದದಲ್ಲಿ ಇವನ್ನು ಸರಿಪಡಿಸಲಾಗಿದೆ. ಮತ್ತು ವಾಕ್ಯರಚನೆಯು ತಕ್ಕಮಟ್ಟಿಗೆ ಸಮರ್ಪಕವಾಗಿದೆ. ಆದರೆ ಮೂಲವನ್ನು ಕಟ್ಟುನಿಟ್ಟಾಗಿ ಅನುಸರಿಸುವ ಪ್ರವೃತ್ತಿಯು ಕಂಡುಬರುತ್ತದೆ. ಕನ್ನಡಕ್ಕೆ ಸಹಜವಲ್ಲದ ಕರ್ಮಣಿ ಪ್ರಯೋಗವು ಎದ್ದು ತೋರುತ್ತದೆ. ೧೯೦೧ನೆ ಆವೃತ್ತಿಯಲ್ಲಿ ಕರ್ಮಣಿ ಪ್ರಯೋಗವನ್ನು ಬುದ್ಧಿಪೂರ್ವಕವಾಗಿ ಬಿಟ್ಟುಕೊಟ್ಟಿದ್ದನ್ನೂ, ವಾಕ್ಯ ವಾಕ್ಯಗಳನ್ನು ಸರಿಯಾಗಿ ಹೊಂದಿಸಿದ್ದರಿಂದ ನಿರೂಪಣೆಯು ಸರಾಗವಾಗಿದ್ದನ್ನೂ, ಗಮನಿಸಬೇಕು.

ಇದುವರೆಗೆ ಸಮಗ್ರ ಬೈಬಲಿನ ಅನುವಾದದ ಬಗೆಯನ್ನು ಪರಿಶೀಲಿಸಿದೆವು. ೧೮೭೭ರಲ್ಲಿ ಸಣ್ಣ ಮೊಳೆಗಳಿಂದ ಮುದ್ರಿಸಿದ ಆವೃತ್ತಿಯು ಸಿದ್ಧವಾಗಿದ್ದರೂ ಸಾವಿರಕ್ಕೆ ಮಿಕ್ಕಿದ ಅದರ ಪುಟಗಳನ್ನು ತಿರುವಿ ಹಾಕುವುದಕ್ಕೆ ಕಷ್ಟವಾಗುತ್ತಿತ್ತು. ಆದ ಕಾರಣ ಬೈಬಲಿನ ಬಿಡಿ ಭಾಗಗಳೂ ಸಂಗ್ರಹಾವೃತ್ತಿಗಳೂ, ಆಯ್ಕೆಗಳೂ, ಬಹು ಸಂಖ್ಯೆಯಲ್ಲಿ ಪ್ರಕಟವಾದುವು.

ಇತ್ತ ರೋಮನ್ ಕೆಥಲಿಕರು ೧೯ನೆಯ ಶತಮಾನದಲ್ಲಿ ಬೈಬಲನ್ನು ಇಡಿಯಾಗಿ ಅನುವಾದಿಸಿದಂತೆ ದಾಖಲೆಗಳಿಲ್ಲ. ಆದರೆ ಬೌತೆಲೊ 'ಆದಿತ್ಯವಾರದ ಅದ್ಭುತ'ವೆಂಬ ಹೆಸರಿನಲ್ಲಿ ನವನಿರ್ಧಾರದ ಸಂಕ್ಷೇಪ ಆವೃತ್ತಿಯನ್ನು ೧೮೬೧ನೆಯ ವರ್ಷದಲ್ಲಿ ಹೊರತಂದನು.

ಬೈಬಲ್ ಉಕ್ತಿಗಳನ್ನು ಸಂಗ್ರಹಿಸುವಲ್ಲಿ ಸ್ತ್ರೀಯರು ಹೆಚ್ಚು ಆಸ್ಥೆಯನ್ನು ತಳೆದಿದ್ದರು. ತ್ರೈನ್ ಮಾರಿಸ್ ಸಂಗ್ರಹಿಸಿದ್ದ ಬೈಬಲಿನ ಆಯ್ದ ಭಾಗಗಳನ್ನು ಜೆ.ಟೇಲರ್ ಕನ್ನಡಕ್ಕೆ ಅನುವಾದಿಸಿ ಇಂಗ್ಲಿಷ್ ಮೂಲದೊಂದಿಗೆ ಪ್ರಕಟಿಸಿದನು (೧೮೪೭). ಮಿಸೆಸ್ ಕ್ಯಾಂಬೆಲ್ ವಿರಚಿತ 'ದಿನದ ರೊಟ್ಟಿ' ಎಂಬ ಕೃತಿಯಲ್ಲಿ (೧೮೫೩) ವರ್ಷದ ಎಲ್ಲ ದಿನಗಳಲ್ಲಿಯೂ ನಿತ್ಯ ಪಠಣಕ್ಕೆ ಉಪಯೋಗವಾಗುವಂತೆ ಬೈಬಲ್ ಉಕ್ತಿಗಳನ್ನು ಔಚಿತ್ಯಪೂರ್ಣವಾಗಿ ಆಯ್ಕೆ ಮಾಡಿಕೊಡಲಾಗಿದೆ.

ಜರ್ಮನಿಯ ಸಿ.ಜೆ.ಬಾರ್ಥ್ ಬೈಬಲಿನ ಹಿರಿಯ ವ್ಯಾಖ್ಯಾನಕಾರನೆನಿಸಿ ಕೊಂಡಿದ್ದಾನೆ. ಅವನ ಬೃಹತ್ ಕೃತಿಯನ್ನು ಬಾಸೆಲ್ ಮಿಶನ್ನಿನ ಕೆಲವರು ಅನುವಾದಿಸತೊಡಗಿದರು. ಮೆವ್‌ಗ್ಲಿಂಗ್, ವೈಗ್ಲೆ, ವುರ್ತ್ ಮತ್ತು ಕೌಂಡಿಣ್ಯ-ಇವರ ಪ್ರಯತ್ನದ ಫಲವಾಗಿ 'ಶಾಲಾಗೃಹ' (ಸೆಮಿನರಿ) ಪಠಣೋದ್ದಿಶ್ಯವಾದ ದೇವವಾಕ್ಯ ವ್ಯಾಖ್ಯಾನದ ಎರಡು ಬೃಹತ್ ಸಂಪುಟಗಳು ೧೮೬೧-೬೫ರ ಅವಧಿಯಲ್ಲಿ ಹೊರಬಂದವು. ಅನುವಾದವು ಮೇಲ್ಮಟ್ಟದ್ದಾಗಿದೆ.

'ನವ ನಿರ್ಧಾರ'ದ ನಾಲ್ವರು ಸುವಾರ್ತಿಕರ (ಮ್ಯಾಥ್ಯೂ, ಮಾರ್ಕ್, ಜಾನ್ ಹಾಗೂ ಲ್ಯೂಕ್), ಅದರಂತೆ ಅಪೋಲಸ್ತರ ಒಸಗೆಗಳನ್ನು ಟೀಕೆ ಟಿಪ್ಪಣಿಗಳೊಡನೆ

ಪ್ರಕಟಿಸಿದುದನ್ನು ಪ್ರತ್ಯೇಕವಾಗಿ ಉಲ್ಲೇಖಿಸಬೇಕು. ಬೈಬಲಿನ ಅತ್ಯಂತ ಜನಪ್ರಿಯ ಭಾಗಗಳಿವು. ಸುವಾರ್ತೆಗಳಲ್ಲಿಯಂತೂ ಕ್ರಿಸ್ತನ ಉದಾರ ಚರಿತೆ ಇದ್ದುದರಿಂದ ಅವುಗಳ ಸವಿಸ್ತರ ಪ್ರಕಟಣೆಗೆ ಇಂಬು ದೊರೆಯಿತು. ಮತ್ತಾಯನ (ಮ್ಯಾಥ್ಯೂ) ಸುವಾರ್ತೆಯನ್ನು ಆಗಿನ ವಿದ್ವಾಂಸ ಮಂಡಲಿಯಲ್ಲಿ ಒಬ್ಬನಾಗಿದ್ದ ಜಿ.ಪೋಪನು ಇಂಗ್ಲಿಷ್, ತಮಿಳು ಕನ್ನಡ, ತೆಲುಗು, ಮಲೆಯಾಳಿ–ಈ ಐದು ಭಾಷೆಗಳಲ್ಲಿಯೂ ಅನುವಾದಿಸಿ ಶಬ್ದಕೋಶ, ವ್ಯಾಕರಣ ವಿಚಾರಗಳೊಂದಿಗೆ ಪ್ರಕಟಿಸಿದುದು ಮಹತ್ವದ್ದಾಗಿದೆ (೧೮೬೦). ಬಾಸೆಲ್ ಮಿಶನ್‌ದವರು ಕನ್ನಡದೊಡನೆ ಸಂಸ್ಕೃತದಲ್ಲಿಯೂ ಈ ಕೃತಿಯನ್ನು ಹೊರತಂದಿದ್ದಾರೆ! ('ಮಥಿಲಿಖಿತ ಸಂವಾದ' : ೧೮೯೦). ಸೆಮಿನರಿಯಲ್ಲಿ ಸಂಸ್ಕೃತವೂ ಒಂದು ಅಭ್ಯಾಸದ ವಿಷಯವಾಗಿದ್ದುದರಿಂದ ಬೈಬಲ್ ಮೂಲಕ ಆ ಭಾಷೆಯ ಪರಿಜ್ಞಾನವಿರಲೆಂದು ಹಾಗೆ ಮಾಡಿರಬೇಕು.

ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿದ್ದ ಹೇಗ್, ಗಲಿಫೋರ್ಡ್, ಸ್ಯಾಮ್ಯುಯೇಲ್ ಅಬ್ಬೈಜ ಮತ್ತು ಎರ್ಥ್ರಾ ಮೊದಲಾದ ವೆಸ್ಲಿಯನ್ ಮಿಶನರಿಗಳು ಅಪೋಸ್ತಲರ ಕೃತ್ಯಗಳನ್ನು ಪರಿಷ್ಕೃತ ಅನುವಾದ ಹಾಗೂ ಟೀಕೆ ಟಿಪ್ಪಣಿಗಳೊಡನೆ ಪ್ರಕಟಿಸುವದಕ್ಕೆ ಮುಂದಾದರು. 'ಯಾಕೋಬನ ಪತ್ರಿಕೆ'ಯಲ್ಲಿ ಹೇಗ್ ಅನುಬಂಧರೂಪವಾಗಿ ಭಗವದ್ಗೀತೆಯ ಸಮಾನ ಶ್ಲೋಕಗಳನ್ನು ಕೊಟ್ಟಿದ್ದಾನೆ. ಟಿಪ್ಪಣಿ ಬರೆಯುವಲ್ಲಿ ಹಿಂದಿನ ವ್ಯಾಖ್ಯಾನಕಾರರ ವಿಚಾರಗಳನ್ನೆತ್ತಿಕೊಂಡಿದ್ದರೂ ಸ್ವತಂತ್ರವಾಗಿ ವಿವೇಚಿಸುವ ಪ್ರಯತ್ನ ಮಾಡಿದ್ದುದು ಬೈಬಲ್ ಅಧ್ಯಯನದಲ್ಲಿ ಮುಂದಿಟ್ಟ ಹೆಜ್ಜೆಯಾಗಿದೆ. ಈ ಕೃತಿಯ ಪ್ರಕಟನೆಗೆ ಸಂಬಂಧಿಸಿದ ಇನ್ನೊಂದು ವಿಶಿಷ್ಟ ಅಂಶವೆಂದರೆ ಅದರ ಹಸ್ತಪ್ರತಿಯನ್ನು ಪಿ.ಕರಿಬಸವಶಾಸ್ತ್ರಿಗೆ ಒಪ್ಪಿಸಿ ಭಾಷೆಯ ದೃಷ್ಟಿಯಿಂದ ತಿದ್ದಿಸಿಕೊಂಡದ್ದು.* ತಮ್ಮ ಕೃತಿಗಳು ಬಹುಜನ ಗ್ರಾಹ್ಯವಾಗಬೇಕೆನ್ನುವ ಪ್ರಜ್ಞೆ ಕ್ರೈಸ್ತ ಲೇಖಕರಲ್ಲಿ ಜಾಗೃತವಾಗಿತ್ತೆನ್ನ ಬಹುದು. ಹೇಗ್ ತನ್ನ ಗ್ರಂಥವನ್ನು ಆರಂಭ ಮಾಡಿದ ಬಗೆ ಇಂತಿದೆ :

"**ಯಾಕೋಬನ ಪತ್ರಿಕೆಯ ಪೀಠಿಕೆ** : ನಮಗೆ ಒಂದು ಕಾಗದವು ಬಂದರೆ ನಾವು ಅದರ ಮೇಲು ವಿಳಾಸವನ್ನು ನೋಡಿ ಇದನ್ನು ಬರೆದವರ್‍ಯಾರು? ಯಾರಿಗೆ ಬಂದಿದೆ? ಎಲ್ಲಿಂದ ಬಂದಿದೆ? ಎಂದು ವಿಚಾರ ಮಾಡುವದು ಸರ್ವಸಾಧಾರಣವಾಗಿದೆಯಷ್ಟೆ. ಅದರಂತೆ ನಾವು ಈ ಪುರಾತನವಾದ ಪತ್ರಿಕೆಯನ್ನು ತೆಗೆದುಕೊಂಡು (೧) ಇದನ್ನು ಬರೆದವರು ಯಾರು (೨) ಇವನ ವಿಷಯದಲ್ಲಿ ನಮಗೇನು ತಿಳಿದಿದೆ (೩) ಯಾರಿಗೆ ಬರೆದನು (೪) ಇವನು ಇದನ್ನು ಯಾವಾಗ ಮತ್ತು ಯಾವ ಸ್ಥಳದಲ್ಲಿ. . .ಬರೆದನು– ಎಂದು ಯೋಚಿಸುವಾ."

---

* ಗರಗಿರರ ಸಭೆಯಲ್ಲಿ ವ್ಯಕ್ತವಾಗಿದ್ದ ಅಭಿಪ್ರಾಯಕ್ಕೆ ವಿರುದ್ಧವಾದ ಹಲವು ಇದಾಗಿದೆಯಲ್ಲವೆ?

ಯೇಸುಕ್ರಿಸ್ತನ ಚರಿತ್ರೆ ಮತ್ತು ಬೋಧನೆಗಳನ್ನು ಒಳಗೊಂಡ ಕಾರಣದಿಂದಲೇ ನವ ನಿರ್ಧಾರದ ಪ್ರಕಟನೆಯ ಹೆಚ್ಚಳವನ್ನು ಕಾಣುತ್ತೇವಷ್ಟೆ. ಆದರೆ ಯೇಸುವಿನ ಜೀವನ, ಉಪದೇಶಗಳನ್ನು ಕುರಿತ ವಿಸ್ತಾರವಾದ, ಅಧಿಕೃತ ಚರಿತ್ರೆಯು ಹೊರಬರದಿದ್ದುದು ಒಂದು ಕೊರತೆಯಾಗಿದೆ.

ಆದರೆ ಕಿಟೆಲ್ ವಿರಚಿತವಾದ 'ಯೇಸುಕ್ರಿಸ್ತನ ಶ್ರಮೇಚರಿತ್ರೆ'ವು ಈ ದಿಶೆಯಲ್ಲಿಯ ಒಂದು ಉತ್ತಮ ಕೃತಿ. ಅಂಗೈ ಆಕಾರದ, ೬೪ ಪುಟಗಳ ಈ ಪುಸ್ತಕದಲ್ಲಿ ಕ್ರಿಸ್ತನನ್ನು ಶಿಲುಬೆಗೇರಿಸಿದ ಒಂದು ವಾರದ ಹಿಂದಿನಿಂದ ಈ ಶ್ರಮೇಚರಿತ್ರೆಯು ಆರಂಭವಾಗಿದೆ. ನಾಲ್ಕೂ ಸುವಾರ್ತೆಗಳಿಂದ ಮುಖ್ಯ ಅಂಶಗಳನ್ನು ಆಯ್ದು, ಇದನ್ನು ರಚಿಸಿದ್ದುದು ಇದರ ವೈಶಿಷ್ಟ್ಯವಾಗಿದೆ. ಅಲ್ಲಲ್ಲಿ ಸುವಾರ್ತೆಗಳ ಅಕ್ಷರಗಳನ್ನು ಕೊಡಲಾಗಿದೆ. ಅತ್ಯಂತ ಸಾರ-ಸಂಗ್ರಹ ರೂಪದಲ್ಲಿ ಇದರ ನಿರೂಪಣೆ ಇದೆ. ಒಟ್ಟಿನಲ್ಲಿ ಇದು ಸ್ವತಂತ್ರ ರಚನೆ ಎನ್ನಬಹುದು. ಇದರ ಉಪಯುಕ್ತತೆಯನ್ನು ಮನದಂದು, ಬಾಸೆಲ್ ಮಿಶನ್ನಿನ ಬೋಧನಾಕ್ರಮ (Liturgy) ಪುಸ್ತಕದಲ್ಲಿ ಇದನ್ನು ಸೇರಿಸಲಾಗಿದ್ದಿತು.

## 52 ತಾತ್ವಿಕ ಮತ್ತು ಭಕ್ತಿ ಬರಹಗಳು

ಕ್ರೈಸ್ತ ಮತದ ತಾತ್ವಿಕ ವಿವೇಚನೆಯ ಕೃತಿಗಳು ಸಹ ಅನ್ಯಭಾಷೆಗಳಿಂದ ಬಂದವುಗಳೇ ಆಗಿವೆ. ವಿಶೇಷತಃ ಸೆಮಿನರಿಯಲ್ಲಿಯ ಅಧ್ಯಯನಕ್ಕೆಂದು ಕ್ರೈಸ್ತ ದೈವಜ್ಞಾನಕ್ಕೆ ಸಂಬಂಧಿಸಿ ಕೆಲವು ಗ್ರಂಥಗಳು ಸಿದ್ಧವಾದವು. ಅವುಗಳಲ್ಲಿ ಡಬ್ಲ್ಯೂ. ಕ್ಯಾಂಬೆಲ್ ಇವನ 'ಸತ್ಯವೇದಗ್ನಾನ ಪ್ರಬೋಧೆ.* ಎಂಬ ಕೃತಿಯೇ ಮೊದಲಿನದು (೧೮೩೮). ಟಿ.ಎಚ್. ಗಲಾದೆ (Galladet) ಬರೆದ 'ದೈವಜ್ಞಾನ ಪುಸ್ತಕ'ವನ್ನು ಕ್ಯಾಪ್ಟನ್ ಎಚ್.ಜೆ. ಬ್ರಾಂಕ್‌ಮನ್ ಎಂಬ ಅಧಿಕಾರಿಯು ಟಿ.ವೆಂಕಟಸುಬ್ಬಯ್ಯ ಹಾಗೂ ಬಿ.ರಾಮಸ್ವಾಮಿ ಎಂಬ ದೇಶೀಯರ ಸಹಾಯದಿಂದ ಅನುವಾದಿಸಿದುದು ವಿಶೇಷದ ಸಂಗತಿಯಾಗಿದೆ (ದೈವಕ್ರಿಯಾ ಸೂಚಕ, ೧೮೫೧). ಕೌಂಡಿಣ್ಯಾಸು ಜಿ.ಎಚ್. ಕರ್ಝ್‌ನ್ನನ ಈ ಕುರಿತ ಜರ್ಮನ್ ಕೃತಿಗಳನ್ನು ಕನ್ನಡಕ್ಕೆ ತಂದನು.

ಕ್ರೈಸ್ತ ಮತೀಯ ಸಾಹಿತ್ಯದಲ್ಲಿ ಪ್ರಶ್ನೋತ್ತರೋಪದೇಶಕ್ಕೆ (Catechism) ವಿಶಿಷ್ಟ ಸ್ಥಾನವಿದೆ. ಹೊಸದಾಗಿ ಮತಾಂತರ ಹೊಂದಿದವರ ದೃಢೀಕರಣಕ್ಕಾಗಿಯೂ ಕ್ರೈಸ್ತ ಶಾಲೆಗಳಲ್ಲಿ ಅಭ್ಯಾಸ ಮಾಡುವವರ ಧಾರ್ಮಿಕ ಶಿಕ್ಷಣಕ್ಕಾಗಿಯೂ ಇವು ರಚಿತವಾದವು. 'ಕುಮಾರೋಪದೇಶ' (೧೮೪೨). 'ಚಿಕ್ಕವರು ಮೊದಲಾಗಿ ಪಾಠ ಮಾಡತಕ್ಕ ವೇದಬೋಧನೆ' (ಬಿ.ಎಚ್.ರೈಸ್. ೧೮೫೦). 'ಭದ್ರವಾದ ಅಭ್ಯಂಗಕ್ಕೆ ಆಯಿತ್ತವಾಗಿರುವ ಜ್ಞಾನೋಪದೇಶ' (ರೋ.ಕೆಥಲಿಕ್ ಪ್ರಕಟಣೆ; ೧೮೬೮) ಮುಂತಾದ ಕೃತಿಗಳು ಪ್ರಶ್ನೋತ್ತರ ರೂಪವಾಗಿದ್ದು ಅಂದಿನ ದಿನಗಳಲ್ಲಿ ಉಪಯುಕ್ತ ಪ್ರಕಟಣೆಗಳೆನಿಸಿದವು.

Tracts ಎಂಬುದಾಗಿ ಕ್ರೈಸ್ತ ಪ್ರಪಂಚದಲ್ಲಿ ಪ್ರಸಿದ್ಧಿಯನ್ನು ಹೊಂದಿರುವ ಮತ ಪ್ರಬಂಧಗಳ ಪಡೆಯು ಬಹು ದೊಡ್ಡದು. ಇಲ್ಲಿಯೂ ಕೂಡ ಅನುವಾದಗಳೇ ಹೆಚ್ಚಿನ ಸಂಖ್ಯೆಯಲ್ಲಿವೆಯಾದರೂ ಸ್ವತಂತ್ರ ವಿವೇಚನೆಯು ತೋರಿಬಾರದೆ ಇಲ್ಲ. ಯೋಹಾನ್ ಲೇಯರನ 'ಸನ್ಮಾರ್ಗ ವಿಚಾರ' (೧೮೬೮) ಮತ್ತು ರಕ್ಷಣೋಪಾಯ (೧೮೬೬) ಇವು ಅನುವಾದ ಕೃತಿಗಳಲ್ಲವಾಗಿ ತೋರುತ್ತವೆ.

ಇಂಥ ಮತ - ಪ್ರಬಂಧಗಳ ಉದ್ದೇಶವು ಮೂರು ತೆರನಾಗಿದ್ದಿತು : ಸ್ವಮತದ ಹೆಚ್ಚಳವನ್ನು ತೋರ್ಪಡಿಸುವುದು; ಮತಾಂತರ ಹೊಂದಿದವರಿಗೆ ಧಾರ್ಮಿಕ ಶಿಕ್ಷಣವನ್ನು ಕೊಟ್ಟು ಅವರನ್ನು ಸನ್ಮಾರ್ಗಕ್ಕೆ ತೊಡಗಿಸುವುದು; ಮತ್ತು ಹಿಂದೂ ಧರ್ಮವನ್ನು ಟೀಕಿಸುವುದು. ಈ ಅಂಶಗಳನ್ನು ವಿಶದೀಕರಿಸಲು 'ನೀತಿಸಾರ'ವೆಂಬ (Decalogue) ಕೃತಿಯನ್ನು ಪರಿಶೀಲಿಸೋಣ. ಬೈಬಲಿನಲ್ಲಿ ಬರುವ Ten Commandments ಇವನ್ನು ಅದರಲ್ಲಿ ವಿವರಿಸಲಾಗಿದ್ದು ಬರೆದವನ ಹೆಸರನ್ನು ಕಾಣಿಸಿಲ್ಲ. (ಬಾಸಲ್ ಮಿಶನ್* ಪ್ರಕಟನೆ, ೧೮೭೭). ಅನೇಕ ದೃಷ್ಟಾಂತ ಕಥೆಗಳನ್ನೂ, ಗಾದೆಯ ಮಾತುಗಳನ್ನೂ ಕೊಟ್ಟಿರುವುದರಿಂದ ವಿಷಯವು ಚೆನ್ನಾಗಿ ಮನದಟ್ಟಾಗುವಂತಿದೆ. ತಂದೆ ತಾಯಿಯರನ್ನು ಸನ್ಮಾನಿಸಬೇಕೆಂಬ ೫ನೇ ನೀತಿಸೂತ್ರದ ಕೆಲ ಭಾಗವನ್ನು ಮಾದರಿಯೆಂದು ಇಲ್ಲಿ ಕೊಡುತ್ತೇವೆ:

"ಮನೆಯಲ್ಲಿ ಮುಖ್ಯಸ್ಥರಾದವರನ್ನು (ತಂದೆ ತಾಯಿಗಳನ್ನೂ ಯಜಮಾನ, ಯಜಮಾನಿಯರನ್ನೂ), ರಾಜ್ಯದಲ್ಲಿ ಮುಖ್ಯಸ್ಥರಾದವರನ್ನು (ರಾಜನನ್ನು, ರಾಜ್ಯಾಧಿಕಾರವುಳ್ಳ ಎಲ್ಲಾ ರಾಜ್ಯೋದ್ಯೋಗಸ್ಥರನ್ನು), ಸಭೆಯಲ್ಲಿ ಮುಖ್ಯಸ್ಥರಾದವರನ್ನು (ಗುರು, ಉಪಾಧ್ಯಾಯ ಮುಂತಾದವರನ್ನು) ಸನ್ಮಾನಿಸಬೇಕು. ಸನ್ಮಾನಿಸುವುದೆಂದರೆ ವಿನಯ, ವಿಧೇಯಪೂರ್ವಕವಾಗಿ ನಡಕೊಂಡು ಮಾನ ಮರ್ಯಾದೆ ಕೊಡುವದೂ ಪ್ರೀತಿ-ಸೇವೆ-ಶುಶ್ರೂಷೆಗಳನ್ನು ಮಾಡುವುದೂ; ಹೆತ್ತವರಾಗಲಿ ಯಜಮಾನರಾಗಲಿ ನಾಯಕನಾಗಲಿ ದೇವರ ವಾಕ್ಯಕ್ಕೂ ಚಿತ್ತಕ್ಕೂ ನೀತಿಗೂ ವಿರೋಧವಾದದ್ದೇನಾದರೂ ಹೇಳುವ ಅಥವಾ ಕೇಳುವ ಪಕ್ಷಕ್ಕೆ ಮಾತ್ರವೇ 'ಬಂಧುಗಳಿಗಿಂತ ಬಂಧು, ಮುಖ್ಯಸ್ಥರಿಗಿಂತ ಮುಖ್ಯಸ್ಥನು ದೇವರೇ' ಎಂತ ಅವರನ್ನು ಲಕ್ಷಿಸಿ ಕೇಳದೆ, ದೇವರನ್ನೇ ಲಕ್ಷ್ಯವಿಟ್ಟು ಕೇಳಿಯೂ ನೋಡಿಯೂ ನಡಕೊಳ್ಳಬೇಕು.

"ತನ್ನ ತಂದೆ ತಾಯಿಗಳಿಗೂ ಮಾವ ಅತ್ತೆಯರಿಗೂ ಪೆಟ್ಟು ತಿನ್ನಿಸುವವನು ತನ್ನ ಪೋರಗಳ ಕೈಯಲ್ಲಿ ತನಗೆ ಹೊಡೆಯಲಿಕ್ಕೆ ಬೆತ್ತವನ್ನು ಕೊಡುವವನಾಗುತ್ತಾನೆ.

---

* ಕೆಲವನ್ನು ಮಿಶನರಿಗಳೇ ಸೃಷ್ಟಿಸಿದಂತಿದೆ. ಉದಾ. ಪಾಪಾತ್ಮನನ್ನು ಪರಮಾತ್ಮನು ಶಿಕ್ಷಿಯನೆ? ನೀತಿಯುಳ್ಳವನು ಖ್ಯಾತಿಪಟ್ಟಾನು–ದೋಷಕೂಡಿದ ತೋಷವು ಕೇವಲ ಶೋಕಾಸ್ಪದವೇ–ಜಗದೀಶ್ವರನ ಮಹಿಮೆಯಿದ್ದರೆ ಜಗತ್ತೆಲ್ಲ ನನ್ನದು.

"ಮುದುಕಿಯಾದ ಅತ್ತೆಗೆ ಅನ್ನ ಬಸಿದ ನೀರನ್ನು ಬಕ್ಕರೆಯಲ್ಲಿ ಹಾಕಿ ಕುಡಿಸುವವಳು ತನಗೂ ಗಂಜಿ ನೀರನ್ನು ಬಕ್ಕರೆಯಲ್ಲಿ ಹೊಯಿದು ಕುಡಿಸುವ ಮರ್ಯಾದೆಯನ್ನು ತನ್ನ ಸೊಸೆಗೆ ಕಲಿಸಿ ಕೊಡುತ್ತಾಳೆ.

"ಬಹಳ ನಿಷ್ಠೂರನಾಗಿದ್ದ ಒಬ್ಬ ಮಗನು ತನ್ನಪ್ಪನನ್ನ ತಲೇ ಕೂದಲು ಹಿಡಿದು ಕಿತ್ತಾಡಿ ಕೋಣೆಯೊಳಗಿಂದ ಹೊರಗೆ ಎಳಕೊಂಡು ಬಾಗಿಲಿಗೆ ಬಂದು ಹೊಸ್ತಿಲನ್ನು ದಾಟಲಿಕ್ಕಿದ್ದಾಗ ತಂದೆ ನಗುತ್ತಾ ಅವನಿಗೆ 'ಈಗ ಬಿಡೋ.. ಮಗಾ! ಇದೇ ಹೊಸ್ತಿಲಲ್ಲಿ ನಾನೂ ನಿನ್ನಜ್ಜನನ್ನು ಹಾಗೆಯೇ ಕೂದಲು ಹಿಡಿದು, ಎಳಕೊಂಡು ಬಂದುಬಿಟ್ಟೆ' ಎಂಥೇಳಿ ತಡಿಸಿದನು."

'ವ್ಯಭಿಚಾರ ಮಾಡಬಾರದು' ಎನ್ನುವ ೭ನೆಯ ಸೂತ್ರದ ಅನುಸಾರ ಗೃಹಸ್ಥಾಶ್ರಮದ ಮಹತ್ವವನ್ನು ಎತ್ತಿ ಹಿಡಿದ ರೀತಿಯು ಮನೋಜ್ಞವಾಗಿದೆ : "ಗೃಹಸ್ಥಾಶ್ರಮವು ಒಂದು ಭದ್ರವಾದ ಗೃಹ ಎಂಬ ಹಾಗಾಗಿದ್ದುಳಿಯಬೇಕಾದರೆ ಅದರ ನಾಲ್ಕು ಗೋಡೆಗಳೆಂಬಂತಾದ್ದು ಚೆನ್ನಾಗಿರಬೇಕು. ಪೂರ್ವ ದಿಕ್ಕಿನ ಗೋಡೆಯೆಂದರೆ : ಪ್ರಾರ್ಥನೆ. ದಕ್ಷಿಣ ದಿಕ್ಕಿನದು : ಕಷ್ಟಾರ್ಜನೆ, ಪಶ್ಚಿಮ ದಿಕ್ಕಿನದು : ಧನಸಂರಕ್ಷಣೆ, ಉತ್ತರ ದಿಕ್ಕಿನದು : ಅನ್ಯೋನ್ಯ ಪ್ರೀತಿ." ಗೃಹಸ್ಥಾಶ್ರಮದಲ್ಲಿ ಇಷ್ಟಸಿದ್ಧಿ ಪ್ರಾಪ್ತಿಯಾಗಬೇಕಾದರೆ ನೀತಿಮಾರ್ಗದಲ್ಲಿಯೂ ದೇವ ಭಯಭಕ್ತಿಯಿಂದಲೂ ಮತಿಯಿಂದಲೂ ಅದರಲ್ಲಿ ಶೇರಬೇಕು. ಹೆತ್ತವರ (ಅಥವಾ ಹಿರಿಯರ) ಸಮ್ಮತಿಯೂ ಆಶೀರ್ವಾದವೂ ಸಹ ಇದಕ್ಕೆ ತಕ್ಕದ್ದಾಗಿದೆ. ಪರಂತು ಕೇವಲ ಬಾಲ್ಯಪ್ರಾಯದಲ್ಲಿಯೇ ವಿವಾಹವಾಗುವಂಥಾದ್ದು ಸರ್ವ ವಿಚಾರಗಳಲ್ಲಿ ನೀತಿಯೂ ಮತಿಯೂ ಕೆಟ್ಟಂಥಾ. . . .ವ್ಯಾಪಾರವಾಗಿರುತ್ತದೆ. ಮತ್ತು ಬರೀ ಬಾಲೆಯಾಗಿರುವ ಹುಡುಗಿ ಹಲ್ಲು ಉದುರಿ ಬಿದ್ದ ಮುದುಕನಿಗೆ ಮದುವೆಯಾಗು ವಂಥಾದ್ದು ಅದಕ್ಕಿಂತಲೂ ಮತಿಭ್ರಷ್ಟ, ನೀತಿಹೀನ ಕಾರ್ಯವಾಗಿದೆ. ವಿವೇಕ ವಿಚಾರಬುದ್ಧಿಯೂ ಸ್ವಾನುಮತಿಯೂ ಭಕ್ತಿಭಾವವೂ ಇಲ್ಲದೆ ಮದುವೆಯಾದವರಿಗೆ ಪಶ್ಚಾತ್ತಾಪವೂ ಶೋಕವೂ ಬೀಳದೆ ಹೋಗುವದು ಆನೇ [ಆನೆಯ] ಮುತ್ತಿನಷ್ಟು ದುರ್ಲಭವಾಗಿದೆ."

"ಹೆಂಡತಿ ಗಂಡನ ದಾಸಿಯಾಗಲಿ ಯಜಮಾನಿಯಾಗಲಿ ಅಲ್ಲಾ, ಅರ್ಧಾಂಗಿಯೂ ಸಹಾಯಕಳೂ ಮನೆಯ ಯಜಮಾನಿಯೂ ಆಗಿರಬೇಕು."

–ಇವೇ ಮುಂತಾದ ಹೇಳಿಕೆಗಳಲ್ಲಿ ಅಂದಿನ ದೇಶೀಯ ಕ್ರೈಸ್ತರಲ್ಲಿ ಇರಬೇಕಾದ ಸಾಮಾಜಿಕ ವಿಚಾರ ಧಾರೆಯನ್ನು ಅರಿತುಕೊಳ್ಳಬಹುದು.

ಸೆಮಿನರಿಯ ಅಭ್ಯಾಸ ವಿಷಯಗಳಲ್ಲಿ ಒಂದಾದ ಚರ್ಚ್ ಇತಿಹಾಸದ ಬಗ್ಗೆ ಕೆಲವು ಮಹತ್ವಪೂರ್ಣ ಪುಸ್ತಕಗಳು ಅನುವಾದಗೊಂಡವು. ಇವರ ಕುರಿತು ಗ್ರಂಥವನ್ನು ರಚಿಸಿದವರಲ್ಲಿ ಸುಪ್ರಸಿದ್ಧನಾದ ಜೋಸೆಫ್ ರೀವ್‌ನ ಕೃತಿಯನ್ನು ಬೌತೆಲೊ ಅನುವಾದಿಸಿ

ಪ್ರಕಟಿಸಿದನು (೧೮೬೭). ಇದು ರೋಮನ್ ಕೆಥಲಿಕರ ಕೃತಿಯಾದರೆ ಬಾಸೆಲ್ ಮಿಶನ್‌ದವರ ಕಿಟೆಲ್ ವಿರಚಿತ 'ಕ್ರೈಸ್ತಸಭಾ ಚರಿತ್ರೆ'ಯೂ ಇದೆ (೧೮೭೦). ಬೆಂಗಳೂರಿನ ಟ್ರ್ಯಾಕ್ಟ್ ಎಂಡ್ ಸ್ಕೂಲ್ ಬುಕ್ ಸೊಸೈಟಿಯವರು 'ಕ್ರಿಸ್ತಸಭೆಯ ಸಂಕ್ಷೇಪ ಚರಿತ್ರೆ'ಯನ್ನು ೧೮೮೩ರಲ್ಲಿ ಹೊರತಂದರು. ಆನಂದರಾಯ ಕೌಂಡಿಣ್ಯನು ಅನುವಾದಿಸಿದ 'ಸಂಕ್ಷೇಪವಾದ ಪುನಸ್ಥಾಪನೆಯ ಚರಿತ್ರವು' (೧೮೬೩) ಇಂಗ್ಲೆಂಡದಲ್ಲಿಯ Reformationದ ಇತಿಹಾಸವನ್ನು ಒಳಗೊಂಡಿದೆ.

ಗಮನಿಸಬೇಕಾದ ಅಂಶವೆಂದರೆ ಕೆಥಲಿಕ್ ಮತ್ತು ಪ್ರೊಟೆಸ್ಟಂಟ್-ಇವರ ಪರಸ್ಪರ ತಿಕ್ಕಾಟದ ಕಿಡಿಗಳು ಕನ್ನಡ ವಾಙ್ಮಯ ರಂಗದ ಮೇಲೂ ತೋರಿ ಬಂದುವು. 'ವೇದ ಮಾರ್ಪಡಿಸುವಿಕೆಯ ಖಂಡನೆ' ಯೆಂಬುದು ಕೆಥಲಿಕ್ ಪರಂಪರೆಗೆ ವಿರುದ್ಧವಾದ (Heresis) ಕಾರ್ಯಗಳನ್ನು ಖಂಡಿಸುವ ಕೃತಿಯಾಗಿದೆ. ಇದನ್ನು ಚಾರ್ಬೊನಾ ಬರೆದಿರಬಹುದು. ಮುಂದುವರಿದು ಚಾರ್ಬೊನಾ ಪ್ರೊಟೆಸ್ಟಂಟರ ಮಾರ್ಗವನ್ನು ನಿಷೇಧಿಸುವ ಕೃತಿಯೊಂದನ್ನು ತಮಿಳಿನಿಂದ ಅನುವಾದಿಸಿದ್ದನು (ಪ್ರೊತೆಸ್ತಾಂತ ಎಂಬ ಪತಿತರ ಮಾರ್ಗ-೧೮೬೮). ಇತ್ತ ಪ್ರೊಟೆಸ್ಟಂಟರೂ ಈ ದಿಶೆಯಲ್ಲಿ ಹೆಜ್ಜೆ ಇರಿಸಿದ್ದಾರೆ. 'ರೋಮ್ ಮತವನ್ನು ತೂಗುವ ತ್ರಾಸು' ಎಂಬ ಕೃತಿಯನ್ನು ಗಾಸ್ಟ್ ಎಂಬವನು ಬರೆದಿದ್ದಾನೆ (೧೮೮೭).

ಹೊಸದಾಗಿ ಕ್ರೈಸ್ತಮತವನ್ನು ಸೇರಿದವರ ದೃಢೀಕರಣ, ಅಭ್ಯಂಗ, ನಿತ್ಯಪ್ರಾರ್ಥನೆ, ಜನನ, ವಿವಾಹ, ಪ್ರಯಾಣ, ಮರಣ, ಇತ್ಯಾದಿ ಅವರ ಬದುಕಿನ ವಿವಿಧ ಪ್ರಸಂಗಗಳಲ್ಲಿಯ ಆರಾಧಾನಾಕ್ರಮವನ್ನು ಅಲ್ಪ ಸ್ವಲ್ಪ ವ್ಯತ್ಯಾಸಗಳೊಡನೆ ರೂಢಿಸಿಕೊಂಡು ಬಂದದ್ದನ್ನು ಪುಸ್ತಕ ರೂಪದಲ್ಲಿ ಹೊರತರಲಾಯಿತು. ಈ ಧಾರ್ಮಿಕ ವಿಧಿಗಳು ದೇಶೀಯರನ್ನು ಗಮನದಲ್ಲಿಟ್ಟುಕೊಂಡು ರಚಿತವಾದವುಗಳು. ಹಿಂದೂಗಳಲ್ಲಿ ಈ ಧಾರ್ಮಿಕ ವಿಧಿಗಳು ಪದ್ಯರೂಪದಲ್ಲಿವೆಯಾದರೆ ಕ್ರೈಸ್ತರವು ಗದ್ಯದಲ್ಲಿಯೆ ಹೆಚ್ಚಾಗಿ ಇವೆ.

ದೇವಾರಾಧನ ಕ್ರಮದಲ್ಲಿ ಪ್ರಾರ್ಥನೆಯು ಒಂದು ಮಹತ್ವದ ಅಂಗವಾಗಿದ್ದು ಅಂಥ ಕೆಲವು ಪ್ರಾರ್ಥನಾ ಪುಸ್ತಕಗಳು ಪ್ರತ್ಯೇಕವಾಗಿ ಪ್ರಕಟವಾಗಿವೆ. ನಾವು ತಿಳಿದಿರುವ ಪ್ರಾರ್ಥನೆಗಳಿಗಿಂತ ಇವು ಬೇರೆಯಾಗಿರುವ ಕಾರಣ 'ಹಿಂದೂ ಕ್ರೈಸ್ತರ ಕುಟುಂಬಗಳ ಪ್ರಾರ್ಥನೆಗಳು' ಎಂಬ ಪುಸ್ತಕದಿಂದ ಕೆಲ ಭಾಗವನ್ನು ವಿವರವಾಗಿ ಪರಿಶೀಲಿಸೋಣ. ಇದರಲ್ಲಿ ಪ್ರತಿದಿನ ಬೆಳಗ್ಗೆ ಮತ್ತು ಸಂಜೆಗೆ ಮಾಡಬೇಕಾದ ಪ್ರಾರ್ಥನೆಗಳನ್ನು ಹೇಳಿಯಾದ ಮೇಲೆ ದೀಕ್ಷಾಸ್ನಾನ, ಕೂಸಿನ ಜನನ, ಮದುವೆ, ಅಸ್ವಸ್ಥತೆ, ಮರಣ, ಇಲ್ಲವೆ ಯಾವುದಾದರೂ ಸುಖದುಃಖದ ಆ ಸಂದರ್ಭಗಳಲ್ಲಿ ಮಾಡಬೇಕಾದ ಪ್ರಾರ್ಥನೆಗಳು ಉಕ್ತವಾಗಿವೆ.

"ಪ್ರಾರ್ಥನೆ ಕೇವಲ ಅವಶ್ಯವಾದದ್ದೆಂದು ದೇವರ ವಾಕ್ಯವು ಬೋಧಿಸುತ್ತದೆ. ಇದನ್ನು ಮಾಡುವವರಿಗೆ ಫಲವುಂಟಾಗುವುದೆಂದು ಸಹ ದೇವರ ವಾಕ್ಯದಲ್ಲಿ ಹೇಳಿದೆ. ಹ್ಯಾಗೆಂದರೆ-ಬೇಡಿಕೊಳ್ಳಿರಿ ನಿಮಗೆ ದೊರೆಯುವುದು ; ಹುಡುಕಿರಿ, ನಿಮಗೆ ಸಿಕ್ಕುವುದು; ತಟ್ಟಿರಿ, ನಿಮಗೆ ತೆರೆಯುವುದು-ಎಂಬುವವೇ. ಆದಕಾರಣ ಕುಟುಂಬದ ಮುಖ್ಯರು ಪ್ರತಿದಿನವೂ ತಮ್ಮ ಮನೆಯವರ ಮಧ್ಯದಲ್ಲಿ ಕುಟುಂಬದ ಪ್ರಾರ್ಥನೆಯನ್ನು ಮಾಡಬೇಕು. ಕೈಲಾದರ ಸ್ವಂತ ಮಾತುಗಳಿಂದ ಪ್ರಾರ್ಥನೆ ಮಾಡುವುದು ಒಳ್ಳೇದು. ಆಗದಿದ್ದರೆ ಸ್ವಲ್ಪ ಸಹಾಯ ಬೇಕು. ಅಂಥವರಿಗೋಸ್ಕರ ಈ ಪುಸ್ತಕ ಬರೆಯಲ್ಪಟ್ಟಿದೆ."

ಈ ಪುಸ್ತಕದ ಉದ್ದಕ್ಕೂ ದೇಶೀಯ ಕ್ರೈಸ್ತರ ಕ್ಷೇಮ ಚಿಂತನೆಯೇ ಎದ್ದು ಕಾಣುತ್ತದೆ. ವಿಶೇಷತಃ ಹಿಂದುವೊಬ್ಬನು ಕ್ರೈಸ್ತಮತವನ್ನು ಸ್ವೀಕರಿಸಿಯಾದ ಮೇಲೆ ಹೊಸ ಧರ್ಮವೊಂದರಲ್ಲಿಯೇ ಶ್ರದ್ಧೆಯನ್ನು ಬೆಳೆಯಿಸಿಕೊಳ್ಳಬೇಕು; ಹಳೆಯದರ ಆಚಾರಗಳನ್ನು ಸಂಪೂರ್ಣವಾಗಿ ಬಿಟ್ಟುಕೊಡಬೇಕು-ಎಂಬ ನಿಲುಮೆಯಿಂದ ಬರೆದ ಮಾತುಗಳು ಅಲ್ಲಲ್ಲಿ ಕಾಣಿಸುತ್ತವೆ :

"ಈ ಲೋಕದಲ್ಲಿರುವ ನಿನ್ನ ಜನರೆಲ್ಲರನ್ನೂ ಆಶೀರ್ವದಿಸು. ಮುಖ್ಯವಾಗಿ ಹಿಂದೂ ದೇಶದಲ್ಲಿರುವ ಕ್ರೈಸ್ತರಿಗೋಸ್ಕರ ಪ್ರಾರ್ಥಿಸುತ್ತೇವೆ. ಅವರನ್ನು ಅಭಿವೃದ್ಧಿ ಮಾಡು. . . .ಪರಿಶುದ್ಧರಾಗಿಯೂ, ಸತ್ಯವಂತರಾಗಿಯೂ, ದಯಾಶಾಲಿಗಳಾಗಿಯೂ, ಪ್ರಾಮಾಣಿಕರಾಗಿಯೂ ಇರುವಂತೆ ಅವರನ್ನು ಪ್ರೇರೇಪಿಸು. ಹಿಂದೂ, ಮಹಮ್ಮದೀಯರೆಲ್ಲರನ್ನೂ ಆಶೀರ್ವದಿಸು(ಪು.೭) ನಮ್ಮ ದೇಶವನ್ನು ಆಶೀರ್ವದಿಸು. ನಮ್ಮ ಮಹಾರಾಣಿಯನ್ನು, ಅಧಿಕಾರಸ್ಥರನ್ನು ಸಹ ಆಶೀರ್ವದಿಸು (ಪು.೧೮). ನಾವು ವಿಗ್ರಹಾರಾಧನೆಗೂ ಜಾತಿಯ ಪದ್ಧತಿಗೂ ಮೂಢ ಆಚಾರಗಳಿಗೂ ತಿರಿಗಿ ಸಿಕ್ಕದ ಹಾಗೆ ನಮ್ಮನ್ನು ರಕ್ಷಿಸು (ಪು.೨೩). ಕ್ರೈಸ್ತಮತಕ್ಕೆ ಸೇರಿದ್ದರಿಂದ ಧಿಕ್ಕರಿಸಲ್ಪಟ್ಟವರ ಮೇಲೆ ಕನಿಕರವಿಡು. ಈ ಮತಕ್ಕೆ ಸೇರಿದ್ದಕ್ಕಾಗಿ ತಮ್ಮ ಕುಟುಂಬಗಳಿಂದಾಗಲಿ ನೆರೆಹೊರೆಯವರಿಂದಾಗಲಿ ಹಿಂಸಿಸಲ್ಪಟ್ಟ ಜನರಿಗೆ ನಿನ್ನ ಆದರಣೆಯನ್ನು ಆಶ್ರಯವನ್ನು ದಯಪಾಲಿಸು (ಪು.೪೫). ನಾವು ಹಿಂದೂ ಮತದಿಂದ ತಪ್ಪಿಸಿಕೊಂಡು ಒಳ್ಳೇ ಕುರುಬನ ಹಟ್ಟಿಗೆ ಸೇರಿ, ಅಲ್ಲಿ ಸುಖದಿಂದಲೂ ಸಂತೋಷದಿಂದಲೂ ಕ್ಷೇಮದಿಂದಲೂ ಇರುವುದಕೋಸ್ಕರ ಬಹು ಕೃತಜ್ಞತೆಯಿಂದ ಸ್ತುತಿಸುತ್ತೇವೆ" (ಪು.೪೭)

ಹಿಂದೂ, ಮಹಮ್ಮದೀಯರೆಲ್ಲರನ್ನೂ ಆಶೀರ್ವದಿಸು. ನಮ್ಮ ದೇಶವನ್ನೂ ಆಶೀರ್ವದಿಸು - ಎಂಬಲ್ಲಿಯ ಉದಾರಭಾವ ಅಪರೂಪವಾದದ್ದು.

ಪ್ರಾರ್ಥನೆಗಳು ಗದ್ಯದಲ್ಲಿವೆಯಾದರೂ ಚರ್ಚ್ ಮತ್ತು ಮನೆಗಳಲ್ಲಿ ಹಾಡಿಕೊಳ್ಳಲೆಂದು ಅನೇಕ ಗೀತೆಗಳು ರಚಿತವಾದದ್ದನ್ನು ಹಿಂದಿನ ಪ್ರಕರಣದಲ್ಲಿ ಕಾಣಿಸಿದ್ದೇವೆ

## 53 ಹಿಂದೂ ಧರ್ಮದ ಟೀಕೆ; ಪ್ರತಿ ಟೀಕೆ

ಸ್ವಮತ ಪ್ರಸಾರ ಕಾರ್ಯದಲ್ಲಿ ಅನ್ಯಮತ ಪಂಥದ ವಿಚಾರಗಳನ್ನು ಟೀಕಿಸುವುದು ಅಗತ್ಯವಾಗಿ ಮಾಡಬೇಕಾದ ಕಾರ್ಯವೆಂದು ಅಂದಿನ ಮಿಶನರಿಗಳು ಭಾವಿಸಿದ್ದರು. ಹಿಂದೂ ಧರ್ಮದ ವಿರುದ್ಧ ತಮ್ಮ ಲೇಖನಿಯನ್ನೆತ್ತುವುದರಲ್ಲಿ ಅವರು ವಿಶೇಷ ಪರಿಶ್ರಮವನ್ನು ತೋರಿದ್ದಾರೆ. ಜೊತೆಗೆ, ತಮ್ಮ ಬಾಂಧವರಿಗೆ ಹಿಂದೂ ಧರ್ಮದ ಪರಿಚಯವಿರಬೇಕೆಂಬ ದೃಷ್ಟಿಯಿಂದಲೂ ಕ್ರೈಸ್ತ – ಹಿಂದೂಧರ್ಮಗಳ ತುಲನೆಯನ್ನು ಅವರು ಕೈಕೊಂಡಿದ್ದಾರೆ.

ಜಿ.ವುರ್ತ್ ಇವನ 'ದ್ವಿಮತ ಪರೀಕ್ಷೆ' (೧೮೬೬) ಅಂಥದೊಂದು ಕೃತಿಯಾಗಿದೆ. ಅದಕ್ಕೆ ರೋಮನ್ ಕೆಥಲಿಕರ ಕೃತಿಯೊಂದು ಆಧಾರವಾಗಿದ್ದಿತು. ಕೆಥಲಿಕ್ ಮತ್ತು ಪ್ರೊಟೆಸ್ಟಂಟರ ಸೌಹಾರ್ದ ಸಂಬಂಧಕ್ಕೆ ಇದೊಂದು ಅಪೂರ್ವ ಉದಾಹರಣೆಯಾಗಿದೆ. ಹಿಂದೆ ಹೇಳಿದ Pice Papers ಮಾಲಿಕೆಯಲ್ಲಿ ಹಿಂದೂ ಧರ್ಮ, ಅದರ ಮತಗ್ರಂಥಗಳು, ಆಚಾರ ವಿಚಾರಗಳು–ಇವುಗಳ ವಿಮರ್ಶೆಯನ್ನು ಮಿಶನರಿಗಳು ಮಾಡಿದ್ದಾರೆ. ('ಜನ್ಮಾಂತರ ವಿಚಾರಣೆ'– ಮುಲೆನ್ಸ್ ಗ್ರೀನ್‌ವುಡ್‌ನ, 'ನರಕಯಾತನಾ ವಿವರಣ ಪುಸ್ತಕ' ಇ.)

ಹಿಂದೂ ಧರ್ಮದ ಕಟು ವಿಮರ್ಶೆಯನ್ನು ನಾವು 'ಕಿರಣ ಮಾಲಿಕೆ' ಅಥವಾ Bazar Book Series ದಲ್ಲಿ ಹೆಚ್ಚಾಗಿ ಕಾಣುತ್ತೇವೆ. ಇವುಗಳ ಆಧಾರದಿಂದಲೇ ಮಿಶನರಿಗಳು ಸಂತೆ, ಜಾತ್ರೆ ಸ್ಥಳಗಳಲ್ಲಿ ನಿಂತುಕೊಂಡು ಬಹಿರಂಗ ಬೋಧನೆಯನ್ನು ಮಾಡುತ್ತಿದ್ದರು. ಆಗಂತೂ ಹಿಂದೂಧರ್ಮವನ್ನು ಟೀಕಿಸುವುದು ಅವರ ಕ್ರಮವೇ ಆಗಿದ್ದಿತು. ಅವರ ಟೀಕೆಗೆ ಒಳಪಟ್ಟ ವಿಷಯಗಳೆಂದರೆ ಹಿಂದೂಜನರಲ್ಲಿಯ ವಿವಿಧ ಜಾತಿ ಮತಗಳು, ವಿಗ್ರಹ ಪೂಜೆ ಹಾಗೂ ಮೂಢನಂಬಿಕೆಗಳು. 'ಜಾತಿ ವಿಚಾರಣೆ'. 'ಮತವಿಚಾರಣೆ' ಪುಸ್ತಕಗಳನ್ನು ಮೆವ್‌ಗ್ಲಿಂಗನು ೧೮೫೦ಕ್ಕೆ ಮುಂಚೆಯೇ ಪ್ರಕಟಿಸಿದ್ದನು. ಜಾತಿಮತಗಳ ಕುರಿತು ಬಾಸೆಲ್ ಮಿಶನ್‌ದವರು 'ಮತಭೇದ ರತ್ನಾಕರ' ಮತ್ತು 'ವಜ್ರಸೂಚಿ' (Needle of Adamant: Original divine institution of caste, examined and refuted) ಎಂಬ ಇನ್ನೆರಡು ಪುಸ್ತಕಗಳನ್ನು ಪ್ರಕಟಿಸಿದರು. 'ಕುಲಾಚಾರ ಪರೀಕ್ಷೆ' ಎಂಬ ಇದೇ ವಿಷಯದ ಪುಸ್ತಕವು ವೆಸ್ಲೆಯನ್ನರಲ್ಲಿ ಪ್ರಕಟವಾಗಿದೆ. 'ವೇದದಲ್ಲಿ ಏನಿದೆ?' ಎಂಬ, ಮರಾಠಿಯಿಂದ ಅನುವಾದಗೊಂಡ ಕೃತಿಯನ್ನೂ ಬಾಸೆಲ್ ಮಿಶನ್ನಿನರು ವಿಶೇಷವಾಗಿ ಪ್ರಸಾರಗೊಳಿಸಿದರು.

ಹಿಂದೂಗಳಲ್ಲಿ ಬ್ರಾಹ್ಮಣರೇ ಮಿಶನರಿಗಳ ಗಮನವನ್ನು ಹೆಚ್ಚಾಗಿ ಸೆಳೆದಿದ್ದಾರೆ. ಓರ್ವ ಶಾಸ್ತ್ರಿ ಮತ್ತು ಒಬ್ಬ ಮಿಶನರಿ ಇವರ ನಡುವಿನ ಸಂಭಾಷಣಾರೂಪದ ಪುಸ್ತಕವೊಂದು ೧೮೪೯ರಷ್ಟು ಹಿಂದೆಯೇ ಬಳ್ಳಾರಿಯಿಂದ ಪ್ರಕಟವಾಯಿತು. 'ಬ್ರಾಹ್ಮಣರು ಯಾರು?

ಅವರ ಹಕ್ಕೇನು?' ಎಂದು ಪ್ರಶ್ನಿಸಿದ Pice ಪುಸ್ತಿಕೆಯೊಂದು ಪರಿಶೀಲನೆಗೆ ಅರ್ಹವಾಗಿದೆ. ಬ್ರಾಹ್ಮಣರ ಶ್ರಾದ್ಧ ಕರ್ಮ ಮುಂತಾದವುಗಳೂ ಅವರ ಟೀಕೆಗೆ ಗುರಿಯಾಗಿವೆ.

ಬಾಸೆಲ್ ಮಿಶನ್ ಜನರಿಗೆ ಉತ್ತರ ಕರ್ನಾಟಕದಲ್ಲಿಯ ಲಿಂಗಾಯತರ ಸಂಪರ್ಕ ಬಂದುದರಿಂದ ಅವರ ಮತವನ್ನೂ ಟೀಕೆಗೆ ಗುರಿಪಡಿಸಿ, 'ಲಿಂಗಾಯತ ಮತವಿಚಾರ' (ಕ್ರಿಶ್ಚಿಯನ್ ಚೆನ್ನಪ್ಪ ಕೃತ : ೧೮೭೪) ಮತ್ತು 'ಲಿಂಗಾಯತ ಮತಕ್ಕಿಂತ ಉತ್ಕೃಷ್ಟ ಮಾರ್ಗ'-ಎಂಬೆರಡು ಕೃತಿಗಳನ್ನು ಅವರು ಪ್ರಕಟಿಸಿದರು. ಅದರಂತೆ ಮುಸಲ್ಮಾನ್ ಧರ್ಮವೂ ಅವರ ವಿಮರ್ಶೆಗೆ ಒಳಗಾಗಿದ್ದಿತು. ('ಇಸ್ಲಾಂ ಅಥವಾ ಮಹಮ್ಮದಿ ವೃತ್ತವು', ೧೮೮೯).

ದೇವನೊಬ್ಬನೇ ; ಅವನನ್ನು ನೂರಾರು ದೇವತೆಗಳ ವಿಗ್ರಹ ರೂಪದಲ್ಲಿ ಪೂಜಿಸಬಾರದೆನ್ನುವುದು ಕ್ರೈಸ್ತಧರ್ಮದಲ್ಲಿ ಎದ್ದು ಕಾಣುವ ಬೋಧನೆಯಾಗಿದೆ. ಆ ಕಾರಣದಿಂದ ಹಿಂದೂ ಧರ್ಮದ ದೇವ, ದೇವತೆಗಳೂ ವಿಗ್ರಹಗಳೂ ಅವರ ಸುಲಭ ಟೀಕೆಗೆ ಗುರಿಯಾದವು. 'ವಿಗ್ರಹಾರಾಧನೆಯ ಕುರಿತು', 'ದೇವವಿಚಾರಣೆ' ಮತ್ತು 'ದೈವಪರೀಕ್ಷೆಯು' ಎಂಬ ಮಿಶನರಿ ಪುಸ್ತಕಗಳನ್ನು ಈ ಸಂದರ್ಭದಲ್ಲಿ ಹೆಸರಿಸಬೇಕು. ಮೇಲೆ ಕಾಣಿಸಲಾದ 'ನೀತಿಸಾರ'ದಲ್ಲಿಯೂ ವಿಗ್ರಹಾರಾಧನೆಯ ಟೀಕೆ ಬಂದಿದೆ.

"ವಿಗ್ರಹಾರಾಧಕರ ದೇವರು (ಬೊಂಬೆ) ಮನುಷ್ಯನ ಕೈಕೆಲಸವೇ. ಅಂಥಾ ದೇವರಿಗೆ ಬಾಯಿಯುಂಟು. ಆದರೆ ಮಾತಾಡುವುದಿಲ್ಲಾ; ಕಣ್ಣೂ ಉಂಟು, ಆದರೆ ಕಾಣುವುದಿಲ್ಲಾ; ಕಿವಿ ಸಹ ಉಂಟು. ಆದರೆ ಕೇಳದ್ದು : ಮೂಗೊ? ಮೂಗು ಸಹ ಉಂಟು, ಆದರೆ ಮೂಸಿ ನೋಡದ್ದು : ಕೈಕಾಲು ಉಂಟು, ಆದರೆ ಮುಟ್ಟೊ ಮಾತಾಗಲಿ, ನಡೆಯುವ ಮಾತಾಗಲಿ ಇಲ್ಲವೇ ಇಲ್ಲಾ."

ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಪ್ರಶ್ನೆ ಕೇಳುವ ಕ್ರಮದಿಂದ ಮಂಡಿಸಿದ ವಾದಸರಣಿಯನ್ನು ಗಮನಿಸಬೇಕು. ಹೀಗೆಯೇ ಕಾಶಿ, ತಿರುಪತಿ, ಪುರಿ ಮುಂತಾದ ಕ್ಷೇತ್ರಗಳಿಗೆ ಯಾತ್ರೆ ಹೋಗುವುದು ಮೌಢ್ಯದ ಕೆಲಸವೆಂಬುದಾಗಿ ಟೀಕಿಸಿ ಒಂದೊಂದು ಪುಸ್ತಕವನ್ನು ಬರೆದಿದ್ದಾರೆ. ಭಾರತೀಯ ದೇವದೇವತೆಗಳಲ್ಲಿ ಶ್ರೀಕೃಷ್ಣನು ಬಲು ಸುಲಭವಾಗಿ ಮಿಶನರಿಗಳ ನಿಂದೆಗೆ ಗುರಿಯಾಗಿದ್ದಾನೆ. ಬಾಬಾ ಪದಮಂಜಿಯು 'ಕೃಷ್ಣ, ಕ್ರಿಸ್ತ ಇವರು ಹೆಚ್ಚು ಕಡಿಮೆ' ಎಂಬ ವಿಷಯದಲ್ಲಿ ಬರೆದಿದ್ದ ಮರಾಠಿ ಪುಸ್ತಕವು ಕನ್ನಡದಲ್ಲಿಯೂ ಬಂದಿತು.

'ವಿಕೀರ್ಣ ಸುಭಾಷಿತ ಪ್ರಸಂಗ ಶತಕ'ವೆಂಬ ಪುಸ್ತಕದಲ್ಲಿ ೧೦೭ ಸಂಸ್ಕೃತ ಶ್ಲೋಕಗಳನ್ನು ಆಯ್ದು, ಅರ್ಥಸಹಿತವಾಗಿ ಕೊಡಲಾಗಿದೆ. ಕ್ರೈಸ್ತಮತಕ್ಕೆ ಅನುಕೂಲಿಸುವಂತಹ ಇಲ್ಲವೆ ಹಿಂದೂಧರ್ಮವನ್ನು ತೆಗಳುವುದಕ್ಕೆ ಆಸ್ಪದವಿರುವ ಪದ್ಯಗಳನ್ನಷ್ಟೆ ಅದರಲ್ಲಿ ತೆಗೆದುಕೊಂಡಿದ್ದಾರೆ. ೯ನೆಯ ಶ್ಲೋಕದಿಂದ ಈ ತೆಗಳಿಕೆ ಹೆಚ್ಚುತ್ತ ನಡೆದಿದೆ. 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಎಂಬ

ಗೀತಾ ವಾಕ್ಯದ ಅರ್ಥವನ್ನು ಕೊಟ್ಟ ಮೇಲೆ 'ಹಾಗೆ ಹೇಳುವ ಕೃಷ್ಣನು ದೇವರೆ? ಅದಕ್ಕೆ ತಕ್ಕ ಕ್ರಿಯೆ (ಯೋಗ್ಯತೆ) ಬೇಕಲ್ಲವೊ? ಆತ ಕಪಟ ನಾಟಕ, ಯೇಸು ಅಣುಮಾತ್ರವೂ ಅಂಥವನಲ್ಲ–'ಎಂದದ್ದಾಗಿದೆ. ಅಲ್ಲಿಂದ ಬ್ರಹ್ಮ, ವಿಷ್ಣು, ಮಹೇಶ್ವರ, ಗಣಪತಿ–ಮುಂತಾದವರ ಟೀಕೆ ಬರುತ್ತದೆ. ಹೀಗೆ ಸವಿವರದ ಟೀಕೆ ಮಾಡಿದವ ದೇಶೀಯನೇ ಆದ ಕ್ರಿಸ್ತಾನುಜ ವತ್ಸಾ !

ಈ ಬಗೆಯ ಬರವಣಿಗೆಗೆ ಉದಾಹರಣೆಯೆಂದು ಮೆವ್‌ಗ್ಲಿಂಗನ 'ಮತ ವಿಚಾರಣೆ'ಯನ್ನು ತುಸು ವಿವರವಾಗಿ ನೋಡೋಣ. ಈ ಕೈಯಾಕಾರದ ಹೊತ್ತಗೆಯು ಕ್ರೈಸ್ತಮತೀಯ ಪ್ರಬಂಧಗಳಲ್ಲಿ ಹೆಚ್ಚು ಪ್ರಾಚೀನವಾದುದು. 'ಕೋರ್ಟ ಅಧಿಕಾರಸ್ಥನಾದ ನರಸಿಂಹಭಟ್ಟನೂ, ಅವನ ಮಗನಾದ ರಾಮಭಟ್ಟನೂ, ನೆರೆಮನೆಯಲ್ಲಿರುವ ವರ್ತಕನಾದ ಅಬ್ದುಲ್ಲನೂ ಮಾಡಿದ ಸಂಭಾಷಣೆಯ ಪುಸ್ತಕ'ವಿದು. ಮಗ ರಾಮಭಟ್ಟನು ಪಾದ್ರಿಯೊಬ್ಬನ ಪ್ರಸಂಗವನ್ನು ಕೇಳಿ ಬಂದು ಅದನ್ನು ಮನೆಯಲ್ಲಿ ವರದಿ ಮಾಡುತ್ತಾನೆ. "ಅಲ್ಲಿ ಏಕೆ ಹೋದಿ?" ಎಂದು ತಂದೆಯು ಅವನನ್ನು ಹೊಡೆಯಹೋದಾಗ ಅಬ್ದುಲ್ಲನು ಪ್ರವೇಶಿಸುತ್ತಾನೆ. 'ದೇವರು ಒಬ್ಬನೇ. ಯೇಸು ಇಲ್ಲವೆ ಮಹಮ್ಮದನು ಅವನ ಪ್ರತಿನಿಧಿ' ಎಂಬ ಮಟ್ಟಿಗೆ ಕ್ರೈಸ್ತ ಮುಸಲ್ಮಾನ ಮತಗಳಲ್ಲಿ ಸಾಮ್ಯವಿದ್ದದ್ದನ್ನು ಉಪಯೋಗಿಸಿಕೊಂಡು, ಅಬ್ದುಲ್ಲನೇ ಕ್ರೈಸ್ತ ಧರ್ಮವನ್ನು ಪುರಸ್ಕರಿಸುವಂತೆ ಮಾಡಿದ್ದಾನೆ. ಇತ್ತ, ಮುಸಲ್ಮಾನರಂತೆ ತಾವು ಒತ್ತಾಯದಿಂದ ಮತಾಂತರ ಮಾಡುವವರಲ್ಲ–ಎಂಬುದನ್ನು ಬಿಂಬಿಸಲು, ಮೆವ್‌ಗ್ಲಿಂಗನು ರಾಮಭಟ್ಟನಿಂದ ಅಬ್ದುಲ್ಲನ ಟೀಕೆ ಮಾಡಿಸಿದ್ದಾನೆ!

'ಪಾದ್ರಿಗಳು ಮೋಸಗಾರರು' ಎಂದು ನರಸಿಂಹಭಟ್ಟನು ಮಾಡಿದಾಗ, ರಾಮನು 'ಅಪ್ಪಾ, ಅವರು ಇಂಥ ಮೋಸಗಾರರಾದರೆ, ನನಗೆ ದಿನಕ್ಕೆ ಎರಡು ಘಂಟೆವರೆಗೆ ಆ ಪಾದ್ರೆ ದೊರೆಗಳ ಮನೆಗ ಹೋಗಿ, ವಿಲಾಯತೀ ವಿದ್ಯೆಗಳನ್ನೂ ಇಂಗ್ಲಿಷ್ ಭಾಷೆಯನ್ನೂ ಕಲೀಯೆಂತ ಹೇಳಿದ್ದು ಯಾಕೆ? ಆಮೇಲೆ ಅ ಪಾದ್ರೆ ದೊರೆಗಳಿಗೆ ನೋಡಿದರೆ, ನೀವು ಯೆದ್ದು ನಿಂತು ಸಲಾಮು ಮಾಡಿ, ಬಹಳ ಮರ್ಯಾದೆ ಮಾಡುವುದು ಯಾಕೆ?" ಎಂದು ಕೇಳುತ್ತಾನೆ! ಮತ್ತು ಕೆಲ ಜನರು ಆಡುವಂತೆ, ಪಾದ್ರಿಗಳು ಸರಕಾರದಿಂದ ಹಣ ತೆಗೆದುಕೊಂಡು ಅದಕ್ಕಾಗಿ ಮತಪ್ರಚಾರ ಮಾಡುವವರಲ್ಲ ಎಂಬುದಾಗಿ ವಾದಿಸುತ್ತಾನೆ. ಮೆವ್‌ಗ್ಲಿಂಗ್ ಹೀಗೆ ಒಳ್ಳೇ ಯುಕ್ತಿಯುತವಾಗಿ ಸಂಭಾಷಣೆಯನ್ನು ಹೆಣೆದಿದ್ದಾನೆ. ಅಲ್ಲಿಂದ ಪಾದ್ರಿಯು 'ಹೀಗೆ ಹೇಳಿದ' ಎಂಬ ಸರಣಿಯಲ್ಲಿ ಹಿಂದೂ ಮತದ ಆಚಾರ ವಿಚಾರಗಳ ಟೀಕೆ ಇದೆ. ಪಾದ್ರಿಯ ಟೀಕೆಗೆ ಪ್ರತಿವಾದ ಸಾಧ್ಯವಿಲ್ಲವೆಂಬುದನ್ನು ಬಿಂಬಿಸಲು, ನರಸಿಂಹಭಟ್ಟನ ಬಾಯಿಯಿಂದ "ಈಗ ಹೊತ್ತಾಯಿತು. ಆಮೇಲೆ ಹೇಳುವೆ". ಎಂದು ನುಡಿಸಿದ್ದಾನೆ.

ಹಿಂದೂ ಧರ್ಮದ ತತ್ವಗಳನ್ನು ತುಸು ತಿಳಿದುಕೊಂಡ ಯಾವನೂ ಮಿಶನರಿ ಜನರ ಈ ಬಗೆಯ ಟೀಕೆಗೆ ಚೆನ್ನಾಗಿ ಉತ್ತರ ಕೊಡುವುದಲ್ಲದೆ, ಅಂಥದೇ ಖಂಡನೆಯನ್ನು ಕ್ರೈಸ್ತ ಮತ ವಿಚಾರದಲ್ಲಿ ಮಾಡಲೂ ಬಹುದಿತ್ತು. ಪರಸ್ಪರ ವಾದದಲ್ಲಿ ಹಾಗೆ ಮಾಡಿ, ಮಿಶನರಿಗಳನ್ನು ಸುಮ್ಮನಾಗಿಸಿದ ಉದಾಹರಣೆಗಳಿಗೆ ಕೊರತೆಯಿಲ್ಲ. ಆದರೆ ಗ್ರಂಥಸ್ಥವಾಗಿ ಕನ್ನಡದಲ್ಲಿ ಉಳಿದುಕೊಂಡದ್ದು ಕಡಿಮೆ. ಮಾಧವಾನಂದಸ್ವಾಮಿ ಎಂಬವರು 'ಬೈಬಲ್ ಅತ್ಯಾಚಾರ', 'ಕಪಟೋಪದೇಶಕರು ಯಾರು?' ಎಂಬೆರಡು ಪುಸ್ತಕಗಳನ್ನು ಹೊರತಂದರು. 'ಹಿಂದೂ ಬಾಂಧವರಿಗೆ ಬೈಬಲಿನಲ್ಲಿ ಇರತಕ್ಕ ಅಸಂಗತಗಳನ್ನು ಹೊರಪಡಿಸುವುದು ಸ್ವಧರ್ಮದಲ್ಲಿ, ಇಂಥ ಅಸಂಗತಗಳು ಇಲ್ಲವಾದ್ದರಿಂದಲೂ ಅಭಿಮಾನ ಹುಟ್ಟುವುದಕ್ಕೋಸ್ಕರ' ಇವುಗಳನ್ನು ಬರೆದುದಾಗಿ ಲೇಖಕರು ಹೇಳಿದ್ದಾರೆ. ಪರಧರ್ಮ ನಿಂದೆಯು ನಮ್ಮಲ್ಲಿ ಹೇಳಿಲ್ಲವಾದರೂ ಕ್ರೈಸ್ತ ಮತದವರು ನಮ್ಮ ಮತವನ್ನು ನಿಂದಿಸುವರಾದ್ದರಿಂದ, ಅನಿವಾರ್ಯವಾಗಿ ಈ ಲೇಖನ ಕಾರ್ಯ ಮಾಡಬೇಕಾಗಿದೆ- ಎಂಬ ಸಮರ್ಥನೆ ನೀಡಿದ್ದಾರೆ.

ಈ ಪ್ರಕಟನೆಗಳಿಗೆ ಮುಂಚೆ ಹಲವಾರು ಇಂಥ ಲೇಖನಗಳು ಅಂದಿನ ಪತ್ರಿಕೆಗಳಲ್ಲಿ ಪ್ರಕಟವಾದದ್ದಿದೆ. 'ಹಿಂದೂ ಮತಾಭಿಮಾನಿ' ಯಂಥ ಪತ್ರಿಕೆ ಕ್ರೈಸ್ತಮತ ಖಂಡನೆಯನ್ನೇ ಪ್ರಮುಖವಾಗಿ ಇಟ್ಟುಕೊಂಡಿದ್ದಿತು. ಅದರ ಪ್ರಥಮ ಸಂಚಿಕೆಯಲ್ಲಿ 'ಹಿಂದೂ ಮಿಷನ್' ಸ್ಥಾಪನೆಯಾಗಬೇಕೆಂಬ ಸೂಚನೆ ಇದೆ. 'ಬೈಬಲ್‌ನಲ್ಲಿ ಸಂದೇಹಗಳು' ಎಂಬ ಲೇಖನ ಬರೆದು, ಅದಕ್ಕೆ ಉತ್ತರ ಕೊಡಲೆಂದು ಅನೇಕ ಮಿಶನರಿಗಳಿಗೆ ಕಳಿಸಿದಾಗ, ಯಾವ ಮಿಶನರಿಯೂ ಮುಂದೆ ಬರಲಿಲ್ಲವಂತೆ. ಹಿಂದೂ ಶಾಸ್ತ್ರ ಗ್ರಂಥಗಳನ್ನೂ, ಪುರಾಣ ಕಥೆಗಳನ್ನೂ ಮಿಶನರಿಗಳು ಟೀಕಿಸುತ್ತಿದ್ದಂತೆಯೇ ಬೈಬಲ್ಲಿನಲ್ಲಿಯ ವಿಸಂಗತಿಗಳನ್ನು ಎತ್ತಿಕೊಂಡು ಮುಂದಿನ ಹಲವಾರು ಸಂಚಿಕೆಗಳಲ್ಲಿ ಟೀಕಿಸಿದ್ದು ಕಂಡುಬರುತ್ತದೆ. ಬೈಬಲ್ಲಿನ ಉತ್ಪತ್ತಿಕಾಂಡದ ೧-೧೮ರ ವಿಚಾರದ ಮೇಲೆ ಬಂದ ಟೀಕೆ ಇಂತಿದೆ :

"ಸೂರ್ಯನ ಹುಟ್ಟದಿರುವಿಕೆಯೂ ಸೂರ್ಯಾಕರ್ಷಣೆಯಿಲ್ಲದೆ ಪೃಥ್ವಿಯು ನಿಂತಿತ್ತೆಂಬುದೂ ಬಹು ಶಾಸ್ತ್ರ ವಿರೋಧವಾಗಿರುತ್ತೆ. ಕೆಳಗಿನ ಸಮುದ್ರದ ನೀರಿನಂತೆ ಮೇಘ ಮಂಡಲವೂ ಉಪ್ಪುನೀರಾದದ್ದೆಂಬುದೂ ಇಷ್ಟು ಮಹೋನ್ನತ ನೀರು ಅಲ್ಲಿರುತ್ತದೆಂಬುದೂ ಮೇಘಮಂಡಲಶಾಸ್ತ್ರಕ್ಕೆ ವಿರೋಧವಾಗುತ್ತೆ. ಜಲದ ಅನಂತರ ವಾಯು ಅನೇಕ ಕಾಲಾನಂತರ ಸೃಷ್ಟಿಯಾಗಿ ಅರ್ಧ ನೀರನ್ನೆತ್ತಿತೆಂಬುದು ವಾಯುಮಂಡಲಶಾಸ್ತ್ರಕ್ಕೆ ವಿರೋಧವಾಗುತ್ತದೆ. ಕೆಳಗಿನ ನೀರೆಲ್ಲಾ ಒಣಗಿ ನೆಲ ಕಾಣಲ್ಪಡಲು ಒಂದೇ ಕಡೆ ಕೂಡಿರುವುದೆಂದರೆ ಪದಾರ್ಥ ವಿಜ್ಞಾನಶಾಸ್ತ್ರಕ್ಕೆ ವಿರೋಧವಾಗುತ್ತದೆ.

"೧೧ ರಿಂದ ೧೩ರ ವರೆಗೆ ಹುಲ್ಲು, ಪಲ್ಯ ಮೊದಲಾದ ಸಸ್ಯಾದಿಗಳನ್ನು ಮೂರನೇ ದಿನದಲ್ಲಿ ಸೃಷ್ಟಿಸಿದ್ದೆಂಬುದೂ ಬಹು ವಿರೋಧವಾಗುತ್ತದೆ. ಯಾಕೆಂದರೆ

ಸೂರ್ಯನ ಉಷ್ಣತ್ವವು ಇಲ್ಲದೆ ಸಸ್ಯಗಳ ಮೊಳೆಯುವಿಕೆಯೂ ವಾಯುವು ಮೇಘವನ್ನು ಹೊರುವಿಕೆಯೂ ಮೇಘವು ಸ್ವವ್ಯಾಪಾರದಲ್ಲಿ ಪ್ರವರ್ತಿಸುವಿಕೆಯೂ ಯಾವುದೂ ಆಗದು. ". .ಆಕಾಶದಲ್ಲಿನ ಸೂರ್ಯಾದಿಗಳನ್ನು ಸೃಷ್ಟಿಸಿದ ನಾಲ್ಕನೇ ದಿವಸದ ವಿವರಣೆಯಿಂದ ಎರಡು ಬೆಳಕುಗಳು ದೊಡ್ಡವು, ಬಾಕಿದೆಲ್ಲಾ ನಕ್ಷತ್ರಗಳೆಂಬುದು astronomy ಸಿದ್ಧಾಂತ ಶಾಸ್ತ್ರಕ್ಕೆ ವಿರೋಧವಾಗುತ್ತದೆ. . .ಆರು ದಿನ ಸೃಷ್ಟಿಯಲ್ಲಿ ಐದು ದಿನ ಸೃಷ್ಟಿಯು ಈ ಪೃಥ್ವಿ ವಿಷಯಕ್ಕೂ ಒಂದು ದಿನದಲ್ಲಿ ಮಾತ್ರ ಪೃಥ್ವಿಗಿಂತಲೂ ಕೋಟ್ಯಾಂತರ ಪಾಲು ದೊಡ್ಡ ದೊಡ್ಡ ಗೋಳಗಳಾದ ಅಂಥಾ ಕೋಟ್ಯಾಂತರ ಗ್ರಹ ನಕ್ಷತ್ರಗಳ ಸೃಷಿಗೂ ಅನುಕೂಲಿಸಿದ್ದು ನೋಡಿದರೆ ಬರವಣಿಗೆಯ ಚಮತ್ಕಾರಕ್ಕೆ ಎಷ್ಟು ಆಶ್ಚರ್ಯಪಟ್ಟರೂ ತೀರತಕ್ಕುದಲ್ಲ."

ಪಾಶ್ಚಾತ್ಯರ ವಿಜ್ಞಾನ ಶೋಧಗಳಿಂದಲೇ ಅವರ ಬೈಬಲಿನ ಅಂಶಗಳನ್ನು ಖಂಡಿಸಿದ ಈ ಬಗೆ ಮನೋಜ್ಞವಾಗಿದೆ. ಮುಂದುವರಿದು "ಈ ಮೋಶೆಯ ಪಂಚಗ್ರಂಥ ನಿರ್ಮಾಣ ಕಾಲದಲ್ಲಿಯೇ ನಮ್ಮ ಹಿಂದೂಗಳು ತುಂಬ ನಾಗರೀಕತೆಯಿಂದ ಜ್ಯೋತಿಷ, ಸಿದ್ಧಾಂತಶಾಸ್ತ್ರಗಳನ್ನು ಕಂಡುಹಿಡಿದಿದ್ದರು" ಎಂದು ಅದರಲ್ಲಿ ಹೇಳಿದೆ.

ಆದರೆ ದೇಶೀ ಕ್ರಿಸ್ತಿಯರ ಸಂಖ್ಯೆ ಹೆಚ್ಚಿದಂತೆ ಹಾಗೂ ಪಾಶ್ಚಾತ್ಯ ಶಿಕ್ಷಣವು ಹಬ್ಬುತ್ತ ನಡೆದಂತೆ ಈ ಬಗೆಯ ಟೀಕೆ – ಪ್ರತಿಟೀಕೆಗಳು ತಮ್ಮ ತೀವ್ರತೆಯನ್ನು ಕಳೆದುಕೊಂಡವು. ಈ ಧಾರ್ಮಿಕ ವಾದ-ಪ್ರತಿವಾದ ಏನೇ ಇರಲಿ, ಯಾವುದೊಂದು ವಿಚಾರ ಸಮರ್ಥನೆಗಾಗಿ ಗದ್ಯವನ್ನು ಪ್ರಭಾವಶಾಲಿಯಾಗಿ ಬಳಸಲಾಯಿತು ಎಂಬ ಮಾತು ಮಾತ್ರ ನಮಗೆ ಮಹತ್ವದ್ದು.

## 54 ಕಥನ, ಇತ್ಯಾದಿ

ಕ್ರೈಸ್ತ ತತ್ವಗಳನ್ನು ಕಥೆಗಳ ಮೂಲಕ ಬೋಧಿಸುವ ಉದ್ದೇಶವು ಸ್ಪಷ್ಟವೇ ಇದೆ. ಹೇಳಬೇಕಾದ ವಿಚಾರ ಸ್ಪಷ್ಟತೆಗೂ ಅದು ಚೆಲುವಾಗಿ ತೋರುವುದಕ್ಕೂ ಕಥೆಯಂತಹ ಸಾಧನ ಇನ್ನೊಂದಿಲ್ಲ. ಬೈಬಲ್ ಅನೇಕ ಕತೆಗಳಿಂದ ಕೂಡಿದ್ದು ಇಡೀ ಗ್ರಂಥವನ್ನೇ ಕಥಾಮಾಲೆಯಾಗಿ ಬರೆಯುವುದು ಸಾಧ್ಯ. ಬಾಸೆಲ್ ಮಿಶನ್‌ದವರು ಹಾಗೆ ಮಾಡಿ ಪೂರ್ವ ನಿರ್ಧಾರದ ಹಾಗೂ ನವನಿರ್ಧಾರದ ಎರಡು ಕಥನ ಸಂಪುಟಗಳನ್ನು ಚಿತ್ರಸಹಿತವಾಗಿ ಪ್ರಕಟಿಸಿದ್ದಾರೆ. ಇವಲ್ಲದೆ ಅದರಲ್ಲಿಯ ಕೆಲವು ಕತೆಗಳನ್ನು ಬಿಡಿಯಾಗಿಯೂ ಹೊರತಂದಿದ್ದಾರೆ. (ಉದಾ : 'ಕಡೆಗೆ ವಜೀರನಾದ ಯೋಸೆಫನೆಂಬ ಯುವಗೋಪಾಲರತ್ನ; ದಾನಿಯೇಲನೂ ಅವನ ಜೊತೆಗಾರನೂ').

ಕ್ರೈಸ್ತ ವಿಚಾರಗಳನ್ನೊಳಗೊಂಡು ಎಳೆಯರಿಗಾಗಿ ಬರೆದ ಕೆಲವು ಕತೆಗಳು ಅದಾಗಲೇ ಪ್ರಚಲಿತವಿದ್ದುವು. History of Little William ಅಂಥ ಕಥನಗಳಲ್ಲಿ ಒಂದು. ಕನ್ನಡದಲ್ಲಿ

ಇದುವೆ ಮೊತ್ತ ಮೊದಲು ಅನುವಾದಗೊಂಡ ಕ್ರೈಸ್ತ ಕಥನ (೧೮೩೮). ಮೇರಿ ಶರ್ವುಡ್ ಎಂಬವಳು (೧೭೭೫-೧೮೫೧) ತನ್ನ ಗಂಡನೊಂದಿಗೆ (ಆತ ಒಬ್ಬ ಸೈನ್ಯಾಧಿಕಾರಿ) ಭಾರತಕ್ಕೆ ಬಂದು ಈ ದೇಶದ ಹಿನ್ನೆಲೆಯುಳ್ಳ ಸುಮಾರು ನೂರು ಕತೆಗಳನ್ನು ರಚಿಸಿದಳು. ಕಿರಿಯರನ್ನು ಗಮನದಲ್ಲಿರಿಸಿಕೊಂಡು ಬರೆದ ನೀತಿಪರವಾದ ಆ ಕತೆಗಳು ಭಾರತದ ಇತರ ಭಾಷೆಗಳಲ್ಲಿಯೂ ಅನುವಾದಗೊಂಡವು. Little Henry and his bearer ಮತ್ತು The Aya and the lady ಎಂಬವು ಕನ್ನಡದಲ್ಲಿ ಬಂದಿವೆ. ('ಚಿಕ್ಕವನಾದ ಹೆನ್ರಿ ಅವನ ಬೋಯಿ ಇವರ ಕಥೆಯು' (೧೮೪೯); 'ದೊರೆಸಾನಿಯನ್ನೂ ದಾದಿಯನ್ನೂ ಕುರಿತಂಥ ಕಥೆ' (ಸು.೧೮೪೦). ಥಿಯೋಫಿಲಸ್ ಸ್ಮಿಥ್ ಎಂಬವನು ಬರೆದ Last days of Boosy (ಕನ್ನಡ ರೂಪ: ಬೂಸಿಯ ಕಡೆ ದಿನಗಳು), ಅದರಂತೆ ಥಿಯೋಡೋರ್ ವಾಲ್ಜ್ ಅನುವಾದಿಸಿದ 'ಹೊರಗೊಂದು ಒಳಗೊಂದು ನಾಟಕಗಾರನೂ ಗೌರಮ್ಮ ರಾಜಕುಮಾರ್ತೆಯೂ' ಎಂಬ ಕತೆಗಳು ಕೂಡ ಭಾರತೀಯ ಹಿನ್ನೆಲೆಯಲ್ಲಿ ರಚಿತವಾಗಿವೆ.

ಕಾದಂಬರಿಯ ಮಟ್ಟದ ಕೆಲವು ಕ್ರೈಸ್ತ ಮತೀಯ ಕೃತಿಗಳು ಕನ್ನಡದಲ್ಲಿ ಬಂದಿವೆ. ೧೭ನೆಯ ಶತಮಾನದಲ್ಲಿದ್ದ ಜಾನ್ ಬನ್ಯನ್ ಆಧ್ಯಾತ್ಮಿಕ ಹಿನ್ನೆಲೆಯ ಕಾದಂಬರಿಗಳನ್ನು ರಚಿಸಿದನಷ್ಟೆ. ಅವುಗಳಲ್ಲಿ ಅತಿ ಶ್ರೇಷ್ಠವೆನಿಸಿದ Pilgrim's Progress ಅನುವಾದಗೊಂಡದ್ದನ್ನು ಬೇರೊಂದು ಸಂದರ್ಭದಲ್ಲಿ ಈ ಹಿಂದೆ ಪ್ರಸ್ತಾಪಿಸಿದ್ದೇವೆ. ಅಂಥದೇ ಇನ್ನೊಂದು ಅವನ ಕೃತಿಯಾದ Holy War ಎಂಬುದೂ ಕನ್ನಡದಲ್ಲಿ ಕಾಣಿಸಿಕೊಂಡಿದೆ ('ಆತ್ಮಿಕ ದಿವ್ಯಯುದ್ಧ').

ಬನ್ಯನ್ನನ ಜೀವನದಲ್ಲಿಯ ಎರಡು ಘಟನೆಗಳ ತೀವ್ರ ಪ್ರಭಾವವನ್ನು ನಾವು ಅವನ ಕೃತಿಗಳಲ್ಲಿ ಕಾಣುತ್ತೇವೆ. ಮೊದಲನೆಯದಾಗಿ, ಒಂದು ತಪದ ವರೆಗೆ ಕಾರಾಗೃಹದ ಏಕಾಂತವಾಸದಲ್ಲಿದ್ದಾಗ ಅವನ ಧಾರ್ಮಿಕ ಜಿಜ್ಞಾಸೆಯು ಬಹುವಾಗಿ ಬೆಳೆದು ಅವನಲ್ಲಿಯ ರೂಪಕ ಶಕ್ತಿಯನ್ನು ಕುದುರಿಸಿತು. ತತ್ಪೂರ್ವದಲ್ಲಿ ಅವನು ಸೈನ್ಯಾಧಿಕಾರಿಯಿದ್ದುದರಿಂದ ಅವನ ಕೃತಿಗಳಲ್ಲಿಯ ರೂಪಕ ಪ್ರತಿಮೆಗಳು ಕೋಟೆ, ಸೈನ್ಯ, ಮುತ್ತಿಗೆ-ಇವನ್ನು ಹೆಚ್ಚಾಗಿ ಬಳಸಿಕೊಂಡಿವೆ.

'ಯಾಂತ್ರಿಕನ ಸಂಚಾರ'ದಂತಹ ಆಧ್ಯಾತ್ಮಿಕ ಕಥನಗಳು ಇಂಗ್ಲಿಷ್ ಸಾಹಿತ್ಯದಲ್ಲಿ ಆ ಮುಂಚೆ ಇರಲಿಲ್ಲವಾದ್ದರಿಂದ ಅದು ಬಲು ಬೇಗ ಕ್ರಿಶ್ಚಿಯನ್ನರ ಆದರವನ್ನು ಗಳಿಸಿದ್ದಿತು. ದೈವಿಕ ಸಾಧನೆಯಲ್ಲಿ ಕ್ರೈಸ್ತನೊಬ್ಬನು ಹಂತಹಂತವಾಗಿ ಏರುತ್ತ ನಡೆದುದರ ಬಗೆಯನ್ನು ಅದರಲ್ಲಿ ತೋರಿಸಿದ್ದಾದರೆ 'ಆತ್ಮಿಕ ದಿವ್ಯ ಯುದ್ಧ'ವು ಅದರ ಪೂರ್ವಕಥೆಯಂತಿದೆ. ಮನುಷ್ಯರು ಆತ್ಮದ ಪ್ರಕಾರ ಸೈತಾನರಿಂದ ವಂಚಿಸಲ್ಪಟ್ಟು ಪಾಪಕ್ಕೂ ನಷ್ಟಕ್ಕೂ ಕಠಿಣ ಮೋಸಕ್ಕೂ ಒಳಪಟ್ಟು ತರುವಾಯ ದೇವರ ಕೃಪೆಯಿಂದ,

.ಎಚ್ಚೆತ್ತು ಗುಣಪಡುವ ವಿಧವನ್ನು ತೋರಿಸುವುದೇ ಇದರ ತಾತ್ಪರ್ಯವು'. ಹೀಗೆ ಮನುಷ್ಯನ ಆತ್ಮವನ್ನು ಅಪಹರಿಸಿದ ಸೈತಾನನೊಂದಿಗೆ-ದೇವಕುಮಾರನು ಯುದ್ಧ ಮಾಡಿ ಜಯಿಸಿದ ವಿಷಯ ಇದರಲ್ಲಿದೆ :

ನರಾತ್ಮಪುರಿಯೆನ್ನುವುದೊಂದು ಕೋಟೆ. ಅದಕ್ಕೆ ಐದು ಬಾಗಿಲುಗಳು (ಪಂಚೇಂದ್ರೀಯ). ರಾಜನಾದ ಸರ್ವತ್ರಾಣಿಯು (ದೇವರು) ಅದನ್ನು ಸುಂದರವಾಗಿ, ನಿಷ್ಪಾಪವಾಗಿ ಇಟ್ಟದ್ದಾಗ ಸೈನ್ಯಾಸುರನು ಮೋಸದಿಂದ ಆ ಬಾಗಿಲುಗಳ ಮೂಲಕ ಪ್ರವೇಶಿಸಿ ಆ ಪುರಿಯನ್ನು ವಶಪಡಿಸಿಕೊಳ್ಳುತ್ತಾನೆ. ಅಲ್ಲಿ ಅಧಿಕಾರಿಗಳಿದ್ದ 'ಬುದ್ಧಿ' 'ಚಿತ್ತ' 'ಮನಸ್ಸಾಕ್ಷಿ' ಮುಂತಾದವರನ್ನು ತಗ್ಗಿಸಿ, ಪುರವನ್ನು ಕೆಡಿಸುತ್ತನೆ. ಆಗ ಇಮ್ಯಾನುವೇಲ್ (ಯೇಸು) ಎಂಬ ರಾಜಪುತ್ರನು ಅವೇ ಬಾಗಿಲುಗಳಿಂದ ಪ್ರವೇಶಿಸುತ್ತಾನೆ. ಮೊದಲು ಬಂದವರಾದ 'ಖಂಡಿತ ಬೋಧಕ' 'ತಪ್ಪು ಸ್ಥಪಕ' 'ನ್ಯಾಯವಿಚಾರಿ' ಇವರು ಇಮ್ಯಾನುವೇಲ್‌ನ ಸಂಗಡ ಬಂದ ವಿಶ್ವಾಸಯ್ಯ, ಸುನೀತಿ, ಪ್ರೇಮಕ, ನಿರುಪಾಧ್ಯೆಯ್ಯ, ಸಹನೆ ಎಂಬ ಐದು ಜನ ಪ್ರಭುಗಳೂ ಆತ್ಮವನ್ನು ಬಡಿದೆಬ್ಬಿಸಿ ಮುಕ್ತಮಾಡುತ್ತಾರೆ. ತರುವಾಯ ಅಲ್ಲಿ ಮುಖ್ಯಾಧಿಕಾರಿಯಾಗಿ 'ಅನುಭವ ಪ್ರಭು'ವು ನೇಮಕ ಹೊಂದುತ್ತಾನೆ. ಅವನೆಂದರೆ ದೈವ ಭಕ್ತಿಯ ಅಭ್ಯಾಸದಿಂದ ಮನಸ್ಸಿನಲ್ಲಿ ಉಂಟಾಗುವ ನಿಶ್ಚಯವಾದ ವಿವೇಕವುಳ್ಳ ಯೋಚನೆಯ ಪ್ರತೀಕ. ಇಂತು 'ಪಾಪದಿಂದ ಆತ್ಮಕ್ಕೆ ಬರುವ ನಷ್ಟಗಳು, ಆತ್ಮವನ್ನು ಮುತ್ತುವ ಮೋಸಗಳು ಹಾಗೂ ಕ್ರೈಸ್ತನು ಎಚ್ಚರಿಕೆಯಿಂದ ಇರುವುದಕ್ಕೆ ಉಪಾಯಗಳು'– ಇವನ್ನು ಈ ಕೃತಿಯಲ್ಲಿ ಮನಂಬುಗುವಂತೆ ವಿವರಿಸಲಾಗಿದೆ. ಮಧುರ ಚೆನ್ನರ ಕೃತಿಗಳನ್ನು ಬಿಟ್ಟರೆ (ಉದಾ : ಕಾಳರಾತ್ರಿ) ಇಂದಿಗೂ ಕನ್ನಡ ಸಾಹಿತ್ಯದಲ್ಲಿ ಸಾಂಕೇತಿಕ–ಧಾರ್ಮಿಕ ಕಾದಂಬರಿಗಳು ವಿರಳ. ಆದ ಕಾರಣ, ಇವು ಅನುವಾದಗಳೇ ಆದರೂ, ಸ್ವಾಗತಾರ್ಹ ಕೃತಿಗಳೆನಿಸಿವೆ.

ಕ್ರೈಸ್ತ ವಿಚಾರವಾಹಿನಿಯು ಅನೇಕ ಪ್ರಾಪಂಚಿಕ ವಿಷಯಗಳಲ್ಲಿಯೂ ಹರಿದು ಬಂದಿತು. ಅವುಗಳಲ್ಲಿ ಮತತತ್ವ ವಿವೇಚನೆ ಕಾಣಸಿಗದು. ಅದರ ಬದುಕಿಗೆ ಸಂಬಂಧಿಸಿದ ಅನೇಕ ಅಂಶಗಳ ಸುಜ್ಞಾನವನ್ನು ಪಡೆಯಬೇಕೆನ್ನುವುದೇ ಅವುಗಳ ಹಿಂದಿರುವ ಉದ್ದೇಶವಾಗಿದ್ದಿತು. ಜೊತೆಗೆ ಎಳೆಯರ ಬೌದ್ಧಿಕ ವಿಕಾಸಕ್ಕೆ ನೆರವಾಗಬೇಕೆನ್ನುವುದಂತೂ ಸರಿಯೆ. ಆ ಕಾರಣದಿಂದ ಅನೇಕ ಪ್ರಸಿದ್ಧ ವ್ಯಕ್ತಿಗಳ ಚರಿತ್ರೆಯನ್ನು ಸ್ವಲ್ಪದರಲ್ಲಿ ಕೊಡಲಾಗಿದೆ. ಈ ಚರಿತ್ರೆ ಮಾಲಿಕೆಯಲ್ಲಿ ಜೋನ್ ಆಫ್ ಆರ್ಕ್, ಲೇಡಿ ಗ್ರೇ, ಎಲಿಜಬೆತ್ ಫ್ರಾಯ್ಡ್, ಪ್ರಶಿಯಾ ದೇಶದ ರಾಜ್ಞಿ, ವಿಕ್ಟೋರಿಯಾ ರಾಣಿಯ ತಂಗಿಯಾದ ಎಲಿಸಾ ಲೇಡಿ ಡಫ್ಫರಿನ್, ಮೇರಿ ಕಾರ್ಪೆಂಟರ್, ಪಂಡಿತಾ ರಮಾಬಾಯಿ – ಮುಂತಾದ ಸ್ತ್ರೀಯರ ಚರಿತ್ರೆಯೂ ಇದೆ. ಇವರು ಕ್ರೈಸ್ತ ಮತೀಯರೆನ್ನುವುದಕ್ಕಿಂತ ತಮ್ಮ ಧ್ಯೇಯ ಸಾಧನೆಗಾಗಿ ದೇವರಲ್ಲಿ ಅಚಲ ನಂಬಿಕೆಯನ್ನಿಟ್ಟವರೆಂಬ ಕಾರಣದಿಂದ ಚರಿತ್ರಾರ್ಹರಾಗಿದ್ದಾರೆ. ಈ

ಮಾತು ಉತ್ತರ ಆಫ್ರಿಕೆಯಲ್ಲಿದ್ದ ಜನರಲ್ ಸಿ. ಗಾರ್ಡನ್, ಉಗಾಂಡದ ಅಲೆಕ್ಸಾಂಡರ್‌ಮ್ಯಾಕೆ ಇವರಿಗೂ ಅನ್ವಯಿಸುತ್ತದೆ. ಇವರಲ್ಲದೆ ಪದ್ಮಿನಿ, ಅಹಲ್ಯಾ ಮುಂತಾದ ಕ್ರೈಸ್ತೇತರರ ಚರಿತ್ರೆಯ ಚಿಕ್ಕ ಪುಸ್ತಿಕೆಗಳನ್ನು ಸಹ ಅಂದಿನ ಮಿಶನರಿಗಳು ಪ್ರಕಟಿಸಿದ್ದಾರೆ. 'ಫ್ರಾನ್ಸ್ ದೇಶದ ಕುಂಬಾರ ಗುಂಡಯ್ಯನ ಚರಿತ್ರೆ' ಎಂಬ ಪುಸ್ತಕವು ೧೬ನೆಯ ಶತಮಾನದಲ್ಲಿದ್ದ ಓರ್ವ ಕುಂಬಾರ ಧಾರ್ಮಿಕನ ಚರಿತ್ರೆಯಾಗಿದೆ.

ಅನೇಕ ವೈಜ್ಞಾನಿಕ ವಿಷಯಗಳ ಬಗ್ಗೆಯೂ ಸಣ್ಣ ಸಣ್ಣ ಪುಸ್ತಕಗಳು ಪ್ರಕಟವಾಗಿವೆ. ಗ್ರಹ, ಗ್ರಹಣ, ಸಮುದ್ರ-ಇವುಗಳನ್ನು ವಿವರಿಸುವಲ್ಲಿ ಅವು ದೇವರ ಸೃಷ್ಟಿಯ ಒಂದೊಂದು ಅಂಶವೆಂಬುದನ್ನು ಪ್ರಕಟಪಡಿಸುವುದೇ ಆಗಿದ್ದಿತು. 'ಭಗವದ್ದರ್ಪಣ' ಎಂಬ ಬಾಸೆಲ್ ಮಿಶನ್ ಪುಸ್ತಕವು (Universe-an exihibition of God's power and glory) ಆ ನಿಲುಮೆಯನ್ನು ದೃಢೀಕರಿಸುವಂತಿದೆ.

ಸಂಸಾರದಲ್ಲಿದ್ದು ಒಳ್ಳೆಯ ನಡೆವಳಿಕೆಯನ್ನು ರೂಢಿಸಿಕೊಳ್ಳುವ ಉದ್ದೇಶದಿಂದ ಹೊರಬಂದ ಕೃತಿಗಳಲ್ಲಿ ಫ್ಲಟಿಕ್‌ನ (ಜರ್ಮನ್) 'ಸಂಸಾರ ಕ್ರಮ'ವನ್ನೂ (House-hold rules) ಮುಖ್ಯವಾಗಿ ಗಣಿಸಬೇಕು. ಅದು ಒಂದು ಪಠ್ಯಪುಸ್ತಕವಾಗಿತ್ತೆಂದೇ ಹೇಳಬಹುದು. ಭಾಸ್ಕರ ಸೊಲೋಮನ್ ಮತ್ತು ಕ್ರಿಸ್ತಾನುಜವತ್ಸ-ಇವರು ಮರಾಠಿಯಿಂದ ಅನುವಾದಿಸಿದ 'ದಾಂಪತ್ಯ ಸ್ಥಿತಿ'ಯ ಕುರಿತಾದ ಗ್ರಂಥತ್ರಯದಲ್ಲಿ ವಿವಾಹ, ಗೃಹಸ್ಥಾಶ್ರಮ ಮತ್ತು ಮಕ್ಕಳು-ಇವುಗಳ ವಿವೇಚನೆ ಇದೆ. ಇವೆರಡೂ ಪುಸ್ತಕಗಳು ಬಾಸೆಲ್ ಮಿಶನ್ನಿನ ಕೊಡುಗೆಗಳು. ಬೆಂಗಳೂರಲ್ಲಿ ಶ್ರೀಮತಿ ಸತ್ಯನಾಥನ್ ಎಂಬ ಮಹಿಳೆ ತಮಿಳಿನಲ್ಲಿ ಬರೆದ ಕೃತಿಯ ಕನ್ನಡ ರೂಪವಾದ 'ಒಳ್ಳೇ ತಾಯಿ' ಗೃಹಿಣೀ ಧರ್ಮವನ್ನು ಬೋಧಿಸುತ್ತದೆ. ಅದರಂತೆ ಬ್ರಹ್ಮಚರ್ಯದ ಮಹತ್ವ, ಮಕ್ಕಳ ಆರೋಗ್ಯ, ತಂಬಾಕು ಸೇವನೆ, ಕುಡಿತ-ಈ ವ್ಯಸನಗಳ ದುಷ್ಪರಿಣಾಮ, ಸಾಲ ಮಾಡುವ ಪ್ರವೃತ್ತಿ, ಗೋವಧೆ-ಇವೇ ಮುಂತಾದ ಮಧ್ಯಮ ವರ್ಗೀಯನ ಸಮಸ್ಯೆಗಳನ್ನು ತಿಳಿಯಾದ ಶೈಲಿಯಲ್ಲಿ ಪರಿಶೀಲಿಸಿದ್ದುದು ಕಂಡುಬರುತ್ತದೆ. ದೇಶೀಯ ಕ್ರೈಸ್ತರ ಬದುಕು ಹಸನಾಗಬೇಕು; ಅವರ ಮಕ್ಕಳ ಬದುಕು ಹಸನಾಗಬೇಕು-ಎಂಬುದೇ ಈ ಕೃತಿ ಸಮುದಾಯದ ಉದ್ದೇಶವಾಗಿದ್ದಿತು.

## ಪ್ರಕರಣ : 6

# ವಿವಿಧ ಗದ್ಯ ಬರಹ

### 61 ಸಾಹಿತ್ಯಿಕ ಪ್ರಬಂಧಗಳು

ಕನ್ನಡ ಸಾಹಿತ್ಯವನ್ನು ಕುರಿತ ಮೊದಲ ಸಮೀಕ್ಷೆಯು ವೈಗ್ಲೆನದಾದುದರಿಂದ ಅದಕ್ಕೆ ಐತಿಹಾಸಿಕ ಮಹತ್ವವಿದೆ (೧೮೪೬ ; ಮುದ್ರಣ, ೧೮೪೮). ZDMG. ಪತ್ರಿಕೆಯ ೨೮ ಪುಟಗಳನ್ನು ಬಳಸಿರುವ ಆ ಲೇಖದಲ್ಲಿ ಮೊದಲಿಗೆ, ಕನ್ನಡ ನಾಡಿನ ಗಡಿ. 'ಪೂರ್ವ'ದ ಹಳಗನ್ನಡ ಇವನ್ನು ಉಲ್ಲೇಖಿಸಿದ್ದಾನೆ. ಸಂಸ್ಕೃತ, ಮತ್ತಿತರ ಸೋದರ ಭಾಷೆಗಳು, ಆರ್ಯ-ದ್ರಾವಿಡ ಸಂಪರ್ಕ, ಅನಂತರ ದ್ರಾವಿಡ ಭಾಷೆಗಳು-ಇವುಗಳ ವಿಚಾರ ಸಂಗ್ರಹವಾಗಿ ಬಂದಿದೆ. ಕನ್ನಡ ಲಿಪಿಯ ಕುರಿತು ಹೇಳುವಾಗ ವೈಗ್ಲೆ ಅದಕ್ಕೂ, ಮಧ್ಯ ಭಾರತದ ಕೆಲವು ಲಿಪಿಗಳಿಗೂ ಸಾಮ್ಯವನ್ನು ಕಂಡಿದ್ದಾನೆ. ಅನಂತರ ಕನ್ನಡ ವ್ಯಾಕರಣ ವಿಚಾರವು ಬಂದಿದೆ. ಅದರ ವಿವರಣೆಯಲ್ಲಿ, ಇತರ ಭಾಷಾ ವ್ಯಾಕರಣ ವಿಚಾರಗಳೊಂದಿಗೆ ತುಲನೆ ಮಾಡಿದುದು ಗಮನಾರ್ಹವಾಗಿದೆ.*

ವ್ಯಾಕರಣಕ್ಕಿಂತ ಸಾಹಿತ್ಯ ನಿರೂಪಣೆಗೆ ವಿನಿಯೋಗಿಸಿದ ಪುಟಸಂಖ್ಯೆ ಕಡಿಮೆಯೆಂದು ಕಂಡರೂ, ಅದಕ್ಕೆ ಕಾರಣವನ್ನು ಕೊಟ್ಟಿದ್ದಾನೆ. ಕನ್ನಡ ಕಾವ್ಯಗಳು ಒಂದೆಡೆ ಸಿಕ್ಕುವುದಿಲ್ಲ; ಅದರ ಅಭ್ಯಾಸ ಜರುಗಿಲ್ಲ; ತಾನು ಇಲ್ಲಿ ಕೊಡುವುದು ಅಪೂರ್ಣ ಹಾಗೂ ಸದೋಷವಾದ ಸಾಹಿತ್ಯೇತಿಹಾಸವಾದರೂ, ಇಂಥದೊಂದು ಸಾಹಿತ್ಯ ಇದೆಯೆಂಬ ಕಲ್ಪನೆಯನ್ನಾದರೂ ತಂದುಕೊಡುತ್ತದೆಂದು ಹಾರೈಸಿದ್ದಾನೆ. ಈ ಲೇಖದ ಸಾರವನ್ನು ಈ ಕೆಳಗೆ ಕೊಡಬೇಕೆಂದಿದ್ದೇವೆ:

"ಹಳೆಯ ಕನ್ನಡ ಸಾಹಿತ್ಯದಲ್ಲಿ ಎದ್ದು ಕಾಣುವ ಸಂಗತಿಯೆಂದರೆ, ವ್ಯಾಕರಣ, ಕೋಶ, ಛಂದಸ್ಸುಗಳನ್ನು ಹೇಳುವ ಮೂರು ಶ್ರೇಷ್ಠ ಕೃತಿಗಳು. ಇವು ೬೦೦-೭೦೦ ವರ್ಷದಷ್ಟು ಹಿಂದಿನವೆಂದು ಊಹಿಸುತ್ತೇವೆ. ಅವುಗಳಲ್ಲಿ ಶಬ್ದಮಣಿದರ್ಪಣವು ಹೆಚ್ಚು ಪ್ರಾಚೀನವಾದುದು. ಈ ವ್ಯಾಕರಣವು ಬಹಳ ಮಹತ್ವದ್ದು. ಇದನ್ನು ಮುದ್ರಿಸುವುದು ಅವಶ್ಯ. ಜಾನ್ ಮೆಕ್ಕರೆಲ್ ತನ್ನ ವ್ಯಾಕರಣ ಗ್ರಂಥದಲ್ಲಿ ಅದರ ಉಪಯೋಗ

---

* ಈ ಲೇಖದ ಇಂಗ್ಲಿಷ್ ಅನುವಾದವು Quarterly Journal of the Mythic Society – ಪತ್ರಿಕೆಯ ಸಂಪುಟ ೭೨ (೧೯೮೧) ರಲ್ಲಿ ಪ್ರಕಟವಾಗಿದೆ. ಪು.೧-೩೪.

ಮಾಡಿಕೊಂಡಿರುವಸಾದರೂ ಇನ್ನೂ ಅಮೌಲ್ಯ ಸಾಮಗ್ರಿಯು ಅದರಲ್ಲಿ ಹುದುಗಿದೆ. ಈ ಗ್ರಂಥಕರ್ತನು ತನಗಿಂತ ಪೂರ್ವದ ಕವಿಗಳನ್ನು ಉಲ್ಲೇಖಿಸಿ, ಅವರ ಕಾವ್ಯಗಳಿಂದ ಪದ್ಯ ಪ್ರಯೋಗಗಳನ್ನು ಕೊಟ್ಟಿರುವಸಾದರೂ, ಅವರ ಕೃತಿಗಳು ಪೂರ್ಣ ಕಳೆದುಹೋಗಿವೆ.

"ಇದನ್ನು ಕನ್ನಡ ಪಾಣಿನೀಯ ಎಂದು ಕರೆಯಬಹುದಾದರೆ, ಕನ್ನಡ ಅಮರಕೋಶವೆಂದು ಹೇಳಬಹುದಾದ ಕೃತಿಯೂ ಇದೆ. ಇದು ಸಂಸ್ಕೃತ ನಿಘಂಟನ್ನು ಆಧರಿಸಿದೆ. ಆದರೆ ಅದಕ್ಕಿಂತ ಚಿಕ್ಕದು. ಇದಕ್ಕೆ ಟೀಕೆಯಿಲ್ಲ. ಆದ್ದರಿಂದ ಟೀಕೆಯಿರುವ ಮೇಲ್ಕಂಡ ವ್ಯಾಕರಣಕ್ಕಿಂತಲೂ ಇದು ಕಠಿಣವಾದುದು. ಈ ಕೃತಿಯ ಹೆಸರು ಶಬ್ದಮಂಜರಿ, ಮೂರನೆಯದು ಛಂದಸ್ಸನ್ನು ಕುರಿತದ್ದು. ಇದರ ಕರ್ತೃ ನಾಗವರ್ಮ. ನಿರೀಕ್ಷಿಸಿದಂತೆ ನಮಗೆ ದೊರೆತ ಪ್ರತಿಯಲ್ಲಿ ಸಾಕಷ್ಟು ಗ್ರಂಥಪಾತಗಳಿವೆ. ನಾಲ್ಕನೆಯದಾದ ಪ್ರಾಚೀನ ಕೃತಿಯೊಂದನ್ನು, ಇವುಗಳ ಜೊತೆಗೆ ಸೇರಿಸಬೇಕು. ಅದು ಜಗನ್ನಾಥವಿಜಯವೆಂಬ ಪುರಾಣ ಕಾವ್ಯ. ಇದನ್ನು ನಾನು ನೋಡಿಲ್ಲ.

"ಇನ್ನು ಕೆಲವು ಪ್ರಾಚೀನ ಪುರಾಣ ಕಾವ್ಯಗಳಿವೆ. ಅವನ್ನು ಬಹಳಷ್ಟು ಜನ ವ್ಯಾಸಂಗ ಮಾಡಿದ್ದಾರೆ. ಅವಾವುವೆಂದರೆ :- (೧) ಮಹಾಭಾರತ–ಇದು ಸಂಸ್ಕೃತ ಕೃತಿಯ ಸ್ವಚ್ಛಂದ ಅನುವಾದವಾಗಿದೆ. ಆದರೆ ಆ ಚೌಕಟ್ಟಿಗಿಂತ ಭಿನ್ನ. ಕವಿಯು ಧಾರವಾಡ ಸೀಮೆಯ ಗದುಗಿನಲ್ಲಿ ವಾಸವಾಗಿದ್ದನು. ಅವನ ಹೆಸರು 'ನಾರಣ.' ಇವನ ಕೃತಿಯಲ್ಲಿ ೧೦ ಪರ್ವಗಳು ಮಾತ್ರ ಇವೆ. ಇನ್ನು ಎಂಟು ಪರ್ವಗಳನ್ನು ಬೇರೆಯವರು ಅನಂತರ ಸೇರಿಸಿದ್ದಾರೆ. (೨) ರಾಮಾಯಣ– ಇದರ ಕರ್ತನು ತೊರವಿ ಎಂಬ ಸ್ಥಳದಲ್ಲಿದ್ದ ನರಸಪ್ಪನು. ಇದರಲ್ಲಿ ಆರು ಕಾಂಡಗಳಿದ್ದು, ಮೇಲಿನ ಕೃತಿಯಂತೆ, ಇಲ್ಲಿಯೂ ಏಳನೆಯದನ್ನು ಅನಂತರ ಸೇರಿಸಲಾಗಿದೆ. (೩) ಭಾಗವತ ಪುರಾಣ– ಸಂಪೂರ್ಣವಾದುದು. ಇದರ ಕವಿ ನಿತ್ಯಾತ್ಮನ್. ಅವನ ಸ್ಥಳ ತಿಳಿಯದು. (೪) ಅತ್ಯಂತ ಮಹತ್ವದ್ದೂ ಇಂದಿನ ವಿದ್ಯಾವಂತ ಕನ್ನಡಿಗರ ಮನಸೆಳೆದದ್ದೂ ಆದ ಕೃತಿಯೆಂದರೆ 'ಜಯಭಾರತ.' [ಜೈಮಿನಿ ಭಾರತ] ಅಶ್ವಮೇಧ ಪರ್ವದ ವಿಶಿಷ್ಟ ಅನುವಾದವಿದು. ಲೇಖಕನು ದೇವಪುರದ ಲಕ್ಷ್ಮೀಪತಿಯು. ಇದು ಷಟ್ಪದಿ. ಆದರೆ ಇದರ ಸಾಲುಗಳು ಇತರ ಷಟ್ಪದಿಗಳಿಗಿಂತ ದೊಡ್ಡವಾಗಿವೆ.

"ಈ ನಾಲ್ಕು ಕೃತಿಗಳು ಹಿಂದಿನ ಕನ್ನಡದ ಎಲ್ಲ ಭಾಷಾ ಪ್ರಯೋಗಗಳನ್ನು ಒಳಗೊಂಡಿವೆ. ಅಲ್ಲದೆ, ಒಟ್ಟಿನಲ್ಲಿ ಅವು ಭಾರತೀಯ ಪುರಾಣ ವಿಷಯಕ ಕೋಶದಂತಿವೆ. ಕನ್ನಡ ಅಭ್ಯಾಸ ಮಾಡುವ ಯಾರೇ ಆಗಲಿ, ಅವನ್ನು ಮುಖ್ಯವೆಂದು ಗಣಿಸತಕ್ಕುದು. ಅವುಗಳಲ್ಲಿ ಬಂದ ವಿಷಯವು ಹೊಸತೇನಲ್ಲ; ಪುನರುಕ್ತಿಯಾಗಿವೆ ಮತ್ತು ಅವಾಸ್ತವ ಘಟನೆಗಳಿಂದ ಕೂಡಿವೆ. ಯೂರೋಪಿಯನ್ ಓದುಗರಿಗೆ ಬೇಸರ ತರುವಂತಿದ್ದರೂ, ಇಲ್ಲಿ ದೇಶೀಯರಿಗೆ ಅತೀಂದ್ರಿಯ – ಅವಾಸ್ತವ ವರ್ಣನೆ ಒಂದು ಆಕರ್ಷಣೆ.

"ಅನಂತರದ ಕಾವ್ಯಗಳು ಇಂದಿನ ಕೃತಿಗಳಿಗೆ ಹೆಚ್ಚು ಸಮೀಪವಾಗಿವೆ. ಅವುಗಳಲ್ಲಿ ಸಂಸ್ಕೃತದಿಂದ ಅನುವಾದಗೊಂಡ ಕತೆಗಳಿವೆ. ಇವನ್ನುಳಿದು ಇತರ ಕೃತಿಗಳೆಂದರೆ ನೀತಿಬೋಧಕ ಹಾಗೂ ದೇವತಾಸ್ತುತಿಯ ಪದ್ಯಗಳು. ಮೊದಲಿನ ಪ್ರಕಾರದಲ್ಲಿ (i) ಸೊಬಗಿನ ಸೋನೆ ಬರುತ್ತದೆ. ಇದರ ಬಗ್ಗೆ ನನಗೆ ವಿವರಗಳು ತಿಳಿಯವು. (ii) ಬಿರುಮಲ–ಕನಕದಾಸನೆಂಬ ಬಿರುದುಳ್ಳ ಈತನು ಬಾಣಾಸುರ ಹಾಗೂ ಕೃಷ್ಣ, ಇವರ ನಡುವಿನ ಯುದ್ಧವನ್ನು ವರ್ಣಿಸಿದ್ದಾನೆ. (iii) ಸೋಮಶೇಖರ – ಚಿತ್ರಶೇಖರ ಕಥೆಗಳು – ಇದು ಗದ್ಯ ಮಿಶ್ರಿತವಾದದ್ದು; ಹೊಸ ಬಗೆಯ ಕತೆಯುಳ್ಳದ್ದು. (iv) ಗಯಚರಿತ್ರೆ– ಇದರಲ್ಲಿ ಗಂಧರ್ವರಾಜನಾದ ಗಯನ ಸಹಾಯಕ್ಕೆ ಬಂದ ಕೃಷ್ಣ ಮತ್ತು ಅರ್ಜುನರ ನಡುವಿನ ಯುದ್ಧ ವರ್ಣನೆ ಇದೆ.

ಇನ್ನು ಲಿಂಗಾಯಿತರ ಕೆಲವು ಮಹತ್ವದ ಕಾವ್ಯಗಳಿವೆ. (v) ಬಸವ ಪುರಾಣ ಮತ್ತು (vii) ರಾಘವಾಂಕ ಕಾವ್ಯ. ಇವುಗಳಲ್ಲಿ ಬಸವಪುರಾಣವು ಹಳೆಯದು. ನಮ್ಮಲ್ಲಿರುವ ಪ್ರತಿಯ ಮೇಲಿಂದ ಇದು ಹಳೆಯ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ್ದೆಂದು ಹೇಳಬಹುದು.

ದೇವತಾಸ್ತುತಿ ಅಥವಾ ಮಾಹಾತ್ಮ್ಯವನ್ನು ಹೇಳುವ ಕೃತಿಗಳಿವು :

೧. ಕನಕದಾಸನ ಭಕ್ತಿಸಾರ– ವಿಷ್ಣುಸ್ತುತಿಯುಳ್ಳದ್ದು

೨. ಶಿವಭಕ್ತಿಸಾರ– ಶಿವಸ್ತುತಿಯ ಕೃತಿ

೩. ಮಹಾನವಮಿಯ ಪದಗಳು–ಸ್ತೋತ್ರಗಳ ಸಂಕಲನ, ಹಿಂದೂ ಶಾಲೆಗಳಲ್ಲಿ ಬಳಸುವಂತಹದು.

"ನೀತಿ ಹಾಗೂ ತಾತ್ವಿಕ ಕಾವ್ಯಗಳಲ್ಲಿ ಜಿನಮುನಿತನಯ – ಜ್ಞಾನೋಪದೇಶ ವೆಂಬುದಿದೆ. ಅದು ಜೈನರಿಗೆ ಸಂಬಂಧಿಸಿದ್ದು ಮತ್ತು ವಿಶಿಷ್ಟವಾದ ಶೈಲಿಯಲ್ಲಿದೆ. ಅನುಭವಾಮೃತವು ಬ್ರಾಹ್ಮಣರ ಭಕ್ತಿಪೂರ್ಣ ಕೃತಿ. ಕೊನೆಯದಾಗಿ ಸರ್ವಜ್ಞನ ಪದಗಳು– ಜಾಣ್ಮೆಯ ನುಡಿಗಳ ಸಂಗ್ರಹವಿದು.

"ಇವುಗಳ ಜೊತೆಗೆ, ಬಹಳಷ್ಟು ಪ್ರಚಾರದಲ್ಲಿರುವಂತಹವೂ, ಬಹುಸಂಖ್ಯೆ ಯಲ್ಲಿರುವವೂ, ಗಾತ್ರದಲ್ಲಿ ಚಿಕ್ಕವೂ, ಪರ್ಶಿಯನ್ ಗಝಲ್‌ಗಳಿಗೆ ಸಮಾನವಾದಂತಹವೂ ಆದ ಪದ್ಯಗಳಿವೆ. ಅವುಗಳ ಕರ್ತರು ದಾಸರು (ಎಂದರೆ ದೇವರ ಸೇವಕರು, ಅವರಲ್ಲಿ ಕೆಳ ಜಾತಿಯಿಂದ ಬಂದವರೂ ಇದ್ದಾರೆ). ಅವರು ಬೆಳೆದ ಪರಿಸರ ಹೇಗೇ ಇದ್ದರೂ ಕವಿತ್ವದ ಅಭಿವ್ಯಕ್ತಿಯಲ್ಲಿ ವಿಶೇಷ ಪರಿಣತಿಯನ್ನು ಗಳಿಸಿದ್ದವರು. ಇವನ್ನು ಸರಳವಾದ ಜಾನಪದ ಗೀತೆಗಳೆಂದು ತಿಳಿಯಬೇಕು. ದಾಸರು ಬ್ರಾಹ್ಮಣರ ಆಚಾರ ವಿಚಾರ, ಡಾಂಭಿಕತನ ಮತ್ತು ಜಾತಿ–ಭೇದಗಳನ್ನು ಕಟುವಾಗಿ ಟೀಕಿಸಿದ್ದಾರೆ. ಅದೇ ಕಾಲಕ್ಕೆ ಈ ನಶ್ವರ ಪ್ರಪಂಚದ ಆಚೆಗಿರುವುದನ್ನು ಸಾಧಿಸುವ ಮಾತನ್ನೂ ಹೇಳಿದ್ದಾರೆ. ಈ ಬಗೆಯ ಗೀತೆಗಳನ್ನು ರಚಿಸಿದವರು ಕನಕದಾಸ, ಪುರಂದರದಾಸ, ವಿಜಯದಾಸ, ವೈಕುಂಠದಾಸ

ಮತ್ತು ರಂಗವಲ್ಲಿದಾಸರು [ಜಗನ್ನಾಥದಾಸರು]. ಈ ದಾಸ ಸಾಹಿತ್ಯವು ಅತ್ಯಂತ ವಿಶಿಷ್ಟವಾದದ್ದು. ಅದರ ಒಂದು ಕೃತಿಯನ್ನು ವಾದರಿಯಾಗಿ ಕೊಡದೆ ಮುಂದುವರಿಯಲರವು. [ಇಲ್ಲಿ ವೈಗ್ಲೆ ಪುರಂದರದಾಸರ 'ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ' ಹಾಡನ್ನು ಇಡಿಯಾಗಿ ಜರ್ಮನ್ ಭಾಷೆಗೆ ಅನುವಾದಿಸಿ ಕೊಟ್ಟಿದ್ದಾನೆ.]

ಇಷ್ಟೇ ಮಹತ್ವದ ಕೃತಿಗಳೆಂದರೆ ಹಳೆಯ ಪೌರಾಣಿಕ ಕಥೆಗಳನ್ನು ಆಧರಿಸಿದ ಯಕ್ಷಗಾನ ಪ್ರಸಂಗಗಳು. ಇವು ಪದ್ಯ ಮಿಶ್ರಿತ ಗದ್ಯದಲ್ಲಿವೆ. ಪದ್ಯಗಳನ್ನು ಹಬ್ಬ ಜಾತ್ರೆಗಳಲ್ಲಿ ಶ್ರೀಮಂತರ ಮನೆಯಲ್ಲಿ ಹಾಡಿಕೊಳ್ಳಲು ಅನುಕೂಲವಾಗುವಂತೆ ರಚಿಸಲಾಗಿವೆ. ಇವುಗಳಲ್ಲಿ ಹೊಸ ಹೊಸ ಪದ್ಯಬಂಧಗಳಿವೆ. ದಂಡಕವೆಂಬ ಇನ್ನೊಂದು ಪದ್ಯಬಂಧವಿದ್ದು, ವಿಶಿಷ್ಟ ಪ್ರಾಸದಿಂದ ಕೂಡಿದ ಗದ್ಯವದು.

ಇನ್ನು ಗದ್ಯಕೃತಿಗಳು. ನಮಗೆ ಗೊತ್ತಿರುವವುಗಳಲ್ಲಿ ಎರಡು ಹಳೆಯವು. ಒಂದು ಶೃಂಗೇರಿ ಮಠದ ಕೈಫಿಯತ್ತು ; ಇನ್ನೊಂದು ಮೈಸೂರ ದೊರೆಗಳ ಚರಿತ್ರೆ. ನಾವಿರುವ ನಾಡಿನ ದೊರೆಯಾಗಿದ್ದ ಭೂತಾಳ ಪಾಂಡ್ಯನ ಕಟ್ಟಳೆಗಳ ಪುಸ್ತಕವೊಂದಿದೆ. ಇನ್ನು ಕಟ್ಟುಕತೆಯ ವಿಚಾರದಲ್ಲಿ ಪಂಚತಂತ್ರವೇ ಹೆಚ್ಚು ಪ್ರಮುಖವಾದುದು. ಅದರ ಕನ್ನಡ ಗದ್ಯಶೈಲಿಯು ಗಣನೀಯವಾದುದು. ಆ ಗದ್ಯ ತೀರ ಹೊಸತೇನಲ್ಲ. ಇವುಗಳ ಜೊತೆಗೆ ಬೇತಾಳ ಪಂಚವಿಂಶತಿ, ಶುಕಸಪ್ತತಿ, ಬತ್ತೀಸಪುತ್ಥಳಿ ಈ ಗದ್ಯ ಕಥೆಗಳನ್ನು ಗಮನಿಸಬೇಕು. ಇವೆಲ್ಲ ಜನಪ್ರಿಯವಾಗಿವೆ. ಕೊನೆಯದಾಗಿ, ಕಾದಂಬರಿ ಎನ್ನಬಹುದಾದ ಕೃತಿಯೊಂದಿದೆ. ಅದುವೆ ಮೈಸೂರ ಆಸ್ಥಾನದಲ್ಲಿದ್ದ ಯಾದವಾರ್ಯನೆಂಬವನು ರಚಿಸಿದ 'ನೀಲಾವತಿ' [ಕಲಾವತಿ ಪರಿಣಯ].*

"ಈ ಲಿಖಿತ ಸಾಹಿತ್ಯವಲ್ಲದೆ ಕನ್ನಡರು ಜನಪದ ಸಾಹಿತ್ಯವನ್ನು ಹೊಂದಿದ್ದಾರೆ. ಇದು ಸ್ವತಂತ್ರ, ಶುದ್ಧ ಕಾವ್ಯ. ಅಂತರ್ ಸೌಂದರ್ಯದಲ್ಲಿ ಯಾವುದಕ್ಕೂ ಕಡಿಮೆಯಲ್ಲ. ಇದನ್ನು ಸಂಗ್ರಹಿಸುವುದು ಕಠಿಣ. ಜಾನಪದ ಕಥೆ, ಇಲ್ಲವೆ ಕಲ್ಪನಾ ಪ್ರಧಾನವಾದ 'ಅಜ್ಜಿ ಕತೆ'ಗಳೂ ಇವೆ. ತಮ್ಮ ಸತ್ವದಲ್ಲಿ ಅವು ಪ್ರಪಂಚದ ಯಾವ ಜಾನಪದ ಕಥನಗಳಿಗೂ ಕಡಿಮೆಯಲ್ಲ. ಇನ್ನು ಪ್ರಾಸಯುಕ್ತವಾದ, ಜಾಣ್ಮೆಯ ಲೋಕೋಕ್ತಿಗಳು ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದಿವೆ. ಅವೂ ಒಂದು ಸಾಹಿತ್ಯ ಪ್ರಕಾರವೆಂದು ಗಣಿಸಿ ಬರೆದಿಡುತ್ತಿದ್ದೇವೆ."

ಆ ಮುಂದೆ ವೈಗ್ಲೆ ಸಮಕಾಲೀನ ಸಾಹಿತ್ಯವನ್ನು ಅಂದರೆ, ಮಿಶನರಿ ಜನರ ಬರೆಹವನ್ನು ಸಮೀಕ್ಷೆ ಮಾಡಿದ್ದಾನೆ. ಅಂದಿನ ಕ್ರೈಸ್ತ ವಾಙ್ಮಯದ ಕನ್ನಡಾನುವಾದದ

* ಎಂ.ಗೋವಿಂದ ಪೈಗಳು ತಮ್ಮ ೧೯೫೦ರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಪ್ರಸ್ತಾಪಿಸಿದ್ದರು ಕನ್ನಡದ ಪ್ರಥಮ ಕಾದಂಬರಿ ಎಂದು. ಅದಕ್ಕೂ ನೂರು ವರ್ಷದ ವೈಗ್ಲೆ ಹಿಂದೆಯೇ ಹಾಗೆಂದು ಹೇಳಿದ್ದು ಆಶ್ಚರ್ಯವೆನಿಸುತ್ತದೆ.

ಬಗೆಯನ್ನು ಟೀಕಿಸಿದ್ದಾನೆ. 'ಇಲ್ಲಿಯ ಜನ ಕಲಿತದ್ದು ಅಷ್ಟಕಷ್ಟೆ. ಹೇಗೆ ಬರೆದರೂ ನಡೆಯುತ್ತದೆ ಎಂಬ ಭಾವನೆಯಿಂದ ಅನುವಾದ ಮಾಡಿದ್ದಾರೆ' ಎಂದಿದ್ದಾನೆ.

"ಕೊನೆಯದಾಗಿ ಈ ಲೇಖಕನು [ಜರ್ಮನ್] ಓದುಗರ ಕ್ಷಮೆ ಕೇಳುವನು. ಏಕೆಂದರೆ ಕನ್ನಡ ಭಾಷೆ, ಸಾಹಿತ್ಯಗಳ ಈ ಸಮೀಕ್ಷೆ ಅಭ್ಯಾಸಪೂರ್ಣವೇನಲ್ಲ. ಅನೇಕ ಕಡೆ ಊಹೆ ಮಾಡಿದುದಿದೆ. ಅಲ್ಲದೆ ಇದನ್ನು ಬರೆಯಲು ಇದ್ದ ವೇಳೆ ಕಡಿಮೆ. ಯೂರೋಪದಿಂದ ಹಡಗು ಇಲ್ಲಿಗೆ ಬಂದು, ಮರಳಿ ಹೋಗುವುದರ ಅವಧಿಯೊಳಗೆ ಈ ಲೇಖನವನ್ನು ಬರೆದು ಮುಗಿಸಿದ್ದಿದೆ. ಕನ್ನಡ ಜನರ ಬಗ್ಗೆ ಬರೆದ ಈ ಲೇಖದಿಂದ ಅವರ ಭಾಷೆ, ಸಾಹಿತ್ಯಗಳ ಬಗ್ಗೆ ಆಸ್ಥೆ ಹುಟ್ಟಿ, ಪರಿಚಯ ಮಾಡಿಕೊಂಡದ್ದಾದರೆ ಈ ಲೇಖಕನು ತನ್ನ ಶ್ರಮ ವ್ಯರ್ಥವಾಗಲಿಲ್ಲೆಂದು ಭಾವಿಸುವನು. "ನೀಲಗಿರಿ ಗುಡ್ಡ, ಮೇ ೧೮೪೬)".

ಅನಂತರದ ಸಾಹಿತ್ಯ ಚರಿತ್ರೆಯ ಲೇಖ ಕಿಟೆಲರದು. ಬಾಸೆಲ್ ಮಿಶನ್ನಿನವರು ಸಂಗ್ರಹಿಸಿದ ಹಸ್ತಪ್ರತಿಗಳು, ಮೂಲ ಸಾಮಗ್ರಿಯಾಗಿದ್ದು ತಾನು ಕಂಡುಹಿಡಿದ ವಿಚಾರಗಳೂ ಸೇರಿಕೊಂಡು ಕಿಟೆಲರ ಸಮೀಕ್ಷೆ ಸಿದ್ಧವಾಯಿತು. Indian Evangelical Review ದಲ್ಲಿ 'ಹಳೆಯ ಕನ್ನಡ ಕವಿಗಳು' ಎಂಬ ಲೇಖವನ್ನು ಮೊದಲಿಗೆ ಬರೆದರು (೧೮೭೩). ಅದರಲ್ಲಿ ಜೈನ, ವೀರಶೈವ, ಶೈವ, ಅದ್ವೈತ ಮತ್ತು ವೈಷ್ಣವ–ಎಂಬ ವಿಭಾಗಗಳಲ್ಲಿ ಕವಿ–ಕೃತಿಗಳನ್ನು ಕಾಣಿಸಿದ್ದಾನೆ. ಈ ಲೇಖದ ವಿಸ್ತಾರ ರೂಪವೇ, Essay on Canerese Literature ಎಂಬುದಾಗಿ 'ಛಂದೋಂಬುಧಿ'ಯ ಪೀಠಿಕೆಯಲ್ಲಿದ್ದುದು.

ಇದರಲ್ಲಿ ಚಾರಿತ್ರಿಕ ದೃಷ್ಟಿಕೋಣವು ಒಡೆದು ತೋರುತ್ತದೆ. ಕ್ರಿ.ಶ. ೮೦೦ರಿಂದ ೧೩೦೦ರ ವರೆಗಿನ ಹಳಗನ್ನಡ ಕಾಲದಲ್ಲಿ ಜೈನರ ಸಾಹಿತ್ಯ ಕಾರ್ಯವನ್ನು ಎತ್ತಿ ತೋರಿಸಿದ್ದು, ಅದರ ಸಮಾರೋಪದ ಮಾತುಗಳು ಮನನೀಯವಾಗಿವೆ. ವಚನ ಸಾಹಿತ್ಯವು ಕಿಟೆಲರ ಕಾಲಕ್ಕೆ ಬೆಳಕಿಗೆ ಬಂದಿದ್ದಿಲ್ಲವಾದ ಕಾರಣ, ವೀರಶೈವ ಸಾಹಿತ್ಯವು ೧೨ನೆಯ ಶತಮಾನದಿಂದಲೇ ಉಗಮವಾಯಿತೆಂಬ ಮಾತು ಅವರ ಪ್ರಬಂಧದಲ್ಲಿ ಬಂದಿಲ್ಲ.

ಮುಂದಿನ ವಿಭಾಗದಲ್ಲಿ ಕ್ರಿ.ಶ. ೧೩೦೦ರಿಂದ ೧೫೦೦ ; ೧೫೦೦ರಿಂದ ೧೮೭೦ ಹೀಗೆ ಎರಡು ಕಾಲಾವಧಿಗಳು ಕಂಡುಬರುತ್ತದೆ. ಅವುಗಳಲ್ಲಿ ಮತೀಯವಾಗಿ ಕವಿ ಕೃತಿಗಳನ್ನು ವರ್ಗೀಕರಿಸಲಾಗಿದೆ. ಕಿಟೆಲರ ಪ್ರಬಂಧದಲ್ಲಿ ಪ್ರಾಚೀನರಿಗಿಂತ ನಡುಗನ್ನಡ ಕಾಲದ ಲೇಖಕರೇ ಹೆಚ್ಚಾಗಿ ಕಾಣಿಸುತ್ತಾರೆ. ಪ್ರಬಂಧದ ಕೊನೆಯಲ್ಲಿ ಕನ್ನಡ ಸಾಹಿತ್ಯವು ದಕ್ಷಿಣ ಭಾರತದ ಯಾವುದೇ ಭಾಷಾ ಸಾಹಿತ್ಯಕ್ಕೆ ಸಮನಾಗಿ ನಿಲ್ಲಬಹುದೆಂಬ ಅವರ ಹೇಳಿಕೆಯು ಅಭಿಮಾನಾಸ್ಪದವಾಗಿದೆ.

ಮುಂದಿನ ದಶಕದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದ ಬಿ.ಎಲ್.ರೈಸ್ ಶಾಸನಗಳ ಆಧಾರದ ಮೇಲೆ ಅನೇಕ ಹೊಸ ಕವಿಗಳನ್ನು ಉಲ್ಲೇಖಿಸಿದ್ದಾರೆ. ಗಂಗ,

ರಾಷ್ಟ್ರಕೂಟ, ಹೊಯ್ಸಳ ಈ ಮೂರು ರಾಜಮನೆತನಗಳ ಕಾಲದಲ್ಲಿಯ ಕರ್ನಾಟಕಸ್ಥ ಸಂಸ್ಕೃತ ಕವಿಗಳ ಉಲ್ಲೇಖವೂ ಇದರಲ್ಲಿ ಬಂದಿದೆ. ಇದು ಹಳಗನ್ನಡ ಕಾಲವಾದ್ದರಿಂದ, ಕಿಟೆಲ್ ಪ್ರಬಂಧದಲ್ಲಿ ಕಂಡುಬಾರದ ಪಂಪ ಮುಂತಾದ ಹಲವು ಜೈನ ಕವಿಗಳು ಮೊದಲ ಬಾರಿಗೆ ಇಲ್ಲಿ ಕಾಣಿಸಿಕೊಂಡಿದ್ದಾರೆ. ವೀರಶೈವ ಕವಿಗಳ ವಿಚಾರವಾಗಿ ಮಾತ್ರ ಕಿಟೆಲರನ್ನು ತಾನು ಅನುಸರಿಸಿದ್ದಾಗಿ ಹೇಳಿದ್ದಾರೆ. ಮುಂದೆ ಚಿಕ್ಕದೇವರಾಜನ ಆಸ್ಥಾನದಲ್ಲಿದ್ದ ಕವಿಗಳನ್ನೂ ಗೋವಿಂದ ವೈದ್ಯ ಮುಂತಾದ ಮೈಸೂರ ಕವಿಗಳನ್ನೂ ನಾವು ಇಲ್ಲಿಯೆ ಪ್ರಥಮತಃ ಕಾಣಬಲ್ಲೆವು. ಹೀಗೆ ರೈಸ್ ಮತ್ತು ಕಿಟೆಲ್ ಇವರಿಬ್ಬರ ಪ್ರಬಂಧಗಳು ಒಂದಕ್ಕೊಂದು ಪೂರಕವಾಗಿದ್ದು ಅವೆರಡರಿಂದ ಓದುಗರಿಗೆ ಕನ್ನಡ ಸಾಹಿತ್ಯೇತಿಹಾಸದ, ತಕ್ಕಮಟ್ಟಿಗೆ ಪೂರ್ಣವೆನಿಸುವ ಕಲ್ಪನೆ ಬರಬಹುದಾಗಿದೆ.

ನಾಲ್ಕನೆಯ ಬರಹವೆಂದು ಮದ್ರಾಸ ಪ್ರಾಂತದ ಆಡಳಿತ ಕೈಪಿಡಿ– (Manual of the Administration of the Madras Presidency) ಇದರ ಮೊದಲ ಸಂಪುಟದಲ್ಲಿ ಅಡಿಟಿಪ್ಪಣಿಯಾಗಿ ಕನ್ನಡ ಲಿಪಿ, ಭಾಷೆ ಮತ್ತು ಸಾಹಿತ್ಯಗಳ ಪ್ರಸ್ತಾಪವಿದ್ದುದನ್ನು ಗಮನಿಸಬೇಕು (೧೮೮೫). ಅದರಲ್ಲಿ ಸಾಹಿತ್ಯ ವಿಚಾರದ ಲೇಖನವು ಕಿಟೆಲ್ ಪ್ರಬಂಧವನ್ನು ಅನುಸರಿಸಿದ್ದುದರ ಜೊತೆಗೆ ೧೯ನೆಯ ಶತಮಾನದ ವಿದೇಶೀಯರ ಕನ್ನಡ ಕೋಶ, ವ್ಯಾಕರಣಾದಿಗಳನ್ನು ವಿಶೇಷವಾಗಿ ಕಾಣಿಸಲಾಗಿದೆ (ಪು. ೫೭).

ಕನ್ನಡ ಭಾಷೆಯ ಕುರಿತಾದ ಹಲವು ಮಹತ್ವದ ವಿವೇಚನೆಗಳನ್ನು ಇನ್ನು ಪರಿಶೀಲಿಸಬೇಕು. ಎಲಿಸ್‌ನು, ತೆಲುಗು ಭಾಷೆಯು ಸಂಸ್ಕೃತಕ್ಕಿಂತ ಭಿನ್ನವಾಗಿರುವುದಲ್ಲದೆ ತಮಿಳು ಮುಂತಾದ ದಕ್ಷಿಣ ಭಾರತ ಭಾಷೆಗಳ ವಿಶಿಷ್ಟ ಗುಂಪಿಗೆ ಸೇರಿದುದೆಂಬುದನ್ನು ಪ್ರತಿಪಾದಿಸುವಾಗ ಕನ್ನಡ ವ್ಯಾಕರಣದ ಮತ್ತು ಶಬ್ದಗಳ ಸ್ವರೂಪವನ್ನು ಗಮನಿಸಿದ್ದನ್ನು ಈ ಒಂದೆ ಉಲ್ಲೇಖಿಸಿದ್ದೇವೆ. ಸಂಸ್ಕೃತ, ತಮಿಳು, ತೆಲುಗು – ಈ ಭಾಷೆಗಳಲ್ಲಿ ಅವನು ಹೆಚ್ಚು ಪರಿಣತಿಯನ್ನು ಸಂಪಾದಿಸಿದ್ದನಷ್ಟೆ. ಆದರೂ ತನ್ನ ವಿಷಯ ನಿರೂಪಣೆಯಲ್ಲಿ ಕನ್ನಡಕ್ಕೆ ಸಮಾನ ಸ್ಥಾನವನ್ನು ಕಲ್ಪಿಸಿದ್ದಾನೆ. ಇಂತು ಹೊಸ ದೃಷ್ಟಿಯಿಂದ ಕನ್ನಡ ನುಡಿಯನ್ನು ಪರಿಶೀಲಿಸಿದವರಲ್ಲಿ ಎಲಿಸ್ ಮೊದಲಿಗನು.

ದ್ರಾವಿಡ ಭಾಷಾ ವರ್ಗವು ಹೊಸ ಸಂಶೋಧನೆಗಳ ಮೂಲಕ ವಿಸ್ತಾರಗೊಳ್ಳುತ್ತ ನಡೆದು ಗೋಂಡ್ ಭಾಷೆಯು ಆ ವರ್ಗಕ್ಕೆ ಸೇರಿದ್ದೆಂಬ ಊಹೆಯನ್ನು ಮಂಡಿಸಲಾಗಿದ್ದಿತು. ಆಗ ವಾಲ್ಟರ್ ಎಲಿಯಟ್ ಗೋಂಡ್ ಭಾಷೆಯ ಅನೇಕ ಶಬ್ದಗಳನ್ನು ಭಾರತದ ೮–೧೦ ಭಾಷೆಗಳ ಶಬ್ದಗಳೊಂದಿಗೆ ಹೋಲಿಸಿ ಆ ಭಾಷೆಯು ದ್ರಾವಿಡ ವರ್ಗದ್ದೆಂಬುದನ್ನು ಗಟ್ಟಿಗೊಳಿಸಿದನು. (JASB, 1847). ಹಾಗೆ ಮಾಡುವಾಗ ಕನ್ನಡವನ್ನೇ ತಳಹದಿಯಾಗಿಟ್ಟು ಕೊಂಡನಲ್ಲದೆ ವಾಕ್ಯರಚನೆಯ ಸಾಮ್ಯವನ್ನು ತೋರಿಸುವಲ್ಲಿ ಕನ್ನಡ ವಾಕ್ಯಗಳನ್ನೇ ಆಯ್ದುಕೊಂಡಿದ್ದಾನೆ.

ಅದರಂತೆ ಬೇರೆ ಹಲವು ವಿದೇಶೀ ಅಧಿಕಾರಿಗಳೂ ಮಿಶನರಿಗಳೂ ಇಂಗ್ಲಿಷ್, ಜರ್ಮನ್ ಪತ್ರಿಕೆಗಳಲ್ಲಿ ಕನ್ನಡದ ಬಗ್ಗೆ ಲೇಖಗಳನ್ನು ಬರೆದಿದ್ದಾರೆ. ಮೈಸೂರು ಕಮೀಶನ್‌ದಲ್ಲಿ ಓರ್ವ ಅಧಿಕಾರಿಯಾಗಿದ್ದ ಕ್ಯಾಪ್ಟನ್ ಮೆಕೆಂಝಿ ಕನ್ನಡ ಛಂದಸ್ಸನ್ನು ಕುರಿತು ಬರೆದ ಲೇಖವನ್ನು ಇಲ್ಲಿ ಮತ್ತೊಮ್ಮೆ ನೆನೆಯಬಹುದು.

ಮೇಲಿನ ಲೇಖಗಳು ಕನ್ನಡೇತರ ಭಾಷೆಗಳಲ್ಲಿ ಇದ್ದವುಗಳು. ಕನ್ನಡದಲ್ಲಿಯೇ ಬರೆದ ಸಾಹಿತ್ಯಿಕ ಪ್ರಬಂಧಗಳನ್ನು ತುಸು ನೋಡೋಣ. ಅವುಗಳಲ್ಲಿ ಕನ್ನಡ ಭಾಷೆಯನ್ನು ಕುರಿತ ಆರ್. ರಘುನಾಥರಾಯರ ಸ್ವತಂತ್ರ ಸರಣಿಯ ಪ್ರಬಂಧಗಳು ಪರಿಶೀಲಿಸತಕ್ಕವಾಗಿವೆ (ಕರ್ಣಾಟಕ ಭಾಷಾ ವ್ಯಾಕರಣೋಪನ್ಯಾಸ ಮಂಜರೀ, (೧೮೯೪). ಮೂಲತಃ ಅವು ಕಾಲೇಜಿನ ಉಪನ್ಯಾಸಗಳು. ಅದುವರೆಗೆ 'ಹೊಸಗನ್ನಡದ ನಿಜ ಸ್ಥಿತಿಯು ಪ್ರಕಟನೆಗೆ ಬಾರದಿರುವುದನ್ನು ನೋಡಿ, ಸುಮ್ಮನಿರುವುದು ಸರಿಯಲ್ಲವೆಂದು ನಂಬಿ, ಧೈರ್ಯಮಾಡಿ ಈ ಉಪನ್ಯಾಸಗಳನ್ನು ಮುದ್ರಿಸಿರುತ್ತೇನೆ' ಎಂಬುದಾಗಿ ರಘುನಾಥರಾಯರು ಮುನ್ನುಡಿಯಲ್ಲಿ ಹೇಳಿದ್ದಾರೆ. ಪೂರ್ವದ ಹಳಗನ್ನಡ ಮತ್ತು ಹಳಗನ್ನಡಗಳ ಪ್ರಸ್ತಾಪವು ಅದಕ್ಕೆ ಹಿನ್ನೆಲೆಯಾಗಿ ಬಂದಿದೆ.

ಲೂಯಿ ರೈಸ್ ೭ನೆಯ ಶತಮಾನದ ವರೆಗೆ ಪೂರ್ವದ ಹಳಗನ್ನಡವಿತ್ತೆಂದು ಹೇಳುತ್ತಾರಷ್ಟೆ. ಅದು ರಘುನಾಥರಾಯರಿಗೆ ಸರ್ವಥಾ ಒಪ್ಪಿಗೆಯಿಲ್ಲ. 'ವಿಲ್ಕ್ಸ ಮೊದಲಿಗೆ ಹಾಗೆ ಹೇಳಿದನೆಂದು ರೈಸ್ ಅದನ್ನು ಪುನರುಚ್ಚರಿಸಿದ್ದಾರೆ; ಅದಕ್ಕೆ ಆಧಾರವನ್ನು ಕೊಟ್ಟಿಲ್ಲ; ತಾನೇ ಸಂಪಾದಿಸಿದ ಆ ಕಾಲದ ಶ್ರವಣಬೆಳ್ಗೊಳದ ಶಾಸನಗಳನ್ನು ಕುರಿತು, ಅವು ಹಳಗನ್ನಡದಲ್ಲಿವೆ ಎನ್ನುತ್ತಾನಲ್ಲದೆ ಪೂರ್ವದ ಹಳಗನ್ನಡವೆನ್ನಲಿಲ್ಲ'. . .ಹೀಗೆ ರೈಸರನ್ನು ಈ ರೀತಿ ಖಂಡಿಸುವಾಗ ರಘುನಾಥರಾಯರು ಎಷ್ಟೇ ಆತುರವನ್ನು ತೋರಿರಲಿ, ಪೂರ್ವದ ಹಳಗನ್ನಡದ ರೂಪಗಳು ಆಮೇಲೆ ಸ್ಪಷ್ಟವಾಗಿ ಬೆಳಕಿಗೆ ಬಂದವು. ಮತ್ತು ಅಂಥದೊಂದು ಅವಸ್ಥೆಯು ಕನ್ನಡ ಭಾಷೆಗೆ ಇದ್ದಿತೆಂಬ ಅಭಿಪ್ರಾಯಕ್ಕೆ ಪುಷ್ಟಿ ದೊರೆಯಿತು.

ಹಳಗನ್ನಡ ಹೊಸಗನ್ನಡ ಭೇದಗಳನ್ನು ವಿವೇಚಿಸುವಾಗ ಪ್ರಾಚೀನ ಕವಿಗಳು ಕಾಲಮಾನವನ್ನು ಇಟ್ಟುಕೊಂಡಿರಲಿಲ್ಲವೆನ್ನುವುದು ಸರಿಯೇ. ಅದನ್ನು ವಿಶದೀಕರಿಸುತ್ತ ರಘುನಾಥರಾಯರು 'ಹಳಗನ್ನಡವೆಂದರೆ ಬಹುಕಾಲದಿಂದ ಇದ್ದ ಪರಂಪರಾಗತವಾದ ಪ್ರಾಚೀನ ಮಾರ್ಗದ ಕನ್ನಡ ; ಅದುವೆ ತಿರುಳ್ಗನ್ನಡವೆಂದು ಹೇಳಿದ್ದಾರೆ. ಅದು ತಮಿಳಿಗೆ ಹೆಚ್ಚು ಸಮೀಪವಾಗಿದೆ; ಮತ್ತು ಹಳಗನ್ನಡಕ್ಕೂ ತೆಲುಗಿಗೂ ತುಂಬ ವ್ಯತ್ಯಾಸವಿದೆ' ಎನ್ನುತ್ತಾರೆ.

ಆರ್.ರಘುನಾಥರಾಯರ ಪ್ರಕಾರ ತೆಲುಗಿನ ಸಂಪರ್ಕದಿಂದ ಹಳಗನ್ನಡದ ಸ್ವರೂಪವು ಮುಂದೆ ಕ್ರಮೇಣ ಮಾರ್ಪಟ್ಟಿತು. ಶಬ್ದಗಳು ಸ್ವರಾಂತಗಳಾಗುತ್ತ ನಡೆದುವು.

ಬಿಂದು ಲೋಪವಾಯಿತು. ವಾಕ್ಯರಚನೆಯಲ್ಲಿ ಸಹ ಮಾರ್ಪಾಟಾಯಿತು. ಈ ಬದಲಾವಣೆಗಳಲ್ಲೆಲ್ಲ ಬಿಂದು ಲೋಪವೇ ಮುಖ್ಯ ಭೇದ. ೧೮ನೆಯ ಶತಮಾನದಿಂದ ತೆಲುಗಿನ ಪ್ರಭಾವವು ಬಹಳ ಹೆಚ್ಚಿತು. ಅದರಿಂದ ಕನ್ನಡ ಭಾಷೆಗೆ ಒಂದು ಬಗೆಯ ಇಂಪು ಉಂಟಾಯಿತು. ತಿರುಳ್ಗನ್ನಡಕ್ಕೆ ಪ್ರತಿಯಾಗಿ, ಇದು ಬೆರಕೆಯ ಕನ್ನಡ. ಭಟ್ಟಾಕಳಂಕನು ಬೆರಕೆಯ ಕನ್ನಡವಿದ್ದ ಕುಮಾರವ್ಯಾಸಭಾರತ, ಬಸವಪುರಾಣಾದಿಗಳಿಂದ ಉದಾಹರಣೆಗಳನ್ನು ತೆಗೆದುಕೊಳ್ಳದೇ ಅದಕ್ಕೂ ಹಿಂದಿನ ಮಾರ್ಗಕಾವ್ಯಗಳನ್ನು ಆಶ್ರಯಿಸಿದ್ದಾನೆ – ಎಂದು ಮುಂತಾಗಿ ರಘುನಾಥರಾಯರು ಪ್ರತಿಪಾದಿಸಿದ್ದಾರೆ. ತೆಲುಗಿನ ಪ್ರಭಾವವನ್ನು ಮನಗಾಣಿಸುವುದಕ್ಕೆ ವನಂ (ಹ.ಗ)→ ವನವು (ಹೊ.ಗ)→ ವನಮು (ತೆ); ಆಂ ಬಂದಪೆಂ→ನಾನು ಬರುತ್ತೇನೆ→ನೇನು ವಚ್ಚಿತಿನಿ–ಇವೇ ಮುಂತಾದ ಉದಾಹರಣೆಗಳನ್ನು ಕೊಟ್ಟಿದ್ದಾರೆ. ೧೮ನೆಯ ಶತಮಾನದಿಂದ ತೆಲುಗು, ಕನ್ನಡ ಲಿಪಿಗಳು ಒಂದೇ ಆಗಿದ್ದುವೆಂಬುದನ್ನು ನೆನಪಿಸಿದ್ದಾರೆ.

ತೆಲುಗಿನ ಆಸರೆಯಿಂದ ಬೆಳೆದು ಬಂದ ಇಂಥ ಹೊಸಗನ್ನಡ ರೂಪವನ್ನು ಸ್ಥಾಪಿಸಿಯಾದ ಮೇಲೆ, ರಘುನಾಥರಾಯರು ಅದನ್ನು ಕುರಿತ ತಮ್ಮ ಕಾಲದ ವ್ಯಾಕರಣ ಗ್ರಂಥಗಳ ಪರಾಮರ್ಶೆಯನ್ನು ಮಾಡಿದ್ದಾರೆ. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಹೊಸಗನ್ನಡಕ್ಕೆ ವ್ಯಾಕರಣವನ್ನು ಬರೆಯ ಹೊರಟ ಕೃಷ್ಣಮಾಚಾರಿ ಮತ್ತು ರಾಮಸ್ವಾಮಿ ಇವರು ಬಳಕೆಯ ಕನ್ನಡಕ್ಕೆ ವ್ಯಾಕರಣವನ್ನು ರಚಿಸ ಹೊರಟಿದ್ದು ಶುದ್ಧ ತಪ್ಪು ಎಂದು ರಘುನಾಥರಾಯರು ಅವರನ್ನು ಖಂಡಿಸಿದ್ದಾರೆ. "ಬೀದಿಯಲ್ಲಿ ಕೇಳಿಬರುವ ಉದಾಹರಣೆಗಳಿಂದ ಇಂಗ್ಲಿಷ್‌ನಲ್ಲಿ ವ್ಯಾಕರಣ ಗ್ರಂಥವನ್ನು ರಚಿಸಿದುದುಂಟೆ? ಆದಕಾರಣ ಗ್ರಂಥಸ್ಥವಾದ ಪ್ರಯೋಗಗಳನ್ನು ಅವರು ಗಮನಿಸಬೇಕಿತ್ತು. 'ಕನ್ನಡ ಭಾರತ ಮೊದಲಾದ ಉದ್ಗ್ರಂಥಗಳ ಪ್ರಯೋಗಗಳನ್ನು ಈ ಭಟ್ಟಾಕಳಂಕನು ಲಕ್ಷ್ಯಾರ್ಹವಲ್ಲವೆಂದು ತ್ಯಜಿಸಿರುವಲ್ಲಿ ವಾಗ್ವಿಧಾಯಿನಿ, ಶಬ್ದಾದರ್ಶ ಮುಂತಾದವುಗಳನ್ನು ಬರೆದಿರುವವರ ಧೈರ್ಯವನ್ನು ಹೊಗಳಬೇಕಾಗಿಲ್ಲವೆ?" ಎಂದು ಕೆಣಕಿದ್ದಾರೆ.

ಹಾಗಿದ್ದರೆ ಹೊಸಗನ್ನಡ ವ್ಯಾಕರಣ ಎಂತಿರಬೇಕು? 'ಭಟ್ಟಾಕಳಂಕನ ವ್ಯಾಕರಣವು ಹೊಸಗನ್ನಡಕ್ಕೆ ಸಾಕಾಗಿದೆಯೆಂದು ಅನೇಕರು ಒಪ್ಪಿದ್ದಾರೆ. ಈ ವ್ಯಾಕರಣದಲ್ಲಿ ಹೇಳುವ ವಿಷಯಗಳ ಜೊತೆಗೆ ಕುಮಾರವ್ಯಾಸ ಭಾರತ, ತೊರವೆ ರಾಮಾಯಣ, ಅಧ್ಯಾತ್ಮ ರಾಮಾಯಣ ಮುಂತಾದ ಹೊಸಗನ್ನಡದ ಗ್ರಂಥಗಳ ಪ್ರಯೋಗ ರೀತಿಗಳನ್ನು ಸೇರಿಸಿ, ಕನ್ನಡ ಭಾಷೆ ಬೆಳೆಯುತ್ತ ಬಂದ ರೀತಿಯನ್ನು ವಿಶದಗೊಳಿಸುತ್ತ ಗ್ರಂಥವೊಂದನ್ನು ರಚಿಸಿದರೆ ಕನ್ನಡಕ್ಕೆ ಸರಿಯಾದ ವ್ಯಾಕರಣವಾಗುವುದು'– ಇದು ರಘುನಾಥರಾಯರ ನಿಲುಮೆ. ಮುಂದೆ ೨೦ನೆಯ ಶತಮಾನದಲ್ಲಿ ಹೊರಬಂದ, ಅವರ ತೃತೀಯೋಪನ್ಯಾಸ ಮಾಲಿಕೆಯಲ್ಲಿ ಅಂದಿನ ಕನ್ನಡ ವ್ಯಾಕರಣಗಳಲ್ಲಿಯ ದೋಷಗಳನ್ನು ಎತ್ತಿ ತೋರಿಸಿದ್ದಾರೆ.

ಕಿಟೆಲ್ ಕೋಶವನ್ನೂ ಟೀಕಿಸಿದ್ದಾರೆ. 'ಗಂಡ' ಶಬ್ದಕ್ಕೆ ಕೋಶದಲ್ಲಿ ಆಪತ್ತು ಎಂಬ ಅರ್ಥವನ್ನು ಕೊಡದಿದ್ದುದರಿಂದ 'ಗಂಡರ ಗಂಡ' ಎಂಬ ಶಾಸನ ಪದಕ್ಕೆ ರೈಸ್ ಸರಿಯಾಗಿ ಅರ್ಥಮಾಡದೇ ಹೋದರಂತೆ. ಆದ್ದರಿಂದ "ಕಿಟೆಲ್ ಸಾಹೇಬರವರ ನಿಘಂಟುವಿನ ಸಹಾಯದಿಂದ ಸಾಧಾರಣ ಪದ್ಯಕ್ಕೂ ಅರ್ಥ ಮಾಡುವುದಕ್ಕಾಗುವುದಿಲ್ಲ", "ಶಾಸ್ತ್ರವ್ಯಾಸಂಗಕ್ಕೆ ಉಪಯೋಗವಿಲ್ಲ"-ಎಂಬ ಮಟ್ಟಿಗೆ ಆ ಟೀಕೆ ಕಟುವಾಗಿದೆ.

ರಘುನಾಥರಾಯರ ಅನೇಕ ವಿಚಾರಗಳು ವಿವಾದಾಸ್ಪದವಾಗಿವೆ ಮತ್ತು ಆಧಾರಸಹಿತ ಅವನ್ನು ಖಂಡಿಸಲೂಬಹುದು. ಉದಾಹರಣೆಗೆ ದಕ್ಷಿಣೋತ್ತರ ಮಾರ್ಗ, ತಿರುಳ್ಗನ್ನಡ, ತೆಲುಗಿನ ಪ್ರಭಾವ-ಇವುಗಳ ಬಗ್ಗೆ ಅವರ ವಾದವು ಇಂದಿನ ವಿವಾದದಲ್ಲಿ ಗಟ್ಟಿಯಾಗಿ ನಿಂತಿಲ್ಲ. ಆದರೆ ಹೊಸ ದೃಷ್ಟಿಯಿಂದ ಕನ್ನಡ ಭಾಷೆಯ ಬಗ್ಗೆ ವಿಚಾರಮಾಡಿ, ಒಳ್ಳೇ ಜೋರಿನಿಂದ ತನ್ನ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ೧೯ನೆಯ ಶತಮಾನದಲ್ಲಿ ಸಾಹಿತ್ಯ ವಿಮರ್ಶನದ ಹೊಳಹನ್ನು ಹಾಕಿದವರೊಳಗೆ ಅವರೂ ಒಬ್ಬರಾಗಿದ್ದಾರೆ.

ಕನ್ನಡಿಗರು ತಮ್ಮ ಭಾಷಾಸೇವೆಯನ್ನು ಮಾಡುವುದರಲ್ಲಿಯೇ ಅವರ ಜನ್ಮ ಸಾರ್ಥಕತೆ ಇದೆ ಎಂಬ ವಿಚಾರವನ್ನು ವಿಶೇಷ ಕಳಕಳಿಯಿಂದ ಮಂಡಿಸಿದ ಮಹತ್ವದ ಪುಸ್ತಕವೊಂದನ್ನು ಇಲ್ಲಿ ಉಲ್ಲೇಖಿಸುತ್ತೇವೆ. ಅದುವೆ ವಲ್ಲಭ ಮಹಾಲಿಂಗ ತಟ್ಟಿ ಕೃತ 'ಕನ್ನಡಿಗರ ಜನ್ಮಸಾರ್ಥಕತೆ.' ಆ ಪ್ರಬಂಧವು ಅಂದಿನ ಕನ್ನಡಿಗರ ಸದ್ಯಃಸ್ಥಿತಿ, ಅನಾಸ್ಥೆ ಮತ್ತು ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಮಾಡಬೇಕಾದ ಕಾರ್ಯ-ಇವನ್ನು ವಿಶದವಾಗಿ ಒಳಗೊಂಡಿದೆ.

"ಭಾಷಾಸೇವೆಯು ಬಿಡುವಿದ್ದಾಗ ಮಾಡುವ ಒಂದು ಹವ್ಯಾಸವಲ್ಲ. ಅದು ಅತ್ಯಗತ್ಯದ ಕೆಲಸ. ಆದರೇನು? 'ಕಯ್ಯಿಡಿದು ಜಗ್ಗಿದರೆ ಮೆಯ್ಯು ತಾನೇ ಬರುವಂತೆ ಭಾಷಾ ಸೇವೆಯನ್ನು ಮಾಡುವುದರಿಂದ ದೇಶೋನ್ನತಿಯಾಗುವದೆಂಬ ಮಾತು ಬಹು ಜನ ಕನ್ನಡಿಗರಿಗೆ ತಿಳಿಯಲೊಲ್ಲದು. ಕೆಲವು ಸಂಸ್ಥೆಗಳು ಮತ್ತು ವ್ಯಕ್ತಿಗಳು ಆ ಕಾರ್ಯದಲ್ಲಿ ತೊಡಗಿದ್ದುದು ನಿಜ. ಆದರೆ 'ಜಿನುಗಾದ ಕೂದಲು ನೆರಳನ್ನು ಕೆಡುವುತ್ತಿದ್ದರೂ ಅದರಿಂದ ಕೊಡೆಯ ಕೆಲಸವಾಗದು.' ಕೆಲಸವಾಗದಿದ್ದುದರ ಮುಖ್ಯ ಕಾರಣವೆಂದರೆ ಕನ್ನಡಿಗರ ಅನಾಸ್ಥೆ. ನಮ್ಮ ನಾಡು ನಾಲ್ಕು ಸರಕಾರಗಳ ಆಡಳಿತಕ್ಕೊಳಪಟ್ಟಿದ್ದರಿಂದ ಪರಸ್ಪರ ವ್ಯವಹಾರ ಕಡಿಮೆಯಾಗಿ ಗ್ರಂಥರಚನೆಯಲ್ಲಿ ಉತ್ಸಾಹ ತಗ್ಗಿದೆ. ಕನ್ನಡ ಭಾಷೆಯು ಹಲವು ಬೇಳೆಯ ಕಡಿಗಳನ್ನು ಕೂಡಿಸಿ ಮಾಡಿದ ದೋಸೆಯಂತೆ ಕಣ್ಣಿಗೆ ಬೀಳುತ್ತದೆ. ಅದು ಬಾಯಿ ಕೆಟ್ಟ ಜನರಿಗೆ ರುಚಿ ಹತ್ತಿದರೂ ಪುಷ್ಟಿಯನ್ನುಂಟುಮಡುವಂತಹದಲ್ಲ. ಮೈಸೂರು ನಾಡಿನ ಭಾಷೆಯೊಳಗೆ ಗುರೆ, ಖಾಯಿಷ್, ಹಿಯರಿಂಗ್ ಮುಂತಾದ ಅನ್ಯ ಭಾಷೆಗಳ ಅನವಶ್ಯಕ ಶಬ್ದಗಳು ಅಳತೆಗೆಟ್ಟು ತುಂಬಿವೆ. ಮುಂಬಯಿ ಕರ್ನಾಟಕ ದಲ್ಲಿಯ ಭಾಷೆಯು ಕೊಂಕಣೀ ಭಾಷೆಯ ಸ್ವರೂಪವನ್ನು ತಾಳುತ್ತ ನಡೆದಿರುವದು.

ಕನ್ನಡದಲ್ಲಿ ಲೆಕ್ಕವಿಡುವದೂ ಪತ್ರ ಬರೆಯುವದೂ ಅಮಂಗಳವೆಂದು ಬಹು ಜನರು ಗ್ರಹಿಸುವರು."

ಮುಂದುವರಿದು, ಲೇಖಕನು ಕನ್ನಡ ಭಾಷೆಯು ಅಪೂರ್ಣವೂ ರಸಹೀನವೂ ಆಗಿದೆಯೆಂದು ತಿಳಿಯುವವರಿಗೆ ಮಾರ್ಮಿಕವಾಗಿ ಉತ್ತರ ಕೊಟ್ಟಿದ್ದಾನೆ:

"ಕನ್ನಡದಲ್ಲಿಯೇ ತನ್ನ ಎಲ್ಲ ವ್ಯವಹಾರನ್ನು ಸಾಗಿಸುವ ಹಳ್ಳಿಗನಿಗೆ ಕನ್ನಡವು ಎಂದೂ ಕೊರತೆಯ ನುಡಿಯಾಗಿ ತೋರಲಿಲ್ಲ. ಅದೇ ಮರಾಠೀ, ಇಂಗ್ಲಿಷ್ ಭಾಷೆಗಳನ್ನು ತುಸು ಅರಿತಿದ್ದ ವಿದ್ಯಾವಂತರಿಗೆ ಮಾತ್ರ ಹಾಗೆ ಅನಿಸುತ್ತದೆ. ಇರಬಹುದು. ಅಂಥವರು ಆ ಪರ ಭಾಷೆಗಳ ಮರ್ಮವನ್ನಾದರೂ ಚೆನ್ನಾಗಿ ಅರಿತಿದ್ದಾರೆಯೆ? ಇಲ್ಲ! ಅವರಿಗೆ ಕನ್ನಡದ ಪರಿಪೂರ್ಣತೆಯನ್ನು ಬಿಂಬಿಸುವದೆಂದರೆ ನೀಗ್ರೋನ ಮುಂದೆ ವೇದಾಂತದ ಉಪದೇಶ ಮಾಡಿದಂತೆಯೇ!

"ಆದರೂ ಆ ಕೆಲಸ ಮಾಡಬೇಕಾಗಿದೆ. ಏಕೆಂದರೆ ಇಂಥ ವಿದ್ಯಾವಂತರೇ ಭಾಷಾ ಸೇವೆಯನ್ನು ಕೈಗೊಳ್ಳಬೇಕಾದವರು. ನೂರಾರು ಜನ ಶ್ರೇಷ್ಠ ಕವಿಗಳು ಕನ್ನಡದಲ್ಲಿಯೆ ತಮ್ಮ ಮಹೋನ್ನತ ವಿಚಾರಗಳನ್ನು ವ್ಯಕ್ತಪಡಿಸಿದ್ದಾಗ, ಸ್ವತಃ ವಿದೇಶೀಯರು ಕನ್ನಡದ ಬಗ್ಗೆ ಆಸ್ಥೆಯನ್ನು ತೋರಿ, ಅದನ್ನು ಕಲಿತು ಗ್ರಂಥರಚನೆಯನ್ನು ಸಹ ಮಾಡುತ್ತಿದ್ದಾಗ ಇಂದಿನ ವಿದ್ಯಾವಂತರು ಸುಮ್ಮನುಳಿಯುವುದು ಸರ್ವಥಾ ಹಿತಕಾರಿಯಲ್ಲ.

"ಭಾಷಾಸೇವೆಗೆ ಬೇಗ ಮನಸೋಲಬಹುದಾದವರೆಂದರೆ ಅಧ್ಯಾಪಕರು. ಆದರೆ ಅವರಲ್ಲಿ ಅನೇಕರು ತಮ್ಮ ಯೋಗ್ಯತೆಯ ಬಗ್ಗೆ ಅಪನಂಬಿಕೆ ಇದ್ದುದರಿಂದಾಗಲಿ ಕಾರ್ಯಬಾಹುಲ್ಯವಿದ್ದುದರಿಂದಾಗಲೀ ಗ್ರಂಥ ಪ್ರಸಿದ್ಧೀಕರಣದ ಶಕ್ತಿ ಇಲ್ಲದದರಿಂದಾಗಲೀ ಮೌನವ್ರತವನ್ನು ಧರಿಸಿರುವರು. ಇತರರು? ವಕೀಲರು, ಸರಕಾರೀ ಉದ್ಯೋಗಸ್ಥರು, ವ್ಯವಹಾರಸ್ಥರು ತಂತಮ್ಮ ಉದ್ಯೋಗದ ಅನುಭವಗಳನ್ನು ಬರೆಯುವಲ್ಲಿ ದಿನಕ್ಕೆ ಒಂದು ತಾಸನ್ನಾದರೂ ಕಳೆಯಬಾರದೆ? ಪಂಡಿತರಾದವರು ಹಳೆಯ ಕಾವ್ಯಗಳ ಶೋಧವನ್ನು ಮಾಡಬಹುದು. ಇನಾಮದಾರ ಅಥವಾ ಜಹಗೀರದಾರನು ತನ್ನದೇ ಮನೆತನದ-ಪೂರ್ವಜರ ಚರಿತ್ರೆಯನ್ನು ಬರೆದರೂ ನಾಡಿಗೆ ಉಪಕಾರವಾದೀತಲ್ಲವೆ?

"ಭಾಷಾಸೇವೆಯನ್ನು ಮಾಡಬೇಕೆನ್ನುವವರು ಹಳಗನ್ನಡ ಕಾವ್ಯಗಳನ್ನು ಅಭ್ಯಾಸ ಮಾಡುವುದು ಅವಶ್ಯವಾಗಿದೆ. ಆದರೆ ಅದು ಅರ್ಥವಾಗುವುದಿಲ್ಲ ಎಂದು ಅನೇಕರು ಭಾವಿಸಿದ್ದಾರೆ. ಹಳಗನ್ನಡ ಹೊಸಗನ್ನಡಗಳ ತಳಹದಿ ಒಂದೇ. ಪ್ರತ್ಯಯಭೇದ, ಉಚ್ಚಾರಭೇದವಿದ್ದ ಮಾತ್ರಕ್ಕೆ ಹಳಗನ್ನಡವು ನಮ್ಮ ಪಾಲಿಗೆ ಜಪಾನೀ ಭಾಷೆಯೇ ಎಂಬುದಾಗಿ ದೂರ ಸರಿಸುವುದು ಯುಕ್ತವಲ್ಲ. ಆದಕಾರಣ ಹಳೆಯ ಅಚ್ಚಗನ್ನಡ ಶಬ್ದಗಳ ಮೋಹಕ ಸ್ವರೂಪವನ್ನು ತೋರಗೊಡುವ ಕಾರ್ಯ ನಡೆಯಬೇಕಾಗಿದೆ.

ಇಲ್ಲವಾದರೆ ವೇದಕ್ಕಿಂತ ದುರ್ಬೋಧವಾದ ಝೆಂದ್ ಅವೆಸ್ತಾದ ಮಾಲಿಕೆಯಲ್ಲಿ ನಮ್ಮ ಪ್ರಾಚೀನ ಕಾವ್ಯಗಳನ್ನು ಸೇರಿಸಬೇಕಾದೀತು !

"ಈ ತೊಂದರೆಯನ್ನು ನೀಗಿಕೊಂಡು ಪ್ರಾಚೀನ ಕಾವ್ಯಗಳನ್ನು ಅಭ್ಯಾಸ ಮಾಡಿದರೆನ್ನುವ. ಆ ಕವಿಗಳ ಪ್ರಾಸಾದಿಕ ವಾಣಿಯನ್ನು ಮನದಂದು ಅನುಸರಿಸುತ್ತ ತಾವೂ ಕವನ ಬರೆಯುವುದಕ್ಕೆ ತೊಡಗಬಾರದು. ಕವಿತೆ ಎಲ್ಲರ ತುತ್ತಲ್ಲ. ಕೆಲವರಿಗೆ ಮಾತ್ರ ಸಹಜವಾಗಿ ಸ್ಫುರಿಸುವಂತಹದು. ಅಲ್ಲದೆ ಆಧುನಿಕ ಜನರಲ್ಲಿ ತರ್ಕ ಪ್ರವೃತ್ತಿ ಹೆಚ್ಚಾಗಿದೆ. ಅಂಥವರು ಗದ್ಯದಲ್ಲಿಯೆ ಗ್ರಂಥರಚನೆ ಮಾಡತಕ್ಕದು. ಇಷ್ಟಕ್ಕೂ ಈಗಿನ ಕನ್ನಡ ಬಹುಜನ ಸಮಾಜವು ಕವಿತಾ ವಾಚನಕ್ಕೆ ತಕ್ಕದ್ದಾಗಿಲ್ಲ'.

ಇನ್ನು, ಭಾಷಾಸೇವೆಯ ಬಗೆಗೆ ಈ ಪ್ರಬಂಧಕಾರನು ಮಾಡಿದ ಸೂಚನೆಗಳು ಇಂತಿವೆ: ಸಂಸ್ಕೃತದಿಂದ ಮನೋಹರ ಕಾವ್ಯಗಳನ್ನು ಕನ್ನಡಿಸಬೇಕು. ಹಳಗನ್ನಡ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಬೇಕು. ಆಧುನಿಕ ಯುಗಕ್ಕೆ ಸಂಬಂಧಿಸಿದ ವಿಚಾರಗಳನ್ನು ಇಂಗ್ಲಿಷ್‌ನಿಂದ ತರಬೇಕು. ವಿವಿಧ ಬಗೆಯ ಗ್ರಂಥಗಳನ್ನು ವಿಶೇಷತಃ ಐತಿಹಾಸಿಕ ಗ್ರಂಥಗಳನ್ನು ರಚಿಸಬೇಕು. "ಹೀಗೆ ಉಪಯುಕ್ತ ಗ್ರಂಥಗಳನ್ನು ಜಾಣರಾದ ಕನ್ನಡಿಗರು ರಚಿಸಿದರೂ ಉಳಿದವರು ಅವುಗಳನ್ನೋದಿ ಕರ್ತವ್ಯತತ್ಪರರಾಗದಿದ್ದರೆ ಅವರ ಶ್ರಮವು ಬೋರ್ಗಲ್ಲ ಮೇಲೆ ನೀರ್ಗರೆದಂತಾಗುವುದು. . .ಮಾನವ ಜಾತಿಯ ಜ್ಞಾನಾವಸ್ಥೆಯಿಂದ ಇಲ್ಲಿಯವರೆಗೆ ಸಂಗ್ರಹಿಸಲ್ಪಟ್ಟ ಯಾವತ್ತು ವಿಷಯ ಜ್ಞಾನವು ವಾಚನದಿಂದ ದೊರೆಯುವುದು. ಕಾಲವೆಂಬ ಅನಂತ ಸಮುದ್ರದೊಳಗಿನ ಅತಿ ದೂರಸ್ಥಾನದಿಂದ ಮೂಲಾಕ್ಷರಗಳೆಂಬ ಹಡಗುಗಳು ಜ್ಞಾನವೆಂಬ ಸರಕನ್ನು ತುಂಬಿಕೊಂಡು ನಮ್ಮ ಹತ್ತಿರ ಬಂದಿರುತ್ತವೆ. ಅವುಗಳೊಳಗೆ ನಮಗೆ ಬೇಕಾದಷ್ಟನ್ನು ವಾಚನವೆಂಬ ಬೆಲೆ ಕೊಟ್ಟು ಕೊಂಡುಕೊಳ್ಳುವುದು ಮನುಷ್ಯ ಧರ್ಮವದೆ."

ಎಷ್ಟೊಂದು ಮನೋಜ್ಞವಾದ ವಿಚಾರಗಳು! ೧೯ನೆಯ ಶತಮಾನದ ಕೊನೆಯಲ್ಲಿ ಪ್ರಕಟವಾದ ಈ ಕೃತಿಯು ಅಂದಿನ ವಿಚಾರವಂತ ಮತ್ತು ಪ್ರಗತಿಪರ ಕನ್ನಡಾಭಿಮಾನಿಗಳ ಮನೋಧರ್ಮಕ್ಕೆ ಕನ್ನಡಿ ಹಿಡಿದಂತಿದೆ. ಅಂಥವರು ಕೆಲವರಾದರೂ ಕಳಕಳಿಯಿಂದ ಕನ್ನಡಕ್ಕಾಗಿ ದುಡಿದರೆಂದೇ ಮುಂದಿನ ಪೀಳಿಗೆಯವರಲ್ಲಿ ಹೆಚ್ಚಿನ ಜಾಗೃತಿ ಮೂಡುವುದು ಸಾಧ್ಯವಾಯಿತು.

ಸಾಹಿತ್ಯಿಕ ಪ್ರಬಂಧಗಳಲ್ಲಿ ಮೇಲ್ಮಟ್ಟದ ಇನ್ನೊಂದು ಬರವಣಿಗೆ ಎಂ.ಎ. ರಾಮಾನುಜಯ್ಯಂಗಾರರದು. ಅವರ 'ಪ್ರಬಂಧಾವಳಿ'ಯು ೧೯ನೆಯ ಶತಮಾನದಲ್ಲಿ ರಚಿತವಾದುದು (ಸು.೧೯೦೪). ಮನುಷ್ಯನ ಸುಖದ ಸಾಧನೆಗಾಗಿ ಅಗತ್ಯವಾದ ಜ್ಞಾನ, ಧರ್ಮ ಹಾಗೂ ಆರೋಗ್ಯ ಇವುಗಳ ವಿವೇಚನೆಯೇ ಆ ಪ್ರಬಂಧಗಳ ವಸ್ತುವಾಗಿದೆ.

ಹಳತು ಹೊಸತು ವಿಚಾರಗಳ ಸಮನ್ವಯ; ಮನಸ್ಸನ್ನು ನೇರವಾಗಿ ತಟ್ಟುವಂತಹ ನಿರೂಪಣೆ ; ಪ್ರಾಚೀನೋಕ್ತಿಗಳ ಮತ್ತು ಸಾಮತಿಗಳ ವಿಪುಲ ಬಳಕೆ-ಇವುಗಳಿಂದ ಓದುಗರ ಮನಸ್ಸಿನ ಮೇಲಾಗುವ ಗಾಢ ಪರಿಣಾಮವು ಅನುಪಮವಾದುದು ಮುಖ್ಯವೆಂದರೆ ಇದೆಲ್ಲ ಸ್ವತಂತ್ರ ವಿಚಾರದ ಫಲವಾಗಿದೆ.

ಸಾಲದ ಭಾರವನ್ನು ದೃಷ್ಟಾಂತವೊಂದರಿಂದ ವಿವರಿಸುವ ಈ ಬಗೆಯನ್ನು ನೋಡುವುದು.

"ಉಡುತೊಡುವುದಕ್ಕೂ ಒದ್ದಾಡುವವರು ದಾರಿದ್ರ್ಯವೆಂಬ ಬಾವಿಯಲ್ಲಿ ಮುಳುಗುತ್ತಾ ಕಡವೆಂಬ ಹಗ್ಗವನ್ನು ಬಿಟ್ಟು ಮೇಲಕ್ಕೆ ಎತ್ತಿ, ತಮ್ಮನ್ನು ಬದುಕಿಸುವ ಧರ್ಮಾತ್ಮರು ಉಂಟೇ ಎಂದು ಕೈಯೆತ್ತಿ ಕೂಗುತ್ತಿದ್ದು, ಕಡ ಕೊಟ್ಟವರನ್ನು ತಮ್ಮನ್ನು ಕಾಪಾಡುವುದಕ್ಕೆ ಎಂದೇ ಭಾವಿಸುವರು. [ಅವರೊ]. . . .ಮತ್ತಷ್ಟು ಭಾರವನ್ನು ಹೊರಿಸಿ ಇನ್ನೂ ಕೆಳಕ್ಕೆ ನೂಕುವುದಕ್ಕೆ ಬಂದಂಥವರೇ ಆಗುವರು."

ಕಾಲ ಅಥವಾ ಸಮಯದ ಬೆಲೆಯನ್ನು ವಿವರಿಸುವಾಗ 'ಹಣದ ಬಡ್ಡಿಯೂ ಹೊಳೆಯ ನೀರೂ ಆಯಸ್ಸಿನ ಕಾಲವೂ ಮಾತ್ರ ನಡೆಯುತ್ತವೆ; ಉಳಿದುವೆಲ್ಲವೂ ನಿದ್ದೆ ಮಾಡುತ್ತವೆ; 'ದದ್ದು ಮಡಿಕೆಯಿಂದ ನೀರು ಸ್ರವಿಸುವ ಹಾಗೆ ಕಾಲವು ಕಳೆದು ಹೋಗುತ್ತದೆ. ನಮ್ಮ ಆಯಸ್ಸೆಂಬುದೇನು? ಕಾಲ ಸಮುದಾಯವಲ್ಲವೆ? ಹೀಗಿರಲು ಕಾಲವನ್ನು ವ್ಯರ್ಥವಾಗಿ ಕಳೆವುದು ಒಂದು ವಿಧವಾದ ಆತ್ಮಹತ್ಯವಲ್ಲವೆ?' ಎಂದು ಪ್ರತಿಪಾದಿಸಿದ ರೀತಿಯು ಹೃದ್ಯವಾಗಿದೆ. ಸಂಭಾಷಣೆಯನ್ನು ಕುರಿತ ಪ್ರಬಂಧದಲ್ಲಿ ಉಕ್ತವಾದ 'ಇತರರು ಆಡಿದ ತಪ್ಪನ್ನು ತಿದ್ದಿ ಹೇಳುವುದಕ್ಕೆ ಹೋಗಬಾರದು. ಅದು ದೊಡ್ಡವರ ಕೆಲಸ. ಕೆಲವು ವೇಳೆ ನೀವೂ ಬುದ್ಧಿಗಲಿಸಬೇಕಾಗಿ ಬರುವುದು. ಆಗ ಮಾತ್ರ 'ಸ್ಮಾರಯೇ ನ ತು ಶಿಕ್ಷಯೇ' ಎಂಬ, ಸೀತಾದೇವಿಯು ಶ್ರೀರಾಮನಲ್ಲಿ ಹೇಳಿಕೊಂಡ ವಿಜ್ಞಾಪನೆಯ ಅನುಸಾರ ಇರಬೇಕು'-ಎಂಬ ಮಾತೂ 'ಅಲ್ಪರ ಸಂಗ ಅಭಿಮಾನ ಭಂಗ ಯಾವಾಗಲೂ ಅಲ್ಲ; ಅವರೊಡನೆಯ ಸಂಭಾಷಣದಿಂದಲೂ ಪ್ರಯೋಜನವಿದೆ. ಅವರು ಮಾಡಿದ ತಪ್ಪುಗಳನ್ನು ನಾವು ಮಾಡದಂತಿರಬಹುದು' ಎನ್ನುವ ಅಭಿಪ್ರಾಯವೂ ಪ್ರಬಂಧಕಾರರ ಸ್ವಂತದ ವಿಚಾರ ಮಂಥನದಿಂದ ಹೊಮ್ಮಿದವುಗಳೇ.

ಇನ್ನು ಜ್ಞಾನಸಂಪಾದನೆಯ ಮಾರ್ಗಗಳೆಂದು ಪುಸ್ತಕ, ಮುದ್ರಣ, ವಾಚನ, ಪುಸ್ತಕ ಭಂಡಾರ-ಇವುಗಳನ್ನು ವಿವರಿಸಿದ ಪ್ರಬಂಧಗಳಿವೆ. ಹದಿಮೂರನೆಯ ಪ್ರಬಂಧದಲ್ಲಿ ಸ್ನೇಹದ ಎಲ್ಲ ಪರಿಗಳನ್ನು ವಿವರಿಸಲಾಗಿದೆ. 'ಪ್ರತಿಯೊಬ್ಬ ಮನುಷ್ಯನೂ ತನ್ನ ಮಗನೊಡನೆ ತಂದೆಯಂತೆಯೂ, ಪತ್ನಿಯೊಡನೆ ಪತಿಯ ಹಾಗೂ ಗುರುವಿನೊಡನೆ ಶಿಷ್ಯನ ಹಾಗೂ ಆಚರಿಸಬೇಕಾಗುತ್ತದೆ. ಸ್ನೇಹಿತನ ವಿಚಾರದಲ್ಲಿ ಇಂಥ ಬಂಧನವಿಲ್ಲ' ಎಂಬ ಹೇಳಿಕೆ ನಿತ್ಯ ಸತ್ಯವಾದುದು. ಮುಂದೆ, ಸನ್ಮಿತ್ರನು ದೊರೆಯುವ ಸಾಧ್ಯಾಸಾಧ್ಯತೆ, ಮೈತ್ರಿಯು

ಕೆಡುವ ಕಾರಣ ಇವುಗಳನ್ನು ಭವಭೂತಿ, ಮತ್ತಿತರ ಪ್ರಾಚೀನ ಕವಿಗಳ ಉಕ್ತಿಗಳ ಮೂಲಕ ವಿಶದಗೊಳಿಸಿದುದಿದೆ.

ಸುಖಸಾಧನೆಯನ್ನು ಕುರಿತು ಎರಡು ಪ್ರಬಂಧಗಳಿವೆ. ವ್ಯಾಸರು ಹೇಳಿದ 'ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾಚೈವಾವಧಾರ್ಯತಾಂ । ಆತ್ಮ ನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್' ಎಂಬ ಶ್ಲೋಕದಲ್ಲಿ ಮನುಷ್ಯನ ಸುಖ ಸಾಧನೆಯ ಸೂಚನೆಯಿದೆ. 'ತನಗೆ ಪ್ರತಿಕೂಲವಾದುದನ್ನು ಪರರಿಗೆ ಮಾಡಲಾಗದೆಂಬುದೇ ಅದರ ತಿರುಳು'. ನಮ್ಮ ಸಕಲ ಪ್ರವೃತ್ತಿ ನಿವೃತ್ತಿಗಳಿಗೂ ಈ ಸೂತ್ರವೇ ಆಧಾರವೆಂದು ಹೇಳುತ್ತ ಪ್ರಬಂಧಕಾರರು ಪಾಶ್ಚಾತ್ಯರ ವಿಚಾರಸರಣಿಯೊಡನೆ ಅದನ್ನು ತೂಗಿ ನೋಡಿದ್ದಾರೆ. ಕೊನೆಯ ಬರೆಹದಲ್ಲಿ ಆರೋಗ್ಯ ಭಾಗ್ಯ, ಐಶ್ವರ್ಯ ಸಂಪಾದನೆ, ಜ್ಞಾನ ವ್ಯವಸಾಯ, ಸಂಸಾರಗ್ರಹಣ, ಪರಿವಾರಪ್ರಿಯತೆ, ಸನ್ಮಿತ್ರ ಸಮ್ಮಿಳನ, ಧರ್ಮಾನುಷ್ಠಾನ ಮತ್ತು ದೇವರಲ್ಲಿ ಅನನ್ಯ ನಂಬಿಕೆ–ಇವು ಸುಖ ಸಾಧನೆಯ ಅಷ್ಟಾಂಗಗಳೆಂದಿದ್ದಾರೆ.

ಈ ಪ್ರಬಂಧಾವಳಿಯಲ್ಲಿ ಲೇಖಕರ ಬಹುಶ್ರುತತ್ವ, ಜನತೆಯ ಒಳ್ಳಿತನ್ನೆ ಬಯಸುವ ಮನೋಧರ್ಮ, ತಿಳಿಯಾದರೂ ಬಿಗಿಯಿಂದ ಕೂಡಿದ ಭಾಷಾಶೈಲಿ–ಇವು ಎದ್ದು ಕಾಣುವಂತಿವೆ. ನೂರು ವರ್ಷದ ಹಿಂದೆಯೇ ಕನ್ನಡ ಪ್ರಬಂಧ ಸಾಹಿತ್ಯವು ಪ್ರೌಢಾವಸ್ಥೆಯನ್ನು ಹೊಂದುತ್ತಿದ್ದುದರ ಪ್ರತೀಕವಾಗಿದೆ.

ಶಿಕ್ಷಣ ಕ್ರಮವನ್ನು ಕುರಿತು ಕೆಲ ಲೇಖ, ಪುಸ್ತಕಗಳು ಹೊರಬಂದಿವೆ. ಪಾಶ್ಚಾತ್ಯ ರೀತಿಯ ಶಿಕ್ಷಣವು ರೂಢಿಗೊಳ್ಳುತ್ತಿದ್ದಾಗ, ಶಿಕ್ಷಣದ ಮಹತ್ವವನ್ನು ಅರಿತ ಶಿಕ್ಷಕರ ಸಂಖ್ಯೆ ಹೆಚ್ಚುತ್ತಲಿದ್ದಾಗ ಇದು ಸಹಜವಾಗಿಯೇ ಬೆಳೆದು ಬಂದಿತು. ೧೮೩೩ರಷ್ಟು ಹಿಂದೆ ಮುಂಬಯಿ ಸರಕಾರವು ಮ್ಯಾಂಚೆಸ್ಟರ್ ಪದ್ಧತಿಯ ಮೇಲಿನ ಪುಸ್ತಕವನ್ನು ಪ್ರಕಟಿಸಿದ್ದನ್ನು ನೋಡಿದ್ದೇವೆ <೩೧೧>. ಬಾಸೆಲ್ ಮಿಶನ್ನಿನ ಗಾರ್ಥವೇಟ್, ಮದ್ರಾಸ ಸರಕಾರದ ಶಾಲೆಗಳಿಗಾಗಿ ಇಂಗ್ಲಿಷಿನ ಮೊದಲ ಪುಸ್ತಕವನ್ನು ಪ್ರಕಟಿಸಿದ ಮೇಲೆ, ಅದಕ್ಕೆ 'ಬೋಧಕನ ಸಹಾಯ' (Notes on lessons for the use of teachers)ವನ್ನು ಜೋಡಿಸಬೇಕಾಯಿತು. 'ಕರ್ಣಾಟ ಭಾಷಾ ವಿಷಯವು' ಎಂಬ ಗರಣಿ ಕೃಷ್ಣಾಚಾರ್ಯನ ಪುಸ್ತಿಕೆಯು ಕನ್ನಡವನ್ನು ಕಲಿಸುವುದರ ಬಗೆಗೆ ಇದ್ದಿತು (೧೮೯೨). ಎಂ.ಹಿರಿಯಣ್ಣ ಅವರು ಕನ್ನಡದಲ್ಲಿ ಬರೆದದ್ದು ಕಡಿಮೆ. ಆದರೆ ಅವರ 'ವಿದ್ಯಾಭ್ಯಾಸ ಕ್ರಮ'ವು ಅದೇ ವರ್ಷ ಹೊರಬಂದಿತು. ಈ ವೇಳೆಗೆ ಪತ್ರಿಕೆಗಳಲ್ಲಿ ಶಿಕ್ಷಣದ ಬಗ್ಗೆ ಅಲ್ಲಿ ಇಲ್ಲಿ ಲೇಖಗಳು ಬಂದೇ ಬರುತ್ತಿದ್ದುವು. ಕೆಲವು ಪತ್ರಿಕೆಗಳು ಶಿಕ್ಷಣ, ವಿದ್ಯಾರ್ಜನೆಗಳನ್ನೇ ಮುಖ್ಯ ಉದ್ದೇಶವಾಗಿಟ್ಟುಕೊಂಡಿದ್ದವು. 'ಶಿಕ್ಷೆ'ಯನ್ನು ಕುರಿತ ಗಳಗನಾಥರ ವಿಶಿಷ್ಟ ಲೇಖನವನ್ನೂ ಗಮನಿಸಬೇಕು. ('ಕನ್ನಡ ಶಾಲಾ ಪತ್ರಕ', ೧೯೦೦. ಇದು ಅಗಡಿಯ

ಚಿದಂಬರಮೂರ್ತಿಗಳ ವರ್ಧಂತ್ಯುತ್ಸವ. ಬೆಳಗಾಂವಿ. ೧೯೫೫-ರ ಕೃಪಾಸಮುದ್ರ-ಎಂಬ ಸ್ಮರಣಿಕೆಯಲ್ಲಿ ಪುನರ್ಮುದ್ರಿತವಾಗಿದೆ.)

### 62 ಚರಿತ್ರೆ, ಇತಿಹಾಸ

ಹತ್ತೊಂಬತ್ತನೆಯ ಶತಮಾನದಲ್ಲಿ ಜೀವನ ಚರಿತ್ರೆ ಹಾಗೂ ಇತಿಹಾಸ ಲೇಖನಕ್ಕೆ ತೊಡಗುವವರಿಗೆ ಅಮಿತವಾದ ಕಚ್ಚಾ ಸಾಮಗ್ರಿಯು ಇಂಗ್ಲಿಷ್‌ನಲ್ಲಿ ಲಭ್ಯವಿದ್ದಿತು. ತಾವು ಓದಿ ತಿಳಿದದ್ದನ್ನು ಇತರರಿಗೆ ಹೇಳಬೇಕೆಂಬ ಭಾವನೆಯಿಂದಲೂ ಸ್ವಧರ್ಮ-ಸ್ವದೇಶಾಭಿಮಾನಗಳಿಂದ ಪ್ರೇರಿತವಾಗಿಯೂ ಹಲವು ಲೇಖಕರು ಈ ಕಾರ್ಯದಲ್ಲಿ ಉದ್ಯುಕ್ತರಾದರು. ಎಳೆಯರಿಗೆ ಇಂಥ ಚರಿತ್ರೆಗಳ ಅಗತ್ಯವಿದ್ದಿತೆಂದೂ ಅವರು ನಂಬಿದ್ದರು.

ಚರಿತ್ರೆ, ಇತಿಹಾಸ ಲೇಖನಕಾರ್ಯದಲ್ಲಿ ಧಾರವಾಡದ ರಾ.ಹ. ದೇಶಪಾಂಡೆ ೧೯ನೆಯ ಶತಮಾನದ ಯಾವುದೇ ಲೇಖಕರಿಗಿಂತ ಹಿರಿಯ ಸ್ಥಾನದಲ್ಲಿದ್ದಾರೆ. ಮಹಾಪುರುಷರ ಜೀವನ, ಸಾಧನೆ ಮತ್ತು ಇತಿಹಾಸ ಜ್ಞಾನ – ಇವುಗಳು ನಮ್ಮ ಬೌದ್ಧಿಕ ಬೆಳೆವಣಿಗೆಗೆ ಅವಶ್ಯವೆಂಬ ನಿಶ್ಚಲ ಭಾವನೆಯಿಂದಲೇ ಅವರು ಆ ಕಾರ್ಯದಲ್ಲಿ ತೊಡಗಿದರು. ಭಾರತದ ಮಧ್ಯಯುಗೀನ ಇತಿಹಾಸ ಹಾಗೂ ಆ ಕಾಲದ ವ್ಯಕ್ತಿಗಳು ಅವರ ಮೆಚ್ಚಿನ ವಿಷಯಗಳಾಗಿದ್ದವು. ಮೊಗಲ ಅರಸರು ಹಾಗೂ ನೂರಜಹಾನ್ ರಾಣಿ; ಶಿವಾಜಿ, ಬಾಳಾಜಿ ಬಾಜೀರಾಯ ಮತ್ತು ನಾನಾ ಫಡ್ನವೀಸ-ಮುಂತಾದ ಮರಾಠರು; ಮೈಸೂರಿನ ಹೈದರ ಮತ್ತು ಟೀಪೂ; ಸೀಖರ ರಣಜಿತಸಿಂಗ; ಹಾಗೂ ಭಾರತದ ಕೆಲವು ಗವರ್ನರ್ ಜನರಲ್ – ಇವರೆಲ್ಲರ ಚರಿತ್ರೆಗಳನ್ನು ರಾ.ಹ. ದೇಶಪಾಂಡೆ ಬರೆದಿದ್ದಾರೆ. ಅದರಂತೆ ಕೋಲಂಬಸ್ (ಅಮುದ್ರಿತ), ಅಲ್ಬುಕರ್ಕ್. ಡೂಪ್ಲೆ ಮತ್ತು ನೆಲ್ಸನ್ – ಈ ಸಾಹಸಿಗಳ ಚರಿತ್ರೆಯನ್ನು ಕನ್ನಡಿಗರಿಗೆ ಒದಗಿಸಿದ್ದಾರೆ. ಧಾರ್ಮಿಕ ರಂಗದಲ್ಲಿ ಮಹಾವೀರ, ಗೌತಮರಿಂದ ಹಿಡಿದು ಕರ್ನಾಟಕದ ಧಾರ್ಮಿಕ ವ್ಯಕ್ತಿಗಳನ್ನೂ ಒಳಗೊಂಡು ಗುರು ನಾನಕನ ವರೆಗೆ ಅವರ ಚರಿತ್ರ ಕಥನವು ಹರಡಿಕೊಂಡಿದೆ. ಇತ್ತ ಸಮಗ್ರ ಭಾರತದ ಇತಿಹಾಸವನ್ನು ಬರೆದುದೂ ಮಹತ್ವದ ಸಂಗತಿಗಳಾಗಿವೆ. ಇಂತು ರಾ.ಹ. ದೇಶಪಾಂಡೆ ಮಧ್ಯಕಾಲದ ಭಾರತದ ಸುಸ್ಪಷ್ಟ ಚಿತ್ರವನ್ನು ಕನ್ನಡಿಗರಿಗೆ ಒದಗಿಸಿದ್ದಾರೆ. ಈ ಚರಿತ್ರ ಲೇಖಕರ ಗಮನವು ಐತಿಹಾಸಿಕ ಸಂಗತಿಗಳಲ್ಲಿ ಮಾತ್ರ ಕೇಂದ್ರೀಕೃತವಾಗಿದ್ದ ಕಾರಣ ಅವರ ನಿರೂಪಣೆಯು ವಸ್ತುನಿಷ್ಠವಾಗಿದೆ; ಕೆಲವೆಡೆ ವಿಮರ್ಶಾತ್ಮಕವಾಗಿದೆ; ಸ್ವಂತದ ಅಭಿಪ್ರಾಯಗಳನ್ನು ಹೇಳ ಹೊರಟಿದ್ದುದು ಕಡಿಮೆ.

ಶಂಕರಾಚಾರ್ಯರ, ವಿವಿಧ ಮಾಧ್ವಯತಿಗಳ ('ಸತ್ಕಥಾ') ಜೀವನ ಚರಿತ್ರೆಗಳು ೧೯ನೆಯ ಶತಮನಾನದಲ್ಲಿಯೇ ರಚಿತವಾದುವು. ಕೆಂಪೇಗೌಡನ ಚರಿತ್ರೆಯು ೧೮೮೪ರಷ್ಟು ಹಿಂದೆಯೇ ಒದಗಿಬಂದಿತು. ಅಪ್ಪಣ್ಣ ಶೆಟ್ಟಿಯು 'ಹೈದರ ನಾಮೆ'ಯನ್ನು ಬರೆಯಲು

ತೊಡಗಿ. ಅದಕ್ಕಾಗಿ ಟೀಪೂ ಸುಲ್ತಾನನನ ಪುಸ್ತಕ ಭಂಡಾರ, ಏಶಿಯಾ ಖಂಡದ ಸರಕಾರೀ ವಾರ್ಷಿಕ ದಪ್ತರ ಸಂಗ್ರಹ – ಇವುಗಳನ್ನು ತಿರುವಿ ಹಾಕಿದುದು ಸಂಶೋಧನದ ಲಕ್ಷಣವೆನಿಸಿದೆ. ಅಹಲ್ಯಾಬಾಯಿ, ಪದ್ಮಿನಿ ಮುಂತಾದ ವೀರ ಸ್ತ್ರೀಯರ ಚರಿತ್ರೆಗಳನ್ನು ಎಂ. ತಿಮ್ಮರಾಯಸು ಒದಗಿಸಿದನು. ಇನ್ನು ವ್ಹಿಕ್ಟೋರಿಯಾ ರಾಣಿಯ ಚರಿತ್ರೆಯ ಚಿಕ್ಕ ಪುಸ್ತಕಗಳು ಆ ಕಾಲದಲ್ಲಿ ಪ್ರಕಟವಾದದ್ದು ಸಹಜವೇ ಆಗಿದೆ.

ಅಂದಿನ ಚರಿತ್ರ ಲೇಖಕರಲ್ಲಿ 'ಆರ್ಯಕೀರ್ತಿ'ಯನ್ನು ಅನುವಾದಿಸಿದ ಚ. ವಾಸು ದೇವಯ್ಯ, ಕಾಂಫೂಷ್ ಮೊದಲಾದವರ ಬಗ್ಗೆ ಬರೆದ ಎಂ.ಎಸ್. ಪುಟ್ಟಣ್ಣ ಇವರನ್ನು ವಿಶೇಷವಾಗಿ ಗಮನಿಸಬೇಕು. ರಜಪೂತ ವೀರರ ಹಾಗೂ ಶಿವಾಜಿಯ ಚರಿತ್ರೆಗಳನ್ನು ಕೊಡುವಲ್ಲಿ ವಾಸುದೇವಯ್ಯನವರಿಗೆ ದೇಶಾಭಿಮಾನವೇ ಪ್ರೇರಕವಾಗಿತ್ತೆಂಬುದು ಮಹತ್ವದ್ದು.

ಕ್ರಿ. ಪೂ. ೬ನೆಯ ಶತಮಾನದಲ್ಲಿ ಬಾಳಿದ ಚೀನೀ ತತ್ತ್ವವೇತ್ತನಾದ ಕಾಂಫೂಷನ ಬಗ್ಗೆ ಇರುವ ಸಾಮಗ್ರಿ ಸ್ವಲ್ಪ. ಆದರೂ ಪುಟ್ಟಣ್ಣ ಅವನ ಬದುಕಿನ ಮುಖ್ಯ ಘಟನೆಗಳ ಜೊತೆಗೆ ಸ್ವಂತದ ಅಭಿಪ್ರಾಯಗಳನ್ನು ಸೇರಿಸಿ, ಅದನ್ನು ಪರಿಪೂರ್ಣವೆನಿಸುವಂತೆ ಮಾಡಲು ಪ್ರಯತ್ನಿಸಿದ್ದಾರೆ. ಅದರಲ್ಲಿ ಆಧುನಿಕ ದೃಷ್ಟಿಯೂ ಸೇರಿದೆ. ಈತನ ಜನನ ಕಾಲದಲ್ಲಿ ಆಕಾಶದಲ್ಲಿ ಸಂಗೀತ ಮೊಳಗಿತೆಂದು ಐತಿಹ್ಯವಿದೆ ಎಂದು ಹೇಳಿ, ಅದಕ್ಕೆ ಕೊಟ್ಟಿರುವ ವಿವರಣೆ ಇಂತಿದೆ :

"ಎಲ್ಲಾ ಜನರಲ್ಲಿಯೂ ಇಂಥಾ ಅದ್ಭುತಗಳನ್ನು ಹೇಳುವರು. ಭೀಮಸೇನ ಹುಟ್ಟಿದಾಗ ಪರ್ವತಗಳು ಅಲ್ಲಾಡಿದವೆಂತಲೂ ರಾಮಕೃಷ್ಣಾದ್ಯವತಾರಗಳಾದಾಗ ದೇವ ದುಂಧುಭಿ ನಿನಾದವು ಆಕಾಶದಲ್ಲಿ ಆಯಿತೆಂದು ನಾವು ಹೇಳುವುದುಂಟು. ಇಂಥಾ ಮಹಾತ್ಮರ ಯೋಗ್ಯತೆಯನ್ನು ತರುವಾಯ ಅರಿತು ಅದರ ಫಲವನ್ನು ಅನುಭವಿಸಿದ ಮನುಷ್ಯ ಸಾಮಾನ್ಯರು ಈ ಅದ್ಭುತ ವ್ಯಕ್ತಿಗಳಿಗೆ ದೇವಾಂಶ ಕಲ್ಪಿಸಿ ತನ್ಮೂಲಕ ಪ್ರಾಶಸ್ತ್ಯವನ್ನು ಉಂಟುಮಾಡಬೇಕೆಂದು ಹೀಗೆ ಅವುಗಳನ್ನು ಹುಟ್ಟಿಸುವುದು ಅನುಭವಸಿದ್ಧವಾಗಿದೆ."

ಪವಾಡಗಳನ್ನು ವಾಸ್ತವ ದೃಷ್ಟಿಯಿಂದ ಕಂಡ ಈ ಬಗೆಯಲ್ಲಿ ಹೊಸತನವಿದೆ. ಕಾಂಫೂಷನ ಹೆಂಡತಿಗೂ ಅವನಿಗೂ ಹೊಂದಿಕೆ ಇರದ್ದರ ಬಗ್ಗೆ, 'ದೊಡ್ಡ ಶಾಸ್ತ್ರಜ್ಞರಿಗೂ ಗ್ರಂಥಕರ್ತರಿಗೂ ಪ್ರಾಜ್ಞರಿಗೂ ಸಂಸಾರ ಸುಖ ವಿಶೇಷವಾಗಿರುವುದಿಲ್ಲವೆಂತಲೂ ಇವರಿಗೂ ಇವರುಗಳ ಹೆಂಡರಿಗೂ ದಾಂಪತ್ಯಾನುಕೂಲ್ಯ ಕಡಿಮೆ ಎಂತಲೂ ಹೇಳುವ ಲೋಕವಾರ್ತೆಗೆ ಈತ ಒಂದು ಸಾಮತಿಯಾದನು' ಎಂದು ಹೇಳಿ ಇಂಥ ಪರಿಸ್ಥಿತಿ ಏಕೆ ಒದಗುವುದೆಂಬುದನ್ನು ಪುಟ್ಟಣ್ಣ ತಾತ್ವಿಕವಾಗಿ ವಿವೇಚಿಸಿದ್ದಾರೆ.

ಸಂಗೀತದ ಪ್ರಭಾವದ ಬಗ್ಗೆಯೂ ಇಂಥದೇ ವಿವರಣೆ ಬಂದಿದೆ. ಕಾಂಫೂಷನು ಸಂಗೀತಲೋಲನಾಗಿ ಕೆಲವು ದಿನ ಊಟವನ್ನೇ ಬಿಟ್ಟಿದ್ದನೆಂಬ ಚಾರಿತ್ರಿಕ ಅಂಶದ

ನಿಮಿತ್ತ ಮಾಡಿಕೊಂಡು ಮನುಷ್ಯನ ಜೀವನದಲ್ಲಿ ಸಂಗೀತದ ಪ್ರಭಾವವನ್ನು ಹೃದ್ಯವಾಗಿ ವರ್ಣಿಸಿದ್ದಾರೆ :

ಗಾನಕ್ಕೂ ಆರ್ದ್ರ ಹೃದಯಕ್ಕೂ ಪರಸ್ಪರ ಮೈತ್ರಿಯುಂಟು. ಇದು ತಾಯಿ–ಮಕ್ಕಳ ಹಾಗೆ ಜನ್ಯಜನಕ ಸಂಬಂಧವೂ ಗಾಳಿಧೂಳಿನ ಹಾಗೆ ಸಮಾನಾಧಿಕರಣ್ಯ ಸಂಬಂಧವೂ ಹೇಳಲಾಗದು–ಎಂದೆನ್ನುತ್ತ ಒಳ್ಳೆಯ ಕೆಲಸ, ಉನ್ನತ ವಿಚಾರ ಇವುಗಳಲ್ಲಿ ಪ್ರವೃತ್ತವಾದ ಅವನ ಉದಾರ ಭಾವವು ಸಂಗೀತದ ಮೆಚ್ಚಿಕೆಗೂ ಮೂಲ ತಳಹದಿಯಾಗಿದೆ ಎನ್ನುತ್ತಾರೆ ಮತ್ತು ನಮ್ಮ ಪಂಚೇಂದ್ರಿಯಗಳಲ್ಲಿ ನಿಸರ್ಗತ್ವವನ್ನು ತೊಡಕಿಲ್ಲದೆ ತದೇಕಧ್ಯಾನದಿಂದ ಒದಗಿಸುವ ಕರ್ಣೇಂದ್ರಿಯವೇ ಶ್ರೇಷ್ಠವೆಂದು ವಿವರಿಸಿದ್ದಾರೆ.

ಮತ್ಸ್ಯಮತ್ಸ್ಯಾನ್ಯಾಯವು ಆತ್ಮರಕ್ಷಣೆಗೆ ಅವಶ್ಯವೇ. ಆದರೆ ಮನುಷ್ಯ ಜನ್ಮವು ಅಗ್ರ ಜನ್ಮವಾಗಿ ಇತರ ಒಳ್ಳೇ ಗುಣ ಸಮುದಾಯಗಳಿರುವ ಕಾರಣ. ಇದು ಸ್ವಾರ್ಥಪರತ್ವವೆನಿಸಿಕೊಳ್ಳುತ್ತದೆ ಎಂಬ ಅಭಿಪ್ರಾಯದಲ್ಲಿಯೂ ರಾಜನಿತ್ತ ಜಹಗೀರನ್ನು ಕಾಂಘೂಷ್ ಬಿಟ್ಟುಕೊಟ್ಟ ಸಂದರ್ಭದಲ್ಲಿ 'ಲೋಕೋಪಕಾರ ದೃಷ್ಟಿಯುಳ್ಳ ಪರ ಪುರುಷರಿಗೆ ತಾವು ನಿಶ್ಚಯವನ್ನು ಚೆನ್ನಾಗಿ ಬಲ್ಲೆವೆಂಬ ಪರಿಜ್ಞಾನ ವಿಶೇಷವಾಗಿರುವ ಕಾರಣ ದಾಕ್ಷಿಣ್ಯವು ಅವರನ್ನು ಬಾಧಿಸುವುದಿಲ್ಲ' ಎಂಬ ಹೇಳಿಕೆಯಲ್ಲಿಯೂ ಲೇಖಕರ ಪಕ್ವ ಲೋಕಾನುಭವವು ತೋರಿಬರುತ್ತದೆ.

ಯಾವ ದೊರೆಯೇ ಆಗಲಿ, ತಾನು ಹೇಳಿದಂತೆ ಒಂದು ವರ್ಷದ ಮಟ್ಟಿಗೆ ಕೇಳಿದ್ದಾದರೆ ಅನೇಕ ಮಹಾಕಾರ್ಯಗಳನ್ನು ಸಾಧಿಸಬಹುದೆಂದು ಕಾಂಘೂಷ್ ಹೇಳುತ್ತಿದ್ದನಂತೆ. ಹೀಗಿರುತ್ತ, ಅಂದಿನ ರಾಜರ ಅರ್ಥಾತ್ ಸಂಸ್ಥಾನಿಕರ ಬಗೆಯನ್ನು ಪುಟ್ಟಣ್ಣ ಹೀಗೆ ವರ್ಣಿಸಿದ್ದಾರೆ.

"ಅಪರಿಮಿತವಾದ ಐಶ್ವರ್ಯದಿಂದಲೂ ನಿರಂಕುಶವಾದ ಅಧಿಕಾರದಿಂದಲೂ ಹುಟ್ಟುವ ಕೆಟ್ಟ ಫಲಗಳನ್ನು ಮಾತ್ರ ತಿಂದು ಜ್ಞಾನ ತಪ್ಪುವ ರಾಜಕೀಟಗಳಿಗೆ ಪೂರ್ವ ವಯಸ್ಸೆಲ್ಲಾ ಸಂಕಟ ಸಂಪಾದನೆಗೂ, ಅಪರ ವಯಸ್ಸೆಲ್ಲಾ ಅದರ ಅನುಭವಕ್ಕೂ–ಹೀಗೆ ಅವರ ವಯಸ್ಸೆಲ್ಲಾ ಎರಡು ಭಾಗವಾಗಿದೆ. ಇವರಿಗಿಂತ ಸ್ವಲ್ಪ ಮೇಲ್‌ತರದ ಅರಸರು ತಮ್ಮ ಕೈಗೆ ಸಿಕ್ಕಿದ ಗಂಟನ್ನು ಹೇಗೆ ಕಾಪಾಡಿಕೊಳ್ಳುವದಪ್ಪಾ ಎಂದು ಸಂಶಯಾತ್ಮರಾಗಿ ಏನು ಮಾಡಿದರೇನೊ ಯಾರನ್ನು ನಂಬಿದರೇನೊ ಎಂಬ ಯೋಚನೆಯಲ್ಲಿಯೇ ಕಾಲವನ್ನು ಕಳೆಯುತ್ತಾ ಮೋಸದಿಂದ ತನ್ನ ದಾರಿದ್ರ್ಯ ವಿಚ್ಛಿತ್ತಿಯನ್ನು ಮಾಡಿಕೊಂಡು ಕಳ್ಳನ ಹಾಗೆ ಎಡಗೈ ಬಲಗೈಯನ್ನು ನಂಬದೆ ಹೆಚ್ಚು ಕೆಲಸಕ್ಕೂ ಹೋಗದೆ ತಮ್ಮ ಪದವಿ ಎಲ್ಲಿ ಹೋದೀತೊ ಎಂದು ಭಯಪಡುವರು. ಆದರೆ ಇವರೇ ಆಗಲಿ ಅವರೇ ಆಗಲಿ ಉಳಿದ ಕೆಲಸವೇನು ತಾನೇ ಮಾಡಿಯಾರು? ತಮ್ಮ ಹಿಂತಚಿಂತಕರ ಮಾತನ್ನು ಕೇಳುವುದಿಲ್ಲ. . ಕೃತ್ರಿಮಗಳ ಮಾತನ್ನು ಮಾತ್ರ ಕೇಳದೇ ಇರುವುದಿಲ್ಲ. ಕುರಿಗೆ ಬುದ್ಧಿ

ಇಲ್ಲವೆನ್ನುವುದು ಪ್ರಕಾಶವಾಗಿಯೇ ಇದೆ. ಅನೇಕ ಪ್ರಾಣಿವಧೆಯನ್ನು ಮಾಡಿದ್ದರಿಂದ ರಕ್ತಗೆಟ್ಟು, ಮಣ್ಣಾಗಿ, ಕೊಳಕು ಮೈಗೆತ್ತಿಕೊಂಡಿರುವ ಕೈಯನ್ನೇ ನೆಕ್ಕುತ್ತಾ ಆ ಕೊಳೆಯು ಕ್ಷಾರವೇ ಬಹು ರುಚಿ ಎಂದು ತಿಳಿದು ಬಿಸ್‌ಮಿಲ್ಲಾ ಮಾಡುವುದಕ್ಕೆ ಸಿದ್ಧವಾಗಿರುವವನ ಹಿಂದೆ ಹೋಗುವುದೇ ಹೊರತು ಮತ್ತೆ ಯಾರು ಎಷ್ಟು ಬಗೆಯಲ್ಲಿ ಕರೆದರೂ ಹೋಗದು. ತಾತ್ಕಾಲಿಕವಾದ ಕೈ-ಕೊಳೆಯೇ ಪಾವನವಾಯಿತು. ಅತ್ತ ಇತರರು ಹಿಡಿದಿರುವ ಗರಿಕೆ ಹುಲ್ಲು ಬೇಡವಾಯಿತು. ಒಂದು ನಿಮಿಷ ಮಾತ್ರದಲ್ಲಿ ತನ್ನ ತಲೆಯೂ ದೇಹವೂ ಬೇರೆಯಾಗುವದೆಂದು ಅದೇನು ಬಲ್ಲುದು? ಭವಿಷ್ಯತ್ ಜ್ಞಾನದ ಪರಿಮಾಣವೇ ವಿವೇಕದ ಪರಿಮಾಣ ಅಥವಾ ಬುದ್ಧಿಶಕ್ತಿಯ ಪರಿಮಾಣವಾದ ಕಾರಣ ಹಲವು ರಾಜರೂ ಈ ಅಜರಾಜನೂ ಬುದ್ಧಿಯಲ್ಲಿ ನಾನು ಹೆಚ್ಚು ತಾನು ಹೆಚ್ಚೆಂದು ಸೆಣಸಾಡಬಹುದು."

–ಇದು ಎಷ್ಟೊಂದು ಸತ್ವಶಾಲಿಯಾದ ಗದ್ಯವೆಂಬುದನ್ನು ಗಮನಿಸಬೇಕು. ಹೀಗೆಯೇ ಅಲ್ಲಲ್ಲಿ ಜನರ ಸ್ವಭಾವದ ಚಿತ್ರಣವಿದೆ (ಪು. ೫೬-೫೭). ಮರಣ ದಂಡನೆಯನ್ನು ಕಿತ್ತುಹಾಕಬೇಕೆಂದು ಪ್ರತಿಪಾದಿಸಿದ ಕಾಂಫೂಷನ ಅಭಿಪ್ರಾಯಕ್ಕೆ ಸೊಗಸಾದ ವ್ಯಾಖ್ಯೆಯಿದೆ. ಈ ಚರಿತ್ರ ಗ್ರಂಥವು ಚಿಕ್ಕದಾದರೂ ಮನುಷ್ಯನ ಬದುಕಿಗೆ ಸಂಬಂಧಿಸಿದ ಹಲವಾರು ಅಂಶಗಳ ವಿವೇಚನೆಯನ್ನು ಒಳಗೊಂಡ ತಾತ್ವಿಕ ಪ್ರಬಂಧಮಾಲೆಯಂತಿದೆ. ಮೇಲ್ಮಟ್ಟದ ಯಾವುದೇ ಆಧುನಿಕ ಚರಿತ್ರೆಗೆ ಸರಿಮಿಗಿಲೆನಿಸುವಷ್ಟು ಗುಣಗೌರವದಿಂದ ಕೂಡಿದೆ.

ಮೇಲಿನವು ಜೀವನ ಚರಿತ್ರೆಗಳು. ಇನ್ನೀಗ ಐತಿಹಾಸಿಕ ಪುಸ್ತಕಗಳನ್ನು ಪರಿಶೀಲಿಸೋಣ. ದೇವಚಂದ್ರನ 'ರಾಜಾವಳೀ ಕಥೆಯು' ಐತಿಹ್ಯಗಳನ್ನು, ಧಾರ್ಮಿಕ ಹಾಗೂ ಇತರ ಹಲವು ಅಂಶಗಳನ್ನು ಒಳಗೊಂಡ ಸಮ್ಮಿಶ್ರ ಕೃತಿಯಾಗಿದ್ದರೂ ಅದನ್ನು ಸ್ಥೂಲವಾಗಿ ಇತಿಹಾಸ ಗ್ರಂಥವೆಂದೇ ಬಗೆಯಬೇಕು. ಅಲ್ಲದೆ ೧೮೦೪ರಿಂದು ಅದರ ಬರವಣಿಗೆ ಆರಂಭವಾದ್ದರಿಂದ ಅದನ್ನು ಕಳೆದ ಶತಮಾನದ ಆದ್ಯ ಇತಿಹಾಸ ಕೃತಿಯೆಂದು ತಿಳಿಯಬಹುದು. ಪಾಶ್ಚಾತ್ಯ ಸಂಪರ್ಕದ ಪರಿಣಾಮವಾಗಿ ಅದು ಗದ್ಯ ರೂಪವನ್ನು ಪಡೆಯಿತು. ಇಲ್ಲವಾದರೆ ಪುರಾತನ ಮಾರ್ಗೀಯನಾದ ದೇವಚಂದ್ರನು ಅದನ್ನು ಪದ್ಯದಲ್ಲಿ ರಚಿಸುತ್ತಿದ್ದನೇನೊ!

ಅವನು ಇತಿಹಾಸದ ಪುರಾಣಕಾರನೇ ಅಹುದು. ಇತಿಹಾಸದಲ್ಲಿ ದೊರೆಯದಂಥವು, ಇತಿಹಾಸಕ್ಕೆ ವ್ಯತಿರಿಕ್ತವಾದವುಗಳು ಮತ್ತು ಕಾಲಾನುಕ್ರಮ ತಪ್ಪಿದುವು–ಎಂಬೀ ಬಗೆಯಾಗಿ ಅದರಲ್ಲಿ ದೋಷಗಳಿವೆ. ಅವನು ಜೈನ ಮತಾವಲಂಬಿಯಾಗಿ ಸ್ವಮತವನ್ನು ಎತ್ತಿ ಹಿಡಿಯುವ ಲವಲವಿಕೆಯುಳ್ಳವನಾದರೂ ಅನ್ಯಮತ ವಿಚಾರಗಳನ್ನು ಅಸಹಿಷ್ಣುತೆಯಿಂದ ಕಂಡಿಲ್ಲ.

**ರಾಜೇಂದ್ರನಾಮೆ**ಯು ಸಹ ಹಳೆಯ ಪರಂಪರೆಯಲ್ಲಿಯೆ ರಚಿತವಾದುದು. ಕೊಡಗಿನ ದೊಡ್ಡ ವೀರರಾಜೇಂದ್ರನು (೧೭೯೭-೧೮೦೯) ಇದನ್ನು ಬರೆಯಿಸಿದ್ದರ ಉದ್ದೇಶ

ತನ್ನ ಸ್ನೇಹಿತರ ಹಾಗೂ ಹಿತಚಿಂತಕರ ಪರಾಮರ್ಶೆಗೆಂದು. . .ಈ ಕೃತಿಯನ್ನು ಆರ್. ಅಬರ್‌ಕ್ರಾಂಬಿ ಎಂಬ ಅಧಿಕಾರಿಯು ಇಂಗ್ಲಿಷ್‌ಗೆ ಭಾಷಾಂತರ ಮಾಡಿದುದಂತೂ ಸರಿಯೆ (೧೮೦೮). ವೀರರಾಜೇಂದ್ರನು ಅದನ್ನು ಹಿಂದುಸ್ತಾನೀ ಭಾಷೆಗೂ ಅನುವಾದ ಮಾಡಿಸಿ, ಇಂಗ್ಲಿಷ್ ಸೈನ್ಯದಲ್ಲಿದ್ದ ಅಧಿಕಾರಿಗಳಲ್ಲಿ ಅದರ ಪ್ರತಿಗಳನ್ನು ಹಂಚಿದನೆಂದು ಹೇಳಲಾಗಿದೆ. ತನ್ನ ಬಗ್ಗೆ ಸ್ನೇಹಿತರಲ್ಲಿ ಸದ್ಭಾವನೆ, ಸಹಾನುಭೂತಿ ಮೂಡಲೆಂಬುದೇ ಆತನ ಮನೀಷೆಯಾಗಿದ್ದಿತು.

ಕೊಡಗಿನ ಪೂರ್ವೇತಿಹಾಸವು ಕಾವೇರಿ ಪುರಾಣದಲ್ಲಿ ಬಂದಿದ್ದರೂ ಅರ್ವಾಚೀನ ಇತಿಹಾಸ ರಚನೆಯಲ್ಲಿ ಇದುವೆ ಮೊದಲ ಕೃತಿ. ಅದರ ಮೊದಲಿನ ೧೬ ಪುಟಗಳಷ್ಟೇ ಕೊಡಗಿನ ಪೂರ್ವೇತಿಹಾಸಕ್ಕೆ ಸಂಬಂಧಪಟ್ಟಿವೆ. ಮತ್ತಿನದೆಲ್ಲ ವೀರರಾಜೇಂದ್ರನ ಕಾಲದ ಘಟನೆಗಳಿಗೆ ವಿನಿಯೋಗವಾಗಿದೆ. ಇದರಲ್ಲಿಯ ಐತಿಹಾಸಿಕ ಸತ್ಯತೆಯ ಬಗ್ಗೆ ಒಂದು ಮಾತು. ಯಾವುದೇ ಘಟನೆಯ ವಿಪರ್ಯಾಸ ಮಾಡಿಲ್ಲವಾದರೂ ಸತ್ಯ ಸಂಗತಿಗಳನ್ನು ಬೇಕೆಂದೇ, ಅಲ್ಲಲ್ಲಿ ಮರೆಮಾಚಿದ್ದುದು ಕಂಡುಬರುತ್ತದೆ. ಕ್ರಿ.ಶ.೧೬೩೩ ರಿಂದ ಚರಿತ್ರೆಯನ್ನು ಆರಂಭಿಸಿ, ಆ ಮುಂಚೆ ಕೊಡವ ರಾಜರು ಇಕ್ಕೇರಿಯ ಮಾಂಡಲಿಕರಾಗಿದ್ದರೆಂಬುದನ್ನು ತಪ್ಪಿಸಲಾಗಿದೆ. ಸ್ವತಃ ವೀರರಾಜೇಂದ್ರನ ಕ್ರೌರ್ಯದ ಘಟನೆಗಳನ್ನು ಕೈಬಿಟ್ಟುದಂತೂ ಸಹಜವೇ.

ಇದರ ಕೊನೆಯ ಒಂದೆರಡು ಪುಟಗಳಲ್ಲಿ ಅವನ ಮೃತ್ಯು ಪತ್ರವಿದ್ದಿತು. ಅವನ ಹಿರಿಯ ಮಗಳು ದೇವಮ್ಮಾಜಿಗೆ ಅನುಕೂಲವಾಗಿದ್ದ ಅದರ ಒಕ್ಕಣಿಕೆಯನ್ನು, ತನ್ನ ಮಿತ್ರರಾದ ಬ್ರಿಟಿಶರು ನಡೆಸಿಕೊಡಬೇಕೆಂಬ ಕಳಕಳಿಯ ವಿನಂತಿಯೂ ಅದರಲ್ಲಿದ್ದಿತು. ಅವನು ತೀರಿಕೊಂಡ ಮೇಲೆ ಹಾಗೇನಾಗದೆ ತಮ್ಮನಾದ ಲಿಂಗರಾಜನು ಪಟ್ಟವೇರಿದನು. ಅನಂತರ ರಾಜೇಂದ್ರನಾಮೆಯ ಹಸ್ತಪತ್ರಿಯಲ್ಲಿ ಬದಲಾವಣೆಗಳಾದುವು. ಎಂದರೆ ಮೃತ್ಯುಪತ್ರಕ್ಕೆ ಸಂಬಂಧಿಸಿದ ಭಾಗವನ್ನು ತೆಗೆದುಹಾಕಲಾಯಿತು. ಆದರೆ ಇಂಗ್ಲಿಷ್ ಅನುವಾದದಲ್ಲಿ ಆ ಭಾಗವು ಉಳಿದುಕೊಂಡಿತು! ಇದಕ್ಕೆ ವ್ಯತಿರಿಕ್ತವಾಗಿ ಕನ್ನಡ ಪ್ರತಿಯಲ್ಲಿ ಅಪ್ಪಾಜಿರಾಯನ ಒಳಸಂಚುಗಳ ಹಾಗೂ ಇನ್ನೊಬ್ಬ ಸಂಬಂಧಿಕ ಚೆನ್ನವೀರನನ್ನು ಕುರಿತ ವಿವರಗಳಿದ್ದು, ಇಂಗ್ಲಿಷ್ ಪ್ರತಿಯಲ್ಲಿ ಇಲ್ಲವಾದ್ದರಿಂದ, ಈ ವಿವರಗಳನ್ನು ಆಮೇಲೆ ಸೇರಿಸಿರಬೇಕು. ಈ ಬದಲಾವಣೆಗಳಿಗೆ ಮೇಲೆ ಹೇಳಿದ ಲಿಂಗರಾಜನೇ ಕಾರಣನಾಗಿರಬೇಕೆಂದು ಊಹಿಸಲಾಗಿದೆ.

'ರಾಜೇಂದ್ರನಾಮೆ'ಯ ಸಂಪಾದನ ಕಾರ್ಯದಲ್ಲಿ ಮೆವ್‌ಗ್ಲಿಂಗ್ ತುಂಬಾ ಶ್ರಮ ವಹಿಸಿದ್ದಾರೆ. ಮಡಿಕೇರಿಯ ಹಾಗೂ ಬೆಂಗಳೂರಿನ ಸರಕಾರೀ ಕಚೇರಿಗಳಿಂದ ಕನ್ನಡ ಇಂಗ್ಲಿಷ್ ಪ್ರತಿಗಳನ್ನು ತರಿಸಿಕೊಂಡು ಅವುಗಳ ಸ್ಖಾಲಿತ್ಯಗಳನ್ನು ಮೊದಲಿಗೆ ತಿದ್ದಿದ್ದಾರೆ. ಅದನ್ನು ಹೋಲಿಸಿ ನೋಡಿ. ಬಿಟ್ಟ ಭಾಗಗಳನ್ನು ಎತ್ತಿ ತೋರಿಸಿದ್ದಾರೆ. ಇಂಗ್ಲಿಷ್ ಅನುವಾದವು ಅಸಮರ್ಪಕವೆಂದು ಕಂಡಲ್ಲಿ, ತಿಳಿಯಾದ ಶೈಲಿಯಲ್ಲಿ ತಾವೇ ಅನುವಾದಿಸಿ,

(ಉದಾಹರಣೆಗೆ ಮೊದಲಿನ ೫ ಪುಟಗಳನ್ನು) ಅಡಿಟಿಪ್ಪಣಿಯಾಗಿ ಕೊಟ್ಟಿದ್ದಾರೆ. ಒಂದು ಕಡೆಯಲ್ಲಿ–This passage appears to be incorrect. . .the English version mentioning 70 seers cannot be correct, as 60 seers make a butty [ಬುಟ್ಟಿ]– ಎಂಬ ಮಟ್ಟಿಗೆ ಹೇಳುವಷ್ಟು ಸೂಕ್ಷ್ಮವಾಗಿ ಅವಲೋಕಿಸಿದ್ದಾರೆ. ಕನ್ನಡ ಪ್ರತಿಯ ವಿಚಾರವಾಗಿಯೂ ಅದೇ ಸೂಕ್ಷ್ಮ ದೃಷ್ಟಿ ಕಂಡುಬರುತ್ತದೆ. ಟೀಪೂವಿನ ವಿರುದ್ಧವಾಗಿ ಕಂಪೆನಿಯ ಅಂದಿನ ಗವರ್ನರ್ ಜನರಲ್ ೨೨–೨–೧೭೯೯ ರಂದು ಹೊರಡಿಸಿದ ದೀರ್ಘ ಘೋಷಣೆಯ ಕನ್ನಡ ರೂಪವು ಸ್ಪಷ್ಟವಿರದಿದ್ದಾಗ ಮೆವ್‌ಗ್ಲಿಂಗ್ ಅದರ ತಿಳಿಯಾದ ಅನುವಾದವನ್ನು ರಾಜೇಂದ್ರನಾಮೆಯ ವಿಶಿಷ್ಟ ಶೈಲಿಯಲ್ಲಿಯೆ ಕೊಟ್ಟಿದ್ದಾನೆ.

ಇದರ ಶೈಲಿಯು ಪರಂಪರಾಗತ ಸ್ವರೂಪದ್ದಿರದೆ ಬಖೈರಿನಂತಿದೆ. ಹಿಂದುಸ್ತಾನೀ ಶಬ್ದಗಳೇ ಹೆಚ್ಚಾಗಿ ಇದ್ದು ಮಧ್ಯಯುಗೀನ ರಾಜಕೀಯ ಪರಿಸ್ಥಿತಿಯಲ್ಲಿ ಆ ಭಾಷೆಯ ನುಡಿಗಟ್ಟಿನ ಪ್ರಭಾವವು ವಾಡಿಕೆಯ ಕನ್ನಡದ ಮೇಲೆ ಎಷ್ಟರ ಮಟ್ಟಿಗೆ ಆದುದೆಂಬುದರ ಕಲ್ಪನೆ ತಂದುಕೊಡುತ್ತದೆ. The Style of Rajendranama is generally simple, often lively. Sometimes forcible and pathetic throughout, far superior to language used in courts and cutcheris– ಎಂದು ಮೊವ್‌ಗ್ಲಿಂಗ್ ಅಭಿಪ್ರಾಯಪಟ್ಟಿದ್ದಾರೆ.* ಮೆವ್‌ಗ್ಲಿಂಗ್‌ರ ಈ ಪರಿಶ್ರಮ ಮತ್ತು ಸೂಕ್ಷ್ಮಾವಲೋಕನವನ್ನು ಕಂಡಾಗ, ಈ ಗ್ರಂಥವು ಆಧುನಿಕ ರೀತಿಯಲ್ಲಿ ಸಂಪಾದಿತವಾದ ಕನ್ನಡದ ಮೊತ್ತಮೊದಲಿನ ಇತಿಹಾಸ ಕೃತಿ, ಎನ್ನಬೇಕು.

ಇದರ ಕನ್ನಡ ಶೈಲಿಯ ಪರಿಚಯವಾಗಬೇಕೆನ್ನುವ ದೃಷ್ಟಿಯಿಂದ ಈ ಕೆಳಗಿನ ಅವತರಣಿಕೆಯನ್ನು ಕೊಟ್ಟಿದ್ದಿದೆ. :

"ಇಂಥಾ ಸಂತೋಷದಲ್ಲಿ ಮಹಾರಾಜರವರು ಅರಮನೆಯಲ್ಲಿ ಇರುವಾಗ್ಯೆ ಸಂನ್ ೧೨೨೧ನೆ ಹಿಜರಿ ಜಿಹಜ್ಜ ತಿಂಗಳು ೧೬ನೆಯ ತಾರೀಖಿನಲ್ಲು, ಬಂಗಾಳದ ಗವರ್ನರ್ ಜನರಲ್ ಅಫುರ್‌ಫುಲ್ ಉಮರಾ ಸರ್ ಜಾರಿಜ ಹೀಲರ್ ಬಾರ್ಲು ಬಾರಂತು ಸಾಹೇಬ್ ಬಹಾದ್ದರವರು ಬರೆಸಿ ಕಳುಹಿದ ಕಾಗದದಲ್ಲಿ, ಮೊದಲು ಇಂಗ್ರೇಜಿಯವರ ವಿಲಾಯತಿಯಲ್ಲಿ ಇಂಗ್ರೇಜ ಬಹಾದ್ದರ ಸರಕಾರಕ್ಕೂ, ಫರಾಶೀಸರ ಸರಕಾರಕ್ಕೂ, ಅದರ ಸಂಗಡ ಇರುವ ಇಸ್‌ಪಾನೆಯಲ್ ಅವರ ಜಾತಿಯವರಿಗೂ, ಕೆಲವು ದಿವಸದಿಂದಾ ಲಡಾಯದ ಬೆಂಕಿ ಉರಿಯುವಂಥಾ ವರ್ತಮಾನ ಕೇಳಪಟ್ಟು ಇದ್ದಿತು. ಇದು ನಿಶ್ಚಯವಿದೆ. ಈಗ ನಾವು ಬಹಳ ಖುಶಿಯಿಂದಾ ತಮಗೆ ಮಾಲುಂ

* Manual of Coorg ಎಂಬ ಗ್ರಂಥವನ್ನು ಬರೆದ (೧೮೭೦), ಜಿ.ರಿಕ್ಟರ್ ಈ ಗ್ರಂಥದ ಕುರಿತು–Not one foolish story, not one improper expression disfigures this Canarese book–ಎಂದು ಹೇಳಿದ್ದಾನೆ. (ಪು.೨೩೫)

ಆಗಬೇಕು ಯಂತಾ. ಜಾಹೇರು ಮಾಡುತ್ತೇವೆ. ಈ ಸಂತೋಸ ಕೂಡಿ ಇರುವ ದಿವಸಗಳಲ್ಲಿ ಈ ವರ್ತಮಾನ ನಿಶ್ಚಯ ತಲುಪಿ ಇದೆ. ಅಕ್ಟೋಬರ ತಿಂಗಳಲ್ಲಿ ಇಸ್ಪಾನೆಯುಲ್ಲರ ಶೀಮೆ ಸಮುದ್ರದ ಕಿನಾರೆ ತಾಲೀಮು ಯಂಬ ಬೆಟ್ಟದ ಸಮೀಪ. ರೂಮಿನ ಸಮುದ್ರದ ಮುಖದಲ್ಲಿ, ಫರಾಶಿಸ್ ಇಸ್ಪಾನೆಯುಲ್ಲರದು ಸಹಾ. ಲಡಾಯಿದ ದೊಡ್ಡ ಜಹಾಜ ಮೂವತ್ತ ಮೂರರ ಸಂಗಡ ಇಂಗ್ಲಿಸ್ಥಾನದ ಪಾದಷಾಹ ಜಂಜಾಃ ಕೈವಾನೆ ಬಾರಗಾರವರ ಸರಕಾರದ ಇಪ್ಪತ್ತೇಳು ಜಹಜ ಸಮುದ್ರದಲ್ಲಿ ಲಡಾಯಿ ಮಾಡುವಂಥಾ. ನಾದರ ಸರದಾರ ಕೆಲವು ವರುಷದ ಮುಂದೆ ಒಕರ ಬಂದವರಲ್ಲಿ ರೊಜತ್ತನ ಷಹರಿನ ಸಮೀಪದಲ್ಲಿ, ನೀಲ್ ನದೀ ಮುಖದಲ್ಲಿ, ಫರಾಶೀಸರ ಜಹಜಗಳ ಮೇಲೆ ಮೊದಲು ಫತ್ತಾ ಮಾಡಿ ಇದ್ದರು. ಅವರಿಗೂ ಸದರಿ ಫರಾಶೀಸ ಮುಂತಾದವರ ಜಹಜಿಗೂ ಲಡಾಯಿದ ಬೆಂಕಿ ಹತ್ತಿ ವಳ್ಳೆ ಯರಡು ಜಾವ ಪರಿಯಂತರ ಭಾರಿ ಲಡಾಯಿವಾಗಿ, ಕಡೆಗೆ ಮಹಾದೇವನ ಮದತ್ತಿನಿಂದಲೂ ಪಾದಷಾಹರವರ ದೌಲತಿನ ಬರ್ಕತಿನಿಂದಲೂ ದುಷ್ಮಾನರ ಹತ್ತೊಂಬತ್ತು ಜಹಜಂನು ಫತ್ತಾ ಮಾಡುವಂಥಾ ಜಮಾವರ್ದ್ ಜನರ ಕೈಗೆ ಸಿಕ್ಕಿತು."

'ರಾಜೇಂದ್ರನಾಮೆ'ಯನ್ನೂ, ಮೆಪ್‌ಗ್ಲಿಂಗರ `Coorg Memoirs' ಎಂಬ ಪುಸ್ತಕವನ್ನೂ ಅವಲಂಬಿಸಿ, ಬಾಸೆಲ್ ಮಿಶನ್ನಿನವನೇ ಆದ ಗ್ರೇಟರನು 'ಕೊಡಗು ದೇಶದ ವರ್ಣನೆ'ಯನ್ನು ಕೊಟ್ಟಿದ್ದಾನೆ (೧೮೬೯). ಇದರಲ್ಲಿ 'ರಾಣೆರ ಪಾಟ' ಮತ್ತು 'ಪತ್ತೆರ ಪಾಟ' (ಹುತ್ತರಿ ಹಾಡು)–ಎಂಬೆರಡು ಕೊಡವರ ಪದಗಳಿವೆ.

ಮೈಸೂರಿನ ರಾಜವಂಶವನ್ನು ವಿವರಿಸುವ ಹಲವಾರು ಚರಿತ್ರೆಗಳು ರಚಿತವಾದುದನ್ನು ಉಲ್ಲೇಖಿಸಿದ್ದೇವೆ <೫೧೨>. ಚಾಮರಾಜರು ಪಟ್ಟವೇರಿದ ಮೇಲೆ ಹಿಂದಿನ ಕ್ರಮದಲ್ಲಿಯೆ 'ಮಹಿಶೂರ ಶ್ರೀಮನ್ಮಹಾರಾಜ ಚಾಮರಾಜೇಂದ್ರ ಒಡೆಯರವರ ವಂಶರತ್ನಾಕರ'ವನ್ನು ಪ್ರಕಟಿಸಲಾಯಿತು (೧೮೮೭). ಅದರಂತೆ ವಿವಿಧ ಪಾಳೆಯಗಾರರ ಚರಿತ್ರೆಯು ರಚಿತವಾದುದೂ ಅರುಣೋದಯ ಕಾಲದ ವೈಶಿಷ್ಟ್ಯವಾಗಿದೆ. ೧೮೧೧ರಷ್ಟು ಹಿಂದೆ ಬರೆಯಲಾದ 'ಬುಕ್ಕರಾಯ ಚರಿತ್ರೆ'ಯಲ್ಲಿ ಹಂಡೆ ಅನಂತಪುರದ ಪಾಳೆಯಗಾರರ ಚರಿತ್ರೆಯೇ ಹೆಚ್ಚಾಗಿ ಇದೆಯೆಂದು ಕವಿಚರಿತಕಾರರು ಹೇಳುತ್ತಾರೆ. ಅರಕಲಗೂಡು ಕೃಷ್ಣಪ್ಪನು ಬೆಳಗುತ್ತಿ ಪಾಳೆಯಗಾರರ ವಂಶಾವಳಿಯನ್ನೂ ಎಂ.ಎಸ್. ಪುಟ್ಟಣ್ಣ ಅವರು ಗುಮ್ಮನಾಯಕ, ಚಿತ್ರದುರ್ಗ, ಹಾಗಲವಾಡಿ, ಇಕ್ಕೇರಿ ಮುಂತಾದ ಕಡೆಯ ಅಧಿಪತಿಗಳ ವಂಶಾವಳಿಯನ್ನೂ ನಿರೂಪಿಸಿದ್ದಾರೆ.

ಭಾರತ, ಕರ್ನಾಟಕ ಇತಿಹಾಸಗಳಿಗೆ ಸಂಬಂಧಪಟ್ಟ ಕೆಲವು ಪುಸ್ತಕಗಳು ಪ್ರಕಟವಾದುವು. ಬಿ.ಎಂ. ಶ್ರೀನಿವಾಸಯ್ಯಂಗಾರ್ ಮತ್ತು ಎಂ.ಎಸ್. ಪುಟ್ಟಣ್ಣ ಬರೆದ 'ಹಿಂದು ಚರಿತ್ರದರ್ಪಣ'ದ ನಿರೂಪಣೆಯು ಪಠ್ಯಪುಸ್ತಕಕ್ಕೆ ಅನುಗುಣವಾದುದು.

ಎಂ. ಶಾಮರಾಯರ ಮೈಸೂರ ಚರಿತ್ರೆಯಾದರೂ (೧೮೯೩) ಅದೇ ಮಾದರಿಯದು. ಮೈಸೂರಲ್ಲಿಯ ಶಾಸನಗಳು, ಇಂಗ್ಲಿಷ್‌ನಲ್ಲಿದ್ದ ಇತಿಹಾಸಗಳು–ಇವುಗಳ ಆಧಾರದಿಂದ, ನಿರ್ದುಷ್ಟವಾದ ಈ ಮೈಸೂರ ಇತಿಹಾಸವು ಸಿದ್ಧವಾಯಿತು. ಪಠ್ಯಪುಸ್ತಕವೆಂಬ ದೃಷ್ಟಿಯಿಂದ ರಚಿತವಾಗಿದ್ದರೂ, ಆ ಪ್ರದೇಶದ ಇತಿಹಾಸದ ಮಟ್ಟಿಗೆ ಪ್ರಾಮಾಣ್ಯ ಕೃತಿಯೆನಿಸಿತು. More than a mere record of dates and events, I have tried to throw in it some light on the state of the times to which it relates and to deduce some historical truths–ಎಂಬ ಅವನ ನಿಲುಮೆಯು ಕೃತಿಯ ಮಟ್ಟವನ್ನು ಮೇಲೆತ್ತಿದೆ.

ಇತ್ತ ಮುಂಬಯಿ ಕರ್ನಾಟಕದಲ್ಲಿ ವೆಂಕಟ ರಂಗೋ ಕಟ್ಟಿಯವರು ಕರ್ನಾಟಕದ ಇತಿಹಾಸವನ್ನು ಪ್ರಥಮತಃ ಬರೆದುದನ್ನು ಗಮನಿಸಿದ್ದೇವೆ. ಜೊತೆಗೆ ಆ ಪ್ರದೇಶದ ಭೌಗೋಲಿಕ ವಿವರಣೆಯ ಗ್ರಂಥವೂ (ಕರ್ನಾಟಕದ ಗಝೆಟಿಯರ್), ಕೊಲ್ಹಾಪುರದ ರಾಜರ ಇತಿಹಾಸವೂ ಇವರಿಂದ ರಚಿತವಾದುದಿದೆ. ಆಮೇಲೆ, ಮುಂಬಯಿ ಕರ್ನಾಟಕದ ಶಾಲೆಗಳಲ್ಲಿ 'ಕರ್ನಾಟಕ'ದ ಇತಿಹಾಸವನ್ನು ಕಲಿಸಬೇಕೆನ್ನುವ ನಿರ್ಣಯದ ಪ್ರಕಾರ, ಇಂಥ ಹಲವಾರು ಇತಿಹಾಸ ಪುಸ್ತಕಗಳು ಬೇರೆಯವರಿಂದಲೂ ಹೊರಬಂದುವು. ಸಮಗ್ರ ಕರ್ನಾಟಕದ ಕಲ್ಪನೆ ಈ ಭಾಗದಲ್ಲಿ ಇದ್ದಷ್ಟು ಇತರತ್ರ ಇರಲಿಲ್ಲವೆನ್ನಬೇಕು.

ಭಾರತದ ಮೇರೆಯನ್ನು ದಾಟಿ, ಇಜಿಪ್ತದ ಕುರಿತು ಎಸ್. ರಾಣೋಜಿರಾಯನು ಬರೆದ ಪುಸ್ತಕವೂ ಇದೆ. ಹಿಮವತ್‌ಪ್ರದೇಶ ಮತ್ತಿತರ ದೂರದ ಪ್ರದೇಶಗಳ ಕಿರುಪರಿಚಯವನ್ನು ಮಿಶನರಿಗಳು ಮಾಡಿಕೊಟ್ಟಿದ್ದಾರೆ. ಇಂಗ್ಲೆಂಡದ ಇತಿಹಾಸವನ್ನು ಇಲ್ಲಿಯ ಮಕ್ಕಳು ಕಲಿಯುವುದಂತೂ ಅಗತ್ಯವೆ ಆಗಿದ್ದಿತು. ಆ ಕಾರಣ ಗು. ಫ. ಹಳಕಟ್ಟಿ ಇಂಗ್ಲೆಂಡದ ಇತಿಹಾಸವನ್ನು ಬರೆದಿದ್ದಾನೆ (೧೮೯೬). ಅದರಲ್ಲಿ ಇಂಗ್ಲಿಷ್‌ರ ಸ್ತುತಿ ಪದ್ಯ ನೋಡುವ ಹಾಗಿದೆ :

ಸತತೋದ್ಯಮಂ ಪ್ರಯತ್ನಂ
ಹಿತದ ವಿಚಾರಂ ಸ್ವದೇಶಾಭಿಮಾನಂ
ವಿತತ ಸ್ವತಂತ್ರದಭಿರುಚಿ
ಕೃತಿನಿಶ್ಚಯಮಿಂಗ್ಲಿಷಿಗನ ಸಹಜ ಗುಣಂ ॥

ಪ್ರವಾಸ ಕಥನಗಳೂ ಹಣಿಕಿಕ್ಕಿವೆ. ಶ್ರೀವಾಸ ಕವಿ <೩೨> ಮತ್ತು ಕರ್ಕಿ ವೆಂಕಟರಮಣ ಶಾಸ್ತ್ರಿಯ ಪದ್ಯರೂಪೀ ಪ್ರವಾಸ ಕೃತಿಗಳನ್ನು ನೋಡಿದ್ದೇವೆ. ಕಾರ್ಕಳ ಚರಿತ್ರೆ (೧೮೯೨), ಉಡುಪಿ ಮಹಾತ್ಮ್ಯ (೧೮೯೪), ಇವು ಸಂಪ್ರದಾಯನಿಷ್ಠ ಕೃತಿಗಳು, ಸಮಕಾಲೀನದ್ದೆಂದು ಲಕ್ಷ್ಮಣ ಗೋಪುತ್ರೆ ಎಂಬವನು ಇಂಡಿಯನ್ ನ್ಯಾಶನಲ್ ಕಾಂಗ್ರೆಸ್‌ನ ಹತ್ತನೆಯ ಅಧಿವೇಶನಕ್ಕೆ ಹೋಗಿ ಬಂದು ಅದರ ವರದಿಯನ್ನು ಪ್ರಕಟಿಸಿದುದನ್ನು (೧೮೯೫) ಉಲ್ಲೇಖಿಸಬೇಕು.

## 63 ಕಾನೂನು, ವ್ಯವಹಾರ

ಬ್ರಿಟಿಶ್ ಆಡಳಿತದ ನಿಮಿತ್ತದಿಂದ ಕಾನೂನು ಮತ್ತು ಇತರ ವ್ಯವಹಾರಗಳಿಗೆ ಸಂಬಂಧಿಸಿದ ಹಲವು ಪುಸ್ತಕಗಳು ಪ್ರಕಟವಾಗಿದ್ದು ಅವುಗಳ ಇಣುಕು ನೋಟವನ್ನು ಇಲ್ಲಿ ಕೊಡಬಯಸಿದೆ. ಭೂತಾಳ ಪಾಂಡ್ಯನ ಅಳಿಯ ಸಂತಾನದ ಕಟ್ಟುಕಟ್ಟಳೆಗಳ ಕುರಿತ ಪುಸ್ತಕವನ್ನು ಬಾಸೆಲ್ ಮಿಶನ್‌ದವರು ಪ್ರಕಟಿಸಿದ್ದಾರೆ. ಹೆಚ್ಚು ಮಹತ್ವದವೆಂದರೆ ಹಿಂದೂ ಮತ್ತು ಮಹಮ್ಮದೀಯ ಕಾನೂನುಗಳು. ಹಿಂದೂ ಕಾಯಿದೆಯ ಬಗ್ಗೆ ಎಂ.ಡಿ. ನಾರಣಯ್ಯಂಗಾರ್ (೧೮೯೩), ಹ.ವೆ. ಚಿನ್ನಮುಳಗುಂದ(೧೮೯೬) ಹಾಗೂ ಆರ್.ವೆಂಕಟಸುಬ್ಬರಾವ-ಇವರು ಬರೆದ ಪುಸ್ತಕಗಳು ಸಂಗ್ರಹರೂಪವಾಗಿವೆ. ಭಾಷೆಯು ಕೋರ್ಟಿನಲ್ಲಿ ಬಳಸುವಂತಹದೇ-ಅರ್ಥಾತ್ ಇಂಗ್ಲಿಷ್, ಹಿಂದುಸ್ತಾನೀ ಶಬ್ದಗಳೇ ಹೆಚ್ಚು.

'ಮಹಮ್ಮದೀಯ ಲಾ' ಪುಸ್ತಕದ ಮೂಲ ಲೇಖಕನು ಮದ್ರಾಸದ ವಿ. ಶಠಗೋಪಾಲಾಚಾರಿಯು. ಇದನ್ನು ಮೈಸೂರು ಕಮೀಶನ್‌ದಲ್ಲಿ ಇದ್ದ ಮೇಜರ್ ಕೋಲ್ ಎಂಬ ವಿದೇಶೀಯನು ಕನ್ನಡದಲ್ಲಿ ಅನುವಾದಿಸಿದುದು ಅಪೂರ್ವವೆನಿಸಬಹುದು. ಅಲ್ಲದೆ ಈ ಅನುವಾದದಲ್ಲಿ ಭಾಷಾಸರಣಿಯು ಹೆಚ್ಚು ಶುದ್ಧವಾಗಿದೆ.

ಕನ್ನಡದಲ್ಲಿ ಲಾ ಪುಸ್ತಕಗಳ ಅಗತ್ಯವೇಕೆಂಬುದನ್ನು ಇದರ ಪೀಠಿಕೆಯಲ್ಲಿ ಹೀಗೆ ವಿವರಿಸಲಾಗಿದೆ :

"ಮೈಸೂರು ಶೀಮೆಯಲ್ಲಿ ಸುಮಾರು ೫೦ ಲಕ್ಷ ಪ್ರಜೆಗಳಲ್ಲಿ ೪೫ ಲಕ್ಷ ಜನಗಳು ಇಂಗ್ಲಿಷ್ ತಿಳಿಯದೆ ದೇಶಭಾಷೆಯಾದ ಕನ್ನಡದಿಂದಲೇ ವ್ಯವಹಾರಿಗಳಾಗಿದ್ದಾರೆ ಮತ್ತು ಇಂಗ್ಲಿಷ್ ತಿಳಿಯದ ವಕ್ಕೀಲರೂ ಕಕ್ಷಿಗಾರರೂ ತಾಲೂಕು ಮುನ್‌ಸಿಫ್ ಕೋರ್ಟುಗಳಲ್ಲಿ ವ್ಯವಹರಿಸಬಹುದಾಗಿ ಅಪ್ಪಣೆ ಆಗಿದೆ. ಈ ಕಾರಣದಿಂದ ಕನ್ನಡ ಪುಸ್ತಕಗಳು ಅವಶ್ಯಕವಾಯಿತು."

ಹ.ವೆಂ. ಚಿನ್ನಮುಳಗುಂದನದೂ ಅದೇ ಉದ್ದೇಶವಾಗಿದ್ದಿತು. ಅಪಾರವಾಗಿರುವ ಹಿಂದೂ ಜನರಿಗೆ ತಮ್ಮ ಆಸ್ತಿ, ಇತರ ವಿಷಯಗಳ ಸಂಬಂಧದ ಕಾಯದೆ ಏನೆಂಬುದನ್ನು ತಿಳಿಯುವ ಆಸಕ್ತಿ ಇರುವುದು ಸ್ವಾಭಾವಿಕ. ಚಿನ್ನಮುಳಗುಂದನು ಸ್ವತಃ ಸಬ್ ಜಡ್ಜ್ ಇದ್ದನಾದ್ದರಿಂದ ಅವನ ಕೃತಿಯು ಹೆಚ್ಚು ವಿಶ್ವಾಸಾರ್ಹವೆನಿಸಿತು.

ಕನ್ನಡದಲ್ಲಿ ಕಾಯದೆಯ ಪುಸ್ತಕಗಳನ್ನು ಬರೆಯುವಾಗ ಇಂಗ್ಲಿಷ್ ಶಬ್ದಗಳನ್ನು ಹೇಗೆ ಕನ್ನಡಿಸಬೇಕು? 'ಆದಷ್ಟು ಸುಲಭ ಕನ್ನಡದಲ್ಲಿರಬೇಕು. ಕನ್ನಡ ಶಬ್ದಗಳಿರದೇ ಹೋದರೆ, ಇದ್ದರೂ ಅರ್ಥಬೋಧೆಯಾಗದಿದ್ದರೆ ಸಂಸ್ಕೃತ ಶಬ್ದ ಉಪಯೋಗಿಸಿ, ಅದಕ್ಕೆ ತುಸು ವಿವರಣೆ ಕೊಡಬೇಕು. ಇನ್ನು, ಕೋರ್ಟಿನಲ್ಲಿ ಬಳಕೆಯಲ್ಲಿರುವ ಶಬ್ದಗಳಿಗೆ ಸಮನಾದ ಕನ್ನಡ ಶಬ್ದಗಳಿಲ್ಲದಿದ್ದರೆ, ಕೋರ್ಟಿನ ಶಬ್ದಗಳನ್ನೇ ಇಡಬೇಕು'- ಎಂಬ ಅವನ ದೃಷ್ಟಿಕೋಣವು ವಿವೇಕಯುತವಾಗಿದೆ.

ಇತ್ತ ಟಾರ್ಟ್ಸ್ ಹಾಗೂ ಡ್ಯಾಮೇಜಿಸ್, ಸಿವಿಲ್ ಮತ್ತು ಕ್ರಿಮಿನಲ್ ಪ್ರೊಸೀಜರ್, ಎವಿಡೆನ್ಸ್ ಮುಂತಾದ ಸಾಮಾನ್ಯ ಕಾನೂನುಗಳೂ ಅನುವಾದಗೊಂಡವು. ಸರ್ ರೇಮಂಡ್ ವೆಸ್ಟ್ ಎಂಬ ನ್ಯಾಯಾಧೀಶನು ಮುಂಬಯಿ ಕೋರ್ಟಿನಲ್ಲಿ ನಿರ್ಣಯವಾದ ಕೆಲವು ವ್ಯಾಜ್ಯಗಳ ಟಿಪ್ಪಣಿಗಳನ್ನು ಕನ್ನಡದಲ್ಲಿ ಪ್ರಕಟಿಸಿದ್ದಾನೆ. (Notes on cases decided by the Bomay High Court, 1868) ಅದರ ಉದ್ದೇಶವು ಸ್ಪಷ್ಟವಾಗಿಲ್ಲ. ಅಂತೂ ಇದೊಂದು ವಿಶಿಷ್ಟವಾದ ಪುಸ್ತಕ. (ಸರ್ ವೆಸ್ಟ್ ಆ ಕಾಲದಲ್ಲಿ ಸುಪ್ರಸಿದ್ಧ ನ್ಯಾಯಾಧೀಶನಿದ್ದನು. ಹಿಂದೂ ಕಾನೂನಿನ ನಿಯಮಗಳು ಅಂದಿನ ನ್ಯಾಯಾಧೀಶರಿಗೆ ಸ್ಪಷ್ಟವಿರದಿದ್ದಾಗ ವೆಸ್ಟ್ ಕೆಲವು ಶಾಸ್ತ್ರಿಗಳನ್ನು ಹೈಕೋರ್ಟಿಗೆ ಕರೆಯಿಸಿಕೊಂಡು, ಅವರಿಗೆ ಪ್ರಶ್ನೆ ಕೇಳಿ, ಆ ಆಧಾರದ ಮೇಲೆ 'Digest of Hindu law on inheritance. . .ಎಂಬ ಕೃತಿಯನ್ನು ಹೊರ ತಂದಿದ್ದು, ಅಂಗ್ಲ ಭಾಷೆಯಲ್ಲಿ ಅದೊಂದು ಪ್ರಮಾಣಭೂತವಾದ ಕೃತಿಯೆನಿಸಿದೆ). 'ಸಾಕ್ಷ್ಯಶಾಸ್ತ್ರ ಸಂಗ್ರಹ'ದ ಲೇಖಕ ಶಿಡ್ಲಘಟ್ಟ ರಾಮರಾಯ ಎಂಬವನು (೧೮೭೦). ಮೈಸೂರಿನಲ್ಲಿ ಜ್ಯುಡಿಶಿಯಲ್ ಕಮೀಶನರ್ ಆಗಿದ್ದ ಜೆ.ಆರ್. ಕಿಂಡರ್ಸ್‌ಲಿಯು ಬರೆದ ಕೃತಿಯನ್ನು ಅನುವಾದಿಸಿದ್ದಾನೆ.

ಕೋರ್ಟು ಕಚೇರಿಗಳ ವ್ಯವಹರಣೆಗೆ ಬೇಕಾದ ವಿವಿಧ ಕಾನೂನುಗಳ ಕಿರುಪರಿಚಯದ ಕೈಪಿಡಿಗಳು ಸಹ ಹೊರಬಂದವು (ವಕೀಲ್ಸ್ ಗೈಡ್ ಎಂಬ ಕಾನೂನು ಸಂಗ್ರಹ–೧೮೬೮, ಇತ್ಯಾದಿ). ರೆವಿನ್ಯೂ ಅಧಿಕಾರಿಗಳು, ಗ್ರಾಮಪಟೇಲರು, ಪೋಲೀಸರು ಇವರ ವೃತ್ತಿಗೆ ನೆರವಾಗುವ ಕೃತಿಗಳೂ ಪ್ರಕಟವಾಗಿವೆ. ಖಾಸಗಿ ಪತ್ರ, ಅರ್ಜಿಗಳು ಮತ್ತು ಕರಾರ ಪತ್ರಗಳು ಇವುಗಳ ಬಗೆಯನ್ನು ತಿಳಿಸಿಕೊಡುವ ಕೈಪಿಡಿಗಳಲ್ಲಿ ಟಿ.ಜಿ. ವಾಬೆನ್ನನ 'ಲೋಕವ್ಯವಹಾರ ಬೋಧಿನಿ'ಯನ್ನೂ ಗಣಿಸಬೇಕು (೧೮೯೬). ವಾಣಿಜ್ಯೋದ್ಯಮಿಗಳಿಗೆ ಸಂಬಂಧಿಸಿದ ಪುಸ್ತಕಗಳು ಸಂಖ್ಯೆಯಲ್ಲಿ ಕಡಿಮೆ. ಹಣಮಂತ ಸಂಜೀವ ಸಗರನ 'ವ್ಯಾಪಾರ ಬೋಧಿನಿ' (೧೮೯೭), ಎಚ್.ವಿ. ನಂಜುಂಡಯ್ಯನವರ ಅರ್ಥಶಾಸ್ತ್ರ (೧೯೦೧) ತಕ್ಕಮಟ್ಟಿಗೆ ಸ್ವತಂತ್ರ ಬರೆಹಗಳಾಗಿವೆ.

ಎಂ. ವೆಂಕಟಕೃಷ್ಣಯ್ಯನವರ ಒಂದು ಪುಸ್ತಕದ ಹೆಸರು 'ಧನಾರ್ಜನೆಯ ಕ್ರಮ' ಎಂಬುದಾಗಿದ್ದು ಅದರಲ್ಲಿ ವಿದ್ಯೆ, ಅದೃಷ್ಟ, ದ್ಯೂತ, ಮದ್ಯಪಾನ, ತಂದೆ ತಾಯಿಗಳ ಕರ್ತವ್ಯ, ಭೃತ್ಯರು, ಸಂಸಾರ ತಾಪತ್ರಯ, ಪರೋಪಕಾರ–ಮುಂತಾದ ವಿಷಯಗಳ ಮೇಲೆ ಚಿಕ್ಕ ನಿಬಂಧನೆಗಳಿದ್ದು ಅವೆಲ್ಲ ಧನಸಂಪಾದನೆ, ಧನಾಭಿವೃದ್ಧಿಗೆ ಸಾಧಕ ಬಾಧಕವಾಗುವಂತಹವೆಂಬ ಸೂಚನೆಯಿದೆ. ಸಕಲ ಇಷ್ಟಾರ್ಥ ಸಿದ್ಧಿಗಳಿಗೂ ಕಷ್ಟ ನಿವಾರಣೆಗಳಿಗೂ ದ್ರವ್ಯವೇ ಮೂಲ ಕಾರಣವಾದದ್ದು. ಕುಂತಿದೇವಿಯ ಮಕ್ಕಳು ಇತರ ರೀತಿಯಿಂದ ಯೋಗ್ಯತೆ ಸಾಮರ್ಥ್ಯಗಳನ್ನು ಹೊಂದಿದ್ದರೂ ಧನವಿಲ್ಲದ್ದರಿಂದ ಅಥವಾ ಇದ್ದುದನ್ನು ಕಳೆದುಕೊಂಡದ್ದನ್ನು ಸ್ಮರಿಸಿ, ಕುಂತಿಯು ಸೊಸೆಯಾದ ಸುಭದ್ರೆಗೆ

'ಭಾಗ್ಯವಂತನಾದ ಪುತ್ರನನ್ನು ಪಡೆ' ಎಂದು ಆಶೀರ್ವಾದ ಮಾಡಿದ್ದರ ದೃಷ್ಟಾಂತವನ್ನು ಮೊದಲನೆಯ ನಿಬಂಧದಲ್ಲಿ ಕೊಡಲಾಗಿದೆ. ಮುಂದಿನ ವಿವೇಚನೆಯಲ್ಲಿ ಧನಾರ್ಜನೆಯ ಬಗ್ಗೆ ಅಲ್ಲಲ್ಲಿ ಹಿತೋಕ್ತಿಗಳಿವೆ. ಯಾವುದೂ ಇಂಗ್ಲಿಷ್ ಪುಸ್ತಕದಿಂದ ಮೂಲ ವಿಚಾರಗಳನ್ನು ಎತ್ತಿಕೊಂಡಂತೆ ತೋರುವುದು. ಇಂಗ್ಲಿಷ್ ಶಬ್ದಗಳಿಗೆ ಅಣಿಗೊಳಿಸಿದ ಕೆಲವು ಕನ್ನಡ ಪದಗಳು ವಿಚಿತ್ರವಾಗಿ ಕಾಣುತ್ತವೆ. ಉದಾಹರಣೆಗೆ, Self help-ಪುರುಷಾಕಾರ; Improper Connection-ಅಗಮ್ಯ ಗಮನ; market of goods–ಸ್ಥಾನ ನಿರ್ಣಯ [?]; marriage expenses–ಪೂರ್ವಕರ್ಮ (ದ ವೆಚ್ಚ); punctuality–ಕಾಲನಿಬಂಧನೆ. ಇತ್ಯಾದಿ. ಪಾಶ್ಚಾತ್ಯರ ವಿಚಾರಗಳಿಗನುಗುಣವಾಗಿ ಕನ್ನಡ ಶಬ್ದಗಳನ್ನು ಸೃಷ್ಟಿಸಬೇಕಾದ ಅನಿವಾರ್ಯ ಪ್ರಸಂಗವನ್ನಿಲ್ಲಿ ಕಾಣುತ್ತೇವೆಯಾದರೂ ಆ ಕೆಲಸ ಸಮರ್ಪಕವಾಗಿ ಆಗಿಲ್ಲ.

## 64 ವಿಜ್ಞಾನ ಸಾಹಿತ್ಯ

ಪಾಶ್ಚಾತ್ಯರ ಆಗಮನಕ್ಕೆ ಮೊದಲು ನಮ್ಮ ದೇಶದಲ್ಲಿ ಪ್ರಚುರವಾಗಿದ್ದ ವೈಜ್ಞಾನಿಕ ವಿಷಯಗಳೆಂದರೆ, ಗಣಿತ, ಖಗೋಳ ಮತ್ತು ವೈದ್ಯಕೀಯ ಶಾಸ್ತ್ರಗಳು. ಮಾತ್ರ, ಪಾಶ್ಚಾತ್ಯ ಶಿಕ್ಷಣ ಪದ್ಧತಿಯಿಂದಾಗಿ, ಭೌತ, ರಸಾಯನ, ಭೂ, ಜೈವಿಕ ಅದರಂತೆ ಎಂಜಿನಿಯರಿಂಗ್ ವಿಷಯಗಳ ಅಭ್ಯಾಸಕ್ಕೆ ಮೊದಲಾಯಿತು. ಹೈಸ್ಕೂಲ್, ಕಾಲೇಜ ಮಟ್ಟದಲ್ಲಿ ಈ ಶಿಕ್ಷಣವು ನೆಲೆಗೊಂಡದ್ದು ೧೮೮೦ನೆಯ ದಶಕದ ಅನಂತರವೇ. ಆದ್ದರಿಂದ, ಕಳೆದ ಶತಮಾನದಲ್ಲಿ ವೈಜ್ಞಾನಿಕ ಸಾಹಿತ್ಯ ನಮ್ಮ ಕಣ್ಣಿಗೆ ಎದ್ದು ತೋರದಂತಿದ್ದರೆ, ಅದು ಸಹಜವೇ. ಪಾಶ್ಚಿಮಾತ್ಯರಲ್ಲಿ ಕೂಡ, ಡಾರ್ವಿನ್ನನ ವಿಕಾಸವಾದದ ನಿಮಿತ್ತವಾಗಿ ಎಂದರೆ ೧೮೬೦ನೆಯ ದಶಕದಿಂದೀಚೆಗೆ, ಜನತೆಗಾಗಿ ವಿಜ್ಞಾನ ಸಾಹಿತ್ಯ ನಿರ್ಮಾಣವಾಗ ತೊಡಗಿತೆಂದು ಇಲ್ಲಿ ಪ್ರಾಸಂಗಿಕವಾಗಿ ನೆನೆಯಬಹುದು.

ಆದರೂ ಕಳೆದ ಶತಮಾನದಲ್ಲಿ ವಿಜ್ಞಾನ ಸಾಹಿತ್ಯದ ಅಡಿಗಲ್ಲನ್ನು ಹಾಕಲಾಗಿದೆ. ಅದರ ನಿರ್ಮಾಣಕ್ಕೆ ಪ್ರೇರಣೆಗಳೆಂದರೆ, ಪ್ರಾಥಮಿಕ, ಮಾಧ್ಯಮಿಕ ಶಾಲೆಗಳ ವಿದ್ಯಾರ್ಥಿಗಳಿಗಾಗಿ ಪಠ್ಯಪುಸ್ತಕ ಪೂರೈಕೆ; ಸಾಮಾನ್ಯ ಜನತೆಗಾಗಿ ವಿಜ್ಞಾನದ ತಿಳುವಳಿಕೆ; ಮತ್ತು ಪ್ರಾಚೀನ ಶಾಸ್ತ್ರ ಕೃತಿಗಳ ಸಟೀಕ ಪ್ರಕಟನೆ. ಈ ಗ್ರಂಥ ನಿರ್ಮಿತಿಯಲ್ಲಿ ವೈದ್ಯಕೀಯ-ಆರೋಗ್ಯ ಶಾಸ್ತ್ರವು ಹೆಚ್ಚು ಪಾಲನ್ನು ಪಡೆಯಿತು.

ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಯು 'ಆಯುರ್ವೇದ ಸಂಗ್ರಹ' (೧೮೬೯) ಮತ್ತು 'ವೈದ್ಯಶತಶ್ಲೋಕೀ'(೧೮೭೬) ಎಂಬೆರಡು ಗ್ರಂಥಗಳನ್ನು ಕೊಡಮಾಡಿದ್ದಾನೆ. ಮೊದಲಿನದರಲ್ಲಿ ಪಾಶ್ಚಾತ್ಯ (ಎಲೋಪಥಿ) ವೈದ್ಯಕೀಯವೂ ತುಸು ಸೇರಿದೆ. ಹೊಸಗನ್ನಡದ ವೈದ್ಯವಿಜ್ಞಾನ ಸಾಹಿತ್ಯದಲ್ಲಿ ಇದುವೆ ಪ್ರಥಮ ಕೃತಿ. ಅವಧಾನ ಸರಸ್ವತಿಯು

'ವೈದ್ಯಶತಶ್ಲೋಕೀ'ಯಲ್ಲಿ, ವೈದ್ಯಶಾಸ್ತ್ರ ಕೃತಿಗಳ ಸಾರ-ಸಂಗ್ರಹರೂಪವಾದ ಶ್ಲೋಕಗಳಿದ್ದು ಸುಬ್ರಹ್ಮಣ್ಯಶಾಸ್ತ್ರಿಯು ಅವಕ್ಕೆ ಟೀಕೆ ಬರೆದಿದ್ದಾನೆ. ತೋವಿನಕೆರೆ ರಾಯಣ್ಣನು ಪೂಜ್ಯಪಾದ ಮೊದಲಾದವರಿಂದ ಆಯುರ್ವೇದ ವಿಚಾರಗಳನ್ನು ಸಂಕಲಿಸಿ 'ಅಷ್ಟಾಂಗ ವಿಘಂಟು'ವನ್ನು ಹೊರತಂದಿದ್ದಾನೆ (೧೮೮೮). ಪ್ರಾಚೀನ ಕೃತಿಗಳ ಪರಿಷ್ಕೃತ ಪ್ರಕಾಶನ ಕಾರ್ಯದಲ್ಲಿ ಬೆಂಗಳೂರಿನ ವಾಜಪೇಯಿ ಕೃಷ್ಣಯ್ಯನ ಪಾತ್ರವು ಹಿರಿದಾದುದು. ಇಂದ್ರಕಂಠ ವಲ್ಲಭಾಚಾರ್ಯ ವಿರಚಿತ 'ವೈದ್ಯಚಿಂತಾಮಣಿ'ಯನ್ನು ಮಾಗಡಿ ರಾಮಸ್ವಾಮಿಯಿಂದಲೂ, ಸುಶ್ರುತ, ವಾಗ್ಭಟಾದಿಗಳ 'ಚಿಕಿತ್ಸಾ ಸಾರ'ವನ್ನು ಗೂಡಪಲ್ಲಿ ಹರಿರಾಮಶಾಸ್ತ್ರಿಯಿಂದಲೂ ಸಂಪಾದನಗೊಳಿಸಿ ಹೊರತಂದಿದ್ದಾನೆ. ಇವೆರಡೂ ಬೃಹತ್ ಗ್ರಂಥಗಳು.

ಆರೋಗ್ಯ ವಿದ್ಯೆಯು ಶಾಲೆಯಲ್ಲಿ ಕಲಿಯಬೇಕಾದ ಕಡ್ಡಾಯ ವಿಷಯವಾದ್ದರಿಂದ ಮೈಸೂರು, ಮದ್ರಾಸ, ಮುಂಬಯಿ-ಈ ಮೂರೂ ಆಧಿಪತ್ಯಗಳಲ್ಲಿಯ ವಿದ್ಯಾರ್ಥಿಗಳಿಗಾಗಿ ಅನೇಕ ಪುಸ್ತಕಗಳು ಪ್ರಕಟವಾದುವು. ಅವೆಲ್ಲ ಇಂಗ್ಲಿಷ್ ಕೃತಿಗಳ ಅನುವಾದಗಳೆನ್ನಬಹುದು. ಬರ್ನರ್ ಎಂಬವನ ಕೃತಿಯನ್ನು ವೆಂಕಟಸ್ವಾಮಿ ಅಯ್ಯರ್ ಅನುವಾದಿಸಿದ್ದು ('ಆರೋಗ್ಯ ಪ್ರವೇಶದಾಯಿನಿ', ೧೮೮೮), ಅದು ಮಹಾರಾಣಿ ಬಾಲಿಕಾ ಪಾಠಶಾಲೆಯ ೧೨ನೆಯ ಕುಸುಮವಾಗಿ ಪ್ರಕಟವಾಯಿತು. ಚ.ವಾಸುದೇವಯ್ಯ ಅನುವಾದಿಸಿದ 'ಸರಳಾರೋಗ್ಯ'ವು ನಿಜಕ್ಕೂ ಸರಳವಾದುದು. ಆರೋಗ್ಯ ವಿಷಯದಲ್ಲಿ ಅದೊಂದು ಮಾದರಿಯ ಪಠ್ಯವೆನಿಸಿತು. ಮುಂಬಯಿ ಕರ್ನಾಟಕದಲ್ಲಿ ಆರೋಗ್ಯ ವಿಚಾರವಾಗಿ ಪಠ್ಯಗಳನ್ನು ಬರೆದವರೆಂದು ರಾ.ಬಾ. ಕರಂದೀಕರ, ಚನ್ನವೀರಪ್ಪ ಅನಾಡ, ಗು.ರಾ. ಮಮದಾಪುರ ಮೊದಲಾದವರನ್ನು ನೆನೆಯಬೇಕು.

ಪಠ್ಯೇತರ ಪುಸ್ತಕಗಳೆಂದು ಆರ್. ರಾಘವೇಂದ್ರರಾಯರ 'ಆರೋಗ್ಯ ಮಾರ್ಗದರ್ಶಿನಿ' (೧೮೮೯) ಮತ್ತು ಶ್ರೀನಿವಾಸ ಸವದಿಯ 'ದೀರ್ಘಾಯುಷ್ಯದ ಗುಟ್ಟು' (೧೮೯೯) ಇವನ್ನು ಮಾದರಿಯೆಂದು ಹೆಸರಿಸುತ್ತೇವೆ. ಅಚ್ಚಿನ ಕರಡನ್ನು ತಿದ್ದುವ ಕಾರ್ಯದಲ್ಲಿ ಕಿಟೆಲರಿಗೆ ನೆರವಾಗಿದ್ದ ಶಿವರಾಮ ಭಾರದ್ವಾಜನು ಬಾಸೆಲ್ ಮಿಶನ್ ಪಂಚಾಂಗಗಳಲ್ಲಿ ತಾನು ಬರೆದಿದ್ದ (೧೮೭೬-೧೮೮೮) ವಿವಿಧ ವೈದ್ಯಕೀಯ ವಿಷಯಗಳನ್ನು ಸಂಕಲಿಸಿ 'ರೋಗ ಚಿಕಿತ್ಸೆ' ಎಂಬ ಪುಸ್ತಕವನ್ನು ಹೊರತಂದನು. ಇದರ ಜೊತೆಗೆ ಅವನ 'ವ್ಯಾಯಾಮದೀಪಿಕೆ' ಎಂಬ ಪ್ರಕಟನೆಯೂ ಇದೆ (೧೮೯೬).

ಎಳೆಯ ಮಕ್ಕಳ ಆರೋಗ್ಯವೂ ಅಂದಿನವರ ಗಮನವನ್ನು ವಿಶೇಷವಾಗಿ ಸೆಳೆದಿದ್ದಿತು. ಆ ಕುರಿತು ಸಂಕ್ಷಿಪ್ತವಾದ ವಿವರಣೆ ಹಲವು ಕೃತಿಗಳಲ್ಲಿ ಬಂದಿದೆ. ಅವುಗಳಲ್ಲಿ 'ಗರ್ಭಿಣಿ ಮತ್ತು ಶಿಶು ಸಂಗೋಪನ' ಎಂಬ ಪುಸ್ತಕದ ಹುಟ್ಟು ಕುತೂಹಲಕಾರಿಯಾದುದು. ಆನಂದೀಬಾಯಿ ಜೋಶಿ ಎಂಬ ಮಹಾರಾಷ್ಟ್ರ ಮಹಿಳೆ ವೈದ್ಯಕೀಯ ಶಿಕ್ಷಣಕ್ಕೆಂದು

ಅಮೇರಿಕೆಗೆ ಹೊರಟು ನಿಂತಾಗ, ಧಾರವಾಡದ ಮ.ವಿ. ಕಾಣೆ ಎಂಬವನು ಅವಳ ಸಹಾಯಾರ್ಥವಾಗಿ ನಿಧಿಯನ್ನು ಕೂಡಿಸಿದನು. ಆದರೆ ಮಧ್ಯದಲ್ಲಿಯೇ ಆಕೆ ತೀರಿಕೊಂಡಿದ್ದರಿಂದ ದಾತೃಗಳಿಗೆ ಅವರವರ ಹಣವನ್ನು ಮರಳಿ ಮುಟ್ಟಿಸಲಾಯಿತು. ಕೆಲವರು ಮಾತ್ರ ಹಣ ಸ್ವೀಕರಿಸಲು ಒಪ್ಪದಿದ್ದುದರಿಂದ ಧಾರವಾಡದ 'ಮಿತ್ರಸಮಾಜ'ದ ವಶಕ್ಕೆ ಆ ಹಣವನ್ನು ಕೊಟ್ಟು ಮೇಲಿನ ವಿಷಯಕ್ಕೆ ಸಂಬಂಧಿಸಿ, ಸ್ವತಂತ್ರ ಪುಸ್ತಕ ಬರೆದವರಿಗೆ ಬಹುಮಾನವಾಗಿ ಕೊಡಬೇಕೆಂದು ಸೂಚಿಸಿದನು. ಆ ಸ್ಪರ್ಧೆಗೆಂದು ಬಂದಿದ್ದ ಕನ್ನಡ, ಮರಾಠೀ ಪ್ರಬಂಧಗಳಲ್ಲಿ (ಒಟ್ಟಿಗೆ ೧೨), ಬೋಧರಾಚಾರ್ಯ ಮಹಿಷಿಯು ಬರೆದುದು ಉತ್ತಮವೆಂದು ನಿರ್ಣಯವಾದದ್ದರ ಪರಿಣಾಮವೇ ಈ ಪುಸ್ತಕ (೧೮೯೦). ಇದರಲ್ಲಿ ಗರ್ಭಿಣಿ ಮತ್ತು ಶಿಶುವಿನ ಆರೋಗ್ಯ ರಕ್ಷಣೆ ಹಾಗೂ ರೋಗ ನಿದಾನ–ಇವುಗಳ ಕುರಿತು ಸಲಹೆ ಸೂಚನೆಗಳನ್ನು, ಮಾಡು – ಬೇಡ ಎಂಬ ರೀತಿಯಲ್ಲಿ (Dos & Donts) ಕೊಡಲಾಗಿದೆ. ಒಂದೆಡೆ ಮಾತ್ರ ಲೇಖಕನು ತುಸು ಹೆಚ್ಚೆನಿಸುವಂತೆ ಉಪದೇಶ ಮಾಡಿದ್ದಾನೆ :

"ಶ್ರೀಮಂತರೆನ್ನಿಸಿಕೊಳ್ಳುವ ಕೆಲ ಸ್ತ್ರೀಯರು ತಮ್ಮ ಪ್ರಕೃತಿಯು ಚೆನ್ನಾಗಿದ್ದರೂ ತಮ್ಮ ಕೂಸನ್ನು ದಾದಿಯ ಸ್ವಾಧೀನ ಮಾಡಿಬಿಡುತ್ತಾರೆ. ತಮ್ಮ ಜೀವಕ್ಕೆ ಜೊಂಜಾಟವಾಗಿ ವಿಷಯೋಪಭೋಗಕ್ಕೆ ತೊಂದರೆಯಾಗುವದೆಂದು ಮಕ್ಕಳನ್ನು ಪರದೇಶಿಗಳಂತೆ ಮಾಡಿ ಇಡುವರಲ್ಲ! ಇದು ಎಂಥಾ ನೀಚತನವು! ಬರೇ ಪಶುಪಕ್ಷಿಗಳೇ ಯಾಕೆ, ಪ್ರತ್ಯಕ್ಷ ರಾಕ್ಷಸಿಗಳಾದರೂ ಹೊಟ್ಟೆಯ ಕರುಳಾಗಿರುವ ತಮ್ಮ ಕೂಸಿನ ಬಗ್ಗೆ ಇಂಥ ನಿದ್ದಂಡೆತನ ಮಾಡಲಾರರು. ಓ, ಮಕ್ಕಳನ್ನು ಎರವಿನ ಪ್ರೀತಿಗೆ ನೀಡಿಬಿಡುವ ತಾಯಿಗಳಿರಾ! ದೇವರು ನಿಮ್ಮ ಎದೆಗಳನ್ನು, ಅರೆಗಲ್ಲಿನವಾಗಿ ಮಾಡಿದ್ದಾನೊ? ಅದಕ್ಕೆ ಪ್ರೇಮದ ಬೆವರು ಸಹ ಒಡೆಯುವುದಿಲ್ಲವೊ? ಗುಬ್ಬಿ, ಕೋಳಿಗಳು ಸಹ ತಮ್ಮ ಮರಿಗಳನ್ನು ಹ್ಯಾಗೆ ಹೊಟ್ಟೀ ಕಟ್ಟಿ ಕಾಯುತ್ತವೆ! ಕರುವು ದಿಗ್ಗನೆ ಹಾಯ್ದು ಹಾಯ್ದು ಹೈರಾಣ ಮಾಡುತ್ತಿದ್ದರೂ ಕರು ಬಿಡುವ ಹೊತ್ತಾಯಿತೆಂದರೆ ತಾಯಿಯು ಅಂಬಾ ಎಂದು ಒದರಿ ಮಗುವಿಗೆ ಮೊಲೆಯುಣಿಸುವದಕ್ಕೆ ಹ್ಯಾಗೆ ಹಾತೊರೆಯುತ್ತದೆ!! ತಾಯಿಯು ಮೊಲೆಯುಣಿಸುತ್ತಾ ಕುಳಿತಿರುವಾಗ ಕೂಸು ಆಕೆಯ ಕೊರಳ ಹಾರದೊಳಗೆ ಕೈಹಾಕಿ ಆಗಾಗ್ಗೆ ಮಾತೆಯ ಮುಖವನ್ನು ನೋಡಿ ಕುಲುಕುಲು ನಗುವಾಗ ಆ ತಾಯಿಗೆ ಆಗುವ ಆನಂದವನ್ನು ಎಷ್ಟೆಂತ ವರ್ಣಿಸಬೇಕು! ಆ ಕಾಲಕ್ಕೆ ಅವಳಿಗೆ ತ್ರಿಭುವನವೆಲ್ಲವೂ ತೃಣಸಮಾನವಾಗಿ ಹೋಗುವುದು. . . .ಆದ್ದರಿಂದ ಮಕ್ಕಳಿಗೋಸ್ಕರ ತನ್ನ ಸೌಂದರ್ಯದಲ್ಲಿ ಬೇಕಾದಷ್ಟು ಕೊರತೆ ಬರಲಿ, ಬೇಕಾದಷ್ಟು ದುಡ್ಡು ಹಾಳಾಗಲಿ. ಏನು ಬೇಕಾದ್ದಾಗಲಿ ನಿಮ್ಮ ಮಕ್ಕಳನ್ನು ಹೆರವರ ಕಡಿಗೆ ಕ್ಷಣ ಮಾತ್ರವಾದರೂ ನಂಬಿ ಕೊಟ್ಟು ಬಿಡಬೇಡಿರಿ, ಕಂಡಿರಾ?"

ಹತ್ತೊಂಬತ್ತನೆಯ ಶತಮಾನದಲ್ಲಿ ಕಾಲರಾ, ಪ್ಲೇಗುಗಳ ಹಾವಳಿ ಇದ್ದಾಗ ಅವುಗಳ ಕುರಿತ ಪುಸ್ತಕಗಳು ಹೊರಬಂದುದು ಸಹಜವೇ. ಸಿಡುಬು ರೋಗವನ್ನು ಕುರಿತು ಮುಂಬಯಿ ಸರಕಾರವೇ ಪುಸ್ತಕ ಬರೆಯಿಸಿ ವಿವಿಧ ಭಾಷೆಗಳಲ್ಲಿ ಪ್ರಕಟಿಸಿದುದಿದೆ (೧೮೭೯). ಕೆ. ಅಪ್ಪಯ್ಯನು ಸು. ೧೮೯೩ರಲ್ಲಿ ಈ ರೋಗದ ಉಪಟಳ-ನಿವಾರಣೆಗಳನ್ನು ವಿವರಿಸಿದ್ದಾನೆ. ಕಾಲೆರಾದ ಬಗ್ಗೆ ಎಚ್ಚರಿಕೆಯನ್ನಿತ್ತವನು-ಎಂ.ಡಿ. ಶ್ರೀನಿವಾಸಯ್ಯಂಗಾರ್ ('ವಿಷೂಚಿ' ೧೮೯೪). ಅದರಂತೆ ಪ್ರಥಮ ಚಿಕಿತ್ಸೆ, ಜ್ವರಬಾಧೆ ಮುಂತಾದವುಗಳ ಬಗೆಗೂ ಪುಸ್ತಕಗಳು ಹೊರಬಂದಿವೆ. ಮಲೆಯಾಳೀ ವಿಷ ವೈದ್ಯವನ್ನು ವಿವರಿಸುವ ಪುಸ್ತಕವನ್ನು ಎತ್ತಿ ಹೆಸರಿಸಬೇಕು. 'ತೂವನ್ನಿಲಾವ' ಎಂಬ ಮಲೆಯಾಳೀ ಮೂಲ ಕೃತಿಯನ್ನು ಗಣೇಶ ಶಾಂತಯ್ಯ ಕಾಶೀಬೈಲಕರನು ಅನುವಾದಿಸಿದ್ದಾನೆ (೧೮೯೫).

ಇನ್ನು ಶುದ್ಧ ವಿಜ್ಞಾನದ ಇತರ ಪುಸ್ತಕಗಳನ್ನು ನೋಡೋಣ. ಅವುಗಳ ರಚನೆಗೆ ಪಠ್ಯಪುಸ್ತಕದ ನಿಮಿತ್ತವೇ ಆಗಿರಲಿ, ಇಲ್ಲವೆ ಅನುವಾದಗಳೇ ಆಗಿರಲಿ, ಅವು ಆರಂಭದ ಎತ್ತುಗಡೆಯಾದ್ದರಿಂದ ಹಲವು ಉಲ್ಲೇಖನೀಯವಾಗಿವೆ. ಪ್ರಾಥಮಿಕ ಮಟ್ಟದ ಅಂಕಗಣಿತ ಪುಸ್ತಕಗಳಂತೂ ಅನೇಕವಾಗಿವೆ. 'ಯುಕ್ಲಿಡ್‌ನ ಸಿದ್ಧಾಂತಗಳು' ಅದೇ ಹೆಸರಿನಲ್ಲಿಯೇ ಹಂತಹಂತವಾಗಿ ಪ್ರಕಟವಾದುವು. ಬಾಯಿಲೆಕ್ಕಗಳನ್ನು ಪ್ರಾಚೀನ ಕೃತಿ-'ಲೀಲಾವತಿ'ಯನ್ನು ಅನುಸರಿಸಿ ಕೊಟ್ಟದ್ದಿದೆ. (ಜ.ಶ್ರೀ.ಗೋಖಲೆ; 'ವಿವಿಧ ಗಣಿತ ಶತಕವು', ೧೮೮೭). ಹಳ್ಳಿಗರ ಲೆಕ್ಕದ ಉದಾಹರಣೆಗಳನ್ನೇ ಕೊಟ್ಟುದು ಇದರ ವಿಶೇಷವಾಗಿದೆ. ತ್ರಿಸ್ಲರನಂತಹರು ಗಣಿತವನ್ನು ಕಲಿಸುವ ವಿಚಾರದಲ್ಲಿ ನೂತನ ವಿಧಾನಗಳನ್ನು ಸೂಚಿಸಿ ಉಪಕಾರ ಮಾಡಿದ್ದಾರೆ. ಹಿರಿಯ ಲೇಖಕರೆನ್ನಿಸಿಕೊಂಡವರು ಸಹ ಗಣಿತದ, ಅದರಂತೆ ಇತರ ವಿಜ್ಞಾನ ವಿಷಯಗಳ ಬಗ್ಗೆ ಪಠ್ಯಪುಸ್ತಕಗಳನ್ನು ಬರೆದಿದ್ದಾರೆ. ಆರ್. ನರಸಿಂಹಾಚಾರ್ಯರು ರೇಖಾಗಣಿತ ಪುಸ್ತಕವೊಂದನ್ನು ಹೊರತಂದುದಿದೆ (೧೯೦೦). ರಾ.ಹ. ದೇಶಪಾಂಡೆ ಅವರಿಗೆ 'ಬಾಯಿಲೆಕ್ಕದ ಮೊದಲನೆಯ ಪುಸ್ತಕ' (೧೮೯೬) ಮತ್ತು 'ಬೀಜಗಣಿತದ ಮೂಲತತ್ವಗಳು' (೧೮೯೭) ಎಂಬೆರಡು ಕೃತಿಗಳನ್ನು ಮರಾಠಿಯಿಂದ ಅನುವಾದಿಸಿಯಾದರೂ ಪ್ರಕಟಿಸುವ ಅಗತ್ಯ ತೋರಿತು.

ಆಗಿನ ದಿನಗಳಲ್ಲಿ ಸ್ಟೀವರ್ಟ್ ಬ್ಯಾಲ್‌ಫರ್ಡ್ ಮತ್ತು ಥಿಯೋಡೋರ್ ಕುಕ್ ಇವರ ವಿಜ್ಞಾನ ಪುಸ್ತಕಗಳು ಹೆಚ್ಚು ಪ್ರಚಲಿತವಿದ್ದುವು. ಮೊದಲಿನವನ ಅನುವಾದ ಕೃತಿಯ ಹೆಸರು-'ಪ್ರಕೃತಿ ಶಾಸ್ತ್ರದ ಪ್ರಥಮ ಪುಸ್ತಕ' ವು (೧೮೮೪) ಇದು ಮದ್ರಾಸ ಶಾಲೆಗಳಲ್ಲಿ ಪಠ್ಯವಾಗಿದ್ದಿತು. ಕುಕ್ ಓರ್ವ ಭೌತಶಾಸ್ತ್ರಜ್ಞನು. ಮುಂಬಯಿ ಸರಕಾರದ ಶಿಕ್ಷಣ ಖಾತೆಯಲ್ಲಿದ್ದವರು ಅವನ ಕೃತಿಗಳನ್ನು ಅನುವಾದಿಸಿದ್ದಾರೆ. 'ಕನ್ನಡ ಯಂತ್ರ ಶಾಸ್ತ್ರ' (೧೮೮೩)ವೂ ಅನುವಾದಗೊಂಡಿದ್ದು ಎಂಜಿನಿಯರಿಂಗ್ ವಿಚಾರದಲ್ಲಿ ಅದು ಕಳೆದ ಶತಮಾನದ ಏಕಮೇವ ಕೃತಿಯೆನಿಸಿತು.

ವಿಜ್ಞಾನದ ಪದವೀಧರನಾಗಿದ್ದ ಹಲವರು ತಂತಮ್ಮ ವಿಷಯಗಳ ಮೇಲೆ ಪುಸ್ತಕ ಬರೆದುದನ್ನು ಈ ಹಿಂದೆ ಉಲ್ಲೇಖಿಸಲಾಗಿದೆ. <೯೧೫>. ಈ ವಿಷಯದಲ್ಲಿ ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಶನ್ನಿನವರದು ದಿಟ್ಟ ಹೆಜ್ಜೆ. ಅವರು ಪ್ರಕಟಿಸಿದ ಪಿ. ರಾಘವೇಂದ್ರರಾಯನ 'ಪ್ರಾಣಿಶಾಸ್ತ್ರ'- ಲಕ್ಕೂರ ಸುಬ್ಬರಾಯನ 'ವನಸ್ಪತಿಶಾಸ್ತ್ರ' ಮತ್ತು ಬಿ.ಎನ್. ದಾಸಪ್ಪನ 'ಖನಿಜಶಾಸ್ತ್ರ'- ಈ ವರ್ಗಕ್ಕೆ ಸೇರಿದವುಗಳಾಗಿವೆ. ಇತ್ತ ಬೆಂಗಳೂರಿನ ಪ್ರಕಟನೆಯೆಂದು, ಕೆ. ಶೇಷಾದ್ರಿ ಅಯ್ಯಂಗಾರನ 'ಸಚಿತ್ರ ಕರ್ನಾಟಕ ಉದ್ಭಿಜ್ಜಶಾಸ್ತ್ರ'ವನ್ನು ಸೇರಿಸಬೇಕು.

ಕೇವಲ ಜನಸಾಮಾನ್ಯರನ್ನು ಗಮನದಲ್ಲಿಟ್ಟುಕೊಂಡು ಸಣ್ಣ ದೊಡ್ಡ ವಿಜ್ಞಾನ ಪುಸ್ತಕಗಳನ್ನು ಮೊದಲಿಗೆ ತಂದವರು ಮಿಶನ್ ಸಂಸ್ಥೆಗಳವರು. ಗ್ರಹಣವೆಂದರೇನು, ಬಾಲ ಚುಕ್ಕಿಗಳು, ಕ್ರಿಮಿವರ್ಗದ ವರ್ಣನೆ ಮುಂತಾದ ಪುಸ್ತಿಕೆಗಳನ್ನು ಕ್ರಿಶ್ಚಿಯನ್ ಲಿಟರೇಚರ್ ಸಂಸ್ಥೆಯವರು ಬಾಸೆಲ್ ಮಿಶನ್ ಪ್ರೆಸ್‌ನಲ್ಲಿ ಮುದ್ರಿಸಿ ಹೊರಡಿಸುವಲ್ಲಿ ಸ್ವಜಾತಿಯವರ ಜ್ಞಾನಾರ್ಜನೆಯ ದೃಷ್ಟಿ ಅವರಲ್ಲಿದ್ದಿತು. ಮಕ್ಕಳನ್ನು ಬೆಳೆಸುವುದು ಹೇಗೆ-ಎಂಬೀ ಬಗೆಯ ಪುಸ್ತಕಗಳು ಸ್ವಬಾಂಧವರ ಹಿತಾಸಕ್ತಿಯನ್ನು ಆಧರಿಸಿದವುಗಳು. ಜನಪ್ರಿಯ ವಿಜ್ಞಾನದ ಲೇಖನಗಳು ನವೋದಯ ಕಾಲದ ಹಲವಾರು ಪತ್ರಿಕೆಗಳಲ್ಲಿ ಬಂದದ್ದಿದೆ. ಅವುಗಳಲ್ಲಿ ಕರ್ಕಿ ವೆಂಕಟರಮಣಶಾಸ್ತ್ರಿಯು 'ನೀರು'-ಇದರ ಬಗ್ಗೆ ಲೇಖನಮಾಲೆಯನ್ನು ಬರೆದುದನ್ನು ಮತ್ತೊಮ್ಮೆ ನೆನಪಿಸುತ್ತೇವೆ. ನೀರನ್ನು ಕುರಿತು ಬೇರೊಬ್ಬರು ಪ್ರತ್ಯೇಕವಾದ ಪುಸ್ತಕ ಹೊರತಂದದ್ದು ಈಚೆಗೆ ಮಾತ್ರ (೧೯೫೬).

ಇವೆಲ್ಲ ವಿಜ್ಞಾನ ಪುಸ್ತಕಗಳಲ್ಲಿ ವೈಜ್ಞಾನಿಕ ಪರಿಭಾಷೆಯ ಶಬ್ದಗಳು ನಿರ್ಮಾಣಗೊಂಡದ್ದು ವಿಶೇಷ ಮಹತ್ವದ್ದು. ಕನ್ನಡ ಶಬ್ದ ಸಂಪತ್ತು ತಕ್ಕಮಟ್ಟಿಗೆ ವೃದ್ಧಿಗೊಂಡಿತು. ಇಂದಿನ ಕನ್ನಡ ವಿಜ್ಞಾನ ಕೋಶ ರಚನೆಯಲ್ಲಿ ಈ ಆರಂಭದ ಶಬ್ದ ಸೃಷ್ಟಿಯು ಉಪಯುಕ್ತವೆನಿಸಬಹುದು.

## 65 ಸಾಮಾಜಿಕ ವಿಚಾರ

ಕೆಲವು ಮತಗಳವರು ತಮ್ಮ ಮತದ ಶ್ರೇಷ್ಠತ್ವವನ್ನು ವ್ಯಕ್ತಪಡಿಸಲೋಸುಗ ಬೇರೆ ಬೇರೆ ಪುರಾಣಗಳಿಂದ ಸಂಬಂಧಪಟ್ಟ ಭಾಗಗಳನ್ನು ಆಯ್ದು ಗ್ರಂಥ ಬರೆದರಷ್ಟೆ. ಒಂದೆರಡನ್ನು ಇಲ್ಲಿ ಪರಿಶೀಲಿಸಬಹುದು. 'ವಿಶ್ವಕರ್ಮ' ಜನರನ್ನು ಕುರಿತು ಧಾರವಾಡ, ಮೈಸೂರುಗಳಿಂದ (೧೮೭೬, ೧೮೮೯). ಒಂದೊಂದು ಪುಸ್ತಕ ಹೊರಬಂದಿತು. ಧಾರವಾಡದ ಪ್ರಕಟನೆಯಾದ 'ಪಂಚಾಲ ಜಾತಿಗಳ ಉತ್ಪತ್ತಿ' ಎಂಬುದರಲ್ಲಿ ವಿಶ್ವಕರ್ಮನ ಮಹಾತ್ಮೆಯನ್ನು ಪದ್ಮಪುರಾಣದಿಂದ ಎತ್ತಿಕೊಳ್ಳಲಾಗಿದ್ದು ಅವನು ಪರಮೇಶ್ವರನೇ ಎಂದು ಪ್ರತಿಪಾದಿಸಲಾಗಿದೆ. ಇತ್ತ ವೀರಶೈವರು ಶಾಸ್ತ್ರ ಪುರಾಣಗಳನ್ನು ತಳಹದಿಯಾಗಿಟ್ಟು-

ಕೊಂಡು ಸಾರಸ್ವತ ರಂಗದಲ್ಲಿ ಸ್ವಮತದ ಹೆಗ್ಗಳಿಕೆಯನ್ನು ತೋರ್ಪಡಿಸಿದರು. 'ವೀರಶೈವ ಮತಾಭ್ಯುದಯ ಚಂದ್ರಿಕಾ' (೧೮೯೩) ಎಂಬುದು ಮುಂಬಯಿ ಕರ್ನಾಟಕದ ಪ್ರಕಟನೆಯಾಗಿದ್ದು ಅದರಲ್ಲಿ ವೀರಶೈವರು ಶಿಕ್ಷಣ ವಿಚಾರದಲ್ಲಿ ತೋರಿದ ಪ್ರಗತಿ. ಅರಟಾಳ ರುದ್ರಗೌಡರ ನಿಧಿ ಸಂಗ್ರಹ ಕಾರ್ಯ, ಇತರ ಶಿಷ್ಯವೇತನ ಯೋಜನೆಗಳು ಮುಂತಾದುವನ್ನು ವಿವರಿಸಲಾಗಿದೆ.

ಉತ್ತರ ಕನ್ನಡ ಜಿಲ್ಲೆಯ ಒಳನಾಡಿನಲ್ಲಿ ಉಳಿದುಕೊಂಡಿರುವ ಹವ್ಯಕ ಬ್ರಾಹ್ಮಣರಲ್ಲಿಯೂ ಇಂಥ ಜಾಗೃತಿಯು ತಲೆದೋರಿತು. ಅದರಲ್ಲಿ, ಮುಂಬೈಗೆ ಹೋದ ಬೂದಿ ಮಹಾಬಲೇಶ್ವರಭಟ್ಟ ಹಾಗೂ ಕರ್ಕಿ ವೆಂಕಟರಮಣಶಾಸ್ತ್ರಿ ಮೊದಲಾದವರು ಈ ದಿಶೆಯಲ್ಲಿ ಕಾರ್ಯವೆಸಗಿದ್ದಾರೆ. 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ', 'ಹವ್ಯಕ ಸುಬೋಧ' ಪತ್ರಿಕೆ–ಇವಂತೂ ಸರಿಯೆ; ಸ್ವಮತದ ಮೂಲದ ಬಗ್ಗೆ ರಾಮಚಂದ್ರಾಪುರ ಮಠದ ರಾಘವೇಶ್ವರ ಭಾರತೀಸ್ವಾಮಿಗಳಿಂದ ಗ್ರಂಥ ಬರೆಯಿಸಿ, ಮೇಲಿನ ಮಹನೀಯದ್ವಯರು ಮುಂಬೈಯಿಂದ ಪ್ರಕಟಿಸಿದ್ದಾರೆ (೧೮೮೬). ಅದರಲ್ಲಿ ಸಹ್ಯಾದ್ರಿ ಖಂಡದ ಆಯ್ದ ಭಾಗಗಳಿಗೆ ಟೀಕೆ ಇದ್ದುದರ ಜೊತೆಗೆ ಹವ್ಯಕ ಮಠಗಳ ಪರಂಪರೆಯನ್ನು ಹೇಳಲಾಗಿದೆ. ಅವರ ರಾಮಚಂದ್ರಾಪುರ ಮಠಕ್ಕೆ ಸಂಬಂಧಿಸಿದ ತಾಮ್ರಶಾಸನ ಹಾಗೂ ಸನದುಗಳನ್ನು ಪ್ರತ್ಯೇಕವಾಗಿ ಮುದ್ರಿಸಿದುದೂ ಇದೆ. (೧೮೮೬)

ಸಾಮಾಜಿಕ ವಿಚಾರಗಳುಳ್ಳ ಅಂದಿನ ಗ್ರಂಥಗಳಲ್ಲಿ ಸ್ತ್ರೀಯರ ಏಳ್ಗೆಯು ವಿಶೇಷ ಪ್ರಾಮುಖ್ಯವನ್ನು ಪಡೆಯಿತು. ಪಾಶ್ಚಾತ್ಯ ಶಿಕ್ಷಣದ ಪ್ರಭಾವ, ಮಿಶನರಿ ಜನರ ಪ್ರಚಾರ–ಇವುಗಳಿಂದಾಗಿ ಸ್ತ್ರೀಯರಿಗೆ ಸಂಬಂಧಿಸಿದ ಅನೇಕ ಅಂಶಗಳು ಚರ್ಚೆಗೆ ಒಳಗಾದುದರ ತಳಹದಿಯನ್ನು ಈ ಹಿಂದೆ ವಿವರಿಸಿದ್ದೇವೆ <೧೩೨>. ಸ್ತ್ರೀಯರ ವಿಷಯದಲ್ಲಿ ಅತೀವ ಆದರವಿರಿಸಿಕೊಂಡಿದ್ದ ಬಿ. ವೆಂಕಟಾಚಾರ್ಯರು ಹರಪ್ರಸಾದಶಾಸ್ತ್ರಿಯ 'ಭಾರತಮಹಿಳಾ' ಪುಸ್ತಕವನ್ನು ಅನುವಾದಿಸುವುದಕ್ಕೆ ಮುಂದಾದರು (೧೮೮೪). ಅದರಲ್ಲಿ ಸಂಸ್ಕೃತದ ಕಾವ್ಯ ನಾಟಕಗಳೊಳಗೆ ಬಂದಿರುವ ಮಹಿಳೆಯರ ಪ್ರಸ್ತಾಪವಿದ್ದು, ಸೀತೆ ಮತ್ತು ಶಕುಂತಲೆಯರ ಚರಿತ್ರೆಯು ದೃಷ್ಟಾಂತರೂಪವಾಗಿ ವಿಸ್ತಾರಗೊಂಡಿದೆ.

ಅಂತೂ ಲೇಖಕ/ಅನುವಾದಕರ ದೃಷ್ಟಿಯು ಪ್ರಾಚೀನ ನಾರಿಯರ ಹಿರಿಮೆಯನ್ನು ವಿಶೇಷವಾಗಿ ಬಣ್ಣಿಸುವುದರ ಕಡೆಗೆ ಇದ್ದಿತು.

ಇತ್ತ ಸ್ತ್ರೀ ಶಿಕ್ಷಣ, ಬಾಲ್ಯವಿವಾಹದ ಅನರ್ಥಗಳು, ವಿಧವಾವಿವಾಹ ಮೊದಲಾದ ವಿಚಾರಗಳನ್ನು ಕುರಿತು ದೇಶದಲ್ಲಿ ಸಾಕಷ್ಟು ಚರ್ಚೆ ನಡೆಯುತ್ತಿದ್ದಿತು. 'ಸ್ತ್ರೀಶಿಕ್ಷಣದ ಆವಶ್ಯಕತೆ'ಯನ್ನು ಬಿಂಬಿಸುವ ಪುಸ್ತಕವೊಂದನ್ನು ರೊದ್ದ ತಿರುಮಲರಾಯನು ಬರೆದನು (೧೮೯೪). ಪುರಾಣೇತಿಹಾಸಗಳಲ್ಲಿ ಭಾರತೀಯ ಸ್ತ್ರೀ ವಂದ್ಯಳೇನೋ ಅಹುದು. ಅದನ್ನು ನಂಬಿ ಮನ್ರೋ, ಮ್ಯಾಕ್ಸ್‌ಮುಲ್ಲರ್ ಮುಂತಾದವರು ಹಾಡಿ ಹೊಗಳಿದ್ದಾರೆ. ಆದರೆ

ವಸ್ತುಸ್ಥಿತಿ ಇದರ ವಿರುದ್ಧವಿದೆಯೆಂದು ತೋರಿಸಲು ಈ ಪುಸ್ತಕ ಹುಟ್ಟಿತು. ದೈಹಿಕವಾಗಿ ಸ್ತ್ರೀಯು ಪುರುಷನಿಗೆ ಸಮಾನವೆಂಬುದನ್ನು ಹೇಳಿ, ಸ್ತ್ರೀಶಿಕ್ಷಣ ವಿರೋಧಿಗಳ ಮತವನ್ನು ಪರಿಣಾಮಕಾರಿಯಾಗಿ ಖಂಡಿಸಲಾಗಿದೆ. ಸ್ತ್ರೀಯು ವಿದ್ಯೆ ಕಲಿತರೆ ಕುಟುಂಬಕ್ಕೆಯೆ ಹೇಗೆ ಒಳಿತಾಗುವುದೆಂಬುದನ್ನು ತಿರುಮಲರಾಯನು ವಿವರಿಸಿದ್ದಾನೆ.

ಬೆಂಗಳೂರಿನಲ್ಲಿ ಕೆಲ ಸುಧಾರಕ ಪಂಥದವರು 'ದೇಶಾಭ್ಯುದಯ ಸಂಘ'ವನ್ನು (Indian Progressive Union) ಸ್ಥಾಪಿಸಿಕೊಂಡಿದ್ದರು. ಆ ಸಂಸ್ಥೆಯ ವತಿಯಿಂದ 'ಬಾಲ್ಯವಿವಾಹ' ಮುಂತಾದ ಸಮಸ್ಯೆಗಳ ಕುರಿತು ಹಲವು ಪುಸ್ತಿಕೆಗಳನ್ನು ಪ್ರಕಟಿಸಿದರು. ಪಂಡಿತಾ ರಮಾಬಾಯಿಯ 'ಸ್ತ್ರೀ ಧರ್ಮನೀತಿ'ಯ ಬಗೆಗಿನ ಪುಸ್ತಕವು ಭಾರತದಲ್ಲಿಯೇ ಹೆಸರು ಗಳಿಸಿದ್ದಿತು. ಹಳತು–ಹೊಸತುಗಳೆರಡನ್ನೂ ಮೇಳವಿಸಿಕೊಂಡಿದ್ದ, ಆ ಪುಸ್ತಕವು ಸನಾತನಿಗಳಿಗೆ ತ್ಯಾಜ್ಯವೇನೂ ಆಗಿರಲಿಲ್ಲ. ಮರಾಠಿಯಲ್ಲಿದ್ದ ಆ ಕೃತಿಯು ಅನುವಾದಗೊಂಡದ್ದಲ್ಲದೆ. ಮೈಸೂರಿನ ಬಾಲಿಕಾ ಪಾಠಶಾಲೆಯಲ್ಲಿ ಪಠ್ಯವಾಗಿದ್ದಿತು.

'ಸುದರ್ಶನ' ಪತ್ರಿಕೆಯು ಆರ್ಯಧರ್ಮದ ಪುರಸ್ಕಾರದ ಜೊತೆಗೆ ಸ್ತ್ರೀಯರ ಏಳ್ಗೆಯನ್ನು ಎದ್ದುಕಾಣುವಂತೆ ಎತ್ತಿಹಿಡಿಯಿತು. ಆ ಕುರಿತ ಲೇಖಗಳಲ್ಲಿ ಹಟ್ಟಿಯಂಗಡಿ ನಾರಾಯಣರಾಯರದೂ ಒಂದಿದೆ.* ('ಪ್ರಸಿದ್ಧಪಟ್ಟ ಹಿಂದೂ ದೇಶದ ಸ್ತ್ರೀಯರು' ಏಪ್ರಿಲ್ ೧೮೮೭ರ ಸಂಚಿಕೆ). ಪತ್ರಿಕೆ ಪ್ರಾರಂಭವಾದ ವರ್ಷವೆ (೧೮೮೬) ಬಾಲಿಕಾವಿವಾಹದ ಬಾಧಕಗಳ ಕುರಿತು ಒಂದು ಲೇಖ ಬಂದುದಲ್ಲದೆ ಮರುವರ್ಷದ ಒಂದು ಸಂಚಿಕೆಯಲ್ಲಿ ಅದಕ್ಕೆ ವಿರುದ್ಧವಾಗಿರುವಂಥ ಶಾಸ್ತ್ರಾಧಾರಗಳನ್ನು ಕೊಡಲಾಗಿದ್ದಿತು. ಮುಂದುವರಿದು 'ಈ ಆಧಾರಗಳಿಂದ ಯೌವನಸ್ಥ ಸ್ತ್ರೀಯರ ವಿವಾಹವೇ ಶಾಸ್ತ್ರಪ್ರಕಾರ ಯುಕ್ತ' ವೆಂಬ ನಿರ್ಣಯಕ್ಕೆ ಬರಲಾಯಿತು. ಸಂಪಾದಕರೇ ಬರೆದ ಲೇಖವಿದು. 'ಮಂಗೂ–ನಾಗು ಸಂಭಾಷಣೆ'ಯು 'ಸುದರ್ಶನ'ದ ವೈಶಿಷ್ಟ್ಯವಾಗಿದ್ದು ಅದರಲ್ಲಿಯೂ ಸ್ತ್ರೀಶಿಕ್ಷಣವನ್ನು ಎತ್ತಿ ಹಿಡಿಯಲಾಗಿದೆ. 'ಈ ಕುರಿತು ನಮ್ಮ ಜಿಲ್ಲೆಗೆ ತಕ್ಕಮಟ್ಟಿಗೆ ಅಲಕ್ಷ್ಯ ಕೋಡೋಣಾಗುತ್ತದೆ.' ಎಂಬುದು ಸಂಪಾದಕರ ಖಚಿತ ಅಭಿಪ್ರಾಯವಾಗಿದ್ದಿತು. ಅದಕ್ಕೆ ಅವರು ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ. ಮಂಗಳೂರಿನ ಪ್ರಸಿದ್ಧ ವಕೀಲರೊಬ್ಬರ ಮಗಳು ಪಾರ್ವತಿ ಮಿಡ್ಲ್ ಸ್ಕೂಲ್ ಪರೀಕ್ಷೆಯನ್ನೇನೋ ಪಾಸಾದಳು. ಆಗಲೇ ಶ್ರೀಮಂತ ಗಂಡನ ಕೈಹಿಡಿದು, ವಿದ್ಯಾಭ್ಯಾಸವನ್ನು ನಿಲ್ಲಿಸಿಬಿಟ್ಟಳಂತೆ. ಇತ್ತ ಬಾಲವಿಧವೆಯೊಬ್ಬಳು ಅನಿವಾರ್ಯವಾಗಿ ಕಾಸರಗೋಡಿನ ಮಿಶನ್ ಶಾಲೆಗೆ ಸೇರಿ, ಉಪಾಧ್ಯಾಯಿನಿಯಾದ ಉದಾಹರಣೆಯನ್ನೂ ಕೊಡಲಾಗಿದೆ. ಆಕೆ ವಿಧವೆಯಾಗದಿದ್ದರೆ ಕಲಿಯುತ್ತಿರಲಿಲ್ಲ – ಎಂಬುದು ಅದರ ಇಂಗಿತ ! ಸಂಪಾದಕರ ಈ ಮುಂದಿನ ಮಾತುಗಳನ್ನು ಗಮನಿಸಬೇಕು:

---

* ಇಂಗ್ಲಿಷ್ ಗೀತಗಳನ್ನು ಕನ್ನಡಕ್ಕೆ ಅನುವಾದಿಸಿದ ಹ.ನಾ. ಅವರಲ್ಲದೆ [illegible] ಇನ್ನೊಬ್ಬರು ಸುಮಾರು ಅದೇ ಕಾಲಕ್ಕೆ ಮದ್ರಾಸದಲ್ಲಿದ್ದರು. ಅವರು [illegible]

"ಸ್ತ್ರೀಯರಿಗೆ ವಿದ್ಯಾಭೂಷಣವು ಅಗತ್ಯವಿಲ್ಲವೆಂಬ ಹಾಗೆ ಅನೇಕರ ಅಭಿಪ್ರಾಯ ವಿರುತ್ತದೆ. ಸ್ತ್ರೀಯರು ವಿದ್ಯಾವತಿಯರಾದರೆ ದುರ್ಗುಣವಂತರಾದರೆಂತ ತಿಳಿಯುತ್ತಾರೆ. ಈ ಅಭಿಪ್ರಾಯವು ತಪ್ಪು. ಇದು, ಹುಡುಗರು ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದರೆ ಪೆಂಡಕುಡುಕರಾಗುತ್ತಾರೆಂಬುದಕ್ಕೆ ಸರಿ. ಯಾರಾದರೂ ಒಬ್ಬಿಬ್ಬರು ಇಂಗ್ಲಿಷ್ ಕಲಿತುಕೊಂಡವರಲ್ಲಿ ಹೆಂಡ ಯಾ ಮದ್ಯಪಾನ ಮಾಡಿರಬಹುದು. ಅವರು ಇಂಗ್ಲಿಷ್ ಕಲಿತಿದ್ದಾರೆಂಬುದರಿಂದ ಆ ಅಭ್ಯಾಸ ಮಾಡಿದ್ದಾರೆಂತ ತಿಳಿಯಕೂಡದು. . . .

"ಸ್ತ್ರೀಯರು ವಿದ್ಯಾಲಂಕೃತರಾದರೆ ಅವರಿಗೂ ಅವರ ಒಡಹುಟ್ಟಿದವರಿಗೂ ಒಡಯಿರತಕ್ಕವರಿಗೂ ಆನಂದಕರ ಮತ್ತು ಶ್ರೇಯಸ್ಕರ. ಈ ಮಾತಿಗೆ ವಿರೋಧವಾಗಿ ಕನ್ನಡದಲ್ಲಿ ಒಂದು ಉಪನ್ಯಾಸವನ್ನು ತಯಾರಿಸಿ ಕಳುಹಿಸಿದವರಿಗೆ ಬರುವ ಏಪ್ರಿಲ್ ತಿಂಗಳಲ್ಲಿ ೫ ರೂ. ಉಚಿತವಾಗಿ ನಾವು ಕಳುಹಿಸಿ ಕೊಡುವೆವು. ಸ್ತ್ರೀಯರು ವಿದ್ಯೆ ಕಲಿಯಲಿಕ್ಕೆ ಏನೂ ಯೋಗ್ಯರಲ್ಲವೆಂತ ಕಾರಣಗಳೂ ಉದಾಹರಣೆಗಳೂ ಕೊಟ್ಟು ತೋರಿಸಬೇಕು." (ಫೆಬ್ರವರಿ ೧೮೯೬ರ ಸಂಚಿಕೆ).

'ನಾಗಪುರದ ಬ್ರಾಹ್ಮಣ'ನೊಬ್ಬ ವಿಧವಾವಿವಾಹವನ್ನು ನಿಷೇಧಿಸುವುದರ ಬಗ್ಗೆ ಇದ್ದ ಶಾಸ್ತ್ರಾಧಾರಗಳನ್ನು ಪ್ರಶ್ನಿಸಿ ಸಂಸ್ಕೃತದಲ್ಲಿ ಪುಸ್ತಕ ಬರೆದಿದ್ದನು. ವಿಲ್ಕಿನ್‌ಸನ್ ಎಂಬ ಇಂಗ್ಲಿಷ್ ನಾಗರಿಕನು ಅದನ್ನು ಅನುವಾದಿಸಿ ಟೀಕಾರೂಪವಾಗಿ ನಾಲ್ಕು ಮಾತು ಸೇರಿಸಿದನು. ೧೯ನೆಯ ಶತಮಾನದ ಪೂರ್ವಾರ್ಧದಲ್ಲಿಯೇ ಸಿದ್ಧವಾದ ಈ ಕೃತಿಯನ್ನು ಮಿಶನರಿಗಳು ಕೈಗೆತ್ತಿಕೊಂಡು ಬೇರೆ ಬೇರೆ ಭಾಷೆಗಳಲ್ಲಿ ಅನುವಾದಿಸಿದರು. ಮರಾಠಿಯಿಂದ ಇದನ್ನು ಕನ್ನಡಕ್ಕೆ ಅನುವಾದಿಸಿದವರ ಹೆಸರನ್ನು C.Kristnamat ಎಂಬುದಾಗಿ ಒಂದೆಡೆ ಕೊಡಲಾಗಿದೆ. ಅದು ಬೆಂಗಳೂರಿನ ಸರಕಾರೀ ಮುದ್ರಣಾಲಯುದಲ್ಲಿ ಅಚ್ಚಾದದ್ದಕ್ಕೆ (೧೮೫೨), ಥಾಮಸ್ ಹಾಡ್ಸನ್ ಮೈಸೂರಿನ ಅಂದಿನ ಕಮೀಶನರನನ್ನು ಪ್ರೇರೇಪಿಸಿದ್ದುದೇ ಕಾರಣ. ಮುಂದೆ ಸುಬ್ರಹ್ಮಣ್ಯಶಾಸ್ತ್ರಿ ಮತ್ತು ಶಿವಶಂಕರಶಾಸ್ತ್ರಿ ಇಬ್ಬರೂ ಸೇರಿ 'ಸ್ತ್ರೀಯರ ಪುನರ್ವಿವಾಹವನ್ನು ಕುರಿತು' ಶಾಸ್ತ್ರ ವಿಚಾರವನ್ನು ಸಾಧಕ ಬಾಧಕಗಳೊಂದಿಗೆ ಮಂಡಿಸಿದರು. 'ಹಿಂದೂ ವಿಧವೆಯರು' ಎಂಬ ಮಿಶನರಿ ಪ್ರಕಟನೆಯೂ ಒಂದಿದೆ. ಮರಾಠಿಯಲ್ಲಿ ಪ್ರಥಮ ಕಾದಂಬರಿಯೆಂದು ಪರಿಗಣಿತವಾದ 'ಯಮುನಾ ಪರ್ಯಟನ'ದಲ್ಲಿ (ಕನ್ನಡಾನುವಾದ, ೧೮೭೯) ವಿಧವೆಯರ ಗೋಳಿನ ಚಿತ್ರಣವೇ ಮುಖ್ಯವಾಗಿದೆ.

ಎರಡೆತ್ತಿನ ಮಠಾಧಿಕಾರಿ ಚನ್ನವೀರ ಸ್ವಾಮಿಗಳೂ ಈ ವಾದವಿವಾದದಲ್ಲಿ ಭಾಗವಹಿಸಿದ್ದಾರೆ (೧೮೮೯). ಶಾಮರಾವ ವಿಠ್ಠಲ ಕೈಕಿಣಿಯವರು ವಿಧವಾ ಪುನರ್ವಿವಾಹದ ಬಗ್ಗೆ ಪ್ರತ್ಯೇಕ ಗ್ರಂಥವೊಂದನ್ನು ಬರೆದುದಾಗಿ ತಿಳಿಯುತ್ತದೆ.

ವೆಂಕಟ ರಂಗೋ ಕಟ್ಟಿಯವರಂತೂ ಈ ವಿಷಯದಲ್ಲಿ ಆಂದೋಲನವನ್ನೇ

ಆರಂಭಿಸಿದರು. 'ವಿಧವೆಯರ ಇತಿಹಾಸ' ಅವರ ಮೊದಲ ಕೃತಿಯಾಗಿದ್ದು, ಅನಂತರ 'ವಿಧವಾ ವಪನ ಅನಾಚಾರ ಮಂಡನ'ವೆಂಬ ಗ್ರಂಥವು ಹೊರಬಂದಿತು* (೧೮೮೯). ಅನೇಕರ ಸಾಮಾಜಿಕ ಭಾವನೆಗಳನ್ನು ಕೆರಳಿಸಿದ ಅವರ ಈ ಪುಸ್ತಕವನ್ನು ವಿವರವಾಗಿ ಪರಿಶೀಲಿಸೋಣ.

ಅದರ ಹಿನ್ನೆಲೆಯು ಇಂತಿದೆ: ಸಮಾರಂಭವೊಂದರಲ್ಲಿ ಕಟ್ಟಿಯವರು ಒಂಬತ್ತು ವರ್ಷದ ಪುಟ್ಟ ವಿಧವೆಯನ್ನು ಕಂಡರು. ಆಕೆಯ ತಲೆಯನ್ನು ಬೋಳಿಸಿತ್ತು. ಅಲ್ಲದೆ ಇತರ ಹುಡುಗಿಯರಿಂದ ಬೇರ್ಪಡಿಸಿ ಮೂಲೆಯಲ್ಲಿ ಅವಳನ್ನು ದಬ್ಬಲಾಯಿತು. ಆಗ ಆ ಹುಡುಗಿಯು ಅಳುತ್ತಿದ್ದ ದೃಶ್ಯವನ್ನು ಕಂಡು ಕಟ್ಟಿಯವರ ಮನಸ್ಸು ಸಿಡಿದೆದ್ದಿತು. (೧೮೮೧). ನಾಲ್ಕೈದು ವರ್ಷಗಳ ಅನಂತರ 'ಬಾಲ್ಯ ವಿವಾಹ ಮತ್ತು ಅಸಮ್ಮತ ವೈಧವ್ಯ' ಎಂಬ ಇಂಗ್ಲಿಷ್ ಪುಸ್ತಕವು ಸರಕಾರದಿಂದ ಇವರ ಅಭಿಪ್ರಾಯಾರ್ಥವಾಗಿ ಬಂದಾಗ ವಿಧವಾವಪನವನ್ನು ಖಂಡಿಸಿ ಬರೆದರು. ಅದನ್ನು ನಿಲ್ಲಿಸಿದ್ದಾದರೆ ವಿಧವೆಯರ ಪುನರ್ವಿವಾಹಕ್ಕೆ ಅನುಕೂಲವಾಗುವುದು ಎಂದೂ ಸೂಚಿಸಿದರು. ಮುಂದೆ ೧೮೮೭ರಲ್ಲಿ ಧಾರವಾಡದ ಮಿತ್ರಸಮಾಜ ಸಂಸ್ಥೆಯ ವತಿಯಿಂದ ಈ ಕುರಿತು ಉಪನ್ಯಾಸವನ್ನು ಕೊಟ್ಟರು. ವಿಷಯದ ಪೂರ್ವಾಪರಗಳನ್ನೂ, ಶಾಸ್ತ್ರಾಧಾರಗಳನ್ನೂ ಚೆನ್ನಾಗಿ ಅಭ್ಯಸಿಸಿದ ಮೇಲೆ 'ವಿಧವಾವಪನ ಅನಾಚಾರ'ವನ್ನು ಕನ್ನಡ ಮರಾಠೀ-ಈ ಎರಡೂ ಭಾಷೆಗಳಲ್ಲಿ, ಇಂಗ್ಲಿಷ್ ಸಾರದೊಡನೆ ಪ್ರಕಟಿಸಿದರು. ಪೀಠಿಕೆಯಲ್ಲಿ ಮಠಾಧಿಕಾರಿಗಳ ಅಭಿಪ್ರಾಯವನ್ನು ಆಹ್ವಾನಿಸಿದರು. ಹೀಗೆ ಪುಸ್ತಕದ ಪರಾಮರ್ಶೆಯಿಂದ ಬಂದ ಅಭಿಮತಗಳನ್ನು ಕ್ರೋಢೀಕರಿಸಿ ಮತ್ತೊಂದು ಗ್ರಂಥವನ್ನು ಬರೆಯುವ ಉತ್ಕಟತೆಯನ್ನು ತೋರಿದರು. ಅಲ್ಲದೆ. ಸಾಧಕ. ಬಾಧಕಗಳಾದ ಶಾಸ್ತ್ರಾಧಾರವನ್ನು ತೋರಿಸಿದವರಿಗೆ ೫೦೦ ರೂಪಾಯಿಯ ಎರಡು ಬಹುಮಾನಗಳನ್ನು ಕೊಡುವುದಾಗಿ ಸಾರಿದುದು. ಈ ವಿಷಯದಲ್ಲಿಯ ಅವರ ಕಳಕಳಿಯ ದ್ಯೋತಕವಾಗಿದೆ. ಅವರ ವಿಚಾರಗಳನ್ನು ಇನ್ನಷ್ಟು ವಿಶದವಾಗಿ ಪರಿಶೀಲಿಸೋಣ:

'ಭಾರತೀಯ ಧರ್ಮಶಾಸ್ತ್ರದಲ್ಲಿ ಸ್ತ್ರೀಗೆ ಯಾವಾಗಲೂ ಪೂಜನೀಯ ಸ್ಥಾನವಿದೆ. ಪಾಶ್ಚಾತ್ಯರಲ್ಲಿದ್ದಂತೆ, ಪುರುಷನಿಗೆ ಸಮಾನವಾದ ಸ್ಥಾನವಿಲ್ಲೆಂದು ಕಂಡರೂ ವಂಶ ಪಾವಿತ್ರ್ಯದ ದೃಷ್ಟಿಯನ್ನಿರಿಸಿಕೊಂಡು ಮನು ಮೊದಲಾದ ಧರ್ಮಶಾಸ್ತ್ರಕಾರರು ಅವಳು ರಕ್ಷಣೀಯಳೆಂದು ವಿಧಿಸಿದರು. ಯಾಜ್ಞವಲ್ಕ್ಯನು 'ಯಥಾ ಭೂಮಿಸ್ತಥಾ ನಾರೀ' ಎಂದಿದ್ದಾನೆ. ಹೀಗೆ ಪ್ರಾಚೀನರ ದೃಷ್ಟಿಯಲ್ಲಿ ಸ್ತ್ರೀಯು ಪುರುಷನ ಸಮಸ್ತ ಸುಖಸೌಕರ್ಯಗಳ ಆಗರವಾಗಿದ್ದಾಳೆ. ಬ್ರಾಹ್ಮಣನ ನಾಲ್ಕು ಆಶ್ರಮಗಳಲ್ಲಿಯೂ ಆಕೆಯ ಅಗತ್ಯ

---

* ಕನ್ನಡ ಮರಾಠಿ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಇದು. ಇದರ ಒಂದು ಪ್ರತಿ ಮುಂಬಯಿ ವಿಶ್ವವಿದ್ಯಾಲಯದ ಲೈಬ್ರರಿಯಲ್ಲಿ ಲಭ್ಯವಿದೆ.

ಅವನಿಗಿದೆ. ಧರ್ಮಸಾಧನೆ ಹಾಗೂ ಪ್ರಜಾಸೃಷ್ಟಿಯಲ್ಲಿ ಅವಳ ಪಾತ್ರವೇ ಹಿರಿದಾದುದು. . . .ಸ್ತ್ರೀಯು ಹೀಗೆ ಆದರಣೀಯಳಿರುವಾಗ ಅವಳಿಗೆ ಸರ್ವಥಾ ಪೀಡೆಯನ್ನು ಕೊಡಲಾಗದು. 'ಶೋಚಂತಿ ಜಾಮಯೇ ಯತ್ರ ವಿನಶ್ಯತ್ಯಾಶು ತತ್ಕುಲಂ ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ.' ಸ್ತ್ರೀಗೆ ಹೊಸ ವೇಷ ಭೂಷಣಗಳನ್ನಿತ್ತು ಸಂತುಷ್ಟವಾಗಿ ಇಡಬೇಕು. ಹೀಗಿರುತ್ತ ಆಕೆಗೆ ಸಹಜಭೂಷಣವಾದ ಕೇಶವನ್ನು ಬಲಾತ್ಕಾರದಿಂದ ತೆಗೆದುಹಾಕುವುದು ಯಾವ ನ್ಯಾಯ? ಆ ದುಃಖದಿಂದ ಅವಳು ಪರಿತಪಿಸಿದರೆ ಅಂಥ ಸಂಸಾರ ನೆಮ್ಮದಿಯಿಂದ ಬಾಳದಂತೆ ದೈವೀಶಾಪವು ತಟ್ಟುವುದು.'

ಮಾನವತೆಯ ಈ ಭೂಮಿಕೆಯನ್ನಿಟ್ಟುಕೊಂಡು ಲೇಖಕರು ಶಾಸ್ತ್ರಗಳ ಹೇಳಿಕೆಯತ್ತ ತಿರುಗಿದ್ದಾರೆ. 'ಅಪರಕರ್ಮದಲ್ಲಿ ಪುರುಷನ ಶಿರೋಮುಂಡನ ವಿಚಾರವೇ ಅರ್ವಾಚೀನವಾದುದು. ಪ್ರಾಚೀನರಾದ ಮನು, ಪರಾಶರ, ಯಾಜ್ಞವಲ್ಕ್ಯರು ಪುರುಷರ ವಪನವನ್ನು ಹೇಳಿಲ್ಲ. ದಶರಥ, ಧೃತರಾಷ್ಟ್ರ, ಕುಂತಿಯರು ಮರಣ ಹೊಂದಿದಾಗ ಜರುಗಿದ ಕರ್ಮಗಳ ಪ್ರಸ್ತಾಪವು ಮಹಾಭಾರತದಲ್ಲಿ ವಿವರವಾಗಿ ಬಂದಿದೆ. ಅಲ್ಲಿ ವಪನ ಮಾಡಿಸಿದ್ದರ ಉಲ್ಲೇಖವಿಲ್ಲ. ಇದರ ಮೂಲವು ಹಿಂದೂ ಧರ್ಮದಲ್ಲಿರದೆ, ಬೌದ್ಧ ಧರ್ಮದಿಂದ ಬಂದದ್ದಾಗಿದೆ. ಪುರುಷರ ವಪನವೇ ಹೀಗೆ ಈಚಿನದ್ದಾಗಿರುವಾಗ ಸ್ತ್ರೀಯರದಂತೂ ಕೇಳುವುದೇ ಬೇಡ. ಪರಾಶರನಂತೂ ವಪನವು ಯಾವ ಕಾಲಕ್ಕೂ ಗರ್ಹಣೀಯವೆಂದಿದ್ದಾನೆ. ಸ್ತ್ರೀಯು ಪ್ರಾಯಶ್ಚಿತ್ತದ ಪ್ರಸಂಗವಿದ್ದರೆ ಅವಳ ಕೂದಲಿನ ತುತ್ತ ತುದಿಯ ಎರಡು ಬೆರಳಿನ ಉದ್ದದಷ್ಟು ಕತ್ತರಿಸಬೇಕು, ಎಂದಿದ್ದಾನೆ. ವಿಧವೆಯರಿಗೆ ಸಹಗಮನ, ಬ್ರಹ್ಮಚರ್ಯ, ನಿರಾಲಂಕಾರಗಳನ್ನಷ್ಟೇ ವಿಧಿಸಿದ್ದಾನೆ. ಕೆಲವು ಪುರಾಣಗಳಲ್ಲಿಯೂ ಸ್ಮೃತಿರತ್ನಾಕರ ಮತ್ತು ಆಶ್ವಲಾಯನ, ಶೌನಕ ಇವರ ಸ್ಮೃತಿಗಳಲ್ಲಿಯೂ ವಪನವನ್ನು ಹೇಳಿದುದು ನಿಜ. ಆದರೆ ಆ ಸ್ಮೃತಿಗಳು ಈಚಿನವು ಹಾಗೂ ಮೌಲಿಕ ಪ್ರಮಾಣಗಳಲ್ಲ.

ವೆಂಕಟ ರಂಗೋ ಕಟ್ಟಿಯವರು ತಮ್ಮ ಪುಸ್ತಕದುದ್ದಕ್ಕೂ ಸಂಸ್ಕೃತ ಶಾಸ್ತ್ರ ಪುರಾಣಗಳಿಂದ ಶ್ಲೋಕಗಳನ್ನು ಉದಾಹರಿಸಿದ್ದಾರೆ. ಇದರಲ್ಲಿ ಬಂದಿರುವ ಆಧಾರ ಸಾಮಗ್ರಿ ಆ ಮೊದಲು ಬೇರೆ ಪುಸ್ತಕ, ಲೇಖನಗಳಲ್ಲಿ ಇದ್ದಿರಬಹುದಾದರೂ ಅದನ್ನು ಬಳಸಿಕೊಂಡು ಸ್ವಂತದ ವಿಚಾರಗಳನ್ನು ಸೇರಿಸಿ ಬರೆದ ರೀತಿಯು ಸಂಪೂರ್ಣವಾಗಿ ಅವರದೇ ಆಗಿದೆ. ಹೀಗೆ, ವಿಧವಾವಪನವು ಅನ್ಯಾಯದ್ದು; ಸಮಾಜದ ಹಿತಕ್ಕೆ ಮಾರಕವಾದದ್ದು–ಎಂದು ನಿಶ್ಚಲವಾಗಿ ನಂಬಿ ಅದಕ್ಕಾಗಿ ಏನಾದರೂ ಉಪಾಯ ಕೈಕೊಳ್ಳಲೇಬೇಕೆಂಬ ಅವರ ಕಳಕಳಿಯು ಮೆಚ್ಚತಕ್ಕದ್ದಾಗಿದೆ.

ಮದ್ರಾಸದಲ್ಲಿಯ ಸಾರಸ್ವತರು, ಕ್ರಿಶ ೧೮೮೪ರಲ್ಲಿ ಬಾಲ್ಯವಿವಾಹ, ವಿಧವಾ ವಿವಾಹಗಳ ಬಗ್ಗೆ ತಮ್ಮಲ್ಲಿ ಚರ್ಚಿಸಿ ಎರಡು ನಿರ್ಣಯಕ್ಕೆ ಬಂದರು; ಒಂದನೆಯದು:

೧೫ ವರ್ಷದ ಒಳಗಿನ ಗಂಡು ಹುಡುಗರಿಗೆ ಹಾಗೂ ೧೦ ವರ್ಷದ ಒಳಗಿನ ಹುಡುಗಿಯರಿಗೆ ಮದುವೆ ಮಾಡಬಾರದು. ಎರಡನೆಯದು, ಗರ್ಭಾದಾನವಾಗಿರದ ವಿಧವೆಯರು ಪುನರ್ವಿವಾಹ ಮಾಡಿಕೊಳ್ಳಬಹುದು. ಇದಕ್ಕೆ ಸಮಾಜದ ಸಮ್ಮತಿ ಬೇಕಷ್ಟೆ. ಆದ್ದರಿಂದ ಈ ಸೂಚನೆಗಳನ್ನು ಮುಂಬಯಿಯ 'ಕನ್ನಡ ಸುವಾರ್ತೆ' ಪತ್ರಿಕೆಯಲ್ಲಿ ಪ್ರಕಟಿಸಿದರು. ಮತ್ತು ಬೇರೆ ಬೇರೆ ಊರುಗಳಲ್ಲಿಯ ತಮ್ಮ ಸಮಾಜದವರಿಗೆ ಅಭಿಪ್ರಾಯಾರ್ಥವಾಗಿ ಕಳಿಸಿಕೊಟ್ಟರು.

ಚಿತ್ರಾಪುರ ಸಾರಸ್ವತ ಮಠದ ಪಾಂಡುರಂಗಾಶ್ರಮ ಸ್ವಾಮಿಗಳು ಇವರಿಗೆ ಗುರುಗಳು. ಕಾರಣ ಅವರ ಒಪ್ಪಿಗೆಯಿಲ್ಲದಿದ್ದರೆ, ಇತರರು ಇದನ್ನು ಸಮಂಜಸವೆಂದು ಕಂಡರೂ, ಅನುಷ್ಠಾನಕ್ಕೆ ತರುವಂತಿದ್ದಿಲ್ಲ. ಆದುದರಿಂದ ಮಂಜೇಶ್ವರದ ಶಿವರಾಯನೆಂಬವನು ಆ ಸೂಚನೆಗಳನ್ನೂ, 'ವಿವಾಹ ಕನ್ಯಾಸ್ವರೂಪನಿರೂಪಣಮ್' ಎಂಬ ಪುಸ್ತಕವನ್ನೂ ಶ್ರೀಗಳವರಿಗೆ ಕಳಿಸಿಕೊಟ್ಟನು. ಅದರಂತೆ ಕುಂದಾಪುರದ ಸಾರಸ್ವತ ಸಭೆಯವರಾದರೂ ಇವೇ ಮುದ್ದೆಗಳನ್ನೆತ್ತಿ, ಬಾಲ್ಯ ವಿವಾಹದಿಂದ ವಿಧವೆಯರ ಸಂಖ್ಯೆ ಹೆಚ್ಚುವ ಸಂಭವವಿರುತ್ತದೆಂದು ಪ್ರತಿಪಾದಿಸಿದರು. ಸ್ತ್ರೀಯರಿಗೂ ಬ್ರಹ್ಮಚರ್ಯ ನಿಯಮವನ್ನು ಅನ್ವಯಿಸಬಹುದು ಮತ್ತು ಪುರುಷರಿಗೆ ಏಕಪತ್ನೀತ್ವ ನಿಯಮವನ್ನು ವಿಧಿಸಬೇಕು– ಎಂದರು. ಕಡ್ಡಾಯದ ಬಾಲ್ಯ ವಿವಾಹ ಮಾಡುವುದಕ್ಕಿಂತ, ನಿಶ್ಚಯ ತಾಂಬೂಲವನ್ನು ಬೇಕಿದ್ದರೆ ಮಾಡಿಕೊಳ್ಳಲಿ ಎಂಬ ಮಧ್ಯ ಮಾರ್ಗವನ್ನೂ ಸೂಚಿಸಿದರು.

ಪುತ್ತೂರ ಸಭೆಯವರಲ್ಲಿ ಮದ್ರಾಸದಿಂದ ಬಂದ ಸೂಚನೆಗಳ ವಿಚಾರವಾಗಿ ಏಕಮತವಿರಲಿಲ್ಲವೆಂದು ತೋರುತ್ತದೆ. ಆಗ ಗುಳವಾಡಿ ವೆಂಕಟರಾಯರು ಪ್ರತ್ಯೇಕವಾದ ಮನವಿಯನ್ನು ಮಾಡಿದ್ದಾರೆ. ಪ್ರೌಢವಿವಾಹ, ವಿಧವಾವಿವಾಹಗಳ ಅನುಮೋದನೆಗೆ ಬೇರೆಯ ಪ್ರಮಾಣಗಳನ್ನು ಕೊಟ್ಟಿದ್ದಾರೆ. ಮುಖ್ಯತಃ ನಮ್ಮ ಶ್ರುತಿ, ಸ್ಮೃತಿ, ಪುರಾಣಗಳ ಆಶಯವೇನಿದ್ದಿತೆಂಬುದನ್ನು ತಿಳಿಯಲು ಪ್ರಯತ್ನಪಟ್ಟಿದ್ದಾರೆ. ಉದಾಹರಣೆಗೆ ಅಥರ್ವವೇದದಲ್ಲಿ ಕನ್ಯೆಯು ಬ್ರಹ್ಮಚರ್ಯೆ ಮುಗಿದ ಮೇಲೆ ಪತಿಯನ್ನು ಹೊಂದಬೇಕೆಂದಿದೆ. ಜೊತೆಗೆ ಮಹಾನಿರ್ವಾಣತಂತ್ರ ಹಾಗೂ ಆಯುರ್ವೇದಶಾಸ್ತ್ರಗಳಾಗಲೀ, ಮಂತ್ರಗಳಾಗಲೀ ಬಾಲ್ಯವಿವಾಹವನ್ನು ಪುರಸ್ಕರಿಸುವುದಿಲ್ಲ– ಎಂಬುದಾಗಿ ತೋರಿಸಿದ್ದಾರೆ.

ಅದರಂತೆ ವಿಧವಾವಿವಾಹದ ವಿಷಯದಲ್ಲಿಯೂ ವಿಶಿಷ್ಟ ದೃಷ್ಟಿಕೋನದಿಂದ ವಿವೇಚನೆ ಮಾಡಿದ್ದಾಗಿದೆ. ಯಾವದೊಂದು ಕೆಲಸವನ್ನು ನಮ್ಮ ಪೂರ್ವಜರು ಮಾಡಲಿಲ್ಲವೆಂದಾಕ್ಷಣ ನಾವೂ ಮಾಡಬಾರದೆಂದು ಅರ್ಥವಲ್ಲ. ಅವರು 'ತಂತೀ ಟಪ್ಪಾಲು, ಉಗಿಹಡಗ, ಹೊಗೆಬಂಡಿ' ಇವುಗಳನ್ನು ಬಳಸಲಿಲ್ಲ; ಅವು ಈಗ ನಮಗೆ ತ್ಯಾಜ್ಯವಾಗಬಹುದೆ?

ಗುಳವಾಡಿ ವೆಂಕಟರಾಯರು ಕೊಟ್ಟ ಇನ್ನೊಂದು ಕಾರಣ ಇಂಥ ಸ್ತ್ರೀಯರ ವಿಷಯದಲ್ಲಿ ನಾವು ತೋರಬೇಕಾದ ಅನುಕಂಪೆ. ಮುಂದೂ ಅವರು ಹೀಗೆಯೇ ಕಷ್ಟ ನಷ್ಟ ಅನುಭವಿಸುವುದೆಂದಾರೆ, ನಾವು ನಿಷ್ಕರುಣಿಗಳೂ ಸ್ವಾರ್ಥಿಗಳೂ ಎಂದಾಯಿತಲ್ಲವೆ? ಕೊನೆಯದಾಗಿ ವೆಂಕಟರಾಯರು, ಜನರಿಗೆ ಸುಶಿಕ್ಷೆಯಿಲ್ಲ; ಸದ್ಧರ್ಮ ಯಾವುದೆಂದು ಅವರಿಗೆ ತೋರಿಸಲು ಶ್ರೀಗಳವರು ಅಲ್ಲಲ್ಲಿ 'ಆಂಗ್ಲೋ-ಸಂಸ್ಕೃತ' ಪಾಠಶಾಲೆಗಳನ್ನು ತೆರೆಯಬೇಕು, ಎಂದು ಸೂಚಿಸಿದ್ದಾರೆ. ಅವರ ಈ ಸುದೀರ್ಘ ಮನವಿಯು, ಮುಂದೆ ೧೮೯೯ರಲ್ಲಿ ಬರೆದ ಸಾಮಾಜಿಕ ಕಾದಂಬರಿಯಾದ-'ಇಂದಿರಾಬಾಯಿ'ಗೆ ಅತ್ಯಂತ ಸೂಕ್ತ ಹಿನ್ನೆಲೆಯನ್ನು ಒದಗಿಸಿದೆ.[೨]

ಪುತ್ತೂರಿನ ಸುಬ್ರಾಯಭಟ್ಟ ಹಾಗೂ ಪಿಟ್ಲದ ಕಾರ್ನಾಡು ನಾರಾಯಣಶರ್ಮ ಮೊದಲಾದವರು ಇದೇ ಅಭಿಪ್ರಾಯವನ್ನು ಶ್ರೀಗಳವರೆದುರು ಮಂಡಿಸಿದರು. ಆಗ ಶ್ರೀಗಳು 'ವಿಧವೋದ್ವಾಹ ಚಿಕೀರ್ಷು ಮತಭಂಜನ'ವೆಂಬ ತಮ್ಮ ಪುಸ್ತಕದ ಮೂಲಕ (೧೮೮೯) ಶಿಷ್ಯರ ಸಂದೇಹಗಳಿಗೆ, ಪರಿಹಾರವನ್ನು ಶಾಸ್ತ್ರಾಧಾರ ಕೊಟ್ಟು ವಿವರಿಸಿದ್ದಾರೆ.

ಹೀಗೆಯೇ ಇನ್ನು ಹಲವು ಮಠಗಳ ಸ್ವಾಮಿಗಳವರೊಡನೆ ಸುಧಾರಕ ಮಾರ್ಗದವರು ವಾದಿಸಿದ್ದುಂಟು. ಸ್ವಾಮಿಗಳಾದವರು ಶಾಸ್ತ್ರವಿಚಾರದಲ್ಲಿ ಗಟ್ಟಿಗರಾದುದರಿಂದ, ಇಂಥ ವಾದಗಳಲ್ಲಿ ಸುಧಾರಕರೇ ಬಹಿರಂಗವಾಗಿ ಸೋತದ್ದುಂಟು. ಉತ್ತರಾದಿಮಠದ ಆಗಿನ ಸ್ವಾಮಿಗಳಾದ ಶ್ರೀಸತ್ಯವೀರರೊಂದಿಗೆ ಕಡಾಂಬಿ ಶ್ರೀನಿವಾಸಾಚಾರ್ಯನೆಂಬವನು ವಾದ ಹಾಕಿ ಸೋತು ಜಯಪತ್ರವನ್ನು ಕೊಟ್ಟುದಿದೆ.

ವೆಂಕಟ ರಂಗೋ ಕಟ್ಟಿಯವರ ಸ್ಥಿತಿಯಾದರೂ ಹಾಗೆಯೇ ಆಯಿತು. ಅವರು ತಮ್ಮ ಎರಡೂ ಪುಸ್ತಕಗಳನ್ನು ಉತ್ತರಾದಿ ಮಠದ ಸ್ವಾಮಿಗಳವರಿಗೆ ಅಭಿಪ್ರಾಯಾರ್ಥ ಕಳಿಸಿದರು. ಆಗ ಚರ್ಚೆಗೆಂದು ಮಠದಿಂದ ರಾಸ ಹೋಯಿತು. ವೆಂಕಟರಾಯರ ಜೊತೆಗೆ ಧಾರವಾಡದ ಅಗಿನ ಕೆಲವು ಗಣ್ಯರಾದ ಲೌಕಿಕ ವ್ಯಕ್ತಿಗಳೂ ಇದ್ದರು. (೧೯೦೭ ಏಪ್ರಿಲ್) ಆಗ ಪಂಡಿತವರ್ಗದವರು ಪುಂಖಾನುಪುಂಖವಾಗಿ ಶ್ಲೋಕಗಳನ್ನು ಉದ್ಧರಿಸತೊಡಗಿದಾಗ, ಅವರಷ್ಟು ಶಾಸ್ತ್ರಗಳನ್ನು ಓದಿರದಿದ್ದ ಕಟ್ಟಿಯವರಿಗೆ ಅವರನ್ನು ಎದುರಿಸುವುದು ಕಷ್ಟವಾಯಿತು. ಅವರ ಬತ್ತಳಿಕೆಯಲ್ಲಿದ್ದ 'ಮಾನವೀಯ ಅನುಕಂಪೆ' ಎನ್ನುವ ಅಸ್ತ್ರವು ಪ್ರಯೋಜನಕ್ಕೆ ಬಾರದೆ ಹೋಯಿತು. ಆಗ ಕಟ್ಟಿಯವರು 'ತಮ್ಮದು ತಪ್ಪಾಯಿತು' ಎಂದು ಹೇಳಿ ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಹಾಕಬೇಕಾಯಿತು.

ಶಾಮರಾವ ವಿಠ್ಠಲ ಕೈಕಿಣಿಯವರು 'ಸಮುದ್ರ ಪರ್ಯಟನ'ವನ್ನು ಸಮರ್ಥಿಸಿ, ಬರೆದು ಸಮಾಜ ಸುಧಾರಣೆಯ ವಿಚಾರವನ್ನು ಮುಂದೆ ಕೊಂಡೊಯ್ದರು. ಇತ್ತ ಧಾರ್ಮಿಕ ಕ್ಷೇತ್ರ, ಮಂದಿರಗಳಲ್ಲಿಯ ವಿಶ್ವಸ್ತರ ದ್ರವ್ಯಾಪಹಾರ ಮುಂತಾದ ಅನೀತಿಗಳನ್ನು ಖಂಡಿಸುವ 'ದೈವಾಪರಾಧಿನೀ' ಪುಸ್ತಕೆಯ ೧೮೯೨ರಲ್ಲಿ ಪ್ರಕಟವಾಯಿತು. ಇಂತು

ಸಮಾಜ ಸುಧಾರಣೆಯ ವಿವಿಧ ಅಂಗಗಳಲ್ಲಿ ಸಾಹಿತ್ಯಿಕ ಕೃಷಿಯಾಯಿತೆನ್ನುವುದು ಗಣನೀಯವಾಗಿದೆ. ಈ ಸುಧಾರಣಾ ವಿಚಾರವು ಕೆಲವು ನಾಟಕ, ಪ್ರಹಸನಗಳಲ್ಲಿಯೂ ತುಸುಮಟ್ಟಿಗೆ ಕಾಣಿಸಿಕೊಂಡದ್ದನ್ನು ನೋಡಿಯೆ ಇದ್ದೇವೆ.

## ಸಂದರ್ಭ ಸೂಚಿ

೧. ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿಯ ಹಿನ್ನೆಲೆ–ಶ್ರೀನಿವಾಸ ಹಾವನೂರ. ಪ್ರ.ಕ.೫೩. ಪು.೨೯-೬೮

ಪ್ರಕರಣ : 7

# ಪತ್ರಿಕಾ ಪ್ರಪಂಚ

## 71 ಹಿನ್ನೆಲೆ

ಕ್ರಿ.ಶ. ೧೮೧೮ರಲ್ಲಿ 'ಬಂಗಾಲ ಗಜೆಟ್' ಮತ್ತು 'ಸಮಾಚಾರ ದರ್ಪಣ' ಎಂಬ ಪತ್ರಿಕೆಗಳು ವಂಗಭಾಷೆಯಲ್ಲಿ ಪ್ರಕಟವಾದುವು. ಇವುಗಳಲ್ಲಿ ಯಾವುದು ಮೊದಲು ಎಂಬುದು ನಿಶ್ಚಿತವಲ್ಲದಿದ್ದರೂ ಬಂಗಾಲವೇ ಮೊತ್ತಮೊದಲಿನ ದೇಶಭಾಷಾ ಪತ್ರಿಕೆಗೆ ಜನ್ಮವೆತ್ತಿತೆಂಬುದು ನಿರ್ವಿವಾದದ ಸಂಗತಿಯಾಗಿದೆ. ಕ್ರಿ.ಶ. ೧೮೨೧ರಲ್ಲಿ 'ಸಂವಾದ ಕೌಮುದೀ' ಅದೇ ಭಾಷೆಯಲ್ಲಿ ಹೊರಬಂದಿತು. ಅದರ ಸಂಪಾದಕರಾಗಿದ್ದ ರಾಜಾ ರಾಮಮೋಹನರಾಯರೇ ಭಾರತೀಯ ಪತ್ರಿಕೋದ್ಯಮದ ಆದ್ಯ ಪ್ರವರ್ತಕರೆನ್ನಬಹುದು. ಹಲವು ದಶಕಗಳ ವರೆಗೆ ಮುಂದುವರಿದ ಈ ಪತ್ರಿಕೆಯು ಭಾರತೀಯ ಪುನರುಜ್ಜೀವನದ ಪತಾಕೆಯಂತೆ ಮೆರೆಯಿತು. ಹಿಂದೂ ಸಮಾಜ ಸುಧಾರಣೆಯನ್ನು ಕುರಿತ ತನ್ನ ವಿಚಾರಗಳನ್ನು ವ್ಯಕ್ತಪಡಿಸುವುದಕ್ಕೆ ರಾಮಮೋಹನರಾಯರು ಇದನ್ನು ಬಹುವಾಗಿ ಬಳಸಿಕೊಂಡರು. ಅ ಕಾರ್ಯದಲ್ಲಿ ಅವರು ಒಂದೆಡೆ ಸನಾತನಿಗಳ ವಿರೋಧವನ್ನು ಎದುರಿಸಬೇಕಾಯಿತಲ್ಲದೆ, ಮಿಶನರಿಗಳ ಹಿಂದೂ ಮತದ ಅವಹೇಳನೆ ಮಾಡುವುದನ್ನೂ ಖಂಡಿಸಬೇಕಾಗಿ ಬಂದಿತು. ಅವರ ಸಮಾಜಸುಧಾರಣಾ ಕಾರ್ಯವನ್ನು ಬಾಳಶಾಸ್ತ್ರಿ ಜಾಂಭೇಕರ, ಕೃಷ್ಣಶಾಸ್ತ್ರಿ ಚಿಪಳೂಣಕರ ಇವರು ಮರಾಠಿಯಲ್ಲಿಯೂ ಭರತೇಂದು ಹರಿಶ್ಚಂದ್ರ ಮತ್ತು ವೀರೇಶಲಿಂಗಂ ಪಂತಲು ಇವರು ಹಿಂದೀ ಮತ್ತು ತೆಲುಗು ಭಾಷೆಗಳಲ್ಲಿಯೂ ಕೈಕೊಂಡರು. ಅವರುಗಳೂ ಪತ್ರಿಕೆಯನ್ನು ಅದರ ಸಾಧನವಾಗಿ ಮಾಡಿಕೊಂಡರು.

ಮಿಶನರಿ ಜನರ ಪತ್ರಿಕೋದ್ಯಮವಂತೂ ಎಲ್ಲ ಭಾಷೆಗಳಲ್ಲಿ ಕಂಡುಬಂದಿತಲ್ಲದೆ, ಅನೇಕ ಭಾಷೆಗಳಲ್ಲಿ ಅವರೇ ಮೊದಲಿಗರಾಗಿದ್ದಾರೆ. ಮೇಲೆ ಹೇಳಿದ 'ಸಮಾಚಾರ ದರ್ಪಣ'ವನ್ನು ಪ್ರಕಟಿಸಿದವರು ಶ್ರೀರಾಮಪುರದ ಮಿಶನರಿಗಳು. ಮದ್ರಾಸದ ಸ್ಕೂಲ್ ಬುಕ್ ಸೊಸೈಟಿಯ ಮಿಶನರಿಗಳು (೧೮೩೧) ಮೊತ್ತಮೊದಲಿನ ತಮಿಳು ಪತ್ರಿಕೆಯನ್ನು ಹೊರಡಿಸಿದರು. ತೆಲುಗಿಗೂ ಈ ಮಾತು ಅನ್ವಯಿಸುತ್ತದೆ ('ಸತ್ಯದೂತ',೧೮೩೬).

ಮಹಾರಾಷ್ಟ್ರದಲ್ಲಿ ಮಾತ್ರ ಪತ್ರಿಕೋದ್ಯಮದ ಸಸಿಯು ಸರಕಾರೀ ಛತ್ರದ ತಂಪು ನೆರಳಲ್ಲಿ ತಲೆಯೆತ್ತಿತು. ಆದ್ಯ ಮರಾಠಿ ಪತ್ರಿಕೆ 'ಮುಂಬಾಪುರ ವರ್ತಮಾನ'ಕ್ಕೆ (೧೮೨೮)

'ಬಾಂಬೆ ಗೆಝೆಟಿಯರ್'ದ ಆಶ್ರಯವಿದ್ದಿತು.[೧] ೧೮೩೧ರಲ್ಲಿ ಜಾಂಭೇಕರನು 'ದರ್ಪಣ'ವನ್ನು ಆರಂಭಿಸಿದುದು ಆ ರೀತಿಯಲ್ಲಿ. ಉದ್ದೇಶ : ಪ್ರಚಲಿತ ವಿಷಯಗಳ ಪರಿಚಯ ಮಾಡಿಕೊಡುವುದು ಮತ್ತು ಜನಜೀವನ ಸುಧಾರಣೆಯ ಮಾರ್ಗಗಳನ್ನು ಸೂಚಿಸುವುದು. ಇಂತು ಅವರ ದೃಷ್ಟಿಯು ಲೋಕಶಿಕ್ಷಣದತ್ತ ತಿರುಗಿದಾಗ, ರಂಜನೆಯು ಗೌಣವಾಗಿದ್ದಿತು. ಅನಂತರದ 'ಇಂದುಪ್ರಕಾಶ' ಮತ್ತು 'ನೇಟಿವ್ ಒಪಿನಿಯನ್' ಮುಂತಾದ ಮರಾಠೀ-ಇಂಗ್ಲಿಷ್ ಪತ್ರಿಕೆಗಳು ಸರಕಾರದ ಆಡಳಿತವನ್ನು ಟೀಕಿಸುವ ಧೋರಣೆಯಿಟ್ಟುಕೊಂಡಿದ್ದವು. ಇತರ ಪ್ರಾಂತಗಳಲ್ಲಿಯೂ ಈ ಬಗೆಯ ಟೀಕೆ ಕೇಳ ಬಂದುದರಿಂದ ಅಲ್ಲಿಯ ಸರಕಾರಗಳು ದೇಶೀಯ ಪತ್ರಿಕೆಗಳಲ್ಲಿ ಬಂದ ಇಂಥ ಅಭಿಪ್ರಾಯಗಳನ್ನು ತನಗೆ ವರದಿ ಮಾಡಲೆಂದು ಅಧಿಕಾರಿಗಳನ್ನು ನಿಯಮಿಸಿದವು (೧೮೬೪-೬೭). ಅನಂತರ ಪತ್ರಿಕೆಗಳ ಮೇಲೆ ವಿವಿಧ ನಿರ್ಬಂಧಗಳನ್ನೊಳಗೊಂಡ ಕಾಯದೆಗಳು ಕ್ರಮೇಣ ಪಾಸಾದವು.

ಅಂದಿನ ಭಾರತೀಯ ಪತ್ರಿಕೆಗಳ ಪ್ರಸಾರ ತೀರ ಕಡಿಮೆಯಾಗಿದ್ದಿತೆಂಬುದನ್ನು ಗಮನಿಸಬೇಕು. ಪ್ರತಿಗಳು ೧೦೦ರಿಂದ ೫೦೦ರವರೆಗೆ, ಅತಿ ಹೆಚ್ಚೆಂದರೆ ೧೫೦೦ರ ವರೆಗೆ ಮುದ್ರಣಗೊಳ್ಳುತ್ತಿದ್ದುವು. ಆದರೆ ಒಂದು ಪ್ರತಿಗೆ ಒಬ್ಬನೇ ಓದುಗನಲ್ಲ. ಹತ್ತಿಪ್ಪತ್ತು ಜನ ಓದುಗರಿರುತ್ತಿದ್ದರೆಂದು ತಿಳಿಯಬೇಕು. ಆದರೂ ಹೊಸ ಪತ್ರಿಕೆಗಳು ಹುಟ್ಟುತ್ತಲೇ ಇದ್ದುವು. ಮಹಾರಾಷ್ಟ್ರದಲ್ಲಿಯ ಪತ್ರಿಕೆಗಳ ಸಂಖ್ಯೆಯು ಎದ್ದು ಕಾಣುವಂತಿದ್ದಿತು. ಕ್ರಿ.ಶ. ೧೮೯೦ರಲ್ಲಿ ಮೂರು ದಿನಪತ್ರಿಕೆಗಳೂ ೯೫ ವಾರ ಪತ್ರಿಕೆಗಳೂ ೧೫ ಮಾಸಿಕಗಳೂ ಪ್ರಕಟ ವಾಗುತ್ತಿದ್ದುವೆಂದು ಅಂದಿನ ವರದಿಯೊಂದು ತಿಳಿಸುತ್ತದೆ. ಅವುಗಳಲ್ಲಿ 'ಗ್ರಂಥಮಾಲಾ', 'ಐತಿಹಾಸಿಕ ಲೇಖಸಂಗ್ರಹ'-ಮುಂತಾದ ಪತ್ರಿಕೆಗಳು ಪ್ರಾಚೀನ ಕೃತಿಗಳ ಪ್ರಕಟನೆಗೆ ವಿಶೇಷ ಅವಕಾಶವನ್ನು ಒದಗಿಸಿದುವು.

ಹತ್ತೊಂಬತ್ತನೆಯ ಶತಮಾನದ ಪತ್ರಿಕೆಗಳನ್ನು ಇಡಿಯಾಗಿ ಪರಿಶೀಲಿಸಿದಾಗ ಅವುಗಳ ಪ್ರಕಟನೆಯಲ್ಲಿ ಶೈಕ್ಷಣಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಹಿತ್ಯಿಕ-ಎಂಬ ನಾಲ್ಕು ಬಗೆಯ ಉದ್ದೇಶಗಳು ಮುಖ್ಯವಾಗಿ ಕಂಡುಬರುತ್ತವೆ. ಪಾಶ್ಚಾತ್ಯ ಸಂಪರ್ಕದಿಂದಾಗಿ ಬೆಳಕಿಗೆ ಬಂದ ಅನೇಕ ವಿಷಯಗಳನ್ನು, ಜೊತೆಗೆ ಸ್ವದೇಶದಲ್ಲಿಯ ವ್ಯಕ್ತಿ ಸಂಗತಿಗಳ ಪರಿಚಯವನ್ನು ಮಾಡಿಕೊಡುವುದೇ ಶೈಕ್ಷಣಿಕ ಮುಖವೆಂದು ಬಗೆಯತಕ್ಕುದು. ಪ್ರಚಲಿತ ಸುದ್ದಿಗಳನ್ನು ಕೊಟ್ಟು ಬ್ರಿಟಿಶ್ ಆಡಳಿತವನ್ನು ವಿಮರ್ಶಿಸುತ್ತ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸಿದ ಪ್ರಯತ್ನವೇ ರಾಜಕೀಯ ಮುಖ, ಧಾರ್ಮಿಕ ಉದ್ದೇಶದಲ್ಲಿ ಕ್ರಿಶ್ಚಿಯನ್ ಮತಪ್ರಸಾರ ಹಾಗೂ ಹಿಂದೂ ಧರ್ಮಾಚರಣೆಯಲ್ಲಿ ಸುಧಾರಣೆ ಇವೆರಡೂ ಪ್ರತಿಪಾದನೆಗಳನ್ನು ಕಾಣಬಹುದು. ಸಾಹಿತ್ಯಿಕ ಉದ್ದೇಶದಲ್ಲಿ ಲಲಿತ ಸಾಹಿತ್ಯ ರಚನೆ ಗೌಣವಾಗಿದ್ದಿತು. ಆದರೆ ಹಳೆಯ ಕಾವ್ಯಗಳನ್ನು ಪರಿಷ್ಕರಿಸಿ ಪತ್ರಿಕೆಗಳ ಮೂಲಕ ಪ್ರಕಟಿಸುವ ಕಾರ್ಯವು ವ್ಯಾಪಕವಾಗಿ ಎಲ್ಲ ಭಾಷೆಗಳಲ್ಲಿಯೂ ನಡೆಯಿತು.

ಈ ಸ್ಥೂಲ ಹಿನ್ನೆಲೆಯಲ್ಲಿ ಅಂದಿನ ಕನ್ನಡ ಪತ್ರಿಕೆಗಳನ್ನು ಪರಿಶೀಲಿಸಬೇಕು. ಹಾಗೆ ತೊಡಗುವ ಮುನ್ನ ಕನ್ನಡ ಪತ್ರಿಕೋದ್ಯಮವು ಎಂದು ಮೊದಲಾಯಿತೆಂಬುದರ ಬಗ್ಗೆ ಬೇರೆ ಬೇರೆಯಾದ ಅಭಿಪ್ರಾಯಗಳು ವ್ಯಕ್ತವಾಗಿವೆಯಾದ್ದರಿಂದ ಅದನ್ನು ನಿಷ್ಕರ್ಷಿಸೋಣ.

'ಭಾರತೀಯ ಪತ್ರಿಕೋದ್ಯಮ' ಕುರಿತಾದ ಮಹಾಪ್ರಬಂಧದಲ್ಲಿ ಬಳ್ಳಾರಿಯ ಜರ್ಮನ್ ಪಾದ್ರಿಗಳು 'ಕನ್ನಡ ಸಮಾಚಾರ'ವೆಂಬ ಕನ್ನಡ ಪತ್ರಿಕೆಯನ್ನು ೧೮೧೨ನೆಯ ಇಸವಿಯಲ್ಲಿ ಧರ್ಮಪ್ರಚಾರಕ್ಕೋಸ್ಕರ ಪ್ರಕಟಿಸಿದರು ಎಂದು ಹೇಳಲಾಗಿದೆ. ಆ ಪ್ರಬಂಧಕಾರರು ಮುಂದುವರಿದು, "ಬಳ್ಳಾರಿಯ ಕನ್ನಡ ಸಮಾಚಾರವೇ ಕನ್ನಡ ನಾಡಿನ ಪ್ರಥಮ ಪತ್ರಿಕೆಯೆಂದು ಘಂಟಾಘೋಷವಾಗಿ ಹೇಳಬಹುದು. ೧೮೪೨ರಲ್ಲಿ ಮಂಗಳೂರ ಬಾಸೆಲ್ ಮಿಶನ್ ಪ್ರೆಸ್ಸಿನಲ್ಲಿ ಈ ಪತ್ರಿಕೆಯನ್ನು ಅಚ್ಚುಮಾಡಿದರೂ ಅದರ ಹೆಸರನ್ನು 'ಕನ್ನಡ ಸಮಾಚಾರ'ವೆಂದೇ ಮುಂದುವರಿಸಿದರು. ಕೆಲವು ಕಾಲಾನಂತರ ಆ ಹೆಸರನ್ನು ಮಂಗಳೂರು ಸಮಾಚಾರ, ಕನ್ನಡ ಸುವಾರ್ತಿಕ.... ಎಂದು ಕ್ರಮವಾಗಿ ಬದಲಾಯಿಸಲಾಯಿತು" ಎಂದು ಹೇಳಿದ್ದಾರೆ.[೨] ದುರ್ದೈವಕ್ಕೆ ಈ ಅಭಿಪ್ರಾಯವು ಇದ್ದಕ್ಕಿದ್ದಂತೆ ಸ್ವೀಕೃತವಾಗಿ ಬೇರೆ ಕಡೆಗಳಲ್ಲಿಯೂ ಉಲ್ಲೇಖಗೊಂಡಿತು ಮತ್ತು ಇಂದಿಗೂ ಮುಂದುವರಿದಿದೆ.

ಮೊದಲಲ್ಲಿ ತಿಳಿಯಬೇಕಾದ ಮಾತೆಂದರೆ ಬಳ್ಳಾರಿಯಲ್ಲಿ ಜರ್ಮನ್ ಮಿಶನರಿಗಳು ನೆಲಸಲೇ ಇಲ್ಲ! ಮಂಗಳೂರು ಅವರ ಮೊದಲ ನೆಲೆಯಾಗಿದ್ದಿತು; ಮತ್ತು ಬಳ್ಳಾರಿಯಲ್ಲಿ ನಿಂತವರು ಲಂಡನ್ ಮಿಶನ್ನಿನವರು ಎಂಬ ಮಾತನ್ನು ಈ ಹಿಂದೆ ಸಾಧಾರವಾಗಿ ತೋರಿಸಲಾಗಿದೆ. ಪ್ರಕೃತ, ಇದುವರೆಗೆ ಅಲಭ್ಯವಿದ್ದ ಮಂಗಳೂರ ಸಮಾಚಾರ ಪತ್ರಿಕೆಯ ಪ್ರಥಮ ಸಂಪುಟವನ್ನು ವಿದೇಶದಿಂದ ತರಿಸಲಾಗಿದ್ದು, ಅದರ ಮೊದಲ ಸಂಚಿಕೆಯಿಂದ ಆ ಪತ್ರಿಕೆಯು ೧೮೪೩ರಲ್ಲಿ ಆರಂಭವಾದ ವಿಷಯ, ಮತ್ತು ಅದರ ಕೊನೆಯ ಸಂಚಿಕೆಯಿಂದ, ಅದು 'ಕಂನಡ ಸಮಾಚಾರ' ಎಂಬ ಹೆಸರನ್ನು ತಳೆದು ೧೮೪೪ರಿಂದ ಬಳ್ಳಾರಿಯಿಂದ ಹೊರಡತೊಡಗಿದ್ದ ವಿಷಯ–ಇವು ನಿಚ್ಚಳವಾಗಿ ತಿಳಿದು ಬಂದಿವೆ.[೨]

'ಪತ್ರಿಕಾ ವ್ಯವಸಾಯ' ಎಂಬ ಪುಸ್ತಕದ ಲೇಖಕರು ಕ್ರಿ.ಶ. ೧೮೪೦ರ ಸುಮಾರಿಗೆ ಧಾರವಾಡದಲ್ಲಿ 'ಭಾವಾ' ಎಂಬ ಪತ್ರಿಕೆ ಜನ್ಮ ತಾಳಿತೆಂದು ಹೇಳಿದ್ದಾರೆ. ಇದನ್ನು ಅವಲಂಬಿಸಿ ವಿವಿಧ ಲೇಖಗಳಲ್ಲಿ ಕನ್ನಡ ಪತ್ರಿಕೋದ್ಯಮದ ಆರಂಭವನ್ನು ೧೮೪೦ರ ಸುಮಾರಿಗೆ ಗಣಿಸಲಾಯಿತು. ಆದರೆ ಇದೂ ಸರಿಯಲ್ಲ.

ಮುಂಬಯಿ ಪ್ರಾಂತದ ಪತ್ರಿಕೆಗಳಲ್ಲಿ ಬಂದ ರಾಜಕೀಯ ವಿಚಾರಗಳನ್ನು ಪ್ರತಿ ವಾರವೂ ವರದಿ ಮಾಡಲಿಕ್ಕೆಂದೇ Report on Native Press ಎಂಬ ಸರಕಾರೀ ಸಾಪ್ತಾಹಿಕವು ಹೊರಡುತ್ತಿತ್ತು. Report on Native Press ಇದರಲ್ಲಿ ಆ ವಾರದೊಳಗೆ

ಹೊರಡುತ್ತಿದ್ದ ಎಲ್ಲ ಪತ್ರಿಕೆಗಳ ಪಟ್ಟಿಯನ್ನೂ ಅವುಗಳ ಊರು ಹಾಗೂ ಪ್ರತಿಗಳ ಸಂಖ್ಯೆಯನ್ನೂ ಜೊತೆಗೆ ಕಾಣಿಸುವ ಕ್ರಮವಿದ್ದಿತು. ೧೮೮೩ನೆಯ ಅದರ ಒಂದು ಸಂಚಿಕೆಯಲ್ಲಿ 'ಭಾವಾ' ಧಾರವಾಡದಿಂದ ಹೊರಡುವ ಪತ್ರಿಕೆಯೆಂಬ ಉಲ್ಲೇಖವಿದ್ದು. ೧೮೮೩ನೆಯ ವರ್ಷಕ್ಕಿಂತ ಹಿಂದಿನ ವರದಿಗಳ ಇಂಥ ಪಟ್ಟಿಯಲ್ಲಿ 'ಭಾವಾ'ದ ಹೆಸರಿಲ್ಲ. ಅಲ್ಲದೆ RNPದ ೧೮೮೩ರ ಸಂಚಿಕೆಯಲ್ಲಿ ಹೊಸ ಪತ್ರಿಕೆಯೆಂದೇ ಕಾಣಿಸಲಾಗಿದೆ.

ಮೇಲಾಗಿ ಭಾವಾ ಪತ್ರಿಕೆ ಕನ್ನಡ ಭಾಷೆಯದಲ್ಲ! ಆ ಶಬ್ದವು ಸಹಿತ ಕನ್ನಡವಲ್ಲ. ಅದು ಮರಾಠೀ ಶಬ್ದವಾಗಿದ್ದು ಸಿಂಹದ ಮರಿ (ಅಥವಾ ಆನೆಯ ಮರಿ) ಎಂದು ಅರ್ಥವಿದೆ. ಅದು ಮರಾಠೀ ಪತ್ರಿಕೆಯೆಂದೇ Report on Native Pressನಲ್ಲಿ ಉಕ್ತವಾಗಿದೆ. ಇನ್ನು ಧಾರವಾಡದ ಜಿಲ್ಲೆಯ ಹಳೆಯ ಗೆಜೆಟಿನಲ್ಲಿ, ಈ ಪತ್ರಿಕೆಯ ಬಗ್ಗೆ ಬಂದ ಪ್ರಸ್ತಾಪವಿಂತಿದೆ:

The Elephant calf which is said not to be well conducted seldom goes beyond the limits of Dharwar Town.[೪]

ಧಾರವಾಡವಲ್ಲದೆ, ಮುಂಬಯಿ ಕರ್ನಾಟಕದ ಇನ್ನು ಕೆಲವು ಊರುಗಳಲ್ಲಿ ಬೇರೆ ಮರಾಠಿ ಪತ್ರಿಕೆಗಳು ಅಸ್ತಿತ್ವದಲ್ಲಿದ್ದುವೆಂಬುದು ಮೇಲಿನ ಸರಕಾರೀ ಸಾಪ್ತಾಹಿಕ ವರದಿಗಳಿಂದ ತಿಳಿದುಬರುತ್ತದೆ. ೧೮೬೪ರಲ್ಲಿ ಬೆಳಗಾಂವಿಯಿಂದ ಹೊರಡುತ್ತಿದ್ದ 'ಬೆಳಗಾಂವ ಸಮಾಚಾರ'ವು ಮರಾಠೀ ಪತ್ರಿಕೆಯಿದ್ದಿತು ; ಕನ್ನಡದ್ದಲ್ಲ. ಇದು ಬಹುಕಾಲ ಬಾಳಿತಲ್ಲದೆ ನಿರ್ಭಯವಾಗಿ ಟೀಕೆಟಿಪ್ಪಣಿಗಳನ್ನು ಬರೆಯುತ್ತಿದ್ದುದರಿಂದ ಸರಕಾರವು ಅದರ ಕಡೆಗೆ ವಿಶೇಷ ಗಮನವನ್ನು ಕೊಟ್ಟಿದ್ದಿತು. ಒಂದು ಕಾಲಕ್ಕೆ ವಿಜಾಪುರ ಜಿಲ್ಲೆಯ ಮುಖ್ಯ ಸ್ಥಳವಾಗಿದ್ದ ಕಲಾದಗಿಯು ಸೈನಿಕ ಠಾಣೆಯೂ ಆಗಿದ್ದಿತು. ಕ್ರಿ.ಶ. ೧೮೭೦ ರಿಂದ 'ಹಿತೇಚ್ಛು' ಎಂಬ ಮರಾಠೀ ವಾರಪತ್ರಿಕೆಯು ಆ ಊರಿನಿಂದ ಪ್ರಕಟವಾಗತೊಡಗಿತು. ಪತ್ರಿಕೆಗೆ ಆ ಹೆಸರನ್ನು ಆಯ್ದುಕೊಳ್ಳುವುದಕ್ಕೆ ಪ್ರಾಯಶಃ ಗುಜರಾತದಲ್ಲಿದ್ದ ಅದೇ ಹೆಸರಿನ ಪ್ರಮುಖ ರಾಜಕೀಯ ಪತ್ರಿಕೆಯು ನಿಮಿತ್ತವಾಗಿರಬಹುದು. ಇದನ್ನು ಕನ್ನಡ ಪತ್ರಿಕೆಯೆಂದು ತಪ್ಪಾಗಿ ಭಾವಿಸಿ, ಕನ್ನಡ ಪತ್ರಿಕೋದ್ಯಮದ ಬಗ್ಗೆ ಬರೆದ ಒಂದು ಲೇಖದಲ್ಲಿ 'The first fulfledged newspaper of the area' ಎಂದು ಅಭಿಪ್ರಾಯ ಪಡಲಾಯಿತು![೫]

ಧಾರವಾಡದಿಂದ ಹೊರಡುತ್ತಿದ್ದ 'ಜ್ಞಾನಬೋಧಕ' (ನವೆಂಬರ್ ೧೮೭೧) ಹಾಗೂ 'ಧಾರವಾಡ ವೃತ್ತ' (ಸೆಪ್ಟೆಂಬರ್ ೧೮೭೩--) ಇವು ಕೂಡ ಮರಾಠೀ ಪತ್ರಿಕೆಗಳೇ. ಜ್ಞಾನಬೋಧಕವು ೧೮೮೨ನೆಯ ವರ್ಷ ಬೆಳಗಾಂವಿಗೆ ಸ್ಥಳಾಂತರ ಹೊಂದಿತು. ೧೮೭೯ನೆಯ ವರ್ಷದಂದು 'ಹುಬಳೀ ವೈಭವ' ಹಾಗೂ 'ಕರ್ನಾಟಕ ವಾರ್ತಿಕ' ಎಂಬ ಇನ್ನೆರಡು ಮರಾಠೀ ಪತ್ರಿಕೆಗಳು ಮೈದಾಳಿದುವು. ಇವುಗಳಲ್ಲಿ ಮೊದಲಿನದು

ಬಹುಕಾಲ ಬಾಳಿದ್ದರ ಉಲ್ಲೇಖ ದೊರೆತಿಲ್ಲ. ಅಲ್ಲದೆ ಕೇವಲ ೭೫ ಪ್ರತಿಗಳನ್ನು ಮುದ್ರಿಸಲಾಗುತ್ತಿತ್ತು.

ಧಾರವಾಡದಿಂದ ಹೊರಡುತ್ತಿದ್ದ 'ಕರ್ನಾಟಕ ವಾರ್ತಿಕ'ವೂ ಮರಾಠೀ ಭಾಷೆಯಲ್ಲಿದ್ದದ್ದು ವಿಚಿತ್ರವೆನಿಸಬಹುದು. ಆಗಿನ ಪತ್ರಿಕೆಗಳನ್ನು ಅಧಿಕಾರಿಗಳು, ಶಾಲಾ ನೌಕರರು ಮತ್ತು ಕೆಲವು ವ್ಯಾಪಾರಸ್ಥರು ಓದುತ್ತಿದ್ದರು. ಅವರೆಲ್ಲರ ಮೇಲೆ ಅದೆಷ್ಟರಮಟ್ಟಿಗೆ ಮರಾಠಿಯ ಪ್ರಭಾವವಿದ್ದಿತೆಂಬುದು ತಿಳಿದ ವಿಷಯ. ಈ ಪತ್ರಿಕೆಗಳನ್ನು ಹೊರಡಿಸುತ್ತಿದ್ದವರು ಸ್ಥಳೀಯ ಕನ್ನಡಿಗರೇ. ಅದರಲ್ಲಿ ಬರುತ್ತಿದ್ದ ವಾರ್ತೆಗಳಾದರೂ ಕರ್ನಾಟಕಕ್ಕೆ ಸಂಬಂಧಿಸಿದವುಗಳೇ. ಭಾಷಾ ಮಾಧ್ಯಮವು ಮಾತ್ರ ಮರಾಠಿಯಿದ್ದಿತು.* ಮೇಲಿನ ಪತ್ರಿಕೆಗಳಲ್ಲಿ ಕನ್ನಡದಲ್ಲಿಯೂ ಲೇಖನಗಳು. ವಾಚಕರ ಪತ್ರಗಳು ಮತ್ತು ಸರಕಾರೀ ಪರಿಪತ್ರಗಳು ಆಗೀಗ ಪ್ರಕಟವಾಗುತ್ತಿದ್ದುವು. ಆ ಕಾಲಕ್ಕೆ ಈ ಮರಾಠೀ ಪತ್ರಿಕೆಗಳ ಜೊತೆಗೆ 'ಚಂದ್ರೋದಯ' (ಧಾರವಾಡ), 'ಕರ್ನಾಟಕ ಮಿತ್ರ' (ಬೆಳಗಾಂವಿ) ಎಂಬ ಕನ್ನಡ ವಾರ್ತಾ ಪತ್ರಿಕೆಗಳೂ ಇದ್ದುವೆಂಬುದನ್ನು ಗಮನಿಸಬೇಕು.

### 72 ಮಂಗಳೂರ ಸಮಾಚಾರ ಮತ್ತು ಸುಬುದ್ಧಿ ಪ್ರಕಾಶ

ಇನ್ನೀಗ ಕನ್ನಡದ ಆದ್ಯ ಪತ್ರಿಕೆಯಾದ ಮಂಗಳೂರು ಸಮಾಚಾರವನ್ನು ವಿವರವಾಗಿ ಪರಿಶೀಲಿಸೋಣ.

"ಈ ದೇಶವೆಂಬ ಮನೆಯಲ್ಲಿ ವಾಸಿಸುವ ಜನರು ಇಂದಿನ ಪರಿಯಂತರ ಹೊರಗಿನ ದೇಶಸ್ಥರ ಸಮಾಚಾರ ಮಾರ್ಗ ಮರ್ಯಾದೆಗಳಂನು ತಿಳಿಯದೇ ಕಿಟಕಿಯಿಲ್ಲದ ಬಿಡಾರದಲ್ಲಿ ವುಳಕೊಳ್ಳುವವರ ಹಾಗೆ ಯಿರುತ್ತಾ ಬಂದರು. ಅದು ಕಾರಣ ಹೊರಗಿನ ಕಾರ್ಯಗಳನ್ನು ಕಾಣುವ ಹಾಗೆಯೂ ವೊಳಗೆ ಸ್ವಲ್ಪ ಬೆಳಕು ಬೀರುವ ಹಾಗೆಯೂ ನಾಲ್ಕೂ ದಿಕ್ಕಿಗೆ ಕಿಟಕಿಗಳನ್ನು ಮಾಡುವ ಈ ಸಮಾಚಾರ ಕಾಗದವನ್ನು ಪಕ್ಷಕ್ಕೆ ವೊಂದು ಸಾರಿ ಶಿದ್ಧಮಾಡಿ ಅದನ್ನು ಓದಬೇಕೆಂದಿರುವೆಲ್ಲರಿಗೆ ಕೊಟ್ಟರೆ ಕಿಟಕಿಗಳನ್ನು ಮಾಡಿದ ಹಾಗಾಗಿರುವುದು."

ಇಂತು ಪ್ರಪಂಚದ ಪರಿಚಯವನ್ನು ಮಾಡಿಕೊಡುವ ಸ್ಪಷ್ಟ ಉದ್ದೇಶದಿಂದ ಈ ಪತ್ರಿಕೆಯ ಉದಯವಾಯಿತು. ಜೊತೆಗೆ ಮಂಗಳೂರ ನಗರದ ಹಾಗೂ ಜಿಲ್ಲೆಯ

---

* The town of Dharwar has three local vernacular papers, the Dharwar Vritta or Dharwar News printed in Marathi and published on Thursday. The Dharwar News is said to be fairly ably managed paper with about 450 subscribers.

ಸುದ್ದಿಗಳೂ ಇರುತ್ತಿದ್ದುವು. ಈ ಪತ್ರಿಕೆ ಹೊರಡುವುದಕ್ಕೆ ಮುಂಚೆ ಅಲ್ಲಿಯ ಜನ ಸುದ್ದಿಯನ್ನು ಹಬ್ಬಿಸುತ್ತಿದ್ದ ಬಗೆಯನ್ನು ನೋಡಬಹುದು :-

"ಬೆಳಿಗ್ಗೆ ಬಂದ್ರದಲ್ಯಾಗಲಿ ಕಚೇರಿ ಹತ್ತರವಾಗಲಿ ಒಬ್ಬನು ಬಾಯಿಗೆ ಬಂದ ಹಾಗೆ ಒಂದು ವರ್ತಮಾನವ ಹಾಗೆ ಮಾತಾಡಿದರೆ ಅದನ್ನು ಬೇರೊಬ್ಬನು ಆಶ್ಚರ್ಯದಿಂದ ಕೇಳಿ ಇನ್ನೊಬ್ಬನಿಗೆ ಹೇಳಿ ಸಾಯಂಕಾಲ ಪರಿಯಂತರ ಸುಳ್ಳು ಸುದ್ದಿಯಿಂದ ಊರೆಲ್ಲ ತುಂಬಿಸುತ್ತಾನೆ. ಮರುದಿವಸ ನಿನ್ನಿನ ವರ್ತಮಾನ ಸುಳ್ಳುಯಂತಾ ಕಾಣುವಷ್ಟರೊಳಗೆ ಎಮ್ಮೆ ಮೊಲೆಯಂತೆ (?) ಮತ್ತೊಂದು ಹುಟ್ಟಿ ಆೃತು. ಈ ಪ್ರಕಾರವಾಗಿ ಬಹಳ ಜನರು ಕಾಲಕ್ರಮೇಣ ಮಾಡುತ್ತಾರೆಂದು ಕೆಲವು ವರ್ಷದಿಂದ ಇಲ್ಲಿ ವಸ್ತಿಯಾಗಿದ್ದ ಕೆಲವರು ತಿಳುಕೊಂಡು ಇದರಲ್ಲಿ ಪ್ರಯೋಜನವಿಲ್ಲವೆಂದು ಈ ಮನುಷ್ಯರ ಸಮಾಚಾರ ಆಸರಕ್ಕೆ ಯೋಗ್ಯವಾಗಿ ಪೂರೈಸಬೇಕೆಂದು ಆಲೋಚನೆ ಮಾಡಿದ್ದರಿಂದ ಈ ಸಮಾಚಾರದ ಸಂಗ್ರಹವನ್ನು ಕೂಡಿಶಿ ಪಕ್ಷಕ್ಕೆ ಒಂದು ಕಾಗದವನ್ನು ಛಾಪಿಸಿ ಸ್ವಲ್ಪ ಕ್ರಯಕ್ಕೆ ಜನರ ಕೈಯಲ್ಲಿ ಶೇರಿಸಬೇಕೆಂಬುದಾಗಿ ನಿಶ್ಚಯಿಸಿ ಅಧೆ". (ಮೊದಲ ಸಂಚಿಕೆ)

ಹಾರಿಕೆಯ ಸುದ್ದಿಯಿಂದ 'ಏನೂ ಪ್ರಯೋಜನವಿಲ್ಲ'ವೆಂದು ತಿಳುಕೊಂಡ ಜರ್ಮನ್ ಇವ್ಯಾಂಜೆಲಿಕಲ್ (ಬಾಸೆಲ್) ಮಿಶಲ್‌ದವರು ಮುದ್ರಾಯಂತ್ರವನ್ನು ತಂದ ಮರುವರ್ಷವೇ ನಾಲ್ಕು ಪುಟದ ಈ ಪತ್ರಿಕೆಯನ್ನು ಕಲ್ಲಚ್ಚಿನಲ್ಲಿ ಸುಂದರವಾಗಿ ಮುದ್ರಿಸತೊಡಗಿದರು. ಬಿಡಿ ಸಂಚಿಕೆಯ ಬೆಲೆ ಕೇವಲ ಒಂದು ದುಡ್ಡು. ಇದರಲ್ಲಿ ಅಂಚೆ ವೆಚ್ಚವೂ ಸೇರಿದ್ದಿತು. ಅಲ್ಲದೆ ಮಂಗಳೂರಲ್ಲಿ ಕೊತ್ವಾಲ ಕಟ್ಟೆಯೆದುರು ಮತ್ತು ತಾಲ್ಲೂಕು ಕಚೇರಿಯ ಹತ್ತಿರವಿದ್ದ ಅವರ ಇಂಗ್ಲಿಷ್ ಶಾಲೆಯುಲ್ಲಿ ಮಾರಾಟಕ್ಕೆ ದೊರೆಯುತ್ತಿದ್ದಿತು.

ಪತ್ರಿಕೆಯ ಸ್ವಾಮಿತ್ವವು ಬಾಸೆಲ್ ಮಿಶನ್‌ನವರಿಗೆ ಸೇರಿದ್ದರೂ ಎಲ್ಲಿಯೂ ಅದರ ಹೆಸರಿಲ್ಲ. ಪ್ರತಿ ಸಂಚಿಕೆಯ ಕೊನೆಯಲ್ಲಿ ಮಾತ್ರ ಹರ್ಮನ್ ಮೆವ್‌ಗ್ಲಿಂಗ್ ಸಂಪಾದಕನಾಗಿ ಕಾಣಿಸಿಕೊಂಡಿದ್ದಾನೆ ('H. Moegling, Editor'). ತಾನು ಕೊಡಬೇಕೆಂದಿದ್ದ ವಿವಿಧ ಸಮಾಚಾರಗಳ ಸ್ವರೂಪವನ್ನು ಹೀಗೆ ಹೇಳಿದ್ದಾನೆ :-

೧ ವೂರ ವರ್ತಮಾನಗಳು

೨ ಸರಕಾರೀ ನಿರೂಪಗಳು/ಕಾನೂನು

೩ ಸುಬುದ್ಧಿಯನ್ನು ಹೇಳುವ ಸಾಮತಿಗಳು, ಹಾಡುಗಳು

೪ ಕಥೆಗಳು

೫ ಸರ್ವರಾಜ್ಯ ವರ್ತಮಾನಗಳು

ಮೇಲಣವುಗಳಲ್ಲಿ ವೂರ ವರ್ತಮಾನಗಳಿಗೆ ಸ್ವಾಭಾವಿಕವಾಗಿಯೇ ಮಹತ್ವ ಬಂದು ಪ್ರತಿ ಸಂಚಿಕೆಯಲ್ಲಿಯೂ ಇಂಥ ಮೂರು-ನಾಲ್ಕು ಸುದ್ದಿಗಳು ತಪ್ಪದೆ ಪ್ರಕಟವಾಗುತ್ತ ನಡೆದುವು. ಈ ಸದರಿನಲ್ಲಿ ಶಿಕ್ಷೆಗೊಳಗಾದವರ ಸಮಾಚಾರಗಳೇ ಹೆಚ್ಚಾಗಿ ಇದ್ದುವು.

ಅವನ್ನು ಕೊಡುವ ಉದ್ದೇಶ, ಅದರಿಂದ ಇತರರು ಭಯಗೊಳ್ಳಬೇಕು–ಎಂಬುದಾಗಿತ್ತು! ಇವೆಲ್ಲ ಸುದ್ದಿಯನ್ನು ಓದಿದಾಗ ಆಗಿನ ದಕ್ಷಿಣಕನ್ನಡ ಜಿಲ್ಲೆಯ ಜನಜೀವನದ ಒಂದು ನಿಟ್ಟಿನ ಚಿತ್ರಣ ಕಣ್ಣಿಗೆ ಕಟ್ಟುತ್ತದೆ.

ಆನಂದರಾಯ ಕೌಂಡಿಣ್ಯ ಹಾಗೂ ಕೌಶಿಕ ಬಂಧುಗಳು–ಇವರನ್ನು ಮೆವ್‌ಗ್ಲಿಂಗ್ ಮತಾಂತರಗೊಳಿಸಿದ್ದುದು ಇದೇ ಸಮಯಕ್ಕೆ. ಆಗ ಊರಲ್ಲಿ ಗಲಾಟೆಯಾಗಿ, ಅವರನ್ನು ಪುನಃ ಹಿಂದೂಧರ್ಮಕ್ಕೆ ತಿರುಗಿಸಬೇಕೆಂಬ ಪ್ರಯತ್ನ ನಡೆಯಿತು. ಆದರೆ ಅದಕ್ಕೆ ಯಶಸ್ಸು ಸಿಗಲಿಲ್ಲವೆಂದು ಪತ್ರಿಕೆಯಲ್ಲಿ ವರದಿಯಾಗಿದೆ. ಇನ್ನೊಂದು ಸುದ್ದಿ: ಊರಿನ ದುಷ್ಟ ಜನರು ಏನಾದರೂ ಗುಬಾರು ಯೆಬ್ಬಿಸಬೇಕೆಂಬ ಉಮೇದಿಯಿಂದ ಮುಸುಲಮಾನರ ಜುಮಾ ಮಹಜೀದಿಯ ಕೆರೆಯಲ್ಲಿ ಹಂದಿಯನ್ನು ರಾತ್ರಿ ಹೊತ್ತಿನಲ್ಲಿ ಕೊಂದು ಹಾಕಿದರಂತೆ. ಆಗ ಜಿಲ್ಲಾ ಮೆಜಿಸ್ಟ್ರೇಟನು ಕೂಡಲೇ ಈ ರೀತಿಯ ಪ್ರಕಟನೆ ಹೊರಡಿಸಿದನಂತೆ :

"ಮುಸಲಮಾನರ ಜನರಿಗೆ ಚಾಳಿಸುವ ಇರ್‍ಯಾದೆಯಿಂದ ಈ ಕೆಟ್ಟ ಕೃತ್ಯಾ ಮಾಡಿರುತ್ತಾರೆ ಎಂಬುದರಲ್ಲಿ ಏನೂ ಅನುಮಾನವಿಲ್ಲ. ಈ ವಿಷಯದಲ್ಲಿ ಕೂಲಂಕಶ ತನಿಖಿ ಕೂಡ್ಲೆ ಮಾಡಲಾದೀತು. ಈ ದುಸ್‌ಕೃತ್ಯಾ ನಡೆಸಿದ ವಾ ತಲಾಶಿಗೆ ಸಾಕಾಗುವ ವರ್ತಮಾನ ಯಾರಾದರೂ ಕೊಟ್ಟದ್ದಾದರೆ ಅಂಥ ಮನುಷ್ಯನಿಗೆ ಐದು ನೂರು ರೂಪಾಯಿ ಕೊಡಲಾದೀತು. ಆದುದರಿಂದ ಮುಸಲ್ಮಾನ್ ಜಾತಿ ಯಾವತ್ತೂ ಜನರು ದುರಾಲೋಚನೆ ಜನರ ಬೋಧನೆಗೆ ಒಳಗಾಗದೆ ನಿಧಾನದಲ್ಲಿ ಇರಬೇಕು ಯಂತ ಅಪೇಕ್ಷಿಸುತ್ತೇವೆ. ಆ ಪ್ರಕಾರ ಸಮಾಧಾನ ಮಾಡದೆ ತಂಟೆ ಏನಾದರೂ ನಡೆಸಿದ್ದಾದರೆ ವ್ಯರ್ಥ ಬಹಳ ದಣಕೊಳ್ಳಬೇಕಾದೀತು"!

ಅನಂತರ ಮೆಜಿಸ್ಟ್ರೇಟನು ಮುಸಲ್ಮಾನರ ಹಾಗೂ ಮಾಪಿಳ್ಳೆಯವರ ಮುಖಂಡರನ್ನು ಕರೆಯಿಸಿ, ಆಶ್ವಾಸನವಿತ್ತುದಲ್ಲದೆ ಕೆರೆಯನ್ನು ಸರಕಾರದ ವತಿಯಿಂದ 'ಸಾಪು' ಮಾಡಿಸುವುದಾಗಿ ಹೇಳಿದನಂತೆ. ಸಂಪಾದಕರು ಮೇಲಣ ಘಟನೆಯ ವರದಿಯನ್ನು ಸಮಾರೋಪ ಮಾಡಿದ ಬಗೆ ಇಂತಿದೆ :–

"ಆ ಮಾತುಗಳನ್ನು ಅವರು ಬುದ್ಧಿಯಾಗಿ ತಿಳುಕೊಂಡು ಅಂಗೀಕರಿಸಿ ವೊಡಂಬಟ್ಟರು. ಆ ಹಂದಿ ಕಡದು ಹಾಕಿದ ಮನುಷ್ಯನು ಯೀಗ ಶಿಕ್ಕಿದ್ದಾನೆಂಬ ವರ್ತಮಾನ ಯಿರುತ್ತದೆ."

ಪತ್ರಿಕೆಯ ಬರವಣಿಗೆಯ ಒಬ್ಬನದೇ ಆಗಿದ್ದರೂ ಬೇರೆಯವರು ತಮ್ಮ ಊರಿನ ಯಾವುದೊಂದು ವರ್ತಮಾನವನ್ನು ಕಳುಹಿಸುವುದಕ್ಕೆ ಸ್ವಾಗತವಿದ್ದಿತು. ಅದರಂತೆ ಮೈಸೂರಿನಿಂದ ಒಂದು ಕಾಗದವೂ ಬಂದಿದ್ದಿತು. ಆಗ ಸಂಪಾದಕನು ಈ ರೀತಿಯಾಗಿ ಅದರ ಪ್ರಸ್ತಾಪ ಮಾಡಿದ್ದಾನೆ :–

"ಅದು ಇಂಥವರು ಬರದದ್ದು ಎಂಬ ಹೆಸರು ಮುಂತಾಗಿರುವುದಿಲ್ಲ. ಆದಾಗ್ಯೂ ಈ ಕಾಗದವು ಮೊದಲು ಸೇರಿದಾದ ಕಾರಣ ಆ ವರ್ತಮಾನ ಛಾಪಿಸಲಿಕ್ಕೆ ನಿಶ್ಚೈಸಿ ಅದೆ. ಯಿನ್ನು ಮುಂದೆ ಯಾರಾದರೂ ಒಂದು ವರ್ತಮಾನ ಸೇರಿಸಬೇಕಂತ ಬರೆದು ಕಳುಹಿಸುವದಾದರೆ. . . . ಅವರ ಹೆಸರು, ಊರು ಮುಂತಾಗಿ ನಮಗೆ ತಿಳಿಯುವ ಹಾಗೆ ಮಾತ್ರ ಬರದು ಟಪಾಲ ದುಸ್ತುರಿ ಕೊಟ್ಟು ಕಳಿಸಿದರೆ ಆ ಸಮಾಚಾರ ಛಾಪಿಸಬಹುದು." (೬ನೆಯ ಸಂಚಿಕೆ)

ಹೆಸರಿಲ್ಲದ ಓದುಗರ ಪತ್ರಗಳಿಗೆ ಗಮನವೀಯಲಾಗದೆಂಬುದು ಇಂದಿನ ಪತ್ರಿಕಾ ಧರ್ಮವಷ್ಟೆ. ಇದನ್ನು, ತಮ್ಮ ಹೆಸರು ಬಹಿರಂಗವಾಗಿ ಬರಬಾರದೆನ್ನುವವರ ಸಂಪಾದಕರಿಗಾದರೂ ತಮ್ಮ ಹೆಸರು–ವಿಳಾಸ ತಿಳಿಸಬೇಕು–ಎಂಬೀ ಕ್ರಮವನ್ನು ೧೭೦ ವರ್ಷಗಳ ಹಿಂದಿನ ಆದ್ಯ ಕನ್ನಡ ಪತ್ರಿಕೆಯಲ್ಲಿಯೂ ಅನುಸರಿಸಲಾಗುತ್ತಿತ್ತೆನ್ನುವುದು ಗಮನಾರ್ಹವಾದುದು. ಅಂತೂ ಮೈಸೂರಿನಿಂದ ಬಂದ ಆ ಸುದ್ದಿಯು ಮುಮ್ಮಡಿ ಕೃಷ್ಣರಾಜರನ್ನು ಕುರಿತು ಇದೆ:

"ಜೂನ್ ತಿಂಗಳಲ್ಲಿ ಈ ಊರು ದೊರೆಗಳವರ ಮಕ್ಕಳ ವಿವಾಹೋತ್ಸವವು ಆಯಿತು. ಯೀ ಪ್ರಸ್ತದಲ್ಲಿ ದೊರೆಗಳವರು ಬ್ರಾಂಹ್ಮರೇ ಮೊದಲಾದ ಸಮಸ್ತ ಜಾತಿಯವರಲ್ಲಿ ಅಬಾಲ ಉದ್ರದ್ಧರಿಗೆ ಭೋಜನವನ್ನು ಮಾಡಿಸಿ, ಅವರವರ ಯೋಗ್ಯತಾನುಸಾರವಾಗಿ ಶಾಲು, ವಲ್ಲಿ, ಧೋತ್ರ ಮೊದಲಾದ ಉಡುಗೊರೆಗಳನ್ನು ಕೊಟ್ಟು ಸಮಸ್ತರನ್ನು ತೃಪ್ತಿಪಡಿಸಿದರು. ಆ ಉಡುಗೊರೆಗಳು ಈ ಊರಲ್ಲಿ ಎಲ್ಲಾ ಕಡೆಯಲ್ಲಿಯೂ ಭರಿತವಾಗಿರುವ ಕಾರಣ ಯಾವ ಸ್ಥಳದಲ್ಲಿ ನೋಡಿದರೂ ಅವರ ಉದಾರ ಕ್ಷಮಾ ಕೊಂಡಾಡಲ್ಪಟ್ಟದೆ. ಇದಲ್ಲದೆ ಅತ್ಯಂತ ಶ್ರಮೆಯನ್ನು ಅನುಭವಿಸುತ್ತಿದ್ದ ಕೆಲವು ಜನರಿಗೆ ಸಂಬಳವನ್ನು ಮಾಡಿಸಿ ಕೊಟ್ಟು ಇನ್ನೂ ಕೆಲವರ ಸಂಬಳವನ್ನು ಹೆಚ್ಚು ಮಾಡಿಸಿದರು. ಯಿದೇ ಪ್ರಕಾರವಾಗಿ ಈ ಧೊರೆಯವರು ಅನೇಕರನ್ನು ಸಂರಕ್ಷಿಸಿ ಅವರ ಪುತ್ರಪೌತ್ರರು ಅವರ ಉಪಕಾರವನ್ನು ಸ್ಮರಿಸುವ ಹಾಗೆ ಮಾಡಿದ್ದಾರೆ. ಯಿವರ ದಾತೃತ್ವದ ನಿದರ್ಶನಗಳು ಅನೇಕವಾಗಿವೆ –ಕಣ್ಣಿನಿಂದ ಕಂಡವರು." (೬ನೆಯ ಸಂಚಿಕೆ)

ಯಾರನ್ನಾದರೂ ಟೀಕಿಸುವಾಗ ಅನಾಮಧೇಯರಾಗಿ ಉಳಿಯುವುದು ಇಂದಿನ ಪತ್ರಿಕಾ ಸಂಪ್ರದಾಯವಿರುವಲ್ಲಿ, ಈ 'ಕಣ್ಣಿನಿಂದ ಕಂಡವರು' ನಿರ್ಹೇತುಕ ಬುದ್ಧಿಯಿಂದ ಮುಮ್ಮಡಿ ಕೃಷ್ಣರಾಜರ ಔದಾರ್ಯವನ್ನು ಕೊಂಡಾಡಲು ಹಾಗ ಮಾಡಿದ್ದಾರೆ. ರಾಜರನ್ನು ಕುರಿತ ಈ ಸಮಕಾಲೀನ ದಾಖಲೆಯು ಐತಿಹಾಸಿಕ ಮಹತ್ವವುಳ್ಳದ್ದಾಗಿದೆ.

ಮಿಶನರಿಗಳು ಸ್ವಮತ ಪ್ರಸಾರಕ್ಕಾಗಿ ಈ ಪತ್ರಿಕೆಯನ್ನು ಬಳಸಬಹುದಿತ್ತು. ಆದರೆ ಹಾಗೆ ಮಾಡಿಲ್ಲ. ಅದರಿಂದ ಇದು ಜಾತ್ಯತೀತ (Secular) ಎನ್ನಬಹುದಾದ ಮತ್ತು ಎಲ್ಲ ವರ್ಗದ ಕನ್ನಡಿಗರನ್ನು ಉದ್ದೇಶಿಸಿದ ಪತ್ರಿಕೆಯಾಗಿ ನಿಂತಿದೆ. ಆದರೂ ಕ್ರಿಶ್ಚಿಯನ್

ಮತದ ಪ್ರಚಾರಗಳು ವ್ಯಕ್ತವಾದ ಹಲವು ಸಂದರ್ಭಗಳೆಂದರೆ–ದಾಸರ ಪದ ಇಲ್ಲವೆ ಸಂಸ್ಕೃತ ಶ್ಲೋಕವನ್ನು ಕೊಡುತ್ತ ಅದಕ್ಕೆ ಸಮಾನವಾದ ಬೈಬಲ್ ಉಕ್ತಿಗಳನ್ನು ವಿವರಿಸಿದುದು. ಆ ನಿಮಿತ್ತದಿಂದ ಪುರಂದರದಾಸರ ३–४ ಪದಗಳು ಪ್ರಥಮತಃ ಮುದ್ರಣ ರೂಪದಲ್ಲಿ ಹೊರಬಂದುದು ಇಲ್ಲಿಯೇ.

ವಾಚಕರ ಮನರಂಜನೆಗೂ ಪತ್ರಿಕಾ ಸಂಪಾದಕರು ಗಮನವಿತ್ತಿದ್ದಾರೆ. ಐದಾರು ಸಣ್ಣ ಪ್ರಮಾಣದ ಕತೆಗಳು ವರ್ಷಾವಧಿಯಲ್ಲಿ ಪ್ರಕಟವಾಗಿವೆ. ಪುಟ ಸಂಖ್ಯೆಯ ಪರಿಮಿತಿಯಿಂದಾಗಿ ಅದಕ್ಕೂ ಹೆಚ್ಚು ಲಲಿತ ವಾಙ್ಮಯವನ್ನು ಪ್ರಕಟಿಸುವುದು ಸಾಧ್ಯವಾಗಿಲ್ಲ. ಪತ್ರಿಕೆಯ ಬಹು ಭಾಗವನ್ನು ಪಡೆದುದೆಂದರೆ ವಿವಿಧ ಪ್ರದೇಶಗಳ ಅಂದಿನ ಮತ್ತು ಹಿಂದಿನ ಸಮಾಚಾರಗಳು. ಹಿಂದುಸ್ಥಾನದ ವಿವಿಧ ಸಂಸ್ಥಾನಗಳು ಬ್ರಿಟಿಶರೊಡನೆ ಹೋರಾಡಿ ಒಂದೊಂದಾಗಿ ಅಸ್ತಂಗತವಾಗುತ್ತ ನಡೆದಿದ್ದ ಕಾಲವದು. ಗ್ವಾಲಿಯರ್, ಲಾಹೋರ, ಸಿಂಧಪ್ರಾಂತ–ಇವುಗಳ ಹೋರಾಟವನ್ನು 'ಮಂಗಳೂರ ಸಮಾಚಾರ'ವು ಸೊಗಸಾಗಿ ವಿವರಿಸಿದೆ. ಮುಂದೇನಾಗಬಹುದೆನ್ನುವುದರ ನಿರೀಕ್ಷೆಯೂ ಇದೆ. ಲಾಹೋರ್ ಸಂಸ್ಥಾನದ ಸೀಖ್ ರಾಜವಂಶವು ನಿಸ್ಸಂತಾನವಾದಾಗ –

"ಅದರ ಅಂತ್ಯವು ಏನಾಗುವದೊ ತಿಳಿಯದು. ಆದಾಗ್ಯೂ ಪೇಶಾವರ ಸೀಮೆಯ ಮೇಲೆ ಅಪೇಕ್ಷಿತವಾಗಿರುವ ಕಾಬೂಲ್ ಜನರು ಅದನ್ನು ತೆಗೆದುಕೊಳ್ಳಲಿಕ್ಕೆ ಬಂದಾರೆಂದೂ ಮತ್ತು ಇಂಗ್ಲಿಷ್ ಸರಕಾರದವರ ಪ್ರಾಂತ್ಯದಲ್ಲಿ ಆ ರಾಜ್ಯ ಇರುವುದರಿಂದ ಅವರು ಜಾಗ್ರತೆಯಾಗಿರುವರೆಂದೂ ಕಾಣುತ್ತದೆ." (೮ನೆಯ ಸಂಚಿಕೆ)

–ಎಂದು ಸಂಪಾದಕರು ನುಡಿಯುತ್ತ ಅ ರಾಜ್ಯವು ಇಂದಲ್ಲ ನಾಳೆ ಈಸ್ಟ್ ಇಂಡಿಯಾ ಕಂಪನಿಯವರ ಕೈವಶವಾಗುವುದು ಅನಿವಾರ್ಯ ಎಂಬ ಮುನ್ಸೂಚನೆಯನ್ನು ಕೊಟ್ಟುಬಿಟ್ಟಿದ್ದಾರೆ.

ನಮ್ಮ ದೇಶದ ಸುದ್ದಿಗಳಲ್ಲದೆ ಕಾಬೂಲ, ಚೀನಾ ದೇಶಗಳಲ್ಲಿ ನಡೆದ ಯುದ್ಧದ ಮತ್ತು ಇತರ ಹಿನ್ನೆಲೆಯ ವಿವರಗಳನ್ನೂ ವಾಚಕರಿಗೆ ಒದಗಿಸಲಾಯಿತು. ಅಷ್ಟೆಲ್ಲ ವಿವರಗಳನ್ನು ಅಂದಿನ ದಿನಗಳಲ್ಲಿ ಕಲೆ ಹಾಕಿದುದು ಅಚ್ಚರಿಯೇ ಸೈ.* ಆಗ ಅಂಚೆಯ ವ್ಯವಸ್ಥೆಯು ಸಹ ವ್ಯಾಪಕವಾಗಿ ರೂಪುಗೊಂಡಿರಲಿಲ್ಲ. ಸಂಪಾದಕನ ವಾರ್ತಾನ್ವೇಷಣೆಯಲ್ಲಿ ಒಮ್ಮೆ ಉತ್ತರ ಹಿಂದೂಸ್ಥಾನದ ಮಿಡಿತೆಗಳು ಅಕಸ್ಮಾತ್ ಕೈಗೆಟಕಿದುವು! 'ಶಿಂಧೂ ದೇಶದಲ್ಲಿಯೂ ಮುಂಬೈಯ ಉತ್ತರ ಶೀಮೆಗಳಲ್ಲಿಯೂ ಸಿಮಲಾ ಎಂಬ ಊರಿನಲ್ಲಿ ಸಹಾ ಮಿಡಿತೆಗಳೆಂಬ ದೊಡ್ಡ ಪತಂಗ ಹುಳಗಳು ಆಕಾಶದ ಮೇಲೆ ಮೋಡಗಳ ಹಾಗೆ ಗುಂಪುಗುಂಪಾಗಿ' ಕೆಳಗಿಳಿದುವಂತೆ.

---

* ಇವು ಇಂಗ್ಲಿಷರು ಕೈಕೊಂಡ ಆಕ್ರಮಣದ ವಿವರಗಳಾದ್ದರಿಂದ ಅವರೇ ಎಲ್ಲ ಪತ್ರಿಕೆಗಳಿಗೆ ಕಳಿಸುತ್ತಿರಲೂ ಸಾಕು. ಹಾಗಿದ್ದರೂ ಮೆವ್‌ಗ್ಲಿಂಗ್ ಅವನ್ನು ತನ್ನದೇ ಆದ ರೀತಿಯಲ್ಲಿ ಸಾದರಪಡಿಸಿದ್ದಾನೆ.

ಇನ್ನೊಂದು ಸಂಚಿಕೆಯಲ್ಲಿ ಹಿಂದುಸ್ಥಾನದ ಅಂದಿನ ಖಾನೇಸುಮಾರಿಯನ್ನು ಕೊಡಲಾಗಿದೆ. ವಿವಿಧ ಸಂಸ್ಥಾನಗಳಿಂದಲೂ ಅಂಕಿ ಸಂಖ್ಯೆಗಳನ್ನು ದೊರಕಿಸಿ ಚರಿತ್ರೆಯನ್ನು ಕೊಡಲಾರಂಭಿಸಿ ಮುಂದುವರಿಸಿದ್ದಾಗಿದೆ. ಬೇರೊಂದು ಸಂಚಿಕೆಯಲ್ಲಿ ಇಂಗ್ಲೆಂಡ್ ದೇಶದ ಆದಾಯ ವೆಚ್ಚಗಳನ್ನು ಹೇಳುವಾಗ ಆ ದೇಶಕ್ಕೆ ದೊಡ್ಡ ಮೊತ್ತದ ಸಾಲವಿದೆಯೆಂಬ ಪ್ರಸಕ್ತಿ ಬಂದಿತು. ಇಂಗ್ಲೆಂಡದಂಥ ಬಲಾಢ್ಯ ಸಾಮ್ರಾಜ್ಯವು ಬಡತನದ ಸ್ಥಿತಿಯಲ್ಲಿದ್ದಿತೆ? ಇಲ್ಲಿದೆ ಸಂಪಾದಕರ ವಿವರಣೆ:

"೧೦ನೆಯ ಕಾಗದದಲ್ಲಿ ಇಂಗ್ಲೆಂಡ್ ರಾಜ್ಯದ ಮೇಲೆ ಸ್ವಲ್ಪ ಕಡಿಮೆ ೮ ನೂರು ಕೋಟಿ ರೂಪಾಯಿ ಸಾಲ ಇರುತ್ತದೆಯೆಂದು ಬರೆದದೆ. ಈ ಮಾತು ವೋದಿದವರು ಅ ರಾಜ್ಯದ ಐಶ್ವರ್ಯಕ್ಕೆ ಕುಂದತ್ವ ಯೋಚಿಸಲಿಕ್ಕೆ ಕಾರಣವಿಲ್ಲ. ಯಾತಕ್ಕೆಂದರೆ ಅಂಥಾ ಸಾಲ ಕೊಟ್ಟು ಅದರ ಬಡ್ಡಿ ಪಡಕೊಳ್ಳುವವರು ಅದೇ ದೇಶಸ್ಥರಾಗಿರುತ್ತಾರೆ. ಹೀಗಿರಲಾಗಿ ಇಷ್ಟು ಸಾಲ ಇರುವುದರಿಂದ ಅರಸ್ಥನಕ್ಕೆ ತ್ರಾಣವುಂಟಾಗುವುದು. ಹ್ಯಾಗೆಂದರೆ ರಾಜ್ಯದಲ್ಲಿ ಏನಾದರೂ ಗುಬಾರು ಎದ್ದರೆ ತಂಮ ಜೀವನಕ್ಕೆ ಅಪಾಯವಾಗುವುದೆಂದು ಹಣವಂದಿಕರು ತಿಳುಕೊಂಡು ಪೂರ್ಣ ಮಮತೆಯಿಂದ ಆಧರಿಸಬೇಕು. ಆ ಸಾಲವಂನು ಕೊಟ್ಟವರು ಅರಸನಿಂದ ತಿರುಗ ಹೊಂದಲಿಕ್ಕೆ ಏನೇನು ಮನಸ್ಸಿಲ್ಲ. ಏಸೆಂದರೆ ಸರಕಾರದವರ ಹಾಗೆ ಅಸಲಿಗೆ ಮೋಸವಿಲ್ಲದೆ ಬಡ್ಡಿ ಕೊಡುವವರು ಯಾರೂ ಇಲ್ಲ. ಆದ ಕಾರಣ ಆ ದೇಶವು ಐಶ್ವರ್ಯದಿಂದ ತುಂಬಿರುತ್ತದೆಯೆಂದು ತಿಳಕೊಳ್ಳಬೇಕು."

ಹೀಗೆ ಈ ಪತ್ರಿಕೆಯ ಸುದ್ದಿಯ ಹರಹು ವ್ಯಾಪಕವಾಗಿದ್ದಿತು. ಅದನ್ನು ಕೊಡುವಲ್ಲಿ ಇಂದಿನ ವೃತ್ತಪತ್ರಿಕೆಗಳ ಕ್ರಮವನ್ನು ಅನುಸರಿಸಲಾಗಿದ್ದಿತು. ಕನ್ನಡ ಪತ್ರಿಕಾ ಪ್ರಪಂಚದ ಈ ಚೊಚ್ಚಲು ಕೃತಿಯು ಹಸಿಬಿಸಿಯಾದ ಎತ್ತುಗಡೆಯಾಗಿರದೆ ಆಧುನಿಕ ಪತ್ರಿಕೋದ್ಯಮದ ಅನೇಕ ಲಕ್ಷಣಗಳನ್ನು ಒಳಗೊಂಡಿದ್ದಿತು.

ಪತ್ರಿಕೆಯು ಹೀಗೆ ವ್ಯವಸ್ಥಿತವಾಗಿ ಮುಂದುವರಿದಿದ್ದಾಗ ಸಂಚಾಲಕರು ಅದರ ಮುದ್ರಣ ಕಾರ್ಯವನ್ನು ಬಳ್ಳಾರಿಗೆ ಸಾಗಿಸಬೇಕೆಂದರು. ಅದರ ಕಾರಣ ಹೀಗಿದೆ :

"ಮಂಗಳೂರು, ಮೈಸೂರು, ತುಮ್ಕೂರು, ಬಳ್ಳಾರಿ, ಶಿವಮೊಗ್ಗ, ಹುಬ್ಬಳ್ಳಿ, ಶಿರಸಿ. ಹೊಂನಾವರ ಮೊದಲಾದ ಸ್ಥಳಗಳಲ್ಲಿ ಕೆಲವು ನೂರು ಮಂದಿ ಈ ಕಾಗದವನ್ನು ಈ ವರೆಗೆ ತೆಗೆದುಕೊಳ್ಳುತ್ತಾ ಬಂದರು. ಮೊದಲಿನ ನಂಬ್ರದ ಕಾಗದಗಳನ್ನು ಛಾಪಿಸಿ ಪ್ರಕಟನ ಮಾಡುವಾಗ್ಯೆ ನಾವು ಮಾಡಿದ ಆಲೋಚನೆ ಈ ಕಾಲದಲ್ಲಿ ಈ ದೇಸಸ್ಥರೊಳಗೆ ನಡಿಯುವದೊ ಏನೊ ಎಂದು ಸ್ವಲ್ಪ ಸಂದೇಹ ಪಡುತ್ತಿದ್ದವು. ಈಗ ಈ ದೇಸಸ್ಥರಲ್ಲಿ ಅನೇಕರಿಗೆ ಕನಡು ಭಾಷೆಯಲ್ಲಿ ಬರೆದ ಒಂದು ಸಮಾಚಾರ ಕಾಗದವನ್ನು ಓದುವದರಲ್ಲಿ ಮತಿ ಆಗವುದೆಂದು ನೋಡಿ ಸಂತೋಷದಿಂದ ಅದನ್ನು ವೃದ್ಧಿಮಾಡುವ ಪ್ರಯತ್ನದಿಂದ ಇನ್ನು ಮುಂದೆ ಅದನ್ನು ಕಲ್ಲಿನಲ್ಲಿ ಛಾಪಿಸದೆ ಬಳ್ಳಾರಿಯಲ್ಲಿ ಇರುವ ಅಕ್ಷರ

ಛಾಪಖಾನೆಯಲ್ಲಿ ಅಚ್ಚುಪಡಿ ಮಾಡಲಿಕ್ಕೆ ನಿಶ್ಚೈಸಿದ್ದೇವೆ. ಆಮೇಲೆ ಕಂನಡ ಶೀಮೆಯ ನಾಲ್ಕು ದಿಕ್ಕುಗಳಲ್ಲಿ ಯಿರುವವರು ಶುದ್ಧವಾದ ಮೊಳೆ ಅಚ್ಚುಗಳಿಂದ ಆಗುವ ಬರಹವನ್ನು ಶುಲಭವಾಗಿ ಓದಬಹುದು, ಇದಲ್ಲದೆ. . .ಹೆಚ್ಚು ವರ್ತಮಾನವಂನೂ ಚರಿತ್ರೆಗಳನ್ನೂ ವಿದ್ಯಾ ಪಾಠಗಳಂನೂ ಬುದ್ಧಿ ಮಾತುಗಳನ್ನೂ ಬರಿಯುವುದಕ್ಕೆ ಸ್ಥಳ ಶಿಕ್ಕುವುದು.”

ಇದರ ಹಿಂದಿರುವ ಕನ್ನಡ ಪ್ರಜ್ಞೆಯನ್ನು ಗಮನಿಸಬೇಕು. ಮೈಸೂರು, ಮದ್ರಾಸ ಮತ್ತು ಮುಂಬಯಿ ವಿಭಾಗಗಳಲ್ಲಿಯ ಆಗಿನ ಕನ್ನಡಿಗರ ನಡುವೆ ಬಳಕೆಯೇ ಇರದಿದ್ದಾಗ ಅವರಲ್ಲಿ ‘ನಾವು ಕನ್ನಡಿಗರು’ ಎಂಬ ಭಾವನೆ ಬರುವುದಾದರೂ ಹೇಗೆ? ಆದರೆ ಈ ಪತ್ರಿಕಾಕರ್ತರು ಮಾತ್ರ ಕನ್ನಡಿಗರ ವಿಷಯದಲ್ಲಿ ಸಮಷ್ಟಿ ಭಾವವನ್ನಿಟ್ಟುಕೊಂಡಿದ್ದರು. ಅದೇ ಭಾವನೆಯಿಂದ ಪತ್ರಿಕೆಯನ್ನು ವ್ಯಾಪಕವಾದ ರೀತಿಯಲ್ಲಿ ಹೊರತರಬೇಕೆಂದು ಬಯಸಿದರು. ಇಷ್ಟೇ ಅಲ್ಲ. ‘ಮಂಗಳೂರು ಸಮಾಚಾರ’ ವೆಂಬ ಹೆಸರನ್ನು ಬಿಟ್ಟುಕೊಟ್ಟು ಈ ಕಾಗದವು ಕನ್ನಡ ಭಾಷೆಯನ್ನಾಡುವ ಸಕಲ ಜನರಲ್ಲಿ ಪ್ರಸಿದ್ಧಿಯಾಗಬೇಕೆಂಬ ಇಚ್ಛೆಯಿಂದ ‘ಕಂನಡ ಸಮಾಚಾರ’ವೆಂಬ ಹೊಸ ಹೆಸರಿನಿಂದ ಹೊರಡುವುದೆಂದು ಘೋಷಿಸಿ ಕನ್ನಡತ್ವಕ್ಕೆ ವೀಳ್ಯವನ್ನೆತ್ತಿದರೆಂದು ಹೇಳಬೇಕಲ್ಲವೆ?

ಹೀಗೆ ಪತ್ರಿಕೆಯು ಬಳ್ಳಾರಿಗೆ ಸ್ಥಳಾಂತರವಾಯಿತು. ಮಾರ್ಚ್ ೧೮೪೪ರಿಂದ ‘ಕಂನಡ ಸಮಾಚಾರ’ ವೆಂಬ ಹೆಸರಿನಿಂದ ಪ್ರಕಟವಾಗತೊಡಗಿತು. ಆದರೆ ಅದನ್ನು ನೋಡಿಕೊಳ್ಳಬೇಕಿದ್ದ ಲಂಡನ್ ಮಿಶನ್ನಿನ ರೀಡ್ ಬಳ್ಳಾರಿಯಲ್ಲಿ ತೀರಿಕೊಂಡ ಮೇಲೆ (೧೮೪೭) ಕರ್ತೃತ್ವಶಾಲಿಯಾದ ಮಿಶನರಿ ಇರಲಿಲ್ಲ. ದೂರದ ಮಂಗಳೂರಲ್ಲಿ ಕುಳಿತು ಮೆವ್‌ಗ್ಲಿಂಗ್ ವ್ಯವಸ್ಥಿತವಾಗಿ ಲೇಖನ ಸಂಪಾದನದ ಹೊಣೆಯನ್ನು ನಿರ್ವಹಿಸಲಾಗಲಿಲ್ಲ. ಆ ವರ್ಷಾಂತ್ಯದವರೆಗೆ ಮಾತ್ರ ಪತ್ರಿಕೆಯು ನಡೆದು ನಿಂತು ಹೋಯಿತು.

ಮುಂದೆ ಕೆಲವೇ ವರ್ಷಗಳಲ್ಲಿ ದೇಶೀಯರು ಪತ್ರಿಕಾ ರಂಗದಲ್ಲಿ ಕಾಲಿರಿಸಿದುದು ಅಚ್ಚರಿಯೆನಿಸುವಂತಿದೆ. ವಿದೇಶದಿಂದ ಬಂದ ಮಿಶನರಿಗಳು ಮುದ್ರಣ ಸೌಲಭ್ಯವನ್ನು ಹೊಂದಿದವರಾಗಿ ಪತ್ರಿಕೆ ಹೊರಡಿಸಿದ್ದರೆ ಅದು ಸಹಜವಾದುದೇ. ಆದರೆ ಮರಾಠಿಯ ಪ್ರಭಾವದಲ್ಲಿದ್ದುಕೊಂಡು ಕನ್ನಡ ಸಾರಸ್ವತವಾಗಲೀ ವಾಚಕ ವೃಂದವಾಗಲೀ ಸೃಷ್ಟಿಯಾಗಿರದಿದ್ದಾಗ, ದೇಶೀ ಮುದ್ರಣವು ನೆಲೆಗೊಂಡಿರದಿದ್ದಾಗ ಬೆಳಗಾಂವಿಯಿಂದ ಕನ್ನಡ ಪತ್ರಿಕೆಯೊಂದನ್ನು ಹೊರಡಿಸಲೆಳಸಿದುದು ಸಾಹಸದ ಮಾತೇ ಸರಿ. ಅಷ್ಟೇ ಅಲ್ಲ. ಅದನ್ನು ಕನಿಷ್ಠ ೬ ವರ್ಷಗಳ ವರೆಗಾದರೂ ನಡೆಸಿಕೊಂಡು ಬರಲಾಯಿತು.

ಪತ್ರಿಕೆಯ ಹೆಸರು ‘ಸುಬುದ್ಧಿ ಪ್ರಕಾಶ’ ಎಂಬುದು. ಇದು ೧೮೪೯ರಲ್ಲಿ ಆರಂಭವಾಗಿ ಕಲ್ಲಚ್ಚಿನಲ್ಲಿ ಮುದ್ರಣಗೊಳ್ಳುತ್ತಿತ್ತೆಂಬ ಮಾತು ಈ ಹಿಂದೆ ಬಂದಿದೆ <೨೧೩>. ಸಂಚಿಕೆಗೆ ಕೊಟ್ಟಿರುವ ನಂಬರನ್ನು ಗಮನಿಸಿದರೆ ಇದು ವಾರ ಇಲ್ಲವೇ ಪಕ್ಷ ಪತ್ರಿಕೆಯಿರಬೇಕೆಂದು ತೋರುತ್ತದೆ. ಅದರ ಚಂದಾ ಹಣ ಪ್ರತಿ ಸಂವತ್ಸರಕ್ಕೆ ೬ ರೂ; ತಿಂಗಳಿಗೆ ೮ ಆಣೆ.[2]

ಆಗಿನ ದಿನಮಾನಕ್ಕೆ ಇದು ಹೆಚ್ಚೆನಿಸಬಹುದಾದರೂ ಮುದ್ರಣದ ಕಷ್ಟಸಾಧ್ಯತೆಯನ್ನು ಗಮನಕ್ಕೆ ತಂದುಕೊಳ್ಳತಕ್ಕುದು.

ದೊರೆತ ಆ ಸಂಚಿಕೆಯಲ್ಲಿ ಅಯೋಧ್ಯೆ, ಮನುಷ್ಯರ ದೀರ್ಘಾಯುಷ್ಯ, 'ಖಬಿಣದ ಮಾರ್ಗ'(ರೇಲ್ವೆ), ಮುಲ್ಕೀ ಖಾತೆಯ ವೃತ್ತಾಂತ ಮತ್ತು ಬಿಡಿ ವಿಷಯಗಳಿವೆ. ಇದರ ವಿಷಯ, ಶೈಲಿಯ ದೃಷ್ಟಿಯಿಂದ ಈ ಕೆಳಗಿನ ಅವತರಣಿಕೆಗಳನ್ನು ಪರಿಶೀಲಿಸಬೇಕು :

"ಬಂಗಾಲದೊಳಗೆ ನಡೆದ ಸಾಂಥಲ ಜನರ ಬಂಡು ಯಿನ್ನು ಪರಿಯಂತಕ್ಕೆ ಹಾಂಗೆ ನಡೆದಿದೆ. ಮತ್ತು ಈ ಒಂದು ಉತ್ಪನ್ನವಾದ ಯಾವ ಕಾರಣವಂನು ಮೊದಲು ಛಾಪಿಸೋಣದರಲ್ಲಿ ಬಂದಿತೋ ಅದು ಮೃಷಾ ಅದೇ, ಹೀಂಗೆ ತಿಳಿದು ಬರುತ್ತದೆ. .

"ಶ್ರೀಮಂತರಾದ ಶ್ರೀ ದಾಜೀಸಾಹೇಬ ಚಂದ್ರಚೂಡ ಇವರು ತಾರೀಖು ೧೪ನೆಯ ಸಪಟಂಬರ ದಿವಸಾ ಮರಣಹೊಂದಿದರು. ಇವರ ಮಾತೋಶ್ರಿಯವರ ಹೆಸರ್ಲೆ ೩೦ ಸಾವಿರ ರೂಪಾಯಿದ ಜಾಗೀರ ನಡೆದದೆ."

ಇತ್ತ, 'ಕಂನಡ ಸಮಾಚಾರ' ನಿಂತುಹೋದ ಮುಂದಿನ ಹಲವು ವರ್ಷ, ಮಿಶನರಿಗಳ ಪತ್ರಿಕಾರಂಗವು ಸ್ತಬ್ಧವಾಗಿದ್ದಿತು. ಮತ್ತೆ ಮೆವ್‌ಗ್ಲಿಂಗರೇ ಮುಂದೆ ಬಂದು ಕಂನಡ ವಾರ್ತಿಕವನ್ನು (Canerese Messenger) ಹೊರಡಿಸಿದರು (೧೮೫೭). ಸಿಪಾಯಿ ದಂಗೆಯೆದ್ದಾಗ ವಾರ್ತೆಗಳನ್ನು ಪೂರೈಸುವ ಅಗತ್ಯವನ್ನು ಮನದಂದು ಈ ಪತ್ರಿಕೆ ಆರಂಭವಾಗಿರಬೇಕು. ದಂಗೆಯ ವಿಷಯವಾಗಿ, ಅದರ ೬ನೆಯ ಸಂಚಿಕೆಯಲ್ಲಿ (೧೯-೯-೧೮೫೭) ಬಂದ ವರ್ತಮಾನದ ಬಗೆಯನ್ನು ನೋಡಬಹುದು :

"ಕಾಟಕಾಯಿ ಹುಟ್ಟಿದ ಮೊದಲನೇ ತಿಂಗಳಲ್ಲಿ ಹಿಂದು ಜನರೂ ಮುಸಲ್ಮಾನರೂ ಆದ ಸಿಪಾಯಿಗಳು, ಕಂಪನಿ ಸರಕಾರದವರು ತಮ್ಮ ಜಾತಿಗಳನ್ನು ಕೆಡಿಸಿ ತಮ್ಮ ಪೂಜೆಗಳನ್ನು ನಿಲ್ಲಿಸಿ ತಮ್ಮನ್ನು ಅಂಕೆಯಿಂದಾ ಕ್ರೈಸ್ತಮತದಲ್ಲಿ ಶೇರಿಸುವ ಆಲೋಚನೆಯಲ್ಲಿ ಇದ್ದಾರೆಂಬ ಭಯದಿಂದ ರಾಜದ್ರೋಹದಲ್ಲಿ ಸೇರಿದವರೆಂದು ಅನೇಕರು ನೆನಸಿದರು. ಕಂಪನಿ ಸರಕಾರದವರು ಅಂಥಾ ಆಲೋಚನೆ ಮಾಡುತ್ತಾರೆಂಬ ಮಾತು ಸ್ವಸ್ಥಚಿತ್ತರಿಗೆಲ್ಲಾ ಬರೇ ಸುಳ್ಳೆಂದು ಗೊತ್ತದೆ. . . ಕಂಪನಿಯವರು ನೂರು ವರುಷದಿಂದ ಹಿಂದೂ ದೇಶದಲ್ಲಿ ದೊರೆತನ ಮಾಡುತ್ತಾ ಬಂದು ಯಾವ ಕಾಲದಲ್ಲಿಯೂ ಯಾವ ಸ್ಥಳದಲ್ಲಿಯೂ ಹಿಂದೂಸ್ಥಾನದಲ್ಲಿ ಹುಟ್ಟಿದ ಒಬ್ಬ ಮನುಷ್ಯನಂನಾದರೂ ನಯದಿಂದಾಗಲಿ ಭಯದಿಂದಾಗಲಿ ಕ್ರೈಸ್ತ ಮತದಲ್ಲಿ ಸೇರಿಸಿದರೆಂಬ ಸುದ್ದಿಯೇ ಹುಟ್ಟಲಿಲ್ಲಾ."

'ಕಂನಡ ವಾರ್ತಿಕ'ದಲ್ಲಿ ಮಾತ್ರ ಬಾಸೆಲ್ ಮಿಶನ್‌ಗೆ ಸಂಬಂಧಿಸಿದ ವಾರ್ತೆಗಳು ತುಸು ಕಾಣಿಸಿಕೊಂಡವು. ಏಕೆಂದರೆ, ಆ ವೇಳೆಗೆ ಮಂಗಳೂರು ಮತ್ತು ಇತರ ಕಡೆಗಳಲ್ಲಿ ಮಿಶನ್ ಕೇಂದ್ರಗಳು ಚೆನ್ನಾಗಿ ನೆಲೆಗೊಂಡಿದ್ದುವು. ಆದರೆ ಈ ಪತ್ರಿಕೆಯೂ ಒಂದು ವರ್ಷಕ್ಕಿಂತ ಹೆಚ್ಚು ಕಾಲ ನಡೆಯಲಿಲ್ಲ. ೧೮೫೭-೫೮ರ ತಮ್ಮ ವಾರ್ಷಿಕ

ವರದಿಯಲ್ಲಿ ಅಪರೋಕ್ಷವಾಗಿ ಆ ಮಾತನ್ನು ಒಪ್ಪಿಕೊಂಡಿದ್ದಾರೆ.* ಹಾಗೆ ನೋಡಿದರೆ ಪತ್ರಿಕೆಯು ಬಿಡಿ ಮೊಳೆಗಳ ಮುದ್ರಣದಿಂದ ಸೊಗಸಾಗಿ ಕಾಣಿಸುತ್ತಿತ್ತು. ಪತ್ರಿಕೆಯ ಭಾಷಾ ಶೈಲಿಯಲ್ಲಿಯೂ ಸುಧಾರಣೆಯಾಗಿದ್ದಿತು. ಆದರೂ ಪತ್ರಿಕೆಯನ್ನು ನಡೆಸುವಲ್ಲಿ ಮುಂದಾಗಿದ್ದ ಮೆವ್‌ಗ್ಲಿಂಗನಿಗೆ ಕೊಡಗಿನ ಶೈಕ್ಷಣಿಕ ಹಾಗೂ ಇತರ ಕೆಲಸಗಳ ಒತ್ತಡವಿದ್ದ ಮೂಲಕ ಪತ್ರಿಕೆಯತ್ತ ಗಮನ ಕೊಡುವದಾಗಲಿಲ್ಲ.

## 73 ಪತ್ರಿಕೋದ್ಯಮದ ಮೊದಲ ಘಟ್ಟ

ಮೇಲಿನ ಮೂರು ಪತ್ರಿಕೆಗಳು ಬಿಡಿಯಾದ ಪ್ರಯತ್ನಗಳಷ್ಟೆ. ಕನ್ನಡ ಪತ್ರಿಕಾ ವ್ಯವಸಾಯವು ೧೮೬೦ರ ಒಳಹೊರಗೆ ನಿಯಮಿತವಾಗಿ ಆರಂಭವಾಯಿತು. ಬೆಂಗಳೂರು, ಧಾರವಾಡ ಮತ್ತು ಮಂಗಳೂರು–ಈ ಮುಖ್ಯ ನಗರಗಳಿಂದ ಪತ್ರಿಕೆಗಳು ಹೊರಡಲಾರಂಭಿಸಿದುವು. ಕ್ರಿ.ಶ. ೧೮೫೯ ಜೂನ್ ತಿಂಗಳಲ್ಲಿ ಹೊರಬಂದ 'ಮೈಸೂರು ವೃತ್ತಾಂತ ಬೋಧಿನಿ'ಯು ಮೈಸೂರ ಕಡೆಯ ಮೊತ್ತ ಮೊದಲಿನ ವಾರಪತ್ರಿಕೆಯಾಗಿದೆ. (ಈ ಪತ್ರಿಕೆಗೆ ಮುಮ್ಮಡಿ ಕೃಷ್ಣರಾಜರು ಮೂರು ಸಾವಿರ ರೂ.ಗಳ ಅನುದಾನ ನೀಡಿದ್ದರು. ಪತ್ರಿಕೆ ಎನ್ನುವುದು ಒಂದು ಹೊಸ ಉಪಕ್ರಮವೆಂದು ಅವರು ಬಗೆದದ್ದು ಮನನೀಯವಾಗಿದೆ.) ೧೮೬೪ರ ವರೆಗೆ ಅದು ಬದುಕಿದ್ದಿತು. ಪತ್ರಿಕೆಯ ಸಂಪಾದನ, ನಿರ್ವಹಣಗಳಲ್ಲಿ ತೊಡಗಿದ್ದ ಭಾಷ್ಯಂ ತಿರುಮಲಾಚಾರ್ಯ ಹಾಗೂ ಭಾಷ್ಯಾಚಾರ್ಯ (ತಂದೆ ಮಗ) ಇಬ್ಬರೂ ಸೇರಿ ೧೮೬೫ನೆಯ ಜುಲೈ ತಿಂಗಳಿನಿಂದ 'ಕರ್ನಾಟಕ ಪ್ರಕಾಶಿಕಾ' ಎಂಬ ಪಕ್ಷಪತ್ರಿಕೆಯನ್ನು ಹೊರಡಿಸಲಾರಂಭಿಸಿದರು.** ೧೮೬೮ರಲ್ಲಿ ಅದೂ ನಿಂತಿತು. ಮುಂದೆ ತಿರುಮಲಾಚಾರ್ಯರು ೨೧-೧೧-೧೮೭೩ರಂದು ಅದನ್ನು ಪುನಃ (ವಾರಪತ್ರಿಕೆಯಾಗಿ) ಆರಂಭಿಸಿದಾಗ ಮಾತ್ರ, ಬಾಲಗ್ರಹ ಪೀಡಿತವಾಗದೇ, ೩೧-೧೦-೧೮೯೬ರವರೆಗೆ ಬಾಳಿತು. ಈ ಮಧ್ಯದಲ್ಲಿ ತಂದೆ–ಮಕ್ಕಳೀರ್ವರೂ ಮಡಿಯಲು (೧೮೭೭, ೧೮೮೪) ಭಾಷ್ಯಂ ಮನೆತನದವರೇ ಪತ್ರಿಕೆಯನ್ನು ಮುಂದುವರಿಸಿಕೊಂಡು ಹೋದುದು ಗಣನೀಯವಾಗಿದೆ.[೮] ಮೈಸೂರು ಸಂಸ್ಥಾನದಲ್ಲಿ ಪತ್ರಿಕೆ ಹಾಗೂ ಅದರ ವಾಚನವನ್ನು ಜನಮನದಲ್ಲಿ ರೂಢಿಸಿದ ಶ್ರೇಯಸ್ಸು ಇವರಿಗೆ ಸಲ್ಲತಕ್ಕುದು.

---

* Since July 1857 the Canerese Messenger has been published every fortnight but has not hitherto met with sufficient support.

** ೧೮೬೫ರಲ್ಲಿ ಜನ್ಮ ತಾಳಿದ 'ಕರ್ನಾಟಕ ಪ್ರಕಾಶಿಕಾ' ಕನ್ನಡದ ಮೊತ್ತಮೊದಲಿನ ವಾರಪತ್ರಿಕೆಯೆಂದು ನಾಡಿಗ ಕೃಷ್ಣಮೂರ್ತಿಯವರು ಹೇಳುತ್ತಾರೆ (Kannada Studies No. 2. 1965. ಪುಟ.17) ಅದು ನಿಜವಲ್ಲ. ಅದಕ್ಕಿಂತ ಆರು ವರ್ಷ ಮೊದಲು ಮೈಸೂರು ಬೋಧಿನಿ ಹೊರಟಿದೆ. ೧೮೬೨ರ ವರೆಗಿನ ಅದರ ನಾಲ್ಕು ಸಂಪುಟಗಳು ಬ್ರಿಟಿಶ ಮ್ಯೂಸಿಯಂ ಲೈಬ್ರರಿಯಲ್ಲಿ ಇವೆ.

'ಮೈಸೂರು ವೃತ್ತಾಂತ ಬೋಧಿನಿ'ಯು ಹಳೆಯ ಮೈಸೂರಿನ ಮಟ್ಟಿಗೆ ಆದ್ಯ ಪತ್ರಿಕೆ. ೧೮೫೭ರ ಸ್ವಾತಂತ್ರ್ಯದ ವಿಪ್ಲವ ಮುಗಿದ ಅನಿತರಲ್ಲಿಯೇ ಈ ಪತ್ರಿಕೆ ಹೊರಟಿತು. ಹೀಗಾಗಿ, ಹೇಳಬೇಕೆಂದಿದ್ದುದನ್ನು ಧೈರ್ಯದಿಂದ ಹೇಳುವ ಮನೋಭಾವ ಅಲ್ಲಿ ಕಂಡು ಬರುತ್ತದೆ. ಅದರ ಮೊದಲ ಸಂಚಿಕೆಯಲ್ಲಿ "ನಾವು ನಿಜವನ್ನು ನುಡಿಯುತ್ತೇವೆ. ನಿಜವನ್ನು ಕೇಳಲು ಅಪೇಕ್ಷಿಸುತ್ತೇವೆ. ನಿಜವನ್ನು ನಂಬುತ್ತೇವೆ" ಎಂಬ ಧ್ಯೇಯ ವಾಕ್ಯ ಇದ್ದದ್ದು ಗಮನಾರ್ಹ. ಜೊತೆಗೆ ಜನಹಿತ ದೃಷ್ಟಿ ಓತಪ್ರೋತವಾಗಿ ಇದ್ದಿತು. "ಬೆಂಗಳೂರ ಷಹರಿನೊಳಗೆ ಕೆಲವು ದೊಡ್ಡ ಬೀದಿಗಳು ವಿನಾ ಸಣ್ಣ ಸಂದುಗಳೆಲ್ಲದರಲ್ಲಿಯೂ ಕೇಂಪೇಗೌಡನ ಕಾಲದ ಕಶ್ಮಲವೆಲ್ಲವೂ ಭದ್ರಪಡಿಸಲ್ಪಟ್ಟದೆ. ಅವುಗಳನ್ನು ಕ್ರಮಪಡಿಸದೇ ಇರುವುದನ್ನು ಕುರಿತು ನಾವೆಷ್ಟೋ ಸಲ ಮುನಿಸಿಪಾಲಿಟಿಯವರಿಗೆ ತಿಳಿಸಿದೆವು."

'ಬೋಧಿನೀ' ಹಾಗೂ 'ಪ್ರಕಾಶಿಕೆ' ಇವೆರಡೂ ಪತ್ರಿಕೆಗಳಲ್ಲಿ ಟೀಕೆ ಟಿಪ್ಪಣಿಗಳು ಯಥೇಚ್ಛವಾಗಿ ಕಾಣಿಸಿಕೊಳ್ಳುತ್ತಿದ್ದವು. 'ಸಂಪಾದಕೀಯ' ಲೇಖನ ನಿಯಮಿತವಾಗಿ ಪ್ರಕಟವಾಗುತ್ತಿತ್ತು. 'ಇಂಡಿಯಾ ಮಿತ್ರ' ಎಂಬ ಕಲಕತ್ತೆಯ ಪತ್ರಿಕೆಯವರು ಮೈಸೂರಿನ ಆಡಳಿತವನ್ನು ಟೀಕಿಸಿ ಬರೆದಿದ್ದರೆಂದು ಕಾಣುತ್ತದೆ. ಭಾಷ್ಯಂ ಅದಕ್ಕೆ ಪ್ರತ್ಯುತ್ತರ ಕೊಟ್ಟದ್ದುಂಟು. 'Bangalore Spectator' ಎನ್ನುವ ಆಂಗ್ಲ ಪತ್ರಕರ್ತರೂ 'ಕರ್ನಾಟಕ ಪ್ರಕಾಶಿಕಾ'ದವರೂ ಆಗಾಗ ಆರೋಪ-ಪ್ರತ್ಯಾರೋಪಗಳಲ್ಲಿ ತೊಡಗಿದ್ದುದ್ದನ್ನು ಗುರುತಿಸಬಲ್ಲೆವು. ಅವುಗಳ ಪರಿಶೀಲನೆ ಮಾಡಿದಾಗ, ಅಂದಿನ ಜನತೆಯಲ್ಲಿ ಪತ್ರಿಕಾ ಪ್ರಜ್ಞೆ ಕ್ರಮೇಣ ಬೆಳೆದಿತ್ತೆಂಬುದು ವ್ಯಕ್ತವಾಗುತ್ತದೆ. ಆಗೀಗ ಬೇರೆಯವರ ಪ್ರತಿಸ್ಪಂದನದ ಲೇಖನಗಳೂ ಇರುತ್ತಿದ್ದವು. 'ಕರ್ನಾಟಕ ಪ್ರಕಾಶಿಕೆ'ಯಲ್ಲಿ 'ಬ್ರಾಹ್ಮಣರಿಗೆ ಸಮುದ್ರಯಾನವು ಶಾಸ್ತ್ರಾನುಗೃಹೀತವೂ' ಎಂಬ ವಿಷಯವಾಗಿ ಸತತ ಮೂರು ತಿಂಗಳ ಕಾಲ ಲೇಖನಮಾಲೆಯೊಂದು ಪ್ರಕಟವಾಗಿದೆ. (ಡಿಸೆಂಬರ್ ೧೮೭೮ - ಫೆಬ್ರವರಿ ೧೮೭೯). ಶಾಸ್ತ್ರಾಧಾರಗಳನ್ನು ಕೊಟ್ಟಾದ ಮೇಲೆ ಕೆಳಗಿನ ಈ ಎರಡು ಕಾರಣಗಳಿಂದ ಸಮರ್ಥಿಸಲಾಗಿದೆ. ಒಂದು, ಬ್ರಾಹ್ಮಣ ಅಗ್ನಿಯಂತೆ ಶುದ್ಧ. ಆದ್ದರಿಂದ ವಿದೇಶಿವೃತ್ತಿಗಳು ಅಬಾಧಕ. ಇನ್ನೊಂದು. ಬ್ರಾಹ್ಮಣ ಎಷ್ಟೆಂದರೂ ರಾಜರನ್ನು ಅನುಸರಿಸಿ ಧನಾರ್ಜನೆ ಮಾಡುವವ. ಆ ರಾಜರು ಪರದೇಶದಲ್ಲಿ ಇದ್ದರೆ, ಅಲ್ಲಿಗೆ ಹೋಗಲೇಬೇಕಲ್ಲ!

ಕ್ರಿ.ಶ. ೧೮೭೩ರಲ್ಲಿ ಪುನರ್ಜನ್ಮ ಹೊಂದಿದ್ದ 'ಕರ್ನಾಟಕ ಪ್ರಕಾಶಿಕಾ' ಕನ್ನಡ-ಇಂಗ್ಲಿಷ್ ಎರಡೂ ಭಾಷೆಯ ಲೇಖನಗಳನ್ನು ಒಳಗೊಂಡಿದ್ದಿತು. ಅದರಲ್ಲಿ 'ತಂತೀ ವರ್ತಮಾನ ಸಂಗ್ರಹ', 'ಗೆಜೆಟ್ಟಿನ ಸಾರಾಂಶ,' 'ಒಳದೇಶ ಮತ್ತು ತಾಲ್ಲೂಕಿನ ವೃತ್ತಾಂತ,' 'ನೈಮಿತ್ತಿಕ ವಿಷಯನ್ಯಾಸವು,' (occasional notes) ಮುಂತಾದ ವಿಷಯಗಳಿದ್ದುವು. ಅದರ ಬರವಣಿಗೆಯು ಪ್ರೌಢ ಸರಣಿಯಿಂದ ಕೂಡಿದ್ದು ಪುರೋಗಾಮಿ ದೃಷ್ಟಿಯುಳ್ಳದ್ದಾಗಿತ್ತು. ಜೊತೆಗೆ ಅಂದಿನ ರಾಜ್ಯಾಡಳಿತವನ್ನು ಟೀಕಿಸುವ ಧೈರ್ಯವನ್ನು

ತೋರಿತು. ಅದರ ಈ ರಾಜಕೀಯ ಧೋರಣೆಯಿಂದಾಗಿಯೇ ಪತ್ರಿಕೆಯು ೧೮೬೭ರ ಸುಮಾರಿಗೆ ನಿಂತುಹೋದದ್ದು. ವಿಚಾರ ಸ್ವಾತಂತ್ರ್ಯವನ್ನು ತೋರಿದ ಆದ್ಯ ಪತ್ರಿಕೆಯೆಂದು ಅದರ ಹಿರಿಮೆಯಾಗಿದೆ.

ಈ ಪತ್ರಿಕೆಯು ತನ್ನ ೨೭-೯-೧೮೮೦ರ ಸಂಚಿಕೆಯಲ್ಲಿ ಚಾಮರಾಜರ ವಿದ್ಯಾಭ್ಯಾಸದ ಕುರಿತು ಸೂಕ್ಷ್ಮವಾಗಿ ಆಕ್ಷೇಪಿಸಿದ ಬಗೆಯನ್ನು ಇಲ್ಲಿ ಕೊಡುತ್ತಿದ್ದೇವೆ. ಅದರಿಂದ ಪತ್ರಿಕೆಯ ಸ್ವತಂತ್ರ ಮನೋಭಾವವನ್ನೂ ಲೇಖನ ಶೈಲಿಯನ್ನೂ ಗ್ರಹಿಸಬಹುದಾಗಿದೆ.

"ಎಲ್ಲ ವಿಷಯಗಳಲ್ಲಿಯೂ ನಾವು ದುರಾಕ್ಷೇಪ ಮಾಡತಕ್ಕವರೆಂಬ ಅಪಪ್ರಥೆಗೆ ವಳಗಾಗುವ ಅಪೇಕ್ಷೆ ನಮಗೆ ಯೆಂದಿಗೂ ಇಲ್ಲವು. . . ಮುಖ್ಯವಾಗಿ ವರ್ಧಿಷ್ಣುಗಳಾದ ಶ್ರೀಮನ್ಮಹಾರಾಜರವರ ವಿಷಯದಲ್ಲಿ ಮೊದಲಿಂದ ನಾವು ತಿಳಿಸುವ ಅಂಶವೆಲ್ಲ ಅವರ ಶ್ರೇಯಸ್ಸನ್ನು ಕುರಿತದ್ದಾಗಿಯೂ ಅವರ ಪುರೋಭಿವೃದ್ಧಿಯನ್ನು ಉದ್ದೇಶಿಸಿದ್ದಾಗಿಯೂ ಇರುವುದೆಂದು ನಾವು ಕರಣತ್ರಯ ಶುದ್ಧಿಯಿಂದ ಹೇಳುತ್ತೇವೆ. . ದರ್ಬಾರ್‌ಗಳು ವಗೈರೆ ಪ್ರಬಲ ಸಂದರ್ಭಗಳಲ್ಲಿ ಮಹಾರಾಜರು ಕೆಲವು ಮಾತುಗಳನ್ನು ಸ್ವಭಾಷೆಯಲ್ಲಾಗಲೀ ಇಂಗ್ಲಿಷ್‌ನೊಳಗಾಗಲೀ ನುಡಿಯುವರಾದರೆ ಬಹಳ ಶ್ಲಾಘ್ಯವಾಗಿರುವದು. ಅಷ್ಟಕ್ಕೆ ಅವಕಾಶವಿಲ್ಲದೆ ಅವರು ಮೌನವಾಗಿದ್ದದ್ದರಿಂದ ಅವರಿಗೆ ವಿದ್ಯಾಭ್ಯಾಸ ಮಾಡಿದ ಕ್ರಮದಲ್ಲಿ ವುಂಟಾದ ಲೋಪವೇ ಕಾರಣವೆಂದು ಯೆಣಿಸಬೇಕಾಯಿತು. . .ಮುಖ್ಯವಾಗಿ ರಾಜ್ಯಾಧಿಪತ್ಯ ಮಾಡತಕ್ಕವರಿಗೆ ಮೊದಲನೆಯದಾಗಿಯೂ ಅತ್ಯಂತ ಅವಶ್ಯಕವಾಗಿಯೂ ಇರುವ ವಿಷಯ ಅಧಿಕಾರಿಗಳಿಂದ ಉಪೇಕ್ಷಿಸಲ್ಪಟ್ಟಿತಲ್ಲ ಯೆಂದೂ ಬಹಳ ಚಿಂತಿಸುತ್ತೇವೆ."[೧೦]

ಇತ್ತ ಧಾರವಾಡದಲ್ಲಿ (ಕನ್ನಡ) **ಜ್ಞಾನಬೋಧಕವು** ತಲೆದೋರಿತು (ನವ್ಹೆಂಬರ್ ೧೮೬೧). ಅದರ ಸಂಪಾದಕರು ಯಾರೆಂಬುದನ್ನು ಮೊದಲ ಸಂಚಿಕೆಯಲ್ಲಿ ಕಾಣಿಸಿಲ್ಲವಾದರೂ ವೆಂಕಟ ರಂಗೋ ಕಟ್ಟಿಯವರ ಹೆಸರು ವಿಶೇಷವಾಗಿ ಕಂಡುಬರುವುದರಿಂದ ಅವರೇ ಇದರ ನಿರ್ವಾಹಕರಿದ್ದರೆಂದು ಹೇಳಬಹುದು. 'ಕನ್ನಡ ಭಾಷೆಯಲ್ಲಿ ಪುಸ್ತಕಗಳನ್ನು ಛಾಪಿಸಿ ಪ್ರಸಿದ್ಧಿ ಮಾಡುವ ಮಂಡಳಿ' ಎಂಬುದೊಂದು ಸಂಸ್ಥೆಯು ಈ ಪತ್ರಿಕೆಯನ್ನು ಹೊರಡಿಸುತ್ತಿದ್ದುದಾಗಿ ಮೊದಲ ಸಂಚಿಕೆಯ ಒಳಪುಟದಲ್ಲಿ ಕಾಣಿಸಲಾಗಿದೆ. ಅದುವೆ Canerese Vernacular Society. ಸರಕಾರೀ ಅಧಿಕಾರಿಗಳು ಮತ್ತು ಶಿಕ್ಷಕರು ಅದರ ಸದಸ್ಯರಿದ್ದರು. ಸರಕಾರದ ಶಿಕ್ಷಣ ಖಾತೆಗೆ ಅನುವರ್ತಿಯಾಗಿ ಈ ಸಂಸ್ಥೆಯಿದ್ದಿತು. ಸುರುವಿಗೆ ಇದರ ಮುದ್ರಣವು ಧಾರವಾಡದಲ್ಲಿಯ ಸನ್ಮಾರ್ಗದರ್ಶಕ ಛಾಪಖಾನೆಯಲ್ಲಿ ನಡೆಯುತ್ತಿದ್ದರೂ ಸಂಪಾದನ, ಪ್ರಕಾಶನಗಳ ಕಾರ್ಯವು ಬೆಳಗಾಂವಿಯ

ಸರ್ದಾರ್ ಹೈಸ್ಕೂಲಿನಿಂದ ನಡೆಯುತ್ತಿದ್ದಿತು. ಮರಾಠಿಯಲ್ಲಿಯೂ ಕೆಲವು ಲೇಖನ, ಪ್ರಕಟನೆಗಳು ಇರುತ್ತಿದ್ದವು.

ಪತ್ರಿಕೆಯ ಸ್ವರೂಪದ ಕಲ್ಪನೆ ಬರುವ ದೃಷ್ಟಿಯಿಂದ ಮೊದಲ ಸಂಚಿಕೆಯ ಅನುಕ್ರಮಣಿಕೆಯನ್ನು ಕೊಡಬಯಸಿದೆ:–

೧ "ಕನ್ನಡ ಭಾಷೆಯಲ್ಲಿ ಪುಸ್ತಕಗಳನ್ನು ಛಾಪಿಸಿ ಪ್ರಸಿದ್ಧ ಮಾಡುವ ಮಂಡಳಿಯ" ಪ್ರಕಟನೆಯು.

೨ ಪ್ರಸ್ತಾವನೆ

೩ ಶಿಕ್ಷಣ ಪದ್ಧತಿಯು [ಮರಾಠಿಯಲ್ಲಿದೆ]

೪ ಚಮತ್ಕಾರಿಕ ವಿಷಯಗಳು

೫ ವರ್ತಮಾನಗಳು

ಇದರಲ್ಲಿಯ ವರ್ತಮಾನಗಳು ಸರಕಾರೀ ಚಟುವಟಿಕೆಗಳಿಗೇ ಹೆಚ್ಚಾಗಿ ಸಂಬಂಧಿಸಿದುವಾಗಿದ್ದುವು. ಈ ಎರಡು ವರ್ತಮಾನಗಳ ಬಗೆಯನ್ನು ಪರಿಶೀಲಿಸಬೇಕು:–

"ಉತ್ತರ ಕನ್ನಡ ಜಿಲ್ಲೆಯು ಮದ್ರಾಸ ಯಿಲಾಖೆಯೊಳಗಿನಿಂದ ಮುಂಬೈ ಇಲಾಖೆಯೊಳಗೆ ಬರುವದದೆ. ಅದರ ಚಾರ್ಜು ತೆಗೆದುಕೊಳ್ಳುವುದಕ್ಕಾಗಿ ಮುಂಬಯಿ ಸರಕಾರದವರ ತರ್ಫಿನಿಂದ ಫ್ರಯರ್ ಸಾಹೇಬ ಕೌನ್ಸಿಲದಾರರು ಹೋಗಿದ್ದರು. ಆದರೆ ಆ ವ್ಯಾಖ್ಯಾಕ್ಕೆ ಮದ್ರಾಸ ಸರಕಾರದವರು ಚ್ಯಾರ್ಜ ಕೊಡಲಿಲ್ಲವೆಂದು ಕೇಳುತ್ತೇವೆ."

"ಮುಂಬಯಿ ಯೂನಿವರ್ಸಿಟಿ ಬಿ.ಎ. ಪ್ರಥಮ ಪರೀಕ್ಷೆ ಆಯಿತಂತೆ. ಅದರಲ್ಲಿ ೭ ಮಂದಿ ಇಳಿದರು; ೮ ಮಂದಿ ಇಳಿಯಲಿಲ್ಲ."

ಅದೇ ಸಂಚಿಕೆಯಲ್ಲಿ ಹೈದರಾಬಾದದ ನವಾಬನಿಗೆ ಪುತ್ರ ಸಂತಾನವಾದುದೂ ಬಂಡಖೋರ ನಾನಾಸಾಹೇಬನು ಇನ್ನೂ ಸತ್ತಿಲ್ಲವೆಂಬುದೂ ವರದಿಯಾಗಿದೆ!

ಕ್ರಿ.ಶ. ೧೮೬೩ರ ಸುಮಾರಿಗೆ ಪತ್ರಿಕೆಯ ಮುದ್ರಣವು ಬೆಳಗಾಂವಿಗೆ ಸ್ಥಳಾಂತರ ಹೊಂದಿತು. (ಸಮಾಚಾರ ಪ್ರೆಸ್) ಆಗ ಪತ್ರಿಕೆಯು 'ಫ್ರೆಂಚ್ ಕ್ವಾರ್ಟೋ' ಆಕಾರದಲ್ಲಿ ೨೮ ಪುಟಗಳನ್ನು ಒಳಗೊಂಡಿದ್ದು, ಎರಡು ಆಣೆಗೆ ದೊರೆಯುತ್ತಿದ್ದುದಾಗಿ ಸರಕಾರೀ ವರದಿಯೊಂದು ತಿಳಿಸುತ್ತದೆ. ಅನಂತರ ಎಷ್ಟು ವರ್ಷ ಬದುಕಿದ್ದಿತೆಂಬುದು ತಿಳಿಯದು.

'ಅರುಣೋದಯ'ವೆಂಬ ಮಾಸಪತ್ರಿಕೆಯು ಇದೇ ಕಾಲಕ್ಕೆ ಬೆಂಗಳೂರಿನಿಂದ ಪ್ರಕಟವಾಗತೊಡಗಿತು (೧೮೬೨). ಬಿ.ಎಚ್. ರೈಸ್ ಅದರ ಸಂಪಾದಕನಿದ್ದನೆಂಬುದನ್ನು ಈ ಹಿಂದೆ ಸೂಚಿಸಿದ್ದಿದೆ. <೪೨೩>. ಮೊದಲ ವರ್ಷ, ಬೆಂಗಳೂರಿನ ವರ್ನ್ಯಾಕ್ಯುಲರ್ ಎಜ್ಯುಕೇಶನ್ ಸೊಸೈಟಿ ಫಾರ್ ಇಂಡಿಯಾ ಸಂಸ್ಥೆಯು ಇದರ ಪ್ರಕಾಶನದ ವೆಚ್ಚವನ್ನು ವಹಿಸಿಕೊಂಡಿದ್ದಿತು. ಅನಂತರದ ಹೊಣೆ ಬೆಂಗಳೂರ ಟ್ರ್ಯಾಕ್ಟ್ ಎಂಡ್ ಬುಕ್ ಸೊಸೈಟಿಯದು.

This Magazine was commenced from the conviction that something of the kind was needed and would be appreciated by the educated portion of native community, both Christian and Hindu ಎಂಬ ಸಂಪಾದಕೀಯ ಹೇಳಿಕೆಯಲ್ಲಿ ದೇಶೀ ಕ್ರೈಸ್ತರ ಜ್ಞಾನಾರ್ಜನೆ ಮತ್ತು ಧಾರ್ಮಿಕ ಸ್ಥಿರತೆಯ ಉದ್ದೇಶವನ್ನು ಕಾಣಬಹುದು. ಇದರಲ್ಲಿ ಹಲವು ಆಂಗ್ಲ ಲೇಖನಗಳು ತಪ್ಪದೆ ಇರುತ್ತಿದ್ದವು. ಚಿತ್ರಗಳಿದ್ದುದು ಇದರ ವೈಶಿಷ್ಟ್ಯ. ಧಾರ್ಮಿಕ ವಿಚಾರ, ವಿಜ್ಞಾನ ಹಾಗೂ ಪ್ರಪಂಚದ ತಿಳಿವಳಿಕೆ, ಕಥೆ ಮತ್ತು ಜಾಣತನದ ನುಡಿಗಳು, ಮತ್ತು ಎಳೆಯರಿಗೆ ಉಪದೇಶ–ಇವಿಷ್ಟು ವಿಷಯಗಳ ಮೇಲೆ ಬರಹಗಳಿರುತ್ತಿದ್ದುವು. ಧಾರ್ಮಿಕ ಬರಹಗಳಲ್ಲಿ ಸ್ವಮತ ವಿಚಾರಗಳಲ್ಲದೆ ಹಿಂದೂ, ಮಹಮ್ಮದೀಯ ಮತಗಳ ನಿರ್ಭಿಡೆಯ ಖಂಡನೆಯು ಕಂಡುಬರುತ್ತದೆ. ವಿಜ್ಞಾನ, ಭೂಗೋಲ ಮುಂತಾದ ವಿಷಯಗಳನ್ನು ಕೊಡುವಲ್ಲಿ ಒಂದು ವ್ಯವಸ್ಥಿತ ಕ್ರಮವನ್ನಿಟ್ಟುಕೊಳ್ಳಲಾಗಿದ್ದಿತು:

". . . .The Publication is not intended to be merely a collection of miscellaneous papers but is designed to present a connected view of various important branches of knowledge. This will render the volumes when bound, of permanent value to natives who have not access to other sources of information."

ಬಿ.ಎಚ್.ರೈಸನ ಪ್ರಗತಿಪರ ಶೈಕ್ಷಣಿಕ ದೃಷ್ಟಿಯ ಪರಿಣಾಮವಿದು. ಅವನ ಪ್ರವಚನ–ಭಾಷಣಗಳ ಸಾರಗಳು ಮತ್ತು 'ದೇಶೀ' ಕವಿತೆಗಳು ಇದರಲ್ಲಿಯೇ ಪ್ರಕಟವಾಗಿವೆ. ಅಂದಿನ 'ಮೈಸೂರು ವೃತ್ತಾಂತ ಬೋಧಿನಿ'ಯು ಇದನ್ನು ಸ್ವಾಗತಿಸಿತಾದರೂ ಅವರ ಭಾಷಾಸರಣಿಯನ್ನೂ, ಹಿಂದೂ ಧರ್ಮದ ಟೀಕೆಯನ್ನೂ ಖಂಡಿಸಿದ್ದಿದೆ.

'ಅರುಣೋದಯ'ವು ಆರೇಳು ವರ್ಷ ನಡೆದು ನಿಂತಿತು. ಮತ್ತೆ 1886ರಲ್ಲಿ ಅದನ್ನು ಪುನರುಜ್ಜೀವನಗೊಳಿಸಿದಾಗ, ಪತ್ರಿಕೆಯ ರೂಪವಿನ್ಯಾಸ ಮತ್ತು ಧೋರಣೆ ಅದೇ ಆಗಿದ್ದಿತು. ಆದರೇನು, ಆಮೇಲೆಯೂ ಇದು ಹೆಚ್ಚು ಕಾಲ ಬಾಳಿದಂತಿಲ್ಲ.

ಮಂಗಳೂರಿನಲ್ಲಿ 1862ರಂದು ಹೊರಟ ಪತ್ರಿಕೆಯ ಹೆಸರು 'ವಿಚಿತ್ರ ವರ್ತಮಾನ ಸಂಗ್ರಹ'* (Illustrated Canarese Journal). ಕನ್ನಡ–ಇಂಗ್ಲಿಷ್ ಎರಡೂ ಭಾಷೆಗಳ ಲೇಖನಗಳು ಅದರಲ್ಲಿದ್ದವು. ೧೫ ದಿನಕ್ಕೊಮ್ಮೆ ಹೊರಡುತ್ತಿದ್ದ ಈ ಪತ್ರಿಕೆಗೆ ಕಿಟೆಲ್ ಮತ್ತು ಜೆ. ಮ್ಯಾಕ್ ಎಂಬವರು ಸಂಪಾದಕರಿದ್ದರು. ವಿಶೇಷದ ಸಂಗತಿಯೆಂದರೆ

---

* ವಿಚಿತ್ರ ಎಂದರೆ ಚಿತ್ರ ವಿಶೇಷದಿಂದ ಕೂಡಿದ್ದು, ಎಂದರೆ ಸಚಿತ್ರವಾದದ್ದು. ನಿಜವಾಗಿಯೂ ಸೊಗಸಾದ ಚಿತ್ರಗಳಿವೆ. ಮೇಲಾಗಿ ಉತ್ತಮ ಮುದ್ರಣ. ಆದ್ದರಿಂದ ಕನ್ನಡದ ಮೊತ್ತಮೊದಲಿನ ಸುಂದರವಾದ ಪತ್ರಿಕೆ ಎಂದೂ ಇದನ್ನು ಗಣಿಸಬೇಕು.

ಅದು Bombay Canarese Vernacular Society ವತಿಯಿಂದ ಪ್ರಕಟವಾಗುತ್ತಿತ್ತು. ಈ ಸಂಸ್ಥೆಯೇ ಕೆಲವು ವರ್ಷಗಳ ಹಿಂದೆ, ಜ್ಞಾನಬೋಧಕ ಪತ್ರಿಕೆಯನ್ನು ಧಾರವಾಡ/ಬೆಳಗಾವಿಯಿಂದ ಪ್ರಕಟಿಸುತ್ತಿತ್ತು. ಆದರೆ ಮುದ್ರಣದ ಉತ್ತಮಿಕೆಯ ದೃಷ್ಟಿಯಿಂದ ಸಂಸ್ಥೆಯು ಬಾಸಲ್ ಮಿಶನ್ ಪ್ರೆಸ್ಸಿನವರಿಗೆ ಪತ್ರಿಕೆಯೊಂದನ್ನು ಹೊರಡಿಸುವುದಕ್ಕೆ ಪ್ರೇರಿಸಿತು. ಆದರೆ ಆ ಸೊಸೈಟಿಯು ಮಂಗಳೂರಿನವರಿಗೆ ಹಣ ಕೊಡುವುದನ್ನು ನಿಲ್ಲಿಸಿದ್ದರಿಂದ ಪತ್ರಿಕೆಯೂ ನಿಂತು ಹೋಯಿತು.

ಪತ್ರಿಕೆಯ ಇನ್ನೊಂದು ವಿಶೇಷವೆಂದರೆ. ಮುಖ್ಯಪತ್ರಿಕೆಯ ಜೊತೆಗೆ 'ಇಂಡಿಯಾ ಮತ್ತು ಅನ್ಯದೇಶದ ವಾರ್ತಿಕ (The Canarese Messenger) ಪುರವಣಿಯನ್ನು ಜೋಡಿಸುತ್ತಿದ್ದರು. ಬ್ರಿಟಿಶ್ ಮ್ಯೂಸಿಯಂ ಪತ್ರಿಕೆಯಲ್ಲಿ ಈ ಕುರಿತು ಹೀಗೆ ಹೇಳಿದೆ:

The latter was published concurrentluy with the former. its first number having been issued with Vol.1 No.5 of the Journal."

'ವಾರ್ತಿಕ' ಪತ್ರಿಕೆಯ ಎರಡು ಸಂಪುಟಗಳು (2ನೆಯ ಸಂಪುಟದ 11ನೆಯ ಸಂಚಿಕೆಯವರೆಗೆ) ಮಾತ್ರ ಮೂಲ ಪತ್ರಿಕೆಯೊಂದಿಗೆ ದೊರೆಯುತ್ತದೆ. ಮೂಲ ಪತ್ರಿಕೆಯಾದ 'ವಿಚಿತ್ರ ವರ್ತಮಾನ ಸಂಗ್ರಹ'ದ ಮೂರು ಸಂಪುಟಗಳು ಮಾತ್ರ ಬ್ರಿಟಿಷ್ ಮ್ಯೂಸಿಯಂನಲ್ಲಿ ಇವೆ. ಅ ಮುಂದೆ ಅದು ನಿಂತಿರಲು ಸಾಕು.

ಅನಂತರದ ಮಹತ್ವದ ಪತ್ರಿಕೆಯೆಂದರೆ 'ಕನ್ನಡ ಶಾಲಾಪತ್ರಕ'. ಅದನ್ನು ಡೆಪ್ಯೂಟಿ ಚೆನ್ನಬಸಪ್ಪ ಬೆಳಗಾಂವಿಯಿಂದ ಆರಂಭ ಮಾಡಿದಾಗ (1865), ಅದರ ಹೆಸರು 'ಮಠಪತ್ರಿಕೆ' ಎಂದು ಇದ್ದಿತು. ಏಪ್ರಿಲ್ 1867ರಲ್ಲಿ 'ಶಾಲಾಪತ್ರಕ' ವೆಂದು ಅದು ಬದಲಾವಣೆ ಹೊಂದಿತು. 1871ರಲ್ಲಿ ಅದರ ಹೆಸರು 'ಕನ್ನಡ ಶಾಲಾ ಪತ್ರಿಕೆ' ಎಂದು ಮತ್ತೆ ಬದಲಾಗಿ 1929ರ ವರೆಗೆ ಆ ಹೆಸರು ಉಳಿದುಕೊಂಡಿತು. ಪ್ರಕೃತ 'ಜೀವನ ಶಿಕ್ಷಣ' ಎಂಬ ಹೊಸ ಹೆಸರಿನಿಂದ ಹೊರಡುತ್ತಿದ್ದು, ಇಂದಿಗೂ ಬದುಕಿರುವ ಕಳೆದ ಶತಮಾನದ ನಾಲ್ಕು ಪತ್ರಿಕೆಗಳಲ್ಲಿ ಇದು ಒಂದಾಗಿದೆ.*

ಮುಂಬಯಿ ಕರ್ನಾಟಕದ ಟ್ರೇನಿಂಗ್ ಕಾಲೇಜಿನ ಆವಾರದಲ್ಲಿ ದಾಂಗುಡಿ ಬಿಟ್ಟ ಈ ಪತ್ರಿಕೆಯು ಬೆಳಗಾಂವಿ-ಧಾರವಾಡಗಳ ನಡುವೆ ಓಡಾಡುತ್ತಿದ್ದು, 1877ರಿಂದ ನಿಯಮಿತವಾಗಿ ಧಾರವಾಡದಿಂದಲೇ ಪ್ರಕಟವಾಗತೊಡಗಿತು. ಕನ್ನಡ ನಿಷ್ಠೆಯ ಗಂಗೋತ್ರಿಯಂತಿದ್ದ ಟ್ರೇನಿಂಗ್ ಕಾಲೇಜಿನಲ್ಲಿ ಬೆಳೆದುದರಿಂದ ಅನೇಕ ಪ್ರೌಢ ಲೇಖನಗಳಿಗೆ ಅದು ಎಡೆಮಾಡಿಕೊಟ್ಟಿತು. ಕನ್ನಡ ಸಾಹಿತ್ಯ ಹಾಗೂ ಶಾಸ್ತ್ರಗ್ರಂಥಗಳ ಪರಾಮರ್ಶೆ ಅದರ ಮೂಲಕ ನಡೆಯಿತು. ಆದರೂ ಅದು ಮೂಲತಃ ಶಿಕ್ಷಣ ಶಾಖೆಯ ಕನ್ನಡ ಮುಖಪತ್ರವೆಂದೇ ಸಾಗಿಬಂದಿದೆ.

* ಇನ್ನುಳಿದ ಪತ್ರಿಕೆಗಳೆಂದರೆ 'ಮೈಸೂರ ಗೆಜೆಟ್' 'ಸಾಧ್ವಿ' ಮತ್ತು '[illegible]'

ಇದರ ಮೇ 1868ರ ಸಂಚಿಕೆಯಲ್ಲಿ 'ಶೈಕ್ಷಣಿಕ ಸೂಚನೆಗಳು, (ಇಂಗ್ಲಿಷ್ ಲೇಖ), ಶಬ್ದಮಣಿದರ್ಪಣ, ಜೈಮಿನಿಭಾರತ ಪದ್ಯಗಳು, ನೋಟೀಸುಗಳು, ವಿದ್ಯುಚ್ಛಕ್ತಿಯ ಯಂತ್ರಗಳು, ಹುಡುಗರ ವಿದ್ಯಾಭ್ಯಾಸ' ಎಂಬೀ ಬರಹಗಳಿದ್ದು ಇವುಗಳ ಮೇಲಿಂದ ಪತ್ರಿಕೆಯ ಸ್ವರೂಪವನ್ನು ಅರಿಯಬಹುದು. ಅದರ ಮುದ್ರಕರು ಬೆಳಗಾಂವಿಯ 'ಭಿಕಾಜಿ ಹರಿ ಸಾಮಂತ ಮತ್ತು ರಾಮಚಂದ್ರ ಪ್ರಭಾಕರ ಜೋಶಿ' ಎಂಬವರು.

ಚೆನ್ನಬಸಪ್ಪ ಶಿಕ್ಷಣದ ಅಭಿವೃದ್ಧಿಗಾಗಿ ಕಳಕಳಿಯಿಂದ ಶ್ರಮಿಸುತ್ತಿದ್ದರೆಂಬ ಮಾತಿಗೆ ನಿದರ್ಶನವಾಗಿ ಈ ಪತ್ರಿಕೆಯ 1864ನೆಯ ವರ್ಷದ ಎರಡು ಸಂಚಿಕೆಗಳಲ್ಲಿ ಬಂದ ಪ್ರಕಟನೆಗಳು ಇಲ್ಲಿ ಪ್ರಸ್ತುತವಾಗಿವೆ.

"ಸಂತೋಷದ ವರ್ತಮಾನ, ನಾವು ಬಹು ಸಂತೋಷದಿಂದ ಸಮಸ್ತ ಜನರಿಗೆ ವಿಶೇಷವಾಗಿ ಲಿಂಗವಂತರಿಗೆ ತಿಳಿಸುವದೇನೆಂದರೆ ಬೆಳಗಾಂವಿ ಜಿಲ್ಲೆಯ ಡೆಪ್ಯೂಟಿ ಇನ್‌ಸ್ಪೆಕ್ಟರ್‌ರಾದ ಚನ್ನಬಸಪ್ಪನವರು ಹೇಳಿಕೊಂಡದ್ದರಿಂದ, ಚಿತ್ರದುರ್ಗದ ಮುರಗಿ ಜಗದ್ಗುರು ಸ್ವಾಮಿಗಳವರು ಬಹು ದಯಾಳುಗಳಾಗಿ ಅನಾಥರಾದ ವಿದ್ಯಾರ್ಥಿಗಳಿಗೆ ಬೆಳಗಾಂವಿಯಲ್ಲಿ ಅನ್ನ ಕೊಡುವುದಕ್ಕೋಸ್ಕರ ಪ್ರತಿ ತಿಂಗಳಿಗೆ 300 ರೂಪಾಯಿ ಕೊಡುವುದಕ್ಕೆ ಒಪ್ಪಿಕೊಂಡಿದ್ದಾರೆ. ಈ ಹಣದಿಂದ ಒಂದು ಮನೆಯನ್ನು ಬಾಡಿಗೆಯಿಂದ ತೆಗೆದುಕೊಂಡು ಅಡಿಗೆಯವರು ಮೊದಲಾದ ಚಾಕರರನ್ನು ಯಿಟ್ಟು ಸುಮಾರು 50 ಜನ ನಿರಾಶ್ರಿತರಾದ ವಿದ್ಯಾರ್ಥಿಗಳಿಗೆ ಯೆರಡು ಹೊತ್ತು ಊಟ, ಇರುವುದಕ್ಕೆ ಸ್ಥಳ ಕೊಡತಕ್ಕ ಬಗ್ಗೆ ಈಗ ತಜವೀಜು ನಡೆದಿದೆ." (ಆಗಸ್ಟ 1868ರ ಸಂಚಿಕೆ)

ಕರ್ನಾಟಕದಲ್ಲಿ ವೀರಶೈವರ ಮೊತ್ತಮೊದಲಿನ ಬೋರ್ಡಿಂಗ್ ಶಾಲೆಯಿದು. ಇಂದು ಊರೂರಿಗೆ ಕಾಣಸಿಗುವ ಇಂಥ ಛಾತ್ರಾಲಯಗಳಿಗೆ ಇದುವೆ ನಾಂದಿಯಾಯಿತು. ಇದಕ್ಕಾಗಿ ಚೆನ್ನಬಸಪ್ಪ ಪಟ್ಟ ಪರಿಶ್ರಮವನ್ನು 6ನೆಯ ಪ್ರಕರಣದಲ್ಲಿ ವಿವರಿಸಿದ್ದೇವೆ. ತಮ್ಮ ಅಧಿಕಾರ ಸ್ಥಾನದಿಂದ ಅವರು ಹೊರಡಿಸಿದ ಕನ್ನಡದ ಬಳಕೆಗೆ ಸಂಬಂಧಪಟ್ಟ ಒಂದು ಪರಿಪತ್ರವನ್ನು ಅಕ್ಟೋಬರ್ 1868ರ ಸಂಚಿಕೆಯಲ್ಲಿ ಕಾಣಬಂದಂತೆ ಇಲ್ಲಿ ಕೊಡುತ್ತಿದ್ದೇವೆ :

'ನೋಟೀಸು' : ಗೋಕಾಂವಿ ಸವದತ್ತಿ ಮತ್ತು ಸಂಪಗಾಂವಿ ತಾಲ್ಲೂಕಿನಲ್ಲಿರುವ ಯಾವತ್ತು ಮಾಸ್ತರರಿಗೆ ತಿಳಿಸುವದೇನೆಂದರೆ ನೀವು ನಿಮ್ಮ ದಫ್ತರಗಳನ್ನು ಕನ್ನಡಿನಲ್ಲಿ ಇಡ್ರಿ, ಯಿತ್ತ ಕಡೆಯಿಂದಾಗಲಿ ಅಥವಾ ಮತ್ಯಾವ ಕಡೆಯಿಂದಾಗಲಿ ನಿಮಗೆ ಆರೆ [ಮರಾಠಿ] ಬರದು. ಬಂದರು ಸಹಾ ನೀವು ಕನ್ನಡಿನಲ್ಲಿ ಉತ್ತರ ಕೊಡುತ್ತ ಬರ್ರಿ, ಯಿನ್ನು ಮೇಲೆ ನಂಮ ಕಡಿಗೆ ಬರುವ ಕಾಗದಗಳು ಆರೇದಲ್ಲಿ ಬರಬಾರದು.

ತಾರೀಖು 16 ಸೆಪ್ಟೆಂಬರ್ 1868, ಮು॥ ಬೆಳಗಾಂವಿ.'[9]

ಇಂದಿನವರೆಗೆ ಬದುಕಿ ಇದ್ದ ಹಳೆಯ ಪತ್ರಿಕೆಗಳಲ್ಲಿ ಮೈಸೂರ ಗೆಜೆಟ್ ಇದನ್ನು ಗಣಿಸಬೇಕು. ಆದರೆ ಇಂದಿನ ಗೆಜೆಟಿಗೂ ಅಂದಿನದಕ್ಕೂ ತುಂಬಾ ವ್ಯತ್ಯಾಸವಿದೆ. ಇಂದಿನದು ಕೇವಲ ಸರಕಾರೀ ಪ್ರಕಟಣೆಗಳನ್ನೊಳಗೊಂಡು, ಸರಕಾರೀ ಕಚೇರಿಗಳವರು, ಕಂಟ್ರಾಕ್ಟರರು ಇವರಿಗೆ ಮಾತ್ರ ಸೀಮಿತವಾಗಿದ್ದರೆ, ಅಂದಿನದು ಇಂಥ ಪ್ರಕಟಣೆಗಳ ಜೊತೆಗೆ ಇತರ ಪ್ರಾಸಂಗಿಕ ವಾರ್ತೆಗಳನ್ನೂ ಒಳಗೊಂಡು ಹೆಚ್ಚು ವಾಚನೀಯವಾಗಿದ್ದಿತು. ಅದರಿಂದಾಗಿ ಸಾಮಾನ್ಯ ನಾಗರಿಕರು ಸಹ ಅದಕ್ಕೆ ದೊಡ್ಡ ಸಂಖ್ಯೆಯಲ್ಲಿ ಚಂದಾದಾರರಾಗಿದ್ದರು. ದಿ. 7–4–1866ರಂದು ಆರಂಭವಾದ ಈ ಪತ್ರಿಕೆ ಇಂಗ್ಲಿಷ್–ಕನ್ನಡ ಎರಡೂ ಭಾಷೆಗಳಲ್ಲಿ ಹೊರಡುತ್ತಿದ್ದಿತು. ಆಗಿನ ಸಂಪಾದಕನ ಹೆಸರು ಎಲ್. ರಿಕೆಟ್ಸ್.

ಇತರ ಸುದ್ದಿಗಳಲ್ಲಿ, ವಿದೇಶೀ ಸುದ್ದಿಗಳನ್ನೂ ಕೊಡುವ ಕ್ರಮವಿದ್ದಿತು. ಅವನ್ನು ತಂತಿಯ ಮೂಲಕ ತರಿಸಲಾಗುತ್ತಿತ್ತು. ದಿ. 23ನೆಯ ಜೂನ್ 1866ರ ಸಂಚಿಕೆಯಲ್ಲಿ ಯೂರೋಪದಲ್ಲಿ ನಡೆದಿದ್ದ ವಿವಿಧ ಯುದ್ಧ ವಾರ್ತೆಗಳಿವೆ. ಜಿಲ್ಲಾ ಮಟ್ಟದ ಸುದ್ದಿಗಳಿಗೂ ಅವಕಾಶವಿದ್ದಿತು. ಅಲ್ಲಿಯ ಭೂಸುಧಾರಣೆ, ಸಾಂಸರ್ಗಿಕ ರೋಗಗಳ ಹಾವಳಿ, ಮಹತ್ವದ ಘಟನೆಗಳು, ತಪ್ಪಿತಸ್ಥರಿಗೆ ಶಿಕ್ಷೆ ಮುಂತಾದ ಸುದ್ದಿಗಳಿಗೆ ಪ್ರಾಶಸ್ತ್ಯವನ್ನು ಕೊಡಲಾಗುತ್ತಿತ್ತು. ಬರಗಾಲದ ಹಾಗೂ ಕಾಲೆರಾದ ಹಾವಳಿಯ ದಿನಗಳವು. ಆಗ ಪ್ರಕಟವಾದ, ಹೆದ್ದಾರಿಗಳಲ್ಲಿ ಕೂಳಿಲ್ಲದೆ ಅಥವಾ ರೋಗದಿಂದ ಸತ್ತು ಬಿದ್ದವರು ಯಾರು ಯಾರೆಂಬುದರ ವಿವರಗಳು ಮನಕರಗಿಸುವಂತಹವು. ದೊಡ್ಡೇರಿ ಗ್ರಾಮದ ಓರ್ವ ಮುಸ್ಲಿಂ ಹೆಂಗಸು ತನ್ನ ಎರಡು ವರ್ಷದ ಹಸುಳೆಯನ್ನು ಬುಡನ್‌ಖಾನನೆಂಬವನಿಗೆ ಕೇವಲ ಎರಡು ರೂಪಾಯಿಗೆ ಮಾರಿ, ಆಹಾರ ಧಾನ್ಯ ತಂದಳಂತೆ. ಬೇರೊಂದು ಊರಿನ ಬಣಜಿಗ ಹೆಣ್ಣುಮಗಳೊಬ್ಬಳು ಇದೇ ರೀತಿ ತನ್ನ ಮಗನನ್ನು ಮಾರಲೆತ್ನಿಸಿದಾಗ ಊರ ಜನ ತಡೆದು ಅವಳಿಗೆ ಅಗತ್ಯವಿದ್ದ ಎರಡು ಸೇರು ರಾಗಿ ಕೊಟ್ಟರಂತೆ. ಬರಗಾಲದ ದೆಸೆಯಿಂದಾಗಿ ಜನ ಆಹಾರ ವಸ್ತುಗಳನ್ನು ಕಳುವು ಮಾಡಿದ್ದರ, ಇಲ್ಲವೆ ಅಂಗಡಿಗಳನ್ನು ಲೂಟಿಮಾಡಿದ್ದರ ವಿವರಗಳೂ ಅಂದಿನ ಗೆಜೆಟ್ಟಿನಲ್ಲಿ ಸಿಕ್ಕುತ್ತವೆ. ಪರಿಣಾಮವಾಗಿ ಮೈಸೂರಿನ ಆಗುಹೋಗುಗಳ ಚಿತ್ರಣವೇ ಅಲ್ಲಿ ಇದ್ದಿತು.

ಕ್ರಿ.ಶ. 1868ರಲ್ಲಿ ಬಾಸೆಲ್ ಮಿಶನ್‌ದವರು 'ಸಭಾಪತ್ರ'ದ ಮೊದಲ ಸಂಚಿಕೆಯನ್ನು ಹೊರತಂದರು. ಪತ್ರಿಕೆಯನ್ನು ಹೊರಡಿಸುವಲ್ಲಿ ಇದು ಅವರ ನಾಲ್ಕನೆಯ ಪ್ರಯತ್ನವಾಗಿದೆ.* ಮೊದಲಿನ ಮೂರು ಪತ್ರಿಕೆಗಳು ಬೇಗ ನಿಂತುಹೋದವಷ್ಟೆ. '(ಕ್ರೈಸ್ತ) ಸಭಾಪತ್ರ'ವು

---

* A curious fact about this earliest Kannada Journal (ಕನ್ನಡ ಸಮಾಚಾರ) is that though it continued publication untill 1940 it was rechristened nearly five times. Started as the Kannada Samachar, it made its appear-

ಮಾತ್ರ ಹಲವು ದಶಕಗಳ ವರೆಗೆ ಮುಂದುವರಿಯಿತು. ಮೊದಲಿನ ಎರಡು ಸಂಪುಟಗಳಲ್ಲಿ (1868–69) 'ಬಾಲಪತ್ರ'ವೆಂಬ ಪುರವಣಿಯು ಸೇರಿದ್ದಿತು. ಮಕ್ಕಳಿಗೆಂದು ಮೀಸಲಾದ ಈ ವಿಭಾಗವು ಅಪೂರ್ವವಾದುದು. ಅವರಿಗಾಗಿಯೇ ಹಲವು ಗೀತಗಳು, ಕತೆಗಳು ಅದರಲ್ಲಿ ಪ್ರಕಟವಾದುವು. ಮತಪ್ರಸಾರವೇ ಮುಖ್ಯವಾಗಿದ್ದರೂ ದೇಶ–ವಿದೇಶಗಳ ಸುದ್ದಿಯನ್ನು (ವೃತ್ತಾಂತ ಮಂಜರಿ) ಇದರಲ್ಲಿ ಕೊಡಲಾಗುತ್ತಿತ್ತು.

ಅದೇ ವರ್ಷ, ಮಂಗಳೂರಿನಿಂದ ಕಾನೂನಿನ ವಿಚಾರಗಳಿಗೆ ಸಂಬಂಧಿಸಿದ 'ನ್ಯಾಯ ಸಂಗ್ರಹ'ವೆಂಬ ಪಕ್ಷ ಪತ್ರಿಕೆ ಉಭಯ ಗೋಪಾಲಕೃಷ್ಣಯ್ಯನ ಸಂಪಾದಕತ್ವದಲ್ಲಿ ಹೊರಟಿತು. ಕಾಯದೆಗೆ ಮೀಸಲಾದ ಈ ಏಕಮೇವ ಪತ್ರಿಕೆ ವರ್ಷಾವಧಿಯೊಳಗೆ ನಿಂತುಹೋಯಿತು.

ವಾರ್ತೆಗಳಿಗೆ ಪ್ರಾಧಾನ್ಯವಿರುವ ಪತ್ರಿಕೆಗಳನ್ನು ಹೊರಡಿಸಬೇಕೆನ್ನುವ ಪ್ರಜ್ಞೆಯು ನಾಡಿನ ಇತರ ಭಾಗಗಳಲ್ಲಿಯೂ ಕಂಡುಬಂದಿತು. ಮಂಗಳೂರಿನಿಂದ 'ಸುಬೋಧಿನಿ' ಎಂಬ ಪತ್ರಿಕೆ ಹೊರಟಿತು. ಹಾಗೆ ಹೆಸರಿಸಬೇಕು (೧೮೭೧). A chronicle of general news ಎಂಬ ಅಭಿದಾನವನ್ನು ಹೊತ್ತ ಈ ಪತ್ರಿಕೆಯ ಪ್ರಥಮ ವರ್ಷದ ಸಂಚಿಕೆಗಳು ಬ್ರಿಟಿಶ್ ಲೈಬ್ರರಿಯಲ್ಲಿ ಇವೆ. ಮೇಲ್ಕಂಡ 'ಶಾಲಾಪತ್ರಕ'ದ ೧೮೭೩ನೆಯ ವರ್ಷದ ಒಂದು ಸಂಚಿಕೆಯಲ್ಲಿ ಬೆಳಗಾಂವಿಯಿಂದ 'ಸೊಬಗಿನ ಸುದ್ದಿ' ಎಂಬ ಪತ್ರಿಕೆಯು ಆರಂಭವಾದುದರ ಉಲ್ಲೇಖವಿದ್ದು 'ಶಾಲಾಪತ್ರಕ'ದ ಸಂಪಾದಕನು ಅದನ್ನು 'ಮೊತ್ತಮೊದಲಿನ ವಾರ್ತಾಪತ್ರಿಕೆ' ಎಂಬುದಾಗಿ ವಿಶ್ಲೇಷಿಸಿದ್ದಾನೆ. ಅ ಮಾತು ಮುಂಬಯಿ ಕರ್ನಾಟಕಕ್ಕೆ ಮಾತ್ರ ಅನ್ವಯಿಸಬಹುದು. ಇವೆರಡೂ ಪತ್ರಿಕೆಗಳು ಬಹಳ ಕಾಲ ಬದುಕಿ ಉಳಿಯಲಿಲ್ಲ.

ವೆಂಕಟ ರಂಗೋ ಕಟ್ಟಿಯವರ ಶೋಧಕ ಮಾಸಪತ್ರಿಕೆಯನ್ನು ವಿಶೇಷವಾಗಿ ಹೆಸರಿಸಬೇಕು (೧೮೭೫–೭೮). ಮಿಶನರಿ ಜನರ ಮತ್ತು ಇತರರ ಹಿಂದಿನ ಪತ್ರಿಕೆಗಳಲ್ಲಿ ಲೋಕ ಶಿಕ್ಷಣ ಇಲ್ಲವೆ ಜನತೆಯ ಜ್ಞಾನಾಭಿವೃದ್ಧಿಯ ದೃಷ್ಟಿಯು ತುಸುಮಟ್ಟಿಗೆ ಇದ್ದಿತಾದರೆ ಈ 'ಶೋಧಕ'ದಲ್ಲಿ ಅದು ಪ್ರಮುಖವಾಗಿ ಕಾಣಿಸಿಕೊಂಡಿತು. 'ಇತಿಹಾಸ, ಶಾಸ್ತ್ರ ಕಲಾ ಕೌಶಲ್ಯಾದಿಗಳ ಸಂಗ್ರಹ'ವೆಂಬ ಅದರ ಉಪಶೀರ್ಷಿಕೆಯಲ್ಲಿ ಇದು ಸ್ವಯಂವ್ಯಕ್ತವಾಗಿದೆ. ಅಲ್ಲದೆ 'ಸ್ವದೇಶದ ವಿದ್ಯಾರ್ಥಿಗಳಿಗೆ ವಿಶೇಷ ಲಕ್ಷ್ಯವು ಕೊಡಲ್ಪಡುವದು. ಇಂಥಾ

---

ance with the following titles in succession ; the Kannada Suwarthika, the Karnataka Patrika, the Balapatra, the Satya Dipike & the Kraista Sabha Patrika-ಎಂಬುದಾಗಿ ವ್ಯಕ್ತವಾದ ಅಭಿಪ್ರಾಯ (Kannada Studies No.2. ಪು.17) ಸರಿಯಲ್ಲ. ಮೇಲೆ ಹೇಳಿದಂತೆ ಅವು ಬೇರೆ ಬೇರೆ ಕಾಲದಲ್ಲಿ ಬಾಸೆಲ್ ಮಿಶನ್ನಿನ ಪ್ರತ್ಯೇಕ ಪ್ರಕಟಣೆಗಾಗಿ ಆರಂಭವಾದುವು. ಅಲ್ಲದೆ ಕಾಲಾನುಕ್ರಮದಲ್ಲಿ 'ಕ್ರೈಸ್ತ ಸಭಾ ಪತ್ರಿಕೆ', ಮೊದಲಿನದು (1868). 'ಸತ್ಯದೀಪಿಕೆ' ಅನಂತರದ್ದು (1896).

ವಿಷಯಗಳನ್ನು ಬರೆದು ಕಳುಹಿಸಿದರೆ ಸಂತೋಷದಿಂದ ಅವುಗಳನ್ನು ಸ್ವೀಕರಿಸುವೆವು' ಎಂಬ ಜಾಹೀರಾತಿನ ಕರೆಯಲ್ಲಿ ಕಟ್ಟಿಯವರ ಕನ್ನಡಾಭಿಮಾನ ಮತ್ತೊಮ್ಮೆ ವ್ಯಕ್ತವಾಗಿದೆ. ಈ ಪತ್ರಿಕೆಯ ಒಂದು ಸಂಪಾದಕೀಯದಲ್ಲಿ ಅದನ್ನು ಈಗಾಗಲೇ <೯೩೨> ಕಂಡಿದ್ದೇವೆ.

'ಶೋಧಕ'ದ ಮೊದಲ ಮೂರು ಸಂಚಿಕೆಗಳಲ್ಲಿ ಬಂದ ವಿಷಯಗಳ ಪರಿವಿಡಿಯು ಸಂಪಾದಕರ ಲೋಕ ಶಿಕ್ಷಣ ಗುರಿಯನ್ನು ಸ್ಪಷ್ಟಗೊಳಿಸಬಲ್ಲದು :

"ಕರ್ನಾಟಕ ಇತಿಹಾಸಾರಂಭ<br>
ಭೂಗರ್ಭಶಾಸ್ತ್ರದ ಉಪೋದ್ಘಾತ<br>
ಜ್ಯೋತಿಶ್ಶಾಸ್ತ್ರದ ಇತಿಹಾಸ<br>
ಕಾಯದೆ<br>
ರಸ ಹೃದಯ ಅಥವಾ ಕಿಮಯಾ [?]<br>
ಅಮರತ್ವ (ನಮ್ಮ ದೇಶದ ರಸಾಯನ<br>
ಶಾಸ್ತ್ರವು ಹೆಚ್ಚು ಶ್ರೇಷ್ಠ)<br>
ಪಾರಜದಿಂದ ಅಮರತ್ವ<br>
ಯಂತ್ರ ವಿದ್ಯೆ<br>
ಧರ್ಮಗಳೂ ಧರ್ಮಸಂಸ್ಥಾಪಕರೂ<br>
ವಾಲ್ಮೀಕಿ ರಾಮಾಯಣದ ವಿಚಾರ<br>
ಕಬ್ಬು<br>
ಅಂಕೆಗಳ ಚಮತ್ಕಾರ<br>
ಅಂಜನಗಳು<br>
ಗಾರುಡೀ ವಿದ್ಯೆ<br>
ದ್ರವಿಡ ಭಾಷೆಗಳು<br>
ಜೈಮಿನಿ ಭಾರತ [ಷಟ್ಪದಿಗಳು]<br>
ಪತ್ರ ವ್ಯವಹಾರ<br>
ಕಪ್ಪೆ<br>
ಸ್ತಂಭನ ತಂತ್ರ<br>
ಯಾಕೆಂಬುದರ ಕಾರಣಗಳು<br>
ವಿಜಾಪುರ, ಉತ್ತರ ಕನ್ನಡ ಜಿಲ್ಲೆ-<br>
ಗಳ ಸಸ್ಯಾದಿಗಳು<br>
ತಿರುಪತಿ ಯಾತ್ರೆ"

ಆದರ್ಶವೇ ಪ್ರಧಾನವಾದ ಯಾವ ಕಾರ್ಯವೂ ಈ ಪ್ರಪಂಚದಲ್ಲಿ ಬಹುಕಾಲ ನಿಲ್ಲದೇನೊ ! ಈ ಪತ್ರಿಕೆ ೨-೩ ವರ್ಷಗಳಲ್ಲಿ ಅಸ್ತಂಗತವಾಯಿತು.

'ಶೋಧಕ'ದ ಉದ್ದೇಶಗಳನ್ನೇ ಇಟ್ಟುಕೊಂಡು ಬೆಳಗಾಂವಿಯಿಂದ ಕರ್ನಾಟಕ ಜ್ಞಾನಮಂಜರೀ ಎಂಬ ಮಾಸಪತ್ರಿಕೆ ೧೮೭೪ ರಿಂದ ಹೊರಡಲಾರಂಭಿಸಿತು. ಸಾಹಿತ್ಯಿಕ ಹಾಗೂ ವೈಜ್ಞಾನಿಕ ಲೇಖನಗಳನ್ನು ಪ್ರಕಟಿಸಬೇಕೆಂಬ ಧ್ಯೇಯಕ್ಕೆ ಅನುಗುಣವಾದ ವಿಷಯಗಳನ್ನು ಅದರ ಒಂದು ಸಂಚಿಕೆಯಿಂದ ಮಾದರಿಯಾಗಿ ಕೊಡಬಹುದು. "ನಿದ್ರೆಯು; ಮಾಲವಿಕಾಗ್ನಿಮಿತ್ರ ನಾಟಕವು; ಅಮಲೇರುವ ಪದಾರ್ಥಗಳು; ಪ್ರಸಿದ್ಧ ಸ್ಥಳಗಳ ವರ್ಣನೆ; ಮಹಾ ಪುರುಷರ ಚರಿತ್ರೆ; ವೇಳೆಯು" (ಪುಸ್ತಕ ೧; ಸಂಚಿಕೆ ೬).

ಕನ್ನಡ ಪತ್ರಿಕೋದ್ಯಮದ ಆರಂಭದ ಹೆಜ್ಜೆಗಳಿವು. ೧೮೬೦-೧೮೮೦ರ ಈ ಅವಧಿಯ ಯಾವುದೇ ವರ್ಷದಲ್ಲಿ ೩-೪ ಪತ್ರಿಕೆಗಳಿಗಿಂತ ಹೆಚ್ಚು ಪತ್ರಿಕೆಗಳಿರಲಿಲ್ಲ. ಆದರೆ ಪತ್ರಿಕೆಯ ಮಹತ್ವ ಪ್ರಯೋಜನಗಳನ್ನು ಆಗಿನ ಕೆಲವರು ಚೆನ್ನಾಗಿ ಮನಗಂಡು ಆ ದಿಶೆಯಲ್ಲಿ ಪ್ರಯತ್ನಪಟ್ಟರು. ಪತ್ರಿಕಾ ವ್ಯವಸಾಯದ ಧ್ಯೇಯ-ಧೋರಣೆಗಳನ್ನು ರೂಪಿಸಿದರು. ಮುಂದಿನ ನವೋದಯ ಕಾಲದ ಪತ್ರಿಕೋದ್ಯಮಕ್ಕೆ ಸೂಕ್ತವಾದ ಹಿನ್ನೆಲೆಯನ್ನು ಒದಗಿಸಿದರು.

## 74 ಜಾಗೃತಿಯ ಕಾಲ : ವಾರ್ತಾಪತ್ರಿಕೆಗಳು

ಕ್ರಿ.ಶ.೧೮೮೦ರ ದಶಕದ ಒಳಹೊರಗಿನ ಕಾಲದಲ್ಲಿ ಪ್ರಕಟವಾಗತೊಡಗಿದ 'ಹಿತಬೋಧಿನಿ' (ಬೆಂಗಳೂರು), 'ಚಂದ್ರೋದಯ' (ಧಾರವಾಡ) ಮತ್ತು 'ಕನ್ನಡ ಸುವಾರ್ತೆ' (ಮುಂಬಯಿ)-ಈ ಪತ್ರಿಕೆಗಳ ಮೂಲಕ ಕನ್ನಡ ಪತ್ರಿಕಾ ವ್ಯವಸಾಯವು ಹೊಸ ಮಾರ್ಗವನ್ನು ಹಿಡಿಯಿತು. ಆ ಮಾರ್ಗವೆಂದರೆ-ವಿಚಾರ ಜಾಗೃತಿ; ಸ್ವಂತ ಅಭಿಪ್ರಾಯಗಳ ಅಭಿವ್ಯಕ್ತಿ ಮತ್ತು ರಾಷ್ಟ್ರೀಯ ಮನೋವೃತ್ತಿ. ಅದಕ್ಕೂ ಹಿಂದೆ, 'ಕರ್ನಾಟಕ ಪ್ರಕಾಶಿಕಾ' ಮತ್ತು 'ಶೋಧಕ'- ಇವುಗಳ ಪತ್ರಿಕಾಕರ್ತರು ಹಾಗೆ ಮಾಡಿದ್ದಾರೇನೊ ನಿಜ. ಆದರೆ ಅದು ಒಬ್ಬಿಬ್ಬ ವ್ಯಕ್ತಿಗಳ ಎತ್ತುಗಡೆಯಾಗಿದ್ದಿತಲ್ಲದೆ, ಒಂದು ಪ್ರಭಾವೀ ಪರಂಪರೆಯಾಗಿ ಕಂಡುಬಂದದ್ದು ಮೇಲೆ ಕಾಣಿಸಿದ ಮೂರು ಪತ್ರಿಕೆಗಳ ಮೂಲಕವೆನ್ನಬಹುದು.

**'ಹಿತಬೋಧಿನಿ'**ಯ ಪ್ರಾರಂಭದ ಸಂಪಾದಕರಾಗಿದ್ದ ಎಂ.ಬಿ. ಶ್ರೀನಿವಾಸಯ್ಯಂಗಾರ್ ಮತ್ತು ಎಂ.ಎಸ್. ಪುಟ್ಟಣ್ಣ-ಇವರು ಹೊಸಗನ್ನಡ ಗದ್ಯದ ಕೃಷಿ ಮಾಡಿದವರು, ಎಂಬುದನ್ನು ನೋಡಿದ್ದೇವೆ. ಈ ಪತ್ರಿಕೆ ಅವರ ಈ ಕಾರ್ಯಕ್ಕೆ ವಾಹಿನಿಯಾಯಿತು. ಪತ್ರಿಕೆಯನ್ನು ಹೊರಡಿಸುವಲ್ಲಿಯ ಅವರ ಉದ್ದೇಶವು 'ಶೋಧಕ' ಪತ್ರಿಕೆಯದಕ್ಕೆ ಅನ್ವಯಕಾರಿಯಾಗಿದೆ.

"ಜನರಿಗೆ ತಿಳಿವಳಿಕೆ ಹೆಚ್ಚಿದಷ್ಟು ಸೌಖ್ಯ ಹೆಚ್ಚುವುದು. ಈ 'ಹಿತಬೋಧಿನಿ'ಯ ಮೂಲಕ ಜನಗಳಿಗೆ ಕೈಲಾದ ಮಟ್ಟಿಗೆ ತಿಳಿವಳಿಕೆಯನ್ನು ಹೆಚ್ಚಿಸಬೇಕೆಂದು ಯತ್ನಿಸಿದ್ದೇವೆ. ನಮ್ಮ ಶಾಸ್ತ್ರಗಳಲ್ಲಿರುವ ವಿಷಯಗಳನ್ನು ಹೇಳುವುದಲ್ಲದೆ ಇಂಗ್ಲಿಷರಲ್ಲಿರತಕ್ಕ ನೂತನವಾದ ಕುಶಲ ವಿದ್ಯದ ಉಪಯುಕ್ತವಾದ ಶಾಸ್ತ್ರಗಳ ಸಂಗತಿಗಳನ್ನು ಆಗಾಗ್ಗೆ ಈ ಪತ್ರಿಕೆಯಲ್ಲಿ ಬರೆಯುತ್ತಾ ಬರುವೆವು. ವಿನೋದಕರವಾಗಿಯೂ ನೀತಿ ಪ್ರದರ್ಶಕವಾಗಿಯೂ ಇರುವ ಕೆಲವು ಕಥೆಗಳು ಇದರಲ್ಲಿ ಬರೆಯಲ್ಪಡುವವು."

ಅಕ್ಟೋಬರ್ ೧೮೮೩ ರಿಂದ ಹೊರಡಲಾರಂಭಿಸಿದ ಈ ಪತ್ರಿಕೆಯ ಸಂಪಾದಕತ್ವವನ್ನು ಅದರ ಏಳನೆಯ ಸಂಚಿಕೆಯಿಂದ ಎಂ. ವೆಂಕಟಕೃಷ್ಣಯ್ಯನವರು ವಹಿಸಿಕೊಂಡರು. ಪತ್ರಿಕೆಯು ನಾಲ್ಕನೆಯ ವರ್ಷಾರಂಭದ ಸಂಚಿಕೆಯಲ್ಲಿ ಅದೇ ಉದ್ದೇಶ-ಎಂದರೆ 'ಪಾಶ್ಚಿಮಾತ್ಯ ಶಾಸ್ತ್ರಗಳು', 'ಸರ್ಕಾರಿ ಏರ್ಪಾಡುಗಳು', 'ಸ್ವದೇಶ-ಅನ್ಯದೇಶ ವೃತ್ತಾಂತಗಳು', 'ಕುಟುಂಬ ವರ್ತಮಾನಗಳು' ಇವನ್ನು ಸಾದರಪಡಿಸುವ ಉದ್ದೇಶವನ್ನೇ ಇಟ್ಟುಕೊಂಡಿದ್ದರು. ಸಂಪಾದಕರ ಉನ್ನತ ನೀತಿಮತ್ತೆ, ಧೀರ ಮನೋವೃತ್ತಿ - ಇವುಗಳಿಂದಾಗಿ ಈ ಪತ್ರಿಕೆಯು ತನ್ನ ೧೦-೧೨ ವರ್ಷಗಳ ಅಸ್ತಿತ್ವದಲ್ಲಿ ಉತ್ತಮ ಅಭಿರುಚಿಯ ಮೇಲ್ಮಟ್ಟದ ಪತ್ರಿಕೆಯಾಗಿ ಮೆರೆಯಿತು.

ಜಾಗೃತಿಯ ಕಾಲದ ಮೊದಲ ವಾರ್ತಾಪತ್ರಿಕೆಯೆಂಬ ಗೌರವವು, ಧಾರವಾಡದ 'ಚಂದ್ರೋದಯ'ಕ್ಕೆ ಸಲ್ಲತಕ್ಕದು (೧೮೭೬–) ಉತ್ತರ ಕರ್ನಾಟಕದಲ್ಲಿ ಆಗ ಯಾವ ಒಂದು ಕನ್ನಡ ಪತ್ರಿಕೆಯೂ ಜೀವಂತವಿರಲಿಲ್ಲ. (ಮರಾಠೀ, ಭಾಷೆಯಲ್ಲಿ ಕರ್ನಾಟಕ ವಾರ್ತೆಯುಳ್ಳ ಪತ್ರಿಕೆಗಳಿದ್ದುದನ್ನು ನೋಡಿದ್ದೇವೆ.) ಚಂದ್ರೋದಯವು ಮಾತ್ರ ಕನ್ನಡದ್ದೇ ಆಗಿ ೨೫ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದದ್ದೊಂದು ಸಾಹಸದ ಮಾತಾಗಿದೆ. ಅದರ ವಿಷಯವ್ಯಾಪ್ತಿಯು ಧಾರವಾಡ ಶಹರದಿಂದ ಹಿಡಿದು ವಿದೇಶಗಳ ಬಿಡಿಬಿಡಿಯಾದ ಸುದ್ದಿಗಳ ವರೆಗೂ ಹರಡಿತ್ತು. ವಿದೇಶೀ ಸುದ್ದಿಗಳನ್ನು ಕೊಡುವಲ್ಲಿ ಯಾವುದೇ ಔಚಿತ್ಯ ಇಲ್ಲವೆ ಸಾಮಯಿಕತೆ ಕಂಡುಬರುವುದಿಲ್ಲ. ರಶಿಯ–ಅಫಗಾನಿಸ್ತಾನಗಳ ನಡುವೆ ಯುದ್ಧ ನಡೆದಾಗ :–

"ಈ ಸ್ವಾರಿಯಲ್ಲಿ ಅಫಗಾಣ ಕಡೆಯ ಸುಮಾರು ೫೦೦ ಜನರು ನಾಶ ಹೊಂದಿದರು. ರಶಿಯನ್ ಕಡೆಯ ೧೦–೧೫ ಜನ ಮರಣಪಟ್ಟರು. ಹೀಗೆ ಅಫಗಾಣರ ಪರಾಭವವಾದ ಬಳಿಕ ಅಫಗಾಣರ 'ರಶೀಲುಲ್ಲಾ' ಎಂಬ ದುಃಖೋದ್ಗಾರವೂ ರಶಿಯನ್ನರ 'ಹುರ್ರಾ' ಎಂಬ ಆನಂದೋದ್ಗಾರವೂ ಅಲ್ಲಲ್ಲಿ ಹೊರಬಿತ್ತು."

–ಎಂಬುದಾಗಿ ಮೋಜಿನ ರೀತಿಯಲ್ಲಿ ಬರೆದದ್ದು ಕಂಡುಬರುತ್ತದೆ (೧೮–೪–೧೮೮೫ರ ಸಂಚಿಕೆ).

ಅದರಂತೆ ರಶಿಯದ ಝಾರನು ಇಂಗ್ಲೆಂಡಿನ ಡ್ಯೂಕ್ ಆಫ್ ಎಡಿನ್‌ಬರೋನಿಗೆ ಬರೆದ ಪತ್ರ : ವಿಕ್ಟೋರಿಯಾ ರಾಣಿಯ ಜರ್ಮನಿಯ ಪ್ರವಾಸ–ಇಂಥ ಸುದ್ದಿಗಳನ್ನು ಕೊಡುವಲ್ಲಿ, ಇಂಗ್ಲಿಷ್ ಪತ್ರಿಕೆಗಳಿಂದ ಕೈಗೆಟಕಿದವುಗಳನ್ನು ಪ್ರಕಟಿಸುತ್ತಿದ್ದರೆಂದು ಕಾಣುತ್ತದೆ.

ಆದರೆ ಹಿಂದುಸ್ತಾನದ ವಾರ್ತೆಗಳನ್ನು ಕೊಡುವಾಗ ಮತ್ತು ಸಂಪಾದಕೀಯಗಳನ್ನು ಬರೆಯುವಾಗ ಚಂದ್ರೋದಯದ ಸಂಪಾದಕರು ದೇಶಾಭಿಮಾನವನ್ನೂ ಸ್ವಂತಿಕೆಯನ್ನೂ ತೋರ್ಪಡಿಸಿದ್ದಾರೆ.

ತನ್ನ ೧೮೮೯ರ ನವೆಂಬರ್ ಎರಡನೆಯ ತಾರೀಖಿನ ಸಂಚಿಕೆಯಲ್ಲಿ, 'ಮೈಸೂರ ಸಂಸ್ಥಾನವು ಪ್ರಿನ್ಸ್ ಆಲ್ಬರ್ಟ್ ಬಂದಾಗ ಸಾವಿರಾರು ರೂ.ಗಳನ್ನು ವೆಚ್ಚಮಾಡಿ ವೈಭವದಿಂದ ಸ್ವಾಗತಿಸಿತು. ಅದೇ, ಭಾರತದ ರಾಷ್ಟ್ರೀಯ ಕಾಂಗ್ರೆಸ್‌ಗಾಗಿ, ಆಸ್ಥೆಯಿಂದ ದುಡಿಯುತ್ತಿದ್ದ ಬ್ರಾಡ್‌ಲಾ ಲಂಡನ್ನಿನಿಂದ ಇಲ್ಲಿಗೆ ಬಂದಾಗ, ಸತ್ಕರಿಸುವ ವಿಚಾರವನ್ನು ಮಾಡಲಿಲ್ಲ' ಎಂದು ಟೀಕಿಸಿದೆ.

'ಯಾವುದೇ ಯುದ್ಧವಾಗಲಿ, ನಮ್ಮ ದೇಶದ ಜನಧನ ಬಲವನ್ನು ಕಿತ್ತುಕೊಳ್ಳುವುದು ಇಂಗ್ಲೆಂಡಿನ ಕ್ರಮವೇ ಆಗಿದ್ದಿತು'– ಎನ್ನುತ್ತ ಇಂಗ್ಲೆಂಡ್–ರಶಿಯಗಳ ನಡುವೆ ಆದ ಯುದ್ಧ ಕಾರಣದಿಂದ ಪತ್ರಿಕೆ ಹೀಗೆ ಬರೆಯಿತು:

"ಈ ಯುದ್ಧದ ಖರ್ಚು ಪೂರೈಸಿಕೊಡುವುದಕ್ಕೆ, ಸರಕಾರದವರು ಎಲ್ಲ ಎಸ್ಟಾಬ್‌ಲಿಶ್‌ಮೆಂಟುಗಳಲ್ಲಿಯ ಖರ್ಚನ್ನು ಆದಷ್ಟು ಕಡಿಮೆ ಮಾಡಬೇಕೆಂದಿದ್ದಾರೆ. ಅದರಂತೆ ಸಣ್ಣ ಸಣ್ಣ ಪಗಾರದ ಸರಕಾರೀ ಕಾರಕೂನರಾದರೂ ಪ್ರತಿ ತಿಂಗಳಿಗೆ ತಮ್ಮ ತಮ್ಮ ಪಗಾರದಿಂದ ಒಂದೆರಡು ಶುಭ್ರಗಳನ್ನು (ರುಪಾಯಿ) ಮುಡುಪು ತೆಗೆದಿಡುವ ಪ್ರಸಂಗವು ಎಲ್ಲಿ ಒದಗುವದೋ ಏನೊ !"

ಮತ್ತೆ ಈ ವೆಚ್ಚದ ಕಡಿತದ ಮೇಲ್ವಿಚಾರಣೆಗೆ ಓರ್ವ ಬ್ರಿಟಿಶ್ ಆಫೀಸರರನ್ನು ನೇಮಿಸುವ ವಿಚಾರ ಸರಕಾರದಿದ್ದಾಗ ಪತ್ರಿಕೆ ಹೀಗೆ ಬರೆಯಿತು :

'ಸಾವಿರಾರು ರೂಪೈ ಪಗಾರ ಗೊತ್ತುಮಾಡಿ ಇಂಥ ಜಡ ಹೊಟ್ಟೆಯ ಗೌರಕಾಯಸ್ಥರನ್ನು ನೇಮಿಸುವ ಬದಲು, ಅವರ ೧/೪ ಪಗಾರದ ಮೇಲೆ ಬರಲಿಕ್ಕೆ ಶಿದ್ಧವಿರುವ ನೇಟಿವ್ಹರನ್ನು ಯಾಕೆ ನೇಮಿಸಿಕೊಳ್ಳಬಾರದು? ನೇಟಿವ್ಹರಲ್ಲಿ ನಿಷ್ಪಕ್ಷಪಾತಿ ವಿಶ್ವಾಸಿಕರೂ ಯಾರೂ ಇಲ್ಲವೋ? ಬದಲಾಗಿ ಇಂಥ ಗೌರಕಾಯಸ್ಥ ಅಮಲದಾರರಿಂದ ೧೦೦ಕ್ಕೆ ೫೦ರಂತೆ ಸಂಬಳದಲ್ಲಿ ಕಡಿಮೆ ಮಾಡಿದರೆ, ಇಲ್ಲವೆ ಅವರ ಅನುಪಯೋಗಿ ಸ್ಥಳಗಳನ್ನೇ ತೆಗೆದುಬಿಟ್ಟರೆ ಹಣವು ತಕ್ಕಮಟ್ಟಿಗೆ ಪುರವತೆಯಾಗುವುದು. ಹೀಗೆ ಯೂರೋಪಿಯನ್ ಕಾಮದಾರರ ಕೆಲವು ಸ್ಥಳಗಳನ್ನು ಕಡಿಮೆ ಮಾಡಿ, ಅವರಿಗೆ ಅವರವರ ಸ್ವದೇಶದ ಅಥವಾ ಯುದ್ಧವಾಗುವ ಕಡೆಯ ಮಾರ್ಗ ತೋರಿಸಿದರೆ ಒಳಿತಾಗುವುದು.'

ಅಂದರೆ ಬ್ರಿಟಿಶ್ ಅಧಿಕಾರಿಗಳು ಇಲ್ಲಿಂದ ಹೋಗಬೇಕು ! ಆಗಿನ ದಿನಗಳಲ್ಲಿ ಹೀಗೆ ಹೇಳುವುದಕ್ಕೆ ಎಂಟೆದೆಯೇ ಬೇಕಲ್ಲವೆ !

ಪತ್ರಿಕೆಯಲ್ಲಿ ಸ್ಥಳೀಯ ಹಾಗೂ ಪ್ರಚಲಿತ ಸುದ್ದಿಗಳಿಗೆ ತುಂಬಾ ಪ್ರಾಶಸ್ತ್ಯವಿದ್ದಿತು. ಪೇಟೆಯ ಧಾರಣೆ, ಶೈಕ್ಷಣಿಕ ವಿಚಾರ, ವರ್ಗಾವರ್ಗಿ ಇವುಗಳನ್ನು ಕೊಡುವಾಗ ಕನ್ನಡ ವಿಷಯಕವಾದ ಕಳಕಳಿ ಪರ್ಯಾಯವಾಗಿ ಕಾಣಿಸಿಕೊಳ್ಳುತ್ತಿತ್ತು.

ಇದು ಕಲ್ಲಚ್ಚಿನ ನಾಲ್ಕೇ ಪುಟಗಳ ಪತ್ರಿಕೆ. ಆದರೇನು, ಮುದ್ರಿಸುತ್ತಿದ್ದ ಪ್ರತಿಗಳು ಎರಡು ನೂರು ಮಾತ್ರ, ಪತ್ರಿಕೆಯಲ್ಲಿ ಸುಧಾರಣೆ ಮಾಡಬೇಕೆಂದರೆ ಚಂದಾದಾರರ ಸಂಖ್ಯೆ ಏರುತ್ತಲೇ ಇಲ್ಲ! ಹೀಗೆ ಸುಮಾರು ಹದಿನೈದು ವರ್ಷ ಸಾಗಿಸಿದ ಮೇಲೆ ತಮ್ಮ ಸಂಪಾದಕೀಯದಲ್ಲಿ–

"ನಮ್ಮ ವರ್ತಮಾನಪತ್ರದ ಉಪಯುಕ್ತತೆಯನ್ನು ಹೆಚ್ಚುಗೊಳಿಸುವುದಕ್ಕೆ ನಾವು ಯಾವ ಪ್ರಕಾರ ಶ್ರಮ ಮಾಡುತ್ತೇವೆಂಬುದು ವಾಚಕರ ಗಮನಕ್ಕೆ ಬಂದಿರಲು ಸಾಕು. ಆದರೆ ನಾವು ಹಣಿ ಕೊಯ್ದು ಮಣಿ ಮಾಡಿದರೂ (!) ಚಂದಾದಾರರ ಸಂಖ್ಯೆ ಹೆಚ್ಚಾಗಲೊಲ್ಲದೆಂದು ನೋಡಿ ಕಿಂಚಿತ್ತು ವ್ಯಸನವಾಗುತ್ತದೆ. ಅಲ್ಲದೆ ಈಗಿದ್ದ ನಮ್ಮ ಪ್ರಿಯ ಚಂದಾದಾರರು ಬೇಗ ಚಂದಾಹಣವನ್ನು ಕಳಿಸಿಕೊಡಲೊಲ್ಲರು. ಈ ಪರಿಸ್ಥಿತಿ

ಸುಧಾರಿಸಿದ್ದಾದರೆ ಮುಂದಿನ ವರ್ಷದೊಳಗಾಗಿ ಈ ಪತ್ರದಲ್ಲಿ ನಮ್ಮ ಎಲ್ಲ ವಾಚಕರ ಸಂತೋಷಕ್ಕೆ ಪಾತ್ರವಾಗುವಂಥ ಸುಧಾರಣೆಗಳನ್ನು ಮಾಡುವ ವಚನವೀಯುತ್ತೇವೆ."

ಆದರೇನು ಆ 'ಪ್ರಿಯ' ಚಂದಾದಾರರ ಮನಃಪರಿವರ್ತನೆಯಾದಂತೆ ಕಾಣಲಿಲ್ಲ. ಪತ್ರಿಕೆ ೧೯೦೧ನೆಯ ವರ್ಷ ನಿಂತುಹೋಯಿತು.

ಅಂದ ಹಾಗೆ ಯಾರು ಇದರ ಸಂಪಾದಕರು? ೧೯ನೆಯ ಶತಮಾನದ ಪತ್ರಿಕೆಗಳಲ್ಲಿ, ಪ್ರಕಾಶಕ-ಮುದ್ರಕರ ಹೆಸರು (೧೮೬೭ರ ಕಾಯದೆಯನ್ವಯ) ಇರುತ್ತಿತ್ತೇ ವಿನಹ ಸಂಪಾದಕರದು ಇರದಿದ್ದರೂ ನಡೀತಿತ್ತು. ಆದರೆ ಪ್ರಕಾಶಕರೂ ಸಂಪಾದಕರೂ ಒಬ್ಬರೇ- ಈ ಪತ್ರಿಕೆಗೆ. ಅವರ ಹೆಸರು ಹುಚ್ಚಯ್ಯ ಸಂಗಯ್ಯ ವಿಭೂತಿಮಠ. ಅವರ ಮಗ ಗದಿಗೆಯ್ಯನವರು ತಂದೆಯ ಪತ್ರಿಕೋದ್ಯಮವನ್ನು ಆ ಮುಂದೆ ಬೇರೊಂದು ಬಗೆಯಲ್ಲಿ ಮುಂದುವರಿಸಿದರು.

ರಾಷ್ಟ್ರೀಯ ಮನೋವೃತ್ತಿಯ ಹಿರಿಯ ನಿದರ್ಶನವೆಂದು **ಕನ್ನಡ ಸುವಾರ್ತೆ**ಯನ್ನು ಗಮನಿಸಬೇಕು. (ಮಂಗೇಶ ನಾಡಕರ್ಣಿ ಎಂಬವರು ಅದರ ಸಂಪಾದಕರಿದ್ದರು.) ಮುಂಬಯಿಯ ವಾತಾವರಣವು ಅದಕ್ಕೆ ಅನುಕೂಲವೆ ಆಗಿದ್ದಿತು. ಬ್ರಿಟಿಶರು ಉತ್ತರ ಬರ್ಮಾವನ್ನು ವಶಪಡಿಸಿಕೊಂಡಾಗ, ದಿ.೮-೧-೧೮೮೬ರ ಸಂಚಿಕೆಯಲ್ಲಿ 'ಕನ್ನಡ ಸುವಾರ್ತೆ'ಯು ಅದನ್ನು ಟೀಕಿಸಿತು. ಬರ್ಮಾದ ನಿರ್ವಹಣೆಯ ೩೦ ಸಾವಿರ ಪೌಂಡಿನ ವೆಚ್ಚವು ಭಾರತದ ಜನತೆಯ ಮೇಲೆ ಬೀಳುವುದೆಂಬುದು ಅದರ ಕಾರಣವಾಗಿದ್ದಿತು. ಈ ನಿಮಿತ್ತದಿಂದ, ಇಂಗ್ಲೆಂಡದ ಆಗಿನ ಮುಖ್ಯಮಂತ್ರಿ ಗ್ಲ್ಯಾಡ್‌ಸ್ಟನ್ನನನ್ನೂ ಪತ್ರಿಕೆಯು ಟೀಕಿಸಿತು (೫ ಮತ್ತು ೨೬ ಫೆಬ್ರವರಿ ೧೮೮೬).

ದೇಶದ ಆರ್ಥಿಕ ಸ್ಥಿತಿಯ ಸಮಾಲೋಚನೆಯು ಈ ಪತ್ರಿಕೆಯಲ್ಲಿ ಮೇಲಿಂದ ಮೇಲೆ ಕಂಡುಬರುತ್ತದೆ. ಆದಾಯ ತೆರಿಗೆ ಹೆಚ್ಚಿಸಿದಾಗ, ಬೆಳ್ಳಿ-ಬಂಗಾರದ ಬೆಲೆ ಇಳಿಮುಖವಾದಾಗ, ಅದರಂತೆ ವಾರ್ಷಿಕ ಮುಂಗಡ ಪತ್ರವನ್ನು ಮಂಡಿಸಿದಾಗ ತನ್ನ ವಿವಂಚನೆಯನ್ನು ವ್ಯಕ್ತಮಾಡಿದೆ (೫-೧೦-೧೮೮೮ ಮತ್ತು ೫-೪-೧೮೮೯). ಬ್ರಿಟಿಶ್ ಸರಕಾರವು ನೇಮಿಸಿದ ಆರ್ಥಿಕ ಸಮಿತಿಯಲ್ಲಿ ಒಬ್ಬ ಭಾರತೀಯನೂ ಇಲ್ಲವೆಂದು ಪ್ರಸ್ತಾಪಿಸುತ್ತ, ದೇಶದ ಆರ್ಥಿಕ ಶೋಷಣೆಯ ಬಗ್ಗೆ ಸುದೀರ್ಘ ಲೇಖವನ್ನೇ ಬರೆಯಿತು. ಹೀಗೆಯೇ ಪಬ್ಲಿಕ್ ಸರ್ವಿಸ್ ಕಮೀಶನ್, ಜೈಲುಗಳು, ಸರಕಾರೀ ಗೌಪ್ಯ ವಿಷಯಕ ಕಾಯದೆ ಮುಂತಾದುವನ್ನು ಕಾಲಕಾಲಕ್ಕೆ (೯-೨-೧೮೮೪, ೩೧-೫-೧೮೮೯ ಮತ್ತು ೪-೧೧-೧೮೮೯) ಟೀಕೆ ಮಾಡಿದೆ.

ಕನ್ನಡ ಸುವಾರ್ತೆಯು ಅದೇ ಆರಂಭವಾಗಿದ್ದ ರಾಷ್ಟ್ರೀಯ ಕಾಂಗ್ರೆಸ್ಸಿನ ಬಗ್ಗೆ ವಿಶೇಷ ಸಹಾನುಭೂತಿಯನ್ನು ತಳೆದಿತ್ತು. ಮುಸ್ಲಿಮರು ಆ ಸಂಸ್ಥೆಯಿಂದ ಸಿಡಿಯ ಬಯಸಿದಾಗ ಕಾಂಗ್ರೆಸ್ಸಿನ ಐಕ್ಯದ ಬಗ್ಗೆ ತನ್ನ ಅನುಪಾತವನ್ನು ವ್ಯಕ್ತ ಮಾಡಿತಲ್ಲದೆ

ಪಾರ್ಸಿ ಜನರೂ ಹಾಗೆ ಮಾಡಕೂಡದು ಎಂದು ಕಳಕಳಿಯಿಂದ ವಿನಂತಿಸಿತು (೧೭-೫-೧೮೮೮). ಮೇಲೆ ಉಲ್ಲೇಖಿಸಿದ ಬ್ರ್ಯಾಡ್‌ಲಾ ಮತ್ತು ರಾಷ್ಟ್ರೀಯ ಕಾಗ್ರೆಸ್ಸಿನ ಕಾರ್ಯಯೋಜನೆಯ ಬಗ್ಗೆ ಮುಂದೊಂದು ಸಂಚಿಕೆಯಲ್ಲಿ (೩-೩-೧೮೯೦) ವಿವರವಾಗಿ ಪರಾಮರ್ಶಿಸಿತು.

ಮುಂಬಯಿ ಪ್ರಾಂತದ ಆಗುಹೋಗುಗಳಿಗೆ ಈ ಪತ್ರಿಕೆಯಲ್ಲಿ ಸ್ವಾಭಾವಿಕವಾಗಿಯೇ ಮಹತ್ವವಿದ್ದಿತು. ವಾಯುಮಂಡಲವೀಕ್ಷಣ ಶಾಸ್ತ್ರವನ್ನು ಭಾರತದಲ್ಲಿ ಪ್ರಥಮತಃ ರೂಢಿಸಿದ ಖ್ಯಾತಿ ಮೂಸ್ ಎಂಬವನಿಗೆ ಸಲ್ಲುತ್ತದೆ. ಮುಂಬಯಿ ನಗರದ ಕೊಲಾಬಾ ವೀಕ್ಷಣಾಲಯದ ಹುಟ್ಟಿಗೆ ಅವನೇ ಕಾರಣ. ಅವನ ಸಂಬಳವನ್ನು ಮುಂಬಯಿ ಸರಕಾರವು ಕಡಿಮೆ ಮಾಡಬಯಸಿದಾಗ, 'ಕನ್ನಡ ಸುವಾರ್ತೆ' ಅದನ್ನು ಖಂಡಿಸಲು ಮುಂದಾಯಿತು (೧೧-೫-೧೮೮೮) ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ, ಮುಂಬಯಿ ಕರ್ನಾಟಕವನ್ನು ಶಾಮರಾವ ವಿಠಲ ಕೈಕಿಣಿ ಇಲ್ಲವೆ ವೆಂಕಟೇಶ ತಿರುಮಲ ಇನಾಂದಾರ ಇವರು ಪ್ರತಿನಿಧಿಸಬೇಕು ಎಂಬ ವಿಧಾಯಕ ಸೂಚನೆಯು ಈ ಪತ್ರಿಕೆಯ ಬೇರೊಂದು ಸಂಚಿಕೆಯಲ್ಲಿ ಕಂಡುಬರುತ್ತದೆ.

ವ್ಹಾಯಿಸ್‌ರಾಯರಾಗಿದ್ದ ಡಫರೀನ್, ಲ್ಯಾನ್ಸ್‌ಡೌನ್ ಹೇಗೇ ಇರಲಿ, ಮುಂಬಯಿಯ ಆಗಿನ ಗವರ್ನರ್ ಲಾರ್ಡ ರೇ (Reay) ಉದಾರಭಾವದವನೆಂದು 'ಕನ್ನಡ ಸುವಾರ್ತೆ'ಯು ಬಗೆದಿದ್ದಿತು. ಆದರೆ ಅವನು ತಪ್ಪು ಮಾಡಿದನೆಂದು ಅನಿಸಿದಾಗ ಸುಮ್ಮನೆ ಬಿಟ್ಟುದಿಲ್ಲ. ಮುಂಬಯಿ ವಿಶ್ವವಿದ್ಯಾನಿಲಯದ ಕುಲಪತಿಯಾಗಿ ಅವನು ೧೮೮೯ನೆಯ ವರ್ಷದ ಪದವೀದಾನ ಸಮಾರಂಭದಲ್ಲಿ ಮಾಡಿದ ಭಾಷಣವು ಶೈಕ್ಷಣಿಕ ದೃಷ್ಟಿಯಿಂದ ನಿಷ್ಪ್ರಯೋಜನಕಾರಿ ಎಂದು ಟೀಕೆ ಮಾಡಿತು (೨೫-೧-೧೮೮೯).

ಪ್ರಾಂತದ ಶೈಕ್ಷಣಿಕ ವಿಚಾರದಲ್ಲಿ 'ಕನ್ನಡ ಸುವಾರ್ತೆ'ಯು ಸಣ್ಣ ಸಣ್ಣ ಅಂಶಗಳಿಗೂ ಗಮನ ಕೊಟ್ಟಿದ್ದರ ನಿದರ್ಶನಗಳಿವೆ. ಮುಂಬಯಿಯ ವಿದ್ಯಾಇಲಾಖೆಯಲ್ಲಿ ಉತ್ತಮ ರೀತಿಯಿಂದ ಕನ್ನಡಕ್ಕಾಗಿ ಸೇವೆ ಸಲ್ಲಿಸುತ್ತಿದ್ದ ವೆಂಕಟ ರಂಗೋ ಕಟ್ಟಿಯವರನ್ನು ನಿವೃತ್ತಿಗೊಳಿಸುವುದು ಬೇಡ; ಅದು ಅನಿವಾರ್ಯವೇ ಎಂದಾದರೆ, ಇನ್ನೊಬ್ಬ ಶಿಕ್ಷಣ ತಜ್ಞ ರಾ.ಹ. ದೇಶಪಾಂಡೆ ಆ ಸ್ಥಾನಕ್ಕೆ ಬರಲಿ ಎಂಬ ಸೂಚನೆಯನ್ನು ಮಾಡಿದುದಿದೆ (೯-೧೨-೧೮೮೯).

ಹೊರನಾಡಿನಲ್ಲಿದ್ದರೂ ಈ ಪತ್ರಿಕೆಯು ಕನ್ನಡ ಸೀಮೆಯತ್ತ ಗಮನ ಕೊಡುತ್ತಲೇ ಇದ್ದಿತು. ಇದು ಉತ್ತರ ಕನ್ನಡ ಜಿಲ್ಲೆಗೆ ವಿಶೇಷವಾಗಿ ಅನ್ವಯಿಸುತ್ತದೆ. ಅಲ್ಲಿಯ ತಾಲೂಕು ಮಟ್ಟದ ವಿವಿಧ ಚಟುವಟಿಕೆಗಳು, ರೈತ ಜನರ ಸಂಕಷ್ಟಗಳು, ಅಧಿಕಾರಿಗಳ ದುಷ್ಕೃತ್ಯಗಳು, ಇವೆಲ್ಲ ವಿವರವಾಗಿ ವರದಿಯಾಗಿವೆ. ಅಲ್ಲಿಯ ಆಡಳಿತದ ಅವ್ಯವಸ್ಥೆಯನ್ನು ಬಣ್ಣಿಸಿದ ಮೇಲೆ ಜಿಲ್ಲೆಯನ್ನು ಮರಳಿ ಮದ್ರಾಸಿಗೆ ಸೇರಿಸಬೇಕು' ಎಂಬ ಸೂಚನೆಯನ್ನು ಮಾಡಲಾಯಿತು (೬-೪-೧೮೮೮).

ಹೀಗೆ ಬರ್ಮಾದಿಂದ ಭಟಕಳದ ವರೆಗಿನ ಚಿಂತನೆಯಲ್ಲಿ ತೊಡಗಿದ್ದ ಈ ಪತ್ರಿಕೆಯು ಬಹು ಮೇಲ್ಮಟ್ಟದ್ದಾಗಿತ್ತು. ಅದರ ಪ್ರೌಢವಿಚಾರಸರಣಿಯೂ, ಸಮತೋಲನ ದೃಷ್ಟಿಯೂ ಆದರ್ಶಪ್ರಾಯವೆನ್ನಬಹುದು.* ಅಂದಿನ ಮುಂಬಯಿಯಲ್ಲಿ ಕನ್ನಡಿಗರ ವಸತಿ ಕಡಿಮೆಯಿದ್ದರೂ, ಇಂತಹ ಉತ್ಕೃಷ್ಟ ದರ್ಜೆಯ ಪತ್ರಿಕೆಯನ್ನು ಹತ್ತು ವರ್ಷಕ್ಕೆ ಮಿಕ್ಕಿ ನಡೆಯಿಸಿಕೊಂಡು ಬಂದ ಈ ಪತ್ರಿಕಾಕರ್ತರು ವಿಶೇಷ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಇದರಷ್ಟೆ ಸಮಾನವಾಗಿ ಮೇಲೆದ್ದು ನಿಂತ ಇನ್ನೊಂದು ಮುಂಬಯಿಯ ಸಾಪ್ತಾಹಿಕವೆಂದರೆ, **ಹವ್ಯಕ ಸುಬೋಧ.**+ ಕ್ರಿ.ಶ. ೧೮೮೫ರಿಂದ ೧೮೮೯ರ ವರೆಗೆ ಬಾಳಿದ ಈ ಪತ್ರಿಕೆಯು 'ಕನ್ನಡ ಸುವಾರ್ತೆ'ಯಂತೆಯೇ ಅಧಿಕ ಪ್ರಸಾರದ ಪತ್ರಿಕೆಯಾಗಿದ್ದಿತು (ಸುಮಾರು ಒಂದು ಸಾವಿರ). ಎರಡರಲ್ಲಿಯೂ ಸೌಮ್ಯ ಸ್ವರೂಪದ ಪೈಪೋಟಿ ಇದ್ದಿತು! ಆದರೆ ಎರಡೂ ಪತ್ರಿಕೆಗಳು ರಾಷ್ಟ್ರೀಯ ಧೋರಣೆಯಾಗಿದ್ದುವು; ಜನತೆಯ ಹಿತವನ್ನೇ ತಮ್ಮ ಗುರಿಯನ್ನಾಗಿ ಇಟ್ಟುಕೊಂಡಿದ್ದುವು. 'ಹವ್ಯಕ ಸುಬೋಧ'ದಲ್ಲಿಯೂ ನಾವು ವಿಶಾಲವಾದ ವಾರ್ತಾ ವ್ಯಾಪ್ತಿಯನ್ನೂ ಪ್ರೌಢವಾದ ಪರಾಮರ್ಶೆಯನ್ನೂ ಕಾಣುತ್ತೇವೆ.

ಅದರ ಸಂಪಾದಕರಾಗಿದ್ದ ಕರ್ಕಿ ವೆಂಕಟರಮಣಶಾಸ್ತ್ರಿಗಳ ಲೇಖನಿಯು ಹೆಚ್ಚು ನಿಶಿತವಾದದ್ದೆನಿಸುತ್ತದೆ. ವಿದೇಶೀ ವಿನಿಮಯ ಹಣದ ಅಭಾವವು ಆಗೂ ಇದ್ದಿತಾದ ಕಾರಣ. ವೆಂಕಟರಮಣಶಾಸ್ತ್ರಿಗಳ ಕೆಲವು ಪರಿಹಾರ ಕ್ರಮಗಳನ್ನು ಸೂಚಿಸಿದ್ದಾರೆ: 'ಬಿಳಿಯ ಅಧಿಕಾರಿಗಳ ಸಂಬಳದ ನಿಮಿತ್ತದಿಂದ ಅಪಾರವಾದ ಹಣವು ಪೌಂಡಿನ ರೂಪದಲ್ಲಿ ಹರಿದು ಹೋಗುತ್ತಲಿದೆ. ಆದ್ದರಿಂದ ಇನ್ನು ಮುಂದೆ ಹಿರಿಯ ಹುದ್ದೆಗಳಿಗೆ ಆದಷ್ಟು ಭಾರತೀಯರನ್ನೇ ನೇಮಿಸಬೇಕು : ಮತ್ತು ಈಗ ಇದ್ದ ಈ ಬ್ರಿಟಿಶ್ ಅಧಿಕಾರಿಗಳಿಗೆ ರೂಪಾಯಿಯ ಮೌಲ್ಯದಲ್ಲಿಯೇ ಸಂಬಳವನ್ನು ಕೊಡಬೇಕು. ಈ ಅಧಿಕಾರಿಗಳು ಬಳಸುವಂಥ ವಿದೇಶೀ ಸರಕುಗಳಿಗೆ ಸುಂಕವನ್ನು ವಿಧಿಸಬೇಕು; ಇನ್ನು ಭಾರತದ ಬೊಕ್ಕಸದಿಂದ ಪೆನ್ಶನ್ ಪಡೆಯುತ್ತ ಇಂಗ್ಲೆಂಡಿನಲ್ಲಿ ವಾಸಿಸುವ ಅಧಿಕಾರಿಗಳಿಗೆ, ಪೌಂಡಿನ ರೂಪದಲ್ಲಿ ಆದಾಯಕರವನ್ನು ವಸೂಲು ಮಾಡಬೇಕು. ಬ್ರಿಟಿಶರ ಅಸ್ತಿತ್ವವನ್ನೆ ಅಲುಗಾಡಿಸುವ ಸೂಚನೆಗಳಿವು !

ಅನ್ಯಾಯದ ಖಂಡನೆಯು 'ಹವ್ಯಕ ಸುಬೋಧ'ದ ಅಧಿಕೃತ ಧೋರಣೆಯೇ ಆಗಿದ್ದಿತು. ಮದ್ರಾಸದ ಗವರ್ನರನಾಗಿದ್ದ ಕೊನ್ನೆಮಾರಾ. ದಕ್ಷಿಣ ಕನ್ನಡ ಜಿಲ್ಲೆಯ

---

* Report on native paper ಎಂಬ ಮುಂಬಯಿ ಸರಕಾರದ ಸಾಪ್ತಾಹಿಕ ಗೌಪ್ಯ ವರದಿಗಳ ಆಧಾರದ ಮೇಲಿಂದ. ಇಷ್ಟರ ವರೆಗಿನ ವಿವರಗಳನ್ನು ಕೊಡಲಾಗಿದೆ.

+ ಸುರುವಾತಿನ ಹೆಸರು–'ಹವ್ಯಕ ಸುಬೋಧ ಮತ್ತು ಕಾರವಾರ ಚಂದ್ರಿಕೆ.'

ಮಾರ್ಗವಾಗಿ ರಾಮೇಶ್ವರಕ್ಕೆ ಹೋಗುವವನಿದ್ದಾಗ, ಅವನ ಸ್ವಾಗತದ ಸಲುವಾಗಿ ಉಡುಪಿ. ಕುಂದಾಪುರಗಳ ರೈತರಿಂದ ಅಲ್ಲಿಯ ಅಧಿಕಾರಿಗಳು ೧೪ ಸಾವಿರ ರೂಪಾಯಿ ಸಂಗ್ರಹಿಸಿದರಂತೆ. ಇದಾವ ನ್ಯಾಯ? ಎಂದು ವೆಂಕಟರಮಣಶಾಸ್ತ್ರಿಗಳು ಪ್ರಶ್ನಿಸಿದ್ದಾರೆ. ಅದರಂತೆ. ಮೈಸೂರಿನ ದಿವಾನ್ ಶೇಷಾದ್ರಿ ಅಯ್ಯರ್ ಆದಿಯಾಗಿ ಮದ್ರಾಸೀ ಅಧಿಕಾರಿಗಳು ಮೈಸೂರ ಸಂಸ್ಥಾನದವರನ್ನು ಕಡೆಗಣಿಸುತ್ತಿರುವುದನ್ನು ಹಲವಾರು ರೀತಿಯಲ್ಲಿ ವಿವರಿಸಲಾಗಿದೆ. ಹಾಗೆಯೇ ಮುಂಬಯಿ ಕರ್ನಾಟಕದಲ್ಲಿ ಮರಾಠೀ ಅಧಿಕಾರಿಗಳು ಕನ್ನಡದ ಬಗ್ಗೆ ಅಲಕ್ಷ್ಯವನ್ನು ತೋರಿಸುತ್ತಿದ್ದುದೂ ಈ ಪತ್ರಿಕೆಯಲ್ಲಿ ಉಕ್ತವಾಗಿದೆ.

ಯಥಾಪ್ರಕಾರ ಉತ್ತರ ಕನ್ನಡ ಜಿಲ್ಲೆಯ ಸಂಕಷ್ಟಗಳು ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದಿವೆ. ಜಿಲ್ಲೆಯ ಅಧಿಕಾರಿಗಳ ಮೈಸೊಕ್ಕಿನ ನಡತೆ, ಲಂಚಗುಳಿತನ, ಸ್ತ್ರೀಲೋಲುಪತೆ, ಸರಕಾರೀ ಸೌಲಭ್ಯಗಳ ದುರುಪಯೋಗ–ಮುಂತಾದ ಅಂಶಗಳನ್ನು ಪದೇ ಪದೇ ಸಾರ್ವಜನಿಕರ ಗಮನಕ್ಕೆ ತಂದದ್ದಾಗಿದೆ. ಸರಕಾರೀ ಕಚೇರಿಗಳಲ್ಲಿಯ ಭ್ರಷ್ಟಾಚಾರದ ವಿವಿಧ ರೂಪಗಳನ್ನು ಅರಿಯ ಬಯಸುವವರು 'ಹವ್ಯಕ ಸುಬೋಧ' ವನ್ನು ಓದಿದರೆ ಸಾಕು–ಎನ್ನಿಸುವಷ್ಟು ಸವಿವರ, ಸುಸ್ಪಷ್ಟ ಚಿತ್ರಣ ಅಲ್ಲಿದೆ. ಅಧಿಕಾರಿಗಳ ಹೆಸರನ್ನು ತೆಗೆದುಕೊಂಡೇ. ನಿರ್ದಾಕ್ಷಿಣ್ಯವಾಗಿ ಅವರನ್ನು ಟೀಕಿಸಲಾಗುತ್ತಿತ್ತು. ವಿದೇಶೀಯರಲ್ಲದೆ. ದೇಶೀಯ ಅಧಿಕಾರಿಗಳೂ, ಈ ಹರಿತವಾದ ಲೇಖನಿಗೆ ತುತ್ತಾಗಿದ್ದಾರೆ.* ಪರಿಣಾಮವಾಗಿ 'ಹವ್ಯಕ ಸುಬೋಧ'ವು ಸರಕಾರದ ನಿರಂತರ ಕ್ಷೋಭೆಗೆ ಗುರಿಯಾಯಿತು.

ಜಿಲ್ಲೆಯ 'ವನದುಃಖ ನಿವಾರಣಾ' ಚಳವಳಿಯಂತೂ ಈ ಪತ್ರಿಕೆಯ ಮೂಲಕ ಹಲವಾರು ಅಧಿಕಾರಿಗಳ ಆಪೋಶನಕ್ಕೆ ಬಾಯ್ದೆರೆದಿದ್ದಿತು. ಆ ಪ್ರಕರಣ ಹೀಗೀದೆ :

ಅಖಂಡ ವನಶ್ರೀಯನ್ನು ಪಡೆದಿದ್ದ ಕೆನರಾ ಜಿಲ್ಲೆಯ ಅನೇಕರ ಬದುಕು ಅರಣ್ಯಸಂಪತ್ತನ್ನೆ ಅವಲಂಬಿಸಿದೆ. ಅದಕ್ಕೆ ಅಡ್ಡಿಯನ್ನುಂಟುಮಾಡುವ ಅರಣ್ಯಾಧಿಕಾರಿಗಳ ಲಂಚಗುಳಿತನ, ದಬ್ಬಾಳಿಕೆ ಮುಂತಾದವುಗಳನ್ನು ನಿಲ್ಲಿಸಲು ಶಿರಸಿಯಲ್ಲಿ 'ವನದುಃಖ ನಿವಾರಣ ಸಭೆ'ಯು ರಚಿತವಾಯ್ತು (೧೮೮೬). ರೈತರು, ಶಾನಭೋಗ, ಪಟೇಲರನ್ನು ಮುಂದಿಟ್ಟುಕೊಂಡು ಆಗಾಗ ಸಭೆ ಸೇರಿ, ಸರಕಾರಕ್ಕೆ ತಮ್ಮ ಮನವಿಗಳನ್ನು ಸಲ್ಲಿಸುತ್ತಿದ್ದರು. ಆ ಮುಂದೆ ಅದು ಕೇವಲ ಅರಣ್ಯಖಾತೆಯ ಪ್ರಕರಣವಾಗುಳಿಯದೇ ಇತರ ಖಾತೆಗಳಿಗೂ ವ್ಯಾಪಿಸಿತು. ಉದಾಹರಣೆಗೆ, ಅರಣ್ಯಾಧಿಕಾರಿಯ ಮಾತನ್ನು ಕೇಳಿ, ರೆವಿನ್ಯೂ ಅಧಿಕಾರಿಯು ಗೌಡ, ಶ್ಯಾನಭೋಗರನ್ನು ಅಂಥ ಸಭೆಯಲ್ಲಿ ಭಾಗವಹಿಸಕೂಡದೆಂದು ತಡೆಹಿಡಿದನು. ಶಿಕ್ಷಣಾಧಿಕಾರಿಯು ಮನವಿಗಳನ್ನು ಬರೆದು ಕೊಡುತ್ತಿದ್ದ ಬಡ ಶಾಲಾ ಮಾಸ್ತರರನ್ನು

---

* ಈ ಬಗೆಯ ವಿವರಗಳನ್ನು 'ಧೀರ ಪತ್ರಿಕೋದ್ಯಮಿ–ಕರ್ಕಿ ವೆಂಕಟರಮಣಶಾಸ್ತ್ರಿ' ಎಂಬ ನನ್ನ ಲೇಖದಲ್ಲಿ (ಕಸ್ತೂರಿ, ವಸಂತ ಸಂಚಿಕೆ, ಮೇ ೧೯೭೧) ಹೆಚ್ಚು ವಿಸ್ತಾರವಾಗಿ ಕೊಡಲಾಗಿದೆ.

ಕುಗ್ರಾಮಗಳಿಗೆ ವರ್ಗ ಮಾಡಲುದ್ಯುಕ್ತನಾದನು! 'ಹವ್ಯಕ ಸುಬೋಧ'ವು ೧೮೮೬–೮೭ನೆಯ ವರ್ಷಾವಧಿಯ ಅನೇಕ ಸಂಚಿಕೆಗಳಲ್ಲಿ ಇದನ್ನೆಲ್ಲ ಬಯಲಿಗೆ ಹಾಕುತ್ತ ನಡೆಯಿತು.

ಮಹತ್ವದ ಮಾತೆಂದರೆ, ಮುಂಬಯಿ ಪ್ರಾಂತದ ಜ್ಞಾನಪ್ರಕಾಶ, ಮಹಾರಾಷ್ಟ್ರಮಿತ್ರ, ಜಗದಾದರ್ಶ, ಸತ್ಯಸುಧಾ–ಮುಂತಾದ ಮರಾಠೀ ಪತ್ರಿಕೆಗಳೂ, ಬಾಂಬೆ ಸಮಾಚಾರ, ರಾಸ್ತಗಫ್ತರ ಮೊದಲಾದ ಗುಜರಾತೀ ಪತ್ರಿಕೆಗಳೂ, 'ಹವ್ಯಕ ಸುಬೋಧ'ದ ನಿಲುಮೆಯನ್ನು ಎತ್ತಿಹಿಡಿದು, ಆಗಾಗ ತಮ್ಮ ಸಂಚಿಕೆಗಳಲ್ಲಿ ಅದರ ಪ್ರಸ್ತಾಪ ಮಾಡುತ್ತಿದ್ದುದು. ಆಗಿನ ಪ್ರಮುಖ ಇಂಗ್ಲಿಷ್ ಪತ್ರಿಕೆಯೆನಿಸಿದ್ದ Native Opinion ತನ್ನ ೬–೬–೧೮೮೬ರ ಸಂಚಿಕೆಯಲ್ಲಿ Alleged Zulum in Kanara-ಎಂಬ ಶೀರ್ಷಿಕೆಯಡಿಯಲ್ಲಿ 'A vast amount of petty tyranny goes on in the District on account of the officials having very strange notions about their own infallibility. . . .Exposure is always difficult, even impossible. We must thank the people of Kanara' ಎಂದು ಬರೆಯಿತು. ಪಾರ್ಸಿ ಜನರ ಸುಪ್ರಸಿದ್ಧ ಗುಜರಾತೀ ಪತ್ರಿಕೆಯಾದ 'ಜಮೇ ಜಮಶೇದ್' ತನ್ನ ೨–೬–೧೮೮೯ರ ಸಂಚಿಕೆಯಲ್ಲಿ, "ಹವ್ಯಕ ಸುಬೋಧ"ವು ಒದಗಿಸಿರುವ ವಿವರಗಳು ಬ್ರಿಟಿಶ್ ಆಡಳಿತ ಪದ್ಧತಿಗೇನೆ ಕೆಟ್ಟ ಹೆಸರು ತರುವಂತಿವೆ. ದೇಶೀಯ ಅಧಿಕಾರಿಗಳು ಸ್ವತಃ ಹೇಡಿಗಳಂತೆ ವರ್ತಿಸುತ್ತಾರೆ ; ನಿರಪರಾಧಿ ಜನರಿಗೆ ಕಿರುಕುಳ ಕೊಡುತ್ತಾರೆ. ಗವರ್ನರ್ ರೇ ಮೊದಲು ಮಾಡಬೇಕಾದ ಕೆಲಸವೆಂದರೆ, ಸಂಬಂಧಪಟ್ಟ ಆ ರೆವಿನ್ಯೂ ಅಧಿಕಾರಿಯನ್ನೂ ಶಿಕ್ಷಣ ಖಾತೆಯ ಇನ್‌ಸ್ಪೆಕ್ಟರನನ್ನೂ ಮನೆಗೆ ಕಳಿಸಬೇಕು" ಎಂದು ಬರೆಯಿತು. ಕನ್ನಡ ಪತ್ರಿಕೆಯೊಂದರ ಪಾಂಚಜನ್ಯವು ಹೀಗೆ ಸೋದರ ಭಾಷೆಗಳಲ್ಲಿಯೂ ಮರುದನಿಯನ್ನು ಕೊಟ್ಟುದು ಕನ್ನಡ ಪತ್ರಿಕಾ ಪ್ರಪಂಚದಲ್ಲಿಯೇ ಅಪೂರ್ವ ಘಟನೆಯಾಗಿದೆ.

ಹಿರಿಯ ಸರಕಾರೀ ಅಧಿಕಾರಿಗಳು, ವಿಶೇಷತಃ ಉತ್ತರ ಕನ್ನಡ ಜಿಲ್ಲೆಯಲ್ಲಿದ್ದವರು 'ಹವ್ಯಕ ಸುಬೋಧ'ದ ಮೇಲೆ ಕಡು ಕೋಪಗೊಂಡು ಯೋಗ್ಯ ಸಮಯಕ್ಕಾಗಿ ಕಾಯುತ್ತಿದ್ದರು. ಕ್ರಿ.ಶ. ೧೮೮೮ನೆಯ ವರ್ಷದ ಸಂಚಿಕೆಗಳಲ್ಲಿ ವರದಿಯಾದ ಘಟನೆಯೊಂದು, ಅವರ ಸಹಾಯಕ್ಕೆ ಒದಗಿ ಬಂತು. ಆ ವರದಿಯಲ್ಲಿ ಮೊದಲಿಗೆ ಅಧಿಕಾರಿಗಳ ಸ್ತ್ರೀ ವ್ಯಾಮೋಹವನ್ನು ಪ್ರಸ್ತಾಪಿಸಿ, ಓರ್ವ ಫಾರೆಸ್ಟ್ ಆಫೀಸರನು ಮುಂಬಯಿಗೆ ಹಡಗಿನಲ್ಲಿ ಹೊರಟಾಗ, ಮಾರ್ಗಮಧ್ಯಕ್ಕೂ ಓರ್ವ ಲಘುನೀತಿಯ ಹೆಣ್ಣಿನೊಡನೆ ಲಲ್ಲೆಗೈದದ್ದನ್ನು ಉದಾಹರಣೆಯಾಗಿ ಕೊಡಲಾಯಿತು. ವೆಂಕಟರಮಣ ಶಾಸ್ತ್ರಿಗಳು ಆ ಅಧಿಕಾರಿಯ ಹೆಸರು, ಅವನು ಪ್ರವಾಸ ಮಾಡಿದ ಹಡಗಿನ ಹೆಸರು, ಆ ಹೆಣ್ಣಿಗಾಗಿ ರಿಸರ್ವ ಮಾಡಿಸಿದ ಕ್ಯಾಬಿನ್ ಇತ್ಯಾದಿ ಎಲ್ಲ ಪುರಾವೆಗಳನ್ನೂ ಒದಗಿಸಲು

ತಾನು ಸಿದ್ಧನೆಂದು ಮತ್ತೊಂದು ಸಂಚಿಕೆಯಲ್ಲಿ ಬರೆದರು. 'ಶಿವಾಜಿ' ಎಂಬ ಮರಾಠೀ ಪತ್ರಿಕೆಯು, 'ಸರಕಾರಕ್ಕೆ ನೈತಿಕ ಧೈರ್ಯವಿದ್ದುದಾದರೆ, 'ಹವ್ಯಕ ಸುಬೋಧ' ಕರ್ತರು ಕೊಟ್ಟ ಆಹ್ವಾನವನ್ನು ಸ್ವೀಕರಿಸಿ, ಸಂಬಂಧಿಸಿದ ಆ ಅಧಿಕಾರಿಯನ್ನು ಶಿಕ್ಷಿಸಲಿ' ಎಂದು ಬರೆಯಿತು.

ಸರಕಾರವು ಆ ಆಹ್ವಾನವನ್ನು ಸ್ವೀಕರಿಸಿರಬೇಕು! ಎಂದರೆ ವೆಂಕಟರಮಣಶಾಸ್ತ್ರಿಗಳ ಮೇಲೆ ದಾವೆ ಹೂಡಿತು. ಅತ್ಯಂತ ಏರಿಕೆಯ ಸ್ಥಿತಿಯಲ್ಲಿದ್ದ ಪತ್ರಿಕೆಯು ೧೮೮೯ರ ಕೊನೆಗೆ ಹಠಾತ್ತನೆ ನಿಂತುಹೋಯಿತು. ಮೇಲಿನ ಪ್ರಕರಣವೇ ಆಗಿರಲಿ, ಅಥವಾ ವನದುಃಖ ನಿವಾರಣಾ ಚಳುವಳಿಯೇ ಕಾರಣವಾಗಿರಲಿ ಸರಕಾರವು ಸಂಪಾದಕ/ಪ್ರಕಾಶಕರನ್ನು ಶಿಕ್ಷೆಗೆ ಗುರಿಪಡಿಸಿದಲ್ಲದೆ, ಪತ್ರಿಕೆಗೇನೆ ಮಟ್ಟುಗೋಲು ಹಾಕಿತು.

ಪತ್ರಿಕಾರಂಗದಲ್ಲಿ ವಿಚಾರ ಜಾಗೃತಿಯ ಕುರುಹೆಂದು 'ಚಂದ್ರೋದಯ, ಹಿತಬೋಧಿನಿ, ಕನ್ನಡ ಸುವಾರ್ತೆ ಮತ್ತು ಹವ್ಯಕ ಸುಬೋಧ'-ಈ ನಾಲ್ಕು ಪತ್ರಿಕೆಗಳ ಬಗೆಯನ್ನು ನೋಡಿದೆವು. ಮುಂದಿನ ಎರಡು ದಶಕಗಳಲ್ಲಿ ಸುಮಾರು ೬೦ ಪತ್ರಿಕೆಗಳು ಜನ್ಮ ತಾಳಿದ್ದು ನಮ್ಮ ಗಮನಕ್ಕೆ ಬಂದಿದೆ. ಅವುಗಳಲ್ಲಿ ವಾರ್ತಾ ಪತ್ರಿಕೆಗಳು ಮತ್ತು ವಿವಿಧ ವಿಷಯಕ ಪತ್ರಿಕೆಗಳು ಎಂಬ ಎರಡು ನಿರ್ದಿಷ್ಟವಾದ ಪ್ರಕಾರಗಳನ್ನು ಕಾಣುತ್ತೇವೆ.

ವಾರ್ತಾ ಪತ್ರಿಕೆಗಳ ಪರಂಪರೆಯು 'ಮಂಗಳೂರು ಸಮಾಚಾರ'ದಿಂದಲೇ ಮೊದಲಾಗಿ ಮೈಸೂರ ಗೆಜೆಟ್ ಸಹಿತವಾಗಿ ಮುಂದುವರಿದಿದ್ದಿತು. ಮೇಲೆ ಹೇಳಿದ ನಾಲ್ಕು ಪತ್ರಿಕೆಗಳಲ್ಲಿ 'ಹಿತಬೋಧಿನಿ'ಯನ್ನು ಬಿಟ್ಟರೆ ಉಳಿದವುಗಳು ವಾರ್ತಾ ಪತ್ರಿಕೆಗಳೇ. ಇದೇ ಕಾಲದಲ್ಲಿ ಹೊರಟ ಇನ್ನೊಂದು ಪತ್ರಿಕೆಯೆಂದರೆ ಕರ್ನಾಟಕ ಪತ್ರ (೧೮೮೩). ಧಾರವಾಡ-ಬೆಳಗಾಂವಿ ಜಿಲ್ಲೆಗಳಿಗೆ ಇದು ಸೀಮಿತವಾಗಿದ್ದರೂ ಕನ್ನಡಾಭಿಮಾನವನ್ನು ವ್ಯಕ್ತಗೊಳಿಸಿದ ಪತ್ರಿಕೆಯಿದು. ಮುಂಬಯಿ ಪ್ರಾಂತದ ಒಕ್ಕಲತನ ಖಾತೆಯ ಭಾಷಾ ಧೋರಣೆಯನ್ನು ದಿ. ೨-೭-೧೮೮೪ರಂದು ಟೀಕಿಸಿದುದನ್ನು ಉದಾಹರಣೆಯಾಗಿ ಹೇಳಬಹುದು. ಗದುಗಿನಿಂದ ಪ್ರತಿ ಗುರುವಾರ ಹೊರಡುತ್ತಿದ್ದ ರಸಿಕರಂಜಿನಿ (೧೮೮೪) ಸಾಪ್ತಾಹಿಕದ ಪ್ರಸಾರವಾದರೂ ಸೀಮಿತವಾದುದೇ. ಗೌರೀಶಂಕರ ಮಿಸರನು ಇದರ ಸಂಪಾದಕ/ಪ್ರಕಾಶಕನಿದ್ದನು. ಕಲ್ಲಚ್ಚಿನಲ್ಲಿ ಮೂಡಿ ಬರುತ್ತಿದ್ದ ೪ ಪುಟಗಳ ಈ ಪತ್ರಿಕೆಯಲ್ಲಿ ಹೆಚ್ಚಾಗಿ ನೋಟೀಸುಗಳೂ ಸರಕಾರೀ ಸುದ್ದಿಗಳೂ ಇರುತ್ತಿದ್ದುವು. ಮತ್ತು ಆಗೀಗ ಸರಕಾರೀ ಕಚೇರಿಗಳಲ್ಲಿಯ ಲೋಪಗಳನ್ನು ಎತ್ತಿ ತೋರಿಸಿದುದುಂಟು. ಇದರ ಭಾಷಾಸರಣಿ ಮಾತ್ರ ತುಂಬಾ ಅಶುದ್ಧವಾಗಿತ್ತು.

'ರಸಿಕರಂಜಿನಿ' ಪತ್ರಿಕೆಯ ಸಂಪಾದಕನು ಮಾನಹಾನಿ ಖಟ್ಲೆಗೆ ಗುರಿಯಾದ ಒಂದು ಸಂದರ್ಭವು ಪ್ರಸ್ತಾಪಿಸುವ ಹಾಗಿದೆ. ಗದುಗಿನ ಓರ್ವ ಸಾಹುಕಾರನನ್ನು ಗುರಿಯಾಗಿಟ್ಟುಕೊಂಡು ಟೀಕೆ ಮಾಡಿದನು. ಆ ವ್ಯಕ್ತಿಯು ಖಟ್ಲೆ ಹಾಕಿರಬೇಕು. ಆಗ

ಬಹಿರಂಗ ಕ್ಷಮಾಪಣೆ ಕೇಳಿದ ಪತ್ರಕರ್ತನ ಮರಾಠೀ ಒಕ್ಕಣಿಕೆ ಇಂತಿದೆ : "ಅರ್ಜದಾರ ಗೌರೀಶಂಕರ ರಾಮಪ್ರಸಾದ ಮಿಸರ ರಸಿಕರಂಜಿನೀ ಮಾಲಕ ಯಾಂಚೇ ಅರ್ಜ ಐಸಾವೇ. ಮಾಝ್ಯಾವರ ವಾಸುದೇವದಾಸ ವೆಂಕಟದಾಸ ಯಾಣಿ ಅಬರೂ ಲುಕ್ಸಾನೀಚ್ಯಾ ಫಿರ್ಯಾದ ಸಾದಿಲೀ ಆಹೆ. ತರ ಸದರ ಫಿರ್ಯಾದಿ ಮೀ ವಾಸುದೇವದಾಸ ಯಾಸ ಬರೋಬರ ಆಪಸಾತ ನಿಕಾಲ ಕರೂನ ಘೇತಲೀ ಆಹೆ. ಸದರ ಫಿರ್ಯಾದೀಚ್ಯಾ ಕಾಮಾತ ಮೀ ಮಾಝೀ ರಸಿಕರಂಜಿನೀ ವರ್ತಮಾನ ಪತ್ರಾತ ಜೇ ಲೇಖ ಲಿಹಿಲೇ ಹೋತೆ. ಹೇ ಸರ್ವ ಲೇಖ ತ್ಯಾಂಚೇ ಸಂಬಂಧಾನೇ ಮೀ ಗೈರ ಸಮಾಜನೆ ಲಿಹಿಲೇ ಹೋತೆ. ತೇ ಸರ್ವ ಲೇಖ ಮೀ ಪರತ ಘೇವೂನ ಮಾಝೀ ಪತ್ರಾತ ಮಾಫೀ ಮಾಗೂನ ಘೇತಲ್ಯಾ ಬದ್ದಲ ಲಿಹಿಲೇ. ಯಾಣೀ ಮೆಹರ್ಬಾನಿಗಿ ಕರೂನ ಮಲಾ ಮಾಫೀ ದಿಲೀ ಆಹೇ."*

ಗದುಗಿನಿಂದ ಹೊರಡುತ್ತಿದ್ದ ಇನ್ನೊಂದು ವಾರಪತ್ರಿಕೆಯ ಹೆಸರು 'ಸತ್ಯವ್ರತ' (೧೮೮೮). ಒಂದೇ ಊರಿನಲ್ಲಿ ಎರಡೆರಡು ಸ್ಥಾನಿಕ ಪತ್ರಿಕೆಗಳಿದ್ದುದು ಒಂದು ವಿಶೇಷವೇ ಸೈ. ಇದೇ ರೀತಿಯ ಸೀಮಿತ ಪ್ರಸಾರದ ಪತ್ರಿಕೆಗಳೆಂದು 'ವೃತ್ತಾಂತ ಮಂಜರಿ' (೧೮೮೫, ಧಾರವಾಡ), 'ಕರ್ನಾಟಕ ಹಿತೇಚ್ಛು' (೧೮೮೬, ಬೆಳಗಾಂವಿ) ಮತ್ತು 'ಲೋಕಬಂಧು' (೧೮೮೯, ಧಾರವಾಡ) ಇವನ್ನು ಹೆಸರಿಸಬೇಕು.

ಇನ್ನು ನಾಡಿನ ದಕ್ಷಿಣಕ್ಕೆ ಬರೋಣ. ಮೈಸೂರು ರಂಗರಾಯನೆಂಬವನ ಸಂಪಾದಕತ್ವದಲ್ಲಿ 'ಕೊಡಗು ಚಂದ್ರಿಕೆ' ಎಂಬ ಸಾಪ್ತಾಹಿಕವು ಡಿಸೆಂಬರ್ ೧೮೮೩ ರಿಂದ ಹೊರಬರಲಾರಂಭಿಸಿತು. ಹೆಸರಿನ ಮೇಲಿಂದ ಇದು ಕೊಡಗಿಗೆ ಸೀಮಿತವಾಗಿರಬೇಕೆನಿಸಿದರೂ ಮೈಸೂರ ಸಂಸ್ಥಾನದ ವಿವಿಧ ಪ್ರದೇಶಗಳ ವಾರ್ತೆಯೇ ಹೆಚ್ಚಾಗಿ ಇರುತ್ತಿತ್ತು. ಅಲ್ಲದೆ ಅದು ಪ್ರಕಟವಾಗುತ್ತಿದ್ದುದು ಬೆಂಗಳೂರಿನಿಂದ. ಆ ಹೊಣೆಯನ್ನು ಹೊತ್ತವನು ವೆಲನಾಡು ಬಿ. ಸುಬ್ಬಯ್ಯ. ಈ ಪತ್ರಿಕೆಯ ಸುದ್ದಿ ಸಂಗ್ರಹ ಮಾಡುವ ರೀತಿಯು ಮೋಜಿನದಿದ್ದಿತು. ಮುಫತ್ತಾಗಿ ಕೆಲವರಿಗೆ ಪತ್ರಿಕೆಯನ್ನು ಕಳಿಸಿ ಸುದ್ದಿಯನ್ನು ಸಂಗ್ರಹಿಸುತ್ತಿದ್ದರಂತೆ. ಅದು ಯಶಸ್ವಿಯಾಗಲಿಲ್ಲವಾದ್ದರಿಂದ, ಕೊನೆಗೆ ತಾಲೂಕಿಗೆ ಒಬ್ಬೊಬ್ಬ ವರದಿಗಾರನನ್ನು ಸಂಬಳದ ಮೇಲೆ ನೇಮಿಸಲಾಯಿತು (೨೯–೫–೧೮೮೪ರ ಸಂಚಿಕೆ). 'ಚಂದಾದಾರರು, ತಮ್ಮ ತಾಲ್ಲೂಕಿನ ಯಾವುದೊಂದು

---

* ಕನ್ನಡಾನುವಾದ : "ವಾಸುದೇವದಾಸ ವೆಂಕಟದಾಸ ಇವರು ನನ್ನ ಮೇಲೆ ಮಾನಹಾನಿಯ ಖಟ್ಲೆ ಹಾಕಿದ್ದಾರೆ. ಈ ಬಗ್ಗೆ ನಾನು ಅವರೊಂದಿಗೆ ಖಾಸಗಿಯಾಗಿ ಒಡಂಬಡಿಕೆ ಮಾಡಿಕೊಂಡಿದ್ದೇನೆ. ಅವರ ಫಿರ್ಯಾದಿಗೆ ಸಂಬಂಧಿಸಿ ನಾನೇನು 'ರಸಿಕರಂಜಿನಿ'ಯಲ್ಲಿ ಬರೆದಿದ್ದೇನೋ ಅದೆಲ್ಲಾ ತಪ್ಪು ಕಲ್ಪನೆಯಿಂದ ಬರೆದದ್ದಾಗಿದೆ. ಅದನ್ನು ಹಿಂದಕ್ಕೆ ತೆಗೆದುಕೊಂಡು ಸಾರ್ವಜನಿಕವಾಗಿ ಕ್ಷಮೆ ಕೇಳಿದ್ದೇನೆ. ಅದನ್ನು ಅವರು ಮನ್ನಿಸಿದ್ದಾರೆ".

ಸುದ್ದಿಯನ್ನು ಚಂದ್ರಿಕೆಯು ಪ್ರಕಟಿಸಿಲ್ಲವಾದರೆ ಸಂಬಂಧಪಟ್ಟ ಬಾತ್ಮೀದಾರನನ್ನು ಎಚ್ಚರಿಸಲಾಗುವುದು' ಎಂಬ ಅಂಶವನ್ನು ಸಂಪಾದಕನು ವಾಚಕರ ಗಮನಕ್ಕೆ ತಂದುಕೊಡುವಲ್ಲಿ ನಾವು ವಿಶೇಷವಾದ ವಾರ್ತಾಪ್ರಜ್ಞೆಯನ್ನು ಗುರುತಿಸಬಹುದು.

ಏಕಕಾಲಕ್ಕೆ ಎಂದರೆ ೧೮೮೭ನೆಯ ವರ್ಷದಲ್ಲಿ ಜನ್ಮ ತಾಳಿದ 'ವೃತ್ತಾಂತ ಚಿಂತಾಮಣಿ', 'ವೃತ್ತಾಂತ ಪತ್ರಿಕೆ' ಮತ್ತು 'ಮೈಸೂರ ಪೊಲೀಸ ಗೆಜೆಟ್'-ಇವು ದೀರ್ಘಕಾಲ ಬಾಳಿದ ಪತ್ರಿಕೆಗಳಾಗಿವೆ. 'ಪೊಲೀಸ ಗೆಜೆಟ್' ನಲ್ಲಿ ಗುನ್ಹೆಗಳು, ತೀರ್ಪುಗಳು, ಪೊಲೀಸ ಪ್ರಕಟನೆಗಳು ಮತ್ತು ಪೊಲೀಸ ಸಿಬ್ಬಂದಿಯ ವರ್ತಮಾನಗಳು ಇರುತ್ತಿದ್ದುವು. ಇದು ಪಕ್ಷಪತ್ರಿಕೆಯಾಗಿ ಎರಡು ದಶಕಗಳಿಗೆ ಮಿಕ್ಕಿ ಬದುಕಿದ್ದಿತು. 'ವೃತ್ತಾಂತ ಪತ್ರಿಕೆ'ಯು ವೆಸ್ಲಿಯನ್ ಮಿಶನ್ ಸಂಸ್ಥೆಯ ಪ್ರಕಟನೆಯಾಗಿದ್ದರೂ ಜನತೆಯ ಪತ್ರಿಕೆಯಾಗಿ ಬಾಳಿತು. ತುಂಬಾ ಸುದ್ದಿಗಳಿರುತ್ತಿದ್ದ ಆ ಪತ್ರಿಕೆಯ ಪ್ರಸಾರವು ಎರಡು ಸಾವಿರಕ್ಕೆ ಮಿಕ್ಕಿದ್ದಿತು. ಸಾರ್ವಜನಿಕ ಅಹವಾಲುಗಳು ವಿದೇಶೀ ಸುದ್ದಿಗಳು, ಪೇಟೆಯ ಧಾರಣೆ-ಇವುಗಳ ಜೊತೆಗೆ ಕ್ರೈಸ್ತ ಸುದ್ದಿಗಳಿಗೂ ತುಸು ಸ್ಥಾನವಿದ್ದಿತಲ್ಲದೆ, ಅದೇ ಮಹತ್ವದ್ದಾಗಿರಲಿಲ್ಲ. ಇದನ್ನು ಆರಂಭಿಸಿ ಆ ಬಗೆಯ ಪತ್ರಿಕಾ ಧೋರಣೆಯನ್ನು ರೂಪಿಸಿದವನು ಹೆನ್ರಿ ಹೇಗ್. ವಿವಿಧ ವೃತ್ತಾಂತಗಳನ್ನೂ, ವಿಧಾಯಕ ವಿಮರ್ಶೆಯನ್ನೂ ಒಳಗೊಂಡು ಅನ್ವರ್ಥಕವಾಗಿದ್ದಿತೆಂದೇ ಮೂರು ದಶಕಗಳ ಕಾಲದ ವರೆಗೂ ಅದು ಬಾಳಿತು.

**ವೃತ್ತಾಂತ ಚಿಂತಾಮಣಿ**ಯು ಎಂ. ವೆಂಕಟಕೃಷ್ಣಯ್ಯನವರ ಪ್ರಥಮ ವೃತ್ತಪತ್ರವಾಗಿದೆ. (೧೮೮೭-), ಮೈಸೂರಿನ ರಾಜಕೀಯದಲ್ಲಿ ಅದರ ಪಾತ್ರ ದೊಡ್ಡದು. ಜನತಾ ಜಾಗೃತಿಯಲ್ಲಿ ಪತ್ರಿಕೆಯು ಅದೆಷ್ಟು ಪರಿಣಾಮಕಾರಿಯಾಗಬಲ್ಲದೆನ್ನುವುದಕ್ಕೆ ಅದೊಂದು ನಿದರ್ಶನ. ಪ್ರತಿ ಬುಧವಾರ ಪ್ರಕಟವಾಗುತ್ತಿದ್ದ, ದೊಡ್ಡ ಸೈಜಿನ ನಾಲ್ಕು ಪುಟಗಳ ಈ ಪತ್ರಿಕೆಯಲ್ಲಿ ಬಿಡಿಬಿಡಿಯಾದ ಅನೇಕಾನೇಕ ಸುದ್ದಿಗಳಿರುತ್ತಿದ್ದುವು. ಒಂದು ದೃಷ್ಟಿಯಲ್ಲಿ ದಿನಪತ್ರಿಕೆಯ ಕೊರತೆಯನ್ನು ಅದು ತುಸು ಮಟ್ಟಿಗೆ ನೀಗಿಸಿತ್ತೆಂದರೂ ಸರಿ. ಜೊತೆಗೆ ಸಂಪಾದಕೀಯ ಟೀಕೆ-ಟಿಪ್ಪಣಿಗಳು ಅಷ್ಟೇ ಉದ್ಬೋಧಕವಾಗಿರುತ್ತಿದ್ದವು. ಅವುಗಳ ಹಿಂದೆ ಶ್ರೀಸಾಮಾನ್ಯನ ಹಿತಸಾಧನೆಯ ದೃಷ್ಟಿ ಸದೈವ ಕಂಡುಬರುತ್ತಿತ್ತು. ಇತ್ತ ಕಾಂಗ್ರೆಸನ್ನು ಬೆಂಬಲಿಸುವುದರ ಮೂಲಕ, ಅದು ನಾಡ ಸ್ವಾತಂತ್ರ್ಯದ ಬಗೆಗಿನ ಆಸ್ಥೆಯನ್ನು ವ್ಯಕ್ತಪಡಿಸಿತು. ಅಧಿಕಾರಿಗಳ ಹಾಗೂ ಆಡಳಿತದ ಲೋಪದೋಷಗಳನ್ನು ತೋರಿಸುತ್ತಿದ್ದರೂ ಮಹಾರಾಜರ ವಿಷಯದಲ್ಲಿ ಗೌರವಭಾವವನ್ನಿಟ್ಟುಕೊಂಡಿದ್ದಿತು.

ಕಳೆದ ಶತಮಾನದಲ್ಲಿ ಪ್ರಕಟವಾದ ಏಕಮೇವ ದಿನಪತ್ರಿಕೆಯೆಂದರೆ **ಸರ್ವೋದಯ ಪ್ರಕಾಶಿಕ** ಬಿ. ನರಸಿಂಗರಾಯನೆಂಬುವನು ಅದನ್ನು ಆರಂಭಿಸಿದನೆಂದು (೧೮೮೮) ಹೇಳಲಾಗುತ್ತಿದೆ. ಕೇವಲ ಆರು ತಿಂಗಳವರೆಗೆ ಮಾತ್ರ ನಡೆದು ಆಮೇಲೆ ವಾರಪತ್ರಿಕೆಯಾಗಿ

ಹೊರಡಲಾರಂಭಿಸಿತು.[೧೧] ಈ ಪತ್ರಿಕೆಯು ಸರಕಾರದ ಆಡಳಿತ ಕ್ರಮವನ್ನು ಪ್ರಸಂಗ ಬಂದಾಗಲೆಲ್ಲ ಟೀಕಿಸುತ್ತಿತ್ತು. ಪ್ಲೇಗ್ ಹಾವಳಿ ಇದ್ದಾಗ ದಿವಾನರು ಗಿರಿಧಾಮವೊಂದರಲ್ಲಿ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿರುವುದು ಅನ್ಯಾಯವಲ್ಲವೆ? ಎಂದೊಮ್ಮೆ ಪ್ರಶ್ನಿಸಿತ್ತು.

ಮುಂದಿನ ಆರೇಳು ವರ್ಷಗಳ ಅವಧಿಯಲ್ಲಿ ಹೊರಟ ವಾರ್ತಾಪತ್ರಿಕೆಗಳೆಂದರೆ ಕರ್ನಾಟಕ ವೈಭವ (೧೮೯೨-), ದೇಶಾಭಿಮಾನಿ (೧೮೯೪-), ಕನ್ನಡ ನಡೆಗನ್ನಡಿ (೧೮೯೫) ಮತ್ತು ಸತ್ಯದೀಪಿಕೆ (೧೮೯೬-). ವಿಜಾಪುರದಿಂದ ಇಂದಿಗೂ ಹೊರಡುತ್ತಿರುವ 'ಕರ್ನಾಟಕ ವೈಭವ'ವು ತನ್ನ ಆರಂಭದ ದಿನಗಳಲ್ಲಿ ಪ್ರಬುದ್ಧವಾದ ರಾಜಕೀಯ ಪತ್ರಿಕೆಯಾಗಿ ಮೆರೆಯಿತು. ಮಣ್ಣೂರ ಗುಂಡೇರಾವ, ಜೋರಾಪುರ, ದೇಶಪಾಂಡೆ ಜಯರಾವ ಮೊದಲಾದವರು ಅದರ ಏಳ್ಗೆಗಾಗಿ ಬಹಳಷ್ಟು ಪರಿಶ್ರಮ ಪಟ್ಟಿದ್ದಾರೆ. ಬಿ. ಶ್ರೀನಿವಾಸಯ್ಯಂಗಾರರ ಸಂಪಾದಕತ್ವದಲ್ಲಿ ಹೊರಡುತ್ತಿದ್ದ 'ದೇಶಾಭಿಮಾನಿ'ಯು ಅನ್ವರ್ಥಕವಾಗಿದ್ದಿತು. ಅದರ ಖಂಡತುಂಡ ಅಭಿಪ್ರಾಯಗಳಿಂದಾಗಿ ಅಂದಿನ ದಿವಾನರ ಕ್ಷೋಭೆಗೆ ಗುರಿಯಾಯಿತು. ಆಗಿನ ದಿವಾನರು ಈ ಕುರಿತು ಸಮಕ್ಷಮ ಹಾಜರಾಗಿ ಸ್ಪಷ್ಟೀಕರಣ ನೀಡಿರೆಂದು ಕೇಳಿದರಂತೆ. ಅದಕ್ಕೆ ಶ್ರೀನಿವಾಸಯ್ಯಂಗಾರರು ಕೊಟ್ಟ ಉತ್ತರ

"ಲೇಖನಿಯ ಮೂಲಕ ನಾನು ಟೀಕಿಸಿದ್ದು ತಾನೇ. ಲೇಖೀ ಆಗಿಯೇ ಉತ್ತರ ಕೊಟ್ಟೇನು. ನಿಮ್ಮೆದುರು ಬಂದು ನಿಲ್ಲುವ ಅಗತ್ಯವೇನಿದೆ?"

ಪರಿಣಾಮವಾಗಿ ಪತ್ರಿಕೆಯ ಮೇಲೆ ತಡೆಯಾಜ್ಞೆ ಹೊರಟಿತು. ಇತರ ಸಹೋದ್ಯೋಗಿ ಪತ್ರಿಕೆಗಳು ದಿವಾನರ ಈ ಕ್ರಮವನ್ನು ಖಂಡಿಸಿ ಬರೆದುವು. 'ವೃತ್ತಾಂತ ಪತ್ರಿಕೆ'ಯಂತಹ ಮಿಶನರಿ ಪತ್ರಿಕೆಯೂ 'ಜನತೆಯ ಆಶೋತ್ತರಗಳನ್ನು ಸರಕಾರವು ಈಡೇರಿಸದಿದ್ದಾಗ ಅದನ್ನು ಖಂಡಿಸುವುದು ತಪ್ಪೆ?" ಎಂದು ಬರೆಯಿತು. ಮೈಸೂರು ಸರಕಾರವು ಪತ್ರಿಕೆಯೊಂದನ್ನು ನಿಲ್ಲಿಸಿಬಿಡುವಷ್ಟು ನಿರ್ಬಂಧ ಹೇರಿದುದು ಮೊದಲ ಸಲ, ಎಂದು ಕಾಣುತ್ತದೆ.

ಕ್ರಿ.ಶ. ೧೯೦೦ರಿಂದಂತೂ ಪತ್ರಿಕೆಗಳು ಸರಕಾರದ ಟೀಕೆಯನ್ನು ಉಗ್ರಗೊಳಿಸಿದಾಗ ಅವುಗಳ ಮೇಲಿನ ನಿರ್ಬಂಧಗಳು ಬಲಗೊಂಡವು. ಉದಾಹರಣೆಗೆ, ಸರಕಾರವನ್ನು ಟೀಕಿಸುವ ಪತ್ರಿಕೆಗಳಿಗೆ ಸರಕಾರೀ ಜಾಹೀರಾತನ್ನು ಕೊಡಲಾಗದೆಂಬ ಇಂದಿನ ಕ್ರಮ ೮೦ ವರ್ಷಗಳ ಹಿಂದೆಯೇ ಮೊದಲಾಯಿತು. 'Mysore Standard'-ಎಂಬ ಇಂಗ್ಲಿಷ್ ಪತ್ರಿಕೆಯನ್ನು ಎಂ. ಗೋಪಾಲ ಅಯ್ಯಂಗಾರರು ನಡೆಸುತ್ತಿದ್ದರು. ಆ ಪತ್ರಿಕೆಗೆ ಜಾಹೀರಾತು ಮಾತ್ರವಲ್ಲದೆ "ಸರಕಾರೀ ಸುದ್ದಿಯನ್ನೂ ಪೂರೈಸಲಾಗದು" ಎಂಬ ಹುಕುಮನ್ನು ಹೊರಡಿಸಿತು (೧೦-೧೧-೧೯೦೫) ಅಲ್ಲದೆ ಸಂಪಾದಕರನ್ನು ಗಡೀಪಾರು ಮಾಡಿತು.

ಅವರು ಸರಕಾರದ ರಹಸ್ಯಗಳನ್ನು ಹೊರಗೆಳೆದ ಒಂದು ಪ್ರಸಂಗವೂ ಇದೆ. ಬಂಗಾಲ ವಿಭಜನೆಯ ಎತ್ತುಗಡೆ (೧೯೦೫) ನಡೆದ ರೀತಿಯಲ್ಲಿಯೇ ಮದ್ರಾಸು

ಸರಕಾರವು ಮೈಸೂರಿನ ಸಮೃದ್ಧ ಜಿಲ್ಲೆಗಳಾದ ಬೆಂಗಳೂರು ಮತ್ತು ಕೋಲಾರಗಳನ್ನು ತನ್ನಲ್ಲಿಗೆ ಸೇರಿಸಿಕೊಂಡು, ಅವುಗಳ ಬದಲಿಗೆ ಬಳ್ಳಾರಿ ಮತ್ತು ಅನಂತಪುರ ಜಿಲ್ಲೆಗಳನ್ನು ಬಿಟ್ಟುಕೊಡಬೇಕೆಂದು ಮಾಡಿದ ಸೂಚನೆ ಗುಟ್ಟಾಗಿ ನಡೆದಾಗ 'ದೇಶಾಭಿಮಾನಿ' ಪತ್ರಿಕೆಯು ಅದನ್ನು ಹೊರಹಾಕಿಬಿಟ್ಟಿತು!

ಇಂಥವೆಲ್ಲ ಘಟನೆಗಳಿಂದಾಗಿಯೇ ೧೯೦೮ರ ಪತ್ರಿಕಾ ವಿಷಯಕ ಕರಾಳ ಶಾಸನ ಜಾರಿಗೆ ಬಂದದ್ದು. (The Mysore Newspaper Regulation.)

ಎಂ. ಗೋಪಾಲಯ್ಯಂಗಾರ್ ಮತ್ತು ಎಂ. ಶ್ರೀನಿವಾಸಯ್ಯಂಗಾರ್-ಇವರು ಹೊರಡಿಸುತ್ತಿದ್ದ 'ಕನ್ನಡ ನಡೆಗನ್ನಡಿ' ಯ ಖ್ಯಾತಿಯಾದರೂ ಅದೇ ಬಗೆಯದು. ಪತ್ರಿಕಾ ನಿಷೇಧಾಜ್ಞೆಯು ಜಾರಿಗೆ ಬಂದಾಗ (೧೯೦೮) ಪತ್ರಿಕೆ ನಿಂತುಹೋಯಿತು. 'ಸತ್ಯದೀಪಿಕೆ' ಬಾಸೆಲ್ ಮಿಶನ್ನಿನವರ ವಾರ್ತಾಪತ್ರಿಕೆಯಾಗಿದ್ದು, ವಾರ್ತಾ ವಿವರ, ಧೋರಣೆಗಳಲ್ಲಿ ವೆಸ್ಲೆಯನ್ ಬಂಧುಗಳ ಪತ್ರಿಕೆಗೆ ಸಮನಾಗಿದ್ದಿತು. ಪಂಜೆ ಮಂಗೇಶರಾಯರಂತಹ ಸಾಹಿತ್ಯಿಕರೂ ಅದಕ್ಕೆ ಲೇಖನ ಬರೆಯುತ್ತಿದ್ದರು.

'ಕನ್ನಡ ನಡೆಗನ್ನಡಿ'ಯು ಬೆಂಗಳೂರಿನಿಂದ ಹೊರಡುತ್ತಿದ್ದ ಪತ್ರಿಕೆಯಾದರೆ ಇನ್ನೊಂದು 'ನಡೆಗನ್ನಡಿ'ಯು ೧೮೯೯ರಲ್ಲಿ ಮೈಸೂರಿನಿಂದ ಹೊರಡುತ್ತಿದ್ದಿತೆಂದು ತೋರುತ್ತದೆ. 'ಶಿವಮೊಗ್ಗ ವೃತ್ತಾಂತ ಮಂಜರಿ'ಯು ಸ್ಥಾನಿಕ ಪತ್ರಿಕೆಯಾಗಿ ಬೆಳಕು ಕಂಡಿತು (೧೮೯೮)-ಕೆಲವು ದಿನ ಮಾತ್ರ. ಬ್ಯಾಡಗಿ ಶೇಷಗಿರಿರಾಯನೆಂಬವನು ಇದರ ಒಡೆಯನಾಗಿದ್ದನು. ಕೊನೆಯದಾಗಿ 'ಸಾಧ್ವಿ' ಪತ್ರಿಕೆಯನ್ನು ಹೆಸರಿಸಬೇಕು (೧೮೯೯). ಎಂ. ವೆಂಕಟಪ್ಪಯ್ಯನವರು ಹೊರಡಿಸಿದ ಪತ್ರಿಕಾ ಮಾಲಿಕೆಯಲ್ಲಿ ಇದಕ್ಕೆ ಮಹತ್ವದ ಸ್ಥಾನವಿದ್ದು, ಇಪ್ಪತ್ತನೆಯ ಶತಮಾನದಲ್ಲಿಯೂ ಅದು ಮುಂದುವರಿಯಿತು.

ಮೇಲಿನ ವಾರ್ತಾಪತ್ರಿಕೆಗಳ ಜೊತೆಗೆ, ಕನ್ನಡ-ಮರಾಠೀ ದ್ವಿಭಾಷಾ ಪತ್ರಿಕೆಗಳಾದ 'ಬೆಳಗಾಂವ ಸಮಾಚಾರ', 'ಧಾರವಾಡ ವೃತ್ತ', 'ವಿಚಾರಿ' (ಕಾರವಾರ) ಮತ್ತು 'ಕರ್ನಾಟ ಮಿತ್ರ' ಇವನ್ನು ಗಣಿಸಬೇಕು. ಹೀಗೆ ೧೯ನೆಯ ಶತಮಾನದಲ್ಲಿ ಮೂವತ್ತಕ್ಕೆ ಮೇಲ್ಪಟ್ಟು ಸುದ್ದಿ ಪತ್ರಿಕೆಗಳು ಹೊರಬಂದರೂ ಶತಮಾನಾಂತ್ಯದಲ್ಲಿ ಹತ್ತು ಪತ್ರಿಕೆಗಳು ಮಾತ್ರ ಬದುಕಿ ಉಳಿದಿದ್ದುವು. ರೋಟರಿ, ಟೆಲಿಪ್ರಿಂಟರ್ ಮುಂತಾದ ಯಾವುದೇ ಆಧುನಿಕ ಸಲಕರಣೆಗಳಿಲ್ಲದೆ ಹೊರಡುತ್ತಿದ್ದ ಈ ಪತ್ರಿಕೆಗಳು ವೈಯಕ್ತಿಕ ಸಾಹಸಗಳೆಂದು ತಿಳಿಯಬೇಕು. ಸಾಮಾನ್ಯವಾಗಿ ಇವುಗಳ ಪುಟ ಸಂಖ್ಯೆ ಕಡಿಮೆಯಿದ್ದರೂ ಅಪ್ಪರ ಮಟ್ಟಿಗಿನ ಸುದ್ದಿಗಳನ್ನು ಸಂಗ್ರಹಿಸಿ ನಿಯಮಿತವಾಗಿ ಹೊರಡಿಸುತ್ತಿದ್ದುದು ಗಮನಾರ್ಹವಾಗಿದೆ.

## 75 ಮಾಸ ಪತ್ರಿಕೆಗಳು

ಇನ್ನು ನವೋದಯ ಕಾಲದ (೧೮೮೧-೧೮೯೯) ಮಾಸಪತ್ರಿಕೆಗಳನ್ನು ಗಮನಿಸೋಣ. ಮೊದಲಿಗೆ ಹೆಸರಿಸಬೇಕಾದದ್ದು **ಸುದರ್ಶನ** (೧೮೮೭) ಉಡುಪಿಯ

ಹಿಂದೂ ಪ್ರೆಸ್‌ನಿಂದ, ಹೊರಡುತ್ತಿದ್ದ ಈ ಪತ್ರಿಕೆಯ ಪ್ರಭಾವವು ದಕ್ಷಿಣ ಕನ್ನಡದ ಗಡಿಯನ್ನು ದಾಟಿ, ಮೈಸೂರಿನಲ್ಲಿಯೂ ಹಬ್ಬಿದ್ದಿತು. ಹಿಂದೂಧರ್ಮದ ಪರವಾಗಿದ್ದ ಈ ಪತ್ರಿಕೆಯಲ್ಲಿ ಆರ್ಯಧರ್ಮ, ಸಂಸ್ಕೃತಿ, ಸ್ತ್ರೀಶಿಕ್ಷಣ ವಿಷಯಕವಾದ ಲೇಖನಗಳು ಹೆಚ್ಚಾಗಿ ಇರುತ್ತಿದ್ದವು. ಬಿಡಿಯಾದ ಪದ್ಯಗಳು, ಪುಸ್ತಕ ವಿಮರ್ಶೆ, ವಿವಿಧ ವಿಷಯಮಂಜರಿ, ಮೊದಲಾದವುಗಳು ಪ್ರತಿ ಸಂಚಿಕೆಯಲ್ಲಿಯೂ ಇರುತ್ತಿದ್ದವು. ಪದ್ಯಗಳಲ್ಲಿ ವರಾಹತಿಮ್ಮಪ್ಪ ಮೊದಲಾದ ದಾಸರ ಕೀರ್ತನೆಗಳಲ್ಲದೆ, ಸಮಕಾಲೀನರಾದ ಮೂಲ್ಕಿ ವೆಂಕಣ್ಣಯ್ಯ, ಭಟ್ಕಳ ಅಪ್ಪಯ್ಯ ಮೊದಲಾದವರ ಪದ್ಯಗಳೂ ಇವೆ. ವಿವಿಧ ವಿಷಯಗಳನ್ನು ಕೊಡುವಾಗ ಅದಕ್ಕೆ ಟೀಕೆ-ಟಿಪ್ಪಣಿಯೂ ಇರುತ್ತಿದ್ದಿತು. 'ಫೆಬ್ರವರಿ ೧೮೮೭ರಲ್ಲಿ ಹಲವು ಭೂಕಂಪಗಳಾದ್ದರಿಂದ ಅದು ಭೂಕಂಪ ತಿಂಗಳು ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ.'- ಎಂದು ಬರೆಯುತ್ತ ಆ ಹಿಂದೆ ಹಲವಾರು ಭೂಕಂಪಗಳಾದದ್ದರ ವಿವರವನ್ನು ಕೊಟ್ಟದ್ದಾಗಿದೆ. ಇನ್ನೊಂದು ವಿಷಯವನ್ನು ಕೊಟ್ಟಿದ್ದರ ಬಗೆ ಇಂತಿದೆ :

"ಮಹಾರಾಣಿಯವರ ಜುಬಿಲಿ ಸಂಬಂಧ ಕಲ್ಕತ್ತೆಯಲ್ಲಿ ಬಾರೂದು ಸುಡುವಾಗ್ಯೆ ಬೆಂಕಿ ಹಚ್ಚಿದ್ದ ಬೆಲೂನ್ ಎಂಬ ಒಂದು ವಿಮಾನವು ಒಂದು ಮುಳಿಮಾಡಿನ ಮೇಲೆ ಬಿದ್ದು ೧೬ ಗುಡಸಲುಗಳೂ ೨೦೦೦ ರೂಪಾಯಿಯಷ್ಟು ಸೊತ್ತೂ ನಾಶವಾಯಿತು. 'ಸುಖಸ್ಯ ನಂತರಂ ದುಃಖಂ ದುಃಖಸ್ಯ ನಂತರಂ ಸುಖಂ' ಎಂಬುದು ನಿಜ. ಪರಂತು ಈ ತದಂಗದಲ್ಲಿ ಸುಖ ಒಬ್ಬನಿಗೆ, ದುಃಖ ಇನ್ನೊಬ್ಬನಿಗೆ ಸಹಾ ಆಯಿತು" (ಏಪ್ರಿಲ್ ೧೮೮೭ರ ಸಂಚಿಕೆ,ಪು.೧೬೩).

'ಹವ್ಯಕ ಸುಬೋಧ'ದ ವೆಂಕಟರಮಣಶಾಸ್ತ್ರಿಗಳು ಜನವರಿ ೧೮೮೮ರಿಂದ ಹಿತೋಪದೇಶವೆಂಬ ಮಾಸ ಪತ್ರಿಕೆಯನ್ನೂ ಹೊರಡಿಸತೊಡಗಿದ್ದರು. ಉದ್ದೇಶ 'ಕನ್ನಡ ಬಾಲಕರ ವಿದ್ಯಾವ್ಯಾಸಂಗವನ್ನು ಊರ್ಜಿತಗೊಳಿಸುವುದಕ್ಕೆ ಕೈಲಾದ ಮಟ್ಟಿಗೆ ಸಹಾಯ' ಮಾಡಬೇಕೆಂಬುದಾಗಿದ್ದಿತು. ಅದರಲ್ಲಿ ಬಂದಿದ್ದ ಚರಿತ್ರೆ, ಇತಿಹಾಸ, ವಿಜ್ಞಾನಗಳ ಮೇಲಿನ ಲೇಖಗಳು ಮಕ್ಕಳಿಗಾಗಿ ಇದ್ದರೂ, ಅವು ಇತರರಿಗೂ ಅಷ್ಟೇ ಪ್ರಯೋಜಕವಾಗಿದ್ದುವು. 'ಹಿತೋಪವಚನ'ವು ಮಾತ್ರ ನೇರವಾಗಿ ಮಕ್ಕಳನ್ನು ಉದ್ದೇಶಿಸಿಯೇ ಇದ್ದಿತು. ಕೆಲವು ತಿಂಗಳ ಅನಂತರ 'ವಿವಿಧ ವೃತ್ತಾಂತ ಸಂಗ್ರಹ' ವೆಂಬ ಹೊಸ ಶೀರ್ಷಿಕೆಯನ್ನು ಆರಂಭಿಸುವಾಗ, ಸಂಪಾದಕನು ನಮ್ಮ ಚಿಕ್ಕ ಪ್ರಿಯ ಬಾಲಕರು ಒಂದೇ ವಿಧವಾದ ಭೋಜನ ಮಾಡಬಾರದೆಂದು, ಸಿದ್ಧಪಡಿಸಿದ ಕೋಸಂಬರಿ ಇದು' ಎಂಬುದಾಗಿ ಬರೆದರು. ಈ ಶೀರ್ಷಿಕೆಯ ಅಡಿಯಲ್ಲಿ ಜಗತ್ತಿನ ಮೂಲೆ ಮೂಲೆಗಳಿಂದ ಆಯ್ದು, ವಿಕ್ಟೋರಿಯಾ ರಾಣಿಯ ಹಿಂದುಸ್ತಾನೀ ಅಭ್ಯಾಸದಿಂದ ಹಿಡಿದು ರಣಹದ್ದಿನ ಆಯುರ್ಮಾನದ ವರೆಗೂ ನಾನಾ ವಿಧವಾದ ವರ್ತಮಾನಗಳನ್ನು ಚುಟುಕಿನಲ್ಲಿ ಕೊಟ್ಟದ್ದಿದೆ. ಮಕ್ಕಳ ಜ್ಞಾನಾರ್ಜನೆಯ ವಿಷಯದಲ್ಲಿ ವೆಂಕಟರಮಣಶಾಸ್ತ್ರಿಗಳ ಕಳಕಳಿ

ಎಷ್ಟಿತ್ತೆಂದರೆ, ಪತ್ರಿಕೆಯ ಚಂದಾ ಹಣವನ್ನು ಒಂದೇ ರೂಪಾಯಿ ಇರಿಸಿದ್ದರಲ್ಲದೆ, ಯಾವುದೊಂದು ಶಾಲೆಯಲ್ಲಿ ಐದಕ್ಕಿಂತ ಹೆಚ್ಚು ಜನ ವಿದ್ಯಾರ್ಥಿಗಳು ಚಂದಾದಾರರಾದರೆ ಅವರಿಗೆ ಕೇವಲ ಹತ್ತು ಆಣೆ, ಜೊತೆಗೆ ಮಾಸ್ತರರಿಗೆ ಒಂದು ಪ್ರತಿಯ ಇನಾಮು–ಎಂಬುದಾಗಿ ಸಾರಿದ್ದರು.

ಹಲವು ವಿಷಯಗಳ ಮೇಲಿನ ಲೇಖಗಳನ್ನು ಮುಂದಿನ ಸಂಚಿಕೆಗಳಲ್ಲಿ ಮುಂದುವರೆಸಿಕೊಂಡು ಹೋಗುವುದು, ಕಳೆದ ಶತಮಾನದ ಪತ್ರಿಕೆಗಳ ಪದ್ಧತಿಯೇ ಆಗಿದ್ದಿತು. ಆ ರೀತಿಯಲ್ಲಿ ಸಾಕ್ರೆಟೀಸನ ಚರಿತ್ರೆ, 'ನೀರು' – ಇದರ ವೈಜ್ಞಾನಿಕ ವಿವೇಚನೆ, ಅರ್ಥಶಾಸ್ತ್ರ–ಇವು ಮೂರು ವಿಷಯಗಳ ವಿಸ್ತಾರವಾದ ಪ್ರತಿಪಾದನೆಯು ಪತ್ರಿಕೆಯ ಮೊದಲ ವರ್ಷದ ಸಂಪುಟದಲ್ಲಿ ಬಂದಿದೆ. ಇವುಗಳಿಗೆ ಮೂಲ ಸಾಮಗ್ರಿಯನ್ನು ಬೇರೆಡೆಯಿಂದ ತೆಗೆದುಕೊಂಡಿದ್ದರೂ ವಿಷಯ ವಿವೇಚನೆಯು ಸಂಪೂರ್ಣವಾಗಿ ವೆಂಕಟರಮಣಶಾಸ್ತ್ರಿಗಳದೇ. ಅರ್ಥಶಾಸ್ತ್ರದ ಮೇಲಿನ ಬರಹವು ಕನ್ನಡದ ಮಟ್ಟಿಗೆ ಇಂದಿಗೂ ನವೀನವಾದುದು.

'ಹಿತೋಪದೇಶ'ದ ಅಪೂರ್ವ ಆಕರ್ಷಣೆ ಅದರ ವ್ಯಂಗ್ಯ ಚಿತ್ರಗಳಲ್ಲಿದ್ದಿತು. ರಾಜಕೀಯ ಮತ್ತು ಪ್ರಚಲಿತ ವಿಷಯಗಳ ಮಾರ್ಮಿಕ ನಿರೂಪಣೆಗೆಂದು ಕನ್ನಡದಲ್ಲಿ ವ್ಯಂಗ್ಯ ಚಿತ್ರಗಳನ್ನು ಬಳಸಿದವರಲ್ಲಿ ವೆಂಕಟರಮಣಶಾಸ್ತ್ರಿಗಳೇ ಮೊದಲಿಗರೆಂದು ತೋರುತ್ತದೆ. ಆ ದೃಷ್ಟಿಯಿಂದ ಮೈಸೂರ ಸಂಸ್ಥಾನದಲ್ಲಿ ಮದ್ರಾಸೀ ಅಧಿಕಾರಿಗಳ ದರ್ಪ, ಮುಂಬಯಿಯಲ್ಲಿ ಕನ್ನಡಿಗನ ಸ್ಥಾನ, ಕೋರ್ಟಿನ ದಾವೆಗಳಲ್ಲಿ ವಕೀಲರ ಲಾಭ ಬಡಕತನ ಇವುಗಳ ಮೇಲಿನ ವ್ಯಂಗ್ಯ ಚಿತ್ರಗಳನ್ನು ಗಮನಿಸಬೇಕು. ಈ ಚಿತ್ರಮಾಲಿಕೆಯು ವಾಚಕರ ವಿಶೇಷ ಮೆಚ್ಚುಗೆಯನ್ನು ಪಡೆದಿದ್ದಿತೆನ್ನುವುದಕ್ಕೆ ಕೆಲವರು ಸಂಪಾದಕರಿಗೆ ಬರೆದ ಪತ್ರಗಳೇ ಸಾಕ್ಷಿ. ಖ್ಯಾತನಾಮ ಕರ್ಪೂರ ಶ್ರೀನಿವಾಸರಾಯರು ಆಗ ಬೆಳಗಾಂವಿಯಲ್ಲಿ ಎಂಜಿನಿಯರರಾಗಿದ್ದರು. "ನಮ್ಮ ಕನ್ನಡ ಭಾಷೆಯು ಅತಿ ಹೀನಸ್ಥಿತಿಯಲ್ಲಿದ್ದು ಇಂಥಾ 'ಹಿತೋಪದೇಶ'ಕರವಾದ ಪುಸ್ತಕಗಳು ಬಹು ಅಪರೂಪವಾಗಿರುವುದರಿಂದ ನಿಮ್ಮ ಮೊದಲನೇ ಯತ್ನಕ್ಕೆ ನಿಮ್ಮನ್ನು ಬಹಳ ಕೊಂಡಾಡ ಬೇಕಾಗಿದೆ. ಮುಖ್ಯವಾಗಿ ನಿಮ್ಮ ಚಿತ್ರಗಳು ಆನಂದವನ್ನುಂಟುಮಾಡುವುದಲ್ಲದೆ, ನಿಜಸ್ಥಿತಿಯ ಸಂಗತಿಗಳನ್ನು ಚೆನ್ನಾಗಿ ಮನಸ್ಸಿಗೆ ಹತ್ತುವ ಹಾಗೆ ತೋರಿಸುತ್ತದೆ" ಎಂಬುದಾಗಿ ಅವರು ಸಂಪಾದಕರಿಗೆ ಬರೆದು ತಿಳಿಸಿದ್ದಾರೆ.

ಪತ್ರಿಕೆಯ ಬಗ್ಗೆ ಕೆಲವು ವಾಚಕರ ಪ್ರತಿಕ್ರಿಯೆಯನ್ನು ನೋಡುವ ಹಾಗಿದೆ. ಉಡುಪಿಯ ಬಿ. ಕೃಷ್ಣಯ್ಯ ಎಂಬ ಶಿಕ್ಷಕನು ಪತ್ರಿಕೆಯನ್ನು ತುಂಬ ಮೆಚ್ಚಿದ್ದನಾದರೂ ಭಾಷೆಯು ಗಡಚಿನದು ಎಂಬ ಅಭಿಪ್ರಾಯ ಪಟ್ಟಿದ್ದಾನೆ. ಶಿವಮೊಗ್ಗ ಜಿಲ್ಲೆಯ ಮತ್ತೂರ ಗ್ರಾಮದ ಎಂ. ನರಸಿಂಹಯ್ಯಂಗಾರನು ಪತ್ರಿಕೆಯಲ್ಲಿ ದೋಷ ಹುಡುಕ ಹೊರಟು

ಒಂದನ್ನೂ ಕಾಣದಾದನಂತೆ! ಇಡೀ ಮೈಸೂರ ಸಂಸ್ಥಾನದಲ್ಲಿ ಒಂದಾದರೂ ಇಂಥ ಪತ್ರಿಕೆ ಇಲ್ಲವೆನ್ನುವ ಮಟ್ಟಿಗೆ ಅವನ ಮೆಚ್ಚುಗೆಯು ವ್ಯಕ್ತವಾಯಿತು. ಹೀಗೆ ನಾಡಿನ ವಿವಿಧ ಮೂಲೆಗಳಿಂದ ಇದಕ್ಕೆ ಚಂದಾದಾರರಿದ್ದರೂ ವೆಂಕಟರಮಣಶಾಸ್ತ್ರಿಗಳ ರಾಜಕೀಯ ಸಂಘರ್ಷದಿಂದಾಗಿ ಪತ್ರಿಕೆಯು ಒಂದೆರಡು ವರ್ಷ ಮಾತ್ರ ಬದುಕಿ ಉಳಿಯಿತು.

ಅದೇ ೧೮೮೮ನೆಯ ವರ್ಷ ಹೊರಬಂದ ಇನ್ನೊಂದು ಪತ್ರಿಕೆಯೆಂದರೆ 'ಲೋಕಶಿಕ್ಷಕ'. 'ಶೋಧಕ'ವನ್ನು ನಿಲ್ಲಿಸಬೇಕಾಗಿ ಬಂದದ್ದರಿಂದ ವೆಂಕಟ ರಂಗೋ ಕಟ್ಟಿಯವರು ಇದನ್ನು ಧಾರವಾಡದ 'ಸ್ವದೇಶಾಭಿಮಾನೀ ಮಿತ್ರಸಮಾಜ'ದ ವತಿಯಿಂದ ಪ್ರಾರಂಭಿಸಿದರು. ಆದರೆ ಮೂರನೆಯ ವರ್ಷದಿಂದ, ಸಂಚಾಲನದ ಪೂರ್ಣ ಜವಾಬುದಾರಿಯು ಅವರ ಮೇಲೆಯೇ ಬಿದ್ದಿತು. ಲೋಕಶಿಕ್ಷಣಕ್ಕೆ ಅನುಗುಣವಾದ ಅದರ ಉದ್ದೇಶವು ತರುಣ ಪೀಳಿಗೆಯ ಬುದ್ಧಿ ವಿಕಾಸ ಹಾಗೂ ಆಚರಣೆಯ ಸುಧಾರಣೆಗೆ ನೆರವಾಗುವಂತಹ ಸಂಗತಿಗಳನ್ನು ಕೊಡಬೇಕೆಂಬುದೇ ಅಗಿದ್ದಿತು. ಜೊತೆಗೆ ವ್ಯಾವಹಾರಿಕ ಪ್ರಯೋಜನದ ವಿಚಾರಗಳನ್ನೂ ಕಾಯದೆಗಳ ಸ್ವರೂಪವನ್ನೂ ವಿವರಿಸಬೇಕೆನ್ನುವ ಉದ್ದೇಶವನ್ನು ಪ್ರಥಮ ಸಂಚಿಕೆಯ ಉಪೋದ್ಘಾತದಲ್ಲಿ ನಿವೇದಿಸಲಾಗಿದೆ. ಆ ಉದ್ದೇಶಗಳಿಗನುಸಾರವಾಗಿ ಸ್ಥಿರಶೀರ್ಷಿಕೆಯ ಲೇಖನಗಳು ಪ್ರತಿ ಸಂಚಿಕೆಯಲ್ಲಿ ಬರತೊಡಗಿದವು. ದೊಡ್ಡವರ ಚರಿತ್ರೆಗಳನ್ನು ಭಾ.ಯ. ಜತಾರ, ವೈದ್ಯಕೀಯ ವಿಷಯಗಳನ್ನು ಕೃಷ್ಣಾಚಾರ್ಯ ರಾಯಚೂರ ಇವರು ಬರೆಯುತ್ತಿದ್ದರು. ಸಂಸಾರಕ್ರಮದ ಶೀರ್ಷಿಕೆಯನ್ನು ರಾ.ಹ. ದೇಶಪಾಂಡೆ ಮತ್ತು ನಡೆನುಡಿಗಳ ವಿಚಾರವನ್ನು ಸಂಗಪ್ಪ ಅಂಕಲೆ ಅವರು ವಹಿಸಿ ಕೊಂಡಿದ್ದರು. ಪತ್ರಿಕೆಯು ಹೀಗೆ ಸದುದ್ದೇಶದಿಂದ ಕೂಡಿದ್ದರೂ ಚಂದಾದಾರರ ಸಂಖ್ಯೆ ಹೆಚ್ಚಾಗಲಿಲ್ಲ. ಆದ್ದರಿಂದ ಓದುಗರಿಗೆ ಮನರಂಜನೆಯನ್ನು ಒದಗಿಸಬೇಕೆಂದು ಸಂಪಾದಕರು ಯೋಚಿಸಿದರು. ಚತುರತನದಿಂದ ಕೂಡಿದ ಬರ್ಥೋಲ್ಡನ ಕಥೆಯನ್ನು ವೆಂಕಟ ರಂಗೋ ಕಟ್ಟಿ ಬರೆಯತೊಡಗಿದರು. ಮುಂದಿನ ಸಂಚಿಕೆಗಳಲ್ಲಿ 'ಉಪಜೀವನದ ಹೋರೆಗಳು' 'ಉಪಯುಕ್ತ ಸೂಚನೆ' ಎಂಬ ಹೊಸ ಶೀರ್ಷಿಕೆಗಳು ಸೇರಿಕೊಂಡವು. ಪತ್ರಿಕೆಯ ಸಂಚಿಕೆಗಳನ್ನು ತಿರುವಿ ಹಾಕಿದಾಗ ಅದರಲ್ಲಿ ಸಂಪಾದಕರ ಬರಹಗಳೇ ಹೆಚ್ಚಾಗಿ ಕಂಡುಬರುತ್ತವೆ. ಪತ್ರಿಕೆಯ ಏಳ್ಗೆಗಾಗಿ ಅವರು ಪಟ್ಟ ಶ್ರಮದ ಕಲ್ಪನೆ ಬರುವಂತಿದೆ. ಆದರೂ ಸಾಕಷ್ಟು ಪ್ರೋತ್ಸಾಹವಿಲ್ಲದೆ ಪತ್ರಿಕೆಯ ಸ್ವಾಮಿತ್ವವನ್ನು ಕೆಲವು ಕಾಲ (೧೮೯೫) ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಒಪ್ಪಿಸಿ ಕೊಡಬೇಕಾಗಿ ಬಂದಿತು.

ನವೋದಯ ಕಾಲದ ಮಹತ್ವದ ಮಾಸಪತ್ರಿಕೆಗಳೆಂದು 'ಸುದರ್ಶನ', 'ಹಿತೋಪದೇಶ' ಮತ್ತು 'ಲೋಕಶಿಕ್ಷಕ'–ಇವನ್ನು ಸಂಕ್ಷೇಪವಾಗಿ ಪರಿಶೀಲಿಸಿದೆವು. ವಿವಿಧ ವಿಷಯಗಳನ್ನೊಳಗೊಂಡು, ಸಾಮಾನ್ಯ ವಾಚಕನನ್ನು ಗಮನದಲ್ಲಿರಿಸಿಕೊಂಡು ಹೊರಟಿದ್ದ

ಇನ್ನು ಹಲವಾರು ಪತ್ರಿಕೆಗಳ ಚುಟುಕಿನ ನಿರ್ದೇಶನ ಮಾತ್ರ ಇಲ್ಲಿ ಸಾಧ್ಯ. ಲೋಕಮಾನ್ಯ ಟಿಳಕರು ಹೊರಡಿಸುತ್ತಿದ್ದ ಮರಾಠಿ ಭಾಷೆಯ ಕೇಸರೀ ಪತ್ರಿಕೆಯನ್ನು ಮನದಂದು, 'ಕನ್ನಡ ಕೇಸರಿ' ಒಡಮೂಡಿತು (೧೮೮೮). ಕೆ.ಟಿ.ಶ್ರೀನಿವಾಸ ದೇಶಿಕಾಚಾರ್ಲು 'ವಿವೇಕದೀಪಿಕಾ' ಪತ್ರಿಕೆಯನ್ನು ೧೮೯೪ ರಿಂದ ಹೊರಡಿಸತೊಡಗಿದನು. ವಿವಿಧ ವಿಷಯಗಳನ್ನೊಳಗೊಂಡ ಈ ೧೬ ಪುಟದ ಪತ್ರಿಕೆಯು ಮೈಸೂರಿನ ಜಯಲಕ್ಷ್ಮೀವಿಲಾಸ ಪ್ರೆಸ್‌ನಲ್ಲಿ ಅಚ್ಚಾಗುತ್ತಿತ್ತು. ಆದರೆ ಹೆಚ್ಚು ಕಾಲ ಬಾಳಿದಂತಿಲ್ಲ. 'ಸುರಭಿ' (೧೮೯೬) ಎಂಬುದು ಸಾಮಾನ್ಯ ವಾಚನದ ಮತ್ತೊಂದು ಪತ್ರಿಕೆಯಾಗಿದೆ. ಅದೇ ವರ್ಷ ಜೂನ್ ತಿಂಗಳಲ್ಲಿ 'ಜ್ಞಾನೋದಯ' ಮಾಸಿಕವು ಶಿವಮೊಗ್ಗದಲ್ಲಿ ಜನ್ಮ ತಾಳಿತು. ಬ್ಯಾಡಗಿ ಶೇಷಗಿರಿರಾಯನು ಇದರ ಸಂಪಾದಕನೂ ಒಡೆಯನೂ ಆಗಿದ್ದು ಶಿವಮೊಗ್ಗದ ಚಿದಾನಂದ ತತ್ವ ಪ್ರೆಸ್‌ನಲ್ಲಿ ಮುದ್ರಿಸುತ್ತಿದ್ದನು. ಪತ್ರಿಕೆಯ ೨೪ ಪುಟಗಳಲ್ಲಿ ಧಾರ್ಮಿಕ ಲೇಖಗಳಿಗೆ ಪ್ರಾಶಸ್ತ್ಯವಿದ್ದರೂ 'ರಸಿಕ ಮನೋರಂಜನ ಕಥೆ', ವಿದೇಶ ವರ್ತಮಾನ, ಜೊತೆಗೆ ಶಿವಮೊಗ್ಗದ ವರ್ತಮಾನ ಇವನ್ನು ಕೊಡುವ ಕ್ರಮವಿದ್ದಿತು. ಚಂದಾದಾರರ ಸಂಖ್ಯೆ ಏರದಿದ್ದಾಗ, ಅವರ ಅನಾಸ್ಥೆಯ ವಿಷಯದಲ್ಲಿ ಬೈದು, ಆರ್ತನಾದ ಮಾಡಿದುದೂ ಕಂಡುಬರುತ್ತದೆ. ಈ ಪತ್ರಿಕೆಯು ೩–೪ ವರ್ಷಕ್ಕಿಂತ ಹೆಚ್ಚು ಬಾಳಿದಂತಿಲ್ಲ.

ಪ್ರಾಚೀನ ಕಾವ್ಯಗಳನ್ನು ಮತ್ತು ಆಧುನಿಕ ಗದ್ಯ ಕೃತಿಗಳನ್ನು ಪತ್ರಿಕೆಗಳಲ್ಲಿ ಕ್ರಮವಾಗಿ ಪ್ರಕಟಿಸಿ ಅನಂತರ ಪುಸ್ತಕರೂಪದಲ್ಲಿ ಹೊರತರುವ ಅಂದಿನ ಪದ್ಧತಿಗನುಗುಣವಾಗಿ, ಕೆಲವು ಪತ್ರಿಕೆಗಳು ಇದಕ್ಕಾಗಿಯೇ ಮೀಸಲಿದ್ದುವು. ಕರ್ನಾಟಕ ಕಾವ್ಯಮಂಜರಿ/ಕರ್ನಾಟಕ ಕಾವ್ಯಕಲಾನಿಧಿಯ ಮೂಲಕ ಎಂ.ಎ. ರಾಮಾನುಜಯ್ಯಂಗಾರ್ ಹಾಗೂ ಎಸ್.ಜಿ. ನರಸಿಂಹಾಚಾರ್ಯರು ಅನೇಕ ಹಳಗನ್ನಡ ಕಾವ್ಯಗಳನ್ನು* ಹೊರತಂದ ಮಹತ್ತರ ಕಾರ್ಯದ ಬಗೆಯನ್ನು ಈಗಾಗಲೇ ನೋಡಿದ್ದೇವೆ. 'ಜಿ.ಟಿ. ಎ' ದವರ 'ಕರ್ನಾಟಕ ಗ್ರಂಥಮಾಲೆ' ಪತ್ರಿಕೆಯು ಹಳೆಯ ಕೃತಿಗಳ ಸಾರವನ್ನಲ್ಲದೆ, ಹೊಸ ಗದ್ಯಕೃತಿಗಳನ್ನೂ, ಇಂಗ್ಲಿಷ್ ಕೃತಿಗಳ ರೂಪಾಂತರವನ್ನೂ ಕೊಡಮಾಡಿದ್ದು, ಅವೆಲ್ಲ ಮುಂದೆ ಪ್ರತ್ಯೇಕ ಪುಸ್ತಕಗಳಾಗಿ ಹೊರಬಂದುದನ್ನೂ ಈ ಹಿಂದೆ ಗಮನಿಸಿದ್ದೇವೆ. ಆ ಮೂಲಕ ಅನೇಕ ಹೊಸ ಲೇಖಕರು ಬೆಳಕಿಗೆ ಬಂದುದು ಅದರ ಹಿರಿಯ ಸಾಧನೆಯಾಗಿದೆ. ಕೊಮಾಂಡೂರು ಶ್ರೀನಿವಾಸಯ್ಯಂಗಾರನು ಸಂಸ್ಕೃತ ಕಾವ್ಯ, ಅವುಗಳ ಕನ್ನಡಾನುವಾದವನ್ನು ಕೊಡುವ ಅಪೇಕ್ಷೆ ಪಟ್ಟು 'ಕಾವ್ಯಕಲ್ಪದ್ರುಮ'ವನ್ನು, ಪ್ರಾರಂಭಿಸಿದನು (೧೮೯೨). ಮೊದಲ ಸಂಚಿಕೆಯಲ್ಲಿ ಕುಮಾರಸಂಭವ, ಮೇಘದೂತ ಮತ್ತು ನೈಷಧಗಳ ಕಾವ್ಯಭಾಗಗಳು

---

* ನಾನಾ ವಿಧ ಪ್ರಾಚೀನ ಕಾವ್ಯ ನಾಟಕಚ್ಛಂದೋಲಂಕಾರ ವ್ಯಾಕರಣ, ನಿಘಂಟು ವೈದ್ಯ. . . . .ಸೂಪ, ಶಿಲ್ಪಗ್ರಂಥ ಸಂಗ್ರಹದ ಮಾಸಪತ್ರಿಕೆ–ಎಂಬ ಅಭಿದಾನವನ್ನು ಕರ್ನಾಟಕ ಕಾವ್ಯಮಂಜರಿಗೆ ಕೊಡಲಾಗಿದ್ದಿತು.

ಪ್ರಕಟವಾದವು. ಆದರೆ ಅವನ ಅಪೇಕ್ಷೆಯು ಮೊದಲ ಸಂಚಿಕೆಗೇ ಮುಕ್ತಾಯವಾದಂತೆ ತೋರುತ್ತದೆ.

ಇತ್ತ ಉತ್ತರ ಕರ್ನಾಟಕದಲ್ಲಿ, ಇದೇ ಬಗೆಯ ಉದ್ದೇಶವನ್ನಿಟ್ಟುಕೊಂಡು ಹೊರಟ ಪತ್ರಿಕೆಗಳೆಂದರೆ 'ಕರ್ನಾಟಕ ಭಾಷಾಸೇವಕ' (೧೮೯೪) ಮತ್ತು 'ವಾಗ್ಭೂಷಣ' (೧೮೯೬). ವಿಜಾಪುರ ಹೈಸ್ಕೂಲಿನ ಮೂವರು ತರುಣ ಶಿಕ್ಷಕರು ಸಂಸ್ಕೃತ, ಇಂಗ್ಲಿಷ್ ಕೃತಿಗಳ ಸಾರವನ್ನು ಸರಸವಾದ ಗದ್ಯದಲ್ಲಿ ಕೊಡಬೇಕೆಂದು ಯೋಜಿಸಿ, ಅವುಗಳ ಪ್ರಕಟನೆಗಾಗಿ 'ಭಾಷಾಸೇವಕ'ವನ್ನು ವಾಹಕವಾಗಿ ಮಾಡಿಕೊಂಡರು. ಆ ಪ್ರಕಾರ ಶೇಷಗಿರಿರಾವ ಕೊಣ್ಣೂರನ 'ಕೇಡು ತಂದ ಉಂಗುರ' (ಶಾಕುಂತಲದ ಕಥೆ); ಹಣಮಂತರಾವ್ ಸಗರ, ಇವನ 'ಅಂತಃಪುರದ ರಹಸ್ಯ' (Loves of Harem ಇದರ ಭಾಷಾಂತರ) ಮತ್ತು ಕೃಷ್ಣರಾವ ಹುನಗುಂದ-ಇವನ 'ಕುರುಹೀನ ಬಕುಳಹಾರ' ('ಮಾಲತೀಮಾಧವ'ದ ಕಥಾನುವಾದ) ಈ ಪತ್ರಿಕೆಯಲ್ಲಿ ಕ್ರಮಶಃ ಬರತೊಡಗಿ, ಆಮೇಲೆ ಪುಸ್ತಕರೂಪವನ್ನು ತಾಳಿದುವು. ಕೃಷ್ಣರಾವ ಹುನಗುಂದನು 'ಮುದ್ರಾರಾಕ್ಷಸ'ದ ಅನುವಾದವನ್ನು ಕೈಗೆತ್ತಿಕೊಂಡಿದ್ದರು. ಆದರೆ ಸಹೋದ್ಯೋಗಿದ್ವಯರಿಗೆ ವಿಜಾಪುರದಿಂದ ವರ್ಗವಾಯಿತಾದ್ದರಿಂದ ಅವರ ಯೋಜನೆ ತಡೆದು ನಿಂತಿತು.

ಕರ್ನಾಟಕ ವಿದ್ಯಾವರ್ಧಕ ಸಂಘದ ಮುಖಪತ್ರಿಕೆಯಾಗಿದ್ದ **ವಾಗ್ಭೂಷಣ**ವನ್ನು ವಿಶೇಷವಾಗಿ ಎತ್ತಿ ಹೇಳಬೇಕು. ಈ ಪತ್ರಿಕೆಯಲ್ಲಿ ಸಂಘದ ವಿವಿಧ ಸುದ್ದಿಗಳು, ಇತರ ಲೇಖನಗಳು, ಜೊತೆಗೆ 'ಗ್ರಂಥಾವಳಿ'ಯ ಭಾಗಗಳು ಇರುತ್ತಿದ್ದುವು. 'ಕರ್ನಾಟಕ ಗ್ರಂಥಮಾಲೆ'ಯಂತೆ ಹೊಸ ಲೇಖಕರನ್ನು ಬೆಳಕಿಗೆ ತರುವ ವಿಷಯದಲ್ಲಿ 'ವಾಗ್ಭೂಷಣ'ವೂ ವಿಶೇಷ ಪ್ರಯತ್ನ ಮಾಡಿದೆ. ಸಂಘದ ಇನಾಮಿನ ಆಶೆಗಾಗಿ ಬರೆದವರೂ ಇದ್ದರಲ್ಲವೆ. ಅಲ್ಲದೆ 'ವಾಗ್ಭೂಷಣ'ದ ಮೂಲಕ ಹೊರಬಂದ ಅನೇಕ ಕೃತಿಗಳು ಪ್ರಗತಿಪರ ದೃಷ್ಟಿಯನ್ನಿಟ್ಟು, ಸ್ವತಂತ್ರ ವಿಚಾರ ಸರಣಿಯಿಂದ ಬರೆದವುಗಳಾಗಿದ್ದುವು. ಪತ್ರಿಕೆಯು ಮೊದಲಿನಿಂದಲೂ ಆರ್ಥಿಕ ಬವಣೆಯನ್ನು ಹೊಂದಿದ್ದಿತು. ಅಂಥ ಸ್ಥಿತಿಯಲ್ಲಿ ರಾ.ಹ. ದೇಶಪಾಂಡೆ, ಕರಗುದರಿ ನಾರಾಯಣರಾಯ ಮೊದಲಾದ ಸಂಘದ ಕಾರ್ಯಕರ್ತರು ಕಾಲಕಾಲಕ್ಕೆ ಆರ್ಥಿಕ ಸಹಾಯ ಮಾಡಿದ್ದಾರೆ.

ವಿಶಿಷ್ಟ ದೃಷ್ಟಿಕೋಣದಿಂದ ಇಲ್ಲವೆ ವಿಶಿಷ್ಟ ವಾಚಕರನ್ನು ಗಮನದಲ್ಲಿರಿಸಿಕೊಂಡು ಹೊರಟ ಮಾಸಪತ್ರಿಕೆಗಳನ್ನು ಇನ್ನೀಗ ಪರಿಶೀಲಿಸಬೇಕಾಗಿದೆ. ಹಾಗೆ ನೋಡಿದರೆ, ಸಾಮಾನ್ಯ ಮಾಸಿಕಗಳಿಗಿಂತ ಇವುಗಳ ಸಂಖ್ಯೆಯೇ ದೊಡ್ಡದು. ಅದರಲ್ಲಿಯೂ ಶೈಕ್ಷಣಿಕ ಮತ್ತು ಧಾರ್ಮಿಕ ಪುನರುಜ್ಜೀವನವು ಅಂದಿನ ಪತ್ರಿಕಾಕರ್ತರ ಅಧಿಕೃತ ಧೋರಣೆಯಾಗಿದ್ದಿತು. ಹಾಗೂ ಅದಕ್ಕನುಗುಣವಾದ ಪತ್ರಿಕೆಗಳನ್ನು ಬೇರೆ ಬೇರೆ ವ್ಯಕ್ತಿಗಳು ಪ್ರಕಟಿಸಲು ಮುಂದಾದರು.

ಮೊದಲಿಗೆ ಧಾರ್ಮಿಕ ಸ್ವರೂಪದ ಪತ್ರಿಕೆಗಳನ್ನು ನೋಡೋಣ. ಕ್ರೈಸ್ತಮತ ಪರವಾದ 'ಅರುಣೋದಯ, ಸಭಾಪತ್ರ'ಗಳನ್ನು ನೋಡಿದ್ದೇವೆ. ಇವಕ್ಕೆ ಪ್ರತಿಯಾಗಿ ನವೋದಯ ಕಾಲದಲ್ಲಿ ಹಿಂದೂಧರ್ಮದ ಪರವಾದ ಹಲವಾರು ಪತ್ರಿಕೆಗಳನ್ನು ಕಾಣುತ್ತೇವೆ. ಎರಡು ದೃಷ್ಟಿಯಿಂದ ಇದು ಅನಿವಾರ್ಯವಾಗಿದ್ದಿತು : ಕ್ರೈಸ್ತರು ನಡೆಸಿದ್ದ ಹಿಂದೂಮತ ಖಂಡನೆಯನ್ನು ಎದುರಿಸಲು, ಅದರಂತೆ ಪಾಶ್ಚಾತ್ಯ ಶಿಕ್ಷಣದಿಂದಾಗಿ ಅಂದಿನ ಯುವಜನಾಂಗದಲ್ಲಿ ಕಡಮೆಯಾಗುತ್ತಿದ್ದ ಸ್ವಧರ್ಮಾಭಿಮಾನವನ್ನು ಕುದುರಿಸಲು ಇವು ಮುಂದಾದವು. ಹಾಗೆಂದು ಈ ಉದ್ದೇಶವಿದ್ದ ಪತ್ರಿಕೆಗಳು ಸುಧಾರಣಾ ವಿರೋಧಗಳೆಂದೇನೂ ಅಲ್ಲ. ಇನ್ನೊಂದೆಂದರೆ, ಹಿಂದೂ ಧರ್ಮದ ವಿವಿಧ ಮತ-ಪಂಥಗಳಿಗೆ ಸಂಬಂಧಿಸಿದ ಕೃತಿಗಳನ್ನು ಸುಲಭವಾದ ಕನ್ನಡ ಗದ್ಯದಲ್ಲಿ ಕೊಟ್ಟು ಸ್ವಮತದ ಹೆಗ್ಗಳಿಕೆಯನ್ನು ತೋರ್ಪಡಿಸಬೇಕೆಂಬ ಮನೋಧರ್ಮ. ಒಂದೊಂದಾಗಿ ನೋಡುವ :

ಮೊತ್ತ ಮೊದಲಿಗೆ ಹಿಂದೂಮತಾಭಿಮಾನಿಯನ್ನು (೧೮೮೮-) ಗಮನಿಸೋಣ. ವೆಂಕಟಕೃಷ್ಣ ಸರಸ್ವತಿ ಎಂಬವನು ಬೆಂಗಳೂರಿನಿಂದ ಇದನ್ನು ಹೊರಡಿಸುತ್ತಿದ್ದನು. ಬೈಬಲ್ ಹೇಳಿಕೆಗಳಲ್ಲಿ ಅವನು ಕಂಡ ಸಂದೇಹದ ಬಗೆಯನ್ನು ಈ ಹಿಂದೆ ನೋಡಿದ್ದೇವೆ. <೧೫೩>. ಪತ್ರಿಕೆಯಲ್ಲಿ ಬಂದ ಇನ್ನಿತರ ವಿಷಯಗಳೆಂದರೆ ಆಸ್ತಿಕ ಭಾವ, ಜನ್ಮಾಂತರ, ಧರ್ಮದ ವ್ಯಾಖ್ಯೆ-ಇವೇ ಮೊದಲಾದವುಗಳು. ಬಹಳಷ್ಟು ಜನ ಹಿಂದೂಗಳು ತನ್ನ ಪತ್ರಿಕೆಗೆ ಚಂದಾದಾರರಾಗುವರೆಂಬ ನಿರೀಕ್ಷೆಯಿತ್ತೆಂದು ಕಾಣುತ್ತದೆ. ಮೊದಲ ವರ್ಷದ ಮೂರನೆಯ ಸಂಚಿಕೆಯಲ್ಲಿಯೆ, ಆ ವಿಷಯದಲ್ಲಿ ನಿರಾಶೆಯು ವ್ಯಕ್ತವಾಗಿದೆ. 'ಬೇಡವಾಗಿರುವ ಸಂಚಿಕೆಗಳನ್ನು ತಮ್ಮಲ್ಲಿಟ್ಟುಕೊಂಡು ಲುಕ್ಸಾನು ಪಡಿಸದೇ ಈ ಸಂಚಿಕೆಯನ್ನೂ ಓದಿಕೊಂಡು ವಾಪ್ಸು ಮಾಡಿಬಿಡಬೇಕು' ಎಂಬ ಸೂಚನೆ ಅದರಲ್ಲಿದೆ! ಈ ಪತ್ರಿಕೆಯು ಅದೆಷ್ಟು ಕಾಲ ಬದುಕಿದ್ದಿತೆಂಬುದು ತಿಳಿಯದು.

ಹತ್ತು ವರ್ಷಗಳ ಅನಂತರ ಹೊರಟ 'ವಿವೇಕಾನಂದ' ಪತ್ರಿಕೆಯು ಸದ್ಧರ್ಮ ಪ್ರಸಾರವನ್ನೇ ತನ್ನ ಉದ್ದೇಶವನ್ನಾಗಿ ಇಟ್ಟುಕೊಂಡಿದ್ದಿತು. ರಾ.ಸೂ. ವೆಂಕಟಕೃಷ್ಣಯ್ಯನು ಸಂಪಾದಕನಾಗಿದ್ದ ಈ ಪತ್ರಿಕೆಯು ಮೈಸೂರಿನಲ್ಲಿ ಮುದ್ರಣಗೊಳ್ಳುತ್ತಿತ್ತು. ಸ್ವಾಮೀ ವಿವೇಕಾನಂದರಿಗೆ ಈ ಪತ್ರಿಕೆಯು ಸಲ್ಲಿಸಿದ ಗೌರವ ಇಂತಿದೆ :

"ವೇದೋದಿತ ಧರ್ಮವನ್ನೇ ಸರ್ವೋತ್ಕೃಷ್ಟವಾಗಿ ಉಜ್ಜೀವಿಸುವಂತೆ ಅಮೆರಿಕಾ. ಯೂರೋಪ ಮುಂತಾದ ಜಗದ್ವಿಭಾಗಗಳಲ್ಲೆಲ್ಲಾ ಪರಮ ಪ್ರಸಿದ್ಧಿಗೆ ತಂದ, ಜಗತ್ತಿಗೇ ಪರಮ ಗುರುಃವಾದ ಶ್ರೀಯುತ ವಿವೇಕಾನಂದ ಸರಸ್ವತಿಯುವರ ಹೆಸರನ್ನು ಶಾಶ್ವತಗೊಳಿಸಲು ಈ ಪತ್ರಾಭ್ಯುದಯವಾಗಿದೆ. . . .ವಿವೇಕಮುತ್ಪಾದ್ಯ ಜನಾಂದಯತೇತಿ

ವಿವೇಕಾನಂದಃ. ನಮ್ಮ ಅಭೀಷ್ಟವೂ ಅದೇ ಆಗಿದೆ". ಹೀಗೆ 'ವೇದ್ಯೋಕ್ತಾಚಾರ ಪ್ರಚಾರ'ವೇ ಗುರಿಯಾಗಿದ್ದ ಈ ಪತ್ರಿಕೆಯನ್ನು ನಡೆಸುವಾಗ "ವಿಷಯ ದೊಡ್ಡದು. ಅದರಲ್ಲಿಯೂ ಮತವಿಚಾರ. ನನ್ನೊಬ್ಬನ ಅಲ್ಪ ಬುದ್ಧಿಯಿಂದ ಆಗತಕ್ಕದ್ದೂ ಅಲ್ಲ" ಎಂಬ ತನ್ನ ಇತಿಮಿತಿಯ ಪರಿಜ್ಞಾನ ಸಂಪಾದಕನಿಗೆ ಇದ್ದಿತು. ಆದ್ದರಿಂದ ಮತತ್ರಯ ಗುರುಗಳ ಲೇಖನ ಸಹಾಯವನ್ನು ಕೋರಿದ್ದಾನೆ. ಮುಂದುವರಿದು–

"ಆಧುನಿಕ ಪಂಡಿತರನೇಕರು ವೇದಾರ್ಥವನ್ನು ಕೆಡಿಸಿ ವೇದಕ್ಕೆ ಕೆಟ್ಟ ಹೆಸರನ್ನು ತಂದಿರುವುದರಿಂದ. . . . ಐತರೇಯ, ಶತಪಥ, ಸಾಮ, ಗೋಪಥಗಳೆಂಬ ಎಲ್ಲಾ ಬ್ರಾಹ್ಮಣಗಳನ್ನೂ ಅರಣ್ಯಕಗಳನ್ನೂ ಪ್ರಕಟಿಸುತ್ತಾ ಪ್ರತಿವರ್ಷವೂ ನಮ್ಮ ಚಂದಾದಾರರ ಸನ್ನಿಧಿಗೆ ಒಂದೊಂದನ್ನು ಬಹುಮಾನವಾಗಿ ಕಳುಹಿಸಲು ನಿಶ್ಚೈಸಿರುವೆವು.

"ವಿವೇಕಾನಂದ'ವೆಂಬ ಈ ವೇದಶಿಶುವನ್ನು ಪರಿಗ್ರಹಿಸಿ, ಆನಂದಿಸಿ ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಇದೇ ಸಕಾಲವಲ್ಲವೆ?" ಎಂದು ವಾಚಕರಲ್ಲಿ ವಿನಂತಿ ಮಾಡಿಕೊಂಡಿದ್ದಾನೆ. ಈ ಪತ್ರಿಕೆಯಲ್ಲಿ ಅವಳಿಯಾಗಿ ಪ್ರಕಟವಾಗಿ ಮುಂದೆ ಪುಸ್ತಕ ರೂಪದಲ್ಲಿ ಹೊರಬರಲಿದ್ದ ಗ್ರಂಥಗಳನ್ನು ಚಂದಾದಾರಿಗೆ, ವಿಶೇಷತಃ ಹೊಸಬರಿಗೆ ಉಚಿತವಾಗಿ ಕೊಡಮಾಡಿದುದರಲ್ಲಿ, ಅವನ ವೇದ ಪ್ರಸಾರದ ವಿಷಯಕವಾದ ಶ್ರದ್ಧೆಯನ್ನು ಕಾಣುತ್ತೇವೆ. ಸ್ತ್ರೀವಾಚಕರ ಹಿತವೂ ಅವನ ಗಮನದಲ್ಲಿದ್ದಿತು. "ಈ ಪತ್ರಿಕೆಯಲ್ಲಿ ಉತ್ತರಾರ್ಧವನ್ನು ನಿಮ್ಮಗಳ ಸೇವೆಗಾಗಿ ವಿನಿಯೋಗಿಸಿರುವೆವು. ತಮ್ಮ ಸತ್ಕಾಲಕ್ಷೇಪಕ್ಕಾಗಿ ಇದನ್ನು ತಮ್ಮ ಪುರುಷರ ಮೂಲಕವಾಗಿ ತಿಳಿಯುತ್ತಾ ನಮ್ಮ ಕಷ್ಟವನ್ನು ಸಾರ್ಥಕಪಡಿಸುವಿರೆಂದು" ಅವನ ನಂಬಿದ್ದನು. ಸ್ತ್ರೀವಿಷಯಕವಾದ ಲೇಖನಗಳನ್ನು ಪ್ರಕಟ ಮಾಡುತ್ತಿದ್ದನು. ಸಂಸ್ಕೃತ ಭಾಷೆ, ಬ್ರಾಹ್ಮಣರ ಜೀವನೋಪಾಯ–ಮೊದಲಾದ ವಿಷಯಗಳ ಮೇಲೂ ಈ ಪತ್ರಿಕೆಯಲ್ಲಿ ಲೇಖಗಳಿದ್ದುವು. 'ಯಾತಕ್ಕೆ ಸಂಧ್ಯಾವಂದನೆ'– ಎಂಬ ಕುತರ್ಕಕ್ಕೆ ಪ್ರತಿಯಾಗಿ ಲೇಖವನ್ನು ಬರೆದು ಕಳುಹಿಸಬೇಕೆಂದು ಅವನು ಒಂದು ಸಂಚಿಕೆಯಲ್ಲಿ ಮನವಿಮಾಡಿಕೊಂಡಿದ್ದಿದೆ. ಚಂದಾದಾರರ ಸಂಖ್ಯೆ ಏರದಿದ್ದಾಗ, ತಾನು ಈಗಾಗಲೇ, ಬರೆದಿದ್ದ ಆಚಾರ್ಯತ್ರಯರ ಟೀಕಾ ಸಹಿತವಾದ ಈಶಾವಾಸ್ಯೋಪನಿಷತ್ ಗ್ರಂಥವನ್ನು ಸಹ ಬಹುಮಾನವಾಗಿ ಕೊಡುವುದಾಗಿ ಸಾರಿದನು. ವಾರ್ಷಿಕ ಚಂದಾಹಣಕ್ಕಿಂತಲೂ ಹೆಚ್ಚು ಬೆಲೆಯ ಪುಸ್ತಕವಿದು! ಆದರೂ ನಿರೀಕ್ಷಿಸಿದಷ್ಟು ಪ್ರೋತ್ಸಾಹ ಸಿಕ್ಕದೆ ಪತ್ರಿಕೆ ಬಹುಕಾಲ ಮುಂದುವರಿಯಲಿಲ್ಲ.

ಜೈನಧರ್ಮ ಪ್ರಸಾರದ ದೃಷ್ಟಿಯಿಂದ 'ಬುಧಜನ ಮನೋರಂಜಿನಿ' (೧೮೯೦–೯೪), 'ಕಾವ್ಯಾಂಬುಧಿ' (೧೮೯೪) ಮತ್ತು 'ಜಿನಮತಾದರ್ಶ' (೧೮೯೪) ಎಂಬ ಮೂರು ಪತ್ರಿಕೆಗಳು ಹೊರಟವು. ಉದ್ದೇಶ–ಸಂಸ್ಕೃತ ಶಾಸ್ತ್ರ ಪುರಾಣ ಗ್ರಂಥಗಳ ಕನ್ನಡಾನುವಾದ, ಮುಂತಾದವುಗಳನ್ನು ಕೊಡುವುದಾಗಿದ್ದಿತು. ಮೊದಲಿನೆರಡು

ಪತ್ರಿಕೆಗಳನ್ನು ಸಂಪಾದಿಸಿದವರು ಬಿ. ಪದ್ಮರಾಜಪಂಡಿತರು. ಇತ್ತ 'ವೀರಶೈವಮತ ಪ್ರಕಾಶಿಕೆ'– ಮಾಸಪತ್ರಿಕೆಯ ಉದ್ದೇಶವಾದರೂ ಅದೇ ಆಗಿದ್ದಿತು. ಕ್ರಿ.ಶ. ೧೮೯೧–೯೫ರ ವರೆಗೆ, ಮೈಸೂರಿನ ಶಂಕರವಿಲಾಸ ಪ್ರೆಸ್‌ನಲ್ಲಿ ಮುದ್ರಣವಾಗುತ್ತಿದ್ದ ಈ ಪತ್ರಿಕೆಯ ಹಿಂದೆ ಇದ್ದವರು ಎನ್. ಆರ್. ಕರಿಬಸವಶಾಸ್ತ್ರಿ ಮತ್ತು ಪಿ.ವಿ. ರುದ್ರಪ್ಪ.

ಶ್ರೀವೈಷ್ಣವ ಮತಪೋಷಕವಾದ ಪತ್ರಿಕೆಗಳೆಂದು 'ಆರ್ಯಮತಸಂಜೀವಿನೀ' (೧೮೯೦–೯೧), 'ಹಿಂದೂಮತಪ್ರಕಾಶಿಕ' (೧೮೯೬–೧೯೦೦) ಮತ್ತು 'ವೇದಾಂತ ವಾದಾವಲೀ' (೧೮೯೮)–' ಇವನ್ನು ಉಲ್ಲೇಖಿಸುತ್ತೇವೆ. 'ಆರ್ಯಮತಸಂಜೀವಿನಿ' ಎಂ.ಎ. ರಾಮಾನುಜಯ್ಯಂಗಾರರ ಪ್ರಥಮ ಪತ್ರಿಕೋದ್ಯಮ ವಾಗಿದೆ. ವಿಷ್ಣುಪುರಾಣದ ಗದ್ಯ, ಚಿಕ್ಕದೇವರಾಯ ಬಿನ್ನಪ–ಇವು ಈ ಪತ್ರಿಕೆಯಲ್ಲಿ ಬೆಳಕು ಕಂಡಿವೆ. ಇದನ್ನು ನಿಲ್ಲಿಸಿ, ಅವರು ವ್ಯಾಪಕವಾದ ಕರ್ಣಾಟಕ ಕಾವ್ಯಮಂಜರಿಯನ್ನು ಕೈಗೆತ್ತಿಕೊಂಡರು. ಮೇಲುಕೋಟೆಯ ಯದುಗಿರಿ ಸದಾನಂದವರ್ಧಿನೀ ಸಭೆಯವರಿಂದ ಪ್ರಕಾಶಿತವಾದ 'ಹಿಂದೂಮತಪ್ರಕಾಶಿಕಾ' ಪತ್ರಿಕೆಯಲ್ಲಿ, ಹಿಂದೂ ಜಾತಿ ಮತ ಸಮಯಾಚಾರ ಪರಿಷ್ಕರಣೋಪಯೋಗಿಯಾಗಿಯೂ ನೀತಿಧರ್ಮ ಬೋಧಕಗಳಾಗಿಯೂ ಇರುವ ಉಪನ್ಯಾಸಗಳು ಮುಖ್ಯವಾಗಿ ಬರೆಯಲ್ಪಡುವ' ಉದ್ದೇಶವು ಕಂಡುಬರುತ್ತದೆ. ಒಟ್ಟಿನಲ್ಲಿ ಶ್ರೀವೈಷ್ಣವ ವಿಚಾರಗಳಿಗೆ ಪ್ರಾಶಸ್ತ್ಯವಿದ್ದಿತು. 'ವೇದಾಂತವಾದಾವಲಿ'ಯು, ಈ ಮತದ ಪ್ರಾಚೀನ ಕೃತಿಗಳ ಸಂಸ್ಕೃತ–ಕನ್ನಡ ರೂಪವನ್ನು ಪ್ರಕಟಿಸುವ ಸ್ಪಷ್ಟ ಉದ್ದೇಶದಿಂದ ಹೊರಟಿತು. ದೇವನಾಗರೀ ಲಿಪಿಯಲ್ಲಿ ಹೆಚ್ಚಾಗಿ ಮುದ್ರಿತವಾಗುತ್ತಿದ್ದ ಈ ಪತ್ರಿಕೆಯನ್ನು ವಿಶ್ವವಿದ್ಯಾನಿಲಯದ ಪದವೀಧರರು ನಡೆಸುತ್ತಿದ್ದರಂತೆ.*

ಪತ್ರಿಕೆಗಳ ಈ ಸ್ಥೂಲ ಸಮೀಕ್ಷೆಯ ಕಾರ್ಯದಲ್ಲಿ ಕೊನೆಯದಾಗಿ, ಶೈಕ್ಷಣಿಕ ಪತ್ರಿಕೆಗಳನ್ನು ಪರಿಶೀಲಿಸೋಣ. **ಕರ್ಣಾಟಕ ವಾಣೀವಿಲಾಸ** ಪತ್ರಿಕೆಯು ವಿದ್ಯಾರ್ಥಿನಿಯರಿಗಾಗಿ ಮತ್ತು ಮಹಿಳೆಯರ ವಾಚನಕ್ಕಾಗಿ ಮೀಸಲಾಗಿದ್ದಿತು (೧೮೮೮). "ನೂತನವಾಗಿ ಗ್ರಂಥಗಳನ್ನು ಲೋಕೋಪಕಾರಾರ್ಥವಾಗಿ ರಚಿಸಿ ಪ್ರಸಿದ್ಧಪಡಿಸುವ ಮಹಾತ್ಮರು ಪರಮೋತ್ತಮರು. ಇಷ್ಟು ವಿಶೇಷ ಶಕ್ತಿಯಿಲ್ಲದವರು ತಮಗೆ ತಿಳಿದ ಮಟ್ಟಿಗೆ ಅಲ್ಲಲ್ಲಿರುವ ಸಾರವಾದ ಸಂಗತಿಗಳನ್ನು ಸಂಗ್ರಹಿಸಿ ಪರರ ತಿಳಿವಳಿಕೆಗೆ ತರುವವರು ಮಧ್ಯಮರು. ನಾವು ಈ ಎರಡನೇ ಮಾರ್ಗದಲ್ಲಿ ನಡಿಯುವವರಾಗಿದ್ದೇವೆ. ಇದರಿಂದ ದ್ರವ್ಯ ಸಂಪಾದನೆ ಮಾಡಬೇಕೆಂಬ ಅಭಿಲಾಷೆ ನಮಗಿಲ್ಲ" ಎಂದು ಸಂಪಾದಕನು ಹೇಳಿಕೊಂಡಿದ್ದಾನೆ. ರಂಗವಲ್ಲಿ, ವಗಟು, ಕಸೂತಿ ಸ್ಪರ್ಧೆಗಳು–ಇವನ್ನು ಬಾಲೆಯರಿಗಾಗಿ ಕೊಡಬೇಕೆಂದರೆ ಚಿತ್ರಗಳು ಅಗತ್ಯವಾಗಿ ಬೇಕಲ್ಲ? ಸಂಪಾದಕನು ಅವನ್ನು ಲಂಡನ್ನಿನಿಂದ ತರಿಸಿ

* ಸ್ವಮತ ವಿಷಯಕವಾದ ಪತ್ರಿಕೆಗಳನ್ನು ಇದೇ ರೀತಿ ಹೊರಡಿಸುವ ಕ್ರಮವು ಇಪ್ಪತ್ತನೆಯ ಶತಮಾನದ ಮೊದಲೆರಡು ದಶಕಗಳಲ್ಲಿಯೂ ಮುಂದುವರಿಯಿತು.

ಪ್ರಕಟಿಸಿದನು. ಅದಲ್ಲಿಯೂ, ವರ್ಣಚಿತ್ರಗಳವು. ಈ ಸಂಪಾದಕನ ಹೆಸರು ತಿಳಿಯದು. ಆದರೆ ಲಕ್ಕೂರ ಸುಬ್ಬರಾಯನೆಂಬವನು ಅದರ ವ್ಯವಸ್ಥಾಪಕನಾಗಿದ್ದು, ಮೈಸೂರಿನ ಕೃಷ್ಣರಾಜೇಂದ್ರ ಪ್ರೆಸ್‌ನಲ್ಲಿ ಅದು ಮುದ್ರಣವಾಗುತ್ತಿತ್ತು. 'ರಾಮವರ್ಮ-ಲೀಲಾವತಿ' ನಾಟಕ, 'ಸುವರ್ಣಲತಾ" ಕಾದಂಬರಿ ಇವು ಈ ಪತ್ರಿಕೆಯಲ್ಲಿ ಮೊದಲು ಬೆಳಕು ಕಂಡಿವೆ. ಭಾಷಾ ಸುಧಾರಣೆಯ ಬಗೆಗೆ ಆಗಿನ ದಿನಗಳಲ್ಲಿ ನಡೆದ ಚರ್ಚೆ ಮತ್ತು ಸರಕಾರೀ ಸಮಿತಿಯೊಂದರ ಕಾರ್ಯಕಲಾಪಗಳು ಈ ಪತ್ರಿಕೆಯ ಸಂಚಿಕೆಯೊಂದರಲ್ಲಿ ವಿವರವಾಗಿ ಪ್ರಕಟವಾಗಿವೆ. ಕನ್ನಡ ಪತ್ರಿಕೋದ್ಯಮದ ದ್ವಿತೀಯ ಘಟ್ಟದ ಮಹತ್ವದ ಪತ್ರಿಕೆ-ಎಂದು ಇದನ್ನೂ ಅವಶ್ಯವಾಗಿ ಗಣಿಸತಕ್ಕುದು.

'ಸ್ತ್ರೀವಿದ್ಯಾಭಿಮಾನಿ' ಪತ್ರಿಕೆಯು ಇದೇ ಉದ್ದೇಶವನ್ನಿಟ್ಟುಕೊಂಡಿದ್ದರೂ ಅಲ್ಪಾಯುಷಿಯಾಗಿದ್ದಿತು. 'ವಿಜ್ಞಾನ ದೀಪಿಕೆ' (೧೮೯೩) ಮತ್ತು 'ವಿದ್ಯಾರ್ಥಿಕೋಶ' ವಿಜ್ಞಾನದ ಬೆಳಕಿನಿಂದ ಪೋಗೀ ನಾಡೊಳ್ ಪ್ರಜ್ಞಾಶಾಲಿಗಳಾಗಲಿ ಸುಜ್ಞಾನಾಪೇಕ್ಷೆಯುಳ್ಳ ಬಾಲಕರನಿಶಮ್' ಎಂಬುದಾಗಿ 'ವಿಜ್ಞಾನ ದೀಪಿಕೆ'ಯ ಸಂಪಾದಕನು ಹಾರ್ಯೆಸಿ, ಲೋವರ್ ಸೆಕೆಂಡರಿಯು, ಮತ್ತಿತರ ಪಠ್ಯಗಳಿಗೆ ನೋಟ್ಸನ್ನು ಕೊಡುತ್ತಿದ್ದನು. ಜೊತೆಗೆ ವಿದ್ಯಾಸಂಬಂಧಿಯಾದ ಲೇಖಗಳೂ, ಮನರಂಜನೆಗಾಗಿ ಕಥೆಗಳು ಇರುತ್ತಿದ್ದುವು. ವಿಶೇಷವೆಂದರೆ, ಬೆಳ್ಳಾವೆ ಸೋಮನಾಥಯ್ಯನಿಂದ ಅನುವಾದಿತವಾದ 'ರಾಜಶೇಖರ ಚರಿತ್ರೆ'ಯು ಇದರಲ್ಲಿ ಕ್ರಮಶಃ ಪ್ರಕಟಗೊಂಡಿತು. ವೆಂಕಟಸುಬ್ಬಾಚಾರ್ ಎಂಬವನ ಸಂಪಾದಕತ್ವದಲ್ಲಿ ಹೊರಟ 'ಕನ್ನಡ ನುಡಿ' ಎಂಬ ಮಾಸಿಕವು ಸಹ ಪಠ್ಯಪುಸ್ತಕದ ವಿವರಣೆಗೆ ಮಹತ್ವಕೊಟ್ಟಿದ್ದಿತು. ಕ್ರಿ.ಶ. ೧೮೯೫, ೧೮೯೬ ಈ ಎರಡು ವರ್ಷ ಮಾತ್ರ ನಡೆದು ಈ ಪತ್ರಿಕೆ ನಿಂತಿತು. ಎಂ. ಶಾಂತರಾಯರಿಂದ ಸ್ಥಾಪಿತವಾದ 'ವಿದ್ಯಾದಾಯಿನಿ'ಯು (೧೮೯೩-) ಇವೆಲ್ಲ ಪತ್ರಿಕೆಗಳಿಗಿಂತ ಮೇಲ್ಮಟ್ಟದಲ್ಲಿ ಇದ್ದಿತಲ್ಲದೆ, ಬಹು ಕಾಲ ಬಾಳಿತು. ಮೈಸೂರಿನ ಶೈಕ್ಷಣಿಕ ಅಭಿವೃದ್ಧಿ ಮತ್ತು ಕನ್ನಡ ನುಡಿಯ ಏಳ್ಗೆ-ಇವುಗಳ ವಿಷಯದಲ್ಲಿ ಅದರ ಪಾತ್ರವು ಹಿರಿದಾದದ್ದು.

ಕ್ರಿ.ಶ. ೧೮೪೩ರಿಂದ ೧೯೦೦ರ ವರೆಗಿನ ಸುಮಾರು ೮೦ ಪತ್ರಿಕೆಗಳ ಸ್ಥೂಲಾವಲೋಕವನ್ನು ಮಾಡಿದೆವು. ಅವುಗಳಲ್ಲಿ ಹಲವು ಪತ್ರಿಕೆಗಳ ಹೆಸರನ್ನು ತೆಗೆದುಕೊಳ್ಳುವುದಷ್ಟೇ ಸಾಧ್ಯವಾಯಿತು. ಇದಕ್ಕೆ ಕಾರಣ ಅವು ದೊರೆತಿಲ್ಲ. ಇತರ ಅನೇಕ ಪತ್ರಿಕೆಗಳ ವಿಷಯದಲ್ಲಿಯಾದರೂ ನಮಗೆ ಅವು ಪೂರ್ಣವಾಗಿ ನೋಡಲು ಸಿಕ್ಕಿರುವುದಿಲ್ಲ. ಸಿಕ್ಕಷ್ಟರ ಮೇಲಿಂದ ಆ ಪತ್ರಿಕೆಗಳ ಧೋರಣೆ ಮತ್ತು ಸ್ಥಿತಿಗತಿಯನ್ನು ಕೊಡುವ ಪ್ರಯತ್ನವನ್ನು ಮಾಡಲಾಗಿದೆ. ಹಾಗೂ ಹೊರಗಿನ ಆಕರಗಳ ಮೂಲಕ ಅವು ಅದೆಷ್ಟು ಕಾಲ ಬಾಳಿದುವೆಂಬುದನ್ನು ಊಹಿಸಲಾಗಿದೆ. ಇದು ಕೂಡ ಕೆಲವೇ ಪತ್ರಿಕೆಗಳಿಗೆ ಅನ್ವಯಿಸುವಂತಾಗಿದೆ. ಕನ್ನಡ ಪತ್ರಿಕೋದ್ಯಮದ ಇತಿಹಾಸ. ಅವರಂತೆ

ಕನ್ನಡದಲ್ಲಿ ವಿಚಾರ ಸಾಹಿತ್ಯದ ವಿಕಾಸ-ಇವೆರಡು ದೃಷ್ಟಿಯಿಂದ ೧೯ನೆಯ ಶತಮಾನದ ಪತ್ರಿಕೆಗಳೆಲ್ಲವೂ ಮಹತ್ವದವಾಗಿವೆ. ನಮ್ಮ ದುರ್ದೈವಕ್ಕೆ ಈ ಪತ್ರಿಕಾ ಸಂಪುಟಗಳ ಹತ್ತರ ಒಂದು ಪಾಲಿನಷ್ಟಾದರೂ ಒಂದೆಡೆ ಇಲ್ಲ. ಸಾಮಗ್ರಿಯ ಅಭಾವದ ಈ ಹಿನ್ನೆಲೆಯಲ್ಲಿ ಪತ್ರಿಕಾ ವಿಷಯದ ಈ ಸಮಾರೋಪದ ಮಾತುಗಳನ್ನು ಗಮನಿಸಬೇಕು:

ಪತ್ರಿಕೋದ್ಯಮದ ನಡೆಯಲ್ಲಿ ನಾವು ಸ್ಪಷ್ಟವಾದ ಎರಡು ಘಟ್ಟಗಳನ್ನು ಕಾಣುತ್ತೇವೆ. ೧೮೪೩ರಿಂದ ೧೮೮೦ರ ವರೆಗಿನದು ಪ್ರಥಮ ಘಟ್ಟ, ಪತ್ರಿಕೋದ್ಯಮವು ಮೆಲ್ಲನೆ ತಲೆಯತ್ತಿದ ಕಾಲವದು. ಸಾಪ್ತಾಹಿಕಗಳೇ ಇರಲಿ, ಮಾಸಪತ್ರಿಕೆಗಳೇ ಆಗಿರಲಿ, ಅವುಗಳ ಉದ್ದೇಶ ಜನತೆಗೆ ಸುದ್ದಿಯನ್ನು ಕೊಡುವದು; ಮತ್ತು ಯಾವುದೊಂದು ವಿಷಯದ ತಿಳಿವಳಿಕೆಯನ್ನು ಮಾಡಿಕೊಡುವುದಾಗಿದ್ದಿತು. ಈ ಅವಧಿಯಲ್ಲಿ ಜನ್ಮ ತಾಳಿದ ೧೮ ಪತ್ರಿಕೆಗಳಲ್ಲಿ ಮೈಸೂರ ವೃತ್ತಾಂತ ಬೋಧಿನೀ, ಕರ್ಣಾಟಕ ಪ್ರಕಾಶಿಕಾ, ಅರುಣೋದಯ, ಸಭಾಪತ್ರ ಮತ್ತು ಮೈಸೂರು ಗೆಜೆಟ್-ಇವು ಹೆಚ್ಚು ಪ್ರಸಾರವಿದ್ದ, ಮತ್ತು ತುಸು ಹೆಚ್ಚು ಕಾಲ ಬಾಳಿದ ಪತ್ರಿಕೆಗಳೆನ್ನಬಹದು.

ದ್ವಿತೀಯ ಘಟ್ಟವು ೧೮೮೦ನೆಯ ದಶಕದ ಕಾಲದಿಂದ ಮೊದಲಾಗುತ್ತದೆ. ಆಗ ಪತ್ರಿಕೆಗಳನ್ನು ಹೊರಡಿಸುವುದು ಒಂದು ಪರಂಪರೆಯಾಗಿ ಮುಂದುವರಿಯಿತು. ೧೯೦೦ರ ವರೆಗೆ ಮಾತ್ರ ನಾವು ಅವುಗಳ ನಿರ್ದೇಶನ ಮಾಡಿದ್ದರೂ ದ್ವಿತೀಯ ಘಟ್ಟವು ೧೯೨೦ರ ವರೆಗೂ ಎಂದರೆ ನಾಡಿನಲ್ಲಿ ಗಾಂಧೀಯುಗ ಆರಂಭವಾಗುವ ವರೆಗೆ ಮುಂದುವರಿದಿದೆ-ಎನ್ನುವುದನ್ನು ಗಮನಿಸಬೇಕು. ಕ್ರಿ.ಶ. ೧೯೦೦ರಲ್ಲಿ ಜನ್ಮ ತಾಳಿದ ಸುಪ್ರಸಿದ್ಧ 'ಸುವಾಸಿನಿ' ಪತ್ರಿಕೆಯಾದರೂ ದ್ವಿತೀಯ ಘಟ್ಟದ್ದೇ ಆಗಿದೆ. ಕ್ರಿ.ಶ. ೧೮೮೦ರ ಸುಮಾರಿಗೆ ನಾಡಿನಲ್ಲಿ ಕೇವಲ ೪-೫ ಪತ್ರಿಕೆಗಳು ಬದುಕಿ ಇದ್ದದ್ದಾದರೆ, ೧೯೦೦ರಲ್ಲಿ ಸುಮಾರು ೨೫ ಪತ್ರಿಕೆಗಳು ವಿವಿಧ ಊರುಗಳಿಂದ ಹೊರಡುತ್ತಿದ್ದುವು. ಹಾಗಿದ್ದರೂ ಅನೇಕ ಪತ್ರಿಕೆಗಳ ಸರಾಸರಿ ಆಯುರ್ಮಾನವು ೩-೪ ವರ್ಷಗಳಿಗೆ ಸೀಮಿತವಾಗಿದ್ದಿತು. ಅದಕ್ಕೆ ಮುಖ್ಯ ಕಾರಣ, ಅವು ಕಡಿಮೆ ಬಂಡವಾಳವನ್ನು ಒಳಗೊಂಡ, ವೈಯಕ್ತಿಕ ಪ್ರಯತ್ನಗಳಾಗಿದ್ದವು. ಅವುಗಳ ಸ್ಥಾಪಕರು, ಸಂಪಾದಕರು ಸಮರ್ಥರೇನೊ ಅಹುದು. ಆದರೆ ಲೇಖಕರ ಪಡೆಯೆಂಬುದು ನಿರ್ಮಾಣವಾಗಿರಲಿಲ್ಲವಾದ್ದರಿಂದ ಸಂಪಾದಕರೇ ಹೆಚ್ಚಿನ ಲೇಖನಗಳನ್ನು ಬರೆಯಬೇಕಾಗುತ್ತಿದ್ದಿತು. ಇನ್ನೊಂದೆಂದರೆ ಪತ್ರಿಕೆಯನ್ನು ವ್ಯಾವಹಾರಿಕ ಪ್ರಯೋಜನದ ದೃಷ್ಟಿಯಿಂದ ಹೊರಡಿಸುವ ಗೋಜಿಗೆ ಹೋಗದೆ, ಆದರ್ಶಪೂರಿತವಾದ ಸದುದ್ದೇಶದಿಂದ ಪತ್ರಿಕೆಯನ್ನು ಹೊರತಂದುದೂ, ಪತ್ರಿಕೆಗಳ ಅಲ್ಪಾವಧಿಗೆ ಕಾರಣವಾಗಿದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಸದಭಿರುಚಿಯ ವಾಚಕರು ಉತ್ತಮ ಪತ್ರಿಕೆಗೆ ಚಂದಾದಾರರಾಗಬೇಕೆಂಬ ಮನೋಭಾವವನ್ನು ಬೆಳೆಸಿಕೊಂಡಿರಲಿಲ್ಲ.

ಅಂದಿನ ಪತ್ರಿಕೋದ್ಯಮದಲ್ಲಿ ಒಡೆದು ತೋರುವ ಇನ್ನೊಂದು ಅಂಶವೆಂದರೆ, ಪತ್ರಿಕೆಗಳ ದ್ವಿಭಾಷಾ ಸ್ವರೂಪ. ಕನ್ನಡ–ಇಂಗ್ಲಿಷ್, ಕನ್ನಡ–ಮರಾಠಿ, ಸಂಸ್ಕೃತ–ಕನ್ನಡ ಹೀಗೆ ಎರಡೆರಡು ಭಾಷೆಗಳ ಲೇಖಗಳನ್ನು ಒಳಗೊಂಡಿರುತ್ತಿದ್ದುವು. ಪ್ರಕಟನಾವಾಧಿಯ ಮಾನದಿಂದ ಅಂದಿನ ಪತ್ರಿಕಾಕರ್ತನು ಪಕ್ಷವನ್ನು (೧೫ ದಿನ) ತುಸುಮಟ್ಟಿಗೆ ನೆಚ್ಚಿಕೊಂಡದ್ದು ಕಂಡುಬರುತ್ತದೆ. ಅಮೇಲೆ ಅದನ್ನು ಮಾಸಿಕವೊ ಸಾಪ್ತಾಹಿಕವೊ ಆಗಿ ಮಾರ್ಪಡಿಸಿದುದೂ ಇದೆ. ದೊಡ್ಡ ಮುದ್ರಣಾಲಯ ಹಾಗೂ ವಾರ್ತಾಸಂಚಯನ ಸಂಸ್ಥೆ–ಇವು ಇಲ್ಲದ್ದರಿಂದ ವಾರ್ತಾಪತ್ರಿಕೆಗಳು ನಾಲ್ಕು ಪುಟಕ್ಕೆ ಸೀಮಿತವಾಗಿರುತ್ತಿದ್ದವು. ಅದರಂತೆ ಲೇಖಕರು ಸ್ವಯಂ ಕವಿತೆ, ಕತೆ ಇತರ ಬರೆಹಗಳನ್ನು ಕಳಿಸುವ ಇಂದಿನ ಕ್ರಮ, ಆ ಕಾಲದಲ್ಲಿ ರೂಢವಾಗಿರದ್ದರಿಂದ ಮಾಸಪತ್ರಿಕೆಗಳು ೧೬–೩೨ ಪುಟಗಳಷ್ಟನ್ನೇ ಒಳಗೊಂಡಿರುತ್ತಿದ್ದುವು.

ಪತ್ರಿಕೋದ್ಯಮದ ಇಂದಿನ ಒಲವು–ನಿಲುವು ಮನರಂಜನೆ ಮತ್ತು ಪ್ರಚಲಿತ ರಾಜಕೀಯ–ಇವೆರಡು ನಿಟ್ಟಿನಲ್ಲಿ ವ್ಯಕ್ತವಾಗಿದೆಯಷ್ಟೆ. ೧೯ನೆಯ ಶತಮಾನದಲ್ಲಿ ಈ ಅಂಶಗಳು ಗೌಣಸ್ಥಾನದಲ್ಲಿದ್ದುವು; ಧಾರ್ಮಿಕ ಮತ್ತು ಶೈಕ್ಷಣಿಕ ಪ್ರಭಾವಗಳೇ ಎದ್ದು ತೋರುತ್ತಿದ್ದವು. ಕ್ರೈಸ್ತಮತ ಪ್ರಸಾರ, ಹಿಂದೂ ಧರ್ಮದ ಪ್ರಾಚೀನ ಕೃತಿಗಳ ಟೀಕಾನುವಾದ–ಇವು ಧಾರ್ಮಿಕ ಸರಣಿಯವೇ ಎನ್ನಬೇಕು. ಇನ್ನು ಪಾಶ್ಚಾತ್ಯ ಸಂಪರ್ಕದಿಂದಾಗಿ ತಿಳಿದು ಬಂದ ಅನೇಕ ವೈಜ್ಞಾನಿಕ, ಔದ್ಯಮಿಕ ಹಾಗೂ ಪ್ರಪಂಚದ ವಿವಿಧ ಪ್ರದೇಶ, ಜನಾಂಗಗಳನ್ನು ಕುರಿತ ಲೇಖನಗಳನ್ನು ಪ್ರಕಟಿಸುವಲ್ಲಿ, ಅವನ್ನು ಜನತೆಗೂ ವಿದ್ಯಾರ್ಥಿವೃಂದಕ್ಕೂ ಪರಿಚಯಿಸುವ ಉದ್ದೇಶವು ಪ್ರಧಾನವಾಗಿದ್ದಿತು.

ರಾಜಕೀಯ ದೃಷ್ಟಿಯಿಂದ ಪ್ರಚಲಿತ ಸುದ್ದಿಗಳನ್ನು ಒದಗಿಸಬೇಕೆನ್ನುವುದೇನೊ ಇದ್ದಿತು. ಆದರೆ ಅದರ ಜೊತೆಗೆ ಪ್ರೌಢಮಟ್ಟದ ರಾಜಕೀಯ ಪ್ರಜ್ಞೆಯನ್ನು ಕೆಲವಾದರೂ ಪತ್ರಿಕೆಗಳಲ್ಲಿ ನಾವು ಕಾಣುತ್ತೇವೆ. ಈ ವಿಚಾರ ಜಾಗೃತಿಯು ಎದ್ದು ತೋರುವ ನವೋದಯ ಲಕ್ಷಣವಾಗಿದ್ದು, ಪತ್ರಿಕೆಗಳೇ ಅದರ ವಾಹಕವಾದುವು. ಜನತೆಯಲ್ಲಿ ಆ ಮಟ್ಟದ ಜಾಗೃತಿ ಕಂಡುಬಾರದಿದ್ದಾಗ, ನಾಡಿನಲ್ಲಿ ಯಾರೊಬ್ಬ ಜನನಾಯಕನೂ ಮುಂದಾಳುವಾಗಿ ಇಲ್ಲದಿದ್ದಾಗ, ಭಾಷ್ಯಂ ಸಹೋದರರು, ಕರ್ಕಿ ವೆಂಕಟರಮಣಶಾಸ್ತ್ರಿ, ಎಂ. ವೆಂಕಟಕೃಷ್ಣಯ್ಯ ಇವರು ನಿರ್ಭೀತವೂ ಉದಾತ್ತವೂ ಆದ ರೀತಿಯಲ್ಲಿ ತಮ್ಮ ವಿಚಾರಧಾರೆಯನ್ನು ಪತ್ರಿಕೆಗಳಲ್ಲಿ ಮೂಡಿಸಿದುದು ಶ್ಲಾಘನೀಯ ಘಟನೆಯಾಗಿದೆ. ಇವರ ಜೊತೆಗೆ ಪತ್ರಿಕೆಯ ಶೈಕ್ಷಣಿಕ ಮತ್ತು ಸಾಹಿತ್ಯಿಕ ಮಹತ್ವವನ್ನರಿತು ಪರಿಶ್ರಮಪಟ್ಟ ಹರ್ಮನ್ ಮೊಗ್ಲಿಂಗ್, ಎಂ.ಎ. ರಾಮಾನುಜಯ್ಯಂಗಾರ್ ಹಾಗೂ ವೆಂಕಟ ರಂಗೋ ಕಟ್ಟಿ–ಈ ಮಹನೀಯರನ್ನೂ ಗೌರವದಿಂದ ನೆನೆಯತಕ್ಕುದು.

# ಸಂದರ್ಭ ಸೂಚಿ


೧. ನವಭಾರತ (ಮರಾಠೀ), ಡಿಸೆಂಬರ್ ೧೯೬೯ : ಅ.ಕಾ. ಪ್ರಿಯೋಳಕರ–ಪಹಿಲೆ ಮರಾಠೀ ವರ್ತಮಾನಪತ್ರ, ಪು.೨೩

೨. ಭಾರತೀಯ ಪತ್ರಿಕೋದ್ಯಮ, ಪು.೩೮೮, ೩೮೯

೩. ಮಂಗಳೂರು ಸಮಾಚಾರ. ಶ್ರೀನಿವಾಸ ಹಾವನೂರ, ಕಸ್ತೂರಿ, ಮೇ ೧೯೬೫

೪. Gazetteer of the Bombay Presidency. Vol. 22 : Dharwar, ಪು.೬೨೦

೫. Kannada Studies No.2 (1965) : Nadig Krishnamurthy, ಪು.೨೩

೬ Gazetteer of the Bombay Presidency. Vol. 22 : Dharwar, ಪು.೬೨೦

೭. ಸಂಯುಕ್ತ ಕರ್ನಾಟಕ (ಹುಬ್ಬಳ್ಳಿ) ದಿ. ೧೯–೮–೧೯೩೭ : ೮೮ ವರ್ಷಗಳ ಹಿಂದಿನ 'ಕನ್ನಡ ಪತ್ರ.'

೮. ಜ್ಞಾಪಕ ಚಿತ್ರಶಾಲೆ–೧, ಪು.೧೨೪

೯. ಜೀವನ ಶಿಕ್ಷಣ ಸಂ. ೯೩ (೧೯೫೭/೫೮) : ಶಿಂತ್ರಿ ಬಸಪ್ಪ, ಪು. ೨೩

೧೦. Indian Press, ಪು. 101 (ಜಿ.ಎಸ್. ದೀಕ್ಷಿತರ ಲೇಖನದಿಂದ ಉದ್ಧೃತ).

೧೧. Kannada Studies No.2 (1965) : Nadig Krishnamurthy, ಪು.೧೮

## ಪ್ರಕರಣ : 8
# ಕಥಾ ಸಾಹಿತ್ಯ

### 81 ಅನುವಾದಿತ ಕಥೆಗಳು

ಕಾಲ, ದೇಶ, ವಯೋಮಾನ ಮುಂತಾದ ಭೇದಭಾವವಿಲ್ಲದೆ ಸಮಸ್ತರಿಗೂ ಆಪ್ಯಾಯಮಾನವಾಗಿರುವ ಕಥಾ ಸಾಹಿತ್ಯವು ೧೯ನೇ ಶತಮಾನದಲ್ಲಿ ಒಡಮೂಡಿದ ಬಗೆಯನ್ನು ಈಗ ಪರಿಶೀಲಿಸೋಣ. ಈ ಕ್ಷೇತ್ರದಲ್ಲಿ ಕೂಡ ಅನುವಾದ, ರೂಪಾಂತರಗಳೇ ಹೆಚ್ಚು.

ಮೊತ್ತಮೊದಲಿನ ಕಥಾಸಂಗ್ರಹವೆಂದರೆ ಇಸೋಪನ ನೀತಿಕತೆಗಳದ್ದು. ಶಾಲಾ ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ಎಲಿಯಟ್ ಅದನ್ನು ಪ್ರಕಟಿಸಿದನು (೧೮೪೦). ಮುಂದೆ ಮಂಗಳೂರು, ಬೆಂಗಳೂರು, ಧಾರವಾಡ ಈ ಮೂರು ಕಡೆಗಳಲ್ಲಿ ಇಸೋಪನ ಬೇರೆ ಬೇರೆ ಅನುವಾದ, ಆವೃತ್ತಿಗಳು ಹೊರಬಂದುವು.

ಸಂಸ್ಕೃತ ಭಾಷೆಯಲ್ಲಿರುವ ಕಥನ ಸಾಹಿತ್ಯದ ವೈಪುಲ್ಯವು ತಿಳಿದ ಮಾತೇ ಅಗಿದೆ. ರಾಮಾಯಣ, ಮಹಾಭಾರತದ ಹಾಗೂ ಹಲವು ಪುರಾಣಗಳ ಗದ್ಯಾನುವಾದದ ಜೊತೆಗೆ ಅವುಗಳಲ್ಲಿ ಬಂದ ಉಪಾಖ್ಯಾನಗಳು, ಭಕ್ತರ ಚರಿತ್ರೆಗಳು ಮತ್ತು ವೀರರ ಸಾಹಸಗಳು ಪ್ರತ್ಯೇಕವಾಗಿ ಕಥನ ರೂಪವನ್ನು ತಾಳಿದವು. ಅಂಥ ದೃಷ್ಟಿಯು ತಲೆದೋರಿದುದು ಮುಂದಿನ ಕಥಾ ಸಾಹಿತ್ಯ ನಿರ್ಮಿತಿಗೆ ನಾಂದಿಯಾಯಿತು. ಇನ್ನು ಪಂಚತಂತ್ರದಂತಹ ನೀತಿಪ್ರಧಾನ ಕಥಾಗುಚ್ಛವನ್ನು ಸುಲಭವಾದ ಗದ್ಯದಲ್ಲಿ ಮಕ್ಕಳಿಗಾಗಿ ಅನುವಾದಿಸುವ ಪ್ರಯತ್ನವು ೧೮೬೦ರ ದಶಕದಿಂದ ಮೊದಲಾಯಿತು. ಬಾಸೆಲ್ ಮಿಶನ್‌ದವರು ತಮ್ಮ ಆವೃತ್ತಿಯಲ್ಲಿ ಚಿತ್ರಗಳನ್ನು ಸೇರಿಸಿ ಅದರ ಉಪಯುಕ್ತತೆಯನ್ನು ಹೆಚ್ಚಿಸಿದರು.

ಇತ್ತ ದೇಶೀಯ ಲೇಖಕರು ರಂಜನಾಪ್ರಧಾನವಾದಂಥ ಬೇತಾಳ ಪಂಚವಿಂಶತಿ, ಶುಕಬಾಹತ್ತರಿ ಮುಂತಾದ ಕಥೆಗಳ ಪ್ರಕಟನೆಗೆ ಮುಂದಾದರು. ವ್ಯಾವಹಾರಿಕ ದೃಷ್ಟಿಯುಳ್ಳ ಪ್ರಕಾಶಕರಿಗಾಗಿ ಇಂಥ ಕೃತಿಗಳ ಸಾವಿರಾರು ಪ್ರತಿಗಳು ಮುದ್ರಿತವಾಗಿ ಪ್ರಸಾರಗೊಂಡವು. ಇದು ಮೌಲಿಕ ಸಾಹಿತ್ಯದ ಬೆಳಸೇನೂ ಅಲ್ಲ. ವಾಚನಾಭಿರುಚಿಯನ್ನು ಹೆಚ್ಚಿಸುವಲ್ಲಿ ಸಹಾಯಕವಾದವೆಂಬ ಮಟ್ಟಿಗೆ ಇವುಗಳ ಮಹತ್ವವಿದೆ.

ಈ ಬಗೆಯ ಅನುವಾದ, ಪ್ರಕಟನೆಗಳಿಂದ ವ್ಯಾವಹಾರಿಕ ಪ್ರಯೋಜನವಿದೆಯೆಂದು ಮನಗಂಡ ಕೆಲವರು ತೆಲುಗು, ತಮಿಳು ಭಾಷೆಗಳಿಂದಲೂ ಅನುವಾದಿಸತೊಡಗಿದರು. ಧೂರ್ಜಟಿ, ಲಕ್ಷ್ಮೀಪತಿ (ಹಂಸವಿಂಶತಿ), ಶೇಷಾಚಲ ನಾಯುಡು (ಹನ್ನೆರಡು ಜನ ರಾಜಪುತ್ರರ ಕತೆ) ಮುಂತಾದ ತೆಲುಗು ಲೇಖಕರ ಕೃತಿಗಳನ್ನು ಅನುವಾದಿಸುವಲ್ಲಿ ಯಾವ ಲೇಖಕರಾದರೇನಂತೆ, ಕಥೆ ರಂಜಕವಾಗಿದ್ದರೆ ತೀರಿತು–ಎಂಬ ಮನೋಭಾವ ವಿದ್ದಿತು. ತಮಿಳಿನಿಂದ ಬಂದ ಇಂಥ ಕಥಾಗುಚ್ಛಗಳಲ್ಲಿ ತಾಂಡವರಾಯ ಮೊದಲಿಯಾರನ 'ಕಥಾಮಂಜರಿ'ಯನ್ನು ಹೆಸರಿಸಬೇಕು (ಕನ್ನಡ ರೂಪ, ೧೮೬೨). ಇದನ್ನು ಗ್ಯಾರೆಟ್ ತಿದ್ದಿ, ಬೆಂಗಳೂರಿನ ಸರಕಾರೀ ಮುದ್ರಣಾಲಯದಿಂದ ಮತ್ತೊಮ್ಮೆ ಪ್ರಕಟಿಸಿದನು (೧೮೬೬). ೧೭ನೆಯ ಶತಮಾನದ ಬೆಸ್ಕಿಯು ಬರೆದ ಪರಮಾರ್ಥ ಗುರುವಿನ ಕಥೆಯ ಎರಡು ಆವೃತ್ತಿಗಳು ಕಳೆದ ಶತಮಾನದಲ್ಲಿ ಪ್ರಕಟವಾದುವು. ಜೆ. ಬ್ಯಾರಿಲ್ ಕನ್ನಡದ ಜೊತೆಗೆ ಇಂಗ್ಲಿಷ್, ಲ್ಯಾಟಿನ್ ಆನುವಾದಗಳನ್ನು ತನ್ನೀ ಪುಸ್ತಕದಲ್ಲಿ ಸೇರಿಸಿದನು (೧೮೭೭). ಮೂರ್ಖ ಗುರು, ಕಡುಮೂರ್ಖ ಶಿಷ್ಯರಿಗೆ ಸಂಬಂಧಿಸಿದ ಈ ಪುಸ್ತಕವನ್ನು ಆರ್. ನರಸಿಂಹಾಚಾರ್ಯರೂ ಕನ್ನಡದಲ್ಲಿ ತಂದರಷ್ಟೆ (ನಗೆಗಡಲು). ಹಾಗೆ ಮಾಡುವಾಗ ಕೆಲವು ಹೊಸ ಅಂಶಗಳನ್ನು ಸೇರಿಸಿದ್ದಾರೆ. ಅಲ್ಲಲ್ಲಿ ಮಾರ್ಪಾಟು ಮಾಡಿಕೊಂಡಿದ್ದಾರೆ. ಆ ಗುರುವಿನ ಹೆಸರು 'ಗಾಂಪರೊಡೆಯ'ನೆಂಬ ಅಚ್ಚಕನ್ನಡ ರೂಪವನ್ನು ತಾಳಿದೆ. ಅಲ್ಲಲ್ಲಿ ಕಂದಪದ್ಯಗಳು, ಸಂಸ್ಕೃತ ಶ್ಲೋಕಗಳು ಮತ್ತು ಗಾದೆಮಾತುಗಳು ಸೇರಿಕೊಂಡಿವೆ. ಮಹತ್ವದ್ದೆಂದರೆ ಒಂದೆರಡು ಹೊಸ ಕತೆಗಳನ್ನು ಸೃಷ್ಟಿಸಿದುದು. ಕೃತಿಯ ಆರಂಭದಲ್ಲಿ ಇರುವ 'ಮೂರ್ಖರು ಯಾರು?' ಎಂಬ ಕಥಾಪ್ರಸಂಗವು ಮೂಲದಲ್ಲಿ ಇಲ್ಲ. ಇನ್ನೆರಡು ಹೊಸ ಕತೆಗಳಲ್ಲಿ, 'ಹಸುವನ್ನು ಕೊಂಡ ಕತೆ'ಯು ಅಚ್ಚಗನ್ನಡ ಶಬ್ದವಾದ 'ಕರೆ' (ಹಾಲು ಹಿಂಡುವುದು, ಕರೆಯುವುದು) ಎಂಬುದನ್ನು ಶಿಷ್ಯರು ಅಪಾರ್ಥ ಮಾಡಿಕೊಂಡಿದ್ದನ್ನು ವಿವರಿಸುತ್ತದೆ. ಪರಿಶುದ್ಧ ಹಾಸ್ಯದ ಈ ಕೃತಿಯನ್ನು ಮೆಚ್ಚಿದವರ ಸಂಖ್ಯೆ ಅಪಾರವಾದುದು. ಅಲ್ಲದೆ ೨೦ನೆಯ ಶತಮಾನದಲ್ಲಿ ಈ ಬಗೆಯ ಕಥನವನ್ನು ಕೆಲವರು ಮುಂದುವರಿಸಿದುದೂ ಇದೆ (ಉದಾಹರಣೆಗೆ ನಾ. ಕಸ್ತೂರಿ, ದಾಶರಥಿ ದೀಕ್ಷಿತ ಮತ್ತು ರಾ.ಶಿ.)

ಜನಪ್ರಿಯವಾಗಿದ್ದ ಅರಬ್ಬೀ ಹಾಗೂ ಪರ್ಶಿಯನ್ ಕಥಾಪರಂಪರೆಗೂ ಕನ್ನಡವಲ್ಲಿ ಇಂಬು ದೊರೆಯಿತು. ವೆಂಕಟ ರಂಗೋ ಕಟ್ಟಿಯವರ ಲೇಖನ ಕಾರ್ಯವು ಅರೇಬಿಯನ್ ನೈಟ್ಸದ ಅನುವಾದದಿಂದಲೇ ಮೊದಲಾಯಿತು (೧೮೬೩, ೧೮೬೫). ಆದರೆ ಅದು ಸಂಗ್ರಹ ರೂಪದಲ್ಲಿದೆ. ಯು. ದಕ್ಷಿಣಾಮೂರ್ತಿ ಶಾಸ್ತ್ರಿಯು ಅನುವಾದಿಸಿದ 'ಅಲ್ಲಾದೀನನ ದೀಪಸ್ತಂಭ'ವು ಮಕ್ಕಳ ಮನಸ್ಸನ್ನು ರಂಜಿಸಿತು. ನಾಲ್ವರು ಫಕೀರರ ಸಾಹಸಗಳನ್ನು ವರ್ಣಿಸುವ 'ಚಾರ್ ದರ್ವಿಸ್' ಪುಸ್ತಕವು ಕನ್ನಡದಲ್ಲಿ ಬಂದುದನ್ನು ಗಮನಿಸಿದಾಗ,

ಅಂದಿನ ಕನ್ನಡ ಲೇಖಕರು ಬಳಕೆಯಲ್ಲಿಲ್ಲದ ಆಕರಗಳಿಂದಲೂ ಕಥೆಗಳನ್ನು ಆರಸಿಕೊಂಡು ಹೋಗುತ್ತಿದ್ದರೆನ್ನಬೇಕು. ಸುಪ್ರಸಿದ್ಧ 'ಹಾತಿಮತಾಯಿ ಚರಿತ್ರೆ'ಯನ್ನು 'ಕರ್ನಾಟಕ ವೃತ್ತ' ಎಂಬ ಪತ್ರಿಕೆಯಲ್ಲಿ ಕ್ರಮಶಃ ಪ್ರಕಟಿಸಲಾಯಿತು. ಆ ಕತೆಯಿರುವ ಸಂಚಿಕೆಗಳಿಗೆ ಬೇಡಿಕೆ ಬಂದುದನ್ನು ಗಮನಿಸಿ, ಪುಸ್ತಕರೂಪದಲ್ಲಿ ತರಲಾಯಿತು (೧೮೯೭: ೧೯೦೪). ಹನುಮಂತ ಕೇಶವ ಹುಯಿಲಗೋಳನು ಅದರ ಲೇಖಕನೆಂದು ತಿಳಿಯುತ್ತದೆ. ಅವನು ಅಕಬರ–ಬೀರಬಲ್ಲರ ಕತೆಗಳನ್ನೂ ಹೇಳಿದ್ದಾನೆ.

ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಸಂಸ್ಕೃತ ಪುರಾಣ, ಕಾವ್ಯ ಮತ್ತು ನಾಟಕಗಳನ್ನು ಕಥನ ರೂಪಕ್ಕೆ ತಿರುಗಿಸಿ ಬರೆಯುವ ಪ್ರವೃತ್ತಿಯು ವಿಶೇಷವಾಗಿದ್ದಿತೆಂಬುದನ್ನು ಈ ಪ್ರಸಂಗದಲ್ಲಿ ನೆನೆಯಬೇಕು. ಕೃಷ್ಣರಾಜರ ಹೆಸರಿನಲ್ಲಿರುವ ಕಾಳಿದಾಸ, ಭವಭೂತಿ– ಇವರ ನಾಟಕಗಳ ಗದ್ಯಾನುವಾದ ಮಾಡುವಾಗ ಕೆಲವು ವರ್ಣನೆಗಳನ್ನು ಹೆಚ್ಚಿಗೆ ಸೇರಿಸಿದ್ದನ್ನು ಗಮನಿಸಿದ್ದೇವೆ. ಇಂಥ ರೂಪಾಂತರಗಳಲ್ಲಿ ಜಾಣ್ಮೆಯೆಂಬುದಿಲ್ಲ. ಇನ್ನು ಕೆಲವು ನಾಟಕ ಕಥನಗಳಲ್ಲಿ 'ನೇಪಥ್ಯೇ', 'ಆಕಾಶೇ' ಎಂಬ ರಂಗ ಪ್ರಯೋಗದ ಸೂಚನೆಗಳನ್ನು ಕೂಡ ವಾಕ್ಯರೂಪದಲ್ಲಿ ತಿರುಗಿಸಿ, ಉಳಿದುದನ್ನು ಸಹ ಇದ್ದಕ್ಕಿದ್ದಂತೆ ಅನುವಾದಿಸಲಾಗಿದೆ. ಮುಮ್ಮಡಿಯವರ ಕಾಲದಲ್ಲಿ ರಚಿತವಾದ 'ಉತ್ತರರಾಮಚರಿತ್ರ ಕಥೆ' ಯಲ್ಲಿ ಬಂದ ತೃತೀಯಾಂಕದ ಕಥನವನ್ನು ಗಮನಿಸುವುದು :

"ಈ ರೀತಿ, ತಮಸಾ ಮರುಳುಗಳೆಂಬ ನದಿಗಳೀರ್ವರೂ ತಮ್ಮ ಪ್ರಶ್ನೋತ್ತರ ವಚನಗಳಿಂದ ಪೂರ್ವೋತ್ತರ ಕಥಾಸಂಗತಿಗಳಂ ಶ್ರೀರಾಮಪುರಪ್ರವೇಶವಂ ಸೀತಾಪ್ರವೇಶಂ ಸಹ ಸೂಚನೆಗೈದು ರಂಗಸ್ಥಾನದಿಂ ತಿರಿಗಿ ಹೊಱಟು ಪೋಗಲು ಆ ಬಳಿಕ ನೇಪಥ್ಯವೆಂಬ ಸ್ಥಾನದಲ್ಲಿ ಒಬ್ಬಳು 'ಎಲೆ ಮಗುವೆ! ಎಲೆ ಮಗುವೆ!' ಎಂದು ಘೋಷವಂ ಮಾಡಲು, ಆ ಬಳಿಕ ಸೂರ್ಯನ ಪೂಜಾನಿಮಿತ್ತವಾಗಿ ಪುಷ್ಪಗಳಂ ಕೊಯ್ಯುವುದರಲ್ಲಿ ಉದ್ಯುಕ್ತವಾದ ಹಸ್ತವುಳ್ಳ ಸೀತೆಯು ಶೋಕದೊಡನೆಯೂ ಕುತೂಹಲದೊಡನೆಯೂ ಕೂಡಿದವಳಾಗಿ ಆ ನೇಪಥ್ಯದಲ್ಲಿ ಪುಟ್ಟಿದ ಶಬ್ದಮಂ ಕೇಳುತ, ರಂಗಸ್ಥಾನವಂ ಪ್ರವೇಶವಂಗೈದು 'ಎಲೌ ಇದೇನಾಶ್ಚರ್ಯವು! ಪ್ರಿಯ ಸಖಿಯಾದ ವಾಸಂತಿಯು ನುಡಿಯುವಳೆಂದು ನಾನು ತಿಳಿಯುತ್ತೇನೆ' ಎಂದು ಪೇಳಲು : ಆಗ ಪುನಃ ನೇಪಥ್ಯದಲ್ಲಿ ಒಬ್ಬಳು ಇಂತೆಂದಳು . . . . . . ."

ಮುಮ್ಮಡಿ ಕೃಷ್ಣರಾಜರ ಅನಂತರದ ಕಾಲಾವಧಿಯಲ್ಲಿಯೂ ಅನೇಕ ನಾಟಕ ಕಥೆಗಳು ರಚಿತವಾದುವು. ಸಿದ್ಧಾಂತಿ ಶಿವಶಂಕರ ಶಾಸ್ತ್ರಿಯು ಜಯದೇವನ ಪ್ರಸನ್ನರಾಘವ ನಾಟಕವನ್ನು ಕಥನರೂಪಕ್ಕೆ ತಿರುಗಿಸಿದನು (ಶ್ರೀ ರಾಮ ಕಥಾಸಂಗ್ರಹ ವಚನವು, ೧೮೮೫). ಅದರಂತೆ ಗರಣಿ ಕೃಷ್ಣಾಚಾರ್ಯನು ಹರ್ಷ, ಶೂದ್ರಕರ ಕೃತಿಗಳನ್ನು ಕನ್ನಡಕ್ಕೆ ಕಥನ ರೂಪದಲ್ಲಿಯೇ ತಂದುದು. ಇತ್ತ ಕರ್ಕಿ ವೆಂಕಟರಮಣಶಾಸ್ತ್ರಿ ಹಾಗೂ

ಶ್ರೀನಿವಾಸಪುರಂ ಶ್ರೀನಿವಾಸರಾಯ - ಇವರು ಸಂಸ್ಕೃತ ನಾಟಕಗಳನ್ನು ಇಡಿಯಾಗಿ ತರಹೋಗದೇ ಸಂಗ್ರಹ ರೂಪದಲ್ಲಿ ಹಲವಾರು ನಾಟಕ ಕಥೆಗಳ ಸಂಗ್ರಹವನ್ನು ಕೊಟ್ಟಿದ್ದಾರೆ (ಕರ್ಕಿ; ಪ್ರಾಚೀನ ನಾಟ್ಯ ಕಥಾರ್ಣವ - ೧೮೮೫; ಶ್ರೀನಿವಾಸರಾಯ ; ನಾಟಕ ಕಥಾರತ್ನಮಾಲೆ-೧೮೯೦).

ಇಂಗ್ಲಿಷ್ ನಾಟಕಗಳ ಅಭ್ಯಾಸದ ಮೂಲಕ ಅವುಗಳ ಕಥನಗಳೂ ಕನ್ನಡದಲ್ಲಿ ಕಾಣಿಸಿಕೊಂಡವು. ಲ್ಯಾಂಬ್‌ನ Tales from Shakespeare-ಇದರ ನೆರವನ್ನು ಪಡೆದು, ಡೆಪ್ಯುಟಿ ಚೆನ್ನಬಸಪ್ಪ (ನಗದವರನ್ನು ನಗಿಸುವ ಕಥೆ, ಮ್ಯಾಕ್‌ಬೆತ್ ಇ.), ಭೀಮರಾವ ಸಿಂಗಿತ್ ಮೊದಲಾದವರು ಶೇಕ್ಸ್‌ಪಿಯರನ ನಾಟಕ ಕಥೆಗಳನ್ನು ಕೊಟ್ಟಿದ್ದಾರೆ. ಎಂ.ಎಸ್. ಪುಟ್ಟಣ್ಣ ಮತ್ತು ಎಂ.ಬಿ. ಶ್ರೀನಿವಾಸಯ್ಯಂಗಾರರು ಸಿಂಬೆಲಿನ್ ನಾಟಕವನ್ನು ವಿಸ್ತಾರವಾಗಿ ಕಥನ ರೂಪಕ್ಕೆ ಇಳಿಸಿದ್ದಾರೆ (ಜಯಸಿಂಹರಾಜ ಚರಿತೆ). ಭಂಡಿವಾಡನು 'ರೋಮಿಯೊ ಎಂಡ್ ಜ್ಯೂಲಿಯಟ್' ಕೃತಿಯನ್ನು 'ಕಮಲಾಕ್ಷ-ಪದ್ಮಗಂಧಿ' ಎಂಬ ಹೆಸರಿನಲ್ಲಿ ರೂಪಾಂತರಿಸಿದ್ದು, ಅದರ ಕಥನ ಕ್ರಮವು ಒಂದು ಕಾದಂಬರಿಯಂತಿದೆ. ಹೆನ್ರಿ ಟೇಲರನ Sillican Summer ನಾಟಕವನ್ನು ಶ್ರೀಕಂಠೇಶಗೌಡನು 'ಕನ್ಯಾವಿತಂತು' ಎಂಬ ಹೆಸರಿನಿಂದ ಗದ್ಯರೂಪಕ್ಕೆ ತಿರುಗಿಸಿದ್ದಾರೆ. ಅದು English Classics for Canaerese Readers-ಮಾಲಿಕೆಯಲ್ಲಿ ಪ್ರಕಟವಾಗಿದ್ದರೂ Classic ಕೃತಿ ಏನಲ್ಲ. ಭಾರತೀಯ ಸನ್ನಿವೇಶಕ್ಕೆ ಅದನ್ನು ಹೊಂದಿಸಿಕೊಂಡಿದ್ದರೂ, ಹಡಗಿನ ಮೇಲಿನ ನರ್ತನ ಮೇಳ, ಪಾಟಲೀಪುರದ ಸ್ತ್ರೀ ಸನ್ಯಾಸ ಮಠ, ಸ್ತ್ರೀಯರ ಕೇಶಕರ್ತನ ಮುಂತಾದ ವರ್ಣನೆಗಳು ಕೃತಕವೆನಿಸುತ್ತವೆ. 'ನಮ್ಮ ವಿದ್ಯುತ್ ಹಡಗಿನಲ್ಲಿ ಪುರೋಹಿತರು', 'ಗವಿಗಳ ಸಹಾಯವನ್ನು ಅಪೇಕ್ಷಿಸುವ ನಮ್ಮ ಕೃತ್ಯದ ಮಹನೀಯರ ಮಾರ್ಗವು ನೇರವಾಗಿರುವುದಿಲ್ಲ' ಎಂಬಂತಹ ವಾಕ್ಯಸರಣಿಗಳೂ ಪುಸ್ತಕದಲ್ಲಿ ಸಾಕಷ್ಟಿವೆ.

## 82 ಕಥಾ ಸಂಗ್ರಹಗಳು

ಇನ್ನೀಗ ಕೆಲವು ಕಥಾಸಂಗ್ರಹಗಳನ್ನು ಪರಿಶೀಲಿಸೋಣ. ಲಘುವಾದ ಮನರಂಜನೆಯನ್ನು ಒದಗಿಸುವುದೇ ಇವುಗಳ ಮುಖ್ಯ ಹೇತುವಾಗಿದ್ದಿತು. ಶೃಂಗಾರ, ಅದರ ಜೊತೆಗೆ ನೀತಿಬೋಧೆ ಇಂಥ ಕಥೆಗಳಲ್ಲಿ ವ್ಯಕ್ತವಾಗುವುದು ಸಹಜವೇ. ಮುದ್ರಣ ಸೌಲಭ್ಯ ಹಾಗೂ ಮೆಲ್ಲಗೆ ಹಬ್ಬುತ್ತಿರುವ ಸಾಕ್ಷರತೆ- ಇವುಗಳ ಪ್ರಯೋಜನಗಳನ್ನು ಪಡೆದುಕೊಂಡು, ಜನಜನಿತವಾಗಿರುವ ಕಥೆಗಳನ್ನೂ, ಉಕ್ತಿಚಾತುರ್ಯಗಳನ್ನೂ ಪುಸ್ತಕ ರೂಪದಲ್ಲಿ ಹೊರತರುವ ಪ್ರಯತ್ನವಿದು. ನಿರೂಪಣೆಯಲ್ಲಿ ಹೊಸ ವಿಧಾನವೆಂಬ ಮಾತಂತೂ ದೂರವೇ; ಭಾಷಾ ಶುದ್ಧತೆ ಎಳ್ಳಷ್ಟೂ ಇರದ ಕಥಾ ಸಂಗ್ರಹಗಳು ಹತ್ತಾರು

ದೊರಕುತ್ತವೆ. (ಉದಾ : ಬಸಲಿಂಗಪ್ಪ ಅಮರಣ್ಣವರ–ಇವನ 'ಚಾತುರ್ಯ ಮತ್ತು ನೀತಿವರ್ಧಕ ಉಪಯುಕ್ತ ಕಥೆಗಳು' ೧೮೯೦).

ಹತ್ತೊಂಬತ್ತನೆಯ ಶತಮಾನದಲ್ಲಿ ಮುದ್ರಣಗೊಂಡು ಹೊರಬಂದ ಮೊತ್ತಮೊದಲಿನ ಕಥಾಸಂಗ್ರಹವೆಂದರೆ ಮಾನವಿ ವೀರಪ್ಪನಿಂದ ವಿರಚಿತವಾದ 'ಕಥಾಸಾಗರ'. ಅದರ 'ಪ್ರಸ್ತಾವನಾ'ದ ಕೆಲ ಮಾತುಗಳಿವು:

"ಈ ಪುಸ್ತಕವನ್ನು ಭೂಪುರಾಂತರ್ಗತವಾದ ಮಾನವಿ ವೀರಪ್ಪನು ಎಂದರೆ ನಾನು ಸರಕಾರದ ಕಾರ್ಯದ ಮೇಲೆ ಧಾರವಾಡ ಗ್ರಾಮದಲ್ಲಿದ್ದು ವೃಥಾ ವ್ಯಾಳೆ ಗಳಿಯಬಾರದೆಂದು ಸ್ವಕಲ್ಪನೆಯಿಂದಲೂ ಕೇಳುವಿಕೆಯು ಬಲದಿಂದಲೂ ಚಮತ್ಕಾರಭಾವವುಳ್ಳ ಕಥೆಗಳು, ಶ್ಲೋಕಾರ್ಥಗಳು, ಮಾತುಗಳು ಮೊದಲಾಗಿ ಕಲ್ಪಿಸಿದ, ಶಕೆ (೧೭೭೩) ವಿರೋಧಕೃತ* ನಾಮ ಸಂವತ್ಸರದ ಆಶ್ವೀಜ ಶುದ್ಧ ದ್ವಾದಶಿ, ಕ್ರಿಸ್ತ ಸನ್ (೧೮೫೧) ನೆಯ ಇಸವಿ ತಾರೀಖು (೬) ಅಗಟೋಬರ ಇಂದುವಾರ ಪ್ರಾರಂಭಿಸಿದೆನು.

"ಮಳೆಯು ಸುರಿದಾಕ್ಷಣವೆ ಹಳ್ಳ ಹೊಳೆಗಳು ಮೊದಲಾಗಿ ಭೂಮಿಯ ಮೇಲೆ ಬಿದ್ದಿರ್ದ ಮಲಿನ ಕಸವಂನು ತಮ್ಮ ತಲೆಯ ಮೇಲೆ ಹೊತ್ತುಕೊಂಡು ಸಮುದ್ರಕ್ಕೆ ತಂದು ಹಾಕುವವು. ಆ ಸಮುದ್ರ ರಾಜನು ಅಂಥ ಮಲಿನವಂನು ಗರ್ಭೀಕರಿಸಿಕೊಂಡು ಕೋಪಿಸದೆ ಮತ್ತು ಅಂತಃಕರಣದಿಂದ ಲೋಕ ರಕ್ಷಣಾರ್ಥ ವೃದ್ಧಿಯಗೋಸ್ಕರ ಮೇಘಪಕ್ಷಿಗೆ ತನ್ನ ಉದಕವನ್ನು ಹ್ಯಾಗೆ ಕೊಡುವನೋ ಹಾಗೆಯೇ ನನ್ನ ತೊದಲು ಮಾತುಗಳನ್ನು ಕೆಟ್ಟ ಕಸದಂತೆ ತಿಳಿದು ಗರ್ಭೀಕರಿಸಿಕೊಂಡು ಈ ಗ್ರಂಥವನ್ನು ಶ್ಲಾಘನೆ ಮಾಡಬೇಕೆಂದು ಬೇಡಿಕೊಳ್ಳುತ್ತೇನೆ."

ಕಥಾಸಾಗರ ಎಂಬವನು, ಎಷ್ಟು ಕತೆ ಕೇಳಿದರೂ ತೃಪ್ತಿಪಡದಿದ್ದ ವಜ್ರಚೂಡಾಮಣಿ ಎಂಬ ರಾಜನಿಗೆ ಕಥೆ ಹೇಳಿ ಸಮಾಧಾನಪಡಿಸಿದ ಚೌಕಟ್ಟಿನಲ್ಲಿ ೫೩ ಕಥೆಗಳನ್ನು ಇಲ್ಲಿ ಕೊಡಲಾಗಿದೆ. ಜನತೆಯಲ್ಲಿ ಪ್ರಚಾರದಲ್ಲಿದ್ದವುಗಳಲ್ಲದೆ ಸ್ವಂತದ ಕಲ್ಪನೆಗಳನ್ನು ಸಹ ಸೇರಿಸಿದ್ದಾನೆಂಬ ಅಂಶವು ಮಹತ್ವದ್ದು. ಹೆಚ್ಚಿನ ಕತೆಗಳು ಜಾರತನಕ್ಕೆ ಸಂಬಂಧಿಸಿದವುಗಳಾಗಿವೆ, ಹಾಗೆಂದು ಬರವಣಿಗೆಯಲ್ಲಿ ಅತಿಯಾಗಿ ಶೃಂಗಾರವಿಲ್ಲ. "ಬಂದಿದ್ದರೆ ಬ್ಯಾಡಾ, ಬಾರದೇ ಇದ್ದರೂ ಬ್ಯಾಡಾ, ಬರುವುದಿದ್ದರೆ ಬಾ" (ಮೀಸೆ) ಎಂಬಂತಹ ಉಕ್ತಿ ಚಾತುರ್ಯದ ಕಥೆಗಳೂ ಇವೆ (೧೭ನೆಯದು). 'ಅಲ್ಪ ಕೆಲಸಕ್ಕೆ ರಾಜಸ್ಥಾನಕ್ಕೆ ನ್ಯಾಯವ ಹೋಗುವುದು ಅತಿ ಮೂರ್ಖತನವಾಗಿದೆ.' 'ಈ ಕಲಿಯುಗದಲ್ಲಿ

* ಕ್ರಿ.ಶ. ೧೮೫೧ರಲ್ಲಿ ಬರೆಯಲಾರಂಭಿಸಿದ ಈ ಕೃತಿಯನ್ನು Dharwad Publications ಎಂಬ ಸದರಿನಲ್ಲಿ ಕಿಟೆಲ್ ತನ್ನ ಕನ್ನಡ ಸಾಹಿತ್ಯ ಪ್ರಬಂಧದೊಳಗೆ ಉಲ್ಲೇಖಿಸಿರುವನಾದ್ದರಿಂದ, ಅದು ೧೮೭೪ಕ್ಕೆ ಮುಂಚೆ ಮುದ್ರಿತವಾಗಿದ್ದಿತೆಂದು ತಿಳಿಯಬೇಕಾಗುತ್ತದೆ. ಅದರ ಜನಪ್ರಿಯತೆಯನ್ನು ಮನಗಂಡು ಬಳ್ಳಾರಿಯ ಓರ್ವ ಶೆಟ್ಟರು ೧೮೯೮ರಲ್ಲಿ ಅದನ್ನು ಪುನರ್ಮುದ್ರಿಸಿದ್ದಾರೆ.

ಪುಣ್ಯ ಕೆಲಸ ಮಾಡಲಿಕ್ಕೆ ಅನೇಕ ವಿಘ್ನ ಬರುವವು. ಪಾಪದ ಕಾರ್ಯ ಮಾಡಲಿಕ್ಕೆ ಸರ್ವವೂ ಅನುಕೂಲವಾಗುವುವು. ಪರಂತು ದೇವರು ಮೆಚ್ಚನು' ಎಂಬಿವೇ ಮೊದಲಾದ ನೀತಿ ಹಾಗು ತತ್ವಪರ ಉಕ್ತಿಗಳನ್ನು ವಿಶದಗೊಳಿಸುವ ಕತೆಗಳಿಗೂ ವಿಶೇಷ ಪ್ರಾಶಸ್ತ್ಯವಿದೆ. ಓರ್ವ ಪ್ರಧಾನಿಯ ದಡ್ಡ ಸೇವಕನ ಕುರಿತಾದ ಕತೆಯಲ್ಲಿ (೨೬ನೆಯದು), ಮತ್ತು ಹಾಸ್ಯಗಾರನ ಹೆಂಡತಿಯರ ಸಾವಿನ ಕತೆಯಲ್ಲಿ ಜಾನಪದ ಕತೆಯ ಸಹಜತೆ ಇದೆ. ಓರ್ವ ಸ್ತ್ರೀ ವರ್ಷಕ್ಕೊಂದರಂತೆ ಹೆಣ್ಣು ಮಕ್ಕಳನ್ನೆ ಹೆತ್ತಳಂತೆ. ಹೀಗೆ 'ಪುಷ್ಕಳ' ಹೆಣ್ಣು ಮಕ್ಕಳಾದವು. ಅವರಿಗೆ ಅನ್ನ, ವಸ್ತ್ರ, ಲಗ್ನ, ಮಹೂರ್ತ ಮುಂತಾದ ಕಾರ್ಯಗಳನ್ನು ಮಾಡಿ ಬಹು ಬೇಸತ್ತು ಹಣವೆಲ್ಲ ವೆಚ್ಚವಾಗಿ ತಾಪತ್ರಯ ಹೊಂದಿದನಂತೆ. "ಒಂದು ದಿವಸ ಮಾಡಬಾರದೆಂದು ನಿಶ್ಚೈಸಿ ಪ್ರತ್ಯೇಕ ಪ್ರತ್ಯೇಕ ಶೈನ ಮಾಡುತ್ತಿದ್ದನು. ಆ ದಿವಸಗಳು ಸಂದಿದ ಬಳಿಕ ಮನವೆಂಬ ಮರ್ಕಟನ ಹಿಡಿಯಲಾರದೇ ಪುನಃ ಪೂರ್ವದಂತೆ ಪ್ರವರ್ತಕ ಮಾಡಲಾರಂಭಿಸಲಾಗಿ, ಅವನ ಸ್ತ್ರೀಯು ಮೂರನೇ ವರ್ಷಕ್ಕೆ ಅವಳಿ ಜವಳಿಯಂತೆ ಮೂರು ಹೆಣ್ಣುಮಕ್ಕಳನ್ನು ಒಂದೇ ಕಾಲಕ್ಕೆ ಪ್ರಸೂತವಾದಳು."

ಅಡಕ್ಕಿ ಸುಬ್ಬರಾಯನ A Selection of Stories ಒಂದು ವಿಶಿಷ್ಟ ಕಥಾ ಸಂಗ್ರಹ ಎಂಬುದು (೧೮೪೬). ಕನ್ನಡ ವಾಕ್ಯರಚನೆ ಮತ್ತು ಮಾತಿನ ಸರಣಿ ಇವನ್ನು ರೂಢಿಸಿಕೊಳ್ಳುವ ದೃಷ್ಟಿಯಿಂದ ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನವರು ಈ ಗ್ರಂಥವನ್ನು ಬರೆಯಿಸಿದರು. ಎಲಿಯಟ್ ಅದನ್ನು ಪರಿಷ್ಕರಿಸಿದ್ದಾನೆ.*

ಈ ಚಿಕ್ಕ ಚಿಕ್ಕ ಕತೆಗಳ ಉದ್ದೇಶವು ನೀತಿಯ ಮಾತನ್ನು ಹೇಳುವುದೇ ಆಗಿದೆ. ಒಟ್ಟಿನಲ್ಲಿ ಕಥಾಂಶವು ಕಡಿಮೆಯೆಂದು ತೋರುವುದು. ಕೆಲವು ಕಥೆಗಳ ಉಲ್ಲೇಖವು ಪ್ರಸ್ತುತವಾಗಿದೆ :

"೧. ಒಬ್ಬ ಅರಸು ಒಬ್ಬ ಋಷಿಯನ್ನು ಕಂಡು, 'ನೀನು ಯಾವಾಗಾದರೂ ನನ್ನ ನೆನೆಸುವದೂ ಉಂಟೊ' ಎಂತ ಕೇಳಿದನು. 'ಹವುದಪ್ಪ, ನಾನು ದೇವರನ್ನು ಮರೆತಾಗ ನಿನ್ನ ನೆನೆಸುತ್ತೇನೆ' ಎಂತ ಋಷಿ ಉತ್ತರ ಕೊಟ್ಟನು.

೨. ಒಂದು ಹದ್ದೂ ಒಂದು ಕಾಗಿಯೂ ಸುಡುಗಾಡಿನಲ್ಲಿ ವೊಂದು ಮರದ ಮೇಲೆ ಕೂತುಕೊಂಡು ಮಾತನಾಡುತ್ತಾ ಯಿರುವಾಗ ಆ ಹದ್ದು ಕಾಗಿಯಂನು ನೋಡಿ "ಇಲ್ಲಿಗೆ ಮನುಷ್ಯರ ಹೆಣಗಳು ಆ ವೂರಿಂದ ಮುಂಚಿನ ಹಾಂಗೆ ಹೇರಳವಾಗಿ ಯಾತಕ್ಕೆ ಬರುವುದಿಲ್ಲ?" ಎಂದು ಕೇಳಿತು. ಅದಕ್ಕೆ "ಈ ವೂರಲ್ಲಿ ಇದ್ದ ವೈದ್ಯನು

---

* ಇದರಲ್ಲಿ ಕತೆಗಳಲ್ಲದೆ ರೆವಿನ್ಯೂ ಕಾಗದ ಪತ್ರಗಳ ನಕಲುಗಳೂ ಇವೆ. ಅವುಗಳ ಇಂಗ್ಲಿಷ್ ಭಾಷಾಂತರ, ವ್ಯಾಕರಣ ವಿಚಾರ ಹಾಗೂ ಕನ್ನಡ-ಇಂಗ್ಲಿಷ್ ಸಂಭಾಷಣೆ ಇವನ್ನೂ ಕೊಟ್ಟಿದೆ. ಎಂ. ಮರಿಯಪ್ಪ ಭಟ್ಟರು ಕಥಾಭಾಗವಷ್ಟನ್ನ Annals of Oriental Research, University of Madras ಪತ್ರಿಕೆಯಲ್ಲಿ ಪುನರ್ಮುದ್ರಿಸಿದ್ದಾರೆ (೧೯೫೬-೬೦).

ಕೆಲವು ದಿನಕ್ಕೆ ಮುಂಚೆ ದೂರ ದೇಶಕ್ಕೆ ಹೊರಟು ಹೋದನು. ಆ ಅವನು ತಿರಿಗೀ ಬಂದರೆ ಹೆಣಗಳಿಗೆ ಕಡಿಮೆಯಿರದು" ಯೆಂಬುದಾಗಿ ಕಾಗಿ ಉತ್ತರಾ ಕೊಟ್ಟಿತು.

೧೬. ಒಬ್ಬ ಶಿಪಾಯಿ ಯುದ್ಧ ಮಾಡುವುದಕ್ಕೆ ಒಂದು ಕತ್ತಿಯಂನು ಸಂಪಾದಿಶಿಯಿದ್ದನು. ಒಂದು ದಿವಸ ಅವನ ಮಗನು ಈ ಕತ್ತಿಯಂನು ತೆಗೆದು ಅದರಿಂದ ಸೊಪ್ಪುಸೆದೆ ಹೆಚ್ಚುವುದಕ್ಕೆ ಹೋಗಿ ತನ್ನ ಬೊಟ್ಟುಗಳನ್ನು ಹೆಚ್ಚಿಕೊಂಡನು. ಅ ಪ್ರಕಾರವೇ ದೇವರು ಮನಷ್ಯನಿಗೆ ಬುದ್ದಿಯಂನು ಕೊಟ್ಟು ಯಿದ್ದಾನೆ. ಆ ಬುದ್ಧಿಯಂನು ವೊಳ್ಳೆ ಕೆಲಸಗಳಿಗೆ ಉಪಯೋಗಾ ಮಾಡಿದರೆ ಅವನಿಗೆ ಇಹದಲ್ಲಿಯೂ ಪರದಲ್ಲಿಯೂ ಸೌಖ್ಯವುಂಟಾಗುತ್ತದೆ. ಆ ಬುದ್ಧಿಯನ್ನು ಕೆಟ್ಟ ಕೆಲಸಗಳಲ್ಲಿ ಉಪಯೋಗಾ ಮಾಡಿ ಅದರಿಂದ ಕಷ್ಟಗಳು ಬಂದರೆ ಅದು ತಂಮಿಂದ ಬಂದ ತಪ್ಪುಯೆಂತ ಅಂದುಕೋಬೇಕೇ ಹೊರ್ತು ದೇವರ ಮೇಲೆ ದೋಷ ಹೇಳಕೂಡದು."

ಇಂಥ ಚಿಕ್ಕ ಕತೆಗಳಿಂದ ಆರಂಭವಾಗಿ ಈ ಸಂಗ್ರಹವು ಕ್ರಮೇಣ ದೊಡ್ಡ ಕತೆಗಳನ್ನು ಒಳಗೊಂಡಿವೆ. ಉದ್ದೇಶ ಭಾಷೆಯ ಅಭ್ಯಾಸಕ್ಕೆ ಅನುಕೂಲವಾಗಲೆಂಬುದು. ಕೊನೆಯದಾದ ೪೧ನೆಯ ಕತೆಯಲ್ಲಿ ಲೇಖಕನ ಸ್ವಭಾವ ನಿರೀಕ್ಷಣೆಯು ತಕ್ಕಮಟ್ಟಿಗೆ ಕಂಡು ಬರುತ್ತದೆ. ಕತೆ ಹೀಗಿದೆ :–

"೪೨. ಒಂದು ಪಟ್ಟಣದಲ್ಲಿ ಜಗಳಗಂಟನೆಂಬ ಒಬ್ಬ ಬ್ರಾಹ್ಮಣ ಯಿದ್ದನು. ಅವನು ನಿತ್ಯ ಅಲ್ಲಿರುವ ಜನಗಳಿಗೆ ಜಗಳಗಳು ಹಚ್ಚಿ ಅವರು ಹೊಡೆದಾಡುವದಂನು ಕಂಡು ಸಂತೋಷ ಪಡುತ್ತಿದ್ದನು. ಆ ಪಟ್ಟಣವಂನು ಆಳುತ್ತಾ ಯಿದ್ದ ಅರಸು ಯೀ ವರ್ತಮಾನವಂನು ಕೇಳಿ ಆ ಬ್ರಾಹ್ಮಣನ ಕರೆಯಿಸಿ 'ಯೆಲ್ಲೈ ನೀನು ಜಗಳಗಳು ಹಚ್ಚುವುದರಲ್ಲಿ ಬಲು ಜಾಣನೆಂಬುದಾಗಿ ಹೇಳುತ್ತಾರೆ. ನೀನು ಯಾವ ಪ್ರಕಾರ ಜಗಳಗಳು ಉಂಟು ಮಾಡುತ್ತೀಯೋ ನೋಡಬೇಕು' ಯೆಂತ ಹೇಳಲಾಗಿ, ಆ ಬ್ರಾಹ್ಮಣನು ಸ್ವಲ್ಪ ಜೇನು ತಂದು ವೊಂದು ಅಂಗಡೀ ಗೋಡೆಗೆ ಹಚ್ಚಿದನು. ಆ ಜೇನಿಗೋಸ್ಕರ ವೊಂದು ನೊಣ ಬಂತು. ಆ ನೊಣವಂನು ಹಿಡಿಯಲಿಕ್ಕೆ ಒಂದು ಹಲ್ಲಿ ಬಂತು. ಹಲ್ಲಿಯನ್ನು ಹಿಡಿಯಲಿಕ್ಕೆ ಒಂದು ಬೆಕ್ಕು ಬಂತು. ಆ ಬೆಕ್ಕಿನ ಸಲುವಾಗಿ ವೊಂದು ನಾಯಿ ಬರಲಾಗಿ ಬೆಕ್ಕು ಅಂಗಡಿವೊಳಗಿ ವೋಡಿಹೋಯಿತು. ಯೀ ನಾಯಿ ಬೆಕ್ಕನ್ನು ಅಟ್ಟಿಕೊಂಡು ಹೋಗಿ ಅಂಗಡಿವೊಳಗೆ ಹೊಕ್ಕು ವೋಡ್ಯಾಡುತ್ತಿರಲಾಗಿ, ಅಲ್ಲಿಯಿರುವ ಗಡಿಗೆಗಳು ಕೆಳಗೆ ಬಿದ್ದು ಒಡೆದುಹೋದವು. ಆ ಅಂಗಡಿಯವನು ನಾಯಂನ್ನು ಹೊಡೆದನು. ಆ ನಾಯ ಸ್ವಂತಗಾರನು ಬಂದು 'ನಂನ ನಾಯ ಬಡಿಯುವುದಕ್ಕೇನು ಕಾರಣ'ವೆಂತ ಅಂಗಡಿಯವನ ಸಂಗಡ ಜಗಳವಾಡಲಾಗಿ ಆ ವೋಣಿಯಲ್ಲಿ ಬಹಳ ಗದ್ದಲು ಆಯಿತು. ಯೀ ಬ್ರಾಹ್ಮಣನು ಮಾಡಿದ ಕೆಲಸವನ್ನೆಲ್ಲಾ ನೋಡುತ್ತಿದ್ದ ಅರಸು ಅವನ ಉಪಾಯಕ್ಕೆ ಮೆಚ್ಚಿ ಅವನಿಗೆ

ಬಹುಮಾನಾ ಕೊಟ್ಟು ಯಿಂನು ಮೇಲೆ ಆ ಪಟ್ಟಣದಲ್ಲಿ ಯಿಂಥಾ ತಂಟೆಗಳು ಮಾಡಬೇಡವೆಂಬುದಾಗಿ ಹೇಳಿದನು."

ಮೈಸೂರು ಸಂಸ್ಥಾನದ ಪ್ರಾಥಮಿಕ ಶಾಲೆಗಳಲ್ಲಿ ಕಲಿಯುತ್ತಿದ್ದ ಮಕ್ಕಳಿಗೆಂದು 'ಕಥಾಸಪ್ತತಿ' ಎಂಬ ಸಂಗ್ರಹವು ೧೮೪೦ರ ದಶಕದಲ್ಲಿ ಮೊದಲಿಗೆ ಪ್ರಕಟವಾಗಿ, ಮುಂದೆ ಹತ್ತಾರು ಆವೃತ್ತಿಗಳನ್ನು ಕಂಡಿತು. ಅದರ ನಾಲ್ಕನೆಯ ತಿದ್ದಿದ ಆವೃತ್ತಿಯ ಪೀಠಿಕೆಯಲ್ಲಿ ಬಂದ ಮಾತುಗಳನ್ನು ನೋಡೋಣ:

"The publication of the Seventy Stories is desingned to supply in some measure, the want of books written in an easy and familiar style and adopted to the use of beginners. As a further help Sandhi is almost wholly omitted and spaces introduced between the words as is usual in the writings of every civilized people."

ಇದರ ಸಂಗ್ರಹಕಾರನ ಹೆಸರಿಲ್ಲ. ಆದರೆ ಕತೆಗಳಿಗೆ ಶೀರ್ಷಿಕೆಯನ್ನು ಕೊಟ್ಟ ರೀತಿ ('ಮನುಷ್ಯನನ್ನೂ ಚೇಳನ್ನೂ ಕುರಿತದ್ದು') ಅಕ್ಷರಿಕೆ ಹಾಗೂ ವಾಕ್ಯರಚನೆ-ಇವು ಮಿಶನರಿಯೊಬ್ಬನ ಕೈವಾಡವನ್ನು ಸೂಚಿಸುತ್ತವೆ. ಬಂದಿರುವ ಕತೆಗಳಲ್ಲಿ ಕೆಲವು ತೆನ್ನಾಲಿ ರಾಮಕೃಷ್ಣನಿಗೆ ಸಂಬಂಧಿಸಿ ಇವೆ. ಪಂಚತಂತ್ರ ಹಾಗೂ ಇಸೋಪನ ಕತೆಗಳಿಂದಲೂ ಆಯ್ಕೆ ಮಾಡಲಾಗಿದೆ. ಉಕ್ತಿಚಾತುರ್ಯದ ಕಥೆಗಳು ಯಥಾಪ್ರಕಾರ ಬಂದಿವೆ. ಒಂದೆರಡರಲ್ಲಿ ತಿಳಿಯಾದ ಹಾಸ್ಯವೂ ಇದೆ. ಕಳ್ಳತನಕ್ಕೆ ರುಜುವಾತು ಇಲ್ಲವೆಂದು ನ್ಯಾಯಾಧೀಶನು ನುಡಿದಾಗ ಮನೆಯೊಡೆಯನು ಆ ಕಳ್ಳನನ್ನು ಅಲ್ಲಿಯೆ ಥಳಿಸುತ್ತ 'ಕಳವು ಮಾಡಲು ನನ್ನ ಮನೆಗೆ ಬರುವಾಗ ಮುಂಚಿತ ತಿಳಿಸಬಾರದಿತ್ತೆ? ಅಂದರೆ ಸಾಕ್ಷಿಗಳ ವ್ಯವಸ್ಥೆ ಮಾಡುತ್ತಿದ್ದೆ' ಎನ್ನುವ ಸನ್ನಿವೇಶ ಒಂದೆಡೆ ಚಿತ್ರಿತವಾಗಿದೆ! (೨೫ನೆಯ ಕಥೆ) 'ಇಂಗ್ಲಿಷ್ ದೊರೆಯನ್ನೂ ಅವನ ದ್ವಿಭಾಷಿಯನ್ನೂ ಕುರಿತದ್ದು' ಎಂಬ ಕಥೆಯಲ್ಲಿ ದ್ವಿಭಾಷಿಯು ದೊರೆಯ ಭಾಷಾವಿಷಯಕವಾದ ಅಜ್ಞಾನದ ದುರುಪಯೋಗ ಮಾಡಿಕೊಂಡ ಸನ್ನಿವೇಶವಿದ್ದು ಅದು ನಿಜವಾದ ಘಟನೆಯಂತಿದೆ.

'ಸುಧಾರಿತ ಜನರ ಬರೆಹದ ರೀತಿಯ ಪ್ರಕಾರ', ಸಂಧಿಯನ್ನು ಬಿಟ್ಟುಕೊಡಲಾಯಿತಷ್ಟೆ ಆದರೆ ಅದನ್ನು ಸಂಪೂರ್ಣ ಬಿಟ್ಟದ್ದಾದರೆ ವಾಕ್ಯ ರಚನೆಯು ಹಾಸ್ಯಾಸ್ಪದವಾಗಿ ತೋರುತ್ತದೆ.

"ಒಬ್ಬ ಕಳ್ಳನು ಒಂದು ಪಟ್ಟಣಕ್ಕೆ ಅರಸು ಆದನು. "ಕೆಲು ದಿವಸಗಳಲ್ಲಿ ಆಸ್ತಿ ಎಲ್ಲಾ ಖರ್ಚುಮಾಡಿ ದರಿದ್ರನು ಆದನು." ಸಂಧಿಯನ್ನು ಬಿಟ್ಟುಕೊಟ್ಟದ್ದರ ಅತಿರೇಕಕ್ಕೆ ಉದಹರಣೆಗಳಿವು : 'ಮಾಡ ಬಾರದು' 'ಆ ಮೇಲೆ' 'ಹೇಳಿ ಕೊಂಡರು' 'ವ್ಯಸನ ಪಟ್ಟು'.

ವೆಸ್ಲಿಯನ್ನರ ಆಶ್ರಯದಲ್ಲಿ ಹೊರಬಂದ ಈ ಕಥಾ ಸಪ್ತತಿಯು ಶಾಲಾ ವಿದ್ಯಾರ್ಥಿಗಳಿಗಾಗಿ ಇದ್ದಿತು. ಅದೇ ಮಿಶನ್ನಿನ ಡಿ. ಸ್ಯಾಂಡರ್ಸನ್ ವಿದೇಶೀ ಬಾಂಧವರ ಕನ್ನಡ ಭಾಷಾಭ್ಯಾಸಕ್ಕಾಗಿ ಕಥಾ ಸಂಗ್ರಹದ ಎರಡು ಸಂಪುಟಗಳನ್ನು ಅಣಿಗೊಳಿಸಿದನು (೧೮೬೩-೧೮೯೨). ಇವು ಕೂಡ, ಮುಂದೆ ಶಾಲೆಗಳಲ್ಲಿ ಪಠ್ಯಪುಸ್ತಕಗಳಾಗಿದ್ದುವು. ಮುಂಬಯಿ ಪ್ರಾಂತದಲ್ಲಿ ಕೆಲಸ ಮಾಡಬೇಕಿದ್ದ ಐ.ಸಿ.ಎಸ್. ಮತ್ತು ಇತರ ಅಧಿಕಾರಿಗಳ ಕನ್ನಡ ಪರೀಕ್ಷೆಗೂ ಇದು ೧೯೪೦ರ ತನಕ ಕ್ರಮಿಕ ಪುಸ್ತಕವಾಗಿದ್ದಿತು. ಭಾಷಾ ದೃಷ್ಟಿಯಿಂದ ಇದು ಮೇಲಿನ ಎರಡು ಕಥಾ ಸಂಕಲನಗಳಿಗಿಂತಲೂ ಮಿಗಿಲಾದದ್ದು. ಮಿಶನರಿಗಳ ಈ ಬಗೆಯ ಎತ್ತುಗಡೆಗೆ ಪ್ರತಿಯಾಗಿಯೊ ಎಂಬಂತೆ ಎಂ.ಸ್. ಪುಟ್ಟಣ್ಣ ಮತ್ತು ಎಂ.ಬಿ. ಶ್ರೀನಿವಾಸಯ್ಯಂಗಾರ್ ಇವರು ಸೇರಿ 'ನೀತಿ ಚಿಂತಾಮಣಿ'ಯ ಮೂರು ಸಂಪುಟಗಳನ್ನು ಸಿದ್ಧಗೊಳಿಸಿದರು. ಇದರಲ್ಲಿಯೂ ಪುರಾಣ ಪ್ರಸಂಗಗಳು, ಪಂಚತಂತ್ರಾದಿ ಕತೆಗಳು ಮತ್ತು ಜೀವನ ಚರಿತ್ರೆಗಳು ಸಮಾವೇಶಗೊಂಡಿವೆ.

೧೮೮೦ನೆಯ ದಶಕದ ವೇಳೆಗೆ ಬಗೆಬಗೆಯ ಪ್ರಾಚೀನ ಕಥೆಗಳು ಮುದ್ರಣಗೊಂಡು ಪ್ರಸಾರದಲ್ಲಿದ್ದುವಷ್ಟೆ. ಅವುಗಳಲ್ಲಿಯ ಕೆಲವೇ ಅಂಶಗಳನ್ನು ಎತ್ತಿಕೊಂಡು ಹಲವರು ಸ್ವತಂತ್ರವಾದ ಕಥಾನಕಗಳನ್ನು ರಚಿಸಿದರು. ಇವುಗಳಲ್ಲಿ ನಾವೀನ್ಯ, ವಾಸ್ತವತೆಗಳನ್ನು ಅಪೇಕ್ಷಿಸಕೂಡದು. ಮಾದರಿಯೆಂದು 'ಧರ್ಮವರ್ಮ ಚರಿತಂ' ಎಂಬ ಪುಸ್ತಕವನ್ನು ನೋಡಬಹುದು (೧೮೮೪). ಅದರ ಲೇಖಕರಾರೆಂಬುದನ್ನು ಹೇಳಿಲ್ಲ. 'ಈ ವಚನ ಕಾವ್ಯವು ಈಗ ಬಳಕೆಯಾಗಿರುವ ಭಾಷಾಶೈಲಿಯಿಂದ ಸುಲಭವಾಗಿ ತಿಳಿಯುವಂತೆ ನೀತಿಕತೆಗಳನ್ನು ಬೋಧಿಸುವುದಾಗಿಯೂ ವುತ್ಪಾದಕವಾಗಿಯೂ ಉಪಯುಕ್ತವೆನಿಸಿರುವುದರಿಂದ ಪಂಡಿತರಿಂದ ಪರಿಶೋಧಿಸಲ್ಪಟ್ಟು' ಪ್ರಕಟವಾದ ಗ್ರಂಥವಿದು. ಕಥಾಸರಿತ್ಸಾಗರ, ಪಂಚತಂತ್ರ ಮುಂತಾದ ಪ್ರಾಚೀನ ಕೃತಿಗಳಲ್ಲಿರುವಂತೆ ಇಲ್ಲಿಯೂ ಕತೆಯೊಂದರಲ್ಲಿ ಇನ್ನೊಂದು ಕತೆ ಹೆಣೆದುಕೊಂಡು ಕಥನವು ಸುರುಳಿಯಾಗಿ ಮುಂದುವರಿಯುತ್ತದೆ. ಇದೊಂದು ಮಾದರಿ:

ವಿವೇಕಚಂದ್ರ, ವಿಜ್ಞಾನಚಂದ್ರ, ವಿದ್ಯಾಚಂದ್ರ ಮತ್ತು ವಿನೋದಚಂದ್ರರೆಂಬ ನಾಲ್ವರು ಅಲಕಾ ನಗರದ ಧರ್ಮವರ್ಮನಲ್ಲಿ ಮಂತ್ರಿಗಳಾಗಿ ನಿಲ್ಲುತ್ತಾರೆ. ರಾಜನಿಗೆ ಸರ್ಪದಂಶ ಮೊದಲಾದ ಅಪಾಯಗಳು ಒದಗಿ ಬರಲಿವೆಯೆಂದು ಕಾಲಜ್ಞಾನದಿಂದ ತಿಳಿದು, ವಿವೇಕಚಂದ್ರನು ಕಾಳಿಕಾದೇವಿಯನ್ನು ಪ್ರಾರ್ಥಿಸಿ ಅದಕ್ಕೆ ಮಾಡಬೇಕಾಗಿದ್ದ ಉಪಾಯಗಳನ್ನು ತಿಳಿದುಕೊಳ್ಳುತ್ತಾನೆ. ರಾಜನಿಗೊದಗಿದ ಸರ್ಪದಂಶದ ನಿವಾರಣೆ ಮಾಡುವ ಸಮಯದಲ್ಲಿ ಆ ಸರ್ಪದ ವಿಷ ಬಿಂದುವು ರಾಣಿಯ ಎದೆಯ ಮೇಲೆ ಬೀಳುತ್ತದೆ. ಅನಿವಾರ್ಯವಾಗಿ ಮಂತ್ರಿಯು ತನ್ನ ಉಗುರಿನಿಂದ ಚರ್ಮ ಸಹಿತವಾಗಿ ಕಿತ್ತು ಬರುವಂತೆ ಆ ವಿಷವನ್ನು ಕಳೆಯುತ್ತಾನೆ. ರಾಣಿಯು ಎಚ್ಚೆತ್ತು ಹಾಹಾಕಾರ

ಮಾಡಲು ಧರ್ಮವರ್ಮನು ವಿವೇಕಚಂದ್ರನನ್ನು ಶಿಕ್ಷೆಗೆ ಗುರಿಪಡಿಸಬೇಕೆನ್ನುತ್ತಾನೆ. ಆಗ ಉಳಿದ ಮಂತ್ರಿಗಳು ಮತ್ತು ಇತರರು, ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡಬೇಕು; ಯಾವುದಕ್ಕೂ ದುಡುಕಬಾರದು ಎಂಬ ಮಾತಿಗೆ ನಿದರ್ಶನವಾಗಿ ಹಲವು ಕತೆಗಳನ್ನು ಹೇಳುತ್ತಾರೆ. (ಉದಾ.ಗೆ ಮಗುವಿನ ಕಾವಲಿಗಿದ್ದ ಮುಂಗಲಿಯ ಬಾಯಿಗೆ ರಕ್ತ ಹತ್ತಿದ್ದನ್ನು ಕಂಡು ತಾಯಿಯು ಅದು ತನ್ನ ಮಗುವಿನದೇ ಎಂದು ಭಾವಿಸಿ ಮುಂಗಲಿಯನ್ನು ಕಡಿದು ಹಾಕಿದ ಕತೆ.) ವಿವೇಕಚಂದ್ರನು ಸಹ ಹೀಗೆ ಕಥೆಗಳ ಸಾದೃಶ್ಯವನ್ನು ಕೊಟ್ಟು ತನ್ನ ಹೇಳಿಕೆಯನ್ನು ಕೊಡುತ್ತಾನೆ. ಆಗ ರಾಜನು ಸಭೆಯಲ್ಲಿ ವಿವೇಕಚಂದ್ರನನ್ನು ಮನ್ನಿಸುತ್ತ ಅಲ್ಲಿ ನೆರೆದವರನ್ನುದ್ದೇಶಿಸಿ ತಾನೂ, 'ರಕ್ಷಿಸಿದವನಂ ಭಕ್ಷಿಸುವೆನು' ಎಂಬ ಕಥೆಯನ್ನು ಹೇಳುತ್ತಾನೆ. ಗೋವಿನ ಹಾಡಿನ ಕತೆಯ ರೂಪಾಂತರವದು. ಹುಲಿ ಮತ್ತು ಹಸುವಿನ ಬದಲಿಗೆ ಇಲ್ಲಿ ದೊಡ್ಡ ಸರ್ಪ ಮತ್ತು ಬ್ರಾಹ್ಮಣ ಇವರು ಕಥಾನಕದಲ್ಲಿ ಬಂದಿದ್ದಾರೆ.

ಕಥಾ ಸಂಗ್ರಹಗಳ ಸಮೀಕ್ಷೆಯನ್ನು ಮುಗಿಸುವ ಮುನ್ನ ಕಥನ ಶೈಲಿಯನ್ನು ಕುರಿತು ಒಂದು ಮಾತನ್ನು ಹೇಳಬೇಕು. ಅಂದಿನ ಕಥೆಗಳಲ್ಲಿ ಎರಡು ಬೇರೆ ಬೇರೆ ಪ್ರಕಾರದ ನಿರೂಪಣೆ ಕಂಡುಬರುತ್ತದೆ. ಪಂಡಿತರಾದವರು ಶಾಸ್ತ್ರ ಗ್ರಂಥಗಳನ್ನು ಬರೆಯವುದರ ಜೊತೆಗೆ ಪ್ರಕಾಶಕರ ಅಪೇಕ್ಷೆಯ ಮೇರೆಗೆ ಇಂಥ ಮನೋರಂಜಕ ಕಥನಗಳನ್ನು ಕೊಡಬೇಕೆಂದರಷ್ಟೆ. ಅವರ ಶೈಲಿಯು ಅಲ್ಲಲ್ಲಿ ಹಳಗನ್ನಡದ ಸರಣಿಯನ್ನು ಉಳಿಸಿಕೊಂಡಿದೆ. ಮತ್ತು ಪುರಾಣಕಾರರ ನಿರೂಪಣೆಯನ್ನು ಅನುಸರಿಸಿದೆ. ಇತ್ತ ಮಿಶನರಿ ಜನರು ಬರೆದ ಕತೆಗಳಲ್ಲಿ ನೇರ ಹಾಗೂ ಸರಳವಾದ ಕಥನಕ್ರಮವಿದ್ದು, ಶೈಲಿಯು ಗ್ರಂಥಸ್ಥ ಹಾಗೂ ಬಳಕೆಯ ನುಡಿಗಳಿಂದ ಕೂಡಿದೆ.

## ೮೩. ಕಾದಂಬರಿ

ಬಾಣಕೃತ ಸಂಸ್ಕೃತ ಕಾದಂಬರಿಯು ಆರನೆಯ ಶತಮಾನದಷ್ಟು ಹಿಂದಿನದು. ಆದರೆ ಇಂದು ನಾವು ತಿಳಿದಿರುವ ಕಾದಂಬರೀ ಸ್ವರೂಪವು ಇಂಗ್ಲಿಷ್ ಭಾಷೆಯಲ್ಲಿ ಆಮೇಲೆ, ಅಂದರೆ ೧೮ನೆಯ ಶತಮಾನದಲ್ಲಿ ತಲೆದೋರಿತು. ಆ ಮಧ್ಯದ ಅವಧಿಯ ಸಂಸ್ಕೃತ ಸಾಹಿತ್ಯದಲ್ಲಿ ಕೆಲವು ದೊಡ್ಡ ಕಥಾನಕಗಳು ಕಾಣಿಸಿಕೊಂಡವು. ಸಮಗ್ರವಾದ ಕಥಾವಸ್ತು, ಕವಿಸಮಯಾಲಂಕಾರಗಳಿಂದ ಯುಕ್ತವಾದ ವರ್ಣನೆಗಳು, ವೀರ ಶೃಂಗಾರ ರಸಗಳ ಪ್ರಾಧಾನ್ಯ, ದೇವದಾನವರನ್ನು ಒಳಗೊಂಡ ಅಲೌಕಿಕ ಪಾತ್ರಸೃಷ್ಟಿ, ವಾಸ್ತವತೆಗಳಿಗಿಂತ ಅದ್ಭುತವನ್ನು ಒಡಮೂಡಿಸುವ ಸನ್ನಿವೇಶ–ಇವು ಅಂದಿನ ಕಥಾನಕದ ಸ್ಥೂಲ ಲಕ್ಷಣಗಳು. ಗದ್ಯರೂಪವೇ ಅದರ ತಳಹದಿ.

ಸಾಹಿತ್ಯ ಕ್ಷೇತ್ರದಲ್ಲಿ ಪಾಶ್ಚಾತ್ಯ ಪ್ರಭಾವದಿಂದಾಗಿ ಈ ನವೀನ ಪ್ರಕಾರಗಳ ಅವಿರ್ಭಾವವಾಯಿತಲ್ಲವೆ. ಅವುಗಳಲ್ಲಿ ಕಾದಂಬರಿಯು ಒಂದು ; ನಾಟಕ ಇನ್ನೊಂದು. ಹೈಸ್ಕೂಲು, ಕಾಲೇಜುಗಳಲ್ಲಿ ಶೇಕ್ಸ್‌ಪಿಯರನಂತಹ ಶ್ರೇಷ್ಠ ನಾಟಕಕಾರರ ಕೃತಿಗಳನ್ನು ಸಾಹೇಬೀ ಜನರು ಉಬ್ಬುಬ್ಬಿ ಕಲಿಸುತ್ತಿದ್ದರಾದ್ದರಿಂದ ಅವುಗಳ ಬಗ್ಗೆ ಅದರ ಹುಟ್ಟಿ, ಸಾಧ್ಯವಾದರೆ ಕನ್ನಡಕ್ಕೆ ತರಬೇಕೆಂಬ ಆಕಾಂಕ್ಷೆ ಮೂಡಿದ್ದರ ಪರಿಣಾಮವಾಗಿ ಹಲವಾರು ಇಂಗ್ಲಿಷ್ ನಾಟಕಗಳು ಕನ್ನಡದಲ್ಲಿ ಬಂದದ್ದನ್ನು ನೋಡಿದ್ದೇವೆ.

ಕಾದಂಬರಿಗಳ ವಿಷಯ ಹಾಗಲ್ಲ. ಅವು ಮನೆಯಲ್ಲೇ ಮನರಂಜನೆಗಾಗಿ ಓದಬೇಕಾದವುಗಳು ಮತ್ತು ಈ ರೀತಿ ಬಿಡುವಿನ ವೇಳೆಯಲ್ಲಿ ಓದಬಹುದಾದ, ನೌಕರಿ–ಚಾಕರಿಯಲ್ಲಿರುವ ಮಧ್ಯಮ ವರ್ಗದ ಸೃಷ್ಟಿಯಾಗಿತ್ತು. ಆದರೇನು, ಕವಿ, ನಾಟಕಕಾರರಷ್ಟು ಶ್ರೇಷ್ಠರೆನ್ನುವ ಇಂಗ್ಲಿಷ್ ಕಾದಂಬರಿಕಾರರು ೧೮/೧೯ನೆಯ ಶತಮಾನದಲ್ಲಿ ಇರಲಿಲ್ಲ.

ಆದರೆ ಕಾದಂಬರಿ ಕಥಾನಕಗಳು ಮನರಂಜನೆಯ ಅತ್ಯುತ್ತಮ ಮಾಧ್ಯಮವೆಂಬುದು ಮನವರಿಕೆಯಾಗಿತ್ತು. ಅದಕ್ಕಾಗಿ ನಮ್ಮಲ್ಲೇ ಅಂಥಾ ಕಥಾನಕಗಳು ಬಾಣ ಕಾದಂಬರಿಯಿಂದ ಮೊದಲ್ಗೊಂಡು, 'ಮಂಜುಘೋಷಾ'ದವರೆಗೆ ಇದ್ದುವಲ್ಲ! ಅವನ್ನೇ ವಾಚನೀಯವಾಗುವಂತೆ ಸುಲಭ ಗದ್ಯದಲ್ಲಿ ಕೊಡಬಹುದೆಂದು ತೋಚಿತು. ಇಂದಿನ ವಾಸ್ತವತೆಯನ್ನು ಅವುಗಳಲ್ಲಿ ತರುವುದಕ್ಕಿಂತ ಅದ್ಭುತ ರಮ್ಯವಾದ ಶೃಂಗಾರಪೂರ್ಣವಾದ ರಂಜನೆಗೆ ಅಂದಿನ ವಾಚಕರು ಒಲಿದಿದ್ದ ಪರಂಪರೆಯೇ ಇತ್ತು. ಆದ್ದರಿಂದ ನಮ್ಮವೇ ಕಥಾನಕಗಳನ್ನು ಕಾದಂಬರಿ ರೂಪದಲ್ಲಿ ಕೊಟ್ಟರೆ, ಇಂಗ್ಲಿಷ್ ಕಲಿತವರೇ ಅಲ್ಲದೆ, ಬರಿ ಕನ್ನಡ ಬಲ್ಲವರೂ ಓದಬಲ್ಲವರು ಎಂದು ಕೆಲವರು ಯೋಚಿಸಿದರು.

ಅದ್ಭುತ ರಮ್ಯ ಘಟನೆಗಳು ಬೇಕೆಂದರೆ ಗತಕಾಲದ ಐತಿಹಾಸಿಕ ಚಿತ್ರಣಕ್ಕೆ ತೊಡಗಬೇಕು. ಅದರಲ್ಲಿ ಅಲೌಕಿಕ ಸನ್ನಿವೇಶಗಳನ್ನೂ ತರಬಹುದು. ಏನಿದ್ದರೂ ಕಾದಂಬರಿಯಂತಹ ಪ್ರಕಾರವು ಮಾತ್ರ ಲೇಖಕರಲ್ಲಿ ಚೆನ್ನಾಗಿ ಬೇರೂರಿದ್ದಿತು.

ಇದೆಲ್ಲದರ ಪರಿಣಾಮವಾಗಿ, ಪ್ರಯೋಗಾವಸ್ಥೆ ಎನ್ನಬಹುದಾದ ಬಗೆ ಬಗೆಯ ರೂಪದ ಕಾದಂಬರಿಗಳು ೧೯ನೆಯ ಶತಮಾನದಲ್ಲಿ ಮೈದಾಳಿದುವು. ಒಂದೆಡೆ ಇಂಗ್ಲಿಷ್‌ನಿಂದ ಅನುವಾದಗೊಂಡ, ಆದರೆ ದ್ವಿತೀಯ ದರ್ಜೆಯ ಕಾದಂಬರಿಗಳು. ಇನ್ನೊಂದೆಡೆ ಶುದ್ಧಾಂಗವಾಗಿ ರಮ್ಯ ಲೋಕದ ಸ್ವಕಲ್ಪಿತ ಕಥಾನಕಗಳು, ಮತ್ತೊಂದೆಡೆ ಐತಿಹಾಸಿಕ ಹಿನ್ನಲೆಯ, ಅದರಲ್ಲೇ ಸದ್ಯಃ ಸ್ಥಿತಿಯ ಘಟನೆಗಳಿರುವ ಕಾದಂಬರಿಗಳು ಕಾಣಿಸಿಕೊಂಡವು.

ಮಹತ್ವದ ಮಾತೆಂದರೆ, ಯಾವ ಬಗೆಯ ಕಾದಂಬರಿಯೇ ಆಗಲಿ, ಅದರ ವಾಚನದಿಂದ ಸನ್ಮಾರ್ಗ, ಸದಾಚಾರಗಳ ಬೋಧೆಯಾಗಬೇಕು. ಸತ್ಯಕ್ಕೆ, ಸದ್ಧರ್ಮಕ್ಕೆ

ಅಂತಿಮವಾಗಿ ಜಯ ದೊರೆಯಬೇಕು ಎಂಬ ಸ್ಪಷ್ಟ ನಿಲುವು ಅವರಲ್ಲಿದ್ದಿತು. ಈ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ಆಗಿನ ಕಾದಂಬರಿಗಳ ಅವಲೋಕನ ಮಾಡುವಾ:

ಹಿಂದಿನ ಕಥಾನಕಗಳಿಂದ ವೊದಲ್ಗೊಂಡು, ಇಂದಿನ ಸಾವಾಜಿಕ ಕಾದಂಬರಿಯವರೆಗೆ ಸಾಗಿ ಬಂದ ಕನ್ನಡ ಕಾದಂಬರಿಯ ಚರಿತ್ರೆಯನ್ನು ಇಲ್ಲಿ ರೂಪಿಸ ಬಯಸಿದೆ. ಮೇಲಿನ ಬಗೆಯ ಕಥಾನಕಗಳು ಹಳಗನ್ನಡ ಸಾಹಿತ್ಯದಲ್ಲಿ ಇರಲಿಲ್ಲ. ಅಂಥ ಮೊದಲ ಕೃತಿಯೆಂದರೆ ಯಾದವ ಕಬ್ಬಿಗನ 'ಕಲಾವತೀ ಪರಿಣಯ' ಗೋವಿಂದ ಪೈಗಳು ಸಾಹಿತ್ಯ ಸಮ್ಮೇಳನದ ತಮ್ಮ ಅಧ್ಯಕ್ಷ ಭಾಷಣದಲ್ಲಿ (ಮುಂಬಯಿ, ೧೯೫೦) ಇದನ್ನು ಕನ್ನಡದ ಆದ್ಯ 'ಕಾದಂಬರಿ' ಎಂದು ಕರೆದದ್ದರಲ್ಲಿ ಔಚಿತ್ಯವಿದೆ. ಇದರ ಕಾಲವನ್ನು ಕವಿಚರಿತಕಾರರು ಸು. ೧೮೦೦ ಎಂದಿದ್ದಾರೆ. ಆದರೆ ಮುಮ್ಮಡಿ ಕೃಷ್ಣರಾಜರ ಅವಕೃಪೆಗೆ ಪಾತ್ರನಾದ ಅವಧಿಯಲ್ಲಿ ಇದನ್ನು ಬರೆಯಲಾದದ್ದರಿಂದ ಈ ಕೃತಿಯ ಕಾಲವನ್ನು ಸು. ೧೮೧೫ ಎಂದು ಇಟ್ಟುಕೊಳ್ಳಬೇಕಾಗುತ್ತದೆ. ಇದರ ಕಥೆಯು ಪೌರಾಣಿಕವಾಗಿದ್ದರೂ ಸ್ವಕಲ್ಪಿತವಾದದ್ದು. ನಾವೀನ್ಯದಿಂದ ಕೂಡಿದುದು. ಒಂದು ಸಣ್ಣ ನಿಮಿತ್ತದಿಂದ ಗಂಡ-ಹೆಂಡಿರು ಅಗಲಿ ತಮ್ಮ ಮಗನಿಂದಾಗಿ ಪುನರ್ಮಿಲನ ಹೊಂದುವುದು ಇಲ್ಲಿಯ ಕಥಾಸೂತ್ರವಾಗಿದೆ :

ಸೌವೀರ ದೇಶದ ಬೃಹದ್ರಥನಿಗೆ ಓರ್ವ ಸಿದ್ಧನು ಅದೃಶ್ಯಾಂಜನ, ವಿಶಿಷ್ಟ ಹಾರ, ಶಿವಖಡ್ಗ ಇವನ್ನು ಕೊಡುತ್ತಾನೆ. ಅಂಜನದ ಸಹಾಯದಿಂದ ಅದೃಶ್ಯನಾಗಿ ಬೃಹದ್ರಥನು ಸೌರಾಷ್ಟ್ರದೇಶದ ಕುವಲಪೀಡನ ಅರಮನೆಯನ್ನು ಪ್ರವೇಶಿಸಿ, ರಾಜಕುವರಿ ಕಲಾವತಿಯನ್ನು ಮೋಹಿಸುತ್ತಾನೆ. ಅವಳಿಗೂ ಅವನಲ್ಲಿ ಒಲವು, ರಾಜನೋ ಕಾಮಾತುರ. 'ಮೊದಲು ಮದುವೆ ಆಗಲಿ' ಎಂಬ ಕಾರಣದಿಂದ ಕಲಾವತಿಯು ನಿರಾಕರಿಸಿದಾಗ, ರಾಜನು ಕೋಪಗೊಂಡು 'ನಿನ್ನನ್ನು ಮದುವೆಯಾಗಿ ತೊರೆಯುವೆ' ಎಂದು ಪ್ರತಿಜ್ಞೆ ಮಾಡುತ್ತಾನೆ. ಆಗ ಆಕೆಯು "ಧರ್ಮವಶಳಾಗಿ ತಡೆದಿರುವೆನು. ಇಷ್ಟಕ್ಕೆ ತಾವು ಮುಳಿದು ನನ್ನ ಕೈಹಿಡಿದು ತೊರೆಯುವುದಾದರೆ, ನಿಮ್ಮ ಅಂಗಸಂಗ ಮಾಡಿ ನನ್ನ ಹೊಟ್ಟೆಯಲ್ಲಿ, ಹುಟ್ಟಿದ ಕುವರನಿಂದ ನಿಮ್ಮ ನಿಗ್ರಹ ಮಾಡುವೆನು" ಎಂದು ಮರುಪ್ರತಿಜ್ಞೆ ಮಾಡುತ್ತಾಳೆ. ಆದರೇನು, ಕೈಮಿಂಚಿದ ಛಲದಿಂದಾಗಿ ಇಬ್ಬರಿಗೂ ಅಸಹನೀಯ ದುಃಖವಾಗುತ್ತದೆ. ಇತ್ತ ಕುವಲಪೀಡನು ತನಗೆ ಯುದ್ಧದಲ್ಲಿ ನೆರವಾದ ಬೃಹದ್ರಥನಿಗೆ ತನ್ನ ಮಗಳನ್ನು ಧಾರೆಯೆರೆದು ಕೊಡುವನು. ಬೃಹದ್ರಥನು ತನ್ನ ಪ್ರತಿಜ್ಞೆಯನ್ನು ನೆನೆದು ಕಲಾವತಿಯೊಂದಿಗೆ ಸಮಾಗಮ ಮಾಡದೇ ತನ್ನ ಊರಿಗೆ ಹಿಂತಿರುಗುವನು.

ಹೀಗೆ ಪರಿತ್ಯಕ್ತೆಯಾದ ಕಲಾವತಿಯು ಓರ್ವ ದೇವಮಾನಿನಿಯ ಸಹಾಯದಿಂದ ರೂಪವನ್ನು ಬದಲಿಸಿಕೊಂಡು 'ಮದನಮಂಜರಿ'ಯಾಗಿ ಬಂದು ತನ್ನ ಸಂಗೀತ, ಬುದ್ಧಿಮತ್ತೆಗಳಿಂದ ಬೃಹದ್ರಥನನ್ನು ಒಲಿಸಿಕೊಳ್ಳುತ್ತಾಳೆ. ಅವನಿಂದ ಗರ್ಭ ತಾಳಿದ

ಮದನಮಂಜರಿ (ಕಲಾವತಿ)ಯು ತನ್ನ ಊರಿಗೆ ಮರಳ ಬಯಸಿದಾಗ, ರಾಜನು 'ನಿನ್ನನ್ನು ಬಿಟ್ಟಿರಲಾರೆ' ಎನ್ನುತ್ತಾನೆ. ಆಗ ಆಕೆಯು 'ಅಂಥ ಚಿಂತೆಯು ಕೋಮಲೆಯರಿಗಲ್ಲದೆ ಕಠಿಣ ಹೃದಯದ ಗಂಡಸರಿಗಲ್ಲ. ಸಂಶಯವಿದ್ದರೆ ನಿನ್ನನ್ನು ಬಿಟ್ಟು ಇದ್ದ ಕಲಾವತಿಯನ್ನು ಬೇಕಾದರೆ ಕೇಳು' ಎನ್ನುತ್ತಾಳೆ! ಅವಳು ಊರಿಗೆ ಬಂದು ಗಂಡು ಮಗನನ್ನು ಹಡೆದ ಮೇಲೆ ಬೃಹದ್ರಥನಿಗೆ ನಿಜ ಸಂಗತಿ ತಿಳಿಯುತ್ತದೆ. ಮುಂದಿನ ಕತೆಯು ಸಹ ರಸವತ್ತಾದ ಸನ್ನಿವೇಶಗಳಿಂದ ಕೂಡಿದೆ. ಕಲಾವತಿಯ ಮಗನಾದ ಕುಂಡಲಶ್ರವನು ದೇವ, ಮುನಿಜನರಿಂದ ವರವನ್ನು ಪಡೆದು, ಬೃಹದ್ರಥನು ಯುದ್ಧ ರಂಗಕ್ಕೆ ಬರುವಂತೆ ಮಾಡುತ್ತಾನೆ. ವಿಶಿಷ್ಟವಾದ ವ್ಯೂಹವನ್ನು ರಚಿಸಿ, ತಂದೆಯನ್ನು ಸೆರೆಯಲ್ಲಿಟ್ಟು, ತಾಯಿಯ ಬಳಿಗೆ ಕರೆತಂದು ಅವಳ ಪ್ರತಿಜ್ಞೆಯನ್ನು ಪೂರೈಸುತ್ತಾನೆ.

ಹೀಗೆ ಈ ಕಥನದಲ್ಲಿ ರಾಜಮನೆತನಗಳಲ್ಲದೆ, ದೇವತೆ, ಸಿದ್ಧ, ಋಷಿ ಜನರು ಸಹ ಭಾಗವಹಿಸುತ್ತಾರೆ. ಘಟನೆಗಳು ಅಲೌಕಿಕವಾಗಿದ್ದರೂ ಅಸಂಗತವೆನಿಸುವುದಿಲ್ಲ. ವರ್ಣನೆಗಳು ಸಾಕಷ್ಟಿದ್ದರೂ ನಿರೂಪಣೆಯು ಕುಂಠಿತವಾಗಿಲ್ಲ. ಮಾನವಸಹಜವಾದ ಅನೇಕ ನಡೆವಳಿಕೆಗಳನ್ನು ನಾವು ಕಾಣುತ್ತೇವೆ. ಉದಾಹರಣೆಗೆ ಕಲಾವತಿ ಬೃಹದ್ರಥರ ಪ್ರಥಮ ಸಮಾಗಮದಲ್ಲಿಯ ವಿರಸ ಪ್ರಸಂಗ ಹಾಗೂ ಅನಂತರದ ತೊಳಲಾಟದ ಚಿತ್ರಣ, ಈ ಕೃತಿಯು ದಂಡಕವೃತ್ತದಲ್ಲಿದೆ. ಇದನ್ನು ತಿಳಿಯಾದ ಹೊಸಗನ್ನಡದಲ್ಲಿ ಬರೆದದ್ದಾದರೆ ಇಂದಿನ ವಾಚಕರನ್ನು ಸಹ ರಂಜಿಸಬಲ್ಲ ಕೃತಿಯಿದು.

ಮುಂದೆ ಕೆಲವೇ ವರ್ಷಗಳ ಅಂತರದಲ್ಲಿ ಮುಮ್ಮಡಿ ಕೃಷ್ಣರಾಜರಿಂದ ರಚಿತವಾದ (೧೮೨೦) 'ಸೌಗಂಧಿಕಾ ಪರಿಣಯ'ದ ಪರಿಚಯವನ್ನು ನಾವು ಮಾಡಿಕೊಂಡಿದ್ದೇವೆ<೬೩>, ಇದರಲ್ಲಿಯೂ ಸ್ವತಂತ್ರ ಕಲ್ಪನೆಯ ಕಥಾನಕವಿದೆ. ಅದನ್ನು ರಚಿಸಿದವರ ಶಾಸ್ತ್ರ ಪ್ರೌಢಿಮೆ, ವಿಶಾಲ ಅನುಭವ ಮೆಚ್ಚತಕ್ಕುದಾಗಿದೆ. ಭಾಷೆಯ ದೃಷ್ಟಿಯಿಂದ ಅದು 'ಕಲಾವತೀ ಪರಿಣಯ' ದಂತೆ ಹಳಗನ್ನಡದತ್ತ ವಾಲಿರದೆ ಹೊಸಗನ್ನಡಕ್ಕೆ ಸಮೀಪವರ್ತಿಯೆಂಬುದನ್ನು ಗಮನಿಸತಕ್ಕುದು.

ಕೆಂಪುನಾರಾಯಣನ **'ಮುದ್ರಾಮಂಜೂಷ'**ದ ಕಥೆಯು ಐತಿಹಾಸಿಕವಾದುದು (೧೮೨೩). ಅದು ವಿಶಾಖದತ್ತನ 'ಮುದ್ರಾರಾಕ್ಷಸ' ನಾಟಕದ ವಸ್ತುವನ್ನು ೧/೩ ದಷ್ಟು ಒಳಗೊಂಡಿದೆ (೧೮ ಪ್ರಕರಣಗಳಲ್ಲಿ ಕೊನೆಯ ೬ ಪ್ರಕರಣಗಳು ಮಾತ್ರ). ಅಲ್ಲದೆ ನಾಟಕದ ಆಧಾರವನ್ನು ಅವನು ಹೇಳಿಯೂ ಇಲ್ಲ. ಬದಲಾಗಿ 'ಸಂಕ್ಷೇಪವಾಗಿ ಪುರಾಣದಲ್ಲಿ ಹೇಳಿದ ಕಥೆ'ಯನ್ನು ವಿಸ್ತರಿಸಿದ್ದಾಗಿ ಕವಿ ಹೇಳುತ್ತಾನೆ. ನಂದರು, ಚಂದ್ರಗುಪ್ತ ಹಾಗೂ ಕೌಟಿಲ್ಯರ ಕಥೆಯಿರುವ ಪುರಾಣಗಳೆಂದರೆ, ಭಾಗವತ, ವಿಷ್ಣುಪುರಾಣ ಹಾಗೂ ಅಗ್ನಿ ಪುರಾಣ. ಅವುಗಳಲ್ಲಿಯ ೧೦-೨೦ ಪದ್ಯಗಳು ಮಾತ್ರ ಈ ಕಥೆಗೆ ಸಂಬಂಧಿಸಿದವುಗಳು. 'ಕಥಾಸರಿತ್ಸಾಗರ'ದಲ್ಲಿ ಪುರಾಣಗಳಲ್ಲಿಲ್ಲದ ಅನ್ಯ ವಿಷಯಗಳು

ಬಂದಿವೆ (ಪರಕಾಯಪ್ರವೇಶ ಇ.). ಕೆಂಪುನಾರಾಯಣನ ನಿರ್ದಿಷ್ಟವಾದ ಆಕರವೆಂದರೆ, ಮುದ್ರಾರಾಕ್ಷಸ ನಾಟಕದ ವ್ಯಾಖ್ಯಾನಕಾರನಾದ ಧುಂಡಿರಾಜನು ನಾಟಕದ 'ಉಪೋದ್ಘಾತ'ದಲ್ಲಿ ಬರೆದಿರುವ ೬೧ ಪದ್ಯಗಳು. ಇದಷ್ಟೇ ಅವನ ಆಕರವಿದ್ದುದಾದರೆ, ಅದನ್ನು ಎರಡು ನೂರು ಪುಟಗಳಷ್ಟು ಹಿಗ್ಗಿಸಿದುದು ಅವನ ಸ್ವತಂತ್ರ ರಚನಾ ಸಾಮರ್ಥ್ಯದ ನಿದರ್ಶನವೆನ್ನಬೇಕಾಗುತ್ತದೆ.

ಆದರೆ ಮುದ್ರಾರಾಕ್ಷಸ ನಾಟಕದ ಪೂರ್ವ ಕಥೆಯನ್ನು ಹೇಳುವ ಇನ್ನು ಕೆಲವು ಆಕರಗಳಿವೆಯಲ್ಲ ! ಉಪೋದ್ಘಾತದ ಪದ್ಯಗಳಲ್ಲಿಯ ಕಥೆಯನ್ನು ಹೋಲುವ 'ಚಾಣಕ್ಯ ಕಥಾ' ಎಂಬ ಸಂಸ್ಕೃತ ಕಾವ್ಯವನ್ನು ರವಿನರ್ತಕನೆಂಬವನು ಬರೆದಿದ್ದಾನೆ. ಅದರಲ್ಲಿ ರವಿನರ್ತಕನು ತನಗಿಂತ ಪೂರ್ವದಲ್ಲಿದ್ದ ಒಂದು ಗದ್ಯ ಕಥೆಯನ್ನು ಅನುಸರಿಸಿದ್ದಾಗಿ ಹೇಳಿದ್ದಾನೆ. ಆ ಗದ್ಯ ಕಥೆಯೋ ಮಹಾದೇವನೆಂಬವನಿಂದ ವಿರಚಿತವಾದುದೆಂದು ಸಿ. ಕುಂಹನ್ ರಾಜಾ ಅವರು ಊಹಿಸುತ್ತಾರೆ.[೧] ಅಲ್ಲದೆ ರವಿನರ್ತಕನ ಕೃತಿಯು ಮಲೆಯಾಳೀ ಭಾಷೆಯಲ್ಲಿ ಸಹ ಇದೆಯಂತೆ. ಹೀಗೆ ಚಂದ್ರಗುಪ್ತ – ಚಾಣಕ್ಯ ಕಥೆಯು ದಕ್ಷಿಣ ಭಾರತದಲ್ಲಿ ಜನಜನಿತವಾಗಿದ್ದಿತೆಂದೂ ಅವರು ಹೇಳುತ್ತಾರೆ.

ಇತ್ತ ಉತ್ತರ ದೇಶದಲ್ಲಿ ಅನಂತದೇವನೆಂಬುವನು (ಕ್ರಿ.ಶ. ೧೫ನೆಯ ಶತಮಾನ) 'ಪೂರ್ವ ಸಂಕಥಾನಕಾ' ಎಂಬ ತನ್ನ ಕೃತಿಯಲ್ಲಿ ಮುದ್ರಾರಾಕ್ಷಸ ನಾಟಕದ ಪೂರ್ವ ಕಥೆಯನ್ನು ಹೇಳಿದ್ದಾನೆ. ಇನ್ನೊಬ್ಬ ಅನಾಮಧೇಯನ ಕೃತಿಯೂ ಇದ್ದು, ಅವೆರಡನ್ನೂ ಬಿಕಾನೇರದ ಅನೂಪ ಸಂಸ್ಕೃತ ಲೈಬ್ರರಿಯವರು ಪ್ರಕಟಿಸಿದ್ದಾರೆ. ಮೇಲಣ ಎಲ್ಲ ವಿವರಗಳ ತಾತ್ಪರ್ಯವೆಂದರೆ, ನಂದ, ಚಂದ್ರಗುಪ್ತ, ಚಾಣಕ್ಯ ಹಾಗೂ ಮಂತ್ರಿ ರಾಕ್ಷಸ– ಇವರ ಕಥೆಯು ಭಾರತಾದ್ಯಂತ ಪ್ರಚಲಿತವಿದ್ದಿತು. ಅದರ ಉತ್ತರಾರ್ಧದ ಕತೆಯನ್ನಷ್ಟೆ ವಿಶಾಖದತ್ತನು ನಾಟಕರೂಪವಾಗಿ ಬರೆದದ್ದನ್ನು, ಗುಪ್ತಕಾಲೀನ ಜನಕ್ಕೆ ಅದರ ಪೂರ್ವಕಥೆಯ ಚೆನ್ನಾದ ಪರಿಚಯವಿದ್ದಿತು. ಮುಂದಿನ ಪೀಳಿಗೆಯವರಿಗಾಗಿ ಅನಂತದೇವ, ಧುಂಡಿರಾಜ ಮುಂತಾದವರು ಆ ಪೂರ್ವ ಕಥೆಯನ್ನು ಕೊಟ್ಟಿರಬೇಕು. ಧುಂಡಿರಾಜನ ಕಾಲದಲ್ಲಿಯೇ ಇದ್ದ ತಂಜಾವೂರಿನ ಸರ್ಫೋಜಿರಾಯನೂ ಮುದ್ರಾರಾಕ್ಷಸ ನಾಟಕಕ್ಕೆ ಪೀಠಿಕೆ, ಟಿಪ್ಪಣಿಗಳನ್ನು ಬರೆದಿದ್ದಾನೆಂದು ತಿಳಿಯುತ್ತದೆ.

ಪುರಾಣಗಳನ್ನಲ್ಲದೆ ಕೆಂಪುನಾರಾಯಣನು ಮೇಲೆ ಹೇಳಿದ ಒಂದೆರಡು ಕೃತಿಗಳನ್ನಾದರೂ ನೋಡಿರಬೇಕು. ಹಾಗೆ ಹೇಳಿದರೂ ಸ್ವಕಲ್ಪನೆಯ ವಿಷಯಗಳನ್ನು ಸೇರಿಸಿದುದರಲ್ಲಿಯ ಅವನ ಯೋಗ್ಯತೆಗೆ ಕುಂದಿಲ್ಲ.* ಮುಖ್ಯತಃ ಅತೀಂದ್ರಿಯ ಹಾಗೂ ಅವಾಸ್ತವವೆನಿಸಿದವುಗಳನ್ನು ತಮ್ಮ ಕಥಾನಕದಲ್ಲಿ ಬಿಟ್ಟು ಕೊಟ್ಟು ಕೆಂಪುನಾರಾಯಣನು

---

* ವಾಗ್ಭೂಷಣದ ಸಂ.೩೧ (೧೯೨೮), ಪು.೩–೧೨ರಲ್ಲಿ ಬಂದ ಲೇಖ ಮತ್ತು ಪರಿಷತ್ಪತ್ರಿಕೆಯ ಅಕ್ಟೋಬರ್ ೧೯೩೨, ಪು.೨೦೦–ರಿಂದ ಬಂದ ಲೇಖಗಳಲ್ಲಿ ಈ ಕುರಿತ ವಿವರಗಳಿವೆ.

ಹೊಸ ದೃಷ್ಟಿಯನ್ನು ತೋರಿಸಿದ್ದಾನೆ. ಈ ಬಗೆಯ ಸ್ವಂತಿಕೆಯು ಪ್ರತಿಪುಟದಲ್ಲಿಯೂ ಒಡೆ ತೋರುತ್ತದೆ. ಇದರಿಂದಾಗಿಯೂ, ರಾಜನೀತಿಯ ಚಾತುರ್ಯವನ್ನು ಬಿಂಬಿಸುವ ಕೃತಿಯಾದುದರಿಂದಲೂ ಈ ಕೃತಿಯು ಓದುಗರ ಮನಸ್ಸನ್ನು ಚೆನ್ನಾಗಿ ಸೆರೆ ಹಿಡಿಯುತ್ತದೆ. ಅವನು ಚಿತ್ರಿಸಿದ ಪಾತ್ರಗಳನ್ನು ನೋಡಿದಾಗ ಮಾನವ ಸ್ವಭಾವದ ಚಿತ್ರಣದಲ್ಲಿ ಅವನು ಪಳಗಿದವನೆನಿಸುತ್ತದೆ. ಒಟ್ಟಿನಲ್ಲಿ ಇದನ್ನು ಹೊಸಗನ್ನಡದ ಪ್ರಥಮ ಸ್ವತಂತ್ರ ಐತಿಹಾಸಿಕ ಕಾದಂಬರಿಯೆಂದು ವಿಶೇಷಿಸತಕ್ಕದ್ದು.+

ಕೆಂಪುನಾರಾಯಣನ ಶೈಲಿಯು ಪಂಡಿತರ ಗದ್ಯ ಶೈಲಿಯಲ್ಲಿರದೆ. ಕಥನಕ್ಕೆ ಸೂಕ್ತವಾದ ಸರಳ ಹಾಗೂ ನೇರವಾದ ಮಾರ್ಗವನ್ನು ಅನುಸರಿಸಿ ಹೊಸಗನ್ನಡದ ಹೊಸ್ತಿಲಲ್ಲಿ ಕಾಲಿಟ್ಟಿದೆ. ಆದರೆ ಶೈಲಿಯು ಏಕರೂಪವಾಗಿಲ್ಲ; ಸಂಧಿಕಾಲದ ವಿಷಮಿಕೆಯನ್ನು ಒಳಗೊಂಡಿದೆ. ಒಮ್ಮೆ ಪ್ರೌಢವಾದರೆ ಒಮ್ಮೆ ಸರಳವಾಗಿದೆ. ಹಳಗನ್ನಡ, ಹೊಸಗನ್ನಡ ವ್ಯಾಕರಣ ರೂಪಗಳ ವಿಚಿತ್ರ ಮಿಶ್ರಣವಿದೆ.[೨]

ಕನ್ನಡ ಕಾದಂಬರೀ ಪ್ರಪಂಚಕ್ಕೆ ಇಂಗ್ಲಿಷ್ ಭಾಷೆ, ಸಾಹಿತ್ಯಗಳ ಸಂಪರ್ಕವೇ ಪ್ರಮುಖ ಪ್ರೇರಣೆಯೆಂಬುದು ಸರಿಯೇ. ಆ ಸಂಪರ್ಕವು ಒಂದು ವೇಳೆ ಬಾರದೇ ಹೋಗಿದ್ದರೆ ಹೊಸ ಕಾದಂಬರಿಗಳು ನಮ್ಮಲ್ಲಿ ಉದಯಿಸುತ್ತಿರಲಿಲ್ಲವೆಂದು ಹೇಳಬೇಕಿದ್ದಿತ್ತೆ? ಪರಿಸ್ಥಿತಿ ಹಾಗಿಲ್ಲವೆನ್ನುವುದಕ್ಕೆ ಪಾಶ್ಚಾತ್ಯ ಸಂಪರ್ಕವೆಳ್ಳಷ್ಟೂ ಇದ್ದಿರದ ಮೇಲಣ ಮೂರು ಕೃತಿಗಳು ಸಾಕ್ಷಿಯಾಗಿವೆ. ಕನ್ನಡ ಕಥನ ಸಾಹಿತ್ಯದ ಮನ್ನಡೆಯಲ್ಲಿ ಇವು ಮೂರು ಅಚ್ಚಳಿಯದ ಹೆಜ್ಜೆಗಳಾಗಿವೆ.

## 831 ಅನ್ಯ ಭಾಷೆಗಳಿಂದ

ಇಂಗ್ಲಿಷ್ ಸಾಹಿತ್ಯದ, ಅದರಲ್ಲಿಯೂ ಕಾದಂಬರಿಯ ಸಂಪರ್ಕ ಬಂದದ್ದರ ಮೊದಲ ಫಲವೆಂದರೆ ಎಸ್.ಬಿ. ಕೃಷ್ಣಸ್ವಾಮಿ ಅಯ್ಯಂಗಾರ್ ಅನುವಾದಿಸಿದ ರಾಬಿನ್‌ಸನ್ ಕ್ರೂಸೋ ಕಾದಂಬರಿ (೧೮೫೭). ಕಥಾನಾಯಕನ ಸಾಹಸ ಗುಣವೇ, ಮೂಲ ಕೃತಿಯ ಅನುವಾದಕ್ಕೆ ಪ್ರೇರಣೆ ಇತ್ತಿರಬೇಕು. ಇಂಗ್ಲಿಷ್‌ನಿಂದ ಬಂದ ಇನ್ನೊಂದು ಕಾದಂಬರಿ 'ನಿರ್ಭಾಗ್ಯ ಮುರಾದ' ಪ್ರಪಂಚದಲ್ಲಿ ಅದೃಷ್ಟವೇ ಜಯಾಪಜಯಕ್ಕೆ ಕಾರಣವಲ್ಲ,

---

+ ಕೆಂಪುನಾರಾಯಣನ ಕೃತಿಯನ್ನು ಸಂಪಾದಕನಾದ ಜೆ. ಸ್ಟೀವೆನ್ಸನ್ ಸಾಕಷ್ಟು ತಿದ್ದಿದ್ದಾನೆ. ಕೆಲವು ವಿಷಯಗಳನ್ನು ಬಿಟ್ಟಿದ್ದಾನೆ. (really objectionable parts have been omitted; extravagancies sobered down and tedious details condensed so as to utilize a really valuable narrative). ಈಚೆಗೆ ನನ್ನ ತರುಣ ಮಿತ್ರರಾದ ಡಾ. ಶಂಕರನಾರಾಯಣ ಉಡುಪರು, ಮುದ್ರಾಮಂಜೂಷದ ಹಸ್ತಪ್ರತಿಗಳನ್ನು ಪರಿಶೀಲಿಸಿ, ಇಡೀ ಮುದ್ರಾಮಂಜೂಷದ ಸಮಗ್ರ ಅಧ್ಯಯನ ಕೈಕೊಂಡು ಪಿಎಚ್.ಡಿ ಪದವಿ ಪಡೆದಿದ್ದಾರೆ. ಮುದ್ರಾಮಂಜೂಷವು ಟಿ.ವಿ ವೆಂಕಟಾಚಲಶಾಸ್ತ್ರಿಗಳಿಂದ ಪುನಃ ಸಮರ್ಪಕವಾಗಿ ಸಂಪಾದಿತವಾಗಿದೆ (೧೯೯೯).

ವಿವೇಕ ಮುಖ್ಯ ಎಂಬುದನ್ನು ಬಿಂಬಿಸಲು ಮಿಸ್ ಎಜ್‌ವರ್ಥ್ ಎಂಬವಳ ಕೃತಿಯನ್ನು ಬಾಪು ಸುಬ್ಬರಾಯರು ಕನ್ನಡದಲ್ಲಿ ತಂದರು. ಹೆಸರಿಸಬೇಕಾದ ಇನ್ನೊಂದು ಕಾದಂಬರಿ 'ಸುಮತಿ ಹಾಗೂ ಮದನಕುಮಾರರ ಚರಿತ್ರೆ', ಥಾಮಸ್ ಡೇ ಇವನ Sandford & Martin ಕೃತಿಯನ್ನು ಎಂ.ಎಸ್. ಪುಟ್ಟಣ್ಣ ಅನುವಾದಿಸಿದ್ದಾರೆ (೧೮೯೭). ಅದರಲ್ಲಿ ಮನರಂಜನೆಯ ದೃಷ್ಟಿಯಿರದೇ, ಮಕ್ಕಳಿಗೆ ಸರಿಯಾದ ಶಿಕ್ಷಣ ದೊರೆತು ಅವರು ಸದಾಚಾರಿಗಳೂ ಧ್ಯೇಯನಿಷ್ಠರೂ ಆಗಿರಬೇಕೆಂಬುದನ್ನು ಬೋಧಿಸುವ ದೃಷ್ಟಿಯು ಕಂಡುಬರುತ್ತದೆ. ಮೂಲ ಕೃತಿಯ ಭಾರತೀಕರಣದಲ್ಲಿ ಅನುವಾದಕರು ಆಭಾಸಕ್ಕೆ ಅವಕಾಶವಿತ್ತಿಲ್ಲ.

ಇನ್ನೀಗ ಸಂಸ್ಕೃತ ಬಾಣ ಕಾದಂಬರಿಯು ಮುದ್ರಿತವಾಗಿ ಪ್ರಸಾರದಲ್ಲಿದ್ದಿತೆಂಬುದಂತೂ ಸರಿಯೆ. ಸಿದ್ಧಾಂತಿ ಶಿವಶಂಕರಶಾಸ್ತ್ರಿ, ಕೃಷ್ಣಾಚಾರ್ಯ ಗರಣಿ ಮೊದಲಾದವರು ವಿದ್ಯಾರ್ಥಿಗಳಿಗಾಗಿ ತಿಳಿಯಾದ ಕನ್ನಡದಲ್ಲಿ ಅದನ್ನು ಸಂಕ್ಷೇಪಿಸಿದ್ದಾರೆ. ಕಾವ್ಯಕಲಾನಿಧಿ ಮಾಲೆಯಲ್ಲಿ ಕನ್ನಡ ವಚನ ಕಾದಂಬರಿಯೆಂಬುದು ಪ್ರಕಟವಾಗಿದ್ದು (೧೯೦೧), ಅದರ ರಚನಾ ಕಾಲವನ್ನು ಸಂಪಾದಕರು ೧೮ನೆಯ ಶತಮಾನವೆಂದು ಊಹಿಸಿದ್ದಾರೆ. ಆದರೆ ಇದರ ಭಾಷಾ ಶೈಲಿಯು ಹೊಸಗನ್ನಡಕ್ಕೆ ಹೆಚ್ಚು ಸಮೀಪವರ್ತಿಯಾಗಿದ್ದು ಇತರ ಪುರಾಣ, ಕಾವ್ಯ ನಾಟಕಗಳಂತೆ ಇದು ಕೂಡ, ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿಯೇ ರಚಿತವಾದುದು; ಮತ್ತು ಅವರಿಗೆ ನಾಮಾಂಕಿತವಾದುದು ಎಂದು ತಿಳಿಯುತ್ತೇವೆ. ಇತ್ತ **ಗಂಗಾಧರ ಮಡಿವಾಳೇಶ್ವರ ತುರಮರಿ**ಯವರ ಅನುವಾದವು ೧೮೭೫ರ ಸುಮಾರಿಗೆ ಹೊರಬಂದಿತು. ೧೯ನೆಯ ಶತಮಾನದ ಕನ್ನಡ ಬಾಣ ಕಾದಂಬರಿಗಳಲ್ಲಿ ಇವೆರಡು ಮಹತ್ವವಾದ್ದರಿಂದ ಅವುಗಳ ಸ್ವರೂಪವೆಂತೆಬುದನ್ನು ನೋಡೋಣ.

ಬಾಣನದು ಅತಿ ಕ್ಲಿಷ್ಟವಾದ ಗದ್ಯ. ಅಲ್ಲದೆ ಶ್ಲೇಷಾಲಂಕಾರಗಳಿಂದ ನಿಬಿಡವಾದುದು. ಕನ್ನಡ ವಾಚಕರಿಗೆ ತಾಪದಾಯಕವಾಗುವ ಇಂಥ ಅಂಶಗಳನ್ನು ಬಿಟ್ಟು ಕೊಟ್ಟು ಲಲಿತ ಹಾಗೂ ಹೃದ್ಯವಾದ ವರ್ಣನೆಗಳಿಗೆ ಮಾತ್ರ ಅವಕಾಶವಿತ್ತು, ಕಥೆಯನ್ನು ಮನ್ನಡೆಸಿಕೊಂಡು ಹೋಗುವುದರಲ್ಲಿ ಇಬ್ಬರೂ ವಿಶೇಷ ಗಮನವಿತ್ತಿದ್ದಾರೆ. ಹೀಗೆ ಸಂಗ್ರಹ ವೃತ್ತಿಯು ಎದ್ದು ಕಾಣುತ್ತಿದ್ದರೂ ಸಂಕ್ಷೇಪಗೊಳಿಸಿದ ಅಂಶಗಳು ಮಾತ್ರ ಬೇರೆ ಬೇರೆಯಾಗಿವೆ. ಗಿಳಿಯ ಕಥನ, ಚಂದ್ರಾಪೀಡ-ವೈಶಂಪಾಯನರ ಬಾಲ್ಯ, ಮಹಾಶ್ವೇತೆ-ಪುಂಡರೀಕರ, ಅದರಂತೆ ಕಾದಂಬರಿ-ಚಂದ್ರಾಪೀಡರ ಪ್ರಣಯ-ಇವು (ಪೂರ್ವಭಾಗದ) ಕಾದಂಬರಿಯ ಮುಖ್ಯ ಘಟನೆಗಳಷ್ಟೆ. ತುರಮರಿಯವರು ಇವು ನಾಲ್ಕಕ್ಕೂ ಸಮಾನ ಮಹತ್ವ ಕೊಟ್ಟಿರುವದಾದರೆ ವಚನ ಕಾದಂಬರಿಕಾರನು ಗಿಳಿಯ ಕಥನ ಮತ್ತು ಚಂದ್ರಾಪೀಡನ ಬಾಲ್ಯದ ವರ್ಣನೆಯ ಭಾಗವನ್ನು ೮-೧೦ ಪುಟಗಳಲ್ಲಿ ಮುಗಿಸಿ, ಮುಂದಿನ ೭೦

ಪುಟಗಳನ್ನು ಪ್ರಣಯೀ ಜನರ ವರ್ಣನೆಗೆ ಮೀಸಲಿರಿಸಿದ್ದಾನೆ. ಅದುವೆ ಕಾದಂಬರೀ ಕಥೆಯ ತಿರುಳು ತಾನೆ. ಶೈಲಿಯ ದೃಷ್ಟಿಯಿಂದ ಹೇಳುವುದಾದರೆ ವಚನ ಕಾದಂಬರಿಕಾರನು ಱ, ೞ ಸಹಿತವಾದ ಹಳಗನ್ನಡ ಶೈಲಿಯನ್ನು ಪೂರ್ಣವಾಗಿ ಬಿಡಲೊಲ್ಲನು ಮತ್ತು ಸಂಸ್ಕೃತ ಶಬ್ದಗಳನ್ನು ಹೆಚ್ಚಾಗಿ ತಂದಿದ್ದಾನೆ. ಅದೇ ತುರಮುರಿಯವರದು ದಿನಬಳಕೆಯ ನುಡಿಗಳಿಂದ ಕೂಡಿದ್ದು, ಹೆಚ್ಚು ತಿಳಿಯಾಗಿದೆ. ಅವರಿಬ್ಬರ ಶೈಲಿಯ ಈ ಮಾದರಿಗಳನ್ನು ನೋಡಬಹುದು. ಮಹಾಶ್ವೇತೆಯ ದಾಸಿಯಾದ ತರಲಿಕೆಯ ಮೂಲಕ ಪುಂಡರೀಕನು ಪ್ರೇಮಪತ್ರವನ್ನು ಕಳುಹಿಸುವ ಸಂದರ್ಭವಿದು :–

**ಕನ್ನಡ ವಚನ ಕಾದಂಬರಿ :** 'ಆಮೇಲೆ ಆ ಮುನಿಯು ಅದೇನನೂ ಒಡಂಬಡಿಸುವಂತೆ ನನ್ನೊಂದಿಗೆ ನುಡಿದುದು; ಹೆಣ್ಣೆ, ಇನ್ನು ನಿನ್ನ ಆಕಾರವ ನೋಡಿದರೆ ಬಾಲ್ಯ ಆದರೂ ಮನಸ್ಸಿನಲ್ಲಿ ಕದುಬು ಇಲ್ಲ, ಮೋಸವಿಲ್ಲ ಎಂಬ ಹಾಗೆ ಕಾಣಿಸುತ್ತದೆ. ನಾವು ಹೇೞುದ ಮಾತನ್ನು ಕೇಳೀಯಾ? ಎನ್ನಲಾಗಿ ; ಅದಕ್ಕೆ ನಾನು ವಿನಯದಿಂದ ಕೈಮುಗಿದು ಆದರಗೂಡಿ ತಿಳುಹಿದುದು; ಏನು ಕಾರಣ ಹೀಗೆ ಬುದ್ಧಿಗಲಿಸುತ್ತೀರಿ? ನಾನು ಎಷ್ಟಱವಳು? ಈ ಮೂಱು ಲೋಕದಲ್ಲಿಯೂ ಪೂಜೆಗೊಂಬ ನಿಮ್ಮಂಥ ಮುನಿಗಳು ನಮ್ಮಂಥವರನ್ನು ಕಟಾಕ್ಷಿಸುವುದೆ ನಾವು ಮಾಡಿದ ಪುಣ್ಯ. ಒಂದು ಊೞಿಗವ ಕೊಟ್ಟು ಮಾಡಿಸಿರಿ ಎಂದು ಹೇೞುವುದೇನು? ಆದುದರಿಂದ ಅವಶ್ಯ ನಾನು ಮಾಡತಕ್ಕ ಸೇವೆಯನ್ನು ಬುದ್ಧಿಗಲಿಸಿ ನನ್ನಲ್ಲಿ ಕೃಪೆ ಮಾಡಬೇಕೆಂದು ಬಿನ್ನಹ ಮಾಡಲಾಗಿ; ಅವರು ಬಹು ಸ್ನೇಹಗೂಡಿ ನನ್ನನ್ನು ತಮ್ಮ ಸಖಿಯಂತೆ, ತಮಗೆ ಉಪಕಾರ ಮಾಡಿದವಳಂತೆ ತಮಗೆ ಪ್ರಾಣಪದವಾಗಿ ಎಣಿಸಿ, ಸಮೀಪದಲ್ಲಿರುವ ಕದ್ದಾಳೆಯ ಮರದ ಚಿಗುರುಗಳ ಕೊಯ್ದು ಅವನ್ನು ನಲಗಿಸಿ ಹಿಂಡಿ, ತಾನುಟ್ಟಿರುವ ನಾಱುಸೀರೆಯ ಸೆರಗಿನಲ್ಲಿ ಒಂದಿಷ್ಟು ಅಗಲವ ಹಱಿದು ಒಂದು ಪದ್ಯವ ಬರೆದು, ಆರೂ ಅಱಿಯದಂತೆ ಇದನ್ನು ಈಗ ಬಂದಿದ್ದ ಕನ್ನೆವೆಣ್ಣಿನ ಕೈಯಲ್ಲಿ ಕೊಡು, ಎಂದು ನನ್ನ ವಶಕ್ಕೆ ಕೊಟ್ಟು ಇದ್ದಾರೆ ; ಅದನ್ನು ನೀವು ನೋಡಿಕೊಳ್ಳಿ–ಎಂದು ತಾನು ಕಟ್ಟಿರುವ ಸಂಚಿನೊಳಗಿನಿಂದ ತೆಗೆದು ನನ್ನ ಕೈಯಲ್ಲಿ ಕೊಡಲಾಗಿ.' (ಪು.೨೦–೨೧)

ಇದೀಗ ತುರಮುರಿಯವರ ಅನುವಾದ : 'ಅದನ್ನು ಕೇಳಿ ಸ್ವಲ್ಪ ಹೊತ್ತು ಸುಮ್ಮನೆ ನಿಂತು ಆಲೋಚಿಸಿ ನನ್ನ ಮುಖ ನೋಡಿ "ತಂಗೀ ನೀನು ಸಣ್ಣವಳಾದರೂ ಬಹು ಜಾಣಳಿದ್ದೀ; ನನ್ನದೊಂದು ಮಾತು ಕೇಳುವೆಯಾ?" ಅಂದನು. ಆಗ ನಾನು ಆತನಿಗೆ ನಮ್ರ ಭಾವದಿಂದ ಕೈಮುಗಿದು, "ಸ್ವಾಮೀ, ತಮ್ಮಂಥ ಮಹಾತ್ಮರ ದರ್ಶನವಾಗುವದೇ ಪರಮ ಪುಣ್ಯವು. ಆದರೊಳಗೆ ತಮ್ಮ ಆಜ್ಞಾರೂಪ ಪ್ರಸಾದ ದೊರೆತ ಬಳಿಕ ನಾನು ಕೃತಾರ್ಥಳೇ ಸರಿ. ಇದೇನು, ತಮ್ಮ ಮಾತು ? ಸೇವಕಳಿಗೆ ಅರುಹ ಬೇಕು" ಅಂದೆನು. ನನ್ನ ಮಾತು ಕೇಳಿ ಆತನು ಆನಂದಪಟ್ಟು ಬಳಿಯಲ್ಲಿದ್ದ ತಮಾಲ ವೃಕ್ಷದ ಎಳೆದಳಿರುಗಳನ್ನು,

ತಕ್ಕೊಂಡು ತಿಕ್ಕಿ ರಸ ತೆಗೆದು, ತನ್ನ ಉತ್ತರೀಯದ ಸೆರಗು ಹರಿದು ಆ ತುಣಕಿನ ಮೇಲೆ ಆ ರಸದಿಂದ ತನ್ನ ಕಿರಿ ಬೆರಳಿನಿಂದ ಈ ಪತ್ರಿಕೆ ಬರೆದು, "ಇದನ್ನು ಆ ಕನ್ನಿಕೆಗೆ ಏಕಾಂತದಲ್ಲಿ ಕೊಡು" ಎಂದು ನನ್ನ ಕೈಯಲ್ಲಿ ಕೊಟ್ಟನು.' (ಪು .೬೮-೬೯, ೫ನೆಯ ಆವೃತ್ತಿ)

ಕನ್ನಡ ವಚನ ಕಾದಂಬರಿಯ ರಚನಾ ಕಾಲಕ್ಕೂ ತುರಮರಿಯವರ ಅನುವಾದದ ವರ್ಷಕ್ಕೂ ಸುಮಾರು ಅರ್ಧ ಶತಮಾನದಷ್ಟು ಅಂತರವಿದೆಯೆಂಬುದನ್ನು ನೆನೆದಿರಬೇಕು. ಕನ್ನಡ ಕಥನ ಸಾಹಿತ್ಯವು ಇಂದಿನ ಹೊಸಗನ್ನಡ ಶೈಲಿಯೆಡೆಗೆ ಧಾವಿಸುತ್ತ ಮುಂದುವರಿದುದಕ್ಕೆ ತುರಮರಿಯವರದು ನಿದರ್ಶನವಾಗಿದೆ.

ತುರಮರಿಯವರು ಸನ್ನಿವೇಶವೊಂದರ ಸಣ್ಣ ಸಣ್ಣ ಅಂಶಗಳನ್ನೂ ಹೇಳಿ, ಅದು ನಮ್ಮ ಕಣ್ಣಿಗೆ ಕಟ್ಟುವಂತೆ ವಿವರಿಸುವಲ್ಲಿ ನಿಸ್ಸೀಮರೆನ್ನಬಹುದು. ಮೇಲಣ ಪತ್ರವನ್ನು ಓದಿಯಾದ ಮೇಲೆ ಮಹಾಶ್ವೇತೆಯ ಮನಸ್ಥಿತಿಯನ್ನು ವರ್ಣಿಸಿದ ಬಗೆ ಇಂತಿದೆ :

"ನನ್ನ ದಾಸಿಯು ಎರಡನೇ ಸಾರಿ ಆ ಋಷಿಕುಮಾರನ ದರ್ಶನ ತಕ್ಕೊಂಡು ಆತನ ಕೂಡ ಮಾತಾಡಿ ಬಂದದರಿಂದ ಅವಳು ಅತಿ ಭಾಗ್ಯವಂತಳೆಂದು ಎಣಿಸಿದೆನು. ದಾಸಿಯಾದರೂ ಅಕೆಯ ಕೂಡ ಆದರದಿಂದಲೂ ಪ್ರೀತಿಯಿಂದಲೂ ಮಾತಾಡಿದೆನು. ಆಕೆಯನ್ನು ಜೀವದ ಗೆಳತಿಯನ್ನು ಮಾಡಿಕೊಂಡು ಗಲ್ಲವ ಹಿಡಿದು, ಮುಂಗುರುಳು ತೀಡಿ, ತರಲಿಕೇ, ಆ ಋಷಿಕುಮಾರನು ಮತ್ತೇನೇನು ಅಂದನು? ನೀನು ಎಷ್ಟು ಹೊತ್ತು ಆತನ ಬಳಿಯಲ್ಲಿದ್ದಿ? ಆತನು ಎಲ್ಲಿಯ ತನಕ ನಮ್ಮ ಹಿಂದಿಂದೆ ಬಂದನು? ಎಂದು ಮತ್ತೆ ಮತ್ತೆ ಅ ಋಷಿಕುಮಾರನ ಮಾತುಗಳನ್ನೇ ಆಕೆಯ ಕೂಡ ಆಡುತ್ತ ಸೌಧಾಗ್ರದ ಮೇಲೆಯೇ ಸಂಜೆಯ ತನಕ ಹೊತ್ತಗಳೆದೆನು." (ಪು. ೬೯-೭೦).

ಇಂಥ ಬಿಚ್ಚುಮಾತಿನ ಪ್ರಸಾದ ಗುಣದ ಶೈಲಿಯನ್ನೇ ನಾವು ಮುಂದೆ ಗಳಗನಾಥರಲ್ಲಿ ಕಾಣುತ್ತೇವೆ.

ಭಾರತದ ಇತರ ಪ್ರದೇಶ ಭಾಷೆಗಳಿಂದ ಕಾದಂಬರಿಗಳು ಕನ್ನಡಕ್ಕೆ ಅನುವಾದಗೊಳ್ಳತೊಡಗಿದುವು. ಅವುಗಳಲ್ಲಿ ಮೊತ್ತ ಮೊದಲಿನ ಕೃತಿಯೆಂದರೆ ಬಾಬಾ ಪದಮಂಜಿಯ 'ಯಮುನಾಬಾಯಿಯ ಸಂಚಾರ' (ಬಾಸೆಲ್ ಮಿಶನ್ : ೧೮೬೯). ೧೮೫೫ರಲ್ಲಿ ಮೊದಲು ಹೊರಬಂದ ಈ ಕೃತಿಯು ಮರಾಠಿಯಲ್ಲಿಯ ಪ್ರಥಮ ಕಾದಂಬರಿ ಎನಿಸಿದೆ. ಯಮುನಾ ವಿನಾಯಕನನ್ನು ಮದುವೆಯಾಗಿ ಅತ್ತೆಯ ಮನೆಗೆ ಬಂದಾಗಿನಿಂದ ಇದರ ಕಥೆಯ ಆರಂಭ. ಅವಳು ಒಂದು ದಿನ ಅಕ್ಕಿಯನ್ನು ಆರಿಸುತ್ತಿದ್ದಾಗ, ಅತ್ತೆಯು ಜೊತೆಗೂಡುತ್ತಾಳೆ. ಬಳಿಯಲ್ಲಿ ನಾದಿನಿಯೂ ಇದ್ದುಕೊಂಡು 'ಒಂದೊಂದು ಅಕ್ಕೀ ಕಾಳನ್ನು ಆರಿಸುತ್ತಿದ್ದಾಗ', ಈ ಕೆಳಗಿನಂತೆ ಸಂಭಾಷಣೆ ನಡೆಯುತ್ತದೆ :

ಅತ್ತೆ (ಮಗಳಿಗೆ) : ಗಂಗೀ, ನಿನ್ನಿನ ಹೋಳಿಗೆ ಇನ್ನೂ ಯಾಕೆ ತೀರಿಸಲಿಲ್ಲ? ನಿಮ್ಮ ಹುಡುಗರ ಕೆಲಸ ಇದೇ ಅಲ್ಲವೇ? ಮನೆಯಲ್ಲಿ ಇರುವಾಗ ತಿನ್ನಲಿಕ್ಕಿಲ್ಲ ; ಮಂದಿ ಮನೆಯಲ್ಲಿಯಾದರೆ, ನಿಮ್ಮ ನಾಲಿಗೆಯ ಮೇಲ ನೀರು ಒಡಿಯುತ್ತದೆ. ಯಮುನಾ, ಒಳ್ಳೇ ನೆನಪಾಯಿತು. ನಿನ್ನೆ ನಾನು ವಿಟ್ಠೂಗೆ ಸ್ವಲ್ಪ ಅನ್ನ, ಕಲ್ಸಿ ಬಟ್ಟ ತುಂಬ ಕಾಯಿಪಲ್ಯ ನೀಡಿ, ಹೋಳಿಗೆ ಉಳಿಯಲಿಲ್ಲೆಂದು ಹೇಳಂತಾ ನಿನಗೆ ಹೇಳಲಿಲ್ಲವೆ? ಅದನ್ನು ಕೇಳದೆ ಹೋಳಿಗೆ ಅವೆ ಅಂತಾ ಅವನಿಗ್ಯಾಕೆ ಹೇಳಿದಿ?"

ಯಮುನಾ (ಮೆಲ್ಲಗೆ) : ಅವನು ಕೇಳಿದ ಮೇಲೆ ನಾನು ಇಲ್ಲವೆಂದು ಹ್ಯಾಗೆ ಹೇಳಲಿ? ಹೇಳಿದರೆ ನನ್ನ ಕಡಿಗೆ ಸುಳ್ಳಾಡಿದ ಅಪರಾಧ ಬರುತ್ತಿತ್ತು.

ಅತ್ತೆ : ಎಂಥಾ ಸತ್ಯ ಚಿನ್ನದ ಕಣಿಯೇ ನನಗೆ ಶಿಕ್ಕಿತವ್ವಾ! ಅಮ್ಮಮ್ಮಾ! ಹುಡುಗಿಯರ ಜಾತಿ, ಹೇಳಿದ್ದನ್ನು ಸುಮ್ಮನೆ ಕೇಳಬೇಕು. ಇಲ್ಲದ್ದು ತಕ್ಕೊಂಡು ಕೂಡ್ರಬಾರದು.

ಗಂಗಿ : ಈಕೆ ಯಾವಾಗಲೂ ಹೀಗೇ ಮಾಡುತ್ತಾಳವ್ವಾ, ಮೊನ್ನಿನ ದಿವಸ ಯಾರೋ ಒಬ್ಬ ಗೃಹಸ್ಥ ಅಪ್ಪನ್ನ ಕೇಳಲಿಕ್ಕೆ ಬಂದಿದ್ದ. ಅಪ್ಪನು ಮೊದಲಾಗಿ ನಮ್ಮಿಬ್ಬರಿಗೂ, ಯರಾದರೂ ಬಂದು ನನ್ನನ್ನು ಕೇಳಿದರೆ ನಾನು ಮನೆಯಲ್ಲಿ ಇಲ್ಲವೆಂತ ಹೇಳಿರೆಂದು ಹೇಳಿದ್ದ. ಆದರೂ, ಅವನು ಮಲಗಿದ್ದಾನೆಂದು ಈಕೆ ಹೇಳಿದಳು.

ಸಾಮಾನ್ಯ ಹಿಂದೂ ಕುಟುಂಬದಲ್ಲಿ ಡಂಭಾಚಾರವಿರುವದೆಂದೂ, ಮನದಲ್ಲಿ ಕ್ರೈಸ್ತಮತ ಪ್ರೀತಿಯುಳ್ಳಂಥ ಯಮುನೆಯು ಸತ್ಯಪ್ರಿಯೆ ಯೆಂಬುದನ್ನೂ, ಈ ಸಂಭಾಷಣೆಯ ಮೂಲಕ ಕಾದಂಬರಿಕಾರನು ಒಳ್ಳೇ ಜಾಣ್ಮೆಯಿಂದ ತೋರಿಸಿದ್ದಾನೆ. ಅವರ ಉದ್ದೇಶ ಏನೇ ಇರಲಿ, ಮಾನವ ಸ್ವಭಾವದ ನಿರೀಕ್ಷಣೆ ಮತ್ತು ವಾಸ್ತವತೆ – ಇವು ಸುಸ್ಪಷ್ಟವಾಗಿ ಈ ಕಾದಂಬರಿಯಲ್ಲಿ ವ್ಯಕ್ತವಾಗಿವೆ. ಮುಂದೆ ಯಮುನೆಯು ತನ್ನ ಗಂಡನೊಂದಿಗೆ ಪರ್ಯಟನಕ್ಕೆ ಹೊರಟು ಧಾರವಾಡ, ನಾಗಪುರ, ರತ್ನಾಗಿರಿ ಮುಂತಾದ ಊರುಗಳನ್ನು ಸಂದರ್ಶಿಸುತ್ತಾಳೆ. ಅಲ್ಲೆಲ್ಲ ಆಕೆ ಕಂಡದ್ದು ಮತ್ತು ಕೇಳಿದ್ದು ಎಂದರೆ ೧೫–೧೬ ಜನ ವಿಧವೆಯರ ಬದುಕಿನ ಕತೆ. ಅದರ ಹಿಂದೆ ಅವರ ಬಡತನ ಮತ್ತು ವ್ಯಭಿಚಾರ ತಪ್ಪದೇ ವರ್ಣಿತವಾಗಿವೆ. ಇವರಲ್ಲದೆ, ಬೆಂಗಳೂರು, ಹುಬ್ಬಳ್ಳಿ, ಸಾತಾರಾ, ಪಂಡರಪುರದಲ್ಲಿಯ ವಿಧವೆಯರ ಪ್ರಸ್ತಾಪವೂ ಇದೆ. ಅವು ನೈಜ ಘಟನೆಗಳಂತೆ ಕಂಡರೂ, ಅಷ್ಟನ್ನೇ ಎತ್ತಿ ಹೇಳಿದುದರಿಂದ ಎಲ್ಲ ವಿಧವೆಯರೂ ಇದೇ ರೀತಿ ಇರುತ್ತಾರೆಂಬ ಭಾವನೆ ಬರುವಂತೆ ಚಿತ್ರಿತವಾದುದು ಈ ಕೃತಿಯ ದೊಡ್ಡ ದೋಷ. ಇತ್ತ, ಆ ಪರ್ಯಟನದಿಂದ ಹಿಂತಿರುಗಿ ಬರುವಾಗ ಚಕ್ಕಡಿಯು ಉರುಳಿ ಬಿದ್ದು, ವಿನಾಯಕನು ಮರಣ ಹೊಂದುವನು. ಕೆಲ ಕಾಲ ಕಳೆದ ಬಳಿಕ ಮನೆಯವರು ಅವಳ ಕೇಶಮುಂಡನ ಮಾಡಬೇಕೆಂದು ಹವಣಿಸಿದಾಗ, ಯಮುನೆಯು ತಪ್ಪಿಸಿಕೊಂಡು ಮಿಶನ್ ಕೇಂದ್ರವನ್ನು ಸೇರುತ್ತಾಳೆ.

ಮುಂದಿನ ನಡೆ ಬಂಗಾಲೀ ಕಾದಂಬರಿಗಳದು. ಹಾಗೆ ಕನ್ನಡಕ್ಕೆ ಬಂದ ಮೊದಲ ಕಾದಂಬರಿ 'ದುರ್ಗೇಶನಂದಿನಿ' (೧೮೮೫). ಬಂಕಿಮಚಂದ್ರನ ಈ ಕೃತಿಯನ್ನು ಬಿ. ವೆಂಕಟಾಚಾರ್ಯರು ಅನುವಾದಿಸಿದುದರ ಉದ್ದೇಶ-A novel in the sense it is understood in English is not familiar to the Kanarese speaking public-ಎಂಬ ಸ್ಥಿತಿಯನ್ನು ಸರಿಪಡಿಸುವುದಾಗಿದ್ದಿತು. ತನ್ನ ಪೀಠಿಕೆಯಲ್ಲಿ ವೆಂಕಟಾಚಾರ್ಯರು, ಕಾದಂಬರೀ ಸಾಹಿತ್ಯ ಪ್ರಕಾರವು ಹದಿನೆಂಟನೆಯ ಶತಮಾನದ ಇಂಗ್ಲಿಷ್ ಸಾಹಿತ್ಯದಲ್ಲಿ ಹೆನ್ರಿ ಫೀಲ್ಡಿಂಗ್ ಮತ್ತು ವಾಲ್ಟರ್ ಸ್ಕಾಟ್ ಇವರಿಂದ ಆರಂಭವಾಯಿತೆಂದು ಹೇಳುತ್ತ ಅದರ ಮುಂದಿನ ವಿಕಾಸದಲ್ಲಿ ಮೂರು ಘಟ್ಟಗಳನ್ನು ಮುಖ್ಯವಾಗಿ ಗುರುತಿಸಿದ್ದಾರೆ.

[ಅ] 'ಅಲೌಕಿಕವಾದ ಅಪ್ರಾಕೃತ ಘಟನಾವಳಿಗಳುಳ್ಳ ಅಸ್ವಾಭಾವಿಕವಾದ ಮಾನವ ಚರಿತ್ರೆ' ಇರುವ ಕಟ್ಟು ಕಥೆಗಳು.

[ಆ] 'ಐತಿಹಾಸಿಕ ಘಟನಾವಳಿಗಳನ್ನವಲಂಬಿಸಿ' ಬರೆದವುಗಳು.

[ಇ] 'ಗಾರ್ಹಸ್ಥ್ಯ ಸಂಬಂಧವಾದ ನಾವೆಲುಗಳು.'

ವೆಂಕಟಾಚಾರ್ಯರ ಪ್ರಕಾರ 'ನಾವೆಲು'ಗಳ ಉದ್ದೇಶವೆಂದರೆ "ಸಮಾಜದ ಹಾಗೂ ಅದರ ಅಂಗಭೂತವಾದ ಮನುಷ್ಯನ ಚರಿತ್ರೆ, ನಡತೆಗಳಲ್ಲಿ ಕಂಡುಬರುವ. . ದುರ್ನಡತೆ ಮುಂತಾದವುಗಳನ್ನು ಉದಾಹರಣೆಗಳೊಡನೆ ಚಿತ್ರಿಸಿ ಅವುಗಳಿಂದುಂಟಾಗುವ ವಿಪತ್ತುಗಳನ್ನು ತೋರ್ಪಡಿಸಿ, ಪ್ರತಿ ಒಬ್ಬನೂ ಸಮಾಜದಲ್ಲಿ ಸದ್ಭಾವದಿಂದ ನಡೆದು ಕೊಳ್ಳುವುದನ್ನು ತೋರ್ಪಡಿಸತಕ್ಕುದಾಗಿದೆ." ಹೀಗೆ ಸಮಾಜದ ಗುಣ-ದೋಷಗಳನ್ನು ವಾಸ್ತವವಾಗಿ ಚಿತ್ರಿಸಿ, ಸದ್ವೃತ್ತಿಗೆ ಪೋಷಕವಾಗಬೇಕೆನ್ನುವ ದೃಷ್ಟಿಯು ಇಲ್ಲಿ ಕಂಡು ಬಂದಿದ್ದು, ಮುಂದಿನ ಅರ್ಧ ಶತಮಾನದವರೆಗೂ ಇದೇ ದೃಷ್ಟಿಯಿಂದ ಕಾದಂಬರಿಗಳ ರಚನೆಯು ಮುಂದುವರಿಯಿತೆಂಬುದನ್ನು ಗಮನಿಸಬೇಕು.

ಬಿ. ವೆಂಕಟಾಚಾರ್ಯರು ೧೯೦೦ರವರೆಗಿನ ಅವಧಿಯಲ್ಲಿ ಅನುವಾದಿಸಿದ ಕಾದಂಬರಿಗಳಲ್ಲಿ 'ಆನಂದಮಠ, ದೇವೀ ಚೌಧುರಾಣಿ, ರಜನೀ ಮತ್ತು ವಿಷವೃಕ್ಷ' - ಇವು ಮುಖ್ಯವಾಗಿವೆ. 'ದುರ್ಗೇಶನಂದಿನಿ'ಯ ಜೊತೆಗೆ, 'ಆನಂದಮಠ, ದೇವೀ ಚೌಧುರಾಣಿ' - ಇವು ಕೂಡ ಐತಿಹಾಸಿಕ ಕಾದಂಬರಿಗಳೇ. ಅಲ್ಲಿಯ ಸ್ತ್ರೀಪಾತ್ರಗಳ ಕ್ಷಾತ್ರವೃತ್ತಿ, ತ್ಯಾಗಬುದ್ಧಿಗಳ - ವರ್ಣನೆಯಿಂದಾಗಿ ಮತ್ತೆ ಮತ್ತೆ ಓದಿದರೂ ಬೇಸರ ಬಾರದಂತಹ ಕೃತಿಗಳೆನಿಸಿದವು. ಇವು ಮೇಲಿನ [ಆ] ದಲ್ಲಿ ಗುರುತಿಸಿದ ಕಾದಂಬರಿಗಳಾದರೆ 'ರಜನೀ ಮತ್ತು ವಿಷವೃಕ್ಷ' - ಇವು ಸಾಮಾಜಿಕ ಕಾದಂಬರಿಗಳು. ಪಾತ್ರಗಳ ಆತ್ಮನಿವೇದನೆಯ ಮೂಲಕ ಕಥೆಯನ್ನು ಮುಂದುವರಿಸಿಕೊಂಡು ಹೋಗುವ ಬಗೆಯನ್ನು 'ರಜನೀ' ಕಾದಂಬರಿಯಲ್ಲಿ ತರಲಾಗಿದ್ದು, ಅದರ ಅನುಕರಣೆಯು ೨೦ನೆಯ ಶತಮಾನದ ಒಂದೆರಡು ಸ್ವತಂತ್ರ ಕಾದಂಬರಿಗಳಲ್ಲಿ ಒಡಮೂಡಿದೆ. ಬಂಕಿಮಚಂದ್ರನ ಪರಿಪೂರ್ಣ

ಕೃತಿಯೆನಿಸಿದ 'ವಿಷವೃಕ್ಷ'ವು ಮಧ್ಯಮ ವರ್ಗದ ಕೌಟುಂಬಿಕ ಜೀವನದ ಸುರಮ್ಯ ಚಿತ್ರಣವಾಗಿದೆ

ತೆಲುಗಿನಿಂದಲೂ ಹಲವು ಕಾದಂಬರಿಗಳು ಕನ್ನಡಕ್ಕೆ ಬಂದುವು (೧೮೯೦ರ ದಶಕ). ಸುಪ್ರಸಿದ್ಧ ವೀರೇಶಲಿಂಗಂ ಪಂತುಲುವಿನ 'ವಿವೇಕ ಚಂದ್ರಿಕೆ' ಯನ್ನು ಬೆಳ್ಳಾವೆ ಸೋಮನಾಥಯ್ಯನೂ (೧೮೯೫), 'ಸತ್ಯವತೀ ಚರಿತ್ರೆ'ಯನ್ನು ನಂಜನಗೂಡು ಅನಂತ ನಾರಾಯಣಶಾಸ್ತ್ರಿಯೂ (೧೮೯೭), ಸತ್ಯರಾಜಾ ಪೂರ್ವದೇಶಯಾತ್ರೆ (ಭಾಗ–೧)ಯನ್ನು ಬೆನಗಲ್ ರಾಮರಾಯರೂ (೧೮೯೯) ಅನುವಾದಿಸಿದರು. ರೆಂಟಾಲ ವೆಂಕಟಸುಬ್ರಾಯನು ಕೇಸರೀವಿಲಾಸ ಕಾದಂಬರಿಯನ್ನು ಬರೆದಿದ್ದು (೧೮೯೫), ಅದು ಕನ್ನಡದ ಪ್ರಥಮ ಸ್ವತಂತ್ರ ಕಾದಂಬರಿಯೆಂದು ತಿಳಿಯಲಾಗುತ್ತಿತ್ತು (ಲೇಖಕ, ಫೆಬ್ರು. ೧೯೫೪). ಆದರೆ R.P.I.R. ದಲ್ಲಿ ೧೮೯೫ನೆಯ ವರ್ಷದ ತೆಲುಗು ಪುಸ್ತಕಗಳ ಸಮೀಕ್ಷೆ ಮಾಡುತ್ತ, ಈ ಕೃತಿಯು ತೆಲುಗು. ಕನ್ನಡ ಎರಡೂ ಭಾಷೆಗಳಲ್ಲಿ ಏಕಕಾಲಕ್ಕೆ ಪ್ರಕಟವಾಯಿತೆಂದೂ ಕಾದಂಬರಿಯು ನಿಕೃಷ್ಟವಾದುದೆಂದೂ ಹೇಳಲಾಗಿದೆ:

'Kesari Vilas in Telugu and Canerese is aslo a new contribution to light literature moulded on the English model, giving a picture of the privations which the heroine, a thoroughly modern girl, named Kesaree is said to have undergone in a Hindu family and of her final triumph and happiness. But the style is by no means chaste and the manner of the story is wholly individual, scorning the conventional form of vernacular composition and breaking the bonds of tradition in other respects. Whatever language and whatever spirit it may be written in, it is a question whether the story is likely to be read more than once by the Telugu and Canaerese speaking people for whom the book is intended. (ಪು.೪)*

ಈ ಕೃತಿಯನ್ನು 'ವಿಚಿತ್ರ ನೂತನ ಪ್ರಬಂಧ'ವೆಂದು ಕರೆಯಲಾಗಿದೆ. ಇನ್ನೊಂದು ಮಾತೆಂದರೆ ಇದು ಸಂಪೂರ್ಣ ಸಾಮಾಜಿಕ ಕಾದಂಬರಿಯಲ್ಲ; ಧನಕೋಟಿ ಎಂಬ ರಾಜನ ರಾಜಧಾನಿಯಲ್ಲಿಯ ಸನ್ನಿವೇಶಗಳಿವೆ.

'ಸತ್ಯರಾಜಾ ಪೂರ್ವದೇಶ ಯಾತ್ರೆ'ಯು ಸಾಮಾಜಿಕ ವಾತಾವರಣವುಳ್ಳ, ಆದರೂ ಕಲ್ಪನಾಪ್ರಧಾನವಾದ ಕತೆಯಾಗಿದೆ. ಸತ್ಯರಾಜನೆಂಬುವನು ಮಲೆಯಾಳ ದೇಶಕ್ಕೆ

---

* ರೆಂಟಾಲ ವೆಂಕಟಸುಬ್ಬರಾಯನ ಇನ್ನೊಂದು ಕನ್ನಡ ಕೃತಿ 'ಆನಂದ ದೀಪಿಕೆ'ಯು ೧೯೦೦ರ ಅನಂತರ ಪ್ರಕಟವಾಗಿದೆ.

ಹೋದಾಗ, ಸ್ತ್ರೀಪ್ರಧಾನವಾದ ಒಂದು ಕಾಲ್ಪನಿಕ ಪ್ರದೇಶವನ್ನು ಸೇರಿ, ಅಲ್ಲಿ ಕೆಲವು ಕಾಲ ವಾಸವಾಗಿರುತ್ತಾನೆ. ಸುಪರಿಚಿತವಾದ 'ಉಲ್ಟೀ ಗಂಗಾ'ದ ಚಿತ್ರಣವಿದು. ಪತ್ನೀಧರ್ಮಕ್ಕೆ ಬದಲಾಗಿ ಪತೀಧರ್ಮವನ್ನು ಪಾಲಿಸಬೇಕೆಂಬುದು ಅಲ್ಲಿಯ ನಿಯಮವಂತೆ, ಆದರೆ ಅದು ಪರಮಾವಧಿಯನ್ನು ಮುಟ್ಟಿದ್ದಿತೆನ್ನುವುದಕ್ಕೆ ಕೆಳಗಿನ ಪದ್ಯರೂಪೀ ಸೂತ್ರಗಳು ನಿದರ್ಶಕವಾಗಿವೆ :

ದೂರದಿನೀಕ್ಷಿಸಿ ಸತಿಯಂ
ಗೌರವದಿದ್ದೆಳ್ದು ಪೊಂದೆಕಾಲೊಳೆ ಪುರುಷಂ
ಮೀರದೆ ಮೈವಾಗಿರೆ ನಿಂ-
ತಾರಮೆ ಮನ್ನಿಪುದಲ್ತೆ ಧರ್ಮದ ಮಾರ್ಗಂ ॥
ಪುರುಷನುಮಮ್ ಕಳ್ತೆಯುಮಂ
ಸ್ಥಿರದಂಡನಮೀಯದಿರ್ದೊಡಕ್ಕುಂ ಕೇಡ-
ಳ್ಕರುದೋರದೆ ಸತಿ ಪತಿಯಂ
ತರದಿಂದ ಮಾಸಕೊರ್ಮೆ ಶಿಕ್ಷಿಸಲೇಳ್ಗುಂ ॥

ಇಂಥ ಬರವಣಿಗೆಯಲ್ಲಿ ವ್ಯಂಗ್ಯ, ಹಾಸ್ಯಗಳ ಸನ್ನಿವೇಶಗಳು ಕಾಣಿಸಿಕೊಳ್ಳುವುದು ಸ್ವಾಭಾವಿಕ. ವೀರೇಶಲಿಂಗಂ ಅದನ್ನು ತನ್ನ ನಿರೂಪಣೆಯಲ್ಲಿಯೂ ಸಾಧಿಸಿದ್ದಾನೆ. ಈ ವಾಕ್ಯಗಳನ್ನು ಗಮನಿಸುವುದು :

"ಉಪಾಧ್ಯಾಯರ ಕೃಪೆಯಿಂದ ಹೇಗೋ ಕೆಲವು ಇಂಗ್ಲಿಷು ಶಬ್ದಗಳು ನನ್ನ ಹೊಟ್ಟೆಯಲ್ಲಿ ತೂರಿಕೊಂಡವು. ಆ ತರುವಾಯ ಅವನ್ನು ನನ್ನ ಹೃದಯದಿಂದ ಓಡಿಸುವುದಕ್ಕೆ ನನಗೆ ಸಾಧ್ಯವಾಗಲಿಲ್ಲ. ಯಾರಿಗಾದರೂ ಸರಿಯೇ ಒಂದು ಬಾರಿಗೆ ಸ್ಥಳಕೊಟ್ಟ ಮೇಲೆ ಅವರನ್ನು ಹೊರಗೆ ತಳ್ಳುವುದು ಸುಲಭವೇ ? (ಪು.೪)

ನನ್ನ ಹಿತೇಚ್ಛುಗಳ ಉಪದೇಶದಿಂದ ಶಿರಸ್ತೇದಾರರಿಗೆ ಮೂರು ಸಲ ಹಿರಣ್ಯದಾನ ಮಾಡಿದೆನು. ಎಷ್ಟು ಸಲವೊ ಈಗ ಚೆನ್ನಾಗಿ ಜ್ಞಪ್ತಿಗೆ ಬಾರದು. ವಸ್ತ್ರದಾನ ಮಾಡಿದೆನು. ಆತನ ಮಗುವಿಗೆ ಹಾಲು ಬೇಕಾಗಿ ಬಂದುದರಿಂದ ಎರಡು ಸಲ ಸವತ್ಸಕ ಗೋದಾನವನ್ನೂ ಮಾಡಿದೆನು. ಕೊಟ್ಟ ದಾನಗಳನ್ನು ಹೇಳಲಾಗದು."

ಹತ್ತೊಂಬತ್ತನೆಯ ಶತಮಾನದಲ್ಲಿ ತಮಿಳಿನಿಂದ ಅನುವಾದಗೊಂಡ ಕಾದಂಬರಿ ಯಾವುದೂ ಇದ್ದಂತಿಲ್ಲ. ಮಲೆಯಾಳಿ ಭಾಷೆಯಿಂದ ಮಾತ್ರ ಒಂದು ವಿಶಿಷ್ಟ ಕಾದಂಬರಿ ಕನ್ನಡದಲ್ಲಿ ಕಾಣಿಸಿಕೊಂಡಿದೆ. ಅದುವೆ 'ಸುಕುಮಾರಿ'; ತಲಚೇರಿಯಲ್ಲಿ ಶಿಕ್ಷಕನಾಗಿದ್ದ ಜೋಸೆಫ್ ಮುಳಿಯಿಲ್‌ನ ಕೃತಿ. ಬಾಸೆಲ್ ಮಿಶನ್ನಿನ ಎಚ್. ರಾಬರ್ಟ್ಸ್ ಅನುವಾದಿಸಿ

ಮಂಗಳೂರಿನ ತಮ್ಮ ಪ್ರೆಸ್ಸಿನಲ್ಲಿ ಮುದ್ರಿಸಿದನು (೧೮೯೯). ಆ ಕಾಲಕ್ಕೆ ಕಾದಂಬರಿಗಳು ಜನತೆಯ ಮನಸ್ಸನ್ನು ಮಾರ್ಪಡಿಸುವಷ್ಟು ಪ್ರಭಾವಶಾಲಿಯಾಗಿದ್ದುವೆಂಬುದರ ಸುಳಿವು ಅನುವಾದಕನ ಮೊದಲ ಮಾತಿನಿಂದ ವ್ಯಕ್ತವಾಗುತ್ತದೆ :

'ಈ ಕಾಲದಲ್ಲಿ ಇಂಗ್ಲಿಷ್ ಕಲಿತವರಿಗೆ ನೋವೆಲ್ಸ್ ಎಂಬ ಕಾದಂಬರಿಗಳನ್ನು ಓದುವ ಅಭಿರುಚಿ ಶಾನೆ ಹತ್ತಿಯಿದೆ. ಅವುಗಳನ್ನು ಓದಿ ರುಚಿಸಬಲ್ಲವರು ಮಲೆಯಾಳದಲ್ಲಿಯೂ ಕನ್ನಡದಲ್ಲಿಯೂ ಇಂಥಾ ಪುಸ್ತಕಗಳನ್ನು ತರ್ಜುಮೆ ಮಾಡಲಿಕ್ಕೂ ರಚಿಸಲಿಕ್ಕೂ ಸುರುಮಾಡಿದ್ದಾರೆ. ಯಾವ ಭಾಷೆಯಲ್ಲಾಗಲಿ ಕಾದಂಬರಿಗಳು ಓದುವವರೆಲ್ಲರ, ಮುಖ್ಯತಾ ಯೌವನ ಪ್ರಾಯದವರ ಮನಸ್ಸನ್ನು ಕೆಡಿಸುವ ವಿಷ ಬೆರಸಿದ್ದಾಗಿರುತ್ತದೆ. ಇದನ್ನು ತಡಿಯುವ ಉದ್ದೇಶದಿಂದ ಈ 'ಸುಕುಮಾರಿ' ಎಂಬ ಪುಸ್ತಕವನ್ನು ರಚಿಸಿದ್ದಾರೆ.'

'ಉತ್ತರ ಮಲಬಾರ ಜಿಲ್ಲೆಯಲ್ಲಿ ನಡೆದ ಒಂದು ಕಥೆ' ಇದು. ಅಂದಿನ ದೇಶೀ ಕ್ರಿಶ್ಚಿಯನ್ (ಪ್ರೊಟೆಸ್ಟಂಟ್) ಸಮಾಜಕ್ಕೆ ಸಂಬಂಧಿಸಿದ ಜೀವನ ಚಿತ್ರಣ ಇಲ್ಲಿದೆ. ತಬ್ಬಲಿಯಾದ ಸುಕುಮಾರಿಯ ೭ನೆಯ ವರ್ಷದಿಂದ ಇದರ ಕಥೆ ಆರಂಭವಾಗುತ್ತದೆ. ಆಕೆ ವಿದ್ಯೆ ಕಲಿತು ಸದಾಚಾರದಿಂದ ಬಾಳಿ, ಸತ್ಯದಾಸನೆಂಬ ಸಹೃದಯನನ್ನು ಪಡೆಯುತ್ತಾಳೆ. ಈ ಕೃತಿಯಲ್ಲಿ ಮತಾಂತರದ ವಿಷಯ ಬಂದಿದ್ದರೂ ಆ ನಿಮಿತ್ತದಿಂದ ಹಿಂದೂ ಧರ್ಮದ ತೆಗಳಿಕೆ ಇಲ್ಲ. ಸಹಿಷ್ಣು ಭಾವದಿಂದ ಮತ್ತು ಪರೋಕ್ಷವಾದ ರೀತಿಯಲ್ಲಿ ಕ್ರೈಸ್ತಧರ್ಮದ ವಿಚಾರಗಳನ್ನು ಎತ್ತಿಹಿಡಿಯಲಾಗಿದೆ. ಇದೊಂದು ನಡೆದ ಘಟನೆ ಇರಬೇಕು. ಕೊನೆಯಲ್ಲಿ ಕಾದಂಬರಿಕಾರನು ಹೇಳುವ ಮಾತುಗಳು ಅದನ್ನು ದೃಢೀಕರಿಸುತ್ತವೆ:

"ಈ ಕಥೆ ಪ್ರಾರಂಭವಾಗಿ ಈವರೆಗೆ ೧೨ ವರ್ಷವಾಯಿತಷ್ಟೆ ಆದಾಗ್ಯೂ ಅಷ್ಟರೊಳಗೆ ಮಾಣಿಕ್ಯ, ಜೀವಿ, ಚಿರಂಜೀವಿ, ತೇಜೋಫಲ, ಜ್ಞಾನಾಭರಣ ಎಂಬ ಐವರೂ ಸತ್ತು ಹೋದರು. . ಸತ್ಯನಾಥನೂ ಸುಕುಮಾರಿಯೂ ಅನಾಥ ಮಕ್ಕಳಾದರು. ಇದನ್ನೋದುವ ನನ್ನ ಪ್ರಿಯರೇ, ಇವರೆಲ್ಲರೂ ಬಡವರಾಗಿದ್ದರು. ಆದರೆ ಇವರಿಗೆ ಸಹಾ ಸಂತೋಷ ಸಂತಾಪಗಳು ಸಂಮಿಶ್ರವಾಗಿತ್ತು. ತುಷ್ಟಿಯ ಸಹಿತವಾದ ಭಕ್ತಿಯುಳ್ಳ ಒಬ್ಬ ಬಡವನಿಗೂ ಭಕ್ತನಾದ ಧನವಂತನಿಗೂ ಅವರ ಐಹಿಕಾನುಭವಗಳಲ್ಲಿ ಹೆಚ್ಚು ಕಡಿಮೆ ಇಲ್ಲ."

ಕಥಾವಸ್ತುವಿನಲ್ಲಿ ಸತ್ವವಾಗಲೀ, ಹೊಸತನವಾಗಲೀ ಕಂಡುಬರದಿದ್ದರೂ ಕಾದಂಬರಿಕಾರನ ಸಾತ್ವಿಕ ಮನೋಭಾವವುಳ್ಳ ಪಾತ್ರಗಳ ಮೂಲಕ ಅದು ಹರಿದು ಬಂದಿದೆ. ಜೊತೆಗೆ ಅಲ್ಲಲ್ಲಿ ಅಂದಿನ ಜನಜೀವನದ ಸೆಳಕುಗಳನ್ನೂ ಕಾಣುತ್ತೇವೆ. ಚಟ್ಟೇಗಾರನೊಬ್ಬ ಸತ್ಯದಾಸ, ಸುಕುಮಾರಿಯರೆದುರು ತನ್ನ ಕೆಲಸದ ಬಗೆಯನ್ನು ಹೀಗೆ ವಿವರಿಸುತ್ತಾನೆ:

'ಕೋಫಿ ಪ್ಲಾಂಟೇಷನಿಗೆ ಕೆಲವು ಕೂಲೀಸ್ ತೆಗೆದುಕೊಂಡು ಹೋಗಲಿಕ್ಕೆ ನಾನು ಕಂಟ್ರಾಕ್ಟ್ ತೆಗೆದುಕೊಂಡಿರುತ್ತೇನೆ. ಹದಿನೈದು ದಿನಗಳೊಳಗೆ ಫಿಫ್ಟೀ ಕೂಲೀಸ್ ಅತ್ತಾಗೆ

ಕಳುಹಿದೆನು. ಈಗ ಫೋರ್ ಫೈವ್ ಡೇಯ್ಸ್ ಆಯಿತು. ಎ ಸಿಂಗಲ್ ಕೂಲಿ ಸಿಕ್ಕುವುದಿಲ್ಲ. ಒನ್ ಮಂತಿನೊಳಗೆ ಕಂಟ್ರಾಕ್ಟ್ ಎಕ್ಸಿಕ್ಯೂಟ್ ಮಾಡದಿದ್ದರೆ ಆ ಪ್ಲಾಂಟರ್ ನನ್ನನ್ನು ಪ್ರೋಸಿಕ್ಯೂಟ್ ಮಾಡ್ಯಾನು'

ಅವನು ಹೋದ ಮೇಲೆ ಸುಕುಮಾರಿಯು "ಆ ಚಟ್ಟೆಗಾರನಾರು? ಅವನ ಸಕಾರ, ಟಕಾರಗಳು ಎನು? ಅದೇ ಏನು ಇಂಗ್ಲಿಷ್ ಅಂದರೆ?" ಎಂದು ಸತ್ಯದಾಸನನ್ನು ಕೇಳುತ್ತಾಳೆ! ಸತ್ಯದಾಸನ ಅಭಿಪ್ರಾಯದ ಪ್ರಕಾರ "ಇಂಗ್ಲಿಷ್ ವಿದ್ಯೆ ಚೆಲೋದೆ ಸೈ. ಈಗಲೇ ಕಂಡಂತೆ ನಮ್ಮ ದೇಶದವರು ಸ್ವಂತ ಭಾಷೆಯನ್ನು ಕೆಡಿಸದೆ. ಹರೇದವರು ವಿಲಾಯತಿಯ ವೇಷ ತೆಗೆದುಕೊಳ್ಳದೆ ಇದ್ದರೆ ಒಳ್ಳೇದಿತ್ತು." ೧೯ನೆಯ ಶತಮಾನದ ಉತ್ತರಾರ್ಧದಿಂದಲೇ ಅತಿಯಾದ ಇಂಗ್ಲಿಷ್ ತನ್ನ ಹಾವಳಿಯನ್ನು ಆರಂಭಿಸಿತ್ತು– ಎಂಬುದು ಇದರಿಂದ ತಿಳಿಯುತ್ತದೆ.

## 832 ಸ್ವತಂತ್ರ ರಚನೆ

ಮೇಲೆ ವಿವರಿಸಿದ ಕೃತಿಗಳೆಲ್ಲವೂ ಅನುವಾದ, ರೂಪಾಂತರಗಳಾದವು. ಸ್ವತಂತ್ರವೆನ್ನಬಹುದಾದ 'ಕಲಾವತೀ' ಮತ್ತು 'ಸೌಗಂಧಿಕಾ ಪರಿಣಯ'ಗಳು ಕಾದಂಬರಿ ಯೆಂಬ ನೂತನ ಸಾಹಿತ್ಯ ರೂಪವನ್ನು ಗಮನಿಸಿ ರಚಿತವಾದವುಗಳಲ್ಲ. ಇನ್ನೀಗ ಅಂಥ ಸ್ವತಂತ್ರ ಕೃತಿಗಳನ್ನು ಪರಿಶೀಲಿಸುವ, ಅದಕ್ಕೆ ಮೊದಲು ಆಧುನಿಕ ಕಾದಂಬರಿಗಳ ಒಂದು ಲಕ್ಷಣವೆನಿಸಿದ 'ಜನಜೀವನ ಚಿತ್ರಣ' ಇರುವ ಕೃತಿಯೊಂದನ್ನು ನೋಡೋಣ. ಅದುವೆ, ೧೮೪೭ ರಷ್ಟು ಹಿಂದೆ ರಚಿತವಾದ 'ಹಿಂದೂ ದೇಶದ ಜನರು ಮಾತನಾಡುವ ಪದ್ಧತಿ' ಎಂಬುದು. ವೆಸ್ಲಿಯನ್ ಮಿಶನರಿಗಳಿಗೆ ಕನ್ನಡವನ್ನು ಹೇಳಿಕೊಡುತ್ತಿದ್ದ ಮುನಶಿ ಶ್ರೀನಿವಾಸಯ್ಯನು* ಇದನ್ನು ಬರೆಯುವಾಗ ವಿದೇಶೀಯರಿಗೆ ಕನ್ನಡ ಮಾತಿನ ರೀತಿಯನ್ನು ಮಾಡಿಕೊಡುವ ಉದ್ದೇಶವಿಟ್ಟುಕೊಂಡಿದ್ದನಲ್ಲದೆ ಕಥೆ ಹೇಳಬೇಕೆಂದಲ್ಲ. ಇಲ್ಲಿ ಬಂದಿರುವ ಕಥೆಯು ನಿಮಿತ್ತ ಮಾತ್ರವಾದುದು. ವಿದೇಶೀ ದೊರೆಯೊಬ್ಬನು ಬೆಂಗಳೂರಿನಿಂದ ಸೇಲಂಗೆ ಹೊರಟಾಗ ಹಲವು ಬಗೆಯ ಜನರನ್ನು ಭೇಟಿಯಾಗುತ್ತಾನೆ. ರೈತ, ಕುರುಬ, ವ್ಯಾಪಾರಿ, ನೇಕಾರ ಅಮಲ್ದಾರ ಹಾಗೂ ಬ್ರಾಹ್ಮಣರು, ಇವರೊಟ್ಟಿಗೆ ಅವನು ನಡೆಸಿದ ಸಂಭಾಷಣೆಗಳು ಮತ್ತು ಅಲ್ಲಲ್ಲಿಯ ವರ್ಣನೆಗಳು ಇಂದಿನ ಯಾವುದೇ ಪ್ರಾದೇಶಿಕ ಕಾದಂಬರಿಯಲ್ಲಿ ಶೋಭಿಸಬಲ್ಲವು. ಆ ಚಿತ್ರಣದಲ್ಲಿ ಶ್ರೀನಿವಾಸಯ್ಯನ ಸೂಕ್ಷ್ಮ ನಿರೀಕ್ಷಣ ಶಕ್ತಿಯೂ ಸರಸ ಪ್ರವೃತ್ತಿಯೂ ಚೆನ್ನಾಗಿ ಮನದಟ್ಟಾಗುತ್ತವೆ.

ಅಂದಿನ ರೈತರ ಜೀವನವನ್ನು ರೈತನ ಮಾತಿನಲ್ಲಿಯೆ ನೋಡೋಣ :

---

* ಈತನು ಸುಮತಿ ಶತಕ ಹಾಗೂ ಹೊಸಗನ್ನಡ ನುಡಿಚಂದ್ರಿಕೆ ಎಂಬೆರಡು– ಕೃತಿಗಳನ್ನು ರಚಿಸಿದ್ದಾನೆ.

"ತೋಟದಲ್ಲಿ ತೆಂಗು, ಅಡಿಕೆ ಇದು ಹೊರ್ತು ಚಿಲ್ಲರೇ ಹಣ್ಣು-ಹಂಪಲು ಜೋಳ ಕಡ್ಲೆ ಮುಂತಾದ್ದು ನಮ್ಮ ಬೆಳೆ. ಆದರಲ್ಲಿ ಅರಮನೆಗೆ ಸರಿಯಾಗಿ ಅರ್ಧ ಹೋಗುತ್ತೆ. ನಿಂತ ಅರವಾಶಿ ನನ್ನ ಮೇಣಿ ಪಾಲಿಗೆ (to my plough's share) ಬರುತ್ತೆ. ಕಂದಾಯದ ಹಣ, ತೋಟದಲ್ಲಿ ಆದ ಪೈರು ಮಾರಿ, ಕಟ್ಟಬೇಕು. ಹೊಲಗದ್ದೆಯಲ್ಲಿ ಬೆಳೆದ ದವಸದಿಂದ ಹೊಟ್ಟೇ ಕಾಲಕ್ಷೇಪ ಆಗಬೇಕು. ಬೆಳೆ ಚೆನ್ನಾಗಿ ಬೆಳೆದ ವರ್ಷವೇ ಹಿಂದಿನ ಸಾಲಗಳ ಹರಿಸಿ ಸಾಲಗಾರರ ಮಕ್ಕಳಾಗದೆ ನಮ್ಮ ತಾಯಿ ತಂದೆಗಳ ಮಕ್ಕಳು ನಾವಾಗಿ ಜೀವನಾ ಮಾಡುತ್ತೇವೆ. ಸಾಮಿ, ಒಕ್ಕಲಿಗರ ಕೆಲಸ, ಏನು ಕೆಲಸ!"

ಕುರಿಗಳ ಮೇಯಿಸುತ್ತ ಹೊರಟಿದ್ದ ಕುರುಬನೊಬ್ಬನನ್ನು ಧೊರೆಯು ಕರೆದಾಗ, ಅವನು ತಪ್ಪಿಸಿಕೊಳ್ಳಲು ಯತ್ನಿಸಿದುದರಲ್ಲಿ ಹಳ್ಳಿಗರ ಮುಗ್ಧ ಮನಸ್ಸಿನ ಪರಿಯಿದೆ. ಹಾಗೆಂದು ಆ ಕುರುಬನು ಅಂಜುಗುಳಿಯಲ್ಲ : "ನಾನು ಕುರುಬ, ದ್ಯಾವರೂ"

"ನೀನು ಕುರುಬ ದ್ಯಾವರೊ! ನಿನ್ನ ಹೆಸರೇನು?"

"ನನ್ನ ಹೆಸರು, 'ಬಿಟ್ಟರೆ ಸಿಕ್ಕನು' ಸೋಮಿ"

"ಶಾಬಾಸು, ನಿನ್ನ ಹೆಸರು, ಬಿಟ್ಟರೆ ಶಿಕ್ಕಿಯೋ? ಆಗಲಿ ನಿನ್ನ ದೇವರ ಹೆಸರೇನು?

"ನಮ್ಮ ದೇವರು ಬೀರಪ್ಪನು, ಬುದ್ಧಿ."

"ಎಲ ಎಲ ಬೀರಪ್ಪನ ಬುದ್ದಿಯೇ! ಅವನು ಹ್ಯಾಗಿರುವನು?"

"ಚೆನ್ನಾಯಿತು ಸೋಮಿ, ದೇವರ್‍ಯಾಗಿದ್ದೀತು! ಅದು ಇದೆ, ಗುಡಿಗಳಲ್ಲಿ."

"ಅದೇಕಯ್ಯಾ? ಮನೆಗಳಲ್ಲಿ ದ್ಯಾವರು ಇರಬಾರದೆ? ಬಣಜಿಗರ ಎದೆಯ ಮೇಲೆ ದ್ಯಾವರು ಇರಬಹುದಂತೆ. ನಿಮ್ಮ ಮನೆಗಳಲ್ಲಿ ಇರುವುದಕ್ಕೆ ಏನು ಅಡ್ಡಿ?"

"ಅಂದರೆ ಸೋಮಿ, ಅವರು ಶಿವಾಚಾರದವರು; ಯಾವಾಗಲೂ ದ್ಯಾವರನ್ನು ಕೊರಳಿಗೆ ಕಟ್ಟಿಕೊಂಡೇ ಇದ್ದಾರೆ. ಇಟ್ಟು (ಹಿಟ್ಟು) ತಿಂದರೆ ಅದಕ್ಕೂ ತಿನ್ನಿಸುತ್ತಾರೆ; ಅಂಬಲಿ ಕುಡಿದರೆ ಅದಕ್ಕೂ ತೋರಿಸಿ ಕುಡಿಸುತ್ತಾರಂತೆ. ಅವರಿಗೆಲ್ಲಾ ಸರಿಯೇ. ನಮ್ಮ ದ್ಯಾವರಿಗೆ ಹಾಗೆ ಸರಿಬೀಳುವುದಿಲ್ಲ."

ಮುಂದೆ ಕುರುಬನು ವರುಷಕ್ಕೊಮ್ಮೆ ನಡೆಯುವ ಬೀರಪ್ಪನ ಜಾತ್ರೆಯನ್ನು ಚೆನ್ನಾಗಿ ವರ್ಣನೆ ಮಾಡುತ್ತಾನೆ. 'ದೈವೀ ಶಕ್ತಿಯನ್ನು ಅವಾಹಿಸಿಕೊಂಡ ಪೂಜಾರಿಯ ತಲೆಯ ಮೇಲ ಘಟ್ಟಿಸಿ ತೆಂಗಿನಕಾಯಿಗಳನ್ನು ಒಡೆದರೂ ಅವನಿಗೆ ನೋವಾಗುವುದಿಲ್ಲ; ನಮ್ಮ ಸತ್ಯವಂತ ದೇವರು ಅವನನ್ನು ಕಾಪಾಡುತ್ತಾನೆ'-ಎಂದು ಹೇಳಿದಾಗ, ಧೊರೆಯು ಚಿಕ್ಕಂದಿನಿಂದ ಕಲ್ಲಿಗೆ ಗೋಡೆಗೆ ತಗಲಿಸುತ್ತಾ ಪೂಜಾರಿಯು ಅದನ್ನು ಗಟ್ಟಿಮಾಡಿಕೊಂಡಿರಬೇಕು. ಇದರಲ್ಲಿ ದೇವರ ಮಹಿಮೆಯೇನೂ ಇಲ್ಲ-ಎಂದು ಉತ್ತರ ಕೊಡುತ್ತಾನೆ.

ಅಲ್ಲಿಂದ ಒಬ್ಬ ಕೋಮಟಿಗ–ವ್ಯಾಪಾರಿಯ ಭೆಟ್ಟಿ. ಸಾದಾ ಹರಕು ಬಟ್ಟೆಗಳನ್ನು ಧರಿಸಿದ್ದ ಅವನು 'ತಾನು ಬಡವ, ಬಹು ಕಷ್ಟದಿಂದ ಜೀವನ ಸಾಗಿಸುವವ' ಎಂದು ಹೇಳುತ್ತಾನೆ. ಆದರೆ ಅವನ ವ್ಯಾಪಾರದ ವಿಷಯವನ್ನೂ, ಅದರಿಂದ ತುಂಬಾ ಲಾಭವಿದೆಯೆಂಬುದನ್ನೂ, ಅವನ ಬಾಯಿಯಿಂದಲೇ ಕೊನೆಯಲ್ಲಿ ಹೊರಡಿಸಿದ್ದಿದೆ! ಅದನ್ನು ಧೊರೆಯು ಎತ್ತಿ ತೋರಿಸಿದಾಗ ಕೋಮಟಿಗನು ಮುಸಿ ಮುಸಿ ನಕ್ಕನಂತೆ.

ಆಗ ಸಂಜೆಯಾಗುತ್ತದೆ, ಹೊರಗೆ ಆಡುವ ಹುಡುಗರು ಮನೆಗೆ ಬಂದರೊ? ದನ ಕರುಗಳು ಬಂದುವೊ ಇಲ್ಲವೊ? ಎಂದು ಹಿರಿಯರು ಯೋಚಿಸುತ್ತಿದ್ದಾಗ, ದನಗಳ ಮುಂದೆ ಎತ್ತುಗಳ ಗುಂಪು, ಎಮ್ಮೆಗಳ ಮುಂದೆ ಕುರಿಗಳ ಹಿಂಡು, ಆಡುಗಳ ಮುಂದೆ ಕುರಿ–ಕರುಗಳನ್ನು ಮೇಯಿಸುವ ಹುಡುಗರ ಕೂಗುಗಳು ಕೇಳಿ ಬಂದವಂತೆ. ಇತ್ತ, ಹೊರಗೆ ಹೋಗಿದ್ದ ಗಂಡಸರು ಅಡಿಗೆಯ ಮನೆಯಲ್ಲಿದ್ದ ಹೆಂಗಸರನ್ನುದ್ದೇಶಿಸಿ–

"ಶೀ ನೀರನ್ನು ಕೊಡಮ್ಮಾ, ತಂಗೀ, (ಅಕ್ಕಾ. . .ಅತ್ತಿಗೆ, ಮಗೂ) ಬಾಯಾರಿಕೆಗೆ ಬಿಸಿ ನೀರು ಕೊಟ್ಟರೆ ಒಳ್ಳೇದು" ಎಂದು ಹೇಳಿದರೆ, ಆ ಹೆಂಗಸರು–

"ಹಗಲೆಲ್ಲಾ ಬಿಸಿಲಲ್ಲಿ ತಿರುಗುವುದರಿಂದ ದಾಹವಾಗುತ್ತೆ. ನಾಳೆಯಿಂದ ಬೆಳಿಗ್ಗೆ ಹೊರಟು ಬಿಸಿಲಿಗೆ ಮುಂಚಿತವಾಗಿಯೇ ಮನೆಗೆ ಬರಬೇಕು. ಆಚೆ ಬಿಸಿಲು ತಗ್ಗಿಸಿ ಕೊಂಡು ಪುನಹಾ ಹೊರಗೆ ಹೊರಡಬೇಕು" ಎಂದು ಹಿತವಚನವನ್ನು ಆಡುತ್ತಾರೆ.

ಶ್ರೀನಿವಾಸಯ್ಯನು ಹೀಗೆಯೇ ತನ್ನ ವರ್ಣನೆಯನ್ನು ಮುಂದುವರಿಸಿ ಅಂಗಳದಲ್ಲಿ, ಅಂಗಡಿ ಮಳಿಗೆಗಳಲ್ಲಿ, ಚಾವಡಿ ಕಟ್ಟೆಗಳಲ್ಲಿ ನಡೆಯುವ ವಿನೋದಪೂರ್ಣ ಹರಟೆಯ ಬಗೆಯನ್ನು ವಿವರಿಸಿದ್ದಾನೆ. ಇನ್ನೂ ಕೆಲವರು ಮನೆಯಲ್ಲಿ ಮಕ್ಕಳ ವಿದ್ಯಾಭ್ಯಾಸದ ಯೋಗಕ್ಷೇಮವನ್ನು ತೆಗೆದುಕೊಳ್ಳುವುದುಂಟು. ಅವರು ಮಕ್ಕಳಿಂದ ಓದಿಸಿ ಬರೆಯಿಸಿ ತಿದ್ದುವರು. 'ಕೆಲವರು ತಿದ್ದುವುದಕ್ಕೆ ತಿಳಿಯದೇ ಸುಮ್ಮನೆ ಚೆನ್ನಾಗಿ ಹೇಳುತ್ತಾನೆಂದು ಮನಸ್ಸಿನಲ್ಲಿ ನೆನಸುವರು! ಇನ್ನೊಬ್ಬ ಹಿರಿಯನು ಅಭ್ಯಾಸದ ವಿಷಯದಲ್ಲಿ ಮಗನಿಗೆ ಬುದ್ಧಿ ಹೇಳುವ ರೀತಿ ಇದು:

"ನಿನಗೆ ಇನ್ನೂ ಯಾವಾಗಪ್ಪಾ ಬುದ್ಧಿ ಬರುವದು? ನೀನು ವಿವೇಕವಂತನಾಗುವದೆಂದಿಗೆ? ನಾಳೆ ಮಾಘ ಮಾಸದಲ್ಲಿ ಮದಿವೆ ಆಗಬೇಕಲ್ಲಾ? ಹೆಣ್ಣು ಕೊಡುತ್ತೇನೆಂದು ದಿಬ್ಬೂರಿಂದ ಸುಬ್ಬೈನವರು ಒಬ್ಬಾನೊಬ್ಬ ಮನುಷ್ಯನ ಕೈಲಿ, ಮಹಾನೌಮಿ ಹಬ್ಬದಲ್ಲಿ ಅಬ್ಬರವಾಗಿ ಹೇಳಿ ಕಳುಹಿಸಿ ಇದ್ದಾರೆ. ಏನೋ ಸಾಲವೋ ಸೋಲನೋ ಮಾಡಿ ಮದುವೇ ಮಾಡುತ್ತೇನೆ. ಮದಿವೆ ಆಗಿ ಹೆಂಡತಿ ಮಗ್ಗಲಿಗೆ ಬಂದ ಮೇಲೆ ನೀನು ಓದು ಕಲಿಯುವುದು ನಿಜವೋ. . .[ಅತ್ತೆ ಮಾವಂದಿರು] ಅಳಿಯನ ಭವಿಷ್ಯ ಇಷ್ಟೇನೆ? ನಾವೇನೋ ಅಂದುಕೊಂಡಿದ್ದೆವು. ಶುದ್ಧ ಧಡ್ಡನಾಗಿದ್ದಾನೆ. ನೀರು ಹೊರುವುದಕ್ಕೆ ಸರಿ; ಆ ಕೆಲಸಕ್ಕಾದರೂ ಬಲವಂತನಾಗಿರಬೇಕು ಎಂದು ಹೇರಳ ಮಾಡುತ್ತಾರೆ."

ಬ್ರಾಹ್ಮಣ ಸಮಾಜದೊಂದಿಗೆ ನಡೆದ ಸಂಭಾಷಣೆಯಲ್ಲಿ ಮಾತ್ರ ಇಂಗ್ಲಿಷ್ ಧೋರಣೆ, ಮಾತು ಮಾತಿಗೆ ತಕ್ಕ ಪ್ರತ್ಯುತ್ತರ ದೊರೆಯುತ್ತದೆ. ಪೂರ್ವಿಕರ ಮಾರ್ಗ, ಒಳ್ಳೆಯ ಮತ್ತು ಕೆಟ್ಟ ನಡತೆ ಮುಂತಾದ ಸಾಮಾನ್ಯ ವಿಷಯಗಳ ಮೇಲೆ ಸೊಗಸಾದ ಚರ್ಚೆ ನಡೆಯುತ್ತದೆ. ಮಿಶನರಿ ಜನರ ಉಪಕೃತಿಯಲ್ಲಿದ್ದರೂ ಶ್ರೀನಿವಾಸಯ್ಯನು ಸ್ವಧರ್ಮದ ಶ್ರೇಷ್ಠತ್ವವನ್ನು ಪರ್ಯಾಯವಾಗಿ ಎತ್ತಿ ಹಿಡಿದಿದ್ದಾನೆ. ಡ್ಯಾನಿಯಲ್ ಸ್ಯಾಂಡರ್ಸನ್ ಕೂಡ ಆ ಪುಸ್ತಕದ ಪೀಠಿಕೆಯಲ್ಲಿ, 'as might be expected, the gentleman cuts a poor figure among the Brahmans!' ಎಂದು ಅದಕ್ಕೆ ಮನ್ನಣೆಯಿತ್ತುದು ಸೌಹಾರ್ದದ ದ್ಯೋತಕವಾಗಿದೆ.

ಹೀಗೆ ಹೊಸಗನ್ನಡ ಸಾಹಿತ್ಯದ ಲಕ್ಷಣಗಳಾದ ವಾಸ್ತವತೆ, ಸ್ವವಿಚಾರದ ಅಭಿವ್ಯಕ್ತಿ ಮತ್ತು ಸಾಮಾಜಿಕ ಪ್ರಜ್ಞೆ–ಇವು ಬಲು ಪೂರ್ವದಲ್ಲಿಯೇ ಕಂಡುಬಂದುವೆಂಬುದು ಮಹತ್ವದ್ದು. ಗ್ರಂಥಕರ್ತನು ಇವನ್ನು ಗಮನದಲ್ಲಿರಿಸಿಕೊಂಡು ಹಾಗೆ ಬರೆದುದೇನಲ್ಲ. ಮತ್ತು ಆ ಕಾಲಕ್ಕೆ ಅದೊಂದು ಪರಂಪರೆಯಾಗಿ ಮುಂದುವರಿಯಲೂ ಇಲ್ಲ.

ಸ್ವತಂತ್ರ ಕಾದಂಬರಿಯನ್ನು ಪ್ರಥಮತಃ ರಚಿಸಿದ ಶ್ರೇಯಸ್ಸು ಲಕ್ಷ್ಮಣ ಭೀಮರಾವ ಗದಗಕರನಿಗೆ ಸಲ್ಲುತ್ತದೆ (೧೮೯೨). ತನ್ನ 'ಸೂರ್ಯಕಾಂತ' ಕೃತಿಯನ್ನು ಅವನು 'ಕನ್ನಡ ಹೊಸ ಕಾದಂಬರಿ' ಯೆಂದು ಕರೆದಿದ್ದಾನಲ್ಲದೆ, ಪೀಠಿಕೆಯಲ್ಲಿ ಆ ನಿಲುಮೆಯನ್ನು ಹೀಗೆ ವಿವರಿಸಿದ್ದಾನೆ :

"ಜನರಲ್ಲಿ ಓದುವ ಅಭಿರುಚಿ ಹುಟ್ಟಿದ ಹೊರ್ತು ಯಾವ ಭಾಷೆಯೂ ಉತ್ತಮ ಸ್ಥಿತಿಯಲ್ಲಿ ಬರಲಾರದು. ಇಂಥ ಅಭಿರುಚಿಯನ್ನು ಹುಟ್ಟಿಸಬೇಕಾದರೆ ಕಾದಂಬರಿ, ಇತಿಹಾಸ, ನಾಟಕ ಮುಂತಾದ ಪುಸ್ತಕ ಸಾಮಗ್ರಿಯು ಅವಶ್ಯವಾಗಿ ಬೇಕಾಗುತ್ತದೆ. . . .ಈ ಕೊರತೆಯನ್ನು ನನ್ನ ಕೈಲಾದ ಮಟ್ಟಿಗೆ ನಿವಾರಿಸಬೇಕೆಂದು ಆಸೆಯುಳ್ಳವನಾಗಿ ಈ ಚಿಕ್ಕ ಕಾದಂಬರಿಯನ್ನು ಬರೆದಿದ್ದೇನೆ."

ಎಲ್.ಡಿ. ಬಾರ್ನೆಟ್ ಸಂಪಾದಿತ ಬ್ರಿಟಿಶ್ ಮ್ಯೂಸಿಯಂ ಕನ್ನಡ ಸೂಚಿಯಲ್ಲಿ ಈ ಕೃತಿಯನ್ನು ಕುರಿತು modelled on Bana Kadambari ಎಂದು ಹೇಳಲಾಗಿದೆ. ಬಾಣ ಕಾದಂಬರಿಗೂ ಇದಕ್ಕೂ ಸಂಬಂಧವೇನಿಲ್ಲ. ಕಾದಂಬರಿ ಎಂದು ಪ್ರಥಮತಃ ನಾಮಕರಣ ಮಾಡಿದ್ದರಿಂದ ಬಾರ್ನೆಟ್‌ನ ಅಭಿಪ್ರಾಯ ಹಾಗೆ ಆಗಿರಬೇಕು. ಇದರ ಕಥೆಯು ಅರ್ಧ ಐತಿಹಾಸಿಕ ಅರ್ಧ ಸಾಮಾಜಿಕವಾಗಿದೆ. ಪೇಶ್ವೆಯವರ ಕಾಲದ ಅಥವಾ ೧೮೦೦ನೆಯ ವರ್ಷದ ಒಳ ಹೊರಗಿನ ಅವಧಿಗೆ ಸಂಬಂಧಪಟ್ಟ ಕಥಾನಕ ಇಲ್ಲಿದೆ. ಸೂರ್ಯಕಾಂತನು ಬಡ ಕುಟುಂಬದಲ್ಲಿ ಜನಿಸಿದವನಾದರೂ ವಿದ್ಯಾಭ್ಯಾಸಕ್ಕಾಗಿ ಮನೆ ಬಿಟ್ಟು ಹೋಗುವನು. ಮುಂದೆ ರಾಜನೊಬ್ಬನ ಆಶ್ರಯದಲ್ಲಿ ನಿಂತು, ಅವನ ಯುದ್ಧ ಕಾರ್ಯ ಮುಂತಾದ್ದರಲ್ಲಿ ನೆರವಾಗಿ, ಆಮೇಲೆ ತನ್ನ ತಂದೆ ತಾಯಿಯರನ್ನು

ಕರೆಯಿಸಿಕೊಂಡು ಸುಖವಾಗಿ ಬಾಳುತ್ತಾನೆ. ಸದಾಚಾರ ಬೋಧನೆಯೇ ಕಾದಂಬರಿಕಾರನ ಉದ್ದೇಶವಿದ್ದಿತೆಂಬುದನ್ನು ಪೀಠಿಕೆಯಲ್ಲಿಯ ಅವನ ನಿವೇದನೆಯಿಂದ ತಿಳಿಯಬಹುದು:

'ಇದರಲ್ಲಿ ಚಿಕ್ಕ ಹುಡುಗರು ತಮ್ಮ ತಂದೆ ತಾಯಿ, ಗುರು ಹಿರಿಯರಿಗೆ ಹ್ಯಾಗೆ ವಿಧೇಯರಾಗಿರಬೇಕೆನ್ನುವುದು, ತಂದೆ ತಾಯಿಗಳು ಬಡತನದಲ್ಲಿದ್ದರೂ ತಮ್ಮ ಮಕ್ಕಳ ವಿದ್ಯಾಭ್ಯಾಸದಲ್ಲಿ ಎಷ್ಟು ಜಾಗ್ರತರಾಗಿರಬೇಕೆನ್ನುವುದು, ಆಪತ್ತು ಬಂದರೂ ನೀತಿಯನ್ನು ಬಿಡಬಾರದೆನ್ನುವುದು, ದುರ್ನಡತೆಯಲ್ಲಿ ನಡೆಯುವವರಿಗೆ ಹ್ಯಾಗೆ ಕೇಡುಗಳು ಉಂಟಾಗುತ್ತವೆನ್ನುವುದು, ಸ್ವದೇಶಾಭಿಮಾನ, ಸ್ವದೇಶ ಬಂಧು ಪ್ರೀತಿ ಇವೇ ಮುಂತಾದ ನೀತಿಗಳನ್ನು ದಿಗ್ದರ್ಶನ ಮಾಡಿರುವುದರಿಂದ ಆಬಾಲವೃದ್ಧರೂ, ಸ್ತ್ರೀಯರೂ ಈ ಪುಸ್ತಕವನ್ನು ಓದಲಿಕ್ಕೆ ಅಡ್ಡಿ ಇಲ್ಲ.'

ಸನ್ನಿವೇಶ ಅಥವಾ ಪಾತ್ರ ನಿರ್ಮಾಣದಲ್ಲಿ ಅಂಥ ವೈಶಿಷ್ಟ್ಯವೇನೂ ಇಲ್ಲ. ತಿಳಿಯಾದ ನಿರೂಪಣೆಯಿಂದ ಪ್ರಥಮವಾಗಿ ಸ್ವತಂತ್ರ ಕಾದಂಬರಿಯೊಂದನ್ನು ಬರೆಯಲು ಪ್ರಯತ್ನಿಸಿದನೆಂಬುದಷ್ಟೆ ಈ ಲೇಖಕನ ಹೆಗ್ಗಳಿಕೆಯಾಗಿದೆ.

ಕಾದಂಬರಿ ಎಂಬ ಹೆಸರನ್ನು ಕನ್ನಡದಲ್ಲಿ ಅವನೇ ಮೊದಲಿಗೆ ಬಳಸಿದ್ದಾನೆ. ಕಲ್ಪಿತ ಕಥಾನಕಕ್ಕೆ ಆ ಹೆಸರು ಬಂದ ಬಗೆಯನ್ನು ಈ ಸಂದರ್ಭದಲ್ಲಿ ಪರಿಶೀಲಿಸಬಹುದು. ಅದಕ್ಕಿಂತ ಪೂರ್ವದ ಬಂಗಾಲೀ ಕಥಾನಕಗಳನ್ನು ವೆಂಕಟಾಚಾರ್ಯರು 'ನಾವೆಲು' ಎಂದೇ ಕರೆದರು. ಗದಗಕರನು ಮರಾಠೀ ಪರಂಪರೆಯಿಂದ ಕಾದಂಬರಿ ಎಂಬ ಹೆಸರನ್ನು ತೆಗೆದುಕೊಂಡಿದ್ದಾನೆ.

ಮುಂಬಯಿ ಸರಕಾರದ ಆಶ್ರಯದಲ್ಲಿ ೧೮೨೭ ರಷ್ಟು ಹಿಂದೆ ಸಿದ್ಧಗೊಂಡ 'ಮರಾಠಿ ಭಾಷೇಚಾ ಕೋಶ' ಎಂಬುದರಲ್ಲಿ ಇದರ ಮೊದಲ ಸೂಚನೆ ದೊರೆಯುತ್ತದೆ. ಆ ಕೋಶದಲ್ಲಿ ಕಾದಂಬರಿಗೆ ಕಲ್ಪಿತ ಕಥಾ ಎಂಬ ಅರ್ಥವನ್ನು ಕೊಡಲಾಗಿದೆ. ಮುಂದೆ 'ಚಂದ್ರಿಕಾ' ಎಂಬ ಮರಾಠಿ ಪತ್ರಿಕೆಯ ೧೮೫೪ರ ಅಕ್ಟೋಬರ್ ಸಂಚಿಕೆಯಿಂದ ನೀತಿಪರ 'ಕಾದಂಬರಿ' ಎಂಬ ಶೀರ್ಷಿಕೆಯ ಕೆಳಗೆ ಒಂದು ಕಲ್ಪಿತ ಕಥೆಯು ಕ್ರಮಶಃ ಪ್ರಕಟವಾಯಿತು. ಮರುವರ್ಷದಿಂದ ಮರಾಠಿ ಕಾದಂಬರಿಗಳ ಪರಂಪರೆ ಮೊದಲಾಯಿತು. ಮೇಲೆ ಹೇಳಿದ 'ಯಮುನಾಬಾಯಿಯ ಸಂಚಾರ' (೧೮೫೭), ಲಕ್ಷ್ಮಣಶಾಸ್ತ್ರಿ ಹಳಬೆ ಇವನ 'ಮುಕ್ತಮಾಲಾ' (೧೮೬೧) ಅದರಂತೆ ನಾ.ಸ. ರಿಸಬೂಡನ 'ಮಂಜುಘೋಷಾ' (೧೮೬೮) ಮತ್ತು 'ವಿಶ್ವಾಸರಾವ' ಇವು ಆರಂಭದ ಮರಾಠೀ ಕಾದಂಬರಿಗಳು. ೧೮೭೧ರಲ್ಲಿ ಪ್ರಕಟವಾದ ಸುಪ್ರಸಿದ್ಧ 'ಮೋಚನಗಡ' ಕಥಾನಕವು ಮರಾಠಿ ಸಾಹಿತ್ಯದಲ್ಲಿ ಮೈಲಿಗಲ್ಲು ಎನಿಸಿಕೊಂಡಿತು. ಆದರೆ ಅವರಾರೂ ತಮ್ಮ ಕೃತಿಗಳನ್ನು ಕಾದಂಬರಿ ಎಂಬುದಾಗಿ ವಿಶೇಷಿಸಲಿಲ್ಲ. ಗುಂಜೀಕರನ ದೃಷ್ಟಿಯಲ್ಲಿ ಮೋಚನಗಡವು ಒಂದು 'ಕಲ್ಪಿತ ಗೋಷ್ಠಿ' ಯಾಗಿದ್ದಿತು.

ಆದರೆ 'ವಿವಿಧ ಜ್ಞಾನ ವಿಸ್ತಾರ' ಪತ್ರಿಕೆಯ ೧೮೬೯-೭೦ನೆಯ ಇಸವಿಯ ಸಂಚಿಕೆಗಳಲ್ಲಿ ಪ್ರಕಟವಾದ 'ವಿಚಿತ್ರಪುರಿ' ಎಂಬ ಹೆಸರಿನ ಕಥಾನಕಕ್ಕೆ ಮಾತ್ರ 'ಕಾದಂಬರಿ' ಎಂಬ ಹೆಸರನ್ನು ಸ್ಪಷ್ಟವಾಗಿ ಕೊಡಲಾಗಿದೆ. ಮುಂದಿನ ಎರಡು ದಶಕಗಳಲ್ಲಿಯ ಹಲವಾರು ಮರಾಠೀ ಕಾದಂಬರಿಗಳನ್ನು ಆ ಅಭಿದಾನದಿಂದಲೇ ಕರೆಯಲಾಯಿತು. ಗುಜರಾಥೀ ಭಾಷೆಯವರು ಈ ಸಾಹಿತ್ಯ ಪ್ರಕಾರವನ್ನು ಬಂಗಾಲೀ, ಹಿಂದೀಯರಂತೆ 'ಉಪನ್ಯಾಸ'ವೆಂದು ಕರೆಯದೆ ಕಾದಂಬರಿ ಎಂಬ ನಾಮಕರಣವನ್ನೇ ನೆಚ್ಚಿಕೊಂಡರು. ಇತ್ತ ಮರಾಠಿ ಭಾಷೆಯೊಂದಿಗೆ ಹೊಕ್ಕುಬಳಕೆಯಿದ್ದ ಲ.ಭೀ. ಗದಗಕರನು ತನ್ನ ಕೃತಿಗೆ ಅದೇ ಹೆಸರನ್ನು ಇರಿಸಿದನು. ಇಪ್ಪತ್ತನೆಯ ಶತಮಾನದ ಎರಡನೆಯ ದಶಕದಿಂದ ಅದು ಮೈಸೂರು ಸಂಸ್ಥಾನದಲ್ಲಿಯೂ ಅಂಗೀಕೃತವಾಯಿತು.

'ಶೃಂಗಾರ ಚಾತುರ್ಯೋಲ್ಲಾಸಿನಿ'ಯು (೧೮೬೯) ಮೈಸೂರ ವಿಭಾಗದ ಪ್ರಥಮ ಸ್ವತಂತ್ರ ಕಾದಂಬರಿಯಾಗಿದೆ. ಅದನ್ನು ಬರೆದ ಗುಬ್ಬಿ ಸೋ. ಮುರಿಗಾರಾಧ್ಯನು ಓರ್ವ ವಿದ್ಯಾರ್ಥಿಯಾಗಿದ್ದನು. ಆರಂಭದ ಸರಸ್ವತಿ ಸ್ತುತಿಯಲ್ಲಿ ಅವನು ವಿದ್ಯಾರ್ಥಿಗಳ ಶುಭಕಾಮನೆಯನ್ನು ಕೋರಿದುದು ವಿಶೇಷ ಸಂಗತಿಯಾಗಿದೆ.

ಅವಳ ನಗೆಮೊಗಮಲ ಕರಪೆ
ದೀವಿದ ಕಡೆಗಣ್ಣ ನೋಟಮಂ ಘನ ವಿದ್ಯ
ಶ್ರೀವಿತತಿಯನೆಸುಗುಗುಮಾ
ದೇವಿಯೆ ಸುಪ್ರೀತೆಯಕ್ಕೆ ವಿದ್ಯಾರ್ಥಿಗಳೋಳ್.

ಸನ್ಮಿತ್ರರ ಇಷ್ಟಪೂರ್ತಿ ಮಾಡಲೋಸುಗ ಬರೆದ ಈ ಕೃತಿಯ ಹಿನ್ನೆಲೆ ಇಂತಿದೆ: "ಇಂಗ್ಲಿಷ್‌ನಲ್ಲಿರುವ ಯಾವದಾದರೂ ಒಂದು ನಾವೆಲ್ ಅನ್ನು ಕನ್ನಡದಲ್ಲಿ ಭಾಷಾಂತರ ಮಾಡಿ ಬರಿಯಬೇಕೆಂಬ ಆಲೋಚನೆಯು ನನ್ನ ಮನಸ್ಸಿನಲ್ಲಿ ಮೊದಲು ಜನಿಸಿತು. ಅಂತಹ ಒಂದೆರಡು ಇಂಗ್ಲಿಷ್ ಕಾವ್ಯಗಳನ್ನು ಚೆನ್ನಾಗಿ ಮಾಡಿ ಬರಿಯಬೇಕೆಂಬ ಆಲೋಚನೆಯು ನನ್ನ ಮನಸ್ಸಿನಲ್ಲಿ ಮೊದಲು ಜನಿಸಿತು. ಆದರೆ ಅಂತಹ ಒಂದೆರಡು ಇಂಗ್ಲಿಷ್ ಕಾವ್ಯಗಳನ್ನು ಚೆನ್ನಾಗಿ ವಿಚಾರಮಾಡುತ್ತ ನೋಡುವಲ್ಲಿ ಕೆಲವು ವಿಷಯಗಳು ನಮ್ಮ ಹಿಂದೂ ಮರ್ಯಾದೆಗಳಿಗನುಸಾರವಾಗಿ ಕಂಡುಬರಲಿಲ್ಲವಾದ್ದರಿಂದ ಆ ಮಾರ್ಗವನ್ನು ಬಿಡಬೇಕಾಯಿತು. ಅನಂತರ ನಮ್ಮಲ್ಲಿಯೇ ಪುರಾಣಪ್ರಸಿದ್ಧವಾಗಿ ಪದ್ಯರೂಪವಾಗಿರುವ ಯಾವದಾದರೊಂದು ಇತಿಹಾಸವನ್ನು ಗದ್ಯರೂಪವಾಗಿ ಮಾಡ ಬೇಕೆಂದು ಆಲೋಚಿಸುವಲ್ಲಿ ಇಂಗ್ಲಿಷ್ ನಾವೆಲ್‌ಗಳ ಮರ್ಯಾದೆಯನ್ನೇ ಬಿಡಬೇಕಾಗಿ ಬಂದದರಿಂದ ಅದು ನನ್ನ ಮನಸ್ಸಿಗೆ ಅಭಿರುಚಿಸಲಿಲ್ಲ. ಆದಕಾರಣ ಆ ವಿಷಯದಲ್ಲಿ ಹಿಂದೂ ಮರ್ಯಾದೆಯನ್ನು ಇಟ್ಟುಕೊಂಡು, ಇಂಗ್ಲಿಷ್ ನಾವೆಲ್ ಪದ್ಧತಿಯನ್ನು ಅನುಸರಿಸಿ ಬರಿಯಲು ಅನುಕೂಲವಾಗುವಂತೆ, ಹೊಸದಾಗಿ ಒಂದು ಕಥೆಯನ್ನು ಕಲ್ಪನೆ ಮಾಡಿಕೊಂಡೆನು."

ಹಳೆಯದನ್ನು ಬಿಟ್ಟು ಹೊಸದಾದ 'ನಾವೆಲ್'ನ್ನು ಕೊಡಬೇಕೆನ್ನುವ ಅವನ ಅಭಿಲಾಷೆಯೂ ಇಂಗ್ಲಿಷ್‌ನಿಂದ ಪರಿವರ್ತನೆ ಮಾಡುವಾಗ ಹಿಂದೂ ಮರ್ಯಾದೆಗೆ ಕೆಲವು ಅಂಶಗಳು ಹೊಂದುವುದಿಲ್ಲವೆನ್ನುವ ಅವನ ಪ್ರಜ್ಞೆಯೂ ಮೆಚ್ಚತಕ್ಕದ್ದಾಗಿವೆ. ಅವನು ಕಲ್ಪಿಸಿದ ಶೃಂಗಾರಾದ್ಭುತವಾದ ಕಥೆಗೆ ಇತಿಹಾಸದ ಹೊದಿಕೆ ಮಾತ್ರ ಇದೆ. ಕಾದಂಬರಿಯ ಒಂದು ಪ್ರಕರಣವು ಇತಿಹಾಸಕ್ಕೆ ಸಂಬಂಧಪಟ್ಟದ್ದಾಗಿದ್ದು, ಅದರಲ್ಲಿ ಕಾಶ್ಮೀರ, ಇಂದ್ರಪ್ರಸ್ಥ, ಅಯೋಧ್ಯೆ ಮುಂತಾದ ರಾಜ್ಯಗಳ ಪೂರ್ವಚರಿತ್ರೆ ಬಂದಿದೆ. ಆದರೆ ಅವನ ಇತಿಹಾಸ ಜ್ಞಾನವು ಅಷ್ಟಕಷ್ಟೆ. ಪ್ರಸ್ತುತ ಕಥೆಯು ಇಂದ್ರಪ್ರಸ್ಥದ ಪ್ರತಾಪ-ವಿಜಯವಮರ್ಮ, ಸೌರಾಷ್ಟ್ರದ ರೆಂಜೆಂಟ್ ಸಿಂಗ್, ಅಯೋಧ್ಯೆಯ ಜಯಸಿಂಹ ಮತ್ತು ವಂಗ ದೇಶದ ಕೃಷ್ಣಭೂಪಾಲ ಇವರಿಗೆ ಸಂಬಂಧಪಟ್ಟದ್ದಾಗಿದೆ. ರೆಂಜೆಂಟ್‌ಸಿಂಗ್ (ರಣಜಿತ್‌ಸಿಂಗ್?) ಅನಂಗಲಲನೆಯೆಂಬ ರಾಜಕುವರಿಯನ್ನು ಅರಣ್ಯದಲ್ಲಿ ಸೆರೆಯಿಟ್ಟಾಗ ಪ್ರತಾಪವಿಜಯನು ಅಲ್ಲಿಗೆ ಬಂದು ಸಿಂಗನನ್ನು ಸೋಲಿಸುತ್ತಾನೆ. ಆ ಮುಂದೆ ಪ್ರತಾಪವಿಜಯನು ರೆಂಜೆಂಟ್‌ನ ಸಹಾಯಕನಾದ ರಾಮಸಿಂಗ್, ಅದರಂತೆ, ಅನ್ಯದೇಶಗಳ ರಾಜರಾದ ಜಯದ್ರಥ, ಜಯಸಿಂಹರನ್ನೂ ಎದುರಿಸಬೇಕಾಗುತ್ತದೆ. ಅವನ ಈ ಕಾರ್ಯದಲ್ಲಿ ಚತುರಿಕೆ (ತಿಲೋತ್ತಮೆ) ಎಂಬ ರಾಜಕಾರ್ಯ ಪ್ರವೀಣೆಯು ನೆರವಾಗುತ್ತಾಳೆ. ಗೂಢಚಾರರ ಉಪಯೋಗ, ಸುಳ್ಳುಸುದ್ದಿಯನ್ನು ಹರಡುವಿಕೆ ಮುಂತಾದ ಇತರ ರಾಜತಂತ್ರಗಳನ್ನು ಕಥೆಯಲ್ಲಿ ತರಲಾಗಿದೆ.

ಕಾದಂಬರಿಯುದ್ದಕ್ಕೂ ನಾನಾ ರೀತಿಯ ವರ್ಣನೆಗಳು ತಲೆದೋರಿವೆ. ವಿಶೇಷತಃ ಶೃಂಗಾರಪೂರ್ಣವಾದ ಸ್ತ್ರೀ- ಪುರುಷರ ವರ್ಣನೆಗಳು ಪುಸ್ತಕದ ಬಹುಭಾಗವನ್ನು ಆಕ್ರಮಿಸಿವೆ. ಅನಂಗಲಲನೆಯ ಜೊತೆಗೆ ಪ್ರತಾಪವರ್ಮನಿಗೆ ಇನ್ನಿಬ್ಬರು ಲಲನೆಯರು ಲಭಿಸುವರಲ್ಲದೆ, ಅವರ ಸೌಂದರ್ಯದ, ವಿರಹ ಮತ್ತು ಭೋಗಗಳ ವರ್ಣನೆ ವಿಸ್ತಾರವಾಗಿ ಬಂದಿದೆ. ಇವಳು ಅನಂಗಲಲನೆ :

"ಪಾಠಕರೆ! ನಿಮಗೆ ಚಂಚಲ ದ್ರಿಷ್ಠಿಯಲ್ಲಿ ಇಷ್ಟವಿಲ್ಲವೆ? ಹಾಗಿದ್ದರೆ ಮುತ್ತುಗಳ ರಾಶಿಯನ್ನು ನೋಡಿದ್ದೀರಾ? ಅದರ ಮೇಲ್ಭಾಗದಲ್ಲಿ ಪ್ರಕಾಶಿಸುವ ಹೊಳಪಿನಂತೆ ಅನಂಗಲಲನೆಯ ಕಟಾಕ್ಷವು ಕಾಂತಿಯುಳ್ಳದ್ದಾಗಿತ್ತು. . .ಮುಖವು ಗುಂಡಾಗಿಯೂ, ಕಾಂತಿಯುಕ್ತವಾಗಿಯೂ, ಕಳಂಕರಹಿತವಾಗಿಯೂ ಇದ್ದುದನ್ನು ಚಂದ್ರನು ನೋಡಿ ಲೋಕಕ್ಕೆ ಮೊಗದೋರಿಸಲು ನಾಚಿ ರಾತ್ರಿ ಕಾಲಗಳಲ್ಲಿಯೆ ಸಂಚರಿಸಲುಪಕ್ರಮಿಸಿದನು. ತದ್ವ್ಯಸನದಿಂದಲೇ ನಷ್ಟಕಲೆಯಾದನು. ಹಂಸೆಯು ಈಕೆಯ ನಡಿಗೆಯನ್ನು ನೋಡಲಾರದೆ ಅಸೂಯೆಯಿಂದ ಕೊಳಗಳ ಧಡವನ್ನೆ, ಕಾಳಸರ್ಪಗಳು ಅವಳ ಜಡೆಯನ್ನು ನೋಡಲಾರದೆ ಬಿಲಗಳನ್ನೆ, ಬಾಳೆಯು ಅವಳ ತೊಡೆಯನ್ನು ನೋಡಲಾರದೆ ತಲೆಯನ್ನು ಬೊಗ್ಗಿಸಿಕೊಂಡು ಯಾವಾಗಲೂ ನೀರನ್ನೇ ಶೇರಿಬಿಟ್ಟವೊ, ಇತ್ಯಾದಿ ಇತ್ಯಾದಿ" (ಪು.೭).

ಇದೇ ಕ್ರಮದಲ್ಲಿ ಎಂದರೆ ಪ್ರಾಚೀನ ಸಂಸ್ಕೃತ ಕನ್ನಡ ಕಾವ್ಯಗಳಲ್ಲಿ ಬಂದ ಸ್ತ್ರೀ ವರ್ಣನೆ, ಕಾಮಶಾಸ್ತ್ರದಲ್ಲಿ ಉಕ್ತವಾದ ಸ್ತ್ರೀ ಲಕ್ಷಣ-ಇವನ್ನು ಮುಂದಿಟ್ಟುಕೊಂಡು ತನ್ನ ಸ್ತ್ರೀ ಪಾತ್ರಗಳ ರೂಪಲಾವಣ್ಯಗಳನ್ನು ವರ್ಣಿಸಿದ್ದಾನೆ. ಚತುರಿಕೆಯನ್ನು ವರ್ಣಿಸುತ್ತ 'ಕಾಮಶಾಸ್ತ್ರ ಪ್ರಕಾರೇಣ ಈ ಕಾಮಿನಿಯ ಭುಜಗಳು ಅತಿ ನಮ್ರಗಳಾಗಿರುವುದರಿಂದ ಸುಂದರಿಯೆಂದು ಹೇಳುವುದರಲ್ಲಿ ಸಂದೇಹವೇನು?' ಎಂದು ಮುಂತಾಗಿ ಆರಂಭವಾದ ಆ 'ಸ್ವಲ್ಪ ವರ್ಣನೆ'ಯು ಏಳು ಪುಟಗಳಷ್ಟಿದೆ. ಮೂವತ್ತು ವರ್ಷವಾಗಿದ್ದ ಅವಳಿಗೆ ಯಾವ ಪ್ರಿಯಕರನೂ ಇರಲಿಲ್ಲ! ಆದರೂ ಕೇವಲ ವರ್ಣನೆಯ ಹವ್ಯಾಸದಿಂದ ಅವಳ ರೂಪವರ್ಣನೆಯು ಮಿತಿಯನ್ನು ಮೀರಿ ಬಂದಿದೆ.

ಯುದ್ಧ ವರ್ಣನೆಗಳೂ ಅಲ್ಲಲ್ಲಿ ಬಂದಿದ್ದು ಆ ಬಗೆಯನ್ನು ತುಸು ನೋಡೋಣ. ಪ್ರತಾಪ, ರೆಜೆಂಟರ ಯುದ್ಧವಿದು:

"ಆಹಾ! ಏನೆಂದು ಹೇಳಲಿ! ಪ್ರತಾಪ ವಿಜಯವರ್ಮನು ಸಪ್ತಮದಾವಸ್ಥೆಯಿಂದ ಮುಂದುಗಾಣದೆ, ಕೆಂಗಣ್ಮಸಗಿ, ಕಡಂಗಿ, ಕಾಯ್ಪೇರಿ, ಕೋಲಾಹಲಮನೆಸಗಿ ಸುಂಟರುಗಾಳಿಯಂತೆ ಸುತ್ತಲೂ ಸುಳಿಸುಳಿದು ಸಮರ ಸಮಯ ಸಮುಂಚಿತ ನೇಪಥ್ಯಂ ಬಡೆದುಬ್ಬೆದಬ್ಬರಿಸಿ ಬೊಬ್ಬಿರಿದು ಫಲ್ಲಂನೆ ಲಂಘಿಸಿ ಸರಿಸದಲ್ಲಿ ನಿಂದು ಸಮುಖಿಂ ಗೈದು 'ಎಲೈ ಭಂಡನೇ, ನಿನ್ನ ಚಂಡಮುಂಡಗಳನ್ನು ತುಂಡುತುಂಡಾಗಿ ಕಡಿದು ಹಾಕದಿದ್ದರೆ ಪ್ರಚಂಡ ಪ್ರತಾಪರುದ್ದಂಡ ಮಂಡಿತನೇ' ಯೆಂದು ಕೋದಂಡ ದಂಡಮನಡರಿ ಸಿಡಿದು, ಜೀವಡೆದು ಮುಂಗಡೆಗಾಂತು ಭೂಮಿಯನ್ನು ಬಲಗಾಲಿನಿಂದ ವೊದಿಯಲು ಆಹಾ! ಆಗ ವೊದಗಿದ ಅದ್ಭುತಂಗಳನು ಏನೆಂದು ಹೇಳಲಿ. ನೆನಸಿಕೊಂಡರೆ ಈಗಲೂ ಬಹಳ ಭಯವಾಗುತ್ತದೆಯಲ್ಲಾ! ಉತ್ಪ್ರೇಕ್ಷೆ ಮಾಡಿ ಬರೆದರೆ ಈ ರೀತಿ ಹೇಳಬಹುದು. ಅದರ ನಿಜಸ್ಥಿತಿಗೆ ನಾವು ಜವಾಬುದಾರರಲ್ಲ. ಸಪ್ತಸಮುದ್ರಗಳೂ ಕದಡಲ್ಪಟ್ಟವು. ಫಣಿರಾಜನು ಫಳಂಕಿದನು. ದಿಕ್ಪಾಲಕರಳುಕಿದರು. ಕುಲಾಚಲಂಗಳು ಕಂಪಿಸಿದವು. ಇತ್ಯಾದಿ ಇತ್ಯಾದಿ. . .ಆಹಾ! ಮುಂದೆ ಹೇಳಲು ನಾಲಗೆಯೇ ಚಲಿಸುವುದಿಲ್ಲ. . . ಪಾಠಕರೇ ನಿಮ್ಮ ಮನಸ್ಸಿನಲ್ಲಿಯೂ ಭಯವು ಅಧಿಕವಾಗುತ್ತಿದೆಯಲ್ಲವೆ?"

ವರ್ಣನಾವಸರದಲ್ಲಿ ಕಾದಂಬರಿಕಾರನು ಪಾಠಕರನ್ನು ಹೀಗೆ ಮೇಲಿಂದ ಮೇಲೆ ಎಳೆದು ತರುತ್ತಾನೆ. ಕೃತ್ರಿಮವಾಗಿ ಆಕ್ಷೇಪಿಸಿದುದೂ ಇದೆ :

"ಪಾಠಕರೇ ಇದೇನು? ನೀವೇ [ಪತ್ರವನ್ನು] ಓದಿಕೊಂಡು ಬರವಣಿಗೆಯನ್ನು ಮಾತ್ರ ನಮ್ಮ ಮುಂದೆ ಶ್ಲಾಘನೆ ಮಾಡುತ್ತಿದ್ದೀರಿ. ಬರಿಯುತ್ತಿರುವ ಸಂಗತಿಯೇನು? ನಾವೇ ಓದಿಕೊಳ್ಳೋಣವೆಂದರೆ, ನಿಮ್ಮ ಮರೆಯಿಂದ ನಮಗೆ ಕಾಗದವೇ ಕಾಣುವುದಿಲ್ಲ."

'ಚಾತುರ್ಯೋಲ್ಲಾಸಿನಿ'ಯ ಕಥೆಯು ಚಮತ್ಕಾರಿಕವಾಗಿದ್ದು ತುಸು ಮಟ್ಟಿಗೆ ವಾಚನೀಯವಾಗಿದ್ದರೂ ಅತಿಯಾದ ಹಾಗೂ ಕೃತಕವಾದ ವರ್ಣನೆಯಿಂದಾಗಿ

ಕಾದಂಬರಿಯು ಔಚಿತ್ಯ, ಸಹಜತೆಗಳನ್ನು ಕಳೆದುಕೊಂಡಿದೆ. ವಿದ್ಯಾರ್ಥಿ ಮುರಿಗಾರಾಧ್ಯನು ಆಮೇಲೆ ಬೇರೊಂದು ಕೃತಿಯನ್ನು ಬರೆದಂತಿಲ್ಲ.

ಕನ್ನಡದ ಮೊತ್ತಮೊದಲಿನ ಪತ್ತೇದಾರಿ ಕಾದಂಬರಿಯಾದ* **ಚೋರಗ್ರಹಣ ತಂತ್ರವು** ಮರುವರ್ಷ ಹೊರಬಂದಿತು (೧೮೯೨). ಶಿಕ್ಷಣವೇತ್ತರೂ ರಾಜಕೀಯ ಧುರೀಣರೂ ಆಗಿದ್ದ ಎಂ. ವೆಂಕಟಕೃಷ್ಣಯ್ಯನವರು ಅದನ್ನು ಬರೆಯಲುದ್ಯುಕ್ತರಾದುದು ವಿಶೇಷವೆನಿಸಬಹುದು. ಆದರೆ ಅವರ ಉದ್ದೇಶವು ಹೊಡೆದಾಟ, ಬಡಿದಾಟದ, ರಹಸ್ಯಮಯ ಕತೆಯನ್ನು ಹೇಳಬೇಕೆಂದಿರದೇ ಕಳವು, ಕೊಲೆ, ಮೋಸ. . . .ಇವುಗಳಲ್ಲಿ ನಿರತರಾದವರಿಗೆ ಕೇಡು ತಪ್ಪಿದ್ದಲ್ಲ ಎಂಬುದನ್ನು ತೋರಿಸುವುದಾಗಿತ್ತು. ಅಂಥವರನ್ನು ಪತ್ತೆ ಹಚ್ಚಲು ಪೊಲೀಸರು ಅನುಸರಿಸುವ ವಿಧಾನಗಳನ್ನು ವಿವರಿಸಬೇಕೆನ್ನುವ ಅವರ ಉದ್ದೇಶವು ಶೀರ್ಷಿಕೆಯಿಂದಲೂ ವ್ಯಕ್ತವಾಗುತ್ತದೆ. ಓರ್ವ ಗಣ್ಯ ವ್ಯಕ್ತಿಯ ದ್ವಿತೀಯ ಪತ್ನಿಯ ಅಪಹರಣವಾದಾಗ ಅದನ್ನು ಪತ್ತೆ ಹಚ್ಚಲು ಪತ್ತೇದಾರ ಭೀಮ ಹಾಗೂ ಅವನ ಹಸ್ತಕಳಾದ ಸುಶೀಲೆ ಉದ್ಯುಕ್ತರಾಗುತ್ತಾರೆ. ಕೊನೆಯಲ್ಲಿ ಆ ಪತ್ನಿಯ ಮಗ ಮತ್ತು ಸ್ವತಃ ಅವಳೇ ಕಳ್ಳರ ತಂಡದ ಸದಸ್ಯರಾಗಿದ್ದ ಅಂಶವು ಹೊರಪಡುತ್ತದೆ.

ಅದರ ಮರುವರ್ಷವೇ ಗಳಗನಾಥರ (ಪ್ರಬುದ್ಧ) ಪದ್ಮನಯನಾ ಕಾಣಿಸಿಕೊಂಡಿತು. ಗಳಗನಾಥರು ತಮ್ಮ ಕಾದಂಬರೀ ಲೇಖನವನ್ನು ಒಂದು ಸ್ವತಂತ್ರ ಕೃತಿಯಿಂದ ಆರಂಭಿಸಿದರೆನ್ನುವುದು ಗಮನಾರ್ಹ ಸಂಗತಿ. ಹಲವಾರು ಆವೃತ್ತಿಗಳನ್ನು ಕಂಡ ಈ ಕೃತಿಯು ಕನ್ನಡಿಗರಿಗೆ ಪರಿಚಿತವಾದುದು. ಕನೋಜ ಮುಂತಾದ ದೇಶಗಳ ಹೆಸರು ಬರುತ್ತಿದ್ದರೂ ರಾಕ್ಷಸರು ಹಾಗೂ ಅವರ ಮಾಯಾವಿತನವು ವರ್ಣಿತವಾಗಿರುವುದರಿಂದ ಇದು ಐತಿಹಾಸಿಕ ಕಾದಂಬರಿಯೇನಲ್ಲ. ಒಂದು ಅದ್ಭುತ ರಮ್ಯ ಕಥೆಯೆಂದೇ ಇದನ್ನು ಬಗೆಯಬೇಕು. ಕಥೆ ಹೀಗಿದೆ:

ಕನೋಜದ ವೀರವರ್ಮನಿಗೆ ಕಪಿಂಜಲ ಋಷಿಯ ಮಹಿಮೆಯಿಂದ ಜನಿಸಿದ ಪದ್ಮನಯನೆಯನ್ನು ಸಿಂಹಳದ ರಾಕ್ಷಸ ರಾಜನಾದ ಮೇಘನಾದನು ಅಪಹರಿಸುತ್ತಾನೆ. ಆಗ ಮಾಳವ ದೇಶದ ಕಮಲಾಕ್ಷನು ಬಂದು ಅವಳ ಸೆರೆಯನ್ನು ಬಿಡಿಸಿ, ಗಾಂಧರ್ವ ರೀತ್ಯಾ ವಿವಾಹವಾಗುತ್ತಾನೆ. ಆದರೆ ಮೇಘನಾದನ ತಮ್ಮ ಸಿಂಹನಾದನ ಮಾಯೆಯಿಂದ ಅವರು ಅಗಲುತ್ತಾರೆ. ಕಮಲಾಕ್ಷನು ಬೇರೆ ಹೆಸರಿನಿಂದ ಕನೋಜಕ್ಕೆಯೆ ಬಂದು ಅಲ್ಲಿಯ ಮಂತ್ರಿಸುತೆಯಾದ ಜೀವನಕಲೆಯನ್ನು ಮದುವೆಯಾಗುತ್ತಾನೆ.

---

*ಕ್ರಿ.ಶ. ೧೮೯೨ರಲ್ಲಿ ರಚಿತವಾದ "ಹಗಲು ಚುಕ್ಕಿ, ರಾತ್ರಿ ಚುಕ್ಕಿ" ಎಂಬ, ಚೋರರ ಕಥೆಯು ಪ್ರಥಮ ಪತ್ತೇದಾರಿ ಕಾದಂಬರಿ ಎಂಬುದಾಗಿ ಸುದರ್ಶನ ದೇಸಾಯಿ ಎನ್ನುವವರು, ಪ್ರಥಮ ಪತ್ತೇದಾರಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಹೇಳಿದ್ದಾರೆ. ಈ ಹಗಲು ಚುಕ್ಕಿ . . .ಕಥೆ 'ಕಥಾಸರಿತ್ಸಾಗರ'ದಿಂದ ಎತ್ತಿಕೊಂಡದ್ದು ಅದರಲ್ಲಿ ಪತ್ತೇದಾರಿಕೆಯ ಲವಲೇಶವೂ ಇಲ್ಲ.

ಪದ್ಮನಯನೆಯನ್ನು ಮರೆಯದೆ, ಅವಳನ್ನು ಹುಡುಕುತ್ತಲಿದ್ದಾಗ ಆಕೆ ಪಾಂಡ್ಯದೇಶದ ರಾಜನಲ್ಲಿ ತನ್ನ ಮಗು ವಿಕ್ರಮಾರ್ಕನೊಂದಿಗೆ ವಾಸವಾಗಿದ್ದುದು ತಿಳಿಯುತ್ತದೆ. ಕಥೆ ಅವರ ಮಿಲನದಲ್ಲಿ ಮುಕ್ತಾಯವಾಗುತ್ತದೆ.

ಗೊಂಡಾರಣ್ಯದ ಮಧ್ಯದಲ್ಲಿದ್ದ ಮೇಘನಾದನ ವಿಹಾರ ಮಂದಿರ, ಅವನಿಗೆ ಮರಣಕಾರಿಯಾದಂಥ ಧನಸ್ಸು, ಸಿಂಹನಾದನು ಗಿಳಿಯಾಗಿ ಬಂದು ಕಮಲಾಕ್ಷನನ್ನು ಸೆಳೆದೊಯ್ಯುವುದು, ಕಪಿಂಜಲ ಋಷಿಯು ಕನಸಿನಲ್ಲಿ ಮೇಲಿಂದ ಮೇಲೆ ಬಂದು ಮಾರ್ಗದರ್ಶನ ಮಾಡುವುದು. ಇವೇ ಮೊದಲಾದ ಅಲೌಕಿಕ ಸಂಗತಿಗಳು ಜರುಗುತ್ತವೆ. ಪದ್ಮನಯನೆ, ಕಮಲಾಕ್ಷ, ಜೀವನಕಲೆ ಇವರ ಪ್ರಣಯ ಜೀವನವು ಸಾಕಷ್ಟು ಪ್ರಾಶಸ್ತ್ಯವನ್ನು ಪಡೆದಿದೆ. ಇದು ಸ್ವತಂತ್ರ ಕಥಾನಕವೆಂಬುದರಲ್ಲಿ ಸಂದೇಹವಿಲ್ಲ. ಆದರೆ ಕೆಲವು ಪುರಾಣ ಪ್ರಸಿದ್ಧ ಕಥಾಂಶಗಳು ತಮ್ಮ ಪಡಿನೆಳಲನ್ನು ಹರಡಿವೆ. ಸಿಂಹಳದ ಮೇಘನಾದನು ರಾವಣನಂತಿದ್ದು, ಪದ್ಮನಯನೆಯನ್ನು ಅವನು ಭಂಗಪಡಿಸದಿದ್ದುದು ಸೀತಾದೇವಿಯ ಅಂಥದೇ ಸಂದರ್ಭವನ್ನು ನೆನಪಿಗೆ ತರುತ್ತದೆ. ಪದ್ಮನಯನೆಯು ಗರ್ಭಿಣಿಯಾಗಿ ಬೇರೊಬ್ಬರ ಮನೆಯಲ್ಲಿ ಮಗುವನ್ನು ಬೆಳೆಯಸಿವು ಪ್ರಸಂಗವು ಸೀತೆ, ಶಕುಂತಲೆಯರ ಬಾಳಿನಲ್ಲಿ ಬಂದುದೇ ಆಗಿದೆ. ಅದರಂತೆ ಉಂಗುರದ ದರ್ಶನದಿಂದ ಪದ್ಮನಯನೆಗೆ ತನ್ನ ಗಂಡನ ವರ್ತಮಾನ ತಿಳಿಯುತ್ತದೆ. ಆದರೂ ಜೀವನಕಲೆಯು ಕಮಲಾಕ್ಷನು ಸತ್ತನೆಂದು ಸುಳ್ಳು ಹೇಳಿ, ಪದ್ಮನಯನೆಯು ಅಗ್ನಿಪ್ರವೇಶ ಮಾಡುವಂತೆ ಪ್ರೇರೇಪಿಸಿ ಆ ಮೂಲಕ ಅವಳ ಪಾತಿವ್ರತ್ಯದ ಬಗ್ಗೆ ಮುಂದೆ ಯಾರಿಗೂ ಸಂಶಯವುಂಟಾಗದಂತೆ ಮಾಡಿದುದರಲ್ಲಿ ಕಾದಂಬರಿಕಾರರ ನೈಪುಣ್ಯ ವ್ಯಕ್ತವಾಗಿದೆ.

ಪಾತ್ರ ಚಿತ್ರಣವು ಸ್ಫುಟವಾಗಿರುವುದು ಮೆಚ್ಚತಕ್ಕದ್ದಾಗಿದೆ. ಕಮಲಾಕ್ಷನಿಗಿಂತ ಪದ್ಮನಯನೆಯೇ ಹೆಚ್ಚು ಧೀರೋದಾತ್ತಳೂ ಬುದ್ಧಿವಂತೆಯೂ ಆಗಿದ್ದಾಳೆ. ಕಪಿಂಜಲನ ಶಿಷ್ಯನಾದ ಸುಮತಿಯು ತನ್ನ ಸೂಜ್ಞವಾದ ಹಾಗೂ ವ್ಯವಹಾರನಿಷ್ಠವಾದ ಧರ್ಮೋಪದೇಶದಿಂದ ವಾಚಕರ ಗಮನವನ್ನು ಸೆಳೆಯುತ್ತಾನೆ. ಸಹಜ ರಮ್ಯವಾದ ಅನೇಕ ಸನ್ನಿವೇಶಗಳು ಕಂಡುಬರುತ್ತವೆ. ಪದ್ಮನಯನೆಯ ರೂಪ ವರ್ಣನೆ, ಕಮಲಾಕ್ಷನು ಅವಳಿಂದ ಪ್ರಥಮ ಚುಂಬನವನ್ನು ಪಡೆದ ಬಗೆ, ಗರ್ಭಿಣಿಯಾದ ಪತ್ನಿಯು ಅಡವಿಯಲ್ಲಿ ಮಲಗಿದ್ದಾಗ ಅವಳಿಗೆ ತನ್ನ ಉತ್ತರೀಯವನ್ನು ಹೊದಿಸಿದುದರ ಹಿಂದಿನ ವಾತ್ಸಲ್ಯಭಾವ, ಪದ್ಮನಯನೆಯನ್ನು ಸಿಂಹಕೇತುವು ತನ್ನ ಅರಮನೆಗೆ ಕರತಂದಾಗ ಎಳವರೆಯದ ಮಂಜುಘೋಷೆಯು ಹತ್ತಾರು ಜನರ ಮಧ್ಯದಲ್ಲಿದ್ದುಕೊಂಡು ಪತಿಯನ್ನು ಸ್ವಾಗತಿಸುವಲ್ಲಿ ತೋರಿದ ಲಜ್ಜಾನ್ವಯ–ಎಲ್ಲವೂ ಕಾದಂಬರಿಯನ್ನು ಮೇಲಿನ ಮಟ್ಟಕ್ಕೆ ಒಯ್ಯುತ್ತವೆ. ಕನ್ನಡ ಕಾದಂಬರಿ ಕಲೆಯು ಮುಂದಡಿ ಇಟ್ಟದ್ದರ ಕುರುಹೆಂದರೆ– ಈ ಕಾದಂಬರಿ.

'ಪದ್ಮನಯನಾ' ಪ್ರಕಟವಾದ ಮರುವರ್ಷವೆ ವಾಗ್ಭೂಷಣ ಗ್ರಂಥಮಾಲೆಯು

ಗೂಳಪ್ಪ ಕೊಟ್ರಪ್ಪ ಅರಳಿ ವಿರಚಿತ 'ಕನ್ನಡ ಶೌರ್ಯಸಾಗರ' ವೆಂಬ ಕಾಲ್ಪನಿಕ ಕಾದಂಬರಿಯನ್ನು ಹೊರತಂದಿತು. ಪುಣ್ಯಪುರದ ರಾಜನಾದ ಮದನಸುಂದರನು ಗರ್ಭವತಿಯಾದ ಪತ್ನಿಯು ಬಯಕೆಯನ್ನು ಈಡೇರಿಸಲು, ವನವಿಹಾರಕ್ಕೆ ಹೋದಾಗ ಓರ್ವ ಮಾಯಾವಿನಿಯ ಪ್ರಭಾವದಿಂದ ಪತ್ನಿಯನ್ನು ತ್ಯಜಿಸುತ್ತಾನೆ. ಆಕೆಯು ಶಾಂತಿವರ್ಧನ ಮುನಿಯ ಆಶ್ರಯದಲ್ಲಿ ಮಗನನ್ನು ಪಡೆಯುತ್ತಾಳೆ. ಅವನೇ ಶೌರ್ಯ ಸಾಗರ. ಇತ್ತ ಮಾಯಾವಿನಿಯು ಹೊರಟು ಹೋದ ಮೇಲೆ ರಾಜನಿಗೆ ಪಶ್ಚಾತ್ತಾಪವಾಗಿ, ತನ್ನ ಸತಿಸುತರನ್ನು ಕರೆತರುತ್ತಾನೆ. ಇದು ಸ್ವಕಲ್ಪನೆಯ ಕಥೆಯಂತೆ ಕಂಡರೂ ಪೂರ್ವಾರ್ಧ ದಲ್ಲಿ ಸೀತಾಪರಿತ್ಯಾಗದ, ಅನಂತರ ಶಾಕುಂತಲ ನಾಟಕದ ಅನುಕರಣವಿದ್ದುದು ಸ್ಪಷ್ಟವಿದೆ. ಪಾತ್ರಗಳ ಮಾತಿನ ರೀತಿಯು ಸಾಮಾನ್ಯ ವ್ಯಕ್ತಿಗಳಂತಿದೆ. ಮಣಿಮಂಜರಿಯೆಂಬ ಆಶ್ರಮಕನ್ಯೆ ಹಾಗೂ ಶಾಂತಿವರ್ಧನರ ನಡುವಿನ ಸಂಭಾಷಣೆಯಿದು :

"ಮಣಿ:–ಹೇಳುವದೇನು? ನೀವಂತೂ ಪ್ರಪಂಚ ಪರಿತ್ಯಾಗಮಾಡಿ ತಪಸ್ಸು ಮಾಡುವವರು. ಅಂದಮೇಲೆ ನಮ್ಮಂಥವರು ಹಾದಿಗೆ ಹತ್ತುವುದು ಕಠಿಣವು.

ಶಾಂತಿ:– ಹಾ ಹೀಗೆನ್ನಬಾರದೆ? ನಿನ್ನ ಅಭಿಪ್ರಾಯವು ವಿದಿತವಾಯಿತು. ಈತನು ಪ್ರಪಂಚತ್ಯಾಗಿಯು; ಈತನಿಗೆ ನಿನ್ನ ಲಗ್ನದ ವಿಷಯವಾಗಿ ಚಿಂತೆ ಇರಲಿಕ್ಕಿಲ್ಲವೆಂದು ಭಾವಿಸಿದೆಯಾ? ಅಂಥಿಂಥವರಿಗೆ ಕೊಟ್ಟರೆ ಮುಂದೆ ಕಷ್ಟ ಬಟ್ಟು, ನೀನು ನನ್ನನ್ನು ಬೈಯಲಿಕ್ಕಿಲ್ಲೇ? ಅದರ ಸಲುವಾಗಿ ಯೋಗ್ಯ ವರನನ್ನು ಶೋಧಿಸುತ್ತೇನೆ ಕಂಡಿಯಾ?"

ಕಡೆಯದಾಗಿ, ಕನ್ನಡದ ಆದ್ಯ ಸ್ವತಂತ್ರ ಸಾಮಾಜಿಕ ಕಾದಂಬರಿಯ ಪರಿಶೀಲನೆ. ಗುಳವಾಡಿ ವೆಂಕಟರಾಯರ 'ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ'ವು ಯಾವ ದೃಷ್ಟಿಯಿಂದ ವಿಚಾರಿಸಿದರೂ ಆಧುನಿಕವೆಂದು ಕರೆಯಿಸಿಕೊಳ್ಳಲು ಯೋಗ್ಯವಾಗಿದೆ.

ಭೀಮರಾಯ ಎಂಬ ಉದ್ಯೋಗಸ್ಥನ ಕುಟುಂಬಕ್ಕೆ ಸಂಬಂಧಿಸಿದ ಈ ಕಾದಂಬರಿಯ ಪೂರ್ವಾರ್ಧದಲ್ಲಿ, ಭೀಮರಾಯ–ಅಂಬಾಬಾಯಿ ಇವರ ಕಥಾನಕವಿದೆ. ಉತ್ತರಾರ್ಧದಲ್ಲಿ, ಅವರ ಮಗಳು ಇಂದಿರೆ ಮತ್ತು ಭಾಸ್ಕರ ಇವರ ಜೀವನ ಚಿತ್ರಣವಿದೆ. ಮೊದಲಿನದರಲ್ಲಿ ಅಂದಿನ ಮಧ್ಯಮವರ್ಗೀಯರ ಸಾಮಾಜಿಕ ದೌರ್ಬಲ್ಯವು ಚಿತ್ರಿತವಾಗಿದ್ದರೆ ಇನ್ನೊಂದರಲ್ಲಿ ತರುಣ ಪೀಳಿಗೆಯ ಸದ್ಧರ್ಮ ಭಾವನೆಗೆ ವಿಜಯ ದೊರೆತಿದೆ. ಪತ್ನಿಗೆ ಅಧೀನನಾಗಿರುವ, ಇಲ್ಲವೆ ಉಪಪತ್ನಿಯರೊಡನೆ ವಿಲಾಸ ಜೀವನ ನಡೆಸುವ ಗಂಡಸರು; ಚಾಡಿಯ ಮಾತು, ಮತ್ಸರ ಬುದ್ಧಿಗಳಿಂದ ಕೂಡಿದ ಹೆಂಗಸರು; ಅಧರ್ಮದಿಂದ ಜೀವನ ಸಾಗಿಸುತ್ತಲೆ ಸಂತ, ಧರ್ಮರಕ್ಷಕರೆಂದುಕೊಂಡು ಮೆರೆಯುವ ಭಂಡರು; ಇವರ ಬಗ್ಗೆ ವಾಸ್ತವಾಂಶದಿಂದ ಕೂಡಿದ ಸನ್ನಿವೇಶಗಳಿವೆ. ಪತ್ನಿಯ ಮಾತು ಕೇಳಿ ಭಾಸ್ಕರನ ತಂದೆಗೆ ವಿಷ ಹಾಕಿಸಿದ್ದ ಭೀಮರಾಯನ ವಿಚಾರಣೆಯು ಕೋರ್ಟಿನಲ್ಲಿ ನಡೆದಾಗ, ಲಂಚದ ಬಲದಿಂದ ಅವನು ಪಾರಾದುದು ಕಾದಂಬರಿಯ ಮಹತ್ವದ

ಸಂದರ್ಭವಾಗಿದೆ. ಕಾದಂಬರಿಯ ರಚನೆಗೆ ೩೦-೪೦ ವರ್ಷಗಳ ಹಿಂದೆ ನಡೆದ ಘಟನೆ ಕಾರಣವಾಗಿದ್ದಿತೆಂದು ಕೌಚ್‌ಮನ್ ತನ್ನ ಇಂಗ್ಲಿಷ್ ಅನುವಾದದ ಪೀಠಿಕೆಯಲ್ಲಿ ಹೇಳಿದ್ದಾನೆ. ಕಾದಂಬರಿಯ ಪೂರ್ವಾರ್ಧದಲ್ಲಿ ಪೊಲೀಸರ ನಡೆವಳಿಕೆಯ ಸ್ಪಷ್ಟ ಚಿತ್ರಣವಿದೆ. ಅದೇ ಖಾತೆಯಲ್ಲಿ ಅಧಿಕಾರಿಯಾಗಿದ್ದ ಕಾದಂಬರಿಕಾರರು ಅದನ್ನು ನಿರಾಯಾಸವಾಗಿ ಹೇಳಿಕೊಂಡು ಹೋಗಿದ್ದಾರೆ.

ಇಂದಿರೆಯು ಬಾಲೆಯಿರುವಾಗಲೇ ಅವಳ ಗಂಡನು ವ್ಯಭಿಚಾರಾದಿ ದುರ್ಗುಣಗಳಿಗೆ ಬಲಿಯಾಗಿ ಸಾಯುವನು. ಅವಳ ಮನಸ್ಸಿನ ಸಾಂತ್ವನಕ್ಕಾಗಿ ಮನೆಯಲ್ಲಿ ನಡೆಸಿದ ಸಂತ ಮಂಡಲಿಯ ಕಾರ್ಯಕ್ರಮದ ಸನ್ನಿವೇಶವನ್ನು ಇಲ್ಲಿ ನೆನೆಯಬೇಕು. ಮಂಡಲಿಯ ಅಧ್ಯಕ್ಷನು ಮಧ್ಯರಾತ್ರಿಯಲ್ಲಿ ಅವಳ ಕೋಣೆಗೆ ಬಂದಾಗ ಆಕೆ ಅವನನ್ನು ಒಳಗೆ ಕೂಡ್ರಿಸಿ ಹೊರ ಚಿಲಕ ಹಾಕುವಷ್ಟು ಧೈರ್ಯ ತೋರಿದರೂ ತಾನು ವಕೀಲ ಅಮೃತರಾಯನ ಮನೆಯ ಕೊಟ್ಟಿಗೆಯ ಕೊಠಡಿಯಲ್ಲಿ, ತೋಯಿಸಿಕೊಂಡ ಗುಬ್ಬಿಯಂತೆ ಅವಿತು ಕುಳಿತಿದ್ದ ದೃಶ್ಯವು ಹೃದಯವನ್ನು ಕಲಕುತ್ತದೆ. ಮುಂದೆ ಅಮೃತರಾಯನ ಉದಾರಾಶ್ರಯದಿಂದ ಇಂದಿರೆ, ಭಾಸ್ಕರರು ಕಷ್ಟ ಪಟ್ಟು ವಿದ್ಯೆ ಕಲಿತುದು ಮತ್ತು ಮದುವೆಯಾದುದು, ಸಮಾಜ ಸುಧಾರಣೆಯ ಲವಲವಿಕೆಯಿಂದ ಪ್ರೇರಿತವಾದ ಸನ್ನಿವೇಶಗಳಾಗಿದ್ದರೂ ತೀರ ಸಹಜ ರೀತಿಯಲ್ಲಿ ಚಿತ್ರಿತವಾಗಿದೆ.

ಕಾದಂಬರಿಯು ಪ್ರಕಟವಾದ ವರ್ಷಾವಧಿಯೊಳಗೇ ೮೦೦ಕ್ಕೆ ಮೇಲ್ಪಟ್ಟು ಪ್ರತಿಗಳು ಮಾರಾಟವಾದುವಂತೆ. ಬೆಲೆಯೇನೋ ಆಗಿನ ಕಾಲಕ್ಕೆ ೧ ರೂ. ಇದ್ದಿತು. ಆದರೆ ಪೊಲೀಸ್ ಖಾತೆಯವರು ಕೊಳ್ಳುವುದಾದರೆ ಅದು ೧೨ ಆಣೆಗೆ ಲಭ್ಯವಿದ್ದಿತಂತೆ !

ಅದು ಹೇಗೂ ಇರಲಿ, ಕೌಚ್‌ಮನ್ ಅದನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದೇಕೋ? ಆ ಭಾಷೆಯಿಂದಲೇ ಕನ್ನಡಕ್ಕೆ ಅನುವಾದಗೊಳ್ಳುವ ಪರಿಪಾಠವಿದ್ದಾಗ, ಏನು ಕಾರಣ ಇದ್ದಿರಬೇಕು? ಅವನೇನೂ ಸಾಹಿತ್ಯದ ಮೌಲ್ಯವನ್ನು ಬಲ್ಲ ವಿಮರ್ಶಕನೇನಲ್ಲ. ಧಾರ್ಮಿಕ ಇಲ್ಲವೆ ವ್ಯಾವಹಾರಿಕ ಪ್ರಯೋಜನದ ದೃಷ್ಟಿ ಅವನಲ್ಲಿರಬೇಕಾದ ಕಾರಣವಿರಲಿಲ್ಲ. ಅವನು ಆ ಹಿಂದಿನ ೧೪-೧೫ ವರ್ಷ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೆ ಇದ್ದು, ಜನತೆಯೊಡನೆ ಬೆರೆತವ. ಬಾಲ್ಯವಿವಾಹ, ಸಮುದ್ರ ಪರ್ಯಟನಾದಿ ವಿಷಯಗಳು ಸಾರ್ವಜನಿಕ ಚರ್ಚೆಗೆ ಒಳಗಾಗಿದ್ದುದನ್ನು ಅವನೇ ತನ್ನ ಪೀಠಿಕೆಯಲ್ಲಿ ಹೇಳಿದ್ದಾನೆ. ಸ್ತ್ರೀ ವಿಷಯಕವಾದ ಸುಧಾರಣೆಯ ಬಗ್ಗೆ ಅವನಿಗೆ ಅನುಕಂಪೆ ಇದ್ದಿರಲೂ ಸಾಕು. ಏನಿದ್ದರೂ ಅವನ ಈ ಅನುವಾದ ಕಾರ್ಯವು ಅಚ್ಚರಿಗೊಳಿಸುವಂತಹದೂ, ಅದ್ವಿತೀಯವಾದದ್ದೂ ಆಗಿದೆ.

ಆದರೆ ಅನುವಾದ ಕಾರ್ಯ ಅವನ ಪಾಲಿಗೆ ಸುಲಭವಾದದ್ದಿರಲಿಲ್ಲ. ಅನೇಕ ಅಡೆತಡೆಗಳು, ಕನ್ನಡದ ವಾಗ್ರೂಢಿ ಹಾಗೂ ಮೂಲದಲ್ಲಿ ಬಂದ ಅನೇಕ ಗಾದೆಮಾತುಗಳು,

ಅದರಂತೆ ಗೌರವಸೂಚಕ, ಬಹುವಚನ ಇತ್ಯಾದಿಗಳ ಅನುವಾದಗಳು ಸಾಕಷ್ಟು ತೊಂದರೆ ಕೊಟ್ಟಿವೆ. ಹೀಗಾಗಿ ತಪ್ಪುಗಳಿವೆ. ಆದರೆ ಅದು ಅವನ ಅಸಾಮರ್ಥ್ಯದ ನಿದರ್ಶನವೆಂದು ತಿಳಿಯದೇ, ವಿಭಿನ್ನ ಜನಜೀವನ ಚಿತ್ರಣವುಳ್ಳ ಹಾಗೂ ಭಾರತೀಯ ಭಾಷಾ ಮೂಲದ ಕೃತಿಯೊಂದರ ಅನುವಾದದಲ್ಲಿ ಬರುವ ಸಮಸ್ಯೆಗಳ ನಿದರ್ಶನವೆಂದೇ ತಿಳಿಯಬೇಕು. (ಹೆಚ್ಚಿನ ವಿವರಗಳಿಗೆ 'ಗುಳವಾಡಿ ವೆಂಕಟರಾಯರು' ಎಂಬ ಪುಸ್ತಕದಲ್ಲಿಯ 'ಇಂಗ್ಲಿಷ್‌ನಲ್ಲಿ ಇಂದಿರಾ ಬಾಯಿ' ಎಂಬ ಲೇಖವನ್ನು ಗಮನಿಸಬಹುದು.)

ಇದರಲ್ಲಿ ಎತ್ತಿಕೊಂಡ ಬಾಲ್ಯ ವಿವಾಹ, ಸಮುದ್ರ ಪರ್ಯಟನೆ, ಧಾರ್ಮಿಕ ಡಂಭಾಚಾರ, ಗುರುಪೀಠಗಳಲ್ಲಿಯ ಲೋಪದೋಷಗಳು ಪೋಲೀಸ್ ಕೋರ್ಟಿನ ವ್ಯವಹರಣೆಗಳು, ಆ ಮುಂದಿನ 'ರೋಹಿಣಿ' (ಗುಳವಾಡಿ ಅಣ್ಣಾಜಿರಾಯನ ಕೃತಿ) ಮತ್ತು 'ವಾಗ್ದೇವಿ' (ಬೋಳಾರ ಬಾಬುರಾಯ ಕೃತ), ಈ ಕಾದಂಬರಿಗಳಲ್ಲಿಯೂ ವ್ಯಕ್ತವಾಗಿ, ಕನ್ನಡ ಸಾಮಾಜಿಕ ಕಾದಂಬರಿಯ ತೇರು ಸಡಗರದಿಂದ ಮುಂದೆ ಸಾಗಿತು.*

## ಸಂದರ್ಭ ಸೂಚಿ

೧. Mudrarakshasa Purvasankathanaka-prefatory note.

೨. ಕನ್ನಡ ಸಾಹಿತ್ಯದ ಇತಿಹಾಸ, ಪು.೧೮೧

* ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳನ್ನು ಅನುಬಂಧ ೮– ರಲ್ಲಿ ಕೊಟ್ಟಿದೆ.

## ಪ್ರಕರಣ : 9
# ಸಮಾರೋಪ

ಇದುವರಗೆ ಕನ್ನಡದ ನವೋದಯ ಸಾಹಿತ್ಯದ ಸಾಮಾನ್ಯವಾದ ಹಾಗೂ ತಕ್ಕಮಟ್ಟಿಗೆ ನಿರ್ದಿಷ್ಟವಾದ ಅಭ್ಯಾಸವನ್ನು ಜಿಜ್ಞಾಸುಗಳೆದುರಿಗೆ ಮಂಡಿಸಿದ್ದಾಯಿತು. ಇನ್ನು ಈ ವಿಶಾಲವಾದ ಮತ್ತು ಸಂಕೀರ್ಣ ಸ್ವರೂಪದ ವಾಙ್ಮಯ ಸಮೀಕ್ಷೆಯಿಂದ ಕಂಡುಬರುವ ಸಾಹಿತ್ಯಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಗೆ ಕಾರಣವಾದ ಅದರ ಶಕ್ತಿ, ವೈಶಿಷ್ಟ್ಯಗಳನ್ನು ಇಲ್ಲಿ ಎತ್ತಿ ಹೇಳಬಯಸಿದೆ.

ಹದಿನೆಂಟನೆಯ ಶತಮಾನದಲ್ಲಿ ಮೈಸೂರಿನ ಆಸ್ಥಾನ, ದಕ್ಷಿಣ ಕನ್ನಡ ಜಿಲ್ಲೆ ಮತ್ತು ಗದ್ವಾಲ–ರಾಯಚೂರುಗಳ ನಡುವಿನ ಸೀಮೆ ಇವಷ್ಟೆ ವಾಙ್ಮಯ ಕ್ಷೇತ್ರಗಳಾಗಿದ್ದುವು. ಹತ್ತೊಂಬತ್ತನೆಯ ಶತಮಾನದಲ್ಲಿ ವಾಙ್ಮಯ ನಿರ್ಮಿತಿಯು ನಾಡಿನ ಮೂಲೆಮೂಲೆಗೂ ವ್ಯಾಪಿಸಿತಲ್ಲದೆ, ಹೊರನಾಡಿನಲ್ಲಿಯೂ ಮೂಡಿ ಬಂದಿತು. ಧರ್ಮ ಮತ್ತು ಕಾವ್ಯಧರ್ಮದ ಜೊತೆಗೆ ಅಂದಿನ ಕನ್ನಡ ಸಾಹಿತ್ಯವು ಹಲವಾರು ಲೌಕಿಕ ಅಂಶಗಳಿಂದಲೂ ಪ್ರೇರಣೆಯನ್ನು ಪಡೆಯಿತು. ಹಳಗನ್ನಡ ಕಾವ್ಯ ವಿಷಯಗಳೂ ಅದರ ಸಾಹಿತ್ಯ ಪ್ರಕಾರಗಳೂ ಹತ್ತೊಂಬತ್ತನೆಯ ಶತಮಾನದಲ್ಲಿ ಮೊದಲಿನಂತೆಯೇ ಮುಂದುವರಿದುವಲ್ಲದೆ ಹೊಸ ಕಾಲದ ಅಂಶಗಳೂ ಗದ್ಯದ ನಾನಾ ರೂಪಗಳೂ ಅದರಲ್ಲಿ ಸಮ್ಮಿಳಿತವಾದುವು.

ಅಂದಿನ ಕನ್ನಡ ಸಾಹಿತ್ಯ ನಿರ್ಮಿತಿಗೆ ಎಲ್ಲ ಕಡೆಗಳಿಂದಲೂ ಸಹಾಯ ಒದಗಿ ಬಂದಿತು. ಸಂಸ್ಕೃತ, ಇಂಗ್ಲಿಷ್‌ಗಳಂತೂ ಸರಿಯೇ. ಮರಾಠಿ, ತೆಲುಗು, ಬಂಗಾಲಿ ಮೊದಲಾದ ಭಾಷೆಗಳಿಂದ ನೆರವನ್ನು ಧಾರಾಳವಾಗಿ ಪಡೆಯಲಾಯಿತು. ವಿವಿಧ ಸರಕಾರಗಳಿಂದಲೂ ಅದಕ್ಕೆ ಪೋಷಣೆ ಸಂದಿತು. ಅಂದಿನ ಲೇಖಕ ವರ್ಗವು ರಾಜರು, ಮಠಾಧೀಶರು, ದಾಸ–ಶರಣರು, ವಿದೇಶೀಯರು, ಶಿಕ್ಷಕರು, ಅಧಿಕಾರಿಗಳು ಹಾಗೂ ರಸಿಕರು–ಇವರೆಲ್ಲರನ್ನೂ ಒಳಗೊಂಡಿದ್ದಿತು. ಹೀಗಿರುವಾಗ ಅಂದಿನ ಸಾಹಿತ್ಯವು ವಿಶಾಲವಾದುದರ ಜೊತೆಗೆ ಸಮ್ಮಿಶ್ರ ಸ್ವರೂಪವನ್ನು ಹೊಂದಿತು; ಮತ್ತು ಇಪ್ಪತ್ತನೆಯ ಶತಮಾನದ ಸಾಹಿತ್ಯದ ಬೆಳಸಿಗೆ ತಕ್ಕ ಭೂಮಿಕೆಯನ್ನು ಒದಗಿಸಿತು.

ಹತ್ತೊಂಬತ್ತನೆಯ ಶತಮಾನದ ಸಾಹಿತ್ಯವು ಹೀಗೆ ಹಳತು. ಹೊಸತು ಇವೆರಡೂ ಅಂಶಗಳನ್ನು ತನ್ನಲ್ಲಿ ಉಳಿಸಿಕೊಂಡಿದ್ದರೂ ಹಳೆಯ ಕಾವ್ಯರೂಪಗಳಲ್ಲಿ ಚಂಪೂ,

ರಗಳೆ, ಸಾಂಗತ್ಯ ಮುಂತಾದವು ಆ ಶತಮಾನದ ಅಂತ್ಯದವರೆಗೆ ಮಾತ್ರ ಉಳಿದುವು. ನಡುಗನ್ನಡ ಕಾಲದಲ್ಲಿದ್ದಂತೆ, ೧೯ನೆಯ ಶತಮಾನದಲ್ಲಿ ಸಹ ಹೆಚ್ಚಳವನ್ನು ಕಂಡಿದ್ದ ಷಟ್ಪದಿಯೂ ಹಿಂದುಳಿಯಿತು. ಜೈನ ಸಾಹಿತ್ಯ ರಚನೆಗೂ ಈ ಶತಮಾನವು ಕೊನೆಯ ಗಡುವಾಯಿತು. ಅದರಂತೆ ಕೆಲವು ಸಾಹಿತ್ತಿಕ ಅಂಶಗಳು ೧೯ನೆಯ ಶತಮಾನದಲ್ಲಿಯೇ ಒಗೆತಂದುವಾದರೂ, ಆ ಕಾಲವು ಕೊನೆಗೊಳ್ಳುವ ವೇಳೆಗೆ ಅವೂ ಅಂತ್ಯವಾದುವು ! ಸಂಸ್ಕೃತ, ಕಾವ್ಯ, ಶಾಸ್ತ್ರ ಗ್ರಂಥಗಳ ಅಧ್ಯಯನ, ಅದರಂತೆ ಮಿಶನರಿ ಸಾಹಿತ್ಯ ರಚನೆ–ಇವು ಹತ್ತೊಂಬತ್ತನೆಯ ಶತಮಾನದಲ್ಲಿ ವಿಶೇಷವಾಗಿ ಮುಂದುವರಿಯಲಿಲ್ಲ.

ಈ ಸಂದರ್ಭದಲ್ಲಿ ಎದ್ದುಕಾಣುವ ಸಂಗತಿಯೆಂದರೆ ಕನ್ನಡದಲ್ಲಿ ಕ್ರೈಸ್ತ ವಾಙ್ಮಯವು ಪ್ರತ್ಯೇಕವಾಗಿಯೇ ಉಳಿದದ್ದು, ಬೈಬಲ್ ಅನುವಾದ ಕಾರ್ಯದ ಸಮಾಲೋಚನೆಯಲ್ಲಿ ನಾವು ಸೂಚಿಸಿದಂತೆ ಕ್ರೈಸ್ತ ಸಾಹಿತ್ಯವಾಹಿನಿಯ ನೆಲೆ ನಿಂತು ಆಳವಾದ ಪ್ರಭಾವವನ್ನು ಬೀರಲಿಲ್ಲ. ಅಂತೂ ಅದು ಕನ್ನಡ ವಾಹಿನಿಯಲ್ಲಿ ಬೆರೆತುಕೊಂಡು ಹರಿದು ಬರಲಿಲ್ಲ.

ಆದರೆ ಪಾಶ್ಚಾತ್ಯರು ಕೈಗೊಂಡ ಇತರ ಕನ್ನಡ ಕಾರ್ಯವು ಮಾತ್ರ ಸ್ಮರಣೀಯವಾಗಿದೆ. ಮುದ್ರಣ, ಶಾಸನಗಳ ಶೋಧ, ನಾಡಿನ ಇತಿಹಾಸ ನಿರ್ಮಿತಿ, ಭಾಷಾಭ್ಯಾಸದ ಕೃತಿರಚನೆ ಮತ್ತು ಪ್ರಾಚೀನ ಕೃತಿಗಳ ಶಾಸ್ತ್ರೀಯ ಸಂಪಾದನೆ–ಈ ರಂಗಗಳಲ್ಲಿಯ ಅವರ ಗೈಮೆಯು ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತ ಘಟನೆಯಾಗಿದೆ. ಅದಕ್ಕಾಗಿ ಕನ್ನಡಿಗರು ಅವರೆಲ್ಲರನ್ನು ಅವಶ್ಯವಾಗಿ ಕೃತಜ್ಞತೆಯಿಂದ ನೆನೆಯತಕ್ಕುದು. ರೈಸ್, ಫ್ಲೀಟ್, ಕಿಟೆಲ್‌ರಂತಹ ಕೆಲವರನ್ನು ಬಿಟ್ಟರೆ, ಉಳಿದವರು ಸ್ವಂತದ ಉದ್ದೇಶ ಸಾಧನೆಗಾಗಿ, ಎಂದರೆ ಸ್ವಮತಪ್ರಸಾರಕ್ಕಾಗಿ, ಇಲ್ಲವೆ ತಾವು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳಿಗಾಗಿ ಮತ್ತು ಅಧಿಕಾರಿಗಳಾದವರು ಅಧಿಕಾರಸ್ಥಾನದ ಪ್ರಯುಕ್ತ ಕನ್ನಡದಲ್ಲಿ ಕೃಷಿಮಾಡಿದ್ದಾರೆ.*

ತಮ್ಮ ಅನುಕೂಲತೆಗೆಂದೇ ಇರಲಿ, ಅವರು ನೆಲವನ್ನು ಹರಗಿ ಮುಂದಿನ ಬೆಳೆಗೆ ಸಜ್ಜುಗೊಳಿಸಿದರು. ಆದರೆ ನೆಲ, ನೀರು, ಬೀಜ ಅರ್ಥಾತ್ ಅದರ ಅಂತಸ್ಸತ್ವ ಕನ್ನಡದ್ದೇ. ಬಿ.ಎಲ್. ರೈಸ್ ಶ್ರವಣಬೆಳಗೊಳದ ಶಾಸನಗಳನ್ನು ಸಂಪಾದಿಸಿ ಪ್ರಕಟಿಸಿದರಷ್ಟೆ. ರಾ. ನರಸಿಂಹಾಚಾರ್ಯರು ತಮ್ಮ ಯಜಮಾನನ ಈ ಕಾರ್ಯವನ್ನು ನೆನೆಯುತ್ತ ಅದೇ

---

* ದೇಶೀಯರ ಉದ್ಧಾರಕ್ಕಾಗಿಯೇ ಅವರು ಇದೆಲ್ಲವನ್ನು ಕೈಗೊಂಡರೆಂಬ ಅಭಿಪ್ರಾಯವು ಐ. ಮಾ. ಮುತ್ತಣ್ಣನವರ '೧೯ನೆಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ' ಎಂಬ ಗ್ರಂಥದಲ್ಲಿ ಓತಪ್ರೋತವಾಗಿ ವ್ಯಕ್ತವಾಗಿದೆ (೧೯೬೬). ಅದರಲ್ಲಿಯ ಈ ಬಗೆಯ ವಿಚಾರಸರಣಿಯನ್ನೂ, ಅಸನ್ವಿತವಾದ ತಪ್ಪು ಹೇಳಿಕೆಗಳನ್ನೂ ಅಲ್ಲಗಳೆದು ಬರೆದ ವಿಮರ್ಶೆ ('ಪ್ರಬುದ್ಧ ಕರ್ಣಾಟಕ' ಸಂಪುಟ ೫೨, ಸಂ.೧, ೧೯೭೦) ರಲ್ಲಿ ಹೊರಬಂದಿದ್ದು, ಅದನ್ನೇ ಇಲ್ಲಿನ ಅನುಬಂಧ ೯ರಲ್ಲಿ ಅವಶ್ಯವಾಗಿ ನೋಡತಕ್ಕದ್ದು. ಅದರಲ್ಲಿರುವ ಅಖಂಡ ತಪ್ಪು ಹೇಳಿಕೆಗಳನ್ನೇ ಬೇರೆ ಬೇರೆ ಸಂದರ್ಭಗಳಲ್ಲಿ ಇತರರು ಉದ್ಧರಿಸುವುದು ಬೇಸರದ ಸಂಗತಿ.

ಶಾಸನಗಳನ್ನು ಬೇರೊಂದು ಬಗೆಯಲ್ಲಿ ಸಂಪಾದಿಸಿ ಹೊರತಂದದ್ದನ್ನು ಮೇಲಣ ಮಾತಿಗೆ ದೃಷ್ಟಾಂತವಾಗಿ ಕೊಡಬಯಸುತ್ತೇವೆ.

ಕಳೆದ ಶತಮಾನದ ಕನ್ನಡ ಸಾಹಿತ್ಯವು ಒಟ್ಟಿನಲ್ಲಿ ಅನುವಾದ, ಅನುಕರಣಗಳಿಂದ ಕೂಡಿದ್ದೆಂಬುದು ನಿರ್ವಿವಾದ. ಈ ಮಾತು ಭಾರತದ ಇತರ ಭಾಷಾಸಾಹಿತ್ಯಗಳಿಗೂ ಅನ್ವಯಿಸುತ್ತದೆ. ಸಾಹಿತ್ಯ ಕೃಷಿಯ ಬೆಳವಣಿಗೆಯ ಆರಂಭದಲ್ಲಿ ಸ್ವತಂತ್ರ ಮತ್ತು ಮೌಲಿಕ ವಿಚಾರಗಳ ಅಭಿವ್ಯಕ್ತಿಯು ಕಂಡುಬಾರದಿದ್ದರೆ ಅದು ಸಹಜವೇ. ಹಾಗಿದ್ದರೂ ಅನುವಾದ/ಅನುಕರಣ ಕೃತಿಗಳಲ್ಲಿ ಸಹ ಹೊಸ ವಿಚಾರಗಳನ್ನು ಹಾಗೂ ಹೊಸ ದೃಷ್ಟಿಯನ್ನು ತೋರಿದ ಪ್ರಗತಿಪರ ಲೇಖಕರ ಕೃತಿಗಳನ್ನು ಈಗಾಗಲೇ ಎತ್ತಿ ತೋರಿಸಲಾಗಿದೆ. ಹೀಗೆ ಅನುವಾದ, ಅನುಕರಣ ಕೃತಿಗಳು ಸಹ, ಆ ಕಾಲದ ಸ್ವತಂತ್ರ ಕೃತಿಗಳ ಜೊತೆಗೆ, ಹೊಸಗನ್ನಡ ಸಾಹಿತ್ಯವರ್ಧನಕ್ಕೆ ಪುಷ್ಟಿಯನ್ನೇ ನೀಡಿದುವೆಂದು ಹೇಳಬೇಕು.

ಇಂದಿನ ಅನೇಕ ಲೇಖಕರ ದೃಷ್ಟಿಯಲ್ಲಿ ಮನರಂಜನೆಯೇ ಸಾಹಿತ್ಯ ನಿರ್ಮಿತಿಯ ಪ್ರಧಾನ ಉದ್ದೇಶವಾಗಿದೆ. ಕಳೆದ ಶತಮಾನದ ಸಾಹಿತ್ಯಕಾರರ ದೃಷ್ಟಿಯು ಮಾತ್ರ ಜನತಾ ಶಿಕ್ಷಣದತ್ತ ಕೇಂದ್ರೀಕೃತವಾಗಿದ್ದಿತು. ಜನತೆಯಲ್ಲಿ ಸುವಿಚಾರ, ಸದಾಚಾರಗಳು ಹರಡಬೇಕೆನ್ನುವುದು ಒಂದು ಬಗೆಯಾದರೆ ಪಾಶ್ಚಾತ್ಯ ಸಂಪರ್ಕದಿಂದ ಒದಗಿ ಬಂದ ಅನೇಕ ಹೊಸ ಹೊಸ ವಿಷಯಗಳನ್ನು ನಮ್ಮ ಜನಕ್ಕೆ ತಿಳಿಸಿಕೊಡಬೇಕೆನ್ನುವುದು ಇನ್ನೊಂದು ಬಗೆಯ ಪ್ರೇರಣೆಯಾಗಿದ್ದಿತು. ವಿವಿಧ ಹಾಡುಗಳು, ಶತಕಗಳು, ಹಲವು ಯಕ್ಷಗಾನ ಪ್ರಸಂಗಗಳು, ಹೊಸ ಪಠ್ಯಪುಸ್ತಕಗಳು, ಅಂದಿನ ಅನೇಕ ಪತ್ರಿಕೆಗಳು ಸಹ ಇದೇ ಹಿನ್ನೆಲೆಯಲ್ಲಿ ಹೊರಬಂದುವು. ಆಧುನಿಕ ವಿಚಾರಗಳಿಂದ ಕೂಡಿದ್ದ ಪತ್ರಿಕೆಗಳಾಗಿದ್ದರೂ ಅವುಗಳ ನಾಮಕರಣವು 'ಹಿತಬೋಧಿನಿ', 'ವಿದ್ಯಾದಾಯಿನಿ' 'ಜ್ಞಾನಬೋಧಕ' ಎಂದೆಲ್ಲ ಇದ್ದಿತು. ವಾಙ್ಮಯ ಸೇವೆಯ ದೃಷ್ಟಿಯನ್ನಿರಿಸಿಕೊಂಡು, ೧೮೯೦ರಲ್ಲಿ ಧಾರವಾಡದಲ್ಲಿ ಸ್ಥಾಪನೆಯಾದ ಸಂಸ್ಥೆಯ ಹೆಸರು 'ವಿದ್ಯಾವರ್ಧಕ' ಸಂಘವೆಂಬುದನ್ನು ಗಮನಿಸಬೇಕು. ದಾಸ ಶರಣರಿಗಂತೂ ಲೋಕ-ಶಿಕ್ಷಣವೇ ಮುಖ್ಯ ಉದ್ದೇಶವಾಗಿದ್ದಿತು. ಅಂದಿನ ಅವ್ಯವಸ್ಥಿತ ರಾಜಕೀಯ ಸ್ಥಿತಿ, ಪರಕೀಯರ ಪ್ರಭಾವಗಳಿಂದ ಸಡಿಲುಗೊಳ್ಳುತ್ತಿದ್ದ ಸಮಾಜದಲ್ಲಿ ದಾಸರು, ಮತ್ತಿತರರು ಕೈಕೊಂಡ ಭಕ್ತಿಮಾರ್ಗದ ಮತ್ತು ಸದಾಚಾರದ ಬೋಧನೆಯಿಂದ ಜನರಿಗೆ ತಮ್ಮ ಸಂಸ್ಕೃತಿ ಪರಂಪರೆಗಳಲ್ಲಿ ಹೊಸ ಶ್ರದ್ಧೆ ಹಾಗೂ ಜೀವನದಲ್ಲಿ ಹೊಸ ಭರವಸೆ ಮೂಡಿ ಬಂದಿತು. ಆ ರೀತಿಯಿಂದ ಉಂಟಾದ ಸಾಮಾಜಿಕ ಹಾಗೂ ಧಾರ್ಮಿಕ ಜಾಗೃತಿಯ ಬಗೆಯನ್ನು ಗುರುತಿಸುವುದು ಅವಶ್ಯವಾದರೂ ಗುರುತರವಾದ ಕಾರ್ಯವಾಗಿದೆ.

ಹತ್ತೊಂಬತ್ತನೆಯ ಶತಮಾನವು ರಾಷ್ಟ್ರೀಯತೆಯ ಉದಯದ ಕಾಲ. ಬ್ರಿಟಿಶರ ಆಳ್ವಿಕೆಯ ಅಡಿಗಲ್ಲನ್ನೇ ಅಲುಗಾಡಿಸಿದ ೧೮೫೭ರ ವಿಪ್ಲವದ ಅನಂತರ ಭಾರತದಲ್ಲಿ

ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ–ಇವೆಲ್ಲ ಅಂಶಗಳನ್ನೊಳಗೊಂಡ ಸಮಗ್ರ ರಾಷ್ಟ್ರೀಯತೆಯೂ ಕ್ರಮೇಣ ತಲೆಯೆತ್ತಿತು. ಶ್ರೀರಾಮಕೃಷ್ಣಪರಮಹಂಸ, ಸ್ವಾಮೀ ವಿವೇಕಾನಂದ, ದಯಾನಂದ ಸರಸ್ವತಿ, ಲೋಕಮಾನ್ಯ ಟಿಳಕ, ರವೀಂದ್ರನಾಥ ಠಾಕೂರ, ಮಹಾತ್ಮಾ ಗಾಂಧಿ–ಮುಂತಾದ ಮಹಾ ವಿಭೂತಿಗಳು ಒಂದೇ ಅವಧಿಯಲ್ಲಿ ಬೆಳಗಿದುದು ಜಗತ್ತಿನ ಇತಿಹಾಸದಲ್ಲಿಯೇ ಅಪೂರ್ವವಾದುದು. ಬಂಗಾಲೀ ಸಾಹಿತ್ಯದಲ್ಲಿ ಸಮಗ್ರ ರಾಷ್ಟ್ರೀಯತ್ವದ ಪ್ರಭಾವೀ ದರ್ಶನವನ್ನು ನೀಡಿದ ಬಂಕಿಮಚಂದ್ರರು, ರಾಮಕೃಷ್ಣ ಪರಮಹಂಸರ ಪ್ರತಿಭಾವಲಯಯಲ್ಲಿದ್ದವರೆಂಬುದನ್ನು ನೆನೆದಿರಬೇಕು. ಈ ಹೊಸ ಬಗೆಯ ರಾಷ್ಟ್ರೀಯ ಆಂದೋಲನ ಕನ್ನಡಿಗರಲ್ಲಿ ಸಹ ಹಬ್ಬಿದುದು ಸ್ವಾಭಾವಿಕ. ಅನೇಕ ವಿದ್ಯಾವಂತ ಕನ್ನಡಿಗರು ತಮ್ಮ ಪುಸ್ತಕ, ಪತ್ರಿಕೆ, ವ್ಯಾಖ್ಯಾನಗಳ ಮೂಲಕ ಅಂಥ ವಿಚಾರಗಳನ್ನು ಜನತೆಯಲ್ಲಿ ಪ್ರಸಾರ ಮಾಡಿದ್ದಾರೆಂಬುದನ್ನು ಅಲ್ಲಲ್ಲಿ ತೋರಿಸಲಾಗಿದೆ. ನೇರವಾದ ರಾಜಕೀಯ ಹೋರಾಟವನ್ನು ಪ್ರಚೋದಿಸದೇ ಜನರಲ್ಲಿ ರಾಷ್ಟ್ರಭಕ್ತಿಯನ್ನೂ, ಸ್ವಧರ್ಮ ಸಂಸ್ಕೃತಿಗಳ ಬಗ್ಗೆ ಆಳವಾದ ಆದರವನ್ನೂ ಗಟ್ಟಿಗೊಳಿಸವಲ್ಲಿ ಇಂಥ ಬರವಣಿಗೆ ಸಹಾಯಕವಾಯಿತು. ನಾಡಿನ ಇತಿಹಾಸ, ಜೀವನ ಚರಿತ್ರೆಗಳು, ಸಾಹಿತ್ಯಿಕ ಸೇವಾದೀಕ್ಷೆಗೆ ಕರೆಯಿತ್ತ ಪ್ರಬಂಧಗಳು, ಧಾರ್ಮಿಕ ವಿಚಾರ ಗ್ರಂಥಗಳ ಅನುವಾದ, ಪರಿಷ್ಕೃತ ಪ್ರಕಟನೆಗಳು ಮತ್ತು ಕೀರ್ತನೆಗಳು–ಇವೆಲ್ಲವೂ ಈ ದಿಶೆಯಲ್ಲಿ ನೆರವಾಗಿವೆ.

ಇದರಿಂದ ಪ್ರಚೋದಿತವಾದ ರಾಷ್ಟ್ರೀಯತೆಯು ಕನ್ನಡ ನಾಡು ನುಡಿಗಳ ಬಗ್ಗೆ ಮೊದಲು ಅಭಿಮಾನವನ್ನು ಮೂಡಿಸಿತು. ಬ್ರಿಟಿಶರು ಬಂದ ಮೇಲೆ ಕನ್ನಡ ನಾಡು ಹಲವು ಆಧಿಪತ್ಯಗಳಲ್ಲಿ ಹರಿದು ಹಂಚಿಹೋಗಿದ್ದರೂ ಅದರ ಆಡಳಿತವೆಂಬ ಎಳೆಯ ಮೂಲಕ ಕನ್ನಡಿಗರ ಪರಸ್ಪರ ಬಳಕೆಯ ಕ್ರಮೇಣ ಹೆಚ್ಚತೊಡಗಿತು. ನಾಡಿನ ಪ್ರಮುಖ ಕೇಂದ್ರಗಳು, ಹೊರನಾಡಿನ ಮುಂಬಯಿ–ಮದ್ರಾಸಗಳು ಸಹ ಕನ್ನಡ ಕಾರ್ಯದ ನಿಮಿತ್ತದಿಂದ ಹತ್ತಿರ ಬಂದುವು. ಈ ಕರ್ನಾಟಕತ್ವದ ಕಲ್ಪನೆಯು ಆದ್ಯ ಕನ್ನಡ ಪತ್ರಿಕೆಯಲ್ಲಿ ಪ್ರಥಮತಃ ಅದೆಂತು ಒಡಮೂಡಿತೆಂಬುದನ್ನು ನೋಡಿದ್ದೇವೆ. ಆ ಮುಂದಿನ ಗ್ರಂಥರಚನೆ, ಪತ್ರಿಕಾ ಪ್ರಕಟನೆ ಇವು ನಾಡಿನ ಎಲ್ಲ ಪ್ರದೇಶಗಳಿಗೆ ಅನ್ವಯಿಸಿಕೊಂಡು ನಡೆದು ಬಂದವು. ಮುಂಬಯಿಯಿಂದ ಹೊರಡುತ್ತಿದ್ದ ಪತ್ರಿಕೆಗೆ ಮೈಸೂರಿನ ಸಣ್ಣ ಊರೊಂದರ ಶಾಲಾಶಿಕ್ಷಕನು ಚಂದಾದಾರನಾಗಿದ್ದ ಸಂಗತಿಯನ್ನು ನೆನೆಯಬೇಕು. ಬೆಂಗಳೂರಿನ 'ಹಿತಬೋಧಿನಿ'ಯಂಥ ಪತ್ರಿಕೆಗಳು ಕನ್ನಡ ಭಾಷೆ–ಸಾಹಿತ್ಯಗಳ ಏಳ್ಗೆಯನ್ನೆ ಕಣ್ಣಮುಂದಿರಿಸಿಕೊಂಡಿದ್ದುವು. ಕನ್ನಡ ವಿದ್ವಾಂಸರು, ಅನೇಕ ಶಿಕ್ಷಕರು, ವಿದೇಶೀ ಅಧಿಕಾರಿಗಳು ಕನ್ನಡದ ಅಭಿವೃದ್ಧಿಗಾಗಿ ಕಳಕಳಿಯಿಂದ, ಅದಕ್ಕಿಂತ ಹೆಚ್ಚಾಗಿ ಪ್ರಜ್ಞಾಪೂರ್ವಕವಾಗಿ ಶ್ರಮಿಸಿದರು. ಕನ್ನಡ ಪೋಷಣೆಗೆ ಸಂಬಂಧಪಟ್ಟ ಸಣ್ಣ ಸಣ್ಣ ಅಂಶಗಳಿಗೂ ಅವರು ಗಮನವಿತ್ತರೆಂದೇ ಹೊಸಗನ್ನಡವು ಭರದಿಂದ ಬೆಳೆಯಿತು.

ನಾಡು ನುಡಿಗಳ ಪರಿಚಯ ಹೆಚ್ಚಿದಂತೆಲ್ಲ ಸಮಗ್ರ ಕರ್ನಾಟಕತ್ವದ ಕಲ್ಪನೆಯೂ ತಲೆದೋರಿತು. ಆ ಕಲ್ಪನೆಯು ಸಂಕುಚಿತ ಸ್ವರೂಪದ್ದಿರಲಿಲ್ಲ. ಕನ್ನಡ ಜನತೆಯ ಪ್ರಗತಿಗಾಗಿ, ಕನ್ನಡ ಸಾಹಿತ್ಯದ ವರ್ಧನೆಗಾಗಿ, ನಮ್ಮ ಸಂಸ್ಕೃತಿಯ ಸಿರಿಯನ್ನು ಬೆಳೆಸುವುದಕ್ಕಾಗಿ, ನೆರೆಹೊರೆಯ ಸಾಹಿತಿಗಳ, ಬೇರೆ ಪ್ರಾಂತಗಳ ವಿಚಾರವಂತರ ನೆರವನ್ನು ಆಗಿನ ಕಾಲದ ಕನ್ನಡ ಕಾರ್ಯಕರ್ತರು ಸಂಕೋಚವಿಲ್ಲದೆ ಸ್ವೀಕರಿಸಿದರು. ಶ್ರೀ ಆಲೂರು ವೆಂಕಟರಾಯರು ಪ್ರತಿಪಾದಿಸಿದ 'ಕರ್ನಾಟಕಾಂತರ್ಗತ' ಕನ್ನಡದಲ್ಲಿ ಅಧಿಷ್ಠಾನಳಾದ ಭಾರತಮಾತೆಯನ್ನು ಆರಾಧಿಸುವ ಕನ್ನಡ ಧರ್ಮವು ಮೂಡಿ ಬರಲು ಈ ಬಗೆಯ ಹಿನ್ನೆಲೆಯು ಬಹುಮಟ್ಟಿಗೆ ಕಾರಣವಾಯಿತೆಂಬುದನ್ನು ನೆನೆಯಬೇಕು. ಕರ್ನಾಟಕ-ಭಾರತ ಎರಡನ್ನೂ ಸಮನ್ವಯಗೊಳಿಸಿದ ಪ್ರಾದೇಶಿಕ ಅಭಿಮಾನವು ನಿಜವಾಗಿಯೂ ಬೆಲೆಯುಳ್ಳದ್ದು. ಅಂದಿನ ಸಾಂಸ್ಕೃತಿಕ ಮುಂದಾಳುಗಳಲ್ಲಿ ಕರ್ನಾಟಕಾಭಿಮಾನದೊಂದಿಗೆ ಭಾರತೀಯ ದೃಷ್ಟಿಯು ಹಿತವಾದ ರೀತಿಯಲ್ಲಿ ಸಮನ್ವಯಗೊಂಡುದರ ಅಂಕುರವನ್ನು ಕಳೆದ ಶತಮಾನದ ನವೋದಯ ಕಾಲದ ಸಾಹಿತ್ಯ ರಚನೆಯಲ್ಲಿ ಕಾಣುತ್ತೇವೆ.

ಅಂದಿನ ಲೇಖಕರಲ್ಲಿಯ ಪರಸ್ಪರ ಸೌಹಾರ್ದಭಾವವು ಗೌರವಾನ್ವಿತವಾದುದು. ಇಂಥ ಭಾವನಾತ್ಮಕ ಏಕೀಕರಣದ ಅನೇಕ ದೃಷ್ಟಾಂತಗಳು ವಿವಿಧ ರಂಗಗಳಲ್ಲಿ ದೊರೆಯುತ್ತವೆ. ಮೈಸೂರಿನ ಆಸ್ಥಾನದಲ್ಲಿ ಎಲ್ಲ ಬಗೆಯ ಸಾಹಿತ್ಯಕಾರರು ಸಮಾನವಾದ ಪೋಷಣೆಯನ್ನು ಪಡೆದರು. ದಾಸರಾಗಲೀ ಶಿಶುನಾಳದ ಶರೀಫರಂತಹರಾಗಲೀ ಜಾತೀಯ ಭಾವನೆಯಿಂದ ದೂರವಿದ್ದರು. ಸಕ್ಕರಿ ಬಾಳಾಚಾರ್ಯರ ಗುರು ಶಾಂತವೀರ ರಾಚಿದೇವ ಕಿತ್ತೂರು. ಮುಂದೆ ಅವರು ಶಾಂತಕವಿಯೆಂಬ ಕಾವ್ಯನಾಮವನ್ನಿಟ್ಟುಕೊಳ್ಳುವಲ್ಲಿ ತನ್ನ ಗುರುವಿನ ಹೆಸರೂ ಅದರಲ್ಲಿರುವುದೆಂಬ ಭಾವನೆ ಇದ್ದಿರಬೇಕು. ಇನ್ನು ಈ ಶಾಂತಕವಿಗಳ ಶಿಷ್ಯನು ಪ್ರಕಾಶಕ ಚೆನ್ನವೀರಪ್ಪ ಅನಾಡ ಎಂಬವನು.* ಮಿಶನರಿ ಸಾಹಿತ್ಯಿಕರಲ್ಲಿಯಂತೂ ಈ ಸೌಹಾರ್ದವು ಸಂತತವಾದ ಧಾರೆಯಾಗಿದ್ದಿತು. ಅಂದಿನ ಸರಕಾರ ಹಾಗೂ ಸಾಹಿತಿಗಳಲ್ಲಿಯೂ ವಿಶೇಷ ಸಹಕಾರವು ಕಂಡುಬಂದದ್ದನ್ನು ಅಲ್ಲಲ್ಲಿ ತೋರಿಸಲಾಗಿದೆ.

ಭಾಷೆ, ಶೈಲಿ ಮತ್ತು ವಸ್ತುಗಳ ದೃಷ್ಟಿಯಿಂದ ೧೯ನೆಯ ಶತಮಾನವು ಕನ್ನಡ ಸಾಹಿತ್ಯದ ಸಂಧಿಕಾಲವೆಂದು ಹೇಳಲಾಗುತ್ತದೆ. ಹಳಗನ್ನಡ ಹೊಸಗನ್ನಡಗಳು ಜೊತೆ ಜೊತೆಯಾಗಿಯೆ ಹರಿದು ಬಂದರೂ, ಆ ಶತಮಾನದಲ್ಲಿ ಹೊಸಗನ್ನಡದ ಬೆಳವಣಿಗೆಯ ಬೇರೆ ಬೇರೆ ಅವಸ್ಥೆಗಳನ್ನು ಸ್ಪಷ್ಟವಾಗಿ ಗುರುತಿಸುವುದು ಅವಶ್ಯವಾಗಿದೆ. ಆ ಪ್ರಕಾರ, ೧೮೧೦, ೧೮೪೧ ಮತ್ತು ೧೮೮೧ ಹೀಗೆ ಮೂರು ಗಡುವುಗಳನ್ನು ನಾವು

* ದ.ರಾ. ಬೇಂದ್ರೆಯವರು ಒಂದು ಭಾಷಣದಲ್ಲಿ ವ್ಯಕ್ತಪಡಿಸಿದ ದೃಷ್ಟಾಂತವಿದು.

ಮಾಡಿಕೊಂಡಿದ್ದೇವೆ. ೧೮೪೪೧ಕ್ಕಿಂತ ಹಿಂದಿನ ಹೊಸ ಬಗೆಯ ಗ್ರಂಥರಚನೆಯು ಬಿಡಿಬಿಡಿಯಾದ ಯತ್ನಗಳಿಂದ ಮೊದಲಾಯಿತು. ಹೊಸಗನ್ನಡವೆನಿಸಬಹುದಾದ ಸಾಹಿತ್ಯ ನಿರ್ಮಿತಿಯು ೧೮೪೪೧ರಿಂದ ಆರಂಭವಾಯಿತು. ಅದುವೇ ಹೊಸಗನ್ನಡದ ಮುಂಬೆಳಗು; ಸಂಧಿಕಾಲವೂ ಅಹುದು. ೧೮೮೮೧ರಿಂದ ಹಳಗನ್ನಡ ಪರಂಪರೆಯು ಕ್ಷೀಣವಾಗಿ, ಹೊಸಗನ್ನಡವು ಸ್ಪಷ್ಟವಾದ, ಸ್ಥಿರವಾದ ಅಸ್ತಿತ್ವವನ್ನು ಪಡೆಯಿತು. ಸ್ವತಂತ್ರ ನಾಟಕಗಳು, ಕಾದಂಬರಿಗಳು, ಪ್ರಬಂಧಗಳು, ಪತ್ರಿಕೆಗಳು ಅದರಂತೆ, ಸಮಾಜ ಸುಧಾರಣೆಯ, ಜಗತ್ತಿನ ಪರಿಚಯ ಮಾಡಿಕೊಡುವ ಹಾಗೂ ಹೊಸ ಬಗೆಯ ಆಡಳಿತ-ನ್ಯಾಯ ಪದ್ಧತಿಗಳ ಪರಾಮರ್ಶೆಯ ಅನೇಕ ಗ್ರಂಥಗಳು ಹೊರಬಂದುವು. ಈ ಕಾರ್ಯದಲ್ಲಿ ತಿಳಿಯಾದ ಗದ್ಯವನ್ನು ಬಳಸಿ, ಭಾಷೆಯ ಸರಳತೆಯತ್ತ ವಿಶೇಷ ಗಮನ ಕೊಡಲಾಯಿತು. ಜೊತೆಗೆ, ಕನ್ನಡತನದ ಭಾರತೀತ್ವದ ಸ್ಫುಟ ಕಲ್ಪನೆ, ಮತ್ತು ಜನತೆಯ ಸರ್ವಾಂಗೀಣ ಪ್ರಗತಿಯ ಲವಲವಿಕೆ ಮೂಡಿ ಬಂದು, ನಿಜವಾದ ಹೊಂಬೆಳಗಿನ ಕಾಲವು ಮೊದಲಾಯಿತು.

ಈ ಹೊಂಬೆಳಗಿನ ತೇಜಸ್ಸಿಗೆ ಕಾರಣರಾದ ಮಹನೀಯರನ್ನು ಇಲ್ಲಿ ಪುನಃ ಪ್ರತ್ಯೇಕವಾಗಿ ಹೆಸರಿಸುವ ಅವಶ್ಯಕತೆಯಿಲ್ಲ. ಅಂತಹ ಹೊಸಗನ್ನಡ ನಿರ್ಮಾಪಕರಲ್ಲಿ ಮುದ್ದಣನನ್ನು ಸೇರಿಸಬಹುದು. ಆದರೆ ಅವನನ್ನು 'ಸಂಧಿ ಕಾಲದವ', ಹೊಸಗನ್ನಡ ಕಾವ್ಯಾರಾಮದ ಮೊದಲ ಕೋಗಿಲೆ', 'ಆಧುನಿಕರಲ್ಲಿ ಮೊದಲಿಗ' ಎಂದು ಮುಂತಾಗಿ ಕರೆಯುವುದು ಎಷ್ಟರಮಟ್ಟಿಗೆ ಸಮಂಜಸವೆನಿಸೀತು? ಮುದ್ದಣನು ಪೌರಾಣಿಕ ವಸ್ತುಗಳನ್ನು ಆಯ್ದು, ಹಳಗನ್ನಡ ಗದ್ಯ ಪದ್ಯ ಪರಂಪರೆಯಲ್ಲಿಯೇ ಮನೋಜ್ಞವಾಗಿ ಹೇಳಿದ ಕವಿ. ಅವನ ಒಲವು ಪ್ರಾಚೀನತೆಯ ಕಡೆಗೇ ಇತ್ತೆಂಬುದು ಅವನ ಕಾವ್ಯಮಾರ್ಗದಿಂದ ಮತ್ತು ಹಳಗನ್ನಡದ ಅಪೂರ್ವ ಪದಪ್ರಯೋಗದಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ಅವನ ರಾಮಾಶ್ವಮೇಧದ ಆರಂಭವು ಮತ್ತು ಮುದ್ದಣ-ಮನೋರಮೆಯದ ಸಂವಾದಗಳು, ಮುದ್ದಣನು ಪರಂಪರೆಯ ಕುರುಡು ಆರಾಧಕನಿದ್ದಿಲ್ಲವೆಂಬುದನ್ನೂ ಅವನ ಜೀವನ ಶ್ರದ್ಧೆ, ರಸಿಕತೆಗಳನ್ನೂ ತೋರ್ಪಡಿಸುತ್ತವೆ. ಉಳಿದ ಕೃತಿಗಳು ಸಹ ಅವನ ಆಳವಾದ ಅಭ್ಯಾಸ, ಭಾಷಾ ಪ್ರೌಢಿಮೆ ಮತ್ತು ವಿಶಿಷ್ಟವಾದ ಕಾವ್ಯದೃಷ್ಟಿಗೆ ನಿದರ್ಶಕವಾಗಿವೆ. ಇವೆಲ್ಲವುಗಳಿಂದ ಮುದ್ದಣನು ಶ್ರೇಷ್ಠಮಟ್ಟದ ಸಾಹಿತ್ಯಕಾರನೆಂಬುದು ಸ್ಪಷ್ಟವಿದೆ. ಆದರೆ ಅವನ ಕೃತಿಗಳಲ್ಲಿ ಆಧುನಿಕತೆಯ ಅಂಶಗಳನ್ನು ವಿಶೇಷವಾಗಿ ಅರಸಿಕೊಂಡು ಹೋಗುವ ಪ್ರಯತ್ನ ಯಶಸ್ವಿಯಾಗದು. ಅವನಿಗಿಂತ ಮುಂಚೆ ಹೊಸಗನ್ನಡ ಸಾಹಿತ್ಯವು ಬಹಳಷ್ಟು ಬೆಳೆದಿದ್ದರಿಂದ, ಅವನನ್ನು ಆಧುನಿಕ ಸಾಹಿತ್ಯಿಕರಲ್ಲಿ ಮೊದಲಿಗನೆಂದು ತಿಳಿಯಬೇಕಾದದ್ದಿಲ್ಲ. ಅವನನ್ನು ಹಳಗನ್ನಡ ಪರಂಪರೆಯ ಶ್ರೇಷ್ಠ ಕವಿಗಳಲ್ಲಿ ಕೊನೆಯವನೆಂದು ಹೇಳಬಹುದು. ಆರುವ ದೀಪ ಉಜ್ವಲವಾಗಿ

ಬೆಳಗುವುದುಂಟು. ಹಳಗನ್ನಡ ಜ್ಯೋತಿಯು ಉಜ್ವಲವಾಗಿ ಬೆಳಗಿದ್ದರಲ್ಲಿ ಮುದ್ದಣನು ಅದರ ಕೊನೆಯ ಬೆಳಕಾದನು.

ಹೊಸಗನ್ನಡದ ಅರುಣೋದಯ ಕಾಲದ ನಮ್ಮ ಸಾಹಿತ್ಯಾವಲೋಕನವನ್ನು ಕಿಂಚಿತ್ ಅಸಮಾಧಾನದಿಂದ ಮುಗಿಸಬೇಕಾಗಿದೆ. ಹೇಳಬೇಕಾದ ಎಷ್ಟೋ ಮಾತುಗಳು ಉಳಿದಿವೆ. ಸಿನ್ನಾಮಿಯ ಕನ್ನಡ ಗ್ರಂಥ ಸ್ವರೂಪ, ೧೬–೧೮ನೆಯ ಶತಮಾನಾವಧಿಯಲ್ಲಿ ವಿದೇಶೀಯರು ಕನ್ನಡವನ್ನು ಕಂಡ ಬಗೆ, ದಾಸರ ಮತ್ತು ಶರಣ ಸಂತರ ಹಾಡುಗಳಲ್ಲಿಯ ತತ್ವಬೋಧೆ ಹಾಗೂ ಕಾವ್ಯಗುಣ, ಜಾನಪದೀಯ ಅನುಭಾವ ಸಾಹಿತ್ಯವು ಹೊಸಗನ್ನಡಕ್ಕೆ ನೀಡಿದ ಪ್ರೇರಣೆ, ಅಂದಿನ ಪತ್ರಿಕಾ ಸಮುದಾಯದ ಬಗ್ಗೆ ಇದಕ್ಕೂ ಹೆಚ್ಚಿನ ವಿವರಣೆ, ಮುಖ್ಯತಃ ಹೊಸಗನ್ನಡ ಗದ್ಯದ ಸ್ವರೂಪ ಮತ್ತು ವಿಕಾಸ–ಇವೇ ಮುಂತಾದ ಅಂಶಗಳನ್ನು ಇನ್ನಷ್ಟು ವಿಶದಗೊಳಿಸಬೇಕಿದ್ದಿತಾದರೂ, ಪುಟಗಳ ಮಿತಿ ಹಾಗೂ ಸಾಮಗ್ರಿಯ ಅಭಾವದಿಂದಾಗಿ ಬಿಡಬೇಕಾಗಿದೆ. ಆದರೂ ಕಳೆದ ಶತಮಾನದಲ್ಲಿ ನಡೆದ ಸಾಹಿತ್ಯಿಕ ಗೈಮೆಯ ಹಿನ್ನೆಲೆ, ಪ್ರೇರಣೆ ಹಾಗೂ ಒಲವು ನಿಲುವುಗಳನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾಗಿದೆ. ಅಂದಿನ ಸಾಹಿತ್ಯ ಸಾಮಗ್ರಿಯನ್ನು ವ್ಯವಸ್ಥಿತವಾಗಿ ಒಂದೆಡೆ ತಂದು, ಐತಿಹಾಸಿಕ ದೃಷ್ಟಿಯಿಂದ ಅನೇಕ ಕೃತಿಗಳ ಸ್ಥಾನವನ್ನು ನಿರ್ದೇಶಿಸಲಾಗಿದೆ. ಅವುಗಳ ಸ್ವರೂಪದರ್ಶನದೊಂದಿಗೆ ಆ ಸಾಹಿತ್ಯದ ಧಾರ್ಮಿಕ, ರಾಷ್ಟ್ರೀಯ ಸಾಂಸ್ಕೃತಿಕ ಪ್ರೇರಣೆಗಳನ್ನು ಸೂಚಿಸಲಾಗಿದೆ. ಹೊಸಗನ್ನಡದ ನವೋದಯದ ಹಿನ್ನೆಲೆಯ ಸಹಿತವಾದ ಆ ಅವಲೋಕನವು ಹೆಚ್ಚಿನ ವ್ಯಾಸಂಗಕ್ಕೆ ಪ್ರೇರಕವಾಗಬಹುದೆಂಬ ಸದಾಶಯದಿಂದ ಈ ಗ್ರಂಥವನ್ನು ಮುಗಿಸುತ್ತೇವೆ.

  

## ಅನುಬಂಧಗಳು

# CATALOGUE

OF

# KANNADA, BADAGA, AND KURG BOOKS.

---

*[In the following descriptions it is to be understood that unless books are especially mentioned as being in the Badaga or Kurg languages, they are, either wholly or in part, Kannada works or translations thereof.]*

---

**AARON** (DANIEL). Daniel and his Companions. ದಾನಿಯೇಲನೂ ಅವನ ಜತೆಗಾರರೂ. pp. 40. *Basel Mission Press: Mangalore*, 1867. 16°. 14176. a. 31.(14.)

**ĀBĀJĪ RĀMA-CHANDRA SĀVANT.** ಕನ್ನಡ ಪತ್ರವ್ಯವಹಾರಬೋಧಿನಿಯು ಅಥವಾ ವ್ಯವಹಾರಸಾಹಿತ್ಯ [Kannaḍa patra-vyavahāra-bōdhini. A guide to legal and commercial letter-writing, comprising lithographed specimens and appended matter. Second edition.] pp. ii. iv. 114, 48. ಬೆಳಗಾಂವ ೧೯೦೬ [*Belgaum*, 1906.] 8°. 14176. i. 30.

**'ABD al-ĶĀDIR SĀBI**, *Saiyid*. *See* ṬHAG. ಠಗರ . . . ಚರಿತ್ರೆಯು. [Ṭhagar' embuva phāsi-kārara charitreyu. Translated by Venkaṭa-subb'-ayya and 'Abd al-Ķādir.] [1842.] 8°. 14176. d. 36.

**ABERCROMBY** (ROBERT), *Lieutenant*. *See* VĪRA-RĀJĒNDRA OḌEYAR. ರಾಜೇಂದ್ರನಾಮೆ (Rājēndranāmé . . . with an English translation by . . . R. Abercrombie, *etc.*) 1857. 4°. 14176. d. 33.

**ABHINAVA PAMPA.** *See* NĀGA-CHANDRA.

**ABHINAVA VĀDI VIDYĀNANDA.** *See* VIDYĀNANDA.

**ACADEMIES**, etc.

MADRAS.

**University of Madras.**

*See* KUMĀRA VĀLMĪKI. The Canarese Text Book in Poetry for the Matriculation Examination of . . . 1881, *etc.* 1881. 8°. 14176. f. 50.

*See* KUMĀRA VYĀSA. Notes on the Kanarese Text for the Matriculation Examination, *etc.* 1877. 8°. 14176. f. 46.

*See* KUMĀRA VYĀSA. The Canarese Text Book . . . for the Matriculation Examination of . . . 1880, *etc.* 1880. 8°. 14176. f. 48.

*See* KUMĀRA VYĀSA. The Canarese Text Book . . . for the Matriculation Examination of . . . 1880, *etc.* 1880. 8°. 14176. f. 47.

*See* KUMĀRA VYĀSA. Notes to Karnata Bharatha Sangraha . . . for the Matriculation Examination, *etc.* 1881. 8°. 14176. f. 39.

*See* KUMĀRA VYĀSA. Notes to Karnata Bharatha Sangraha . . . for the Matriculation Examination of 1883. 1883. 8°. 14176. f. 51.

*See* KUMĀRA VYĀSA. The University of Madras. An English translation of the Kannada Bharata

## ಅನುಬಂಧ 2

# 1898ನೆಯ ವರ್ಷದ ಕನ್ನಡ ಸಾಹಿತ್ಯ ಸಮೀಕ್ಷೆ

[Report on Publications Issued & Registered ಎಂಬ ಕೇಂದ್ರ ಸರಕಾರೀ ಪ್ರಕಟನೆಯಿಂದ (Calcutta, 1899) ಉದ್ಧೃತ. ಈ ಸಮೀಕ್ಷೆಯು ಆಗಿನ ಮೈಸೂರ ಸಂಸ್ಥಾನದ ಪ್ರಕಟಣೆಗಳಿಗೆ ಸೀಮಿತವಾದುದು.]

The total number of publications registered during the year was 123 against 113 of previous year, showing an increase of 10. nearly 9 per cent of the 123 publicatons of the year, 37 may be classed as Educational and 86 as Non educational. There were no works published during the year under the heads, Arts, Law, Politics and Voyages- Travels.

It is satisfactory to note that the year under review compares favourably with its predecessor not only as regards the quantity but also as regards the quality of its publications. Pandits and English-knowing gentlemen have in a manner tried to do their duty towards their less educated brethren by placing within their reach, knowledge which would otherwise have been inaccessible to them. It is a matter for congratulation that a number of good works appeared during the year under the heads of Biography and Fiction. Five of the publications under the latter head are translations of the works of BankimChandra Chatterji, the celebrated novelist of Bengal, some of whose novels have been translated into English and German also. The translator, Mr. B.Venkatachar, has done a great service to Kannadigas by bringing out these works, which afford interesting and healthy reading not only to grown-up people but also to the student population which, in the absence of such works of light litrature, would naturally have recourse to objectionable story books to pass an idle hour. Under history and philosophy there were some useful works

published during the year. Pandit T. Venkatacharya's translation of the Bhgavadgita, which is being published in parts, deserves to be looked upon as a valuable contribution, in as much as it enables a student to get with ease a comparative view of the three schools of the Vedanta Philosophy. It is refreshing to observe that two works relating to pedagogy appeared during the year under report. Both of them are the productions of a licentiate of Teaching. They will no doubt prove useful to Kannada teachers. The Yadugiri Sadananda Vardhini Sabha of Melkote published some religious and other works intended for the use of boys and girls. It is worthy of note that during the year under report graduates and Pandits show some activity in publishing journals treating to philosophy and religion.

The following may be mentioned as works of some importance published during the year :-

೧) ಹೈದರನಾಮೆ–Life of Hyder Ali; by Mr. Appanna Shetty.

2) Life of Shivaji; a translation by Mr. C. Vasudevacharya of a Bengali work.

೩) ಚಂಡಕೌಶಿಕ ನಾಟಕ–A translation by Basavappa a shastri of the Sanskrit drama of the same name.

೪) ರಜನಿ–A translation by Mr. B. Venkatachar of the Bengali novel of the same name.

೫) ರಾಧಾರಾಣಿ–A translation by Mr.B.Venkatachar of the Bengali novel of the same name.

೬) ಕಪಾಲಕುಂಡಲ–A translation by Mr. B. Venkatachar of the Bengali novel of the same name.

7) Krishnaraja Odeyar's Kannada translation of the 1st, 2nd, 3rd, 4th and the 5th skandhas of the Bhagavathapurana.

೮) ಧಾತುರೂಪ ಪ್ರಕಾಶಿಕಾ–An exhautive list of Sanaskrit verbal roots with their derivative forms by Pandit Srikantha Sastri.

೯) ವಿದ್ಯಾಭ್ಯಾಸ ಕ್ರಮ–A treatise on the theory of education. by Mr.M. Hiriyanna, B.A.L.T.

೧೦) ಪಾಠಕ್ರಮ– A treatise on the theory of education. by Mr. M. Hiriyanna, B.A.L.T.

೧೧) ಶ್ರೀಗೀತಾರ್ಥಸಾರ–The Bhagavadgita with a Kannada commentary.

೧೨) ಶಂಕರವಿಜಯ of Vidyaranya with a Kannada commentary.

13) Taittiriya Samhita with the commentary of Bhattabhaskara, Vols. VIII, IX, XI and XII.

14) Apastamba Dharmasutra with Haradatta's commentary called Ujjvala.

15) Sankaracharya's miscellaneous works. Vol. 1

16) Inscriptions in the Mysore District. Part II, by L. Rice

Mysore
The 7th February 1899

R.NARASIMHACHAR
Kannada Translator
Education Department

## ಅನುಬಂಧ 3
# ಮೊವ್‌ಗ್ಲಿಂಗರ 'ಬಿಬ್ಲಿಯಾಥೆಕಾ ಕರ್ನಾಟಿಕಾ'ದ ಹಿನ್ನಲೆ

ಮೊದಲಲ್ಲಿ ಹೇಳಬೇಕಾದ ಮಾತೆಂದರೆ, 'ಹಳಗನ್ನಡದ ಹಸ್ತಪ್ರತಿಗಳಲ್ಲಿ ಹಿಂದೂ ಸಂಸ್ಕೃತಿಯ ಅಂಶಗಳು ಅಡಗಿವೆ; ಅವನ್ನು ಶುದ್ಧಗೊಳಿಸಿ ಪ್ರಕಟಿಸಬೇಕು' – ಎಂಬ ಉದಾತ್ತ ವಿಚಾರ ಮೂಲತಃ ಹೊಳೆದದ್ದು ಕೆಸಮ್ಮೈಜರನಿಗೆ.

ಯಾರು ಈತ? ಮದ್ರಾಸ್ ಸರಕಾರದಲ್ಲಿ ನ್ಯಾಯಾಧೀಶ ಹುದ್ದೆಯಲ್ಲಿ ಇದ್ದು, ನಿವೃತ್ತನಾದ ಮೇಲೆ ಕೇಟಿ ಎಂಬಲ್ಲಿ ನೆಲಸಿದ. ಆ ಕಾಲಕ್ಕೆ ಮೆವ್‌ಗ್ಲಿಂಗರ ಭೆಟ್ಟಿಯಾಯಿತು. ಧಾರ್ಮಿಕ ಭಾವನೆ ಹಾಗೂ ಸಾಹಿತ್ಯ ಪ್ರೀತಿ – ಇವುಗಳಲ್ಲಿ ತಾವಿಬ್ಬರೂ ಸಮಾನಶೀಲರೆಂದು ಮನಗಂಡರು. ಮಾತಿಗೆ ಮಾತು ಬಂದು, ಮದ್ರಾಸದ ಫೋರ್ಟ್ ಸೇಂಟ್ ಜಾರ್ಜ್, ಮೈಸೂರಿನ ಅರಮನೆ ಹಾಗೂ ಅಲ್ಲಿ ಇಲ್ಲಿಯ ಹಸ್ತಪ್ರತಿಗಳ ಪ್ರಸ್ತಾಪ ಬಂತು. ಅದಾಗಲೇ ಕನ್ನಡ ಸಾಹಿತ್ಯದಲ್ಲಿ ಒಲವನ್ನು ಬೆಳಸಿಕೊಂಡಿದ್ದ ಮೊವ್‌ಗ್ಲಿಂಗ್ ಅವುಗಳಲ್ಲಿಯ ವಿಷಯವನ್ನು ವರ್ಣಿಸಿದಾಗ, ಕೆಸಮ್ಮೈಜರ್ ಕನ್ನಡ ಭಾಷೆಯನ್ನು ಕಲಿಯುವ ಅಪೇಕ್ಷೆ ವ್ಯಕ್ತಪಡಿಸಿದ– ಅವನ ೫೫ನೆಯ ವಯಸ್ಸಿನಲ್ಲಿ. ಮೊವ್‌ಗ್ಲಿಂಗ್ ಅದಕ್ಕಾಗಿ ಮಂಗಳೂರಿನಿಂದ ಓರ್ವ ಶಿಕ್ಷಕನನ್ನು ಕಳಿಸಿಯೂ ಆಯಿತು! ಆಗ ಕೆಸಮ್ಮೈಜರ್, ತಾನು ಕಂಡಿದ್ದ ಹಸ್ತಪ್ರತಿಗಳನ್ನು ಶುದ್ಧಗೊಳಿಸಿ ಪ್ರಕಟಿಸುವ ವಿಚಾರವನ್ನು ಮಂಡಿಸಿದಾಗ ಮೆವ್‌ಗ್ಲಿಂಗ್ ಹಿರಿ ಹಿರಿ ಹಿಗ್ಗಿದರು. "What a joy to look through the ruins of the former Kanerese intellectual world and to free the body of the language from its dusty, smoky, dirty grave of palm leaves and scraps of paper !" ಎಂದು ಮೆವ್‌ಗ್ಲಿಂಗ್ ತನ್ನೊಂದು ಆತ್ಮನಿವೇದನೆಯಲ್ಲಿ ಬಣ್ಣಿಸಿದ್ದಾನೆ.

ಇಂಥ ಹಳಗನ್ನಡ ಕೃತಿಗಳ ಪ್ರಕಟಣೆಗೆ ಮೆವ್‌ಗ್ಲಿಂಗ್ ಯೋಜನೆಯೊಂದನ್ನು ರೂಪಿಸಿದರು. ಕೆಸಮ್ಮೈಜರ್ ಕೇಟಿಯಲ್ಲಿ ; ಮೆವ್‌ಗ್ಲಿಂಗ್ ಮಂಗಳೂರಿನಲ್ಲಿ. ಈ ಕುರಿತ ಪತ್ರವ್ಯವಹಾರ ನಡೆಯಿತು.*

---

*ದಿ. ೧೦-೭-೧೮೪೮ ರಿಂದ ೩೦-೧-೧೮೪೯ರ ಆರು ತಿಂಗಳ ಅವಧಿಯಲ್ಲಿ, ಅಂಚೆಯ ವ್ಯವಸ್ಥೆ ತ್ವರಿತವಿರದ ಆಗಿನ ದಿನಗಳಲ್ಲಿ ೨೭ ಪತ್ರಗಳು ಓಡಾಡಿವೆಯೆಂಬುದರ ಮೇಲೆ ಅವರಿಬ್ಬರ ಮನದಲ್ಲಿ ಈ ವಿಷಯ ಎಷ್ಟು ಆಳವಾಗಿ ಇದ್ದಿತೆಂಬುದನ್ನು ಮನಗಾಣಬಹುದು.

ಅವರು ಕಂಡಿದ್ದ ಹಸ್ತಪ್ರತಿಗಳು ಕೆಲವೇ ಇದ್ದುವು. ಕೆಸಮ್ಯೆಜರ್ ಒಂದು ಪತ್ರದಲ್ಲಿ–

-Do you think that a proper person could be employed who would go about the Canerese country, to collect good manuscripts ? ಎಂದು ವಿಚಾರಿಸುತ್ತಾನೆ ! ಅದಕ್ಕೆ ಮೆಗ್ಲಿಂಗರ ಪ್ರತಿಕ್ರಿಯೆ : "ಸಿಕ್ಕಬಹುದು, ಅವನಿಗೆ ಕನ್ನಡ ಚೆನ್ನಾಗಿ ಗೊತ್ತಿರಬೇಕು. ಶುದ್ಧ ಪಾಠದ ಹಸ್ತಪ್ರತಿಯನ್ನು ಗುರುತಿಸಬಲ್ಲವನಾಗಿರಬೇಕು."

ಎಲ್ಲಿ ಸಿಕ್ಕಬೇಕು ಅಂಥ ವ್ಯಕ್ತಿ ? ಮಾತ್ರವಲ್ಲ, ಶುದ್ಧ ಪಾಠ ಇರಬೇಕು ಎಂದು ಹಂಬಲಿಸುವ ಎಷ್ಟು ಜನ ಇದ್ದರು ಆಗಿನ ದಿನಗಳಲ್ಲಿ ?

ಏನೇ ಆಗಲಿ ; ಶುದ್ಧ ಪಾಠ ಬೇಕೆಂದರೆ ಮೊದಲು ಬಿಳಿ ಕಾಗದದಲ್ಲಿ ಪ್ರತಿಮಾಡುವವರು ಬೇಕಲ್ಲ ? ಕೆಸಮ್ಯೆಜರ್ ಬರೆದ : "ಯಾರನ್ನಾದರೂ ಅಂಥವರನ್ನು ನೋಡಿರಿ, ನಾನು ಅವನ ಸಂಬಳ ಕೊಡುವೆ. ಆಗ ಮೊಗ್ಲಿಂಗ್ 'ಲಕ್ಷ್ಮೀನರಸಿಂಹಯ್ಯ ಎಂಬುವವನನ್ನು ಹನ್ನೆರಡು ರೂ. ಸಂಬಳದ ಮೇಲೆ ಗೊತ್ತುಪಡಿಸಿದರು. 'ಶುದ್ಧಪಾಠ' ಎನ್ನುವುದು ಅಷ್ಟು ಸುಲಭವೆ? ಅವನನ್ನು ಬಿಡಿಸಿ ಆನಂದರಾವ್ ಎಂಬವನನ್ನು ನೇಮಿಸಲಾಯಿತು.

ಅವರ ಪತ್ರವ್ಯವಹಾರದಲ್ಲಿ, 'ಬಿಬ್ಲಿಯಾಥಕಾ ಕರ್ನಾಟಿಕಾ' ಮಾಲೆಯಲ್ಲಿ ಆ ಮುಂದೆ ಪ್ರಕಟವಾದ ಎಂಟು ಕೃತಿಗಳಲ್ಲದೆ, ಲಕ್ಷ್ಮೀಹೃದಯ, ಕೃಷ್ಣಕಥಾಸಾರಸಂಗ್ರಹ, ಬೇತಾಳಪಂಚವಿಂಶತಿ ಮುಂತಾದ ಹಸ್ತಪ್ರತಿಗಳು ದೊರಕಿದ್ದರ ಪ್ರಸ್ತಾಪವಿದೆ. "ರಾವಣ ದಿಗ್ವಿಜಯದ ಇನ್ನೊಂದು ಹಸ್ತಪ್ರತಿ ಕಳುಹಿಸುತ್ತಿದ್ದೇನೆ" ಎಂಬ ಹೇಳಿಕೆಯಲ್ಲಿ ಪರಿಶುದ್ಧ ಪ್ರತಿಯ ದೃಷ್ಟಿಯೇ ಇತ್ತೆಂಬುದನ್ನು ಕಾಣಬಹುದು.

ಮುದ್ರಣ ಕಾರ್ಯ ಆರಂಭವಾಯಿತು. ಈ ವಿಚಾರವಾಗಿಯೂ ಕೆಸಮ್ಯೆಜರನ ಸಲಹೆಗಳು. ಪುಟ ಸಂಖ್ಯೆ ಎಲ್ಲಿ ಹಾಕಬೇಕು ? ಪುಟದ ವಿನ್ಯಾಸ ಹೇಗಿರಬೇಕು ? ಇತ್ಯಾದಿ. ಉದಾ.ಗೆ ಕವಿತೆಯ ಒಂದೊಂದು ಚರಣಕ್ಕೆ ಪ್ರತ್ಯೇಕ ಸಾಲು ಇರಬೇಕು ಎಂಬುದು, ಆ ಮುಂಚೇ ನಮ್ಮಲ್ಲಿ ಇರಲೇ ಇಲ್ಲ. ಮತ್ತೆ ಕಲ್ಲಚ್ಚಿನ ಮುದ್ರಣವಾದರೂ ಮುತ್ತಿನಂತಹ ಅಕ್ಷರಗಳುಳ್ಳ ಕೃತಿಗಳು ಹೊರಬಂದವು. ಅಂದಹಾಗೆ ಮೊದಲು ಹೊರಬಂದ ಜೈಮಿನಿ ಭಾರತ (೧೮೪೮) ಮತ್ತು ತೊರವೆ ರಾಮಾಯಣ ಇವೆರಡೂ ಅಪೂರ್ಣವಾಗಿ ಮುದ್ರಣವಾಗಿವೆ. ಕಾರಣ ಅದೇ ಜೈಮಿನಿಯ ಶುದ್ಧ ಪಾಠವು ಸಿದ್ಧವಾಗಿರಲಿಲ್ಲ. ತೊರವೆ ರಾಮಾಯಣದ ಅರಣ್ಯಕಾಂಡದ (೯ನೆಯ ಸಂಧಿ) ಮುಂದಿನ ಭಾಗದ ಇನ್ನೊಂದು ಹಸ್ತಪ್ರತಿ, ಮದ್ರಾಸದಿಂದ ಬರಲಿದ್ದಿತು, ಬಂದಿರಲಿಲ್ಲ.

ಮೊಗ್ಲಿಂಗರ ಚರಿತ್ರೆಯನ್ನು ಬರೆದ (ಜರ್ಮನ್ ಭಾಷೆಯಲ್ಲಿ) ಗುಂಡರ್ಟ್ ಈ ಎತ್ತುಗಡೆಯನ್ನು ಹೀಗೆ ಸಮಾರೋಪ ಮಾಡಿದ್ದಾರೆ :

Scripts were brought or borrowed from everywhere, looked through and compared ; and everything was lithographed that was valuable for the study of grammar, history, religion and the customs of the country.

ಕೇಟಿಯಲ್ಲಿ ಬಡಗರು ಬಹು ಸಂಖ್ಯೆಯಲ್ಲಿದ್ದರು. ಕೆಸಮೈಜರ್ ಅವರ ಮಕ್ಕಳಿಗಾಗಿ ಶಾಲೆ ತೆರೆದ. ಎಳೆಯ ಮಕ್ಕಳೊಂದಿಗೆ ಬೆರೆಯುತ್ತಿದ್ದ. 'Old man of the mountains' ಎಂಬುದಾಗಿ ಕೇಟಿಯ ಇತರ ನಿವಾಸಿಗಳು ಅವನನ್ನು ಆದರದಿಂದ ಕರೆಯುತ್ತಿದ್ದರು. ಎಲ್ಲ ದೃಷ್ಟಿಯಿಂದಲೂ ಮಹಾನುಭಾವನೆಂದು ಕರೆಯಿಸಿಕೊಳ್ಳಲು ಯೋಗ್ಯವಾದ ವ್ಯಕ್ತಿ. ೧೮೫೧ರಲ್ಲಿ ಅಕಸ್ಮಾತ್ ತೀರಿಕೊಂಡ, 'ಬಿಬ್ಲಿಯಾಥೆಕಾ ಕರ್ನಾಟಿಕಾ'ದ ಯೋಜನೆಗೆ ಹೊಡೆತ ಬಿತ್ತು. ಅನಂತರ ಸಹಾಯ ಮಾಡಲು ಇನ್ನೊಬ್ಬ ಮಹಾನುಭಾವ- ವಾಲ್ಟರ್ ಎಲಿಯೆಟ್ (ಮದ್ರಾಸ ಸರಕಾರದ ಹಿರಿಯ ಅಧಿಕಾರಿ) ಮುಂಬಂದನಾದರೂ, ಮೊವ್‌ಗ್ಲಿಂಗರೇ ಬೇರೆ ಮಿಶನರಿ ಕೆಲಸದಲ್ಲಿ – ವಿಶೇಷತಃ ಕೊಡಗಿನಲ್ಲಿ – ತೊಡಗಿದ್ದರಾದ್ದರಿಂದ ಈ ಕೆಲಸ ತಡೆದು ನಿಂತಿತು.

## ಅನುಬಂಧ 4
## ಕಿಟೆಲ್ : ಪೂರಕ ವಿಷಯಗಳು

### ಧಾರ್ಮಿಕ ನಿಷ್ಠೆ

ಪ್ರತಿಯೊಬ್ಬ ವಿಚಾರವೇತ್ತನ ಜೀವನದಲ್ಲಿ ಹಲವು ಪ್ರೇರಣೆಗಳು ಕೆಲಸಮಾಡುತ್ತವೆ. ಕಿಟೆಲ್‌ಗೆ ಪ್ರೇರಣೆ ಇತ್ತದ್ದು ಅತೀವ ಧಾರ್ಮಿಕ ನಿಷ್ಠೆ ಹಾಗೂ ಆಳವಾದ ಭಾಷಾಸಕ್ತಿ. ಇವಕ್ಕೆ ಪ್ರಖರ ಮೇಧಾಶಕ್ತಿ ಹಾಗೂ ಸ್ಮರಣಶಕ್ತಿ ಅವನಿಗೆ ನೆರೆನಿಂತವು.

ಧಾರ್ಮಿಕ ನಿಷ್ಠೆ ಎನ್ನುವುದು ಎಲ್ಲ ಮಿಶನರಿಗಳಲ್ಲಿ ಮೂಲತಃ ಇರಬೇಕಾದದ್ದೇ. ಕಿಟೆಲ್‌ನಲ್ಲಿ ಅದು ಒಂದು ತೂಕ ಹೆಚ್ಚೇ ಎನಿಸುವಂತಿದ್ದಿತು. ಶಾಲಾ ವಿದ್ಯಾರ್ಥಿಯಾಗಿ ಇದ್ದಾಗಲೇ ಮತೋಪದೇಶ ಸಂಸ್ಥೆಯೊಂದನ್ನು ಆತ ಸೇರಬಯಸಿದ್ದನು! ಅದಕ್ಕೆ ತಂದೆಯ ಮತ್ತು ಶಾಲೆಯ ಪ್ರಿನ್ಸಿಪಾಲರ ಸಹಮತವಿದ್ದಿತು. ಶಾಲೆಯಲ್ಲಿ ಗ್ರೀಕ್, ಲ್ಯಾಟಿನ್ ಮುಂತಾದ ಕ್ಲಾಸಿಕಲ್ ಭಾಷೆಗಳನ್ನು ಕಲಿಸುತ್ತಿದ್ದರಷ್ಟೆ. ಆ ಕುರಿತು ಪ್ರಿನ್ಸಿಪಾಲರು "His performance in them, as in other subjects was never less than good" ಎಂದು ಹೇಳಿದ್ದರಾದರೂ, ಅವನ ಶಾಲಾ ವಿದಾಯದ ಸರ್ಟಿಫಿಕೇಟಿನಲ್ಲಿ `His interest in religion was not merely a theoretical one. He understood religion as a condition of life. A convinced piety is the principal feature of his character. . . .is mentally and physically fit for his self-chosen profession'.

ಬಾಸೆಲ್‌ನ ದೈವಜ್ಞ (theological) ತರಬೇತಿಯನ್ನು ಸೇರುವಾಗ ಕಿಟೆಲ್ ತನ್ನ ನಿವೇದನಾ ಪತ್ರದಲ್ಲಿ ಹೀಗೆ ಹೇಳಿದ್ದಾನೆ :

I attempt achieving sanctification by my own strength. Where otherwise shall I seek refuse than in Christ ?. . . .I am not conscious of any other motives but the love of Christ.'

ಯೇಸು ಕ್ರಿಸ್ತನಲ್ಲಿದ್ದ ಈ ಅತ್ಯಂತಿಕ ನಿಷ್ಠೆಯಿಂದಾಗಿ ಗದ್ಯದಲ್ಲಿರುವ 'ಯೇಸು ಕ್ರಿಸ್ತನ ಶ್ರಮೇಚರಿತ್ರೆ'– ಹಾಗೂ ಖಂಡಕಾವ್ಯವಾದ 'ಕಥಾಮಾಲೆ' ಅವರಿಂದ ರಚಿತವಾದವು.

ಧಾರ್ಮಿಕ ನಿಷ್ಠೆಗೆ ಎರಡು ಮುಖಗಳು. ಒಂದು ಭಾವನಾತ್ಮಕ; ಇನ್ನೊಂದು ತಾತ್ವಿಕ. ಕವಿತಾರಚನೆ ಭಾವನಾತ್ಮಕ ಮನೋಧರ್ಮದ ನಿದರ್ಶನವೆನ್ನಬಹುದು.

ಶಾಲೆಯಲ್ಲಿದ್ದಾಗಲೇ ಆತ ಭಕ್ತಿಪರ ಹಾಡುಗಳನ್ನು ರಚಿಸಿದ್ದ. ಈ ಕವನಿಸುವಿಕೆ 'ಕ್ರೈಸ್ತ ಸಭಾ ಚರಿತ್ರೆ' ಯಂತಹ ಗದ್ಯ ಗ್ರಂಥದಲ್ಲಿಯೂ ವ್ಯಕ್ತವಾಗಿದೆ.

ಕಿಟೆಲ್ ಹಳಗನ್ನಡ ಕಾವ್ಯಗಳನ್ನು ಮನನ ಮಾಡಿದ್ದರಷ್ಟೆ. ಅವುಗಳಲ್ಲಿಯ ಗೇಯ ಗುಣ ವಿಶೇಷ ಮೆಚ್ಚಿಕೆಯಾಗಿದ್ದಿತು. ವಿಶೇಷತಃ ಅವುಗಳ ನಾನಾ ಪ್ರಕಾರಗಳು Notes on Indian Poetry and Prosody' ಎಂಬ ಲೇಖದಲ್ಲಿ (Indian Evangelical Review. Vol.1.1874) ಉತ್ತರ ಕರ್ನಾಟಕದಲ್ಲೆಲ್ಲ ವಿಶೇಷ ಪ್ರಚಾರದಲ್ಲಿದ್ದ 'ಶ್ರೀಕೃಷ್ಣಪರಿಜಾತ'ವನ್ನು ಗಮನದಲ್ಲಿಟ್ಟುಕೊಂಡು, ಅಲ್ಲಿಯ ಅಸಾವೇರಿ, ಪಂತುರಾವಳಿ, ಕಲ್ಯಾಣಿ ಮುಂತಾದ ಹಾಡಿನ ಮಟ್ಟುಗಳನ್ನು ಪ್ರಸ್ತಾಪಿಸಿದ್ದರು. ಆ ಲೇಖದ ಕೊನೆಯಲ್ಲಿ – This writer's long-cherished wish is that Hindu prosody and music should be taught in all native Christian schools, so that time may come when highly gifted youths, will be enabled to compose poems.

ಈ ಅಂಶವನ್ನು ಬಾಸಲ್‌ನ ಕೇಂದ್ರ ಸಮಿತಿಗೂ ತಿಳಿಸುವಷ್ಟು ಅವರಲ್ಲಿ ನಿಶ್ಚಲ ವಿಶ್ವಾಸ (conviction) ಇದ್ದಿತು. ಆದರೆ ಅದಕ್ಕೆ ಒಪ್ಪಿಗೆ ಸಿಗಲಿಲ್ಲ ; ಅಷ್ಟೇ ಇಲ್ಲ, ಆ ರೀತಿಯಲ್ಲಿ ಕವಿತೆ ರಚಿಸಹೋಗಬಾರದೆಂಬ ಎಚ್ಚರಿಕೆಯನ್ನು ನೀಡಿದಂತೆ ಕಾಣುತ್ತದೆ.

ಕಿಟೆಲರ ಅದೇ ಧಾರ್ಮಿಕ ದೃಷ್ಟಿಯು ಭಾರತೀಯ ತತ್ವಶಾಸ್ತ್ರವನ್ನು ಆಳವಾಗಿ ಅಭ್ಯಸಿಸುವತ್ತ ಪ್ರೇರೇಪಿಸಿತು. ಅದರ ಫಲವಾಗಿ 'ಪರಮಾತ್ಮ ಜ್ಞಾನ'. 'Tract on Sacrifice' ಹಾಗೂ 'Linga Cultus' ಎಂಬ ಕೃತಿಗಳು ಹೊರಬಂದುದನ್ನು ನೋಡಿದ್ದೇವೆ.

ಕಾವ್ಯವನ್ನು ಎರಡು ರೀತಿಯಲ್ಲಿ ಅಭ್ಯಸಿಸಲು ಸಾಧ್ಯ. ಒಂದು ಅದರ ಭಾಷೆ, ವ್ಯಾಕರಣಾದಿ ಪ್ರಕ್ರಿಯೆ, ಇನ್ನೊಂದು ರಸಾಸ್ವಾದ. ಕಿಟೆಲರಲ್ಲಿ ರಸಗ್ರಹಣ ದೃಷ್ಟಿ ಅತೀವ ಗೌಣವಾಗಿದ್ದಿತು! ನಮ್ಮ ಪೌರಾಣಿಕ ಕಲ್ಪನೆಗಳು, ಮಿಥಕಗಳು, ಕವಿಸಮಯಗಳು ಅವರಿಗೆ ಅರ್ಥಹೀನವಾಗಿ ತೋರಿದುವು. 'ರಾಜಶೇಖರ ವಿಳಾಸ'ದಲ್ಲಿ ಶಿವನು ಸತ್ತವರನ್ನು ಬದುಕಿಸಿ ಕೈಲಾಸಕ್ಕೆ ಕೊಂಡೊಯ್ದುದಕ್ಕೆ "ಇದು ವಿಪರೀತವಾಯಿತಲ್ಲ!" ಎಂದು ಟೀಕಿಸಿದ್ದಾರೆ. ಈ ರಸಗ್ರಹಣದ ಅಭಾವದ ಕಾರಣದಿಂದ, ನಮ್ಮ ಕವಿತೆಗಳಲ್ಲಿ ಯಾವುದೇ ಶೃಂಗಾರವಿರಲಿ, ಅದು ಅಶ್ಲೀಲವಾಗೇ ಕಂಡಿದೆ. ನಮ್ಮೀ ಪರಂಪರೆಯಲ್ಲಿ ಕಿಟೆಲರಿಗೆ ಒಂದು ಬಗೆಯ ಅಸಹನೀಯತೆಯೇ ಇದ್ದಿತು. ಕನ್ನಡ ಗ್ರಂಥ ಸಂಪಾದನೆಗೆ, 'ಛಂದೋಂಬುಧಿ'ಯ ಮೂಲಕ ಅವರು ಅಡಿಗಲ್ಲನ್ನು ಹಾಕಿದರೆಂದು ಹೇಳುತ್ತೇವೆ. ಆದರೆ ಅದರಲ್ಲಿಯ ದೇವತಾಸ್ತುತಿಯ ಎಲ್ಲ ಪದ್ಯಗಳನ್ನು ಕೈಬಿಟ್ಟಿದ್ದಾರೆ– ಹಸ್ತಪ್ರತಿಯಲ್ಲಿ ಅವು ಇದ್ದಾಗ್ಯೂ.

ಈ ಕುರಿತು ಆರ್. ನರಸಿಂಹಾಚಾರ್ಯರು – "It is a matter to be deeply regretted that Kittel who is one of the pioneers in the field of Kannada

language and literature and to whose labour we owe the first publication of 'Chandombudhi', as of several other important works, has, in his solitude for leaving out everything that savoured of superstition and containing anything adding to Hindu mythology, omitted in his edition of the above work."

ಕಿಟೆಲರ ಈ ಅತಿಯಾದ ನೀತಿಮತ್ತೆಯು 'ಪಂಚತಂತ್ರ'ದ ಪಠ್ಯವನ್ನು (ವಿದ್ಯಾರ್ಥಿಗಳಾಗಿ) ಸಿದ್ಧಪಡಿಸುವಾಗಲೂ ತೋರಿ ಬಂದಿದೆ. ಅವರ ಪ್ರಕಾರ 'Tales violating the rules of decency' ಇವನ್ನು ಕೈಬಿಟ್ಟಿದ್ದಲ್ಲದೆ, ಅದಕ್ಕಾಗಿ ಹೆಮ್ಮೆ ಪಟ್ಟುಕೊಂಡು '...an omission for which every father of a family and every honest teacher will doubtless thank us.'

**ಶಬ್ದಾಸಕ್ತಿ :** ಎರಡನೆಯ ಪ್ರೇರಣೆ ಶಬ್ದಾಸಕ್ತಿ. ಈ ಆಸಕ್ತಿ ಬರಿಯೆ 'ಶಬ್ದವಿಹಾರ' ಮಾತ್ರವಲ್ಲ ಶಬ್ದ- ಅದರ ಅರ್ಥದೊಂದಿಗೆ ತಕ್ಷಣ ಗ್ರಹಿಸುವುದಲ್ಲದೆ, ಅವುಗಳ ಪೂರ್ವಾಪರವನ್ನೂ ಅವುಗಳ ವ್ಯಂಜಕಗುಣವನ್ನೂ ಅರಿಯುವಲ್ಲಿ ಅಪ್ರತಿಮ ಸಾಮರ್ಥ್ಯವನ್ನು ಹೊಂದಿದ್ದರು. ಈ ಶಬ್ದದ ಮೂಲಕವೇ, ಭಾಷೆ, ವ್ಯಾಕರಣ, ಛಂದೋಪ್ರಯೋಗಾದಿಗಳತ್ತ ಅವರ ಪ್ರವೃತ್ತಿ ಸಾಗಿಬಂದಿತು.

'ಕನ್ನಡ ಕಾವ್ಯಮಾಲೆ' ಈ ಪಠ್ಯಕ್ಕೆ ಶಬ್ದಾರ್ಥವನ್ನು ಕೊಡಬೇಕಾದದ್ದು ಸರಿಯೇ. ಹಾಗೆ ಮಾಡುವಾಗ ಶಬ್ದಗಳ ಮೂಲ ರೂಪವನ್ನೂ ಕೊಡುತ್ತ ಹೋಗಿದ್ದಾರೆ. (ಉದಾ.ಗೆ ಲಕ್ಷ್ಮಣ ಇದರ ಮೂಲ ರೂಪ 'ಲಕ್ಷ್'.) ಅವರ ಒನೆಯ ಇಯತ್ತೆಯ ವಾಚನ ಪುಸ್ತಕಕ್ಕೆ ಮೂವತ್ತು ಪುಟಗಳಷ್ಟು ಶಬ್ದ-ಅರ್ಥಗಳಿವೆ! ಬೇರೆಲ್ಲಿಯಾದರೂ ಶಬ್ದ ವಿಚಾರದಲ್ಲಿ ತಪ್ಪು ಕಂಡರೆ ಅವರಿಗದು ಅಸಹನೀಯವೆನಿಸುತ್ತಿತ್ತು. ಒಂದೇ ಕೃತಿಯ ಹಲವು ಹಸ್ತಪ್ರತಿಗಳನ್ನು ಆರಸಿಕೊಂಡು ಹೋಗುತ್ತಿದ್ದುದರ ಕಾರಣ ಇದೇ ಆಗಿದೆ.

'ಪಂಚತಂತ್ರ'ದ ಕಥೆಗಳನ್ನು ಕೊಟ್ಟಿದ್ದಾರಷ್ಟೆ. ಅದಕ್ಕೆ ಶಬ್ದಾರ್ಥ ಸೂಚಿ ಅಗತ್ಯವಿಲ್ಲ. ಸ್ವಾಭಾವಿಕವಾಗಿಯೇ ಕೊಟ್ಟಿಲ್ಲ. ಆದರೆ ಬಾಸೆಲ್‌ನಲ್ಲಿ ಅವರದೇ ಸ್ವಂತ ಪ್ರತಿ ಒಂದೇ ಬದಿ (ಮುದ್ರಣವಾದದ್ದು) ನನಗೆ ನೋಡ ಸಿಕ್ಕಿತ್ತು. ಪ್ರತಿ ಪುಟದ ಹಿಂಬದಿಯಲ್ಲಿ ಕೆಲವು ಶಬ್ದಗಳಿಗೆ ಅರ್ಥವನ್ನು ಬರೆದುಕೊಂಡಿದ್ದಾರೆ! ಕೆಲವನ್ನು ಇಲ್ಲಿ ಕಾಣಿಸಬೇಕೆನಿಸುವುದು.

ಮಂತ್ರಿ – From ಮನ್, to think, ಯೋಚಿಸು : ಯೋಚಿಸುವವ.

ಸಂತೋಷ – From ತುಷ್, to be glad, to rejoice ; ಸಂತುಷ್ – to gladden

ಅತಿ-ಶಯ – From ಶೀ, to lie. ಅತಿ-ಶೀ –to be beyond

ಯಾವ ಶಬ್ದವೇ ಇರಲಿ, ಅದರ ಮೂಲವನ್ನು ಅರಸಿಕೊಂಡು ಹೋಗುವುದು ಅವರ ಹುಟ್ಟು ಗುಣವೆ ಆಗಿದ್ದಿತೇನೊ!

ಕಿಟೆಲರಿಂದ ಶಬ್ದಗಳ ಸ್ವಯಂ ಸೃಷ್ಟಿಯೂ ಸಾಕಷ್ಟು ಪ್ರಮಾಣದಲ್ಲಿ ಆಗಿದೆ. 'ಕ್ರೈಸ್ತ ಸಭಾಚರಿತ್ರೆ'ಯಂತಹ ಬೃಹತ್ ಚರಿತ್ರೆಯನ್ನು ರೂಪಿಸುವಾಗ ಅವರು ಶಬ್ದಗಳನ್ನು 'ಹೊಸೆ'ಯುವುದು ಅನಿವಾರ್ಯವಿದ್ದಿತು. ಅಂಥವು ಆ ಕೃತಿಯ ಕೊನೆಯಲ್ಲಿ ಸುಮಾರು ೭೦ ಪುಟಗಳನ್ನು ಬಳಸಿಕೊಂಡಿವೆ.

ಇಲ್ಲಿಯ ಅವರ ಪದಸೃಷ್ಟಿ ಮೂರು ಬಗೆಯದು: –ಮೂಲದ ಅಂಕಿತ ನಾಮಗಳನ್ನು ಭಾರತೀಯ ಉಚ್ಚಾರಕ್ಕೆ ಅನುಗುಣವಾಗಿ ಪರಿವರ್ತಿಸುವುದು. ಉದಾ.ಗೆ Catherene- ಕ್ಯಾತರೀನಳು.

–ಮೂಲದ ಅಂಕಿತ ನಾಮಗಳ ಮೂಲಾರ್ಥವನ್ನು ಗುರುತಿಸಿ ಅದನ್ನೇ ಅನುವಾದಿಸುವುದು. ಉದಾ.ಗೆ Anderson-Ander's Son ; ಆಂದ್ರೆಯ ಮಗ.

–ಇನ್ನು ಕೆಲವು ಸ್ವತಂತ್ರ ವಿಚಾರ ಸರಣಿಯವು. ಉದಾ.ಗೆ ಕಥರತ್ವ ; The state of dissenting from Popery. ಮೂಲತಃ ಗ್ರೀಕ್ ಶಬ್ದವಾದ ಕಥರ್ – ಇದರ ಅರ್ಥ One who deviates from an established church ಎಂಬುದಾಗಿದ್ದು, ಅದರ ನೆರವಿನಿಂದ ಕಿಟೆಲ್ ಈ 'ಕಥರತ್ವ' ಶಬ್ದವನ್ನು ಸೃಷ್ಟಿಸಿದ್ದಾರೆ !

## ಕಿಟೆಲ್ ಕೋಶ

ಇನ್ನೀಗ ಅವರ ಕೋಶದ ಬಗ್ಗೆ ಕೆಲವು ಅಂಶಗಳನ್ನು ತಿಳಿಸಬೇಕು. ಇದಕ್ಕಾಗಿ ಬಾಸೆಲ್ ಮತ್ತು ಲಂಡನ್ನಿನಿಂದ ನಾನು ತಂದಿದ್ದ ದಾಖಲೆಗಳನ್ನು ಡಾ. ಕೆ. ಎಂ. ಮ್ಯಾಥ್ಯೂ ತಮ್ಮ ಕಿಟೆಲ್ ಕುರಿತ ಮಹಾಪ್ರಬಂಧದಲ್ಲಿ ಬಳಸಿಕೊಂಡು ಕೋಶದ ಹಿನ್ನೆಲೆಯನ್ನು ಕೊಟ್ಟಿರುವರು. (ಅವರ ಸಂಪ್ರಬಂಧದ ಪುಟ ೧೪೩–೧೪೯). ಅದರಲ್ಲಿ ಮೆವ್‌ಗ್ಲಿಂಗ್, ಎಲಿಯಟ್, ಮತ್ತಿತರರ ಸಕ್ರಿಯ ಯೋಚನೆ, ಬ್ರಿಟಿಶ್ ಸರಕಾರವು ಕೊಡಮಾಡಿದ್ದ ಆರ್ಥಿಕ ಸಹಾಯಕ್ಕೆ ಪ್ರತಿಫಲವಾಗಿ ೭೦೦ ಪ್ರತಿಗಳನ್ನು ಬಾಸೆಲ್ ಮಿಶನ್ನಿನಿಂದ ಪಡೆದದ್ದು, ಕೊನೆಯಲ್ಲಿ ಬೈಂಡಿಂಗ್ ವೆಚ್ಚವನ್ನು ಕೊಡಲು ನಿರಾಕರಿಸಿದ್ದು – ಇವೆಲ್ಲ ಅಂಶಗಳು ಆ ಗ್ರಂಥದಲ್ಲಿ (ಡಾ. ಫರ್ಡಿನಾಂಡ್ ಕಿಟೆಲ್: ಒಂದು ಸಮಗ್ರ ಅಧ್ಯಯನ) ಸ್ಪಷ್ಟವಾಗಿ ಬಂದಿವೆ.

ಕೋಶರಚನೆ ಮುಂದುವರಿದಾಗ ಬ್ರಿಟಿಶ್ ಸರಕಾರವು ಒಂದು ಮಹತ್ತರ ಸೂಚನೆ ಮಾಡಿತ್ತು. ಅದೆಂದರೆ, ಉತ್ತರ ಕರ್ನಾಟಕದ ಕನ್ನಡ ಭಾಷೆಗೂ, ತುಂಗಭದ್ರೆಯ ಕೆಳಗಿರುವ ಮೈಸೂರ ಸಂಸ್ಥಾನದ ಭಾಷೆಗೂ ತುಂಬಾ ಭೇದವಿದ್ದು ಉತ್ತರ ಕರ್ನಾಟಕದಲ್ಲಿ ಬಳಕೆ ಇರುವ ಶಬ್ದಗಳನ್ನೂ ಸೇರಿಸಬೇಕು ಎಂಬುದು. ಅದಕ್ಕೆ ಕಿಟೆಲ್ ಕೊಟ್ಟ ಸುದೀರ್ಘ

ಉತ್ತರದಲ್ಲಿ (ದಿ. ೨೫-೨-೧೮೭೯) ಕನ್ನಡ ಭಾಷಾವಿಕಾಸದ ಪರಿಗಳು ಬಂದಿವೆ. ಅದರಿಂದ ಎರಡು ಅಂಶಗಳನ್ನು ಕಾಣಿಸುವೆ :

The form of government, laws, institutions, traditions and customs are nearly identical throughout the whole Canarese country ; and the Canerese language, excepting style and the use of borrowed terms, is everywhere subtantially the same.

As English dictionaries do not deal of the specialities of local dialects but of common English, so a Canerese dictionary has first of all to introduce the Canerese language [as such]. I trust my work will prove to be an accurate representation of what Canerese is to the South, as well as, to the North of Tungabhadra.

ಕರ್ನಾಟಕವು ಭಾಷೆ, ಜನಾಂಗ ಮುಂತಾದ ದೃಷ್ಟಿಗಳಿಂದ ಒಂದೇ; ಎಂಬುದನ್ನು ಏಕೀಕರಣವಾಗದೇ ಇದ್ದ ಕಾಲದಲ್ಲಿ ಕಿಟೆಲ್ ಮನಗಂಡಿದ್ದರೆನ್ನುವುದು ಇಂದಿನವರ ಕಣ್ಣು ತೆರೆಯಿಸಬೇಕಾದ ಅಂಶವಾಗಿದೆ.

ಕೋಶವು ಪ್ರಕಟವಾದ ಮೇಲೆ, ಎಲ್ಲೆಡೆಯಿಂದ ಮೆಚ್ಚಿಕೆ ಹೊರಹೊಮ್ಮಿದ್ದನ್ನು ಈಗಾಗಲೇ ಹೇಳಿದೆ. ಕನ್ನಡಿಗರ ಪೈಕಿ ಆರ್. ರಘುನಾಥರಾಯರು ಮಾತ್ರ ತುಂಬಾ critical ಆಗಿ ಅಭಿಪ್ರಾಯಿಸಿದ್ದಾರೆ: 'ಗಂಡ ಎನ್ನುವುದಕ್ಕೆ ಕುತ್ತು ಎಂಬ ಅರ್ಥವಿದ್ದು ಕಿಟೆಲ್ ಅದನ್ನು ಕೊಟ್ಟಿಲ್ಲ. 'ಮಕ್ಕಳು' ಎನ್ನುವುದು ಜಾತಿವಾಚಕವೂ ಹೌದು. ಅದನ್ನು ಅವರು ಹೇಳಿಲ್ಲ. . .' ಇತ್ಯಾದಿ. ಕೊನೆಯಲ್ಲಿ 'ಕೋಶವು ಗ್ರಾಮ್ಯ ಪದಗಳಿಂದ ತುಂಬಿಹೋಗಿದ್ದು ಯಾವುದೇ ಶಾಸ್ತ್ರಾಭ್ಯಾಸಕ್ಕೆ ಅನುಕೂಲಿಸುವುದಿಲ್ಲ' ಎಂದು ತಿಳಿಸಿ "ಕಿಟೆಲ್ ಸಾಹೇಬರವರ ನಿಘಂಟುವಿನ ಸಹಾಯದಿಂದ ಕನ್ನಡದ ಸಾಧಾರಣ ಪದ್ಯಕ್ಕೂ ಅರ್ಥ ಮಾಡಲಿಕ್ಕಾಗುವುದಿಲ್ಲ" ಎಂದು ಫಲಶ್ರುತಿ ಮಾಡಿದ್ದಾರೆ !

ಇನ್ನೊಬ್ಬ ಕನ್ನಡಿಗ ಎಂ. ಗೋವಿಂದ ಪೈಗಳು ಕಿಟೆಲ್ ಕೋಶವನ್ನು ಕಂಡ ಬಗೆಯೇ ಬೇರೆ. ಅವರು ಬಳಸುತ್ತಿದ್ದ ಕೋಶದ ಪ್ರತಿಯು ಉಡುಪಿಯ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿದೆ. ಅದರ ಪ್ರತಿಯೊಂದು ಪುಟವೂ (ಅಕ್ಷರಶಃ ಹಾಗೆ) ನೇರಿಳೆ ಶಾಹಿಯಲ್ಲಿ ಕೆಳಗೆರೆ. ಬದಿಗೆರೆ, ಪ್ರಶ್ನಾರ್ಥಕ ಚಿಹ್ನೆ. ಶಬ್ದಕ್ಕೆ ಪ್ರತಿ-ಶಬ್ದ ಏನೆಲ್ಲ ಕಂಡು ಬರುತ್ತದೆ. ಅರ್ಥಾತ್ ಅವರು ಈ ಕೋಶವನ್ನು ಯಾವುದೊಂದು ಶಬ್ದದ ಅರ್ಥಕ್ಕಾಗಿ ನೋಡದೆ. ವೈಚಾರಿಕ ಗ್ರಂಥವೊಂದನ್ನು ಪರಿಶೀಲಿಸಿದ್ದ ರೀತಿಯಲ್ಲಿ ಗಮನಿಸಿದ್ದಾರೆ.

೧. ಮೊದಲಿಗೆ ಅವರು ಗುರುತಿಸಿದ **ತಪ್ಪುಗಳನ್ನು** ನೋಡೋಣ:

| **ಕೋಶದಲ್ಲಿ** | **ಪೈ ತಿದ್ದುಗೆ** |
|---|---|
| ಏಕಾಂಬ್ರನಾಥ | – ಇಲ್ಲಿ ಬ ಬೇಕಾಗಿರಲಿಲ್ಲ |
| ಅಚ್ಚುಬೆಲ್ಲ ಅಚ್ಚಪ್ಪಗೆ | |
| ನುಚ್ಚು ಬೆಲ್ಲ ವೆಂಕಪ್ಪಗೆ | ...ನುಚ್ಚು ಬೆಲ್ಲ ನಚ್ಚಪ್ಪಗೆ |
| ಮೂಡಲ್ ಇರ್ದ ಪದದೊಳ್– | |
| ತಾ–ರಾಮನೋ–ವಲ್ಲಭಂ | ...ತಾರಾಮನೋವಲ್ಲಭಂ (ಬಿಡಿಸಿ ಅಲ್ಲ). |

**೨. ಇವು ಕೆಲವು ಸೇರ್ಪಡೆಗಳು**

| **ಕೋಶದಲ್ಲಿ** | | **ಪೈ ಸೇರ್ಪಡೆ** |
|---|---|---|
| ಕಾವಡಿ; ಮುಚ್ಚು | – | ಇವು ಹಿಂದಿಯಲ್ಲಿಯೂ ಇವೆ. |
| ಕುಜಿಜೆ; ಪಡಿಗ | – | ತುಳುವಿನಲ್ಲಿ ಗುಜ್ಜೆ ಮತ್ತು ಪಡ್ಡೆ |
| ತಲಬು | – | ಪರ್ಶಿಯನ್‌ದಲ್ಲಿ ತಲ್ಬೀದನ್ |
| ತೆಜಿ[ದಿ] | – | ಅರಬಿಕ್‌ದಲ್ಲಿಯ ತರಹ್‌ದಿಂದ |
| ಹವ್ಯಾಸ (ಸಂಸ್ಕೃತ ಅಲ್ಲ) | – | ಅರಬಿಕ್‌ದಲ್ಲಿ ಹವ್ವಸ್ |
| ಪಾಲುದಾರ | – | ಪರ್ಶಿಯನ್‌ದಲ್ಲಿ ಪಾಲ್ದಾರ್ |

**೩. ಕೋಶದಲ್ಲಿ ಕಿಟೆಲ್ ಕೊಡದಿದ್ದ ಹೆಚ್ಚಿನ ಅರ್ಥಗಳು:**

ಅಕ್ಷಿಗತ, detestable ಇನ್ನೊಂದು ಅರ್ಥ eyesore
ಕೆಂದು, to lean on ಇನ್ನೊಂದು ಅರ್ಥ to lie down

**೪. ಈ ಕೆಲವು ಶಬ್ದಗಳಿಗೆ, ತುಸು ವಿವರಣೆ ಕೊಡಬೇಕು :**

ಕೊನೆ: ಇದರ ಅರ್ಥ ನಮಗೆಲ್ಲ ಗೊತ್ತಿದ್ದ ಹಾಗೆ 'The end'. ಆದರೆ ಕಿಟೆಲ್ to thrive or to succeed ಎಂದು ಕೊಟ್ಟಿದ್ದಾರೆ! ಮೇಲಾಗಿ 'ಗಿರಿಜಾಕಲ್ಯಾಣ'ದಲ್ಲಿ ಆ ಶಬ್ದ ಬಂದ ಸಂದರ್ಭದಿಂದ ಅದು 'ಕೊಂಡುಕೊನೆ' ಎಂದು ಪೈಗಳು ಗುರುತಿಸಿದರು. ಈ 'ಕೊಂಡುಕೊನೆ' ಎಂಬುದನ್ನು ಮಾರ್ಜಿನ್‌ನಲ್ಲಿ ಕಾಣಿಸಿದ್ದಾರೆ. ಕಿಟೆಲ್ ಹೇಳಿದಂತೆ ಬರಿ 'ಕೊನೆ' ಅಲ್ಲ.

ಘಾತಾಳಿ ; ಕಿಟೆಲ್ ಕೊಟ್ಟ ಅರ್ಥ a mischievous woman ಎಂದರೆ ಅದು ಸ್ತ್ರೀವಾಚಿ ಮಾತ್ರವೆ ? 'ಅಳಿ' ಇದನ್ನು ಸ್ತ್ರೀವಾಚಿಯಾಗಿ ಪರಿಭಾಷಿಸಿ ಕಿಟೆಲ್ ಹಾಗೆ

ಹೇಳಿರಬೇಕು. ಪೈ ತಮ್ಮ ಕೋಶದಲ್ಲಿ ಇದನ್ನು ಕಾಣಿಸಿ 'ವಾಚಾಳಿ' ಮುಂತಾದ್ದರಲ್ಲಿ ಅದು ಪುರುಷವಾಚಿಯೂ ಆಗಿರುವುದನ್ನು ತೋರಿಸಿದ್ದಾರೆ.

ಮುಕ್ತಾಯ –ಈ ಶಬ್ದ ಸಂಸ್ಕೃತದ್ದು ಎಂದು ಕಿಟೆಲ್ ಕಾಣಿಸಿದ್ದಾರೆ. ಹಾಗೇನಲ್ಲ; ಅದು ಕನ್ನಡ ಶಬ್ದ. 'ಮುಗಿತಾಯ' ದಿಂದ ರೂಪುಗೊಂಡಿರಬೇಕು – ಎಂಬುದು ಪೈ ಅವರ ಅಭಿಪ್ರಾಯ.

ಮತ್ರ್ಯಾವತಾರ – ಇದನ್ನು ಮರ್ತ್ಯ + ಅವತಾರ ಎಂದೇನೊ ಸಂಧಿ ಬಿಡಿಸಬಹುದು. ಆದರೆ ಅರ್ಥ ಸ್ಪಷ್ಟವಾಗದು. ಕಿಟೆಲರೇ ಕೊಟ್ಟ 'ವಿಷ್ಣು ಪಡೆವಂ ಮತ್ಸ್ಯಾವತಾರಕ್ಕೆ' ಎಂಬ ಪ್ರಯೋಗ ವಾಕ್ಯದ ಮೇಲಿಂದ ಅದು 'ಮತ್ಸ್ಯಾವತಾರ' ಎಂದಿರಬೇಕು ಎಂಬುದಾಗಿ ಪೈಗಳು ಕಾಣಿಸಿದ್ದಾರೆ.

ನೃಪತುಂಗ – ಎಂಬುದು ಅಂಕಿತನಾಮ. ಆದರೆ ಕಿಟೆಲ್ ಕೋಶದಲ್ಲಿ ಅದನ್ನು 'the most prominent king' ಎಂದು ರೂಢನಾಮವಾಗಿ ಕಾಣಿಸಿದ್ದಾರೆ. ಅಂತೂ ರಾಷ್ಟ್ರಕೂಟ ದೊರೆ ಇಲ್ಲಿ ಮರೆಯಾಗಿದ್ದಾನೆ.

ಅಲ್ಲಮ – ಈ ಶಬ್ದದ ಅರ್ಥ ಏನು ಗೊತ್ತೆ? 'A Lingayat name perhaps taken from Allah!!' ಇದು ಹಾಸ್ಯಾಸ್ಪದ ವಿವರಣೆಯೇ ಸೈ. (ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಮುಸ್ಲಿಂ ಸಂಪರ್ಕ ಅಷ್ಟಾಗಿ ಇದ್ದೇ ಇಲ್ಲ.)

ಆದರೆ ತೆಲುಗು ಶಬ್ದಕೋಶಕಾರನಾದ ಸಿ.ಪಿ. ಬ್ರೌನ್ ಅದೇ ಅಭಿಪ್ರಾಯ ತಳೆದಿದ್ದಾರೆ ಎಂದು ಬೇರೊಂದು ಸಂದರ್ಭದಲ್ಲಿ ಕಿಟೆಲ್ ಕಾಣಿಸಿದ್ದಾರೆ.

ಎಂ. ಮರಿಯಪ್ಪ ಭಟ್ಟರು ಕಿಟೆಲರ ಕೋಶವನ್ನು ವಿಸ್ತರಿಸಿ ಪ್ರಕಟಿಸಿದರಷ್ಟೆ. ಅವರಿಗೆ ಗೋವಿಂದ ಪೈಗಳು ಬಳಸಿದ್ದ ಕೋಶದ ಪ್ರತಿ ಸಿಕ್ಕಿದ್ದರೆ, ಕೋಶದಲ್ಲಿಯ ಅನೇಕ ತಪ್ಪುಗಳನ್ನು ಅನಾಯಾಸವಾಗಿ ತಿದ್ದುವುದು ಸಾಧ್ಯವಿತ್ತು.

ಈ ನಿಮಿತ್ತದಿಂದ ಕಿಟೆಲರ ಒಂದು ವಿಶಿಷ್ಟ ವಿಚಾರ ಸರಣಿಯನ್ನು ಗುರುತಿಸಬಹುದು. ಅದೆಂದರೆ ಹಿಂದೂ ದೇವತೆಗಳ ಬಗ್ಗೆ ಅವರಿಗಿದ್ದ ಅಲಕ್ಷ್ಯ ಮತ್ತು ಅವಹೇಳನೆ. ಅವರ 'ಕರ್ನಾಟಕ ಕಾವ್ಯಮಾಲೆ'ಯ ಪರಿಶೀಲನೆಯಲ್ಲಿ ತುಸು ಮಟ್ಟಿಗೆ ಇದನ್ನು ಕಂಡಿದ್ದೇವೆ. ಈ ನಿಘಂಟುವಿನಲ್ಲಿಯೂ ಅಲ್ಲಲ್ಲಿ ಅದರ ಸೆಳಕುಗಳಿವೆ. ಮೇಲಿನ 'ಅಲ್ಲಮ' ಉದಾಹರಣೆಯನ್ನೇ ತೆಗೆದುಕೊಳ್ಳಿ. ಧಾರವಾಡದಲ್ಲಿ ವೀರಶೈವರ ಒಡನಾಟದಲ್ಲಿದ್ದು, ಅಲ್ಲಮ ಶಬ್ದದ ನಿಷ್ಪತ್ತಿ ಈ ರೀತಿ ಬರಬಾರದಿತ್ತು.

ಅಂಕಿತನಾಮಗಳಲ್ಲಿ ವಿವಿಧ ಪುರಾಣಗಳ ಹೆಸರುಗಳೂ ಬರುತ್ತವಷ್ಟೆ. ಅವುಗಳ ವಿಷಯದ ಬಗ್ಗೆ ಒಂದು ವಾಕ್ಯ ಹೇಳಿದರೆ ಸಾಕಾಗಿತ್ತು. ಬೇಡ, 'Name of a Purana' ಎಂದಿದ್ದರೂ ನಡೀತಿತ್ತು. ಆದರೆ – ಬ್ರಹ್ಮವೈವರ್ತಪುರಾಣದ ಬಗ್ಗೆ ಬಂದ ಹೇಳಿಕೆ ಇಂತಿದೆ:

'Name of a Purana containing Prayers, with tedious narratives of Krishna and his love for the Gopies and Radha'.

ಶಬ್ದಕೋಶದಂತಹ ವಸ್ತುನಿಷ್ಠ ವಿವೇಚನೆಯಲ್ಲಿ 'tedious' ಎಂಬಂತಹ ವಿಶೇಷಣೆಗಳು ಬರಬಾರದಿತ್ತು.

ಇವೆಲ್ಲ ತಪ್ಪುಗಳಿಂದ ಕಿಟೆಲ್ ಕೋಶದ ಮೌಲಿಕತೆ, ಮಹತ್ವಗಳಿಗೆ ಕುಂದೇನೂ ಇಲ್ಲ. ಇವು ನದಿಯ ಮಹಾ ಪ್ರವಾಹದಲ್ಲಿ ಕಡ್ಡಿಗಳು ಸಾಗಿಬಂದಂತೆ, ಎನ್ನಬಹುದು.

ಸ್ಲ್ಯಾಟರ್ ಎಂಬಾತ ಐದು ಸಂಪುಟಗಳಲ್ಲಿ ಬಾಸೆಲ್ ಮಿಶನ್ನಿನ, ಚರಿತ್ರೆಯನ್ನು ರೂಪಿಸಿದ್ದಾನೆ. ಅದರಲ್ಲಿ ಕರ್ನಾಟಕಕ್ಕೆ ಬಂದು ಕೆಲಸ ಮಾಡಿದವರ ಬಗ್ಗೆ ಹೀಗೆ ಹೇಳುತ್ತಾನೆ.

The Mission in its infancy was piloted by devoted men like Hebich, Gundert, Moegling. . .ಎಂಬುದಾಗಿ ೮-೧೦ ಜನರ ಹೆಸರನ್ನು (ಅದರಲ್ಲಿ ಕೌಂಡಿಣ್ಯ, ಫುರ್ಟಾಡೊ – ಈ ದೇಶಿಯರೂ ಇದ್ದಾರೆ.) ಹೇಳಿದ್ದಾನೆ. ಅದರೆ ಕಿಟೆಲರದು ಇಲ್ಲ! ಅಲ್ಲಿಯವರ ದೃಷ್ಟಿಯಲ್ಲಿ ಅವರೊಬ್ಬ ನಗಣ್ಯ ವ್ಯಕ್ತಿ. ಅವರು ಮಿಶನ್ನಿನ ಕೆಲಸವನ್ನು ಅಷ್ಟಾಗಿ ಮಾಡಿರದೇ ಇರಬಹುದು. ಕನ್ನಡದ ಕೆಲಸವನ್ನು ಮಾತ್ರ ಅಖಂಡವಾಗಿ ಮಾಡಿದ್ದಾರೆ. ನಾವು ಮಾತ್ರ ಅವರನ್ನು ಸದಾ ನೆನೆಯುತ್ತೇವೆ; ಸಾಕಲ್ಲ!

## ಅನುಬಂಧ 5
# ವಾಲ್ಟರ್ ಎಲಿಯಟ್ : ಒಂದಿಷ್ಟು ವಿವರಗಳು

ವಾಲ್ಟರ್ ಎಲಿಯಟ್‌ರಿಗೆ ಸಂಬಂಧಿಸಿದ ಕಿತ್ತೂರ ಪ್ರಸಂಗ; ಧಾರವಾಡದಲ್ಲಿ ಕನ್ನಡ ಪ್ರಾಥಮಿಕ ಶಿಕ್ಷಣಾರಂಭ; ಅವರ ಶಾಸನ ಸಂಗ್ರಹ ಮತ್ತು ಆಗಿನ ಕನ್ನಡಿಗರ ಜನಜೀವನದ ಮೇಲೆ ಬೆಳಕು ಚಲ್ಲುವ ಅಂಶಗಳನ್ನು ಸಂಕ್ಷಿಪ್ತವಾಗಿ ವಿಭಾಗ (೩೧೧) ಮತ್ತು (೫೨) ಇವುಗಳಲ್ಲಿ ಹೇಳಿದೆಯಷ್ಟೆ. ಇಲ್ಲಿ ಅವುಗಳ ಬಗ್ಗೆ ಇನ್ನು ಕೆಲವು ಮಹತ್ವಪೂರ್ಣ ವಿವರಗಳನ್ನು ಕೊಡಬಯಸಿದೆ.

**ಕಿತ್ತೂರ ಪ್ರಸಂಗ**

ಕ್ರಿ. ಶ. ೧೮೨೪ರ ಅಕ್ಟೋಬರ್ ೨೩ರಂದು ಕಿತ್ತೂರಿನ ಜನ ಬ್ರಿಟಿಶರ ವಿರುದ್ಧ ಬಂಡೆದ್ದಾಗ ಅದರಲ್ಲಿ ಎಲಿಯೆಟ್‌ನ ಪಾತ್ರವೂ ಇದ್ದಿತು. ಆ ದಿನ ಕೋಟೆಯ ಹೊರಗೆ ಕ್ಯಾಪ್ಟನ್ ಬ್ಲ್ಯಾಕ್ ಮತ್ತು ಕಲೆಕ್ಟರ್ ಥ್ಯಾಕರೆ ನಿಂತಿದ್ದರು. ಒಳಗಡೆ ಶೇತ್ಸನದಿಗಳು ಹೋರಾಟದ ಸನ್ನಾಹದಲ್ಲಿದ್ದಾಗ ಎಲಿಯಟ್ ಮತ್ತು ಇನ್ನೊಬ್ಬ ಅಧಿಕಾರಿ ಸ್ಟೀವನ್‌ಸನ್ ಸಂಧಾನಕ್ಕೆಂದು ಮುನ್ನಾ ದಿನ ಬಂದವರು ಒಳಗೇ ಸಿಕ್ಕಿಕೊಂಡಿದ್ದರು. ರೊಚ್ಚಿಗೆದ್ದ ಜನ ಇವರಿಬ್ಬರನ್ನು ತುಂಡರಿಸಿ ಬಿಡೋಣ–ಎನ್ನುವುದರಲ್ಲಿದ್ದಾಗ ತೇಲಿ ಬಸವಲಿಂಗಪ್ಪ ಎನ್ನುವವನು ಅವರನ್ನು ತನ್ನ ಮನೆಯೊಳಗೆ ಎಳೆದೊಯ್ದು ಪಾರು ಮಾಡಿದ. ಕನ್ನಡಿಗರ ಒಳ್ಳೆಯತನವನ್ನು ಎಲಿಯಟ್ ಗುರುತಿಸಿದ ಮೊದಲ ಘಟನೆಯಿದು. ಆಮೇಲೆ ಎರಡು ತಿಂಗಳ ಕಾಲ, ಎಂದರೆ ಬ್ರಿಟಿಶರು ಹೆಚ್ಚಿನ ಸೈನ್ಯವನ್ನು ತಂದು ಕಿತ್ತೂರನ್ನು ಪೂರ್ಣವಾಗಿ ವಶಪಡಿಸಿಕೊಳ್ಳುವವರೆಗೂ ಎಲಿಯೆಟ್ 'ಸ್ಥಾನಬದ್ಧತೆ'ಯಲ್ಲಿದ್ದ. ಕಮೀಶನರ್ ಚಾಪ್ಲಿನ್ ಇವರಿಬ್ಬರ ಸುರಕ್ಷತತೆಯ ಬಗ್ಗೆ ಚಿಂತಿಸುತ್ತಿದ್ದ ಕಾಲದಲ್ಲಿ ಇವರು ಯಾವುದೇ ಕಳವಳವಿಲ್ಲದೆ ನೆಮ್ಮದಿಯಿಂದ ಇದ್ದರು! ಹತ್ತಿರದ ಧಾರವಾಡದಿಂದ ಅವರ ಬಟ್ಟೆ ಬರೆ, ಪುಸ್ತಕ ಇತರ ನಿತ್ಯೋಪಯೋಗಿ ವಸ್ತುಗಳನ್ನು ತರಿಸಿಕೊಡಲಾಗಿತ್ತು. We were weli treated and comfortably lodged - ಎಂಬುದಾಗಿ ಅವರ ಲಿಖಿತ ಉಲ್ಲೇಖವೇ ಇದೆ.

ಮರುವರ್ಷ ಕಿತ್ತೂರ ಘಟನೆಗೆ ಸಂಬಂಧಿಸಿದಂತೆ ಅವರು ಸುದೀರ್ಘ ವರದಿಯೊಂದನ್ನು ಸಲ್ಲಿಸಿದ್ದಾರೆ. ಅಲ್ಲದೆ ಎಲಿಯಟ್, ತನ್ನ ಇಳಿವಯದಲ್ಲಿ ನೆನಪಿಸಿಕೊಂಡು

ಬರೆದ ಸ್ಮೃತಿ–ಚಿತ್ರವೂ ಇದೆ. ಅದರಲ್ಲಿ ಅವರು ಕಾಣಿಸಿದ ಕೆಲವು, ಸಣ್ಣವೆಂದರೂ, ಸಂಗತಿಗಳು ಇದುವರೆಗೆ ಬೆಳಕಿಗೆ ಬಾರದವುಗಳಾಗಿವೆ; ಉದಾಹರಣೆಗೆ :

ಕಿತ್ತೂರಿನ ಕೊನೆಯ ದೊರೆ ಶಿವಲಿಂಗಸರ್ಜನಿಗೆ ರಾಣಿ ಚೆನ್ನಮ್ಮನನ್ನು ಕಂಡರೆ ಆಗುತ್ತಿದ್ದಿಲ್ಲವಂತೆ. ಆಡಳಿತ ವಿಚಾರದಲ್ಲಿ ಅವಳನ್ನು ಆದಷ್ಟು ದೂರವಿರಿಸುತ್ತಿದ್ದನಂತೆ.

ಮತ್ತೊಂದು ಘಟನೆ : ಕಿತ್ತೂರಿನ ಸ್ವಾಮಿನಿಷ್ಠ ಸೇವಕನಾದ ಗುರುಸಿದ್ಧಪ್ಪನು ಧಾರವಾಡಕ್ಕೆ ಥ್ಯಾಕರೆಯನ್ನು ಕಾಣಹೋದಾಗ ಅವನಿಗೆ ಕುಳಿತುಕೊಳ್ಳಲು ಥ್ಯಾಕರೆ ಆಸನವನ್ನು ಕೊಟ್ಟಿರಲಿಲ್ಲ. ಇದು ಅವನಲ್ಲಿ ಹಾಗೂ ಕಿತ್ತೂರಿನ ಶೇತ್ಸನದಿಗಳಲ್ಲಿ ಅಪಮಾನದ ಕಿಡಿಯನ್ನು ಹೊತ್ತಿಸಿದ್ದಿತು.

ಇದೇ ಗುರುಸಿದ್ಧಪ್ಪನು ಕಿತ್ತೂರಿನ ಮುಖ್ಯ ಕಾರಭಾರಿಯಾಗಿದ್ದನಷ್ಟೇ. ಅವನನ್ನು ತೆಗೆದು ಹಾಕಿ ಥ್ಯಾಕರೆ ಕಿತ್ತೂರಿನ ಕಿರಿ ದೇಸಾಯಿಣಿಯಾಗಿದ್ದ ಈರವ್ವನ ತಂದೆಯನ್ನು (ಹುಮನಾಬಾದಿನವ) ನೇಮಿಸಿದ್ದನಂತೆ. ಆದರೆ ಅದೇ ದಿನವೇ ಥ್ಯಾಕರೇ ಕೊಲ್ಲಲ್ಪಟ್ಟನಾದ್ದರಿಂದ ಆ ನೇಮಕ ಕ್ರಿಯೆಯಲ್ಲಿ ಬಂದಿರಲಿಲ್ಲ.

ಕಿತ್ತೂರ ಘಟನಾವಳಿಯಲ್ಲಿ ಇನ್ನೊಬ್ಬ ಅಪರಿಚಿತ ವ್ಯಕ್ತಿ ಎಲಿಯಟ್ ಮೂಲಕ ಕಾಣಿಸಿಕೊಂಡಿದ್ದಾನೆ. ಕ್ಯಾಪ್ಟನ್ ಬ್ಲ್ಯಾಕ್, ಮಹಾದ್ವಾರದ ಹೊರಗಡೆ ನಿಂತು 'ತೋಪು ಹಾರಿಸಿ ಬಾಗಿಲನ್ನು ಮುರಿಯುವ ಸನ್ನಾಹದಲ್ಲಿದ್ದಾಗ', ದಿಡ್ಡಿ ಬಾಗಿಲನ್ನು ತೆಗೆದು, ತಿಮ್ಮಪ್ಪನೆಂಬ ದಫೇದಾರನು ಅವನೊಂದಿಗೆ ಬಿರುಸಾಗಿ ವಾದಿಸಿದನಂತೆ.

**ಕನ್ನಡದಲ್ಲೆ ಪ್ರಾಥಮಿಕ ಶಿಕ್ಷಣ**

ಕನ್ನಡ ಜನತೆಯೊಡನೆ ಅವರ ಮುಂದುವರಿದ ಒಡನಾಟವು ಕನ್ನಡ ನುಡಿಯ ಬಗ್ಗೆ ಅಭಿಮಾನ ತಾಳುವುದಕ್ಕೆ ನಿಮಿತ್ತವಾಯಿತು. ಬ್ರಿಟಿಶರು ಉತ್ತರ ಕರ್ನಾಟಕದ ಪ್ರದೇಶವನ್ನು ಆಳತೊಡಗಿ ಕೇವಲ ೭–೮ ವರ್ಷಗಳಾಗಿದ್ದವು. ಅದಕ್ಕೂ ಮುಂಚಿನ ಪೇಶ್ವಾಯಿ ಆಡಳಿತದ ಪರಿಣಾಮವಾಗಿ ಅಲ್ಲಿಯ ದೇಸಾಯಿ, ಇನಾಂದಾರ, ಕುಲಕರ್ಣಿಗಳು ಅಪ್ಪಟ ಮರಾಠಿ ಪ್ರೇಮಿಗಳಾಗಿದ್ದರು. ಜನರಿಗಾದರೂ ಮರಾಠಿ ಮಾತನಾಡುವುದು ಪ್ರತಿಷ್ಠೆಯ ವಿಷಯವಾಗಿದ್ದಿತು. (ಈಗ ಇಂಗ್ಲಿಷ್‌ನಲ್ಲಿ ವ್ಯವಹಾರ ನಡೆಯುತ್ತಿರುವ ತೆರದಲ್ಲಿ). ಈ ಸ್ಥಿತಿಯಲ್ಲಿ ಮುಂಬಯಿ ಸರಕಾರಕ್ಕೆ ಈ ಭಾಗದ ಆಡಳಿತ ಹಾಗೂ ಶಿಕ್ಷಣ ಇವೆರಡೂ ಮರಾಠಿಯಲ್ಲೇ ನಡೆಯುವುದು ಕ್ರಮಪ್ರಾಪ್ತವೆಂದು ಅನಿಸಿದ್ದಿತು. ಎಷ್ಟೆಂದರೂ ಅವರ ದೃಷ್ಟಿಯಲ್ಲಿ ಇದು 'ಸದರ್ನ್ ಮರಾಠಿ ಕಂಟ್ರಿ'ಯಾಗಿದ್ದಿತು.

ವಾಲ್ಟರ್ ಎಲಿಯಟ್‌ಗೆ ಈ ಸ್ಥಿತಿ–ಗತಿ ವಿಪರ್ಯಾಸವಾಗಿ ಕಂಡಿತು. 'ಇಲ್ಲಿಯ ರೈತರು, ಇತರ ಸಾಮಾನ್ಯ ಜನರು ಕನ್ನಡ ಮಾತಾಡ್ತಾರೆ. ಅವರಿಗೆ, ನಾವು ಕನ್ನಡದಲ್ಲಿ ವ್ಯವಹರಿಸಿದರೇನೇ ಆಡಳಿತದ ಆಗುಹೋಗುಗಳು ಅರ್ಥವಾಗುತ್ತವೆ. ಒಂದಷ್ಟು

ಪ್ರತಿಷ್ಠಿತರನ್ನಿಸಿಕೊಂಡ ಕೆಲವೇ ಜನರ ಮರಾಠಿ ಮೋಹಕ್ಕೆ ಅನುಗುಣವಾಗಿ ಆಡಳಿತವನ್ನು ಮರಾಠೀಮಯವಾಗಿಸುವುದೆ ?

ಶಿಕ್ಷಣ ವಿಚಾರದಲ್ಲಿಯೂ ಅವರು ಇದೇ ರೀತಿ ಯೋಚಿಸತೊಡಗಿದರು. ೧೮೨೩ರ ಅಂಕಿ ಸಂಖ್ಯೆಗಳ ಪ್ರಕಾರ ಮುಂಬಯಿ ಕರ್ನಾಟಕದಲ್ಲಿ ೧೪೬ ಮರಾಠೀ ಪ್ರಾಥಮಿಕ ಶಾಲೆಗಳೂ, ೧೧೨ ಕನ್ನಡ ಶಾಲೆಗಳೂ ಅಸ್ತಿತ್ವದಲ್ಲಿದ್ದವು. ಅವೆಲ್ಲ ಖಾಸಗಿ/ಗಾವಂಠಿ ಶಾಲೆಗಳಾಗಿದ್ದುವು. ತುಸು ದೊಡ್ಡ ಊರುಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ನಡೆಸಬೇಕೆಂದು ಸರಕಾರವು ತೀರ್ಮಾನಿಸಿತು. (೧೮೨೬). ಶಿಕ್ಷಣ ಕಾರ್ಯವನ್ನು ನೋಡಿಕೊಂಡು ಹೋಗಲು ಬಾಂಬೆ ನೇಟಿವ್ ಎಜ್ಯುಕೇಶನ್ ಸೊಸೈಟಿ ಎಂಬ ಸಂಸ್ಥೆಯನ್ನು ಸರಕಾರವು ನಿಯಮಿಸಿತ್ತು. ಎಲಿಯಟ್ ಈ ಸಂಸ್ಥೆಗೆ ಪತ್ರ ಬರೆದು "ಇಲ್ಲಿಯ ಕಚೇರಿಗಳಿಗೆ ಬರುವ ಸಾಮಾನ್ಯ ಜನರೆಲ್ಲ ಕನ್ನಡ ಮಾತಾಡುವವರು. ಅವರು ಕನ್ನಡದಲ್ಲಿ ಓದಲು ಬರೆಯಲು ಕಲಿತದ್ದಾದರೆ ತಮ್ಮ ಹೇಳಿಕೆ-ಕೇಳಿಕೆಗಳನ್ನು ಸಮರ್ಪಕವಾಗಿ ನಿವೇದಿಸಬಲ್ಲರು. ಆದ್ದರಿಂದ ಇಲ್ಲಿ ಕನ್ನಡ ಶಾಲೆಗಳನ್ನು ತೆರೆಯಿರಿ" ಎಂದು ಮನವಿ ಮಾಡಿಕೊಂಡರು. ಈ ಸಂಸ್ಥೆ ಮೊದಲಿಗೆ ಧಾರವಾಡ ಮತ್ತು ಹುಬ್ಬಳ್ಳಿ – ಈ ಎರಡೂ ಊರುಗಳಲ್ಲಿ ಮರಾಠೀ ಶಾಲೆಯನ್ನು ತೆರೆಯಬೇಕೆಂದು ಯೋಚಿಸಿದ್ದಿತು. ಈಗ ಎಲಿಯಟ್ಟರ ಪತ್ರದ ಹಿಂದಿದ್ದ ಸಮಂಜಸತೆಯನ್ನು ಮನಗಂಡು ದಿನಾಂಕ ೨೦ ನವೆಂಬರ್ ೧೮೩೦ರಂದು "ಕನ್ನಡ ಶಾಲೆಯೊಂದನ್ನು ಸದ್ಯ ಧಾರವಾಡದಲ್ಲಿ ತೆರೆಯಲಾಗುವುದು. ಅದಕ್ಕಾಗಿ ಕನ್ನಡ ಮಾಸ್ತರನೊಬ್ಬನನ್ನು ಹುಡುಕಿರಿ" ಎಂದು ಅವರಿಗೆ ಆದೇಶವಿತ್ತಿತು.

ಎಲಿಯಟ್ ಕೂಡಲೇ ಒಬ್ಬ ಕನ್ನಡ ಶಿಕ್ಷಕನನ್ನು ಗೊತ್ತುಪಡಿಸಿ, ಸರಕಾರದ ಅಂತಿಮ ನಿರ್ಧಾರಕ್ಕಾಗಿ ಕಾಯ್ದರು. ಸಂಬಳ ಸರಕಾರದ ಬೊಕ್ಕಸದಿಂದಲೇ ಬರಬೇಕಲ್ಲವೆ. ಆದರೆ ಆ ಮಂಜೂರಾತಿಯ ಸುಳಿವೇ ಇಲ್ಲ. ಶಾಲೆಯೇನೋ ಸುರುವಾಗಿದೆ. ಶಿಕ್ಷಕ ತನ್ನ ಕಾರ್ಯ ಮಾಡುತ್ತಿದ್ದಾನೆ. ಅಂದಾಗ ಎಲಿಯಟ್ ತಾನೇ ಅವನ ಸಂಬಳವನ್ನು ಕೊಡುತ್ತ ಹೋದರು! ಎಲ್ಲಿಯವರೆಗೆ? ಸುಮಾರು ೨-೩ ವರ್ಷಗಳ ವರೆಗೆ! ೧೮೩೩ರಲ್ಲಿ ಅವನು ಸ್ವದೇಶ ಯಾತ್ರೆಯ ದೀರ್ಘ ರಜೆಯ ಮೇಲೆ ಹೋಗಬೇಕಿದ್ದಾಗ, ಸರಕಾರಕ್ಕೆ ಈ ರೀತಿ ಸ್ಪಷ್ಟವಾಗಿ ಬರೆದರು. (೧, ಅಕ್ಟೋಬರ್ ೧೮೩೩) "ಇಲ್ಲಿ ನೀವು ಆರಂಭಿಸಿದ್ದ ಮರಾಠೀ ಶಾಲೆಯೇನೊ ಚೆನ್ನಾಗಿ ನಡೀತಿದೆ. ಅಲ್ಲಿ ಕಲಿಯುವವರೆಲ್ಲ ಬ್ರಾಹ್ಮಣ ವಿದ್ಯಾರ್ಥಿಗಳು. ಆದರೆ ಬರಿ ಕನ್ನಡ ಬಲ್ಲ ಅಸಂಖ್ಯ ಜನರಿಗೆ ಆ ಶಾಲೆಯಿಂದ ಏನೂ ಪ್ರಯೋಜನವಿಲ್ಲ. ಅಲ್ಲದೆ ಸರಕಾರದ ಅಂತಿಮ ನಿರ್ಧಾರ ಬರುವುದೆಂದು, ಬಿ.ಎನ್.ಇ. ಸೊಸೈಟಿಯವರು ಕನ್ನಡದಲ್ಲಿ ಹಲವು ಪಠ್ಯಪುಸ್ತಕಗಳನ್ನು ಸಹ ಮುದ್ರಿಸಿದ್ದಾರೆ. ಈಗಾದರೂ ಈ ಕನ್ನಡ ಶಾಲೆಯ ಸ್ಥಾಪನೆಗೆ ಮನ್ನಣೆ ಕೊಡಬೇಕು".

ಹುಬ್ಬಳ್ಳಿಯಲ್ಲಿಯೂ ಒಂದು ಮರಾಠೀ ಶಾಲೆಯನ್ನು ಸ್ಥಾಪಿಸಲಾಗಿದ್ದಿತು. ಆದರೆ ಅದು ಅಷ್ಟು ಚೆನ್ನಾಗಿ ನಡೆದಿರಲಿಲ್ಲ. ಅದನ್ನು ಸರಕಾರದ ಗಮನಕ್ಕೆ ತಂದು ಕೊಟ್ಟಿದ್ದ ಎಲಿಯಟ್ ಅದನ್ನು ರದ್ದುಪಡಿಸಿ, ಕನ್ನಡ ಶಾಲೆಯನ್ನಾಗಿ ಪರಿವರ್ತಿಸಬೇಕೆಂದು ಸೊಸೈಟಿಗೆ ಕೇಳಿದಾಗ ಅದು ಒಪ್ಪಿಕೊಂಡಿದ್ದಿತು. ಅದನ್ನು ಸರಕಾರದ ಗಮನಕ್ಕೆ ತಂದುಕೊಟ್ಟು ಎಲಿಯಟ್ "The people of Hoobli being for the most part Camerese, have never shown the inclination to attend it " ಎಂದು ತಿಳಿಸಿದ್ದರು.

ಇತ್ತ ತನ್ನ ಕೈಯಿಂದ ಸಂಬಳ ತೆತ್ತು ಆರಂಭಿಸಿದ್ದ ಕನ್ನಡ ಶಾಲಾ ಪರೀಕ್ಷೆಗೆಂದು ಜ್ಯೂಡಿಶಿಯಲ್ ಕಮೀಶನರ್ ಹೆಂಡರ್ಸನ್ ಎಂಬವನನ್ನು ಆಮಂತ್ರಿಸಿ, ಪರೀಕ್ಷೆಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ಬಹುಮಾನವನ್ನು ಕೊಡಿಸಿದರು. ಶಾಲೆಗೆ ಅಧಿಕೃತ ಸ್ವರೂಪ ಬರಬೇಕಲ್ಲವೆ.

ಮೇಲೆ ಹೇಳಿದಂತೆ ಎಲಿಯಟ್ ೧೮೩೩ರಲ್ಲಿ ದೀರ್ಘ ರಜೆ ಪಡೆದು ಹೋಗುವಾಗ, ಆಗಿನ ಜಿಲ್ಲಾ ಕಲೆಕ್ಟರನಿಗೇ ಶಾಲೆಯ ಜವಾಬ್ದಾರಿ ವಹಿಸಿದ್ದರ ಪರಿಣಾಮವಾಗಿಯೊ ಏನೊ, ಅಂತೂ ಕೊನೆಗೊಮ್ಮೆ ಮಂಜೂರಾತಿ ಬಂದಿತು. ಇಷ್ಟೇ ಅಲ್ಲ, ಹುಬ್ಬಳ್ಳಿಯಲ್ಲಿಯೂ ಕನ್ನಡ ಶಾಲೆಯನ್ನು ಆರಂಭಿಸಿತು. ಮರಾಠೀ ಶಾಲೆಯನ್ನು ಮುಚ್ಚ ಹೋಗಲಿಲ್ಲ, ಮಾತ್ರ.

ಹೀಗೆ ಎಲಿಯಟ್ ಕನ್ನಡದ ಗಂಡುಮೆಚ್ಚಿನ ಧಾರವಾಡ ಜಿಲ್ಲೆಯಲ್ಲಿ ಕನ್ನಡ ಶಿಕ್ಷಣದ ಅಡಿಗಲ್ಲನ್ನು ಹಾಕಿದರಲ್ಲದೇ, ಕನ್ನಡ ಅಸ್ತಿತ್ವದ ಸೊಲ್ಲು ಮೇಲ್ತನಕ ಕೇಳುವ ಹಾಗೆ ಮಾಡಿದರು.

ಇದರ ಪರಿಣಾಮವಾಗಿ ೨೭ ನವೆ. ೧೮೩೪ ರಂದು ಸರಕಾರವು ಈ ಭಾಗದ ತಾಲ್ಲೂಕು ಕಚೇರಿಗಳಿಗೆ ಸುತ್ತೋಲೆಯನ್ನು ಕಳಿಸಿ ಈ ಭಾಗಗಳಲ್ಲಿ ಕನ್ನಡ ಶಾಲೆಗಳನ್ನು ತೆರೆಯಬೇಕೊ, ಮರಾಠಿಯನ್ನೋ? ಎಂದು ಅಭಿಪ್ರಾಯ ಕೇಳಿತು.

ಹಾಗೆ ಬಂದಿದ್ದ ಅಭಿಪ್ರಾಯಗಳೆಲ್ಲವೂ ಕನ್ನಡ ಪರವಾಗಿಯೇ ಇದ್ದವು. ಸರಕಾರದ ಮುಂದಿನ ಪ್ರಶ್ನೆ, "ಹಾಗಿದ್ದರೆ ಯಾವ ಯಾವ ಊರುಗಳಲ್ಲಿ ತೆರೆಯಬೇಕು?" ಅಂತೂ ೧೮೬೬ರಿಂದ ತಾಲ್ಲೂಕಾ ಮಟ್ಟದ ಊರುಗಳಲ್ಲಿಯೂ ಕನ್ನಡ ಶಾಲೆಗಳು ತೆರೆಯಲಾರಂಭಿಸಿದವು.

**ಶಾಸನ ಸಂಗ್ರಹ ಕಾರ್ಯ**

ಕಳೆದ ಶತಮಾನದ ಕರ್ನಾಟಕದಲ್ಲಿಯ ಶಾಸನತಜ್ಞರೆಂದು ನಾವು ಬಿ.ಎಲ್.ರೈಸ್ ಮತ್ತು ಜೆ.ಎಫ್.ಫ್ಲೀಟ್ ಇವರನ್ನು ನೆನೆಯುತ್ತೇವೆ. ಇವರಿಬ್ಬರೂ ೧೯ನೆಯ ಶತಮಾನದ ಕೊನೆಯ ದಶಕಗಳಲ್ಲಿ ಕಾರ್ಯವೆಸಗಿದವರು. ಅದಕ್ಕೂ ಮುಂಚೆ ಕರ್ನಲ್ ಮೆಕೆಂಝಿ

ಶಾಸನ ಪ್ರತಿ ತೆಗೆಸಿದ್ದನೇನೂ ಹೌದು. ಆದರೆ ಉತ್ತರ ಕರ್ನಾಟದಲ್ಲಿ ಕಾಲಿಟ್ಟವನೇ ಅಲ್ಲ. ಆ ಕೆಲಸವನ್ನು ಮಾಡಿದವರು (೧೮೨೦ ನೆಯ ದಶಕದಲ್ಲಿ) ಎಲಿಯಟ್.

ಅವರು ತನ್ನ ಸಂಚಾರದಲ್ಲಿ, ಹಳ್ಳಿ ಹಳ್ಳಿಗಳಲ್ಲಿ ಶಿಲಾಶಾಸನಗಳನ್ನೇನೋ ನೋಡುತ್ತಿದ್ದರು. ಅವನ್ನು ಯಾರು ಮತ್ತು ಯಾಕೆ ನಿಲ್ಲಿಸಿದ್ದಾರೆ ಎನ್ನುವ ದೂರದ ಕುತೂಹಲ ಮಾತ್ರ ಇದ್ದಿತು. ಅದನ್ನು ತಿಳಿಸಿಕೊಟ್ಟವ ಮುಂಡರಗಿ ರಂಗರಾಯನೆಂಬಾತ. ಈತ ಇಬ್ಬರು ವೀರಾಧಿವೀರರ (ತಂದೆ; ಮತ್ತು ಮಗ) ನಡುವಿನವ. ಕರ್ನಲ್ ವೆಲ್ಲಸ್ಲಿ ಕೊಲ್ಲಿಸಿದ ಮಂಡಗೈ ಭೀಮರಾಯನ ಮಗ; ಅದರಂತೆ ೧೮೫೭ ರ ದಂಗೆಯಲ್ಲಿ ಹೋರಾಡಿದ ಮುಂಡರಗಿ ಭೀಮರಾಯನ ತಂದೆ! ಆತ ತರುಣ ವಯದಲ್ಲಿ ಎಲಿಯಟ್‌ನ ಕಚೇರಿಯಲ್ಲಿ ಕಾರಕೂನನಾಗಿ ಸೇರಿದ್ದುದು ಅದೆಂಥ ವಿಪರ್ಯಾಸ! ಇರಲಿ. ಆದರೆ ಎಲಿಯಟ್ ಅವನನ್ನು ಮಿತ್ರನಂತೆಯೇ ನಡೆಸಿಕೊಂಡಿದ್ದರು. ನಮ್ಮ ನಾಡಿಗೆ ಸಂಬಂಧಿಸಿದ ಅಂಶಗಳಲ್ಲಿ ಆಡಳಿತ, ಶಿಕ್ಷಣ, ಶಾಸನ, ವನ್ಯಜೀವನ ಯಾವುದಿದ್ದರೂ ಅವನ ಸಲಹೆ ಕೇಳುತ್ತಿದ್ದರು. ಈ ರಂಗರಾಯನ ಪ್ರೋತ್ಸಾಹದಿಂದಾಗಿ ಶಾಸನಗಳನ್ನು ಓದಬಯಸಿದರು. ಅವುಗಳ ಪ್ರತಿ ತೆಗೆಸಿ. ಆ ಲಿಪಿಯನ್ನು ಓದಲು ಪ್ರಯತ್ನಿಸಿದರು. ಏನೆಲ್ಲ ಕೆಲಸ. ಓನಾಮದಿಂದ ಆರಂಭ. ಅವರು ಆ ರೀತಿ ಅರ್ಥವಿಸಿ ನಮ್ಮಲ್ಲಿಯ ೫೯೫ ಶಾಸನಗಳನ್ನು, ಅವುಗಳ ಸಹಾಯದಿಂದ ಮಧ್ಯಯುಗೀನ ಕರ್ನಾಟಕದ ಇತಿಹಾಸವನ್ನೇ ನಿರ್ಮಿಸಿದರು. ಮುಂದೆ ತನ್ನ ದೀರ್ಘ ರಜೆಯಲ್ಲಿ ಲಂಡನ್ನಿಗೆ ಹೋದಾಗ ಅಲ್ಲಿಯ ರಾಯಲ್ ಏಶಿಯಾಟಿಕ್ ಸೊಸೈಟಿಯಲ್ಲಿ Hindu Inscriptions ಎಂಬ ಹೆಸರಿನ ಮೌಲಿಕ ಸ್ವರೂಪದ ಪ್ರಬಂಧವನ್ನು ಮಂಡಿಸಿದರು. ಅದನ್ನು ತಳಹದಿಯಾಗಿ ಇಟ್ಟುಕೊಂಡೇ ಫ್ಲೀಟ್ ತಮ್ಮ ಶಾಸನಾಧ್ಯಯನವನ್ನು ಕೈಕೊಂಡರೆಂಬುದನ್ನು ನೆನೆದಿರಬೇಕು.

ಈ ದಿಕ್ಕಿನಲ್ಲಿ ಅವರು ಮುಂದುವರಿದ ರೀತಿ ಮೋಜಿನದಾಗಿದೆ. ಮೊದಲಿಗೆ ಹಿಂದೂ ಕೆಲೆಂಡರಿನ ಪ್ರಕಾರ ಅವನ್ನು ಹೊಂದಿಸಿದರು. ಅಂದರೇನಾಯಿತು? ಪ್ರತಿ ೬೦ ವರ್ಷಗಳಿಗೆ ಮರಳಿ ಬರುವ ಸಂವತ್ಸರವೆಲ್ಲ ಒಂದೆಡೆ ಬಂದುವು. ಆಗ ಅವರಿಗೆ ಅರಿವಾಯಿತು. ಲಿಪಿಭೇದ ವಿಚಾರ. ಅನಂತರ ಲಿಪಿಯನ್ನು ಮುಂದಿರಿಸಿಕೊಂಡು ಪುನಹ ಕಾಲಾನುಕ್ರಮವಾಗಿ ಜೋಡಿಸಿದರು. ಅಲ್ಲಿಂದ ಚಾಲುಕ್ಯ ಮುಂ. ರಾಜಮನೆತನಗಳ, ಉಲ್ಲೇಖಿತ ರಾಜರುಗಳ ಪ್ರಕಾರ ಹೊಂದಿಸುವಿಕೆ.

ಅವರು ಪ್ರಥಮ ಬಾರಿಗೆ ರೂಪಿಸಿದ ಉತ್ತರ ಕರ್ನಾಟಕಸ್ಥ ಕಲ್ಯಾಣಿ ಚಾಲುಕ್ಯರ ಚರಿತ್ರೆ ಎದ್ದು ಕಾಣುವಂತಿದ್ದಿತು. ಅವರ ರಾಜ್ಯದ ಸೀಮಾ ರೇಖೆ ಉತ್ತರಕ್ಕೆ ಗೋದಾವರಿಯಿಂದ ದಕ್ಷಿಣಕ್ಕೆ ಕೆಳದಿಯ ವರೆಗೆ ಹಬ್ಬಿತ್ತೆಂಬುದನ್ನು ತಿಳಿಸಿದ್ದಾರೆ. ಈಗಿನ ಮಹಾರಾಷ್ಟ್ರವನ್ನೆಲ್ಲ, ಕೊಲ್ಲಾಪುರ ಸಾಮಂತರೂ ಸೇರಿದಂತೆ ಚಾಲುಕ್ಯರು ಆಳುತ್ತಿದ್ದದ್ದನ್ನು ಗುರುತಿಸಿದ್ದಾರೆ.

ಇತರ ರಾಜಮನೆತನಗಳಲ್ಲಿ ಅವರು ಕದಂಬರು, ಕಲಚುರಿಗಳು, ಶಿಲಾಹಾರರು, ಸವದತ್ತಿಯ ರಟ್ಟರು, ಇವರನ್ನು ಪ್ರಸ್ತಾಪಿಸಿ ಅವರೆಲ್ಲ ಚಾಲುಕ್ಯರಿಗೆ ಮಾಂಡಳಿಕರಾಗಿದ್ದರೆಂಬುದನ್ನು ಕಾಣಿಸಿದ್ದಾರೆ. ಬಸವ ಬಿಜ್ಜಳರ ಘರ್ಷಣೆಯ ಪ್ರಸ್ತಾಪ ಬಂದಾಗ, ಶಾಸನಗಳ ಮಾಹಿತಿಯಿಂದ ತೃಪ್ತನಾಗದೇ ಬಸವ ಪುರಾಣಗಳನ್ನು ಗಣನೆಗೆ ತೆಗೆದುಕೊಂಡಿದ್ದಾರೆ. ಕನ್ನಡದ್ದು ಮಾತ್ರವಲ್ಲ. ತೆಲುಗು, ಸಂಸ್ಕೃತ ಆವೃತ್ತಿಗಳನ್ನು ಓದಿದ್ದಾರೆ. (ಸಂಸ್ಕೃತದಲ್ಲಿಯೂ ಬಸವಪುರಾಣವಿದೆ). ಯಾದವರ ವಿಷಯವಾಗಿ ಹೇಳುವಲ್ಲಿ ಹೊಯ್ಸಳ ಯಾದವರು, ದೇವಗಿರಿ ಯಾದವರು ಬೇರೆ ಬೇರೆ ಎಂಬುದನ್ನು ಕಂಡುಕೊಂಡಿದ್ದಾರೆ.

Hindu Inscriptions ಪ್ರಬಂಧದಲ್ಲಿ ಲೋಪಗಳಿದ್ದುದು ಸ್ವಾಭಾವಿಕವೇ. ಕಾರಣಗಳು ಸ್ಪಷ್ಟ. ಕರ್ನಾಟಕ ಇತಿಹಾಸವೆಂಬುದೇ ನಿರ್ಮಾಣವಾಗಿರದ ಕಾಲವದು. ಇತ್ತ ಶಾಸನಾಂತರ್ಗತ ವಿಷಯಗಳು, ಹೆಸರುಗಳು ತೀರ ಅಪರಿಚಿತ. ಆ ಬಗ್ಗೆ ಯಾರೂ ಬರೆದಿರಲಿಲ್ಲ. ವಿಲ್ಕ್ಸನ ಇತಿಹಾಸವೇನೋ ಇದ್ದಿತು. ಆದರೆ ಅದರಲ್ಲಿ ಶಾಸನಾಧಾರಿತ ವಿವರಗಳಿರಲಿಲ್ಲ. ಹಾಗಿರುತ್ತ ಇಲ್ಲಿ ಶಾಸನಗಳಿಂದ ಇತಿಹಾಸದ ಎಳೆಗಳನ್ನು ನೇಯುವಲ್ಲಿ ಮೊದಲ ಬಾರಿಗೆ ಯತ್ನಿಸಿದ ಶ್ರೇಯಸ್ಸು ಎಲಿಯೆಟ್‌ರಿಗೆ ಸಲ್ಲುತ್ತದೆ.

### ಕನ್ನಡಿಗರ ಜನಜೀವನ

ಎಲಿಯಟ್ ತನ್ನ ನಿವೃತ್ತಿ ಜೀವನದಲ್ಲಿ "ಸ್ಮೃತಿ ಚಿತ್ರ"ಗಳ ಸರಮಾಲೆಯನ್ನೇ ಪ್ರಕಟಿಸಿದ್ದಾನೆ. ಅದರಲ್ಲಿ ಉತ್ತರ ಕರ್ನಾಟಕದ ಜನಜೀವನದ ಪಡಿನೆಳಲನ್ನೆ ಕಾಣುತ್ತೇವೆ.

'ಹಳ್ಳಿ ಪಟ್ಟಣವಾಗಿ ಡಿಳ್ಳಿಯಲಿ ಕೊಲೆಯಾಗಿ ತಳ್ಳಿಕೋರರು ಹೆಚ್ಚುತ್ತ ಜಗದೊಳಗೆ ಒಳ್ಳೆತನವಿಲ್ಲ' ಎಂಬೊಂದು ಮಾತು ಕಾಲಜ್ಞಾನ ವಚನದಲ್ಲಿ ಬರುತ್ತದೆ. 'ತುರಂಗಭಾರತ'ದಂಥ ಕೃತಿಯಲ್ಲಿಯೂ ತಳ್ಳಿಕೋರರ ಪ್ರಸ್ತಾಪವಿದೆ (ಎಲ್ಲಿ ನೋಡಿದರಲ್ಲಿ ಕೊಲೆ ಕುಟ್ಟು ಕಳವುಗಳ ತಳ್ಳಿಗಳ ಜಾತಿ ಸಂಕರ ಠಕ್ಕು). ಅದೇಕೆ, ಸರ್ವಜ್ಞನ ವಚನವೊಂದರಲ್ಲಿ ಮತ್ತು ಹರಿದಾಸರ ಹಾಡುಗಳಲ್ಲಿ ಸಹ ಇದರ ಉಲ್ಲೇಖವಿದೆ.

ಏನು ಈ 'ತಳ್ಳಿ' ಎಂದರೆ? ಬ್ರಿಟಿಶರು ಇದನ್ನು ಪೂರ್ಣ ನಿಲ್ಲಿಸಿ ಬಿಟ್ಟರಾದ್ದರಿಂದ ನಮಗದರ ಕಲ್ಪನೆ ಇಲ್ಲ. ಎಲಿಯಟ್ ತನ್ನ Reminiscencesನಲ್ಲಿ ವಿವರಣೆಯನ್ನೂ ಕೆಲ ಘಟನೆಗಳನ್ನೂ ಕೊಟ್ಟಿದ್ದಾರೆ. ತನಗಾದ ಅನ್ಯಾಯಕ್ಕೆ ವಿಶಿಷ್ಟ ರೀತಿಯಲ್ಲಿ ಪರಿಮಾರ್ಜನೆಯನ್ನು ಪಡೆಯುವ ಹವಣು ತಳ್ಳಿಯಲ್ಲಿ ಕಂಡುಬರುತ್ತದೆ. ಅದೊಂದು ಬಗೆಯ ಪ್ರತೀಕಾರ. ಅದರಲ್ಲಿ ತೊಡುಗುವ ಮುನ್ನ ತಳ್ಳಿಕೋರನು ಕಾಗದದಲ್ಲಿ ಬರೆದು, ಒಣಗಿದ ಕಾಳುಗಳನ್ನು ಇಲ್ಲವೆ ಹುಲ್ಲನ್ನು ಬಹಿರಂಗವಾಗಿ ಸುಡುತ್ತಾನೆ. ಅಲ್ಲಿಂದ ಅವನು ಬಹಿಷ್ಕೃತನಾದವನಂತೆ (Outlaw) ಅಡವಿಯನ್ನು ಸೇರಿ ವಿಧ್ವಂಸಕ ಕಾರ್ಯದಲ್ಲಿ

ತೊಡಗುವವನು. ಮತ್ತೆ ಮರೆಯಾಗುವವನು. ಕೆಲವು ಜಮೀನುದಾರರು ತಮ್ಮ ಸ್ವಾರ್ಥಸಾಧನೆಗಾಗಿ ಬೇಕೆಂದೇ ತಳ್ಳಿಗೆ ಪ್ರಚೋದನೆ ನೀಡುತ್ತಿದ್ದರೆಂದು ಎಲಿಯಟ್ ಬರೆದಿದ್ದಾರೆ. ತಳ್ಳಿಗೆ ಪ್ರತಿ ತಳ್ಳಿಯೂ ಇತ್ತು (ಎದುರು ತಳ್ಳಿ)! ಹಾಗೆಂದು ಎಲ್ಲ ತಳ್ಳಿಕೋರರು ದುಷ್ಟರಲ್ಲ. ಅದಕ್ಕೆ ಎಲಿಯಟ್ 'ಮಾಗಿ ಬಸ್ಯಾ' ಎಂಬವನ ಕತೆಯನ್ನು ಕೊಟ್ಟಿದ್ದಾರೆ.*

ಸ್ವಾಮಿನಿಷ್ಠೆಯ ಪರಾಕಾಷ್ಠೆಯನ್ನು ನವಲಗುಂದದ ಗಂಗಪ್ಪ ನಾಗನಾಥನಲ್ಲಿ ಕಾಣುತ್ತೇವೆ. ಸವಣೂರ ನವಾಬನು ನವಲಗುಂದದ ದೇಸಾಯಿಯ ವಿರುದ್ಧ ಏರಿ ಬಂದಾಗ, ತುಸುಮಟ್ಟಿಗೆ ದೇಸಾಯಿಯನ್ನು ಹೋಲುತ್ತಿದ್ದ ಗಂಗಪ್ಪನು ತನ್ನೊಡೆಯನನ್ನು ಸುರಂಗ ಮಾರ್ಗದಿಂದ ಮೊದಲು ಪಾರು ಮಾಡಿ, ಆಮೇಲೆ ಅವನಂತೆಯೇ ವೇಷ ಧರಿಸಿ ನವಾಬನನ್ನು ಎದುರಿಸಿ ಕೊಲ್ಲಲ್ಪಟ್ಟನಂತೆ.

ಇನ್ನೊಬ್ಬ ಗಂಗಪ್ಪನ ಪ್ರಸಂಗವು ಪ್ರಾಮಾಣಿಕತೆಯ ಪರಮಾವಧಿಗೆ ನಿದರ್ಶನವಾಗಿದೆ. ಅಫಝಲಪುರದ ಗಂಗಪ್ಪ ಬಾಗಲಕೋಟೆ ಎಂದವನ ಪೂರ್ಣ ಹೆಸರು. ಅವನದು ಲೇವಾದೇವಿ ವೃತ್ತಿ. ತಲೆತಲಾಂತರದಿಂದ ನಡೆದು ಬಂದದ್ದು. ಸಾಲವಾಗಿ ಕೊಟ್ಟ ದೊಡ್ಡ ಮೊತ್ತದ ಹಣ ಕೈಗೆ ಬಾರದಾಗ ಆತ insolvent ಎಂದು ಸರಕಾರವು ಸಾರಿತು. ಇದ್ದಷ್ಟನ್ನು ಅವರವರಿಗೆ ಕೊಡಿಸಲಾಯಿತು ಹಾಗೂ ಅವನ ಕುಟುಂಬದ ನಿರ್ವಹಣೆಗಾಗಿ ಒಂದಿಷ್ಟು ಗಳಿಕೆಯನ್ನು ಉಳಿಸಲಾಗಿದ್ದಿತು. ಆದರೆ ಗಂಗಪ್ಪನು ಆ ಜೀವನಾಂಶದ ಹಣದಲ್ಲಿಯೇ ಕಡಿತ ಮಾಡಿ ಸಾಲ ತೀರಿಸುವುದಕ್ಕೆ ಮುಂದಾದನಂತೆ. ಅದೇ ಕಾರಣದಿಂದ ಮನೆಯಲ್ಲಿಯ ಹೆಣ್ಣುಮಕ್ಕಳ ಆಭರಣಾದಿಗಳನ್ನು ಮಾರಿದನಂತೆ.

These circumstances occurred under my own observation and I was greatly struck by the probity and justice of the man.

– ಎಂದು ಎಲಿಯೆಟ್ ಬಣ್ಣಿಸಿದ್ದಾರೆ.

ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಧಾರವಾಡದಲ್ಲಿ ಸೇಠ ಚತುರದಾಸ ಎಂಬ ಮಾರವಾಡಿ ಇದ್ದ. (ನನಗೆ ತಿಳಿದ ಮಟ್ಟಿಗೆ, ಗುಜರಾತದಿಂದ ನಮ್ಮ ಭಾಗಕ್ಕೆ ವ್ಯಾಪಾರಕ್ಕೆಂದು ಬಂದವರಲ್ಲಿ, ಅಥವಾ ಹೆಸರು ತಿಳಿದು ಬಂದವರಲ್ಲಿ ಇವನೇ ಮೊದಲಿಗ. ಅವನ ಹೆಸರಿನ ತೋಟ ಈಗಿನ ಲೈನಬಜಾರದ ಪರಿಸರದಲ್ಲಿ ಇತ್ತಂತೆ). ಅವನದೂ ಲೇವಾದೇವಿಯ ವೃತ್ತಿ. ಒಮ್ಮೆ ದರೋಡೆಕೋರರು ಬಂದು ಅವನ ನಗದು ರಕಮು, ಬೆಳ್ಳಿ ಬಂಗಾರ ಎಲ್ಲವನ್ನೂ ಲೂಟಿ ಮಾಡಿಕೊಂಡು ಹೋದರು. ಈ ಮಧ್ಯೆ ಅವನ ನಿಕಟ ಪರಿಚಯದ ಒಬ್ಬ ತೀರ್ಥಯಾತ್ರೆಗೆ ಹೊರಟು ನಿಂತಾಗ, ತನ್ನಲ್ಲಿದ್ದ ನಗದು ಹಣವನ್ನು ಚೀಲದಲ್ಲಿ ಹಾಕಿ ಶೇಡಜಿಯ ಕಡೆಗೆ ಸುರಕ್ಷಿತತೆಗಾಗಿ ಇಟ್ಟು ಹೋಗಿದ್ದನಂತೆ.

* ಈ ಕುರಿತ ಹೆಚ್ಚಿನ ವಿವರಗಳು **'ಸಂಕಥನ'**– ಸಂಭಾವನಾ ಗ್ರಂಥದ ಪುಟ ೪೦೧ರಲ್ಲಿ ಬಂದಿವೆ.

ತಿರುಗಿ ಬಂದಾಗ, ದರೋಡೆಯ ಸುದ್ದಿ ತಿಳಿಯಿತು. ಶೇಡಜಿಯ ಸತ್ಯಸಂಧತೆಯನ್ನು ಚೆನ್ನಾಗಿ ಬಲ್ಲ ಆ ಗೃಹಸ್ಥನು, 'ಶೇಡಜಿಯ ದೊಡ್ಡ ಸಂಪತ್ತಿನ ಜೊತೆಗೆ ತನ್ನ ಹಣವೂ ಹೋಯಿತು; ಉಪಾಯವಿಲ್ಲ. ಶೇಡಜಿಯನ್ನು ಮಾತಾಡಿಸಿ ಬರೋಣ'- ಎಂದು ಹೋದಾಗ ಆಶ್ಚರ್ಯವೇ ಕಾದಿತ್ತು. "ಅರೇ, ನಿಮ್ದೂ ದುಡ್ಡು ಹಾಂಗೇ ನಾಗೊಂದಿಗೆಯ ಮೇಲೆ ಇಟ್ಟಿತ್ತು. ತಕ್ಕೊಂಡು ಹೋಗು" ಎಂದ ಶೇಡಜಿ!

ಗದಗ-ಬೆಟಗೇರಿಯಲ್ಲಿ ಪಟ್ಟೇಗಾರರು ಹೆಚ್ಚು ಸಂಖ್ಯೆಯಲ್ಲಿದ್ದಾರಲ್ಲವೆ, ಅವರಿಗೂ ಅಲ್ಲಿಯ ಲಿಂಗಾಯತರಿಗೂ, ಮೆರವಣಿಗೆಗೆ ಸಂಬಂಧಿಸಿದಂತೆ ತೀವ್ರ ಸ್ವರೂಪದ ಜಗಳವಾಯಿತಂತೆ. ಶಿರಹಟ್ಟಿಯ ಆಗಿನ ಫಕೀರಸ್ವಾಮಿಗಳು ಅದನ್ನು ಸರಿಪಡಿಸಿದರಾಗಿ ಎಲಿಯಟ್ ದಾಖಲಿಸಿದ್ದಾನೆ.

ಧಾರವಾಡದಲ್ಲಿಯ ಅವರ ಅಧಿಕಾರಾವಧಿಯಲ್ಲಿ ನಡೆದಿದ್ದ ಒಂದು ಸಂಗತಿಯೆಂದರೆ ಬೇಟೆ. ಆಗ ಧಾರವಾಡದ ಸುತ್ತುಮುತ್ತು ದಟ್ಟವಾದ ಅಡವಿ ಇದ್ದಿತು. ಇವತ್ತಿನ ಸಾಧನಕೇರಿಯಲ್ಲಿ ಹುಲಿಗಳು ಬಂದು ಹೋಗುತ್ತಿದ್ದುವಂತೆ. ಎಲಿಯಟ್ ಒಳ್ಳೆಯ ಬೇಟೆಗಾರರೆಂದು ಹೆಸರು ಮಾಡಿದ್ದನೆಂಬುದು ವಾಲ್ಟರ್ ಕ್ಯಾಂಬೆಲ್ ಎಂಬಾತನ ' My Indian Journal' ಗ್ರಂಥದಿಂದ ತಿಳಿದುಬರುತ್ತದೆ. ನಮ್ಮಲ್ಲಿಯ ಪ್ರಾಣಿ ಪಶುಗಳ ಬಗ್ಗೆ ಎಲಿಯಟ್‌ಗೆ ಚೆನ್ನಾದ ತಿಳಿವಳಿಕೆ ಇದ್ದಿತು, ಆ ಕುರಿತು ಒಂದು ಪುಸ್ತಕವನ್ನೇ ಬರೆದಿದ್ದಾರೆ. ಮಹತ್ವದ್ದೆಂದರೆ ವಿಕಾಸವಾದದ (Theory of Evolution) ಪ್ರವರ್ತಕನಾದ ಚಾರ್ಲಸ್ ಡಾರ್ವಿನ್ನನು ಅಂತಹ ಪಶುಗಳ ಆಹಾರ, ವರ್ತನೆ ಇವುಗಳ ಬಗ್ಗೆ ಮಿತ್ರ ಎಲಿಯಟ್ಟರಿಗೆ ಪತ್ರ ಬರೆದು ವಿವರಗಳನ್ನು ತರಿಸಿಕೊಂಡಿದ್ದ ಈ ಪತ್ರವ್ಯವಹಾರವು ಡಾರ್ವಿನ್ನನ ದಾಖಲೆಗಳಲ್ಲಿ ಅಡಕವಾಗಿದ್ದು ಅದೀಗ ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ಕಾಯ್ದಿಡಲಾಗಿದೆ. ಅಂತೂ ಸುಪ್ರಸಿದ್ಧವಾದ ಆ ಸಂಶೋಧನೆಯಲ್ಲಿ ಎಲಿಯಟ್ಟರ ಮೂಲಕ ಕರ್ನಾಟಕದ ಪಾಲೂ ಕಿಂಚಿತ್ ಇದೆ ಎಂದಂತಾಯಿತು.

### ಬೇರೆ ಕೆಲವು ಬರಹಗಳು

'ಇಂಡಿಯನ್ ಎಂಟಿಕ್ವೆರಿ'ಯಲ್ಲಿ ಎಲಿಯಟ್ ಕೆಲ ಲೇಖಗಳನ್ನು ಪ್ರಕಟಿಸಿದ್ದಾರೆ. ಹಾನಗಲ್ಲಿನ ಪ್ರಾಚೀನತೆಯ ಕುರಿತೊಂದು ಲೇಖವಿದೆ (ಸಂಪುಟ ೫, ೧೮೭೬). ಆ ಊರಲ್ಲಿ 'ಕುಂತಿ ದಿಬ್ಬ' ಎಂದು ಕರೆಯಿಸಿಕೊಳ್ಳುವ ಮಣ್ಣಿನ ಏರು ಇದೆ. 'ಹೋ' ಇದರಲ್ಲಿ ಪ್ರಾಚೀನವಾದದ್ದೇನಾದರೂ ಸಿಕ್ಕಬಹುದೆಂದು ಅದನ್ನು ಪೂರ್ತಿ ಅಗೆಯಿಸಿದರು. ಆದರೆ ಏನೂ ಹೊರಡಲಿಲ್ಲವೆಂದು ಪುನಹ ಮುಚ್ಚಿಸಿಬಿಟ್ಟರು.

ಇನ್ನೊಂದು ಮಹತ್ವದ ಲೇಖ 'ನೌಬತ' ಎಂಬುದನ್ನು ಕುರಿತದ್ದು. ಹಲವಾರು ಶಾಸನಗಳಲ್ಲಿ 'ಪಂಚಮಹಾಶಬ್ದ' ಎಂಬ ಪದ ಬರುತ್ತದೆ. ಅದಕ್ಕೆ ವಿವರಣೆ ಕೊಡುತ್ತಾ,

ಮಹಾರಾಜ ಮುಂತಾದ ಗಣ್ಯರನ್ನು ಬರಮಾಡಿಕೊಳ್ಳುವಾಗ ಐದು ಬಗೆಯ ವಾದ್ಯ ಬಾರಿಸುವ ಪರಿಪಾಠವಿದ್ದಿತು. ಅವುಗಳಲ್ಲಿ ನೌಬತ ಎಂಬುದೂ ಒಂದಾಗಿತ್ತು ಎಂಬುದರ ವಿವರಣೆ ಈ ಲೇಖದಲ್ಲಿದೆ.

ಅವರ ಇನ್ನ ಹಲವು ಲೇಖನಗಳನ್ನು ಬರಿಯೆ ಪ್ರಸ್ತಾಪ ಮಾಡುವೆ. ಒಂದು,ಉತ್ತರ ಕರ್ನಾಟಕದ ಪ್ರಾಣಿವರ್ಗವನ್ನು ಪರಿಚಯಿಸುತ್ತದೆ. ಮತ್ತೊಂದು ಸವಣೂರ ಸಂಸ್ಥಾನವನ್ನು ವಿವರಿಸುತ್ತದೆ. (ಡಬ್ಲ್ಯೂ. ಇ. ವೆಸ್ಟ್ ರಚಿಸಿದ 'The Memoir of the States of the Southern Maratha Country' ಪುಸ್ತಕದ ಒಂದು ಪ್ರಕರಣವಾಗಿ ಬಂದಿದೆ.)

ಅವರ ಮೌಲಿಕವೆನ್ನಬಹುದಾದ ಗ್ರಂಥ 'ದಕ್ಷಿಣ ಭಾರತದ ನಾಣ್ಯಶಾಸ್ತ್ರ'ಕ್ಕೆ ಸಂಬಂಧಿಸಿದುದು. ನಾಣ್ಯಶಾಸ್ತ್ರ ವಿಚಾರದಲ್ಲಿ ಪೂರ್ಣಸ್ವರೂಪದ ಅಧಿಕೃತವೆನಿಸುವ ಕೃತಿ ಅದು. ಹೆಚ್ಚಿನ ನಾಣ್ಯಗಳು ತೆಲುಗು ದೇಶವಾದರೂ ಮುಂಬಯಿ ಕರ್ನಾಟಕದ ನಾಣ್ಯಗಳನ್ನೂ ಅವರು ಗಣನೆಗೆ ತೆಗೆದುಕೊಂಡಿದ್ದರೆಂಬುದಕ್ಕೆ ಇದೊಂದು ಪ್ರಾಸಂಗಿಕವಾದ ನಿದರ್ಶನ:

It (i.e. Banavasi) contains some fine temples and other remains, which I had no time to examine. On a very hasty visit, during which, however, I was fortunate enough to pick up some fine old coins.

## ಶಾಸನ ಪ್ರತಿಗಳು

ಎಲಿಯಟ್ ತಾನು ಸಂಗ್ರಹಿಸಿದ ಶಾಸನಗಳ ಹಲವಾರು ಪಡಿಯಚ್ಚುಗಳನ್ನು (estampages) ತಯಾರಿಸಿ ಅಲ್ಲಿ ಇಲ್ಲಿ ಹಂಚಿದ್ದ; ಅವುಗಳಲ್ಲಿಯ ಒಂದು ಸೆಟ್ಟನ್ನು ಫ್ಲೀಟ್ ಬಳಸಿಕೊಂಡು; ಕೆಲವನ್ನು Indian Antiquary ಪತ್ರಿಕೆಯಲ್ಲಿ ಪ್ರಕಟಿಸಿದ್ದನ್ನು ಈ ಹಿಂದೆ ಪ್ರಸ್ತಾಪಿಸಲಾಗಿದೆ.

ನಾನು ಈಚೆಗೆ (೧೯೮೮) ಲಂಡನ್ನಿಗೆ ಹೋಗಿದ್ದೆ. ರಾಯಲ್ ಏಶಿಯಾಟಿಕ್ ಸೊಸೈಟಿಯ ಲೈಬ್ರರಿಯಲ್ಲಿ ಹಾಗೇ ಸುತ್ತಾಡುತ್ತಿದ್ದಾಗ ಮೂರು ಸೊಗಸಾದ ಬೈಂಡ್ ಮಾಡಿದ್ದ ಎಲಿಯಟ್ ಸಂಗ್ರಹಿಸಿದ ಶಾಸನಗಳ ದುಂಡಗಿನ ಹಸ್ತಾಕ್ಷರದ ನಕಲುಗಳು! ಮೂರರಲ್ಲಿ ಎರಡು ಹೊತ್ತಿಗೆಗಳು ಕನ್ನಡ ಶಾಸನಗಳಿಗೆ ಸಂಬಂಧಪಟ್ಟವುಗಳು. ಇನ್ನೊಂದು ತೆಲುಗು ದೇಶದ್ದು., ನನಗಾದ ಸಂಭ್ರಮ ಅಷ್ಟಿಷ್ಟಲ್ಲ.

ಪುಟಗಳನ್ನು ತಿರುವಿ ಹಾಕುವಾಗ ಒಂದೆಡೆ – This inscription is of great historical value. So I have published it in Canerese in the ಶಿವಾನುಭವ under the title ಚೌಡದಾನಪುರದ ಶಿಲಾಶಾಸನಗಳು.' (೧೯೨೮-೨೯. ೩ನೆಯ ಸಂಪುಟ) ಎಂದು ಕಾಣಿಸಿದ್ದಿತು.

ಮರಳಿ ಊರಿಗೆ ಬಂದ ಮೇಲೆ ಆ ಲೇಖವನ್ನು ಪರಿಶೀಲಿಸಿದೆ. ಅದನ್ನು ಬರೆದವರು ಶಿ.ಚೆ. ನಂದಿಮಠರು. ಆ ಲೇಖನದಲ್ಲಿ ಅವರು ಹೀಗೆ ಬರೆದಿದ್ದಾರೆ : "ಇಲ್ಲಿಗೆ ಬಂದ ನಂತರ (ಎಂದರೆ ರಾಯಲ್ ಏಶಿಯಾಟಿಕ್ ಸೊಸೈಟಿಗೆ), ಆ ಪ್ರತಿ ಶೋಧಿಸಿ ಕತ್ತಲೆ ಕೋಣೆಯಿಂದ ಹೊರತೆಗೆದು ಓದಿದಾಗ ಅಪಾರ ಆನಂದವಾಯಿತು. . . .ಕೋರಿ ಕಾಗದದ ಮೇಲೆ ಅರಗಿನ ಮಸಿಯಿಂದ ಸುವಾಚ್ಯವಾದ ಅಕ್ಷರಗಳಲ್ಲಿ ಯಾವನೋ ಓರ್ವ ಕಾರಕೂನನು ಬರೆದಿದ್ದಾನೆ ಅವುಗಳನ್ನು ಓದಿದವನ ಕಡೆಯಿಂದಾಗಲಿ ಅಥವಾ ಬರೆದವನ ದೋಷದಿಂದಾಗಲಿ ಆದ ತಪ್ಪುಗಳಿಗೇನೂ ಕಡಿಮೆಯಿಲ್ಲ. ಆದರೂ ಶಿಲಾಶಾಸನಗಳ ಆಶಯವನ್ನು ಕಂಡು ಹಿಡಿಯಲು ಅಡ್ಡಿಯಿಲ್ಲ". (ಶಿವಾನುಭವ ಸಂ.೩, ಪುಟ ೨೮-೩೯). ಫ್ಲೀಟರ ಅನಂತರ ಎಲಿಯಟ್ ಶಾಸನಗಳನ್ನು ಗಮನಿಸಿದವರು ಅವರೇ ಎಂದೆನಿಸಿತು.

ಆ ಲೇಖದಲ್ಲಿ ನಂದಿಮಠರು, ಅದರಲ್ಲಿ ಕಾಣಿಸಲಾದ ಸಂಕೇಶ್ವರದಲ್ಲಿಯ ಶಿಲಾಶಾಸನಗಳಿಗಾಗಿ ಆ ಊರಿಗೆ ಹೋಗಿ ಬಂದರಂತೆ. ಆದರೆ ಅವಾವ ಶಿಲಾಶಾಸನಗಳೂ ಅಲ್ಲಿರಲಿಲ್ಲ ಎಂದಿದ್ದಾರೆ. ನಾನೂ ಹಾಗೆ cross-check ಮಾಡಿದೆ. ಅನೇಕ ಶಿಲಾಶಾಸನಗಳು South Indian inscriptions ಮಾಲಿಕೆಯ, ಉತ್ತರ ಕರ್ನಾಟಕಕ್ಕೆ ಸಂಬಂಧಪಟ್ಟ ಶಾಸನಗಳ ಸಂಪುಟದಲ್ಲಿ ಎಲಿಯಟ್ ಕಂಡುಹಿಡಿದ ಶಾಸನಗಳವೆಷ್ಟೋ ನಮೂದಾಗಿಲ್ಲ. ಅರ್ಥಾತ್ ಆ ವೇಳೆಗೆ (೧೯೨೦-೪೦) ನಶಿಸಿ ಹೋಗಿದ್ದವು.*

ಎಲಿಯಟ್ ಸಂಗ್ರಹದ ಮಹತ್ವವನ್ನರಿತು ಅಂದಿನ 'ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ' ಎಂಬ ಅಧಿಕಾರಿಯು ಜನವರಿ ೧೮೭೦ ರಷ್ಟು ಹಿಂದೆ ಮುಂಬಯಿ ಗವರ್ನರನಿಗೆ ಪತ್ರ ಬರೆದು, ಎಲಿಯೆಟ್ ಸಂಗ್ರಹದ ಸಂಪಾದನ, ಪರಾಮರ್ಶನಗಳನ್ನು ಓರ್ವ ಸೂಕ್ತ ವಿದ್ವಾಂಸನಿಂದ ಮಾಡಿಸಬೇಕೆಂದು ಸೂಚಿಸಿದ್ದನು. ಆದರೆ ಆ ಕೆಲಸವೇನೂ ಕೈಗೂಡಲಿಲ್ಲ.

ಹೀಗೆ ಹಲವಾರು ದೃಷ್ಟಿಯಿಂದ ಎಲಿಯಟ್ ಅವರ ಕಾರ್ಯ ಮತ್ತು ಲೇಖನ ನಮಗೆ ಬೆಲೆಯುಳ್ಳದ್ದಾಗಿದೆ. ನಿಜಕ್ಕೂ ಅವರು ಪ್ರಾತಃಸ್ಮರಣೀಯರು.

---

* ಆ ಎರಡು ಬೃಹತ್ ಗ್ರಂಥಗಳ ಜೆರಾಕ್ಸ್ ಪ್ರತಿಯನ್ನು ಕೇಳಿದಾಗ, ವ್ಯಕ್ತಿಗತವಾಗಿ ಅವನ್ನು ಕೊಡಲಾಗುವುದಿಲ್ಲ ಎಂದು ಬರೆದರು. ಇಲ್ಲಿಯ ಒಂದು ಯೂನಿವರ್ಸಿಟಿಗೂ, ಕೇಂದ್ರ ಸರಕಾರದ ಪ್ರಾಚ್ಯವಿದ್ಯಾ ಇಲಾಖೆಗೂ ವಿಷಯ ತಿಳಿಸಿ ಅವುಗಳನ್ನು ತರಿಸಿಕೊಳ್ಳಬೇಕೆಂದು ಆಗ್ರಹಿಸಿದೆ, ಕೆಲಸ ಕೈಗೂಡಿಲ್ಲ.

## ಅನುಬಂಧ 6

# ಫ್ಲೀಟರನ್ನು ಕುರಿತು ಹಲವು ಹೊಸ ಅಂಶಗಳು

ಫ್ಲೀಟರು ೧೯೧೭ರಲ್ಲಿ ತೀರಿಹೋದ ನಂತರ ಅವರ ದಾಖಲೆ, ಕಾಗದಪತ್ರಗಳನ್ನೆಲ್ಲ ಎಲ್.ಡಿ.ಬಾರ್ನೆಟ್ ಬ್ರಿಟಿಶ್ ಮ್ಯೂಸಿಯಮ್‌ನ ಅಧಿಕಾರಿಗಳಿಗೆ ಒಪ್ಪಿಸಿದರು. ಹಲವಾರು ಪೆಟ್ಟಿಗೆಗಳಲ್ಲಿ ಇರಿಸಿದ್ದ ದಾಖಲೆಗಳನ್ನೆಲ್ಲ ವ್ಯವಸ್ಥಿತವಾಗಿ ಲೈಬ್ರರಿಯಲ್ಲಿ ಇಡಲಾಗಿತ್ತು. ಆದರೆ ಮೂರು ಪೆಟ್ಟಿಗೆಗಳು ಮಾತ್ರ ಬೀಗವನ್ನೂ ತೆರೆಯದೇ ಹಾಗೇ ಕೆಳಮನೆಯೊಂದರಲ್ಲಿ ಉಳಿದುಕೊಂಡಿದ್ದವು. ಮುಂದಿನ ೭೦ ವರ್ಷಗಳವರೆಗೆ. ೧೯೮೭ರಲ್ಲಿ ಅಲ್ಲಿಯ ಜೆ.ಪಿ. ಲೊಸ್ಟಿ ಎಂಬವರ ಗಮನಕ್ಕೆ ಬಂದು ಅವನ್ನು ತೆರೆದು ನೋಡಿದಾಗ, ಅನೇಕ ಶಾಸನಗಳ ಪ್ರತಿಗಳ ಜೊತೆಗೆ ಒಂದಿಷ್ಟು ಪತ್ರವ್ಯವಹಾರ ಕಂಡುಬಂತು.

ನಾನು ಮತ್ತೊಮ್ಮೆ ಲಂಡನ್ನಿಗೆ ಹೋದಾಗ ಅದನ್ನು ನೋಡುವ ಅವಕಾಶ ಸಿಕ್ಕಿತು. ಆ ಅಪೂರ್ವ ಸಾಮಗ್ರಿಯನ್ನು ಕಂಡು ನನಗಾದ ಸಂತೋಷ ಅಷ್ಟಿಷ್ಟಲ್ಲ.

ನಾನು ಕಂಡಿದ್ದಂತೆ ಅದರಲ್ಲಿ ೬೫೦ ಶಾಸನ ಪ್ರತಿಗಳಿದ್ದು, ಮುಂಬಯಿ ಕರ್ನಾಟಕಕ್ಕೆ ಸಂಬಂಧಿಸಿದವುಗಳು ೫೫೦. ಅವುಗಳಲ್ಲಿ ಹೆಚ್ಚಿನವು ವಾಲ್ಟರ್ ಎಲಿಯಟ್ ಹುಡುಕಿದವುಗಳು. ಈ ಕುರಿತು ಅದಾಗಲೇ ವಿವೇಚಿಸಿದ್ದಾಗಿದೆ. ವಿಶೇಷದ ಸಂಗತಿಯೆಂದರೆ ಈ ಮುಂಚೆ ರೈಸ್ ಪ್ರಭೃತಿಗಳು ಕಂಡುಹಿಡಿದಿದ್ದ ಮೈಸೂರ ಭಾಗದ ಶಾಸನಗಳ ಪಡಿಯಚ್ಚುಗಳು. (ಸುಮಾರು ೯೦ ಇವೆ.) ಅವನ್ನು ಫ್ಲೀಟರಿಗೆ ಕಳಿಸಲಾಗಿತ್ತು. ಅದೇಕೋ? ಕಳಿಸಿದವರು ರೈಸರ ಅನುವರ್ತಿಗಳಾದ ಹುಲ್ಷ್ ಮತ್ತು ಎಚ್. ಕೃಷ್ಣಶಾಸ್ತ್ರಿಗಳು. ಅವಕ್ಕೆ ಲಗತ್ತಿಸಿದ ಪತ್ರಗಳ ಮೇಲಿಂದ, ಈ ಪ್ರತಿಗಳು ೧೮೯೮–೧೯೦೦ ಈ ಅವಧಿಗಳಲ್ಲಿ ಕಳಿಸಿದವುಗಳಾಗಿವೆ. ಅವು ತಲುಪಿದ ಮೇಲೆ ಫ್ಲೀಟರು ಕೆಲವಕ್ಕೆ ಟಿಪ್ಪಣಿ ಬರೆದಿಟ್ಟು ಕೊಂಡಿದ್ದಾರೆ.

ಕೆಲವು ಮಾತ್ರ ಪ್ರಕಟವಾಗಿಲ್ಲವೆನ್ನುವುದು ಜೊತೆಗಿನ ಪ್ರತಗಳ ಮೇಲಿಂದ (ಹುಲ್ಷರು ಅವುಗಳನ್ನು ಎಪಿಗ್ರಾಫಿಯ ಇಂಡಿಕಾದಲ್ಲಿ ಪ್ರಕಟಿಸಬೇಕೆಂದು ಕೇಳಿಕೊಂಡದ್ದರ ಮೇಲಿಂದ) ತಿಳಿದು ಬರುತ್ತದೆ. ಕರ್ನಾಟಕದ ಸಮಗ್ರ ಚರಿತ್ರೆಯನ್ನು ಶಾಸನಾಧಾರದಿಂದ ಬರೆಯಬೇಕೆನ್ನುವ ಯೋಜನೆ ಇದ್ದು ಅದಕ್ಕೆ ಆಧಾರವಾಗುವಂಥ ಶಾಸನಗಳನ್ನು ಫ್ಲೀಟರ ವಿಚಕ್ಷಣತೆಗೆಂದು ಕಳಿಸಿರಬಹುದೆ? ಅಥವಾ ಅಪೂರ್ಣವಾಗಿರುವ ಶಾಸನಗಳನ್ನು

ಪ್ರಸ್ತಾಪಿಸುವುದಿದ್ದಿರಬಹುದೆ? ಇತ್ತ ಅಸ್ಪಷ್ಟವಾಗಿರುವ ಶಾಸನ ಪ್ರತಿ ಎರಡೆರಡನ್ನು ಕಳಿಸಿದ್ದೂ ಇದೆ. ಈ ರೀತಿ ಶಾಸನಪ್ರತಿಗಳು ವ್ಯಾಪಕವಾಗಿ ವಿನಿಮಯಗೊಳ್ಳುತ್ತಿದ್ದುವೆಂದು ಕಾಣುತ್ತದೆ. I.A ಸಂಪುಟ ೮ರಲ್ಲಿ ಪ್ರಕಟವಾದ ವಕ್ಕಲೇರಿ ತಾಮ್ರಶಾಸನವನ್ನು ರೈಸರು ಹುಲ್ಷ್‌ರಿಗೆ ಕಳಿಸಿದ್ದರು. (೫-೫-೧೮೯೮) ಹುಲ್ಷ್ ಅದನ್ನು ಸ್ವಚ್ಛವಾಗಿ ತೊಳೆದು ಅದರ ಪಡಿಯಚ್ಚನ್ನು ಕೀಲ್‌ಹಾರ್ನ್ ಅವರಿಗೆ ಕಳಿಸಿದ್ದರು. ಅದೇ ಪ್ರತಿ, ಕೀಲ್‌ಹಾರ್ನ್‌ರಿಂದ ಫ್ಲೀಟ್‌ರಿಗೆ ಬಂತು! "Handed over to me by Kielhorn; he has retained another set" ಎಂದು ಫ್ಲೀಟ್ ಅದರ ಕೆಳಗಡೆ ಟಿಪ್ಪಣಿ ಬರೆದಿದ್ದಾರೆ (೧೯-೧೦-೧೮೯೮). ಶಾಸನ ಪಾಠದ ಶುದ್ಧತೆಯ ಬಗ್ಗೆ ಈ ರೀತಿಯ ಹಸ್ತಾಂತರ ಮೇಲಿಂದ ಮೇಲೆ ನಡೆಯುತ್ತಿದ್ದುದು ಒಂದು ವಿಶೇಷದ ಮಾತಾಗಿದೆ.

ಇತ್ತ ಉತ್ತರ ಕರ್ನಾಟಕದ ಶಾಸನಗಳನ್ನು ಫ್ಲೀಟರು ಒಂದೊಂದಾಗಿ ಕಟ್ಟುಗಳಲ್ಲಿ ಇಟ್ಟಿದ್ದರು. "Parcel 7,8,9-There are no ancient inscriptions in this bundle" ಎಂಬುದಾಗಿ ಫ್ಲೀಟ್ ಬರೆದಿದ್ದಾರೆ. ಇದರ ಮೇಲಿಂದ, ಅವರು ತಮ್ಮ ನಿವೃತ್ತಿಯ ಇಲ್ಲವೆ ಬಿಡುವಿನ ದಿನಗಳಲ್ಲಿ ತಮ್ಮ ಶಾಸನ ಸಂಗ್ರಹವನ್ನು ಹೊಂದಿಸಿ ಇಟ್ಟುಕೊಳ್ಳುವ ಎತ್ತುಗಡೆಯಲ್ಲಿದ್ದರೆಂದು ಕಾಣುತ್ತದೆ.

ಇನ್ನು ಅವರು ಆ ಭಾಗದ ಶಾಸನಗಳ ಪ್ರತಿಗಳಿಗೆ ಸೇರಿಸಿದ ಟಿಪ್ಪಣಿಗಳು ಮಾತ್ರ ಆ ಶಾಸನಗಳ ಶುದ್ಧ ಪಾಠ ಮತ್ತು ಅರ್ಥವಿಸುವಿಕೆಯಲ್ಲಿ ತುಂಬಾ ಬೆಲೆಯುಳ್ಳವಾಗಿವೆ.

ಈ ಪೆಟಾರಿಯಲ್ಲಿಯ ಅನೇಕ ಶಾಸನಗಳಲ್ಲಿ ಚಿತ್ರಗಳಿವೆ. 'ದೊಡ್ಡಶಿವರ' ಎಂಬಲ್ಲಿಯ ಶಾಸನದಲ್ಲಿ ಯುದ್ಧಕ್ಕೆ ಹೊರಟ ಸೈನಿಕರ ಚಿತ್ರಣವಿದೆ. ಕೋಲಾರ ಯುದ್ಧದಲ್ಲಿ ಗಾಯಗೊಂಡ ಸೈನಿಕ ಕಂಡು ಬರುತ್ತಾನೆ. ತುಮಕೂರಿನ ವೀರಗಲ್ಲಿನಲ್ಲಿ ಪೂಚಯ್ಯನೆಂಬವ ಸ್ವರ್ಗ ಸೇರಿದ್ದಾಗ, ದೇವತೆಗಳಿಬ್ಬರು ಚಮರಿ ಬೀಸುತ್ತಿದ್ದಾರೆ. ಒಂದೆಡೆ ಮೂವರು ಅಶ್ವಾರೋಹಿ ಖಡ್ಗಧಾರಿಗಳಿದ್ದಾರೆ. ಈ ಚಿತ್ರದ ಕೆಳಗೆ ಮೂರು ಹಸುಗಳು! (ನಾಡಿನ ವಿವಿಧ ಶಾಸನಗಳಲ್ಲಿ ಬಂದಿರುವ ಇಂಥ ಚಿತ್ರಗಳದ್ದೇ ಒಂದು ಮಹತ್ವಪೂರ್ಣ ಅಭ್ಯಾಸವಿಷಯವಾಗಬಲ್ಲುದು.)

ಉತ್ತರ ಕರ್ನಾಟಕದ ಶಾಸನಗಳೆಲ್ಲದರ ಪಟ್ಟಿ ಮಾಡಿದ್ದು ಅದರ ಒಂದು ಬೆರಳಚ್ಚಿನ ಪ್ರತಿ ಇದೆ. ಅದರಲ್ಲಿ ಊರು, ಅದರ ರಚನಾಕಾಲ ಹಾಗೂ ಆಗಿನ ರಾಜ ಮತ್ತು ಅದು ಪ್ರಕಟವಾದ ಪತ್ರಿಕೆಯ ಸಂಪುಟ ಮತ್ತು ವರ್ಷ ಕೊಡಲಾಗಿದೆ. ಫ್ಲೀಟರೇ ಇದನ್ನು ತಯಾರಿಸಿರಬೇಕು. ಅದರ ಬೆರಳಚ್ಚನ್ನು ಬಾರ್ನೆಟ್ ಮಾಡಿಸಿರಬೇಕು. ಕಲ್ಯಾಣ ಚಾಲುಕ್ಯರ ಇತಿಹಾಸದ ಯಾವುದೇ ಅಂಶವನ್ನು ಅಭ್ಯಾಸಮಾಡುವವರಿಗೆ ಈ ಪಟ್ಟಿಯು ಒಂದು ಆಕರವಾಗಿ ನೆರವಾಗಬಲ್ಲುದು.

ಫ್ಲೀಟರಿಗೆ ಓರ್ವ ಶಾಸನ ಸಹಾಯಕನಿದ್ದ. ಅವನ ಹೆಸರು ಶೇಖ ಕರೀಮ. ಈ ಕರೀಮನ ವಿಚಾರ, ಮೊದಲ ಬಾರಿಗೆ ಹೊರಬಂದಿದೆ. 'ಪಟ್ಟದಕಲ್ಲಿನ ಪರಪ್ಪ ಎಂಬವನ ಮನೆಯಲ್ಲಿಯ ಕಂಬದ ಮೇಲಿನ ಶಾಸನ ಶೇಖ ಕರೀಮ ಕಳಿಸಿದ್ದು' (ದಿ. ೯-೩-೧೮೯೧) ಎಂಬ ಉಲ್ಲೇಖ ಒಂದು ಶಾಸನ ಪ್ರತಿಯಲ್ಲಿದೆ. ಇನ್ನೂ ಹಲವೆಡೆ ಅವನ ಪ್ರಸ್ತಾಪ ಬಂದಿದೆ. ವಿಶೇಷವೆಂದರೆ ಫ್ಲೀಟರಿಗೆ ಶಾಸನ ಸ್ವರೂಪದ ಅವನ ಪರಿಣತಿಯ ಬಗ್ಗೆ ಇದ್ದ ವಿಶ್ವಾಸ.

ಫ್ಲೀಟ್ ಒಮ್ಮೆ ಪಟ್ಟದಕಲ್ಲಿಗೆ ಹೋದಾಗ ಅಲ್ಲಿದ್ದ ಶಾಸನಗಳ ಗುರುತು ಹಾಕಿಕೊಂಡು ಬಂದು, ಕರೀಮನಿಗೆ ಅವುಗಳ ಪ್ರತಿ ತೆಗೆದು ಹೇಳುತ್ತ "For some, two copies. Some on brown paper and not white. Any way use your discretion". ಎಂದಿದ್ದಾರೆ.

## ಲಾವಣಿ ಹಾಡುಗಳು

'ಇಂಡಿಯನ್ ಎಂಟಿಕ್ವೆರಿ' ಪತ್ರಿಕೆಯಲ್ಲಿ ಫ್ಲೀಟರು ತಾವು ಸಂಗ್ರಹಿಸಿದ್ದರಲ್ಲಿ ಐದು ಲಾವಣಿಗಳನ್ನು ಪ್ರಕಟಿಸಿದ್ದರಷ್ಟೆ. ಅವರು ಸಂಗ್ರಹಿಸಿದವುಗಳು ೩೦ಕ್ಕೂ ಮಿಕ್ಕಿವೆ. ಅನೇಕ ಹಾಡುಗಳಿಗೆ ಅವರ ಟಿಪ್ಪಣಿಗಳಿವೆ. ಅವನ್ನು ಧಾರ್ಮಿಕ, ರಾಜಕೀಯ ಹಾಗೂ ಸಾಮಾಜಿಕ ಎಂಬುದಾಗಿ ವಿಭಾಗಿಸಬಹುದು.

ಸಾಮಾಜಿಕ ಎನ್ನಬಹುದಾದ 'ಗರ್ವ ನಿನಗ್ಯಾಕೊ ತೆರವಾಯಿ ಮನುಜಾ' ಎಂಬುದರಲ್ಲಿ ಸಾಹಿತ್ಯಿಕ ಸೆಳಕು ಇರುವುದರಿಂದ, ಅದೊಂದು ಮಾದರಿಯೆಂದು ತುಸು ವಿವರವಾಗಿ ಪರಿಶೀಲಿಸಬಯಸಿದೆ. ಇದರಲ್ಲಿ 'ಗರ್ವದಿಂದ ಮೆರೆಯಬೇಕು' ಎಂಬ ವ್ಯಾಜನಿಂದೆಯ ಮೂಲಕ ಇತರರ ವಿಶಿಷ್ಟ ಸಾಧನೆಯ ಸ್ತುತಿಯನ್ನು ಜಾನಪದ ಕವಿಯೊಬ್ಬ ಜಾಣ್ಮೆಯಿಂದ ಮಾಡಿದ್ದಾನೆ. ಅ ಪದ್ಯ ಹೀಗಿದೆ :

ಗರ್ವ ನಿನಗ್ಯಾಕೊ ತೆರ್ವಾಯಿ ಮನುಜಾ ಗರ್ವ ನಿನಗ್ಯಾಕೊ* ॥ಪ॥
ಬುದ್ಧಿಯಲಿ ಲಾಳಿ ರುದ್ರಪ್ಪನವರೇನೊ
ಶ್ರದ್ಧಿಯಲಿ ಅಂಕಲಗಿ ಅಡಿವೆಪ್ಪನೇನೊ
ಜಿದ್ದಿನಲಿ ಮೂರುಸಾವಿರ ತಂದೆ ಹುಬ್ಬಳ್ಳಿ,
ಸಿದ್ಧಲಿಂಗಾರ್ಯ ಯತಿಮಾನ್ಯನೇನೊ ॥೧॥

---

* ಇದೇ ಪಲ್ಲವಿಯ ಮತ್ತು ಇಂಥದೇ ಬಗೆಯ ಪೌರಾಣಿಕ ವ್ಯಕ್ತಿಗಳುಳ್ಳ ಪುರಂದರದಾಸರ ಕೀರ್ತನೆಯಿದೆ. ಅದನ್ನು ಇಲ್ಲಿ ಅನುಕರಿಸಲಾಗಿದೆ.

ಶಿವಪೂಜೆಯಲಿ ಕಾಶಿ ಪಟದಪ್ಪಜ್ಜವರೇನೊ
ಶಿವಭಜಕ ಹೊಂಗಲದ ತಮ್ಮಪ್ಪನೇನೊ
ಸುವಿವೇಕದಲ್ಲಿ ನಮ್ಮ ಸಾಲೆಪ್ಪನವರೇನೊ
ಕವಿತೆಯಲಿ ಲೋಕೇಶ ಮನೆತಾನವೇನೊ ॥೨॥

ರಾಗದಲಿ ಮೆಳೆಯಪ್ಪನವರ ವೀರಯ್ಯನೇನೊ
ಭಾಗ್ಯದಲಿ ಗೊಂಗಡಿಯ ತಾತೆಪ್ಪನೇನೊ
ತ್ಯಾಗದಲಿ ಮೈಸೂರ ಕೃಷ್ಣಮಹಾರಾಜೇನೊ
ಭೋಗದಲಿ ಕಿತ್ತೂರ ಮಲ್ಲೆಂದ್ರನೇನೊ ॥೩॥

ಕೋಪದಲಿ ನಿಪ್ಪಾಣಿ ಅಪ್ಪಾಸಾಹೇಬನೇನೊ
ರೂಪದಲಿ ಸವಣೂರ ನವಾಬನೇನೊ
ಚಾಪಲ್ಯತನದೊಳಗೆ ಇಂಗ್ರೇಜಿಯವರೇನೊ
ಕಾಪಟ್ಯದಲಿ ದೇವಲಪುರದ ಕುಲಕರ್ಣಿಯೇನೊ ॥೪॥

ಕುಶಲದೊಳು ಕುಮ್ಮಟಗಿ ಸಂಗಪ್ಪನವರೇನೊ
ಕಸುವಿನೊಳು ಗಾಣಿಗರ ಲಿಂಗಪ್ಪನೇನೊ
ರಸಿಕತನಕೊಳಸಂಗ ಜಿಗಜಿನ್ನಿಯವರೇನೊ
ವಸುಧೆಪತಿ– ಮೌನಿಪುರ ಶಿವಲಿಂಗನೇನೊ ॥೫॥

ಇದರಲ್ಲಿ ಬಂದಿರುವ ವಿವಿಧ ವ್ಯಕ್ತಿಗಳು ಕಳೆದ ಶತಮಾನದಲ್ಲಿ ನಮ್ಮ ನಾಡಿನಲ್ಲಿಯೇ ಹುಟ್ಟಿ ಬದುಕಿದವರು. ಅಂದಿನ ಜನತೆಯ ಬಾಯಿಯಲ್ಲಿ ನೆಲೆಗೊಂಡವರು ; ಒಂದೊಂದು ವಿಷಯದಲ್ಲಿ ಪ್ರಸಿದ್ಧಿಯನ್ನು ಪಡೆದವರು.

ಲಾಳಿ ರುದ್ರಪ್ಪಯ್ಯನವರು ಸವದತ್ತಿಯ ಓರ್ವ ವೀರಶೈವ ಸ್ವಾಮಿಗಳು ; ಪ್ರವಚನಗಳಲ್ಲಿ ಅವರ ಬುದ್ಧಿವಂತಿಕೆ ಎದ್ದು ತೋರುವಂತಿದ್ದಿತು. ಕ್ರಿ.ಶ. ೧೮೬೦ರ ಸುಮಾರಿಗೆ ಅವರು ಲಿಂಗೈಕ್ಯರಾದರು. ಅಡಿವೆಪ್ಪನವರ ಮಠವು ಇಂದಿಗೂ ಅಂಕಲಗಿಯಲ್ಲಿದೆ. ಇವರೇ ಅದರ ಮೂಲಪುರುಷರು. ಆಗಿನ ಕಾಲಕ್ಕೆ ೫೦೦– ೧೦೦೦ ಜನರಿಗೆ ಮಠದಲ್ಲಿ ನಿತ್ಯ ದಾಸೋಹ. ಮಠದಲ್ಲಿ ಆನೆ ಕುದುರೆಗಳ ಸಹಿತವಾದ ವೈಭವ. ಆದರೆ ಅಡಿವೆಪ್ಪನವರು ಸ್ವತಃ ಮಿತಭಾಷಿಗಳು. ಮಿತಾಹಾರಿಗಳು. ಅವರ ಧಾರ್ಮಿಕ ಶ್ರದ್ಧೆ ಆಗಿನ ಕಾಲಕ್ಕೆ ಮನೆಮಾತಾಗಿರಬೇಕು.

ಮೂರನೆಯ ವ್ಯಕ್ತಿ ಸಿದ್ಧಲಿಂಗಾರ್ಯ ಯತಿಗಳು. ಹುಬ್ಬಳಿಯ ಮೂರುಸಾವಿರ ಮಠದವರು. ಕಳೆದ ಶತಮಾನದಲ್ಲಿ ವೀರಶೈವ-ಬ್ರಾಹ್ಮಣರ ನಡುವೆ ಎದ್ದ ಒಂದು ಪ್ರಕರಣವನ್ನು ಜಿದ್ದಿನಿಂದ ಕೋರ್ಟಿನ ತನಕ ಒಯ್ದವರು.

ಪಟದಪ್ಪನವರು ಕಾಶಿಗೆ ಹೋಗಿ ಬಂದ ಮೇಲೆ ವಿಶ್ವೇಶ್ವರನಲ್ಲಿ ಪರಮ ಭಕ್ತಿಯನ್ನಿರಿಸಿಕೊಂಡಿದ್ದರು. ಇನ್ನೊಬ್ಬ ಶಿವಭಜಕರು, ಹಾರೋಬೀದಿಯ ತಮ್ಮಪ್ಪನವರು. ಇತ್ತ ಸಾಲಪ್ಪ ಎಂಬವರ ನಿಜವಾದ ಹೆಸರು ಶಿವಲಿಂಗಯ್ಯ. 'ಅಯ್ಯನವರ ಶಾಲೆ'ಯನ್ನು ಸ್ಥಾಪಿಸಿ ನಡೆಸುತ್ತಿದ್ದುದರಿಂದ ಸಾಲೆಪ್ಪನವರಾದರು. ಅವರ ಮಗ ಚನವೀರಯ್ಯ ಎಂಬವನು ಫ್ಲೀಟರ ಕಾಲಕ್ಕೆ ಮುನವಳ್ಳಿಯಲ್ಲಿ ಶಿಕ್ಷಕನಾಗಿದ್ದ.

'ಕವಿತೆಯಲಿ ಲೋಕೇಶ ಮನೆತಾನ.' ಹೌದು. ಕವಿತೆ ಕಟ್ಟುವುದು ಈ ಮನೆತನಕ್ಕೆ ಅನುವಂಶಿಕವಾಗಿ ಬಂದಿದ್ದಿತು. ಮೂಲತಃ ಕಿತ್ತೂರಿನಲ್ಲಿ ನೆಲಗೊಂಡಿದ್ದ ಇವರು, ದೇಸಗತಿ ಅಳಿದ ಮೇಲೆ ಮುಗುಟಖಾನಹುಬ್ಬಳ್ಳಿ ಊರಲ್ಲಿ ವಾಸವಾಗಿದ್ದರು. ಫ್ಲೀಟರ ಸಮಕಾಲೀನರಾಗಿದ್ದ ಈ ಮನೆತನದ ಕವಿಗಳ ಹೆಸರು ರುದ್ರಪ್ಪ ಮತ್ತು ಕರಬಸಪ್ಪ. ಇವರು ಮೈಸೂರ ತನಕ ಹೋಗಿ ಮುಮ್ಮಡಿ ಕೃಷ್ಣರಾಜರಿಂದ ಕಾಣಿಕೆ ಪಡೆದಿದ್ದರಂತೆ. ಇವರಲ್ಲಿ ಯಾರೇ ಕವಿತೆ ರಚಿಸಲಿ, ಲೋಕೇಶ ಅಥವಾ ಲೋಕನಾಥ ಎಂಬ ಮುದ್ರಿಕೆ ಇರುತ್ತಿತ್ತು.

ಮೆಳೆಯಪ್ಪನವರ ವೀರಯ್ಯ ಬೈಲಹೊಂಗಲದವನು. ಉತ್ತಮ ಹಾಡುಗಾರ. ಅದಕ್ಕಾಗಿ ಕಿತ್ತೂರು, ವಂಟಮುರಿ, ಕೌಜಲಗಿ ಮುಂತಾದ ಊರುಗಳ ದೇಸಾಯಿಯವರಿಂದ ಇನಾಮು ಜಮೀನು ದೊರೆತಿತ್ತು. ಇತ್ತ ಸೊಲ್ಲಾಪುರ ಜಿಲ್ಲೆಯ ಒಂದು ಊರಿನಲ್ಲಿದ್ದ ಗೊಂಗಡಿಯ ತಾತಪ್ಪ ಯಾವ ರೀತಿಯಲ್ಲಿ ಭಾಗ್ಯವಂತನಿದ್ದನೆಂಬುದು ತಿಳಿಯದು.

ತಮ್ಮ ದೀರ್ಘಕಾಲದ ರಾಜ್ಯಭಾರದಲ್ಲಿ ಮುಮ್ಮಡಿ ಕೃಷ್ಣರಾಜರು ಮಾಡಿದ ದಾನ-ಧರ್ಮಕಾರ್ಯವು ಚಿರಪರಿಚಿತವಾದದ್ದೇ. ನಿಜಕ್ಕೂ ಅವರು ಕೊಡುಗೈ ದೊರೆಗಳು. ಅದೆಷ್ಟು ಜನ ವಿದ್ವಾಂಸರಿಗೆ, ಕಲಾವಿದರಿಗೆ, ಧಾರ್ಮಿಕರಿಗೆ ಅವರು ದಾನವೆಸಗಿದ್ದರು! 'ಕೃಷ್ಣರಾಜ ಭೂಪ, ಮನೆಯಲ್ಲಿ ದೀಪ' ಎಂಬುದು ಹಳೆಯ ಮೈಸೂರಿನಲ್ಲಿ ನಾಣ್ಣುಡಿಯಾಗಿತ್ತು. ಆದರೆ ಅವರ ದಾನವು ಮೈಸೂರಿಗಷ್ಟೇ ಸೀಮಿತವಾಗಿರಲಿಲ್ಲ. ಉಳಿದ ವಿಷಯಗಳಲ್ಲಿ ಸ್ಥಳಿಕ ವ್ಯಕ್ತಿಗಳನ್ನು ಎತ್ತೆಣಿಸಿದ ಈ ಜಾನಪದ ಕವಿ, ತ್ಯಾಗದ ಮಾತು ಬಂದಾಗ ಮುಮ್ಮಡಿಯವರನ್ನು ನೆನೆದುದು ವಿಶೇಷದ ಸಂಗತಿಯಾಗಿದೆ. ಇನ್ನೊಂದು ಸೋಜಿಗವೆಂದರೆ, ಮುಮ್ಮಡಿಯವರು ದಾನವಿತ್ತ ಮೊತ್ತದ ಅಂದಾಜನ್ನು ಅದುವರೆಗೆ ಇನ್ನಾರೂ ಮಾಡದಿದ್ದಾಗ, ನಮ್ಮ ಫ್ಲೀಟರು ಆ ಕೆಲಸ ಮಾಡಿದ್ದಾರೆ; ಸುಮಾರು ೨೫ ಕೋಟಿ ರೂಪಾಯಿ!

ಅನಂತರದ ಹೆಸರು ಮಲ್ಲೇಂದ್ರನದು; ಅರ್ಥಾತ್ ಕಿತ್ತೂರಿನ ಮಲ್ಲಸರ್ಜ ದೊರೆ; ಕಿತ್ತೂರ ಚೆನ್ನಮ್ಮನ ಪತಿ. ಅಪ್ಪಾಸಾಹೇಬನು ನಿಪ್ಪಾಣಿಯ ಸಂಸ್ಥಾನಿಕನಾಗಿದ್ದ. ತನ್ನ ಮುಂಗೋಪದ ನಡತೆಯಿಂದಾಗಿ ತನ್ನ ರಾಜ್ಯಕ್ಕೆ ಎರವಾದ. ಸವಣೂರಿನ ನವಾಬರ ಸುಸ್ವರೂಪವು ಈಚಿನವರೆಗೂ ಪ್ರಸಿದ್ಧಿಯನ್ನು ಪಡೆದಿತ್ತು. ಆದರೆ ಈ ಬಣ್ಣನೆ ಫ್ಲೀಟರ ಕಾಲಕ್ಕೆ ಇದ್ದವನದಲ್ಲ ; ಅವನ ಅಜ್ಜನದು. ಇಂಗ್ಲಿಷ್ ಜನರ ಚಾಪಲ್ಯತನದ ಬಗ್ಗೆ ಎರಡು ಮಾತಿಲ್ಲ ; ಅದನ್ನು ಚೆನ್ನಾಗಿ ಗ್ರಹಿಸಿದ್ದ ಈ ಕವಿಯ ಜಾಣ್ಮೆ ಮೆಚ್ಚುವಂತಹದು.

ದೇವಲಪುರದ ಕುಲಕರ್ಣಿಯ ಕಾಪಟ್ಯದ ಪ್ರಕರಣವು ಮಾತ್ರ ರೋಚಕವಾದುದು. ಆ ಘಟನೆ ಹೀಗಿದೆ: ಇವನ ನಿಜವಾದ ಹೆಸರು ಮಲ್ಲಪ್ಪ, ಹದಿಹರೆಯದವನಿದ್ದಾಗ ತನ್ನ ತಾಯಿ, ಸಂಬಂಧಿಕರೊಡನೆ ಜಗಳಾಡಿ ಹುಟ್ಟೂರನ್ನು ಬಿಟ್ಟು ಪುಣೆಗೆ ನಡೆದ. ಅಲ್ಲಿಯ ಒಂದು ಬಾವಿಕಟ್ಟೆಯ ಮೇಲೆ ಕುಳಿತಾಗ, ನೀರು ಸೇದುತ್ತಿದ್ದ ಇಬ್ಬರು ಹೆಣ್ಣುಮಕ್ಕಳು ತಂತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಮಧ್ಯೆ ಇವನ ಕಡೆಗೆ ನೋಡುತ್ತಿದ್ದರು. ಮಲ್ಲಪ್ಪ ಅವರ ಮಾತಿನತ್ತ ತುಸು ಲಕ್ಷ್ಯವಿಟ್ಟಾಗ, ಓರ್ವ ಪುಣೆಯ ನಿವಾಸಿ ೪-೫ ವರ್ಷಗಳ ಹಿಂದೆ ಇದೇ ರೀತಿ ಮನೆಬಿಟ್ಟು ಹೋದದ್ದು, ತಾನು ಅವನಂತೆಯೇ ಕಾಣುತ್ತಿದ್ದದ್ದು ತಿಳಿದುಬಂತು. ಮರುದಿನ ಬೇಕೆಂದೇ ತುಸು ದೂರದಲ್ಲಿ ಕುಳಿತ. ಆಗ ಈ ಮುಂಚೆ ಓಡಿಹೋದವನ ತಾಯಿ ಬಂದು ಇವನನ್ನು ಟಕಮಕ ನೋಡಿದಳು. ಅವಳ ವೇಷಭೂಷಣಗಳು ಆಕೆ ಸಿರಿವಂತೆಯೆಂಬುದನ್ನು ಸೂಚಿಸುತ್ತಿದ್ದವು. "ಯವ್ವಾ ಮತ್ಯಾಕ ಬಂದು ನನ್ನನ್ನು ಕಾಡುತ್ತೀ?" ಎಂದು ಮುಂದಾಗಿ ಮಲ್ಲಪ್ಪನೇ ಮಾತನಾಡಿಸಿದ! ಒಬ್ಬನೇ ಮಗನನ್ನು ಹೆತ್ತಿದ್ದ ಆ ತಾಯಿಯ ಕುರುಡು ಕಕ್ಕುಲಾತಿಗೆ ಆತ ಬೇರೊಬ್ಬನೆಂಬುದು ಅರಿವಾಗಲಿಲ್ಲ. ಅನಂತರ ಮಲ್ಲಪ್ಪ ಮಗ್ಗಲಿನ ಹಳ್ಳಿಗೆ ಹೋಗಿ, ಅವರಿವರೆದುರು, ತನ್ನ ತಾಯಿ ಹುಡುಕಿಸಿ ಮನೆಗೆ ಕರೆದಳೆಂದೂ ತಾನು ಹೋಗಲಿಲ್ಲವೆಂದೂ ಹೇಳಿಕೊಂಡ. ಸರಿ; ಈ ಸುದ್ದಿಯೂ ಆ ತಾಯಿಗೆ ಮುಟ್ಟಿತು. ಈ ಬಾರಿ ಅಕೆ ತನ್ನ ಎಳೆಯ ಸೊಸೆಯನ್ನೂ (ಬಾಲ್ಯಕಾಲದ ಮದುವೆಯದು) ಕರೆತಂದಿದ್ದಳು. ಮಲ್ಲಪ್ಪ ಮುರುಕ ಮಾಡಿದ; ಕೊನೆಗೆ ಅವರ ಮೇಲೆ ಉಪಕಾರ ಮಾಡುವವರಂತೆ, ಮನೆಗೆ ಹೋದ. ಹಿಂದಿನ ಸ್ಥಿತಿಗತಿಯನ್ನು ಸೂಕ್ಷ್ಮವಾಗಿ ಅರಿತುಕೊಂಡು, ತನ್ನ ನಿಜ ಸಂಗತಿ ಒಂದಿಷ್ಟೂ ತಿಳಿಯದಂತೆ ಎಚ್ಚರ ವಹಿಸಿದ. ಸಂಸಾರ ಮಾಡತೊಡಗಿದ- ಓಡಿ ಹೋದವನ ಹೆಂಡತಿಯೊಡನೆ. ಮಕ್ಕಳೂ ಆದವು. ೧೦-೧೧ ವರ್ಷಗಳ ಕಾಲ ವೈಭವದಿಂದ ಈ ರೀತಿಯಾಗಿ ಜೀವನ ಸಾಗಿಸಿದ ಮಲ್ಲಪ್ಪನಲ್ಲಿ ಕಾಪಟ್ಯದ ಜೊತೆಗೆ ಭಂಡತನವೂ ಸಾಕಷ್ಟು ಇದ್ದಿತೆನ್ನಬೇಕು.

ಅವನ ದುರ್ದೈವಕ್ಕೆ ಒಮ್ಮೆ ಅವನ ನಿಜ ತಾಯಿ ಪುಣೆಗೆ ಬಂದಿದ್ದಳು. ಈತ ತನ್ನ ಕುಟುಂಬದವರೊಡನೆ ಹೊರಟಾಗ ಅವಳ ಕಣ್ಣಿಗೆ ಬೀಳಬೇಕೆ? "ಎಲಾ ಮಲ್ಲ್ಯಾ!

ಇಲ್ಲಿ ಅದಿಯೇನು?" ಎಂದಳು. ಏನೂ ಪರಿಚಯವಿಲ್ಲದವರಂತೆ ಈತ ನಟಿಸಲು ಪ್ರಯತ್ನ ಮಾಡಿದರೂ ಪ್ರಯೋಜನವಾಗಲಿಲ್ಲ. ನಿಜ ಸಂಗತಿ ತಿಳಿದ ಮೇಲೆ ಮಲ್ಲಪ್ಪನನ್ನು ಆ ಮನೆಬಿಟ್ಟು ಓಡಿಸಲಾಯಿತು. ಮುದುಕನಾದ ಮೇಲೆ ಮಲ್ಲಪ್ಪ ಕೆಲವೇ ವರ್ಷಗಳ ಹಿಂದೆ ತೀರಿ ಹೋದನೆಂಬುದಾಗಿ ಫ್ಲೀಟ್ ತಮ್ಮ ಟಿಪ್ಪಣಿಯಲ್ಲಿ ಹೇಳಿದ್ದಾರೆ.

ಹಾಡಿನಲ್ಲಿ ಬರುವ ಇನ್ನುಳಿದ ವ್ಯಕ್ತಿಗಳನ್ನು ನೋಡೋಣ. ಕುಮ್ಮಟಗಿ ಸಂಗಪ್ಪನ ಕುಶಲತೆ ಚದುರಂಗದ (ಬುದ್ಧಿಬಲ) ಆಟದಲ್ಲಿ ವ್ಯಕ್ತವಾಗಿದ್ದಿತು. ಗಾಣಿಗರ ಲಿಂಗಪ್ಪನ ಕಸುವಿನ ಪ್ರಸ್ತಾಪ ನೋಡಿದರೆ ಆತ ಕುಸ್ತಿಯ ಪೈಲವಾನನಿರಬೇಕೆಂದು ತೋರುತ್ತದೆ. ರಸಿಕತನದ ವಿಚಾರದಲ್ಲಿ ಆಗಿನ ಕಾಲದಲ್ಲಿ ವಳಸಂಗ ಮತ್ತು ಜಿಗಜಿನ್ನಿ ಎಂಬೆರಡು ಮನೆತನಗಳು ಹೆಸರಾಗಿದ್ದುವು. ಕೊನೆಯಲ್ಲಿರುವುದು ಮೌನಿಪುರ ಶಿವಲಿಂಗ ಎಂಬ ಕವಿಯ ಮುದ್ರಿಕೆ. (ಮೌನಿಪುರ ಎಂದರೆ ಮುನವಳ್ಳಿಯೆ?)

ಕಳೆದ ಶತಮಾನದಲ್ಲಿ ಬಾಳಿದ ರಾಜಕೀಯ ವ್ಯಕ್ತಿಗಳ, ಕವಿ-ಲೇಖಕರನೇಕರ ಹೆಸರುಗಳು ಕೇಳಬಂದಿವೆ. ಆದರೆ ಈ ಜಾನಪದ ಗೀತೆಯಲ್ಲಿ ಬಂದಿರುವವರು ಸಾಮಾಜಿಕ ಪ್ರಸಿದ್ಧಿಯನ್ನು ಪಡೆದವರಾಗಿದ್ದರು.

## ಅನುಬಂಧ – 7

# 19ನೆಯ ಶತಮಾನದ ಇನ್ನು ಕೆಲವು ಹರಿದಾಸರು

'ಹರಿದಾಸರ ಪೀಳಿಗೆ' ಎಂಬ ಮಾತು ರೂಢವಾದದ್ದು ವಿಜಯದಾಸರ ಅನಂತರದಿಂದ. ಅವರ ಅನೇಕ ಶಿಷ್ಯರಲ್ಲಿ ಗೋಪಾಲದಾಸರು, ಮೋಹನದಾಸರು, ಜಗನ್ನಾಥದಾಸರು ಇವರು ಒಬ್ಬೊಬ್ಬರೂ ಮಹಾನ್ ವ್ಯಕ್ತಿಗಳು. ಪರಿಣಾಮವಾಗಿ ಅವರಿಗೆ ಶಿಷ್ಯ, ಪ್ರಶಿಷ್ಯರು ಹುಟ್ಟಿಕೊಂಡು ಹರಿದಾಸ ವೃಕ್ಷ ವಿಶಾಲವಾಗಿ ಬೆಳೆಯಿತು. ಜಗನ್ನಾಥದಾಸರ ಶಿಷ್ಯವರ್ಗ ೧೯ನೆಯ ಶತಮಾನದಲ್ಲಿ ದಾಂಗುಡಿ ಬಿಟ್ಟದ್ದನ್ನು ಮುಖ್ಯ ಪ್ರಕರಣದಲ್ಲಿ ತೋರಿಸಿದೆ.

ಅವರಿಗಿಂತ, ವಿಜಯದಾಸರ ಹಿರಿಯ ಶಿಷ್ಯರಾಗಿದ್ದ ಗೋಪಾಲದಾಸರಿಂದ ದಾಸ ವಾಙ್ಮಯ ಬಹುವಾಗಿ ಹರಡಿ ಅವರಿಂದ, ಗುರುಗೋಪಾಲದಾಸರು, ತಂದೆ ಗೋಪಾಲದಾಸ, ಕೇಶವವಿಠಲ ಮೊದಲಾದವರು ದಾಸ ದೀಕ್ಷೆ ಪಡೆದಿದ್ದರು. ವಿಶೇಷದ ಸಂಗತಿಯೆಂದರೆ ಅವರ ಕಾರಣದಿಂದಾಗಿ, ಮೈಸೂರು, ಬೆಂಗಳೂರು, ಕೋಲಾರ ಕಡೆಗಳಲ್ಲಿಯ ಕೆಲವರು ಅವರ ಶಿಷ್ಯತ್ವವನ್ನು ಹೊಂದಿ, ದಾಸಸಾಹಿತ್ಯದ ಹಬ್ಬುಗೆಗೆ ಕಾರಣರಾದರು. ಹಾಗೆ ಎದ್ದುಕಾಣುವ ಹೆಸರು ದೊಡ್ಡಬಳ್ಳಾಪುರದ ಮುದ್ದುಮೋಹನ ವಿಠಲರದು (೧೮೩೮–೧೮೯೪) ಅವರಲ್ಲದೆ ಅವರ ನೇರ ಶಿಷ್ಯರಾಗಿದ್ದ ಪರಮಪ್ರಿಯ ಸುಬ್ಬರಾಯದಾಸರು ಆ ಭಾಗದಲ್ಲಿ ತುಂಬಾ ಪ್ರಸಿದ್ಧರಾಗಿದ್ದರು.

'ಪೀಳಿಗೆ' ಎಂಬುದಕ್ಕೆ ಅನ್ವಯವಾಗದೇ, ಹಿರಿಯ ದಾಸರಿಂದ ಪ್ರೇರಣೆ ಪಡೆದಿದ್ದ ಇಲ್ಲವೆ ಪ್ರಭಾವಿತರಾಗಿದ್ದ ಕೆಲವು ಹರಿದಾಸರು ನಾಡಿನ ದಕ್ಷಿಣ ಭಾಗದಲ್ಲಿ ಕಂಡು ಬರುತ್ತಾರೆ. ಅವರಲ್ಲಿ ಬಾಗೇಪಲ್ಲಿಯ ಗುರುರಾಮವಿಠಲರು, ತುರುವೇಕೆರೆಯ ಬ್ಯಾಟರಾಯ ದೀಕ್ಷಿತರು, ಹುಲ್ಲಹಳ್ಳಿಯ ರಾಮಣ್ಣ, ಮೈಸೂರಿನ ಅಟ್ಟಾಜಿ ವೆಂಕಟರಮಣಾಚಾರ್ (ಜಯೇಶವಿಠಲ ಮುದ್ರಿಕೆಯವರು) (೧೮೫೦–೧೯೩೫), ಇವರುಗಳ ಕೀರ್ತನೆಗಳು ವಿಶೇಷ ಬಳಕೆಯಲ್ಲಿದ್ದುವು. ಗುರುರಾಮವಿಠಲರ ರಚನೆಗಳ ಸಂಖ್ಯೆಯೂ ದೊಡ್ಡದು. ತೃಣಪುರೀಶ (=ಹುಲ್ಲಹಳ್ಳಿ) ಮುದ್ರಿಕೆಯನ್ನಿಟ್ಟುಕೊಂಡಿದ್ದ ರಾಮಣ್ಣ (ತಂದೆ ವೆಂಕಟಸುಬ್ಬಯ್ಯ) ಮೈಸೂರಿನಲ್ಲಿ ಉಪಾಧ್ಯಾಯ ವೃತ್ತಿಯಲ್ಲಿದ್ದರು. ನಾಟ್ಯ ಸಂಗೀತವನ್ನು ಬಲ್ಲವರಾಗಿ ಹರಿಕಥೆ ಮಾಡುವುದರಲ್ಲಿ ಹೆಸರು ಗಳಿಸಿದ್ದರು. ಜಯೇಶವಿಠಲರು

ವಿದ್ವಾಂಸರಾಗಿದ್ದು ಅವರ ತಾತ್ವಿಕ ನಿಲುವನ್ನು ಕುರಿತು ಎಂ. ಹಿರಿಯಣ್ಣನಂತಹವರು ಇಂಗ್ಲಿಷ್‌ನಲ್ಲಿ ಲೇಖ ಬರೆದದ್ದುಂಟು.

ತಿಳಿಯಬೇಕಾದ ಮಾತೆಂದರೆ ಅದ್ವೈತ ದಾಸರು ಅಲ್ಲಲ್ಲಿ ಸಮಗೆ ಕಾಣಿಸುತ್ತಾರೆ. ಉತ್ತರ ಕರಾವಳಿಯಲ್ಲಿದ್ದ ಕರ್ಕಿ ಕೇಶವದಾಸರು, ಭಟ್ಕಳ ಅಪ್ಪಯ್ಯ ಮೊದಲಾದವರನ್ನು ಈ ಹಿಂದೆ ಗಮನಿಸಿದ್ದೇವೆ. ಬೇಟೆರಾಯ ದೀಕ್ಷಿತರೂ (೧೮೬೬-೧೯೩೭) ಇದೇ ವರ್ಗದಲ್ಲಿ ಬರುತ್ತಾರೆ. (ಧೇನುಕಪುರಾಧೀಶ-ಎಂಬುದು ಅವರ ಮುದ್ರಿಕೆ)

ಉಡುಪಿಯ ಆಸುಪಾಸಿನಲ್ಲಿ ಹರಿದಾಸರು ಹೆಚ್ಚಾಗಿ ಕಾಣಸಿಗಬೇಕು. ಆದರೆ ಶ್ರೀ ವಾದಿರಾಜರ ಅನಂತರ (೧೬ನೆಯ ಶತ.) ವರಾಹತಿಮ್ಮಪ್ಪ ಎಂಬುವರನ್ನು ಬಿಟ್ಟರೆ, ೧೯ನೆಯ ಶತಮಾನದಲ್ಲಿಯೇ ಕೆಲವು ಹರಿದಾಸರು ಗೋಚರಿಸುತ್ತಾರೆ. 'ರಾಜೇಶಹಯಾಸ್ಯ' ಮುದ್ರಿಕೆಯ ಶ್ರೀ ವಿಶ್ವೇಂದ್ರತೀರ್ಥರು ಸೋದೆಯ ಶ್ರೀ ವಾದಿರಾಜ ಮಠದ ಪರಂಪರೆಯವರೇ. ಪಾವಂಜೆ ಲಕ್ಷ್ಮೀನಾರಾಯಣಪ್ಪಯ್ಯ ಮಾತ್ರ ಹರಿಕಥಾ ಕಾಲಕ್ಷೇಪ ವೃತ್ತಿಯಲ್ಲಿದ್ದುಕೊಂಡು, ಆ ನಿಮಿತ್ತದಿಂದ ಅನೇಕ ಕೀರ್ತನೆಗಳನ್ನು ರಚಿಸಿ ಹೆಸರು ಪಡೆದಿದ್ದರು. ಅದರಂತೆ ತಿರುಪತಿಯ ವೆಂಕಟೇಶನ ಭಕ್ತರಾಗಿದ್ದ ತುಪಾಕಿ ವೆಂಕಟರಮಣಾಚಾರ್ಯರ ಹೆಸರು ತೀರ ಅಪರಿಚಿತವಾದದ್ದು. ಅವರ ೩೦೦ಕ್ಕೂ ಮೇಲ್ಪಟ್ಟು ಹಾಡುಗಳನ್ನು ೧೮೮೦ನೆಯ ದಶಕದಲ್ಲಿ ಅವರ ತಮ್ಮಂದಿರು ಪ್ರಕಟಮಾಡಿದ್ದಾರೆ. ಅಚ್ಚರಿಯೆಂದರೆ ಐತ್ತರೇಯರಾದ ಜಗನ್ನಾಥದಾಸರ ಹರಿಕಥಾಮೃತಸಾರದಿಂದ ಅವರು ಪ್ರೇರಣೆ ಪಡೆದದ್ದು. ಬೆಳ್ಳಿ ದಾಸಪ್ಪಯ್ಯ, ಗುರು ಸದಾನಂದ (ಪಣಂಬೂರಿನರು) ಮೊದಲಾದವರ ಕೃತಿಗಳು ಆ ಭಾಗದಲ್ಲಿ ಪ್ರಚಾರದಲ್ಲಿದ್ದುವು. ಕೆಲವು ಸಾರಸ್ವತರೂ ಹರಿದಾಸರಿದ್ದುದಕ್ಕೆ ಮಟ್ಟಿ ವಾಸುದೇವ ಪ್ರಭುಗಳ ಹೆಸರನ್ನು ಉದಾಹರಣೆಯಾಗಿ ಇಲ್ಲಿ ಕಾಣಿಸಬಹುದು.

ಧಾರವಾಡ ಜಿಲ್ಲೆಯಲ್ಲಿ ತಡವಾಗಿಯೇ ದಾಸವೃಕ್ಷ ಪಲ್ಲವಿಸಿತೆನ್ನಬೇಕು. ಜಗನ್ನಾಥದಾಸರಿಂದ ದೀಕ್ಷಾನ್ವಿತರಾದ, ಕರ್ಜಗಿಯ ಶ್ರೀಪಾದವಿಠಲರೇ ಆರಂಭಕಾರರು. ಇವರ ಶಿಷ್ಯ-ಪ್ರಶಿಷ್ಯರು ಕೆಲವರು ಅಗಿಹೋದರು. ಇತ್ತ ಧಾರವಾಡ ಶಹರದ ದೀಪದ ಅಣ್ಣಯ್ಯ, ಅದರಂತೆ ಕದರಮಂಡಲಗಿಯ ದಾಸರುಗಳನ್ನು ಈಗಾಗಲೇ ಗಮನಿಸಿದ್ದೇವೆ. ಆದರೆ ಅನಿರೀಕ್ಷಿತವಾದ ರೀತಿಯಲ್ಲಿ ಕಳಸ ಎಂಬ ಊರಿನಲ್ಲಿ ಒಂದು ದಾಸಪೀಳಿಗೆ ಕೆಲಸ ಮಾಡುತ್ತಿದ್ದುದ್ದು ಈಚೆಗೆ ನಾನು ಅಲ್ಲಿಗೆ ಹೋದಾಗ ಕಂಡುಕೊಂಡೆ. ಅದೊಂದು ಪಾಟೀಲ ಮನೆತನ: ಅಲ್ಲಿಯ ಪ್ರಹ್ಲಾದಗೌಡರಿಗೆ ದಾಸಸಾಹಿತ್ಯದಲ್ಲಿ ಆಸಕ್ತಿ ಹುಟ್ಟಿತು. ಗೋಪಾಲದಾಸ ಮೊದಲಾದವರ ಕೃತಿಗಳನ್ನು ಬರೆದುಕೊಂಡು ಮನನ ಮಾಡುತ್ತಿದ್ದರು. 'ತಂದೆ ವರದಗೋಪಾಲ ವಿಠಲ' ಎಂಬ ಮುದ್ರಿಕೆಯಿಂದ ಹಾಡುಗಳನ್ನು ರಚಿಸಿದರು. ಬರೆದಾದ ಮೇಲೆ ಹಾಡುತ್ತ ಇದ್ದರು. ಕಳಸವನ್ನು ಬಿಟ್ಟು ಅವು ಹೊರಗೆ ಹೋಗಲೇ

ಇಲ್ಲ. ಅವರ ಬಳಗದ ಶ್ರೀನಿವಾಸ, ರಾಘವಗೌಡರೂ ದಾಸದೀಕ್ಷೆ ವಹಿಸಿದ್ದರು. ಪ್ರಹ್ಲಾದಗೌಡರ ತಂಗಿ ಸುಂದರಮ್ಮ (ಮುದ್ರಿಕೆ, ಕಾಲಿಯಾಮರ್ದನ ಕೃಷ್ಣ) ಮದುವೆಯಾದ ಮೇಲೆ ಮೈಸೂರಲ್ಲಿ ನೆಲಸಿದ್ದಳು. ಇವರೆಲ್ಲ ಸೋದೆ ಶ್ರೀ ವಾದಿರಾಜರಲ್ಲಿ ವಿಶೇಷ ಭಕ್ತಿಯನ್ನಿಟ್ಟುಕೊಂಡವರು.

೧೯ನೆಯ ಶತಮಾನದ ದಾಸವರ್ಗದ ವೈಶಿಷ್ಟ್ಯವೆಂದರೆ ಅವರೆಲ್ಲ ಸರಕಾರೀ ನೌಕರಿ ಇಲ್ಲವೆ ಮಾಸ್ತರಿಕೆ ಅಥವಾ ಯಾವದೊಂದು ವೃತ್ತಿಯಲ್ಲಿ ತೊಡಗಿದವರಿದ್ದರು. ಹಿಂದಿನವರಂತೆ ಗೆಜ್ಜೆ ಕಟ್ಟಿಕೊಂಡು, ತಾಳ ತಂಬೂರಿ ಹಿಡಿದುಕೊಂಡು ಬೀದಿಗಳಲ್ಲಿ ಹಾಡುತ್ತ ಸಂಚರಿಸ ಹೊರಟವರಲ್ಲ. ಬ್ರಿಟಿಶರ ರಾಜ್ಯಭಾರ ನೆಲೆಗೊಂಡು ಲೌಕಿಕ ವಾತಾವರಣ ಎಲ್ಲೆಡೆ ಹರಡಿದ್ದರ ಪರಿಣಾಮವಿದು. ಮತ್ತೊಂದು ಮಾತೆಂದರೆ ಹಿಂದಿನವರಂತೆ ಸಂಸ್ಕೃತ ಗ್ರಂಥಗಳನ್ನು ಆಳವಾಗಿ ಮನನ ಮಾಡಿದವರಲ್ಲ. ಹಾಗಾಗಿ ಅವರ ರಚನೆಗಳಲ್ಲಿ ಮೇಲ್ಮಟ್ಟವನ್ನು ಮುಟ್ಟಿದ ಹಾಡುಗಳ ಸಂಖ್ಯೆ ಕಡಿಮೆಯೇ. 'ಸ್ವಾಂತಸ್ಸುಖಾಯ' ಹಾಡುಗಳನ್ನು ರಚಿಸಿದ್ದರೆಂದಷ್ಟೇ ಗಮನಿಸಬೇಕು.

* * * * *

## ಅನುಬಂಧ 8

# ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು

| ಹೆಸರು | ಲೇಖಕ/ಅನುವಾದಕ | ವರ್ಷ | ಲಕ್ಷಣಗಳು |
|---|---|---|---|
| **(೧) ಅದ್ಭುತ ರಮ್ಯ / ಪೌರಾಣಿಕ** | | | |
| ಕಲಾವತೀಪರಿಣಯ | ಯಾದವ | ೧೮೧೫ | ಆದ್ಯ:ಸ್ವತಂತ್ರ, ಹಳಗನ್ನಡ |
| ಸೌಗಂಧಿಕಾಪರಿಣಯ | ಮುಮ್ಮಡಿ ಕೃಷ್ಣರಾಜರು | ೧೮೨೧ | ಪ್ರಥಮ ಬೃಹತ್ ಕಾದಂಬರಿ |
| ಬಾಣ ಕಾದಂಬರಿ | ತುರಮರಿ | ೧೮೭೫ | ಹೊಸಗನ್ನಡ ಗದ್ಯಶೈಲಿಗೆ ನಾಂದಿ |
| ಪದ್ಮನಯನಾ | ಗಳಗನಾಥ | ೧೮೯೮ | ಸತ್ವಪೂರ್ಣ. ಸ್ವೋಪಜ್ಞ ಕೃತಿ |
| ಕನ್ನಡ ಶೌರ್ಯಸಾಗರ | ಅರಳಿ ಗೂಳಪ್ಪ | ೧೮೯೯ | ಕಾಲ್ಪನಿಕ |
| **(೨) ಐತಿಹಾಸಿಕ** | | | |
| ಮುದ್ರಾಮಂಜೂಷ | ಕೆಂಪುನಾರಾಯಣ | ೧೮೨೩ | ಆದ್ಯ ಕೃತಿ. ಬಹುಮಟ್ಟಿಗೆ ಸ್ವತಂತ್ರ |
| ರಾಬಿನ್ ಸನ್ ಕ್ರೂಸೋ | ಕೃಷ್ಣಸ್ವಾಮಿ ಅಯ್ಯಂಗಾರ್ | ೧೮೫೪ | ಇಂಗ್ಲಿಷ್‌ನಿಂದ ಅನುವಾದ |
| ದುರ್ಗೇಶನಂದಿನಿ | ವೆಂಕಟಾಚಾರ್ | ೧೮೮೫ | ಬಂಗಾಲಿ ಪ್ರಥಮ ಕಾದಂಬರಿ |
| ಸೂರ್ಯಕಾಂತ | ಲಕ್ಷ್ಮಣರಾವ್ ಗದಗಕರ | ೧೮೯೨ | ಸ್ವತಂತ್ರ, ಐತಿಹಾಸಿಕ |
| [illegible] | ಶ್ರೀಕಂಠೇಶಗೌಡ | ೧೮೯೫ | ಇಂಗ್ಲಿಷ್‌ನಿಂದ (ಟೇಲರ್) |
| ಸಾಮಂತಿ ಮದನಕುಮಾರ ಚರಿತ್ರೆ | ಎಂ.ಎಸ್. ಪುಟ್ಟಣ್ಣ | ೧೮೯೫ | ಇಂಗ್ಲಿಷ್‌ನಿಂದ (ಡೇ) |
| ವಿವೇಕ ಚಂದ್ರಿಕೆ | ಸೋಮನಾಥಯ್ಯ | ೧೮೯೫ | ತೆಲುಗಿನಿಂದ ಪ್ರಥಮಾನುವಾದ |
| ಶೃಂಗಾರ ಚಾತುರ್ಯೋಲ್ಲಾಸಿನಿ | ಮುರಿಗಾರಾಧ್ಯ | ೧೮೯೬ | ದ್ವಿತೀಯ ಸ್ವತಂತ್ರ ಕೃತಿ |

## (೩) ಸಾಮಾಜಿಕ

| | | | |
|---|---|---|---|
| ಯಮುನಾಪರ್ಯಟನ | ಬಾಬಾ ಪದಮಂಜಿ | ೧೮೬೭ | ಮರಾಠಿಯಿಂದ ಪ್ರಥಮಾನುವಾದ |
| ಕೇಸರೀವಿಲಾಸ | ರೆಂಟಾಳ ಸುಬ್ಬರಾವ್ | ೧೮೯೫ | ತೆಲುಗಿನಿಂದ (ಅಥವಾ ಸ್ವತಂತ್ರ) |
| ಚೋರಗ್ರಹಣ ತಂತ್ರ | ಎಂ. ವೆಂಕಟಕೃಷ್ಣಯ್ಯ | ೧೮೯೭ | ಪ್ರಥಮ ಪತ್ತೇದಾರಿ |
| ಸುಕುಮಾರಿ | ಜೋಸೆಫ್ ಮುಳಿಯಲ್ | ೧೮೯೯ | ಮಲೆಯಾಳಿಯಿಂದ ಪ್ರಥಮಾನುವಾದ |
| ಇಂದಿರಾಬಾಯಿ | ಗುಳವಾಡಿ ವೆಂಕಟರಾಯ | ೧೮೯೯ | **ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿ** |
| ಸೀತೆ | ಜಿ. ರಾಘವೇಂದ್ರರಾಯ | ೧೯೦೨ | ದ್ವಿತೀಯ ಸ್ವತಂತ್ರ ಸಾಮಾಜಿಕ ಕಾದಂಬರಿ |

## ಅನುಬಂಧ 9

## ಐ.ಮಾ. ಮುತ್ತಣ್ಣ ಅವರ 'ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ'

**– ಗ್ರಂಥದಲ್ಲಿಯ ತಪ್ಪು-ತಡೆಗಳು**

ಈ ಗ್ರಂಥದಲ್ಲಿ ೨೫ ಅಧ್ಯಾಯಗಳಿವೆಯಾದರೂ ಒಂದಕ್ಕೂ ಶೀರ್ಷಿಕೆಯಿಲ್ಲ. ಅಲ್ಲದೆ, ಒಂದು ಅಧ್ಯಾಯದಿಂದ ಇನ್ನೊಂದು ಅಧ್ಯಾಯಕ್ಕೆ ಕ್ರಮಬದ್ಧವಾದ ಹೊಂದಿಕೆಯಿಲ್ಲ. ೧೭ನೆಯ ಅಧ್ಯಾಯವು 'ಕರ್ನಾಟಕದ ಅಂದಿನ ವ್ಯಾಪ್ತಿ ಮತ್ತು ಮೇರೆ'ಯಿಂದ ಆರಂಭವಾಗಿ, 'ವ್ಯಾಕರಣ ಗ್ರಂಥಗಳ ವರೆಗೆ ಬಂದು ನಿಲ್ಲುತ್ತದೆ. ಮುಂದೆ ೧೮ನೆಯ ಅಧ್ಯಾಯವು ಮತ್ತೆ 'ಕರ್ನಾಟಕ ಭೂಪಠ' ದಿಂದ ಆರಂಭವಾಗುತ್ತದೆ.

ಪ್ರತಿ ಅಧ್ಯಾಯದಲ್ಲಿ ಹಲವು ಉಪಶೀರ್ಷಿಕೆಗಳಿವೆ. ಇಲ್ಲಿಯ ಉಪಶೀರ್ಷಿಕೆಗಳು ಶಾಸ್ತ್ರೀಯ ಗ್ರಂಥಕ್ಕೆ ಸೂಕ್ತವಾದವುಗಳೇನಲ್ಲ. ಕೆಲವು ನಮೂನೆಗಳಿವು :

"ಭಾರತೀಯ ಮತ್ತು ಐರೋಪ್ಯಾ ವಿದ್ವಾಂಸರು ಬಿಕ್ಕಿ ಬಿಕ್ಕಿ ಅತ್ತರು." (ವಿಲಿಯಮ್ ಜೋನ್ಸನನ್ನು ಕುರಿತು) ಪು.೧೬೬. "ವಿಲಿಯಂ ಕ್ಯಾರಿ-ಇವನಾರು ಗೊತ್ತೆ ?" ಪು.೧೭೯ "ಎಲೊ ಯುವಕನೆ ಕುಳಿತುಕೊ ಎಂದು ಆರ್ಭಟಕೊಳಗಾದನು." ಪುಟ.೧೭೯. "ಮೋಕ್ಷಕ್ಕೆ ಮೂಲ-ಮ್ಯಾಕ್ಸ್ ಮುಲ್ಲರ್-ಭಾರತೀಯರಂದರು." ಪು. ೧೯೨. "ತನ್ನ ಜನಾಂಗವನ್ನೆ ತೆಗಳಿದರೂ ಕಲೆಯು ಕಲೆಗಾಗಿ-ಜಾನ್ ಫ್ಲೀಟ್." ಪು.೫೧೨.

ಪುಸ್ತಕದ ತುಂಬೆಲ್ಲಾ ಭಾಷಾದೋಷಗಳು, ಅಸ್ಪಷ್ಟ ವಿಚಾರಗಳು, ಪುನರುಕ್ತಿಗಳು ಹಾಗೂ ಅಚ್ಚಿನ ತಪ್ಪುಗಳು ಹರಡಿಕೊಂಡಿವೆ. ವಿಷಯ ಸಂಗ್ರಹಕ್ಕಾಗಿ "ದಕ್ಷಿಣ ಹಿಂದೂಸ್ಥಾನದ ಹಲವು ಪ್ರಧಾನ ಗ್ರಂಥಭಂಡಾರಗಳನ್ನು ಶೋಷಣೆ ಮಾಡಿದೆನು" ಎಂದು ನಿವೇದಿಸಿದ್ದಾರೆ. (ಪು. XII). 'ಶೋಧನೆ' ಮಾಡಿದೆನು ಎಂದು ಹೇಳಬಯಸಿದ್ದರೆಂದು ಕಾಣುತ್ತದೆ. ಮೆಕೆನ್ಸಿಯು 'ನೂರಾರು ದೇವಾಲಯಗಳನ್ನೂ ಬ್ರಾಹ್ಮಣ, ಜೈನ ಮತ್ತು ವೀರಶೈವ ಮಠಗಳನ್ನೂ ಪ್ರಾಚೀನ ಗ್ರಂಥಗಳಿಗಾಗಿ 'ಕೊಳ್ಳೆ ಹೊಡೆದೆನು' ಎಂದಿದ್ದಾರೆ! "ಫ್ಲೀಟ್ ಅವನು ಸಾಧಿಸಿದ ಅನ್ವೇಷಣೆಗಿಂತ ಎಷ್ಟೋ ಮಿಗಿಲಾಗಿ ಕರ್ನಾಟಕದ ಬಗ್ಗೆ ದುಡಿದನೆಂಬುದಕ್ಕೆ ಅವನ Epigraphia Carnatica ಮತ್ತಿತರ ಗ್ರಂಥಗಳೇ ಸಾಕ್ಷಿಯಾಗಿವೆ." (ಪು.೫೦೯). ಈ ವಾಕ್ಯದಲ್ಲಿ ಫ್ಲೀಟನ ಅದಾವ ಗುಣವನ್ನು ಎತ್ತಿ ಹಿಡಿಯಬಯಸಿದ್ದಾರೆಂಬುದು ಸ್ಪಷ್ಟವಾಗುವಂತಿಲ್ಲ. ಮೇಲಾಗಿ. E.C. ಯ ಸಂಪುಟಗಳು ಅವನ ಗ್ರಂಥಗಳೇ ಅಲ್ಲ! ಅವು ಬಿ.ಎಲ್.ರೈಸರವೆಂಬುದು ಸರ್ವವಿದಿತ.

ಈ ಗ್ರಂಥದಲ್ಲಿ ಅಗಣಿತವಾದ ಮಾಹಿತಿಯಿದೆಯಷ್ಟೆ. ಅವುಗಳಲ್ಲಿ ಒಂದಕ್ಕೂ ಆಕರವನ್ನು ಸೂಚಿಸದಿದ್ದುದು ಸೋಜಿಗದ ಸಂಗತಿಯಾಗಿದೆ. ಸಂಶೋಧನ ಗ್ರಂಥವೊಂದರಲ್ಲಿ ಆಕರಗಳನ್ನು ಹೇಳದೆ ಹೋದರೆ ಅದನ್ನು ಪ್ರಾಮಾಣ್ಯವೆಂದು ಒಪ್ಪಲು ಹಿಂದೆಮುಂದೆ ನೋಡಬೇಕಾಗುವುದು.

ಪಾಶ್ಚಾತ್ಯರ, ಅದರಂತೆ ದೇಶೀಯರ ಹೆಸರುಗಳನ್ನು ಬರೆಯುವಲ್ಲಿ ಅನೇಕ ತಪ್ಪುಗಳಾಗಿವೆ. ಬಾಲಾಚಾರ್ಯ [ಬಾಳಾಚಾರ್ಯ] ಸಕ್ಕರಿ, ಟುರಮುರಿ [ತುರಮರಿ], ಬಿ. ಹರಿ ಸಾಮಂತ [ಅಬಾಜಿ ಹರಿ ಸಾಮಂತ], ಧೊಂಡೊ ನರಹರಿರಾಯ [ಧೋಂಡೊ ನರಸಿಂಹ ಮುಳಬಾಗಲ], ರಂಗೋ ಕಟ್ಟಿ [ವೆಂಕಟ ರಂಗೋ ಕಟ್ಟಿ] ಇವನ್ನು ಓದುವಾಗ ಹಿಡಿದು ಬಿಟ್ಟಂತಾಗುತ್ತದೆ. ಕಿಟೆಲ್ಲರ ವಿಷಯದಲ್ಲಂತೂ ಅಪರಾಧವೇ ಆಗಿದೆ. ಸ್ವತಹ ಮುತ್ತಣ್ಣನವರಿಗೆ ಕನ್ನಡ ಸಾಹಿತ್ಯದಲ್ಲಿ ಅಭಿರುಚಿ ಹುಟ್ಟಿಸಲು ಕಾರಣರಾದ ಕಿಟೆಲರ ಹೆಸರು ಬಂದಲ್ಲೆಲ್ಲ, ಅವರನ್ನು ಫರ್ನಾಂಡಿಸ್ ಕಿಟೆಲ್ ಎಂದು ಕರೆದದ್ದಾಗಿದೆ. ಅವರ ಸುಪ್ರಸಿದ್ಧ ಕನ್ನಡ ಕೋಶವನ್ನು ಮೊದಲುಗೊಂಡು ಇನ್ನು ಹಲವು ಕೃತಿಗಳ ಮುಖಪುಟದಲ್ಲಿ 'ಫರ್ಡಿನಾಂಡ್' ಎಂಬುದು ಉಕ್ತವಾಗೇ ಇದ್ದರೂ ಮುತ್ತಣ್ಣನವರ ಗಮನಕ್ಕೆ ಅದು ಬರಲೇ ಇಲ್ಲ.

ಪುಸ್ತಕದ ಹೆಸರುಗಳನ್ನು ಹೇಳುವಾಗಲೂ ತುಂಬಾ ವಿಪರ್ಯಾಸಗಳು ಕಂಡುಬರುತ್ತವೆ. ವೆಂಕಟಾಧ್ವರಿಯ ಸುಪ್ರಸಿದ್ಧ ಸಂಸ್ಕೃತ ಕೃತಿಯಾದ 'ವಿಶ್ವಗುಣಾದರ್ಶ'ವು ಇಲ್ಲಿ 'ವಿಶ್ವಗುಂಡ ದರ್ಶನ'ವಾಗಿದೆ! ಕ್ಯಾಪ್ಟನ್ ಬೆಸ್ಟ್ ಇವನ 'ಪೈಮಾಯಸಿಯ ಲೆಖ್ಖದ ವಿವರ' ಎಂಬ ಪುಸ್ತಕವು ಜಮೀನುಗಳ ಅಳತೆ ಮಾಡುವುದರ ಕೈಪಿಡಿಯಾಗಿದ್ದು, ಮುತ್ತಣ್ಣನವರು ಅದರ ಹೆಸರನ್ನು 'ಪಾಯಮಾನಸಿಕ ಲೆಖ್ಖದ ವಿವರವು' ಮತ್ತು 'ಪಾಯಮಾನಸಿಕ ವ್ಯಾಯಮಾನ' ವೆಂದೂ ಕರೆದಿದ್ದಾರೆ (ಪು.೪೩೭)

ಇನ್ನೀಗ ಅದರಲ್ಲಿ ಬಂದ ವಿವಿಧ ವಿಷಯಗಳ ಸತ್ಯಾಸತ್ಯತೆಯನ್ನು ಪರಿಶೀಲಿಸೋಣ. 'ಗ್ರಂಥಕರ್ತ' ಎಂಬುದರಲ್ಲಿ ಹಲವಾರು ಬಗೆಗಳಿವೆ. ಮೂಲ ಲೇಖಕ, ಅನುವಾದಕ, ಸಂಪಾದಕ, ಸಂಕಲನಕಾರ, ಪರಿವರ್ತನಕಾರ, ಪರಿಷ್ಕರಿಸಿದವ–ಇತ್ಯಾದಿ. ಮುತ್ತಣ್ಣನವರಿಗೆ ಈ ಸರ್ವಸಾಧಾರಣ ಭೇದಗಳು ಕಂಡುಬಂದಿಲ್ಲ. ಬಿ. ಮಲ್ಲಪ್ಪ ಬಾಣನ ಕಾದಂಬರಿಯನ್ನು ೪೧೭ ಪುಟಗಳಲ್ಲಿ ಭಾಷಾಂತರಿಸಿ ಪ್ರಕಟಿಸಿದನಂತೆ (ಪು.೩೮೩). ಅವರು ನಾಗವರ್ಮ ವಿರಚಿತ 'ಕರ್ಣಾಟಕ ಕಾದಂಬರಿ'ಯನ್ನು ಸಂಪಾದಿಸಿದರೆಂಬುದು ಪರಿಚಿತ ವಿಷಯವೇ ಆಗಿದೆ. ಅದರಂತೆ 'ಮುದ್ರಾಮಂಜೂಷ'ದ ವಿಷಯ (ಪು. ೪೬೪). ಮುತ್ತಣ್ಣನವರ ಪ್ರಕಾರ ಜೆ. ಸ್ಟೀಫನ್ಸನ್ನನು ಮುದ್ರಾಮಂಜೂಷವೆಂಬ ಸಂಸ್ಕೃತ ಕೃತಿಯನ್ನು ಭಾಷಾಂತರಿಸಿದುದಂತೆ. ಅಲ್ಲಿ ಕೆಂಪುನಾರಾಯಣನ ಪ್ರಸ್ತಾಪವೇ ಇಲ್ಲ.

ಲೇಖಕರ ಹಾಗೂ ಕೃತಿಗಳ ವರ್ಷವನ್ನು ಉಲ್ಲೇಖಿಸುವಲ್ಲಿ ನೂರಾರು ತಪ್ಪುಗಳಾಗಿವೆ. ಪ್ರತಿ ಪುಟದಲ್ಲಿಯೂ ಕೃತಿರಚನೆಯ ಇಲ್ಲವೆ ಲೇಖಕನಿಗೆ ಸಂಬಂಧಿಸಿದ ವರ್ಷದ ಉಲ್ಲೇಖಗಳಿದ್ದು, ಅಂಥ ಉಲ್ಲೇಖಗಳಲ್ಲಿ ಅಗಣಿತ ತಪ್ಪುಗಳಾದರೆ, ಸರಿಯಿರಬಹುದಾದವುಗಳ ವಿಷಯದಲ್ಲಿಯೂ ಸಾಶಂಕರಾಗುತ್ತೇವೆ. ಅಂಥ ತಪ್ಪುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಕಾಣಿಸಿದೆ :

"ಕ್ರಿ.ಶ. ೧೬ನೆಯ ಶತಮಾನದಲ್ಲಿ ಬ್ರಿಟಿಷರು ಮುದ್ರಾಯಂತ್ರವನ್ನು ತಂದು ಕಲ್ಕತ್ತದಲ್ಲಿ ಇಟ್ಟರು. ಅನಂತರ ಐವತ್ತು ವರ್ಷಗಳಲ್ಲಿ ಬೊಂಬಾಯಿ ಮತ್ತು ಮದ್ರಾಸುಗಳಲ್ಲೂ ಅವು ಇಡಲ್ಪಟ್ಟವು." (ಪು.೨೬೪)

ಇದು ಸರ್ವಥಾ ಸರಿಯಲ್ಲ. ೧೬ನೆಯ ಶತಮಾನದಲ್ಲಿ ಬ್ರಿಟಿಷರ ಪ್ರಭಾವ ಇಲ್ಲವೆ ಆಡಳಿತವೆಂಬುದು ಇತ್ತೆಲ್ಲಿ? ಮುದ್ರಾಯಂತ್ರವನ್ನು ತಂದವರು ಪೋರ್ಚುಗೀಸರು. ಕ್ರಿ.ಶ. ೧೭೮೮ರಲ್ಲಿ ಅವರಿಂದ ಮೊದಲ ಪುಸ್ತಕ ಹೊರಬಂದಿತು. ಇನ್ನು ಮೊತ್ತ ಮೊದಲಿನ ಕನ್ನಡ ಮೊಳೆಗಳ ತಯಾರಿಕೆಯ ವಿಷಯದಲ್ಲಿ ಗಿಲ್‌ಕ್ರಿಸ್ಟ್ ಎಂಬವನ ಪ್ರಸ್ತಾಪ ಬಂದಿದೆ (ಪು. ೨೬೬). ಆ ಕಾರ್ಯವನ್ನು ಮೊದಲಿಗೆ ಕೈಕೊಂಡವನು ವಿಲಿಯಮ್ ಕೇರಿ.

ಕನ್ನಡ ಮುದ್ರಣ ವಿಚಾರವಾಗಿ ಈ ಪುಸ್ತಕದಲ್ಲಿ ಇನ್ನೂ ಹಲವು 'ಅಘಟಿತ' ಘಟನೆಗಳಿವೆ. ೧೮೧೫ರಲ್ಲಿ ಹಳೆ ಮೈಸೂರ ಸರಕಾರವು ಬೆಂಗಳೂರಲ್ಲಿ ಸರಕಾರೀ ಮುದ್ರಣಾಲಯವೊಂದನ್ನು ಸ್ಥಾಪಿಸಿ, ಕನ್ನಡ ಮತ್ತು ಇಂಗ್ಲಿಷ್ ಮುದ್ರಣ ಕೆಲಸ ನಡೆಸತೊಡಗಿತಂತೆ (ಪು. ೨೬೬). ಆದರೆ ಅದರ ಪ್ರಥಮ ವರ್ಷ ೧೮೪೧-೪೨ ಎಂಬುದು, ಮೈಸೂರ ಗೆಜೆಟಿಯರ್ (ರೈಸ್ ಸಂಪಾದಿತ) ಮತ್ತು ಕನ್ನಡದ ಆದ್ಯ ಪತ್ರಿಕೆ 'ಮಂಗಳೂರ ಸಮಾಚಾರ' (೧೮೪೩) ಇವುಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಗೊಂಡಿದೆ. ಅದರಂತೆ ಬಾಸೆಲ್ ಮಿಶನ್ ಪ್ರೆಸ್ ೧೮೩೪ರಲ್ಲಿ ಸ್ಥಾಪನೆಯಾಯಿತೆಂದು ತಪ್ಪಾಗಿ ಹೇಳಲಾಗಿದೆ. ಅದರ ಸರಿಯಾದ ವರ್ಷ ೧೮೪೨.

ಕಳೆದ ಶತಮಾನದಲ್ಲಿದ್ದ ಪಾಶ್ಚಾತ್ಯ ಲೇಖಕರಲ್ಲಿ ಮೊದಲಿಗೆ ಬಂದವರಾರು, ಅನಂತರದವರು ಯಾರು ಎಂಬುದರ ಸರಿಯಾದ ತಿಳಿವಳಿಕೆಯಿಲ್ಲದ್ದರಿಂದ, ತಾಳ ಮೇಳವಿಲ್ಲದ ಕೆಲವು ಅಭಿಪ್ರಾಯಗಳು ವ್ಯಕ್ತವಾಗಿವೆ. ಬಳ್ಳಾರಿಯ ಮಿಶನ್ ಕೇಂದ್ರದಲ್ಲಿ, ಮೊದಲಿಗೆ ಬಂದವ ರೀವ್ (೧೮೧೬-೧೮೩೪) ; ಅನಂತರ ಬಂದದವನು ರೀಡ್ (೧೮೩೦-೧೮೪೧). (ಆಧಾರ :Memories of John Reid ಎಂಬ ಕೃತಿ). ಅವರಿಬ್ಬರಿಗೆ ಸಂಬಂಧಿಸಿದ ಮುತ್ತಣ್ಣನವರ ಹೇಳಿಕೆ ಇಂತಿದೆ :

"ಜಾನ್ ರೀಡ್ ಇವನು ಇಂಗ್ಲಿಷ್‌ನಲ್ಲಿ ಬರೆದಿದ್ದ Old Testament ಇದನ್ನೇ William Reeve ಇವನು ೧೮೩೦ರ ಅನಂತರ 'ಮೋಸೆಯ ಮೊದಲನೆಯ ಕಾಂಡವು" ಎಂದು ಕನ್ನಡದಲ್ಲಿ ಬರೆದನೆಂಬುದನ್ನೂ ಇಲ್ಲಿ ಗಮನಿಸಬೇಕಾಗಿದೆ." (ಪು. ೨೭೪).

ಬೈಬಲಿನ Old Testment ನ್ನು ಇಂಗ್ಲಿಷ್‌ಗೆ ಅನುವಾದಿಸಿ ನೂರಾರು ವರ್ಷಗಳು ಸಂದಿದ್ದು, ೧೬ನೆಯ ಶತಮಾನದಿಂದ King James Version ಎಂಬ ಹೆಸರಿನಿಂದ ಇಂಗ್ಲಿಷ್ ಬೈಬಲಿನ ಅಧಿಕೃತ ಆವೃತ್ತಿಯು ಇಂಗ್ಲಿಷ್ ಜನರಲ್ಲಿ ಸಾರ್ವತ್ರಿಕವಾಗಿ ಬಳಕೆಯಲ್ಲಿದ್ದಿತು. ಅದನ್ನು ಜಾನ್ ರೀಡ್ ಇಂಗ್ಲಿಷಿನಲ್ಲಿ ಬರೆದದ್ದೇಕೆ ಎಂದು ಕೇಳಕೂಡದು!

ಮುಂದುವರಿದು, 'ರೀಡ್‌ನಿಂದ ರಚಿತವಾದ ಕನ್ನಡ ಬೈಬಲ್ ಹೊತ್ತಗೆಗಳು ಹಲವು ಇವೆ' ಎನ್ನುತ್ತಾರೆ (ಪು.೨೭೪). ಬೈಬಲ್ ಇರುವುದು ಒಂದೇ! ಇಂಥ ಹೇಳಿಕೆಯನ್ನು ಇನ್ನೂ ಅನೇಕರಿಗೆ ಅನ್ವಯಿಸಿ ಮಾಡಿದ್ದಾಗಿದೆ. ಈ ಪ್ರಮಾದದ ಹಿನ್ನೆಲೆಯೆಂದರೆ, ಬೈಬಲ್ ಅನುವಾದ ರಚನೆ ಹಾಗೂ ಒಟ್ಟಿನ ಕ್ರೈಸ್ತ ಮತೀಯ ಸಾಹಿತ್ಯ ನಿರ್ಮಿತಿ– ಇವುಗಳ ಸ್ಪಷ್ಟ ಕಲ್ಪನೆ ಇಲ್ಲದುದು. ಕ್ರೈಸ್ತ ಸಾಹಿತ್ಯ ಪುಸ್ತಕಗಳ ಪ್ರಸ್ತಾಪ ಬರುವಲ್ಲೆಲ್ಲ ಬೈಬಲ್ ಹೊತ್ತಗೆಗಳು ಎಂದು ಕರೆದುದು ವಿಚಿತ್ರವಾಗಿ ಕಾಣುತ್ತದೆ. ಇನ್ನೊಂದೆಡೆ "Dr. Moegling ಇವನೂ ತನ್ನ ಸಮಕಾಲೀನ ಕ್ರೈಸ್ತ ವಿದ್ವಾಂಸರ ಆದರ್ಶಕ್ಕನುಗುಣವಾಗಿ ಕನ್ನಡದಲ್ಲಿ ಸಂಪೂರ್ಣ ಬೈಬಲನ್ನು ಬರೆದು ಕನ್ನಡ ಸಾಹಿತ್ಯ ವೃಕ್ಷಕ್ಕೆ ಮತ್ತೊಂದು ಕೊನರನ್ನು ಸೇರಿಸಿದನು." ಎಂದು ಉದ್ಗಾರವೆತ್ತಿದ್ದಾನೆ. (ಪು. ೨೮೨). ಸಮಗ್ರ ಬೈಬಲನ್ನು ಕನ್ನಡದಲ್ಲಿ ಏಕಮೇವವಾಗಿ ಅನುವಾದಿಸಿದ ಯಾರೊಬ್ಬ ಮಿಶನರಿಯೂ ಹುಟ್ಟಲಿಲ್ಲ.

ಕಾಲಮಾನದಲ್ಲಿ ಹೆಚ್ಚು ಕಡಿಮೆಯಾದುದಕ್ಕೆ ಇನ್ನೊಂದು ಮಾದರಿ : "ಡೆಪ್ಯೂಟಿ ಚೆನ್ನಬಸಪ್ಪನನ್ನು ತನ್ನ ಸ್ಥಾನದಲ್ಲಿ ಮೇಲಕ್ಕೆ ಏರಿಸಿ ಪ್ರೋತ್ಸಾಹಿಸಲು ಕಾರಣನಾದವನು ಈ Rev. F. Zeigler." (ಪು. ೩೨೫). ತ್ಸಿಗ್ಲರಿನಿಗಿಂತ ಚೆನ್ನಬಸಪ್ಪ ಹಿರಿಯರು. ತ್ಸಿಗ್ಲರ್ ಧಾರವಾಡಕ್ಕೆ ಬರುವುದಕ್ಕೆ ೨೪ ವರ್ಷ ಮುಂಚೆಯೇ ಚೆನ್ನಬಸಪ್ಪ ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್ ಹುದ್ದೆಯನ್ನು ಸ್ವೀಕರಿಸಿದ್ದರು. ಈ ಬಗೆಯ ತಪ್ಪು ಅಭಿಮತಗಳಿಗೆ ಮಕುಟಪ್ರಾಯವಾಗಿರುವ ಈ ಹೇಳಿಕೆಯನ್ನು ಗಮನಿಸಬೇಕು.

"ಕಾಲ್ಡ್‌ವೆಲ್‌ನಿಗೆ ಬೇರೆ ಬೇರೆ ಭಾಷೆಗಳ ಪರಿಚಯವನ್ನು ಮಾಡಿಕೊಟ್ಟು ಅವನ ಗ್ರಂಥಕ್ಕೆ ಶಬ್ದಸಂಪತ್ತನ್ನು ಒದಗಿಸಿದವರಲ್ಲಿ Dr. F. Kittel ಇವನೂ ಒಬ್ಬನು" (ಪು. ೫೬೦).

ಮುತ್ತಣ್ಣನವರು ಅನೇಕ ಪುಸ್ತಕಗಳನ್ನು ಪರಿಶೀಲಿಸಲಾಗದೆ ಬಾರ್ನೆಟ್‌ನಂತಹವರು ಸಿದ್ಧಪಡಿಸಿದ ಸೂಚಿಯಿಂದ (A Catalogue of Kannada. . .Books in the British Museum Library) ಅಂದಾಜಿನ ಮೇಲೆ ಆಗಿನ ಪುಸ್ತಕಗಳನ್ನು ಬಣ್ಣಿಸಹೋಗಿದ್ದಾರೆ. ಹಾಗೆ ಮಾಡುವಾಗ ಅನೇಕ ಕಡೆಗೆ ಹಾಸ್ಯಾಸ್ಪದವೆನಿಸುವಂತಹ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

"ವಿಲಿಯಮೆಂಬುವನ ಚರಿತ್ರೆ' ಎಂಬ ೬೯ ಪುಟಗಳ ಪುಸ್ತಕವು ಇಂಗ್ಲೆಂಡಿನ ರಾಜ ಮೊದಲನೇ ವಿಲಿಯಮನನ್ನು ಕುರಿತು ಬರೆದದ್ದು, ಚರಿತ್ರೆ ಪಾಠಕ್ಕೆ ಉಪಯೋಗಿಸಲ್ಪಟ್ಟಿತು" (ಪು. ೪೧೨). ವಿಲಿಯಮ್ ಎಂಬ ಹೆಸರನ್ನು ನೋಡಿ, ಮುತ್ತಣ್ಣನವರು ತಮ್ಮ ಊಹನೆಯ ಕುದುರೆಯನ್ನು ಎಲ್ಲೆಲ್ಲಿಯೊ ಓಡಿಸಿದರು. ಆದರೆ ಆ ಪುಸ್ತಕವು ಬೈಬಲಿಗೆ ಸಂಬಂಧಿಸಿದ ಒಂದು ಕತೆಯಾಗಿದೆ. ಮುಂದೆ ೪೪೯ನೆಯ ಪುಟವೊಂದರಲ್ಲಿಯೇ ಈ ತೆರನಾದ ಮೂರು ಅಸತ್ಯವಾದ ವಿವರಗಳಿವೆ. ಸ್ಯಾಮುಯೆಲ್ ಅಬ್ಬೈಜನು Bazar Book ಎಂಬ ಸ್ವಮತೀಯ ಗ್ರಂಥವನ್ನು ಅನುವಾದಿಸಿದ್ದಾನೆ. Bazar ಎಂದು ಬಂದಿದೆಯೆಂದ ಮೇಲೆ ಅದು 'ಸಂತೆ ಲೆಕ್ಕಗಳ ವ್ಯವಹಾರಗಳನ್ನು ತಿಳಿಸುವ' ಪುಸ್ತಕವೇ ಇರಬೇಕೆಂದು ಮುತ್ತಣ್ಣನವರು ತರ್ಕಿಸಿದರು! ಅದರಂತೆ 'Practical advice against a far spread disease' ಮತ್ತು 'ಫಲಾಹಾರ ಅಥವಾ ಲಕ್ಷ್ಯಕ್ಕೆ ತಕ್ಕವಾದ್ದು' ಎಂಬ ಎರಡು ಶೀರ್ಷಿಕೆಗಳನ್ನು ಕಂಡು ಅವು ವೈದ್ಯಕೀಯ ಇಲ್ಲವೆ ಆರೋಗ್ಯಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳೇ ಆಗಿರಬೇಕೆಂದು ನಿರ್ಧರಿಸಿದರು, ಆದರೆ ಅವು ಕೂಡ ಕ್ರೈಸ್ತಮತೀಯ ಪುಸ್ತಕಗಳೇ ಆಗಿವೆ.

'ಕರ್ನಾಟಕ ವಾಗ್ವಿಧಾಯಿನಿ' ಎಂಬ ಸಾಹಿತ್ಯಿಕ ಪತ್ರಿಕೆಯೊಂದು ಕಳೆದ ಶತಮಾನದಲ್ಲಿ ಹಳೆಯ ಮೈಸೂರಿನ ಪ್ರದೇಶದಿಂದ ಹೊರಡುತ್ತಿದ್ದಿತಂತೆ. ಅದರ ಉಲ್ಲೇಖ ಮೇಲಿಂದ ಮೇಲೆ ಬರುತ್ತದಲ್ಲದೆ, ಮುತ್ತಣ್ಣನವರು ಮೆವ್‌ಗ್ಲಿಂಗ್ ಮುಂತಾದ ಪ್ರಮುಖ ಲೇಖಕರನ್ನು ಅದಕ್ಕೆ ತಳುಕುಹಾಕಿದ್ದಾರೆ. ಈ ಹೆಸರಿನ ಪತ್ರಿಕೆ ಇರಲೇ ಇಲ್ಲ. 'ಕರ್ಣಾಟಕ ವಾಗ್ವಿಧಾಯಿನಿ' ಎಂಬ ವ್ಯಾಕರಣ ಪುಸ್ತಕ ಮಾತ್ರ ಕಳೆದ ಶತಮಾನದಲ್ಲಿ ಪ್ರಕಟವಾಗಿದ್ದಿತು. ಮೈಸೂರು ಸರಕಾರದಿಂದ ಸಿದ್ಧಗೊಂಡ ಈ ಪಠ್ಯಪುಸ್ತಕವು ಹಲವಾರು ಆವೃತ್ತಿಗಳನ್ನು ಕಂಡಿತು.

ಬೆಂಗಳೂರಿನ ಕೆಥಲಿಕ್ ಸಂಸ್ಥೆಯವರು ಪ್ರಕಟಿಸಿದ ಲ್ಯಾಟಿನ್-ಕನ್ನಡ, ಕನ್ನಡ-ಲ್ಯಾಟಿನ್ ಕೋಶಗಳ ಬಗ್ಗೆ ಬರೆಯುತ್ತ ಮುತ್ತಣ್ಣನವರು "ಈ ಲ್ಯಾಟಿನ್-ಕನ್ನಡ ವ್ಯಾಕರಣ ಮತ್ತು ಛಂದಸ್ಸು ಪುಸ್ತಕಗಳು ೧೮೬೯ರಲ್ಲಿ ಎರಡನೆಯ ಬಾರಿಗೆ ಮುದ್ರಣವಾದುವು. ಇದನ್ನು ಈ ದೇಶದಲ್ಲಿ ಓದುವವರು ಯಾರು ? ಆದರೆ ಅಂದಿನ ವಿದ್ವಾಂಸರು ಭಾರತೀಯ ಸಾಹಿತ್ಯವನ್ನು ಪಾಶ್ಚಾತ್ಯ ದೇಶಗಳಲ್ಲಿ ಪರಿಚಯಮಾಡಿಸುವ ಮಹತ್ತಾದ ಉದ್ದೇಶವನ್ನಿಟ್ಟು ಇಂಥಾ ಗ್ರಂಥಗಳನ್ನು ರಚಿಸಿದರೆಂಬುದನ್ನು ತಿಳಿಯಬೇಕಾಗಿದೆ." (ಪು. ೪೫೬).

ಈ ಪುಸ್ತಕಗಳ ಅವತರಣಿಕೆಗಳನ್ನು ಕೊಟ್ಟಿರುವದರಿಂದ ಮುತ್ತಣ್ಣನವರು ಸ್ವತಃ ನೋಡಿದ್ದಾರೆ, ಎನ್ನಬೇಕು. ಹಾಗೆ ಮಾಡುವಾಗ ಕನ್ನಡ-ಲ್ಯಾಟಿನ್ ಕೋಶದ ಮುಖಪುಟದಲ್ಲಿ ಬಂದ 'Dictionarium Canarese Latinum usum Maissurensis Catholicii Seminarii' ಎಂಬ ಒಕ್ಕಣಿಕೆಯನ್ನೂ ನಮೂದಿಸಿದ್ದಾರೆ

(ಪು.೪೫೫). ಎಂದರೆ ಈ ಗ್ರಂಥವು ಬೆಂಗಳೂರಿನಲ್ಲಿ ಕೆಥಲಿಕ್ ಸೆಮಿನರಿಯಲ್ಲಿ ಅಭ್ಯಾಸ ಮಾಡುವ ಬೋಧಕರಿಗಾಗಿ ಮಾತ್ರ ಇತ್ತೆಂಬುದು ಸ್ಪಷ್ಟವಾಗಿದೆ. ಅದರಂತೆ ಲ್ಯಾಟಿನ್-ವ್ಯಾಕರಣದ ಕನ್ನಡ ಪುಸ್ತಕವು ಶಾಲಾ ವಿದ್ಯಾರ್ಥಿಗಳಿಗಾಗಿಯೇ ಇತ್ತೆಂಬುದರ ಉಲ್ಲೇಖವೂ (ad usum scholarum) ಮುತ್ತಣ್ಣನವರ ಗಮನಕ್ಕೆ ಬಿದ್ದಿದೆ (ಪು.೪೫೬). ಹಾಗಿದ್ದೂ ಅವರು ಭಾರತೀಯ ಸಾಹಿತ್ಯವನ್ನು ಪಾಶ್ಚಾತ್ಯರಿಗೆ ಪರಿಚಯಿಸಬೇಕೆನ್ನುವ 'ಮಹತ್ತಾದ' ಉದ್ದೇಶವನ್ನು ಅದರಲ್ಲಿ ಕಂಡುದೇಕೊ ?

ಮೆವ್‌ಗ್ಲಿಂಗ್ ದಾಸರ ಪದಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿದರು. ಅವು ಸುಪ್ರಸಿದ್ಧ ZDMG ಪತ್ರಿಕೆಯ ೧೮೬೦ನೆಯ ಇಸವಿಯ ಸಂಪುಟದ, ೫೦೨ರಿಂದ ೫೧೬ರ ವರೆಗಿನ ಪುಟಗಳಲ್ಲಿ, ಮುಂದೆ ೧೮೬೪ರ ಸಂಪುಟದ ೨೪೧-೨೬೧ರ ಪುಟಗಳಲ್ಲಿ ಪ್ರಕಟವಾದವು. ಈ ವಿಷಯವನ್ನು ಮುತ್ತಣ್ಣನವರು ಉಲ್ಲೇಖಿಸಿದ ಬಗೆಯೇ ಬೇರೆ : "೫೧೬ ಪುಟಗಳ ಈ ಪುಸ್ತಕವು ೧೮೬೫ರಲ್ಲಿ ಪುನುರ್ಮುದ್ರಣಗೊಂಡಿತು." ಮೆವ್‌ಗ್ಲಿಂಗ್ ಜೈಮಿನಿ ಭಾರತದ ಕೆಲವು ಪದ್ಯಗಳನ್ನು ಸಹ ಜರ್ಮನ್ ಭಾಷೆಗೆ ಅನುವಾದಿಸಿ ಅದೇ ZDMG ಯ ೨೪ನೆಯ ಸಂಪುಟದ ೩೮೯ರಿಂದ ೩೨೪ರ ವರೆಗಿನ ಪುಟಗಳಲ್ಲಿ, ಅದರ ಮೊದಲ ಕಂತನ್ನು ಹೊರತಂದರು. ಆದರೆ ಮುತ್ತಣ್ಣನವರಿಗೆ ಮಾತ್ರ ಅದು ೩೨೪ ಪುಟಗಳ ಪ್ರತ್ಯೇಕ ಗ್ರಂಥವೇ ಆಗಿ ಕಂಡಿತು.

"ಕ್ರಿ.ಶ.೧೮೬೮ ರಿಂದ ೧೮೭೧ರ ವರೆಗೆ ಮಂಗಳೂರಿನಲ್ಲಿ Casper Stalz ಇವನು Periodical Publications ಎಂಬುದಾಗಿ ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ ವಾರ್ತಾ- (ಪು.೪೪೪). ನಮಗೆ ಇದರ ಹೊಲಬು ಆಗಲಿಲ್ಲ. Periodical Publications - ಎಂದು ಯಾರೂ ಪತ್ರಿಕೆಗೆ ಹೆಸರಿಡುವುದಿಲ್ಲ. ಮೇಲಾಗಿ Stolz (stalz ಅಲ್ಲ) ಅಂಥ ಪ್ರಮುಖ ಮಿಶನರಿಯೇನಲ್ಲ. ಬಾರ್ನೆಟ್‌ನ ಮೇಲ್ಕಂಡ ಸೂಚಿಯನ್ನು ಪರಿಶೀಲಿಸಿದಾಗ ಅವರ ತಪ್ಪಿನ ಗುಟ್ಟು ಹೊರಬಿದ್ದಿತು! Periodical Publications ಎಂಬ ಸಾಮಾನ್ಯ ಶೀರ್ಷಿಕೆಯ ಅಡಿಯಲ್ಲಿ ಬೆಂಗಳೂರು, ಬಳ್ಳಾರಿ, ಧಾರವಾಡ ಮುಂತಾದ ಊರುಗಳಲ್ಲಿ ಪತ್ರಿಕೆಗಳನ್ನು ಹೆಸರಿಸುತ್ತ, ಮಂಗಳೂರಿನ ಪತ್ರಿಕೆಗಳೆಂದು Illustrated Canerese Journal, ಮಂಗಳೂರ ಸಮಾಚಾರ, ನ್ಯಾಯಸಂಗ್ರಹ, ಸಭಾಪತ್ರ ಮುಂತಾದ ಹೆಸರುಗಳನ್ನು ಬಾರ್ನೆಟ್ ಕೊಟ್ಟಿದ್ದಾರೆ. 'ಸುಭಾಪತ್ರ'ದ ನಮೂದಿನಲ್ಲಿ ಅದರ ಸಂಪಾದಕರೆಂದು C. Stolz, J.J. Brigel ಮತ್ತು C. Vastsa ಇವರ ಹೆಸರೂ, ೧೮೬೮-೧೮೭೧ ಎಂಬ ವರ್ಷಗಳ ಉಲ್ಲೇಖವೂ ಇದೆ. ಅಂತೂ ಮುತ್ತಣ್ಣನವರು ಆಧಾರಗ್ರಂಥಗಳಿಂದ ಟಿಪ್ಪಣಿ ಬರೆದುಕೊಂಡು ರೀತಿಯದು!

೧೯ನೆಯ ಶತಮಾನದ ವಿವಿಧ ಗ್ರಂಥಗಳನ್ನು ಮುತ್ತಣ್ಣನವರು ಯಾವ ರೀತಿಯಾಗಿ ಪ್ರಸ್ತಾಪಿಸಿದ್ದಾರೆಂಬುದನ್ನು ಇದುವರೆಗೆ ನೋಡಿದೆವು. ಆಗಿನ ಲೇಖಕರ ಸಾಹಿತ್ಯಿಕ

ಪರಿಚಯದ ಸ್ವರೂಪವೆಂತೆಂಬುದನ್ನು ನೋಡೋಣ. ಈ ಗ್ರಂಥದಲ್ಲಿ ಬಂದಿರುವ ಮಿಶನರಿ ಅಧಿಕಾರಿಗಳೆಲ್ಲಾ ಬಹು ಭಾಷಾ ಪಂಡಿತರೆಂಬ ಮಾತು ಕಡ್ಡಾಯವಾಗಿ ಬರುತ್ತದೆ.

ಹ್ಯಾಂಡ್ಸ್ : "ಇವನು ಈ ದೇಶಕ್ಕೆ ಬಂದಕೂಡಲೇ ತಮಿಳು, ತೆಲುಗು, ಸಂಸ್ಕೃತ, ಪರ್ಷಿಯನ್ ಇತ್ಯಾದಿ ಭಾಷೆಗಳಲ್ಲಿ ಕುಶಲತೆಯನ್ನು ಪಡೆದನು. . . .ಕನ್ನಡ ಭಾಷೆಯಲ್ಲಿ ಅಸಾಮಾನ್ಯ ಪ್ರೌಢಿಮೆಯನ್ನು ಗಳಿಸಿದನು" (ಪು. ೨೬೮)

ರೈಸ್ : "ಬಂದ ಒಂದೆರಡು ವರ್ಷಗಳಲ್ಲಿಯೇ ತಮಿಳು, ಕನ್ನಡ, ತೆಲುಗು ಭಾಷೆಗಳನ್ನು ಅನಂತರ ಸಂಸ್ಕೃತ, ಪರ್ಷಿಯನ್, ಲ್ಯಾಟಿನ್ ಮತ್ತು ತನ್ನ ಸ್ವಭಾಷೆಯಾದ! ಜರ್ಮನ್ ಭಾಷೆಯನ್ನೂ ಚೆನ್ನಾಗಿ ಕಲಿತು ಸಾಕಷ್ಟು ಪಾಂಡಿತ್ಯವನ್ನು ಸಂಪಾದಿಸಿದನು"(ಪು. ೩೨೮)

ಕಿಟೆಲ್ : "ಇಲ್ಲಿಗೆ ಬಂದಕೂಡಲೇ ಅವನು ಸಂಸ್ಕೃತ, ಕನ್ನಡ, ತಮಿಳು, ತುಳು, ಕೊಂಕಣಿ, ಮರಾಠಿ ಮತ್ತು ಪರ್ಷಿಯನ್ ಭಾಷೆಗಳನ್ನು ಕಲಿತನು. ಮಾತ್ರವಲ್ಲದೆ ಇವುಗಳಲ್ಲೆಲ್ಲ ಏಕಸಮಾನವಾದ ಪಾಂಡಿತ್ಯವನ್ನು ಸಂಪಾದಿಸಿದನು" (ಪು. ೩೨೮)

ಹೀಗೆ ಇಲ್ಲಿಗೆ ಬಂದ ಮಿಶನರಿಗಳೆಲ್ಲ ನಿಸ್ಸಂಶಯವಾಗಿ ಭಾಷಾಕೋವಿದರೆಂದು ಮುತ್ತಣ್ಣನವರು ಗ್ರಹಿಸಿ, ಅವರ ಕೊರಳಿಗೆ ೪-೫ ಭಾಷೆಗಳನ್ನು ಕಟ್ಟದುದು ಕಂಡುಬರುತ್ತದೆ.

ಕಿಟೆಲ್‌ರಿಗೆ ಮೇಲೆ ಹೇಳಿದ ಭಾಷೆಗಳು ಕೆಲವದರಲ್ಲಿ ಪರಿಣತಿಯೂ, ಇನ್ನು ಕೆಲವುಗಳ ವ್ಯಾವಹಾರಿಕ ಜ್ಞಾನವೂ ಇದ್ದುದು ನಿಜವೇ. ಆದರೆ ಅವುಗಳಲ್ಲೆಲ್ಲ ಏಕ ಸಮಾನವಾದ ಪಾಂಡಿತ್ಯವೆಂದು ಹೇಳಿದುದು ತಪ್ಪೆಂದು ಮೇಲುನೋಟಕ್ಕೆಯೇ ಗೊತ್ತಾಗುತ್ತದೆ. ಇತ್ತ ಹ್ಯಾಂಡ್ಸ್ ಭಾಷಾಪಂಡಿತನಿರಲಿಲ್ಲ. ಹ್ಯಾಂಡ್ಸ್ ಅನುವಾದಿಸಿದ ಈ ಬೈಬಲ್ ಭಾಗದಲ್ಲಿ ಬಂದ ಅವನ 'ಅಸಾಮಾನ್ಯ ಪ್ರೌಢಿಮೆ'ಯನ್ನು ತಿಳಿಯಲು ಈ ಕೆಳಗಿನದನ್ನು ಗಮನಿಸಬೇಕು :

"ಆದರೆ ಯೀಸು ಕ್ರಿಸ್ತುವಿನ ಹುಟ್ಟುವಿಕೆ ಯೀ ಪ್ರಕಾರವಾಗಿ ಸಂಭವಿಸಿತು. ಆತನ ತಾಯಿಯಾದ ಮರಿಯಾ ಯೋಶೆಫಿಗೆ ನೇಮಿಸಲ್ಪಟ್ಟ ತರುವಾಯ ಅವರಿಗೆ ಸಂಸರ್ಗವಾಗುವುದಕ್ಕೆ ಮುಂಚೆ ಆಕೆ ಪರಿಸುದ್ಧ ಆತ್ಮನಿಂದ ಗರ್ಭವತಿಯಾದಳು. ಆಗಲು ಆಕೆಯ ಪುರುಷನಾದ ಯೋಶೆನು ಸತ್ಯವಂತನಾದದರಿಂದ ಆಕೆಯಂನು ಬಹಿರಂಗವಾಗಿ ಅವಮಾನ ಮಾಡ ಮನಸ್ಸಿಲ್ಲದೆಯೆ ಶಾಂತವಾಗಿ ಆಕೆಯಂನ ಪರಿತ್ಯಾಗ ಮಾಡ ಮನಸಾಗಿದ್ದನು. ಆದರೆ ಯಿದಕ್ಕೋಸ್ಕರವಾಗಿ ಆಲೋಚನೆ ಮಾಡುತ್ತಿರುವಾಗಲು ಯಿದೊ ದೇವರ ದೂತನು ಸ್ವಪ್ನದಲ್ಲಿ ಅವನಿಗೆ ಕಾಣಿಸಲ್ಪಟ್ಟು ಹೇಳಿದ್ದೇನೆಂದರೆ ದಾವೀದಿನ ಮಗನಾದ ಯೋಶೇಫೇವಿನ ಹೆಂಡತಿ ಮರಿಯಾಂನ ತಕ್ಕೊಳ್ಳ ಭಯಪಡು ಬ್ಯಾಡಯೇನೆಂದರೆ ಆಕೆ ಪರಿಶುದ್ಧಾತ್ಮನಿಂದ ಗರ್ಭವಂನ ಧರಿಶಿದ್ದಾಳೆ." (ಮತ್ತೆಯ ಬರೆದ ಸುವಿಶೇಷವು, ಪ್ರಕಟನೆ, ೧೮೨೦)

ಇಂಗ್ಲೆಂಡಿನವನಾದ ರೈಸನ ಸ್ವದೇಶವು ಜರ್ಮನಿ ಎಂಬುದಾಗಿ ಮುತ್ತಣ್ಣನವರು ಹೇಳಿದುದನ್ನು ವಿಶೇಷವಾಗಿ ಗಮನಿಸಬೇಕು. ಇಷ್ಟೇ ಅಲ್ಲ. ಸಮಗ್ರ ವೆಸ್ಲಿಯನ್ನರನ್ನೆ ಜರ್ಮನ್ ದೇಶದವರೆಂಬುದಾಗಿ ಮತ್ತೆ ಮತ್ತೆ ಹೇಳಿದ್ದಾರೆ. ಪರಿಣಾಮವಾಗಿ ಗ್ಯಾರೆಟ್ ಮೊದಲಾದ ವೆಸ್ಲಿಯನ್ ಮಿಶನರಿಗಳನ್ನು ವರ್ಣಿಸುವಾಗ ಜರ್ಮನ್ ಬಳುವಳಿಯನ್ನು ಕಲ್ಪಿಸಿ, ಅಸತ್ಯವಾದ ಮಾತುಗಳನ್ನು ಬರೆದಿದ್ದಾರೆ. ಫ್ರಾನ್ಸ್ ದೇಶದ ಬೌತೆಲೋನನ್ನು ಸಹಿತ ಜರ್ಮನ್ ನಾಗರಿಕನನ್ನಾಗಿ ಮಾಡಿದ್ದಾರೆ. (ಪು. ೪೭೪)

ಇನ್ನು ವಿವಿಧ ಲೇಖಕರ ಬಗ್ಗೆ ಬಂದ ವೈಯಕ್ತಿಕ ವಿವರಗಳಲ್ಲಿ ಬಂದ ಅನೇಕಾನೇಕ ತಪ್ಪುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕಾಣಿಸುತ್ತೇನೆ.

ರೈಸ್ ಎನ್ನುವವರು ಕರ್ನಾಟಕದಲ್ಲಿ ಮೂವರು ಆಗಿಹೋದರು. ಒಬ್ಬನು ಬೆಂಜಮಿನ್ ಹೋಲ್ಟ್ ರೈಸ್. ಈತ ಮಿಶನರಿಯಾಗಿ ಬೆಂಗಳೂರಿನಲ್ಲಿ ಅರ್ಧ ಶತಮಾನದ ವರೆಗೆ ಬದುಕಿದ್ದನು. (೧೮೩೭-೧೮೮೭). ಕ್ರೈಸ್ತ ಮತೀಯ ಪುಸ್ತಕಗಳು, ಪದ್ಯಗಳು ಮತ್ತು ಅರುಣೋದಯ (ಪತ್ರಿಕೆ) ಇವು ಅವನ ಸಾಹಿತ್ಯಿಕ ಗೈಮೆಗಳು. ಬಿ.ಲೂಯಿ ರೈಸ್ ಮತ್ತು ಇ.ಪಿ. ರೈಸ್ - ಅವನ ಈ ಇಬ್ಬರು ಮಕ್ಕಳು ಕರ್ನಾಟಕದಲ್ಲಿ ಇದ್ದವರು. ಬಿ. ಲೂಯಿ ರೈಸ್ ಮಿಶನರಿಯಾಗದೇ ಶಿಕ್ಷಣಾಧಿಕಾರಿಯಾಗಿ ಶಾಸನ ಪರಿಶೋಧಕನಾಗಿ ಮಹತ್ತರ ಕಾರ್ಯವೆಸಗಿದ್ದಾನೆ. ಮುತ್ತಣ್ಣನವರು ತಂದೆ-ಮಕ್ಕಳಿಬ್ಬರ ಸಾಹಿತ್ಯಿಕ ಕಾರ್ಯವನ್ನು ಒಂದೇ ವ್ಯಕ್ತಿಯಲ್ಲಿ ಆರೋಪಿಸಿ, ವಿಷಯದ ಕಲುಸುಮೇಲೋಗರ ಮಾಡಿದ್ದಾರೆ (ಪು.೩೨೧-೩೨೮). ಅದಕ್ಕೆ ಊಹನೆ ತರ್ಕಸರಣಿಗಳನ್ನೂ ಸೇರಿಸಿದ್ದರಿಂದ ಅದೊಂದು ಸುಳ್ಳಿನ ಕಂತೆಯಾಗಿದೆ. ಅಲ್ಲದೆ ರೈಸನ ಎಪಿಗ್ರಾಫಿಯಾ ಕರ್ನಾಟಿಕಾ, ಮೈಸೂರ ಗೆಜೆಟಿಯರ್ ಇವುಗಳು ಪ್ರತ್ಯೇಕ ಕೃತಿಗಳೆಂದು ತಿಳಿಯದೆ ಹೋದ ಮುತ್ತಣ್ಣನವರ ಅಜ್ಞಾನ ಬೇಸರವನ್ನುಂಟುಮಾಡುತ್ತದೆ. (ಪು.೪೮೬-೪೮೭ ಮತ್ತು ೫೧೪). ಲೂಯಿ ರೈಸನು Catalogue of Sanskrit Manuscripts ಎಂಬುದನ್ನು ಸಿದ್ಧಪಡಿಸಿದ್ದು ಮುತ್ತಣ್ಣನವರು ಅದನ್ನು 'ಸಂಸ್ಕೃತ ಶಾಸನಗಳು' ಎಂಬುದಾಗಿ ಭಾವಿಸಿ, ಅದರಲ್ಲಿ "ಓಲೆಗಳು, ಶಿಲಾ ಶಾಸನಗಳು, ಮತ್ತಿತರ ಲಿಖಾವಟ್ಟುಗಳು" ಇವೆಯಾಗಿ ಹೇಳಿದ್ದಾರೆ. ಅದರ ಒಂದು ಪುಟದ ಛಾಯಾಚಿತ್ರವನ್ನೂ ಕೊಟ್ಟಿದ್ದಾರೆ. ಪುಸ್ತಕವನ್ನು ಕಣ್ಣಾರೆ ನೋಡಿಯೂ ತಪ್ಪು ಮಾಡಿದ್ದಾರೆ-ಯಥಾಪ್ರಕಾರ! ರೈಸರನ್ನು ಕರ್ನಾಟಕದ ಮ್ಯಾಕ್ಸ್-ಮುಲ್ಲರ್ (ಪು. ೪೯೫) ಎಂದು ಕರೆದದ್ದಂತೂ ಅರ್ಥಹೀನವಾದುದು.

ಕೆಲವು ದೇಶೀಯರ ಸಾಹಿತ್ಯ ಕಾರ್ಯದ ಬಗ್ಗೆ ಹೇಳುವಾಗ ಅಳಿಯ ಲಿಂಗರಾಜನ ಪ್ರಸ್ತಾಪ ಈ ರೀತಿ ಬಂದಿದೆ:

"ಕವಿ ಕೃಷ್ಣರಾಜನೆಂಬುವನು ಮೈಸೂರ ರಾಜವಂಶಕ್ಕೆ ಸೇರಿದವನಾಗಿರಬಹುದು. ಅದೇ ಸಮಯದಲ್ಲಿ ಅವನ ಸಮಕಾಲೀನನಾಗಿದ್ದ ಕವಿ ಲಿಂಗರಾಜನೂ ಹಲವು

ವಿಚಾರಪೂರ್ಣವಾದ ಕಿರುಹೊತ್ತಗೆಗಳನ್ನು ಬರೆದಿದ್ದಾನೆ. ಇವನನ್ನು ಪೂರ್ಣಯ್ಯನ ನಂತರ ಮೈಸೂರು ಮುಖ್ಯಮಂತ್ರಿಯಾಗಿದ್ದ ಲಿಂಗರಾಜನೆಂದು ಕೆಲವರು ಹೇಳಿದರೆ ಇನ್ನು ಕೆಲವರು ಕಳೆದ ಶತಮಾನಾರಂಭದಲ್ಲಿ ಕೊಡಗಿನ ಅರಸನಾಗಿದ್ದ ೨ನೆಯ ಲಿಂಗರಾಜನೆಂದು ಹೇಳಿದ್ದಾರೆ. ಆದರೆ ಮೈಸೂರಿನ ಮುಖ್ಯಮಂತ್ರಿಯಾಗಿದ್ದ ಆ ಲಿಂಗರಾಜನು ಕೇವಲ ಅಲಭ್ಯ ಮತ್ತು ಅಸಂಸ್ಕೃತನಾದ ವ್ಯಕ್ತಿಯಾಗಿದ್ದನೆಂದು ಆಧಾರಪೂರ್ವಕವಾಗಿ ತಿಳಿದುಬರುತ್ತದೆ" (ಪು. ೩೭೪).

ಮೇಲಣ ಅಭಿಪ್ರಾಯವನ್ನು ಖಂಡಿಸುವ ಶ್ರಮವನ್ನು ತೆಗೆದುಕೊಳ್ಳಲಾರೆವು.

ಅತ್ಯುಕ್ತಿಯು ಈ ಗ್ರಂಥದ ಪ್ರಮುಖ ವೈಶಿಷ್ಟ್ಯಗಳಲ್ಲೊಂದಾಗಿದೆ. ಇಲ್ಲಿ ಕೆಲವು ಮಾದರಿಗಳಿವೆ.

ಕರ್ನಾಟಕದಲ್ಲಿ ಹಲವು ವರ್ಷ ಸಂಚರಿಸಿ ಇಲ್ಲಿರುವ ಹಸ್ತಪ್ರತಿಗಳು, ಶಾಸನಗಳು, ಸ್ಥಳ ಪುರಾಣಗಳು ಇವುಗಳ ಬಗ್ಗೆ ಮಾಹಿತಿಯನ್ನು ದೊರಕಿಸಿದ ಕಾಲಿನ್ ಮೆಕೆಂಝಿಯ ಕಾರ್ಯ ನಿಜವಾಗಿಯೂ ಮಹತ್ತ್ವದ್ದು. ಆದರೆ ಔಚಿತ್ಯವನ್ನು ಮೀರಿ ಅವನನ್ನು ಹೊಗಳಲಾಗಿದೆ. ಅವನ ಸಂಶೋಧನಾ ವರದಿಗಳು ನೂರಾರು ಗ್ರಂಥಕಾಂಡಗಳಾಗಿವೆಯಂತೆ (ಪು.೧೦೮). ಅವನು ಬರಿ ಸಂಗ್ರಹಕಾರನಿದ್ದನಲ್ಲದೆ ಸಂಶೋಧಕನಲ್ಲ. ಸರ್ ವಿಲಿಯಂ ಹಂಟರನು ಇಂಪೀರಿಯಲ್ ಗೆಝೆಟಿಯರ್‌ದ ಸಂಪುಟಗಳನ್ನು ಸಂಪಾದಿಸಿದನಷ್ಟೆ. ಅದಕ್ಕೆ ಸಾಮಗ್ರಿಯನ್ನು ಒದಗಿಸಿದವರು, ಮತ್ತು ಬಿಡಿಯಾಗಿ ಲೇಖನಗಳನ್ನು ಬರೆದವರು ನೂರಾರು ಜನರಿದ್ದಾರೆ. ಆದರೆ ಮುತ್ತಣ್ಣನವರ ಲೇಖನವನ್ನೋದಿದರೆ, 'ಅವನೊಬ್ಬನೆ ಅಷ್ಟೆಲ್ಲ ಸಂಪುಟಗಳನ್ನು ಬರೆದನೆಂದು ಧ್ವನಿತವಾಗುತ್ತದೆ. "ವಿಲಿಯಂ ಕೇರಿಯು ೧೫೦ ಗ್ರಂಥಗಳನ್ನು ಬರೆದನು"- ಇದು ಒಟ್ಟಿನಲ್ಲಿ ಪ್ರಶ್ನಾರ್ಹವಾದ ಮಾತೇ. ಆದರೆ "ಅವನು ಎಷ್ಟು ಪುಸ್ತಕಗಳನ್ನು ಬರೆದನೋ ಅಷ್ಟೇ ಪುಸ್ತಕಗಳು ಅವನ ವಿಷಯವಾಗಿ ಬರೆಯಲ್ಪಟ್ಟಿವೆ" ಎಂಬುದು ಅತ್ಯತಿಶಯೋಕ್ತಿಯ ಇನ್ನೊಂದು ಮಾದರಿಯಾಗಿದೆ. ಕಳೆದ ಶತಮಾನದ ಶಾಸನ ಪರಿಶೋಧಕರು ಕೆಲವರ ಹೆಸರುಗಳನ್ನು ಹೇಳಿಯಾದ ಮೇಲೆ "ಇವರೆಲ್ಲರ ಈ ಅನ್ವೇಷಣೆಯ ಪರಿಣಾಮವಾಗಿ ಕನ್ನಡ ನಾಡಿನ ಯಾವೊಂದು ಪುರಾತನ ಶಾಸನವೂ ಅವರ ದೃಷ್ಟಿಯಿಂದ ಪಾರಾಗಲಿಲ್ಲ' ಎನ್ನುತ್ತಾರೆ (ಪು.೪೯೭). ಅನಂತರ ದೊರಕಿದ ಅನೇಕ ಶಾಸನಗಳ ಪಟ್ಟಿಯನ್ನು ಮುತ್ತಣ್ಣನವರಿಗೆ ಒದಗಿಸುವ ತೊಂದರೆಯನ್ನು ಯಾರಾದರೂ ತೆಗೆದುಕೊಳ್ಳುವುದು ಬೇಡವೆಂದು ಕಾಣುತ್ತದೆ. ಗರ್ವನರ್ ಜನರಲ್ ಹೇಸ್ಟಿಂಗ್ಸ್‌ನಂತೂ ಮುತ್ತಣ್ಣನವರ ಪಾಲಿಗೆ ಮಹಾವಿಭೂತಿ. ಅವನು ಮಾಡಿದ್ದೆಲ್ಲವೂ ಭಾರತದ ಉದ್ಧಾರಕ್ಕಾಗಿಯೇ.

ಕನ್ನಡ ಭಾಷೆಯಲ್ಲಿರುವ ಮತ್ತು ಕನ್ನಡ ನಾಡಿನ ವಿವಿಧ ವಿಚಾರಗಳನ್ನು ಕುರಿತು ಇಂಗ್ಲಿಷ್, ಫ್ರೆಂಚ್, ಜರ್ಮನ್, ಪೋರ್ಚುಗೀಸ್ ಇತ್ಯಾದಿ ಭಾಷೆಗಳಲ್ಲಿ ಬರೆಯಲ್ಪಟ್ಟಿರುವ

ಗ್ರಂಥಗಳ ಸಂಖ್ಯೆಯು ಒಟ್ಟಾಗಿ ೩೦ ಸಾವಿರದಷ್ಟಾದರೂ ಇದೆಯೆಂದು ಮುತ್ತಣ್ಣನವರ ಲೆಕ್ಕವಿದೆ (ಪು.೫೦೧). ಭಾರತದ ಬಗ್ಗೆಯಂತೂ ಲಕ್ಷಗಟ್ಟಲೆ ಇವೆಯಂತೆ. ಅಲ್ಲದೆ ಕಳೆದ ಶತಮಾನದಲ್ಲಿ ಕನ್ನಡ ಭಾಷೆಯೊಂದರಲ್ಲೇ ಸು. ೨೫೦೦ರಷ್ಟು ಬೈಬಲ್ ಕೃತಿಗಳು. . . .ಸೂಕ್ತಿಗಳೇ ಮೊದಲಾಗಿ ಬರೆಯಲ್ಪಟ್ಟುವೆಂದು ಹೇಳುತ್ತಾರೆ. ಮುಂದುವರಿದು–

"ಹೀಗೆ ಒಂದೊಂದೇ ಭಾಷೆಯಲ್ಲಿ ಅಷ್ಟು ಗ್ರಂಥಗಳೆಂದರೆ ಹಿಂದೂಸ್ಥಾನದ ಎಲ್ಲಾ ಸಣ್ಣ ಮತ್ತು ಪ್ರಬಲ ಭಾಷೆಗಳಲ್ಲಿ ಪಾಶ್ಚಾತ್ಯರು ಬರೆದ ಪುಸ್ತಕಗಳು ಒಟ್ಟಾಗಿ ಎಷ್ಟು! ಈ ಎಲ್ಲಾ ಭಾಷೆಗಳಲ್ಲಿ ಇರುವ ಬೈಬಲ್ ಕೃತಿಗಳ ಸಂಖ್ಯೆ ಎಷ್ಟು! ಪರಿಣಾಮವಾಗಿ ಅವೆಲ್ಲಾ ಈ ದೇಶದ ಜನರಿಗೆ ಅಂದು ಎಷ್ಟರಮಟ್ಟಿಗೆ ಮನೋವಿಕಾಸವನ್ನು ಮೊಳಗಿಸಲು, ಚೈತನ್ಯವನ್ನು ಬೀರಲು ಮತ್ತು ಹುಮ್ಮಸ್ಸನ್ನು ಹುಟ್ಟಿಸಲು ಸಹಾಯಕವಾಗಿದ್ದಿತೆಂಬುದನ್ನೂ ಈ ಅಲ್ಪ ಬರವಣಿಗೆಯ ಮೂಲಕ ವರ್ಣಿಸಲು ಅಸಾಧ್ಯವಾಗಿದೆ". (ಪು. ೩೪೪) ಎನ್ನುತ್ತಾರೆ. ಹೊಗಳಿಕೆಯ ನಿಮಿತ್ತದಿಂದ. ಇಲ್ಲಿ ಅತಿಶಯೋಕ್ತಿಯು ಪರಾಕಾಷ್ಠೆಯನ್ನು ಮುಟ್ಟಿದೆ.

ಇವೆಲ್ಲಾ ಪ್ರಮಾದಗಳ ಪರಿಶೀಲನೆಯಿಂದ ವ್ಯಕ್ತವಾಗುವ ಮುಖ್ಯ ಅಂಶವೆಂದರೆ ಲೇಖಕರು ತೋರಿದ ಅತೀವ ಅಲಕ್ಷ್ಯ. ವಿಷಯ ಸಂಗ್ರಹವು ಅಪಾರವಾಗಿದ್ದರೆ, ಅವುಗಳ ಉಲ್ಲೇಖನದಲ್ಲಿ ಕೆಲವು ತಪ್ಪುಗಳಾಗುವುದು ತುಸುಮಟ್ಟಿಗೆ ಅನಿವಾರ್ಯವೆನಿಸೀತು. ಆದರೆ ಯಾವುದೊಂದು ಆಕರವು ಕಣ್ಣೆದುರಿಗಿದ್ದೂ ಅದನ್ನು ಸರಿಯಾಗಿ ನೋಡಿಕೊಳ್ಳದೇ, ಸತ್ಯನಿಷ್ಠೆಯನ್ನು ಗಾಳಿಗೆ ತೂರಿ, ಖುಶಿ ಬಂದ ರೀತಿಯಲ್ಲಿ ಉಲ್ಲೇಖಿಸಿದ್ದುದು ನಿಜಕ್ಕೂ ವಿಷಾದನೀಯ. ಪ್ರತಿ ಪುಟದಲ್ಲಿಯೂ ಸತ್ಯಕ್ಕೆ ದೂರವಾದ ಇಂಥ ಸಂಗತಿಗಳು ದೊರೆಯುವವು. ಈ ನಿರ್ಲಕ್ಷ್ಯದ ಮೂಲಕವೇ ಪುನರುಕ್ತಿ, ಅರ್ಧ ಸತ್ಯದ ಹೇಳಿಕೆಗಳು, ಅತ್ಯುಕ್ತಿಗಳು ಹಾಗೂ ಅಸ್ಪಷ್ಟ ವಿಚಾರಗಳು ಸೇರಿಕೊಂಡು, ಗ್ರಂಥವು ಅತ್ಯಂತ ಅವಿಶ್ವಸನೀಯವಾಗಿದೆ. ಇದರಲ್ಲಿ ಬಂದ ಮಾಹಿತಿಯನ್ನು ನಂಬಿ ಹೆಚ್ಚಿನ ಅಭ್ಯಾಸಕ್ಕೆ ಯಾರಾದರೂ ತೊಡಗಿದರೆ, ಅದು ಘಾತುಕದ್ದಾಗಿ ಪರಿಣಮಿಸೀತು.

ಇಲ್ಲಿಗೆ ಈ ಗ್ರಂಥದ ಪರಾಮರ್ಶೆಯನ್ನು ಮುಗಿಸಬಹುದಿತ್ತು. ಆದರೆ ಪಾಶ್ಚಾತ್ಯರನ್ನು ಹೊಗಳುವಲ್ಲಿನ ಲೇಖಕರ ಮನೋವೃತ್ತಿ ಅಥವಾ ದೃಷ್ಟಿಕೋಣವು ನಮ್ಮ ದೇಶದ ಸಂಸ್ಕೃತಿಗೆ ಅನ್ಯಾಯವೆಸಗಿದೆ.

ಮುನ್ನುಡಿಯ ಮಾತುಗಳಿವು:

"ಧರ್ಮಸಂಸ್ಥಾಪನಾಯ ಸಂಭವಾಮಿ ಯುಗೇ ಯುಗೇ ಎಂದು ಹೇಳಿದ ಭಗವಂತನು. . .ಹಲವು ವಿಧದಲ್ಲಿ ಬಂದು ಹೋದನೆಂಬುದು ನ್ಯಾಯವಾದ ಕಥೆಯೇ ಆಗಿದೆ, ಇರಬಹುದು. ಆದರೆ ನಮ್ಮ ದೇಶದಲ್ಲಿ ಶಿಥಿಲವಾಗುತ್ತಿದ್ದ ಹಿಂದೂಧರ್ಮ, ಸಂಸ್ಕೃತಿ, ಸಾಹಿತ್ಯಗಳೆಲ್ಲವನ್ನೂ ಉಳಿಸಲು. . .ಮಹಮ್ಮದೀಯರ ಕರಾಳ ನೀತಿಯಿಂದ

ದೇಶವನ್ನು ಪಾರಾಗಿಸಲು. . . .೨೦೦ ವರ್ಷಗಳ ಕಾಲ ಇದ್ದು ಹಿಂದೆರಳಿದ ಪಾಶ್ಚಾತ್ಯನು ಏಕದಶ ಅವತಾರಿಯಲ್ಲದೆ ಮತ್ತಾರು?. . .ದೇಶಕ್ಕೆ ನವಶಕ್ತಿ ಹಾಗೂ ಸ್ಫೂರ್ತಿಯನ್ನು ಒದಗಿಸಿದ ಕಾಲಚಕ್ರದ ಸಾರಥಿಯು ಪಾಶ್ಚಾತ್ಯ ದೇಶದಿಂದ ಓರ್ವ ವ್ಯಾಪಾರಿಯಾಗಿ ಬಂದುದು ದೇಶದ ಈ ಅವತಾರವು ಮತ್ಸ್ಯ, ಕೂರ್ಮ, ವರಾಹಾದಿ ಅವತಾರಗಳಿಗಿಂತಾ ಎಷ್ಟೋ ಮೇಲಾದುದೂ ಅರ್ಥವತ್ತಾದದೂ ಎಂದು ನನ್ನ ಭಾವನೆಯಾಗಿದೆ'.

"ಅಳಿದುಳಿದ ನಮ್ಮ ಪ್ರಾಚೀನ ಐತಿಹಾಸಿಕ, ವಾಸ್ತುಶಿಲ್ಪ, ಮತ್ತು ಸಾಹಿತ್ಯಾದಿ ಕುರುಹುಗಳನ್ನು ಉಳಿಸಲು ಅವರು ದೇವದೂತರಂತೆ ಬಂದು ನಡೆಸಿದ ಜ್ಞಾನೋಪಾಸನೆ, ಅನ್ವೇಷಣೆ, ಮತ್ತು ಧರ್ಮರಕ್ಷಣೆಯ ಮಹಾಕಾರ್ಯವು ನಮ್ಮ ದೇಶದ ಹಿಂದಾವ ಮಹಾ ತಪಸ್ವಿಯೂ ಕೈಗೊಳ್ಳದಿದ್ದ ಅಸಾಧಾರಣ ಸಾಹಸವಾಗಿದೆ".

"ಅದರೆ ನಂತರ ರಾ. ನರಸಿಂಹಾಚಾರ್ಯನ 'ಕವಿಚರಿತ್ರೆ', ಆಲೂರ ವೆಂಕಟರಾಯನ 'ಕರ್ಣಾಟಕ ಗತವೈಭವ' ಗೋವಿಂದ ಪೈ ಇವನ 'ಕವಿ ಕಾಲ ವಿಮರ್ಶೆ' – ಇತ್ಯಾದಿ ಬರವಣಿಗೆಗಳೆಲ್ಲ ಅ ಪಾಶ್ಚಾತ್ಯ ವಿದ್ವಾಂಸರು ಹೇಳಿದ್ದರ ಮೇಲೆ ಕಟ್ಟಿದ ಭವ್ಯಕೋಟೆಗಳು ಮಾತ್ರ ಎಂದೆನ್ನಬಹುದಲ್ಲದೆ ಇವರಾರೂ ತಾವಾಗಿ ಮೂಲತಃ ಯಾವ ಸಂಶೋಧನೆ ಮಾಡಿದರೋ ತಿಳಿಯದು" (ಅದೇ ಪು. ೫೫೯)

"ಬ್ರಿಟಿಷರು ಇನ್ನೊಂದು ಅರ್ಧ ಶತಮಾನದ ಕಾಲವಾದರೂ ಈ ದೇಶದಲ್ಲಿ ಉಳಿದಿದ್ದರೆ ಮತ್ತು ಅವರಿಂದಲೇ ಆಧುನಿಕ ವಿದ್ಯೆಯನ್ನು ಪಡೆದು ಪ್ರಸಿದ್ಧರಾದ ಈ ದೇಶದ ಜನರು ಅವರಿಗೆ ತಕ್ಕ ರೀತಿಯಲ್ಲಿ ಸಹಕಾರವನ್ನಿತ್ತಿದ್ದರೆ ಅವರು ಈ ದೇಶದಲ್ಲಿ ಇಂದಿಗೂ ಇರುವ ಜಾತಿಭೇದ, ಜನಭೇದ ಇತ್ಯಾದಿಗಳನ್ನು ಕಿತ್ತೊಗೆಯುತ್ತಿದ್ದರು" (ಪು. ೩೪೬)

ಇದು ಮುತ್ತಣ್ಣನವರ ವಿಚಾರಧೋರಣೆ. ಇವೇ ಮಾತುಗಳು ಅನುವು ದೊರೆತಲ್ಲೆಲ್ಲ ಪುನರುಕ್ತಿಗೊಂಡಿವೆ. ಕೆಲವೆಡೆ ವಿಸ್ತಾರವಾಗಿ ಪ್ರತಿಪಾದಿತವಾಗಿವೆ. ಪಾಶ್ಚಾತ್ಯರಿಂದಲೇ ನಮ್ಮ ಉದ್ಧಾರವಾಯಿತು ಎಂದು ಹೇಳುವ ಅವಸರದಲ್ಲಿ ಭಾರತೀಯ ಜನ, ಅವರ ಆಚಾರ, ವಿಚಾರ, ವಿದ್ಯೆ, ಸಾಹಿತ್ಯಿಕ ಕಾರ್ಯ ಇವನ್ನು ಅತ್ಯಂತ ಹೀನಾಯವಾಗಿ ಕಾಣಲಾಗಿದೆ.

ಈ ಗ್ರಂಥದ ಅಪಸ್ವರೂಪ ಮೇಲುನೋಟಕ್ಕೆ ಗೊತ್ತಾಗುವಂತಿದ್ದರೂ ನಮ್ಮಲ್ಲಿಯ ಎಷ್ಟೋ ಜನ ಸಾಹಿತ್ಯಿಕರೂ ಸಾಹಿತ್ಯಾಭ್ಯಾಸಿಗಳೂ ಮೇಲಿಂದ ಮೇಲೆ ಈ ಗ್ರಂಥವನ್ನು ಆಧಾರವಾಗಿ ಬಳಸುತ್ತಿದ್ದಾರೆ; ಉಲ್ಲೇಖಿಸುತ್ತಾರೆ. ಬೇಸರದ ವಿಷಯ.

ಅನುಬಂಧ - ೧೦

# ಆಧಾರ ವಾಙ್ಮಯ
## ಭಾರತೀಯ ಗ್ರಂಥಗಳು


ಕನ್ನಡ ನಾಟಕ - ತ. ಸು. ಶಾಮರಾಯ, ಮೈಸೂರು, ೧೯೬೨

ಕನ್ನಡ ಸತ್ಯವೇದದ ಚರಿತ್ರೆ (ಪುಸ್ತಿಕೆ) - ಬೈಬಲ್ ಸಂಘ, ಬೆಂಗಳೂರು, ೧೯೬೫

ಕನ್ನಡ ಸತ್ಯವೇದ ಶತಮಾನೋತ್ಸವ ಸಂಪುಟ. ಬೆಂಗಳೂರು, ೧೯೬೫

ಕನ್ನಡ ಸಾಹಿತ್ಯ ಚರಿತ್ರೆ - ರಂ. ಶ್ರೀ. ಮುಗಳಿ, ಮೈಸೂರು, ೧೯೬೨ (೨ನೆಯ ಆವೃತ್ತಿ)

ಕನ್ನಡ ಸಾಹಿತ್ಯದ ಇತಿಹಾಸ - ರಂ.ಶ್ರೀ. ಮುಗಳಿ, ಸಾಹಿತ್ಯ ಅಕಾಡೆಮಿ, ನ್ಯೂ ದಿಲ್ಲಿ, ೧೯೬೩

ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ (ಮೈಸೂರು ವಿಶ್ವವಿದ್ಯಾನಿಲಯ). ಸಂ. ೧-೯, ಮೈಸೂರು, ೧೯೬೨-೬೩

ಕರ್ಣಾಟಕ ಕವಿಚರಿತೆ (ಸಂ.೩) - ಆರ್. ನರಸಿಂಹಾಚಾರ್, ೧೯೨೯

ಕರ್ಣಾಟಕ ಕವಿಚರಿತೆಯ ಅನುಕ್ತ ಕೃತಿ ಸೂಚಿ - ಎಸ್. ಶಿವಣ್ಣ, ಮೈಸೂರು. ೧೯೬೭

ಕರ್ಣಾಟಕ ಹರಿದಾಸರು - ಎಚ್. ಕೆ. ವೇದವ್ಯಾಸಾಚಾರ್, ನಂಜನಗೂಡು, ೧೯೬೫

ಕರ್ನಾಟಕ ಕವಯಿತ್ರಿಯರು - ಸರೋಜಿನಿ ಮಹಿಷಿ, ಧಾರವಾಡ, ೧೯೬೫

ಕರ್ನಾಟಕ ವಿದ್ಯಾವರ್ಧಕ ಸಂಘ : ಐವತ್ತು ವರುಷ, ಧಾರವಾಡ, ೧೯೪೧

ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ವರದಿಗಳು, ೧೮೯೧-೧೮೯೫

ಕುಣಿಗಲ ರಾಮಾಶಾಸ್ತ್ರಿಗಳ ಚರಿತ್ರೆ - ಎಂ.ಎಸ್. ಪುಟ್ಟಣ್ಣ, ಕಾವ್ಯಾಲಯ, ಮೈಸೂರು, ೧೯೫೨

ಗಳಗನಾಥ - ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ ೧೯೪೬

ಗ್ರಂಥಕರ್ತರ ಚರಿತ್ರಕೋಶ (ಸಿರಿಗನ್ನಡ) - ವೆಂಕಟೇಶ ಸಾಂಗಲಿ, ಮೈಸೂರು, ೧೯೬೦

ಚಾಮರಾಜೇಂದ್ರ ಒಡೆಯರ ಚರಿತ್ರೆ - ಎಂ. ಶಿಂಗ್ರಯ್ಯ, ಬೆಂಗಳೂರು, ೧೯೦೫

ಚೆನ್ನಬಸಪ್ಪಾ ಬಸವಲಿಂಗಪ್ಪಾ ಧಾರವಾಡ ಇವರ ಚರಿತ್ರೆಯು - ಫ. ಗು. ಹಳಕಟ್ಟಿ, ವಿಜಾಪುರ

ಜ್ಞಾಪಕ ಚಿತ್ರಶಾಲೆ–೧ – ಡಿ.ವಿ. ಗುಂಡಪ್ಪ, ಮೈಸೂರು, ೧೯೬೯
ತೆಂಕನಾಡು : ೩೧ನೆಯ ಕ.ಸಾ.ಸಮ್ಮೇಳನ ಪ್ರಕಟಣೆ, ಕಾಸರಗೋಡು, ೧೯೪೭
ದಯಾಸಾಗರ ಎಂ. ವೆಂಕಟಕೃಷ್ಣಯ್ಯ – ಪಿ.ಆರ್. ರಾಮಯ್ಯ, ಮೈಸೂರು ೧೯೬೯
ನಡೆದು ಬಂದ ದಾರಿ – ೧. – ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ, ೧೯೫೯
ನೆನಪುಗಳು – ಕೆ. ವಾಸುದೇವಾಚಾರ್ಯ
ಪಂಚಕಜ್ಜಾಯ : ಸಾಹಿತ್ಯ ಸಮ್ಮೇಳನ ಪ್ರಕಟಣೆ, ಮಂಗಳೂರು, ೧೯೨೭
ಪಂಜೆಯವರ ನೆನಪಿಗಾಗಿ – ಗೋವಿಂದ ಪೈ, ಇತರರು (ಸಂ) ಪುತ್ತೂರು, ೧೯೫೨
ಪತ್ರಿಕಾ ವ್ಯವಸಾಯ – ರಾ. ಯ. ಧಾರವಾಡಕರ, ಧಾರವಾಡ, ೧೯೪೮
ಪ್ರಸಂಗ–೩ – ಮಾಸ್ತಿ ವೆಂಕಟೇಶ ಅಯ್ಯಂಗಾರ್, ಬೆಂಗಳೂರು, ೧೯೬೫
ಪಾರ್ತಿಸುಬ್ಬ – ಮುಳಿಯ ತಿಮ್ಮಪ್ಪಯ್ಯ, ಮಂಗಳೂರು, ೧೯೪೫
ಬ್ರಿಟಿಶ್ ಮ್ಯೂಸಿಯಂ ಕನ್ನಡ ಸೂಚಿ – ನೋಡಿರಿ ; Catalogue of Kannada ; Br. Museum
ಭಟಕಳ ಸಾಡಿಘರ ಶಾಂತಿಬಾಯಿಯುವರ ಚರಿತ್ರೆಯೂ ಅವರು ರಚಿಸಿದ ಪದಗಳೂ, ೧೯೨೮
ಭಾರತೀಯ ಪತ್ರಿಕೋದ್ಯಮ – ಎಂ. ನಾಡಿಗ ಕೃಷ್ಣಮೂರ್ತಿ, ಮೈಸೂರು, ೧೯೬೮
ಮಹಾರಾಜರವರ ವಂಶಾವಳಿ ಭಾಗ–೨ – ಬಿ. ರಾಮಕೃಷ್ಣರಾವ, ಮೈಸೂರು, ೧೯೨೨
ಮುದ್ದಣ – ಸೆಂಟ್ರಲ್ ಕಾಲೇಜು, ಬೆಂಗಳೂರು, ೧೯೨೬
ಮ್ಹೈಸೂರಚಾ ತಿಸರಾ ಕೃಷ್ಣರಾಜ ವ ತ್ಯಾಂಚಾ ಮರಾಠಿ ಗ್ರಂಥ : ಸಂಖ್ಯಾರತ್ನ ಕೋಶ – ಎ. ಕೆ. ಪ್ರಿಯೋಳಕರ, ಮುಂಬಯಿ, ೧೯೬೯
ಯಕ್ಷಗಾನ ಬಯಲಾಟ – ಶಿವರಾಮ ಕಾರಂತ, ಪುತ್ತೂರು, ೧೯೬೩
ಯುಗಧರ್ಮ ಹಾಗೂ ಸಾಹಿತ್ಯದರ್ಶನ – ಕೀರ್ತಿನಾಥ ಕುರ್ತುಕೋಟಿ, ಧಾರವಾಡ, ೧೯೬೨
ಸಂಕಥನ– ಡಾ. ಶ್ರೀನಿವಾಸ ಹಾವನೂರರಿಗೆ ಅರ್ಪಿಸಿದ ಸಂಭಾವನಾ ಗ್ರಂಥ, ಬೆಂಗಳೂರು, ೨೦೦೮
ಸಂಸ್ಕೃತ ಕವಿಚರಿತೆ ಭಾಗ–೨ – ಎಂ.ಎಸ್. ಶ್ರೀನಿವಾಸಯ್ಯಂಗಾರ್, ಬೆಂಗಳೂರು, ೧೯೩೨
ಸಾಹಿತ್ಯ ಮತ್ತು ವಿಮರ್ಶೆ – ದ.ರಾ. ಬೇಂದ್ರೆ, ಧಾರವಾಡ, ೧೯೪೯

ಸಾಹಿತ್ಯ : ಸಂಪ್ರದಾಯ ಮತ್ತು ಹೊಸಮಾರ್ಗ - ವಿ.ಸೀತಾರಾಮಯ್ಯ, ಧಾರವಾಡ, ೧೯೬೭

ಸಾಹಿತ್ಯೋಪಾಸಕರು – ಡಿ.ವಿ. ಗುಂಡಪ್ಪ, ಮೈಸೂರು, ೧೯೭೧

ಹರಿದಾಸರ ಕಥೆಗಳು – ಕಲಮದಾನಿ ಗುರುರಾಯ, ಹುಬ್ಬಳ್ಳಿ, ೧೯೫೯

ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ– ಎಸ್. ಅನಂತನಾರಾಯಣ, ಮೈಸೂರು, ೧೯೬೨

## ಪತ್ರಿಕೆಗಳು (ಕನ್ನಡ)

ಕನ್ನಡ ನುಡಿ, ಬೆಂಗಳೂರು, ೧೯೬೯

ಕನ್ನಡ ಪ್ರಭ, ಬೆಂಗಳೂರು, ೧೯೬೮

ಕರ್ಮವೀರ, ಹುಬ್ಬಳ್ಳಿ, ೧೯೬೯

ಕರ್ನಾಟಕ ಹರಿದಾಸ ಸಾಹಿತ್ಯ ದ್ವೈಮಾಸಿಕ, ಲಿಂಗಸುಗೂರು, ೧೯೬೫

ಕಸ್ತೂರಿ, ಹುಬ್ಬಳ್ಳಿ, ೧೯೬೯, ೧೯೭೧

ಕ್ರೈಸ್ತ ಸಭಾಪತ್ರ, ಮಂಗಳೂರು, ೧೮೮೨

ಜಯಕರ್ನಾಟಕ, ಧಾರವಾಡ, ೧೯೫೧

ಜಯಂತಿ, ಧಾರವಾಡ, ೧೯೫೬

ಜೀವನ ಶಿಕ್ಷಣ, ಧಾರವಾಡ, ೧೯೫೭-೫೮

ಪರಿಷತ್ಪತ್ರಿಕೆ, ಬೆಂಗಳೂರು, ೧೯೨೫, ೧೯೩೨, ೧೯೩೭

ಪ್ರಜಾವಾಣಿ, ಬೆಂಗಳೂರು, ೧೯೬೩, ೧೯೬೬

ಪ್ರಬುದ್ಧ ಕರ್ಣಾಟಕ, ಮೈಸೂರು, ೧೯೩೯

ಯಕ್ಷಗಾನ, ಹೊನ್ನಾವರ, ೧೯೫೮, ೧೯೫೯

ವಾಗ್ಭೂಷಣ, ಧಾರವಾಡ, ೧೯೧೮, ೧೯೧೯, ೧೯೨೮, ೧೯೪೬

ವಿದ್ಯಾದಾಯಿನೀ, ಬೆಂಗಳೂರು, ೧೮೯೬-೧೮೯೮

ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ, ೧೯೩೭, ೧೯೬೮

## EUROPEAN

Addresses and presentations to Rev. B. Rice, Bangalore. July 1879.

Benjamin Rice : E.P. Rice, London.

Bible translation in India ; J.S.M. Hooper, London, 1963

Bibliotheca Orientalis ; J.Th. Zankar, Leipzig, 1846/64

Bombay Native Education Society Reports, (Mss) : Nos. 1-8, 1823-1835

Brief Review of Ten Years Missionary Labour in India, J.Mullens. London, 1863

Catalogue of the Kannada, Badaga and Kurg Books in the Library of the British Museum

L.D. Barnett (Comp.) London, 1910

Catalogue of Natve Publications in the Bombay Presidency, Bombay, 1864, 1867

Correspondenz Blatt der Basler Missionare in Indien, China and Afrika, 1892

Dharwar : Gazetteer of the Bombay Presidency, (Vol.22) Bombay, 1884

Dynastic History of Northern India, H.C. Ray, Calcutta, 1931, 1936

Dynasties of the Kanerese Districts of the Bombay presidency, J.F. Fleet, Bombay, 1882

Earliest Printing in India and Bibliographical Notes on Early Works mostly Vernacular by Catholic Mission (MS)., J. Housten. (Availbale in the Father Heras Institute Library, Bombay)

Epigraphia Carnatica Vol. 11, 14 ; B.L. Rice (Ed.) Bangalore

Gazetteer of Mysore. Vol, 1-5; C.Hayavadanarao, Bangalore

German Evangelical Mission Reports, Mangalore, 1845-1913

Glossario Luso-Asiatico Vol.1-2 : S.R. Dalgado, Lisbon, 1921

History of Indian Journalism : J. Natarajan, Delhi, 1953

History of Modern Marathi Literature 1800 - 1938: G.C. Bhate, Mahad, 1939

Indian Literature : Dr. Nagendra (Ed.)

Indian Press : S.P. Sen (Ed.) Calcutta, 1967

Jesuits in Mysore : D.Ferrolli

Karnataka Sabdanusasanam (Introduction) : B.L. Rice, Bangalore, 1890

Karnataka Theatre :H.K. Ranganath, Dharwar, 1960

Linguistic Survey of India. Vol.4: G.A. Grierson, Calcutta, 1906

Literatures in Modern Languages : V.K. Gokak (ed.), Delhi, 1957

London Missionary Society Records (MSS). United Theological College, Bangalore

Manual of Coorg; J. Richter, Mangalore, 1868

Manual of the Administration of the Madras Presidency. (Vol.1-2) Madras, 1885, 1895

Memoir of the Rev.John Reid, London

Missionary Pioneers and Indian Languages: J.Dahiman, 1941

Missions of South India : J.Mullens, London, 1854

Methodist (wesleyan) Missionary Society Report (MSS), 1872

Mudrarakshasa Purvasankathanaka; D.Sharma (ed.)., Bikaner, 1945

Mysore, a Gazetter : B.L. Rice (Vol.1-2)

Mysore, Archaelogical Survey Report, 1938

Mysore Archaelogical Department, Annual Report 1935

Nagavarma's Kanerese Prosody : Introduction, Containing Essay on Kanerese Literature : F. Kittel (Ed.), Mangalore, 1972

Printing Press in India : A.K. Priolkar, Bombay, 1956

Proceedings. South India Missionary Conference, Bangalore 1858

Protestant Missions in India : Sherring, London, 1875

Report on publications issued and Registered, India Government, Calcutta, 1883-1898

Reforms in India, 1793-1833, An account of the Christian Missionaries, on behalf of social reforms : K. Ingham - London, 1956

Report of the Board of Education, Government of Bombay for 1842, 1843, 1846.

Report on the Canarese Christian Literature, Bangalore, 1913

Report of the Director of Public Instructin, Bombay, 1867-1868

Samuel Hebich of India ; G.N. Thomssen, Mangalore, 1915

I. Sanniasi Romani ; D. Ferrolli. Rome, 1961

Survey of Indigenous Education in the Province of Bombay, 1820-1830; R.V. Parulekar (ed.), Bombay, 1951

W.A. Russell, esq. . . .V.R. Katti, Bombay

Wesleyan Methodist Notices, New Series, (MS). 1852

**Periodicals**

1. Calcutta Review. (Vol.3) 1942
2. Harvest Field, Bangalore, 1862, 1887
3. Indian Antiquary, Bombay, 1872. . . . .1917
4. Journal of the Asiatic Society of Bengal. New Series, (Vol.9) 1913
5. Journal of the Bombay Branch of the Royal Asiatic Society, 1965
6. Journal of the Royal Asiatic Society, London, 1834
7. Kannada studies, Mysore. No.2, 1965.
8. Madras journal of Literature and Science, (Vol.7) 1838
9. Madras Missionay Record : (Vol.1) 1834

* * * * * * * * *

## ಕೆಲವು ಸೇರ್ಪಡೆಗಳು : ತಿದ್ದುಪಡಿಗಳು

ಪು.೨೭೦. ಎಂ.ಎಲ್. ಶ್ರೀಕಂಠೇಶಗೌಡರು Silican Summer ಕೃತಿಯನ್ನು ಕನ್ಯಾವಿತಂತು ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರಷ್ಟೆ. ಮೂಲ ಲೇಖಕ, ಹೆನ್ರಿ ಟೇಲರ್, ಇಲ್ಲಿ ಹೆನ್ರಿ ಫೀಲ್ಡಿಂಗ್ ಎಂದು ತಪ್ಪಾಗಿ ಬಂದಿದೆ. (ಈ ತಪ್ಪನ್ನು ನನ್ನ ಗಮನಕ್ಕೆ ತಂದವರು ಕೆ.ಎಂ. ಮುನಿಕೃಷ್ಣಪ್ಪ).

ಪು.೨೫೩. ಮುದ್ರಣದ ಶಬ್ದಸೃಷ್ಟಿಯನ್ನು ಸಂಗಣಕಕ್ಕೆ ಅಳವಡಿಸಿದ ಬಗೆಗೆ 'ಮುದ್ರಣ ಕಂಡ ಶಿವ' ಎಂಬ ಲೇಖನದಲ್ಲಿ (ಪ್ರಕಟನೆ : ಕನ್ನಡದಲ್ಲಿ ಕ್ರೈಸ್ತಸಾಹಿತ್ಯ ಹನಿಗತೆ, ಕಂಪ್ಯೂಟರ್ ಮುಂ. ಅನನ್ಯ ಸಾಹಿತ್ಯ, ಧಾರವಾಡ ೧೯೮೨) ಸಾಕಷ್ಟು ವಿವರಗಳು ಬಂದಿವೆ. ನೋಡಬೇಕಾಗಿ ಬಿನ್ನಹ.

# GRAMMAR

OF THE

# KURNATA LANGUAGE.

BY W. CAREY, D. D.
*Professor of the* SUNGSKRITA, BENGALEE, *and* MAHRATTA *Languages in the* COLLEGE *of* FORT WILLIAM.

Serampore:

PRINTED AT THE MISSION PRESS.

1817

ಹೊಸಗನ್ನಡದ ಪ್ರಪ್ರಥಮ ಪುಸ್ತಕ (೧೮೧೭). ಕನ್ನಡ ಅಕ್ಷರಗಳು ಮೊದಲ ಬಾರಿಗೆ ಕಾಣಿಸಿಕೊಂಡಿವೆ. ಶ್ರೀರಾಮಪುರದ ಮುದ್ರಣ.

THE

NEW

TESTAMENT

IN

CANARESE,

*VOL.* 1.

MADRAS:

*PRINTED BY WILLIAM URQUHART,*

AT THE COMMERCIAL PRESS,

FOR THE BRITISH AND FOREIGN BIBLE SOCIETY.

1820

ಸಂಪೂರ್ಣವಾಗಿ ಕನ್ನಡ ಅಕ್ಷರಗಳನ್ನೊಳಗೊಂಡ ಪ್ರಥಮ ಮುದ್ರಿತ ಪುಸ್ತಕ (ಕ್ರಿ.ಶ.೧೮೨೦). ಕನ್ನಡ ಬೈಬಲ್‌ನ (ಹೊಸ ಒಡಂಬಡಿಕೆ) ಮೊದಲ ರೂಪ. ಅನುವಾದಕ ಜೆ.ಹ್ಯಾಂಡ್ಸ್ ತನ್ನ ತಂದೆಗೆ ಕಳುಹಿಸಿದ ಪ್ರತಿಯೇ ಇದು. ಅವನ ಹಸ್ತಾಕ್ಷರವಿರುವ ಈ ಅಪೂರ್ವ ಗ್ರಂಥ ಮುಂಬಯಿ ವಿಶ್ವವಿದ್ಯಾಲಯದ ಗ್ರಂಥಭಂಡಾರದಲ್ಲಿದೆ

A GUIDE

[illegible]

IN

ACQUIRING A KNOWLEDGE

OF THE

# ENGLISH LANGUAGE,

DESIGNED FOR THE BENEFIT OF THOSE IN THIS COUNTRY,

[illegible]

WHO WISH TO STUDY THE ENGLISH

[illegible]

LANGUAGE AND SCIENCES.

[illegible]

---

*"The fear of the Lord is the beginning of wisdom; and to depart from evil is understanding."*

[illegible]

"Of all things, knowledge is esteemed the greatest treasure, from incapability to be stolen, from incapability to be given away, and from incapability to be destroyed."

[illegible]

PRINTED AT THE BELLARY MISSION PRESS.

A. D. 1836.

[illegible]

ಜಾನ್ ರೀಡ್ ವಿರಚಿತವಾದ ಈ ಭಾಷಾಭ್ಯಾಸದ ಪುಸ್ತಕದಲ್ಲಿ ಕ್ರಿಶ್ಚಿಯನ್ ಮತ ವಿಚಾರಗಳನ್ನು ಹೇರಳವಾಗಿ ತಂದದ್ದಿದೆ.



ಮುಮ್ಮಡಿ ಕೃಷ್ಣರಾಜ ವಿರಚಿತ 'ಸೌಗಂಧಿಕ ಪರಿಣಯ'ವೆಂಬ ಬೃಹದ್ಗ್ರಂಥದ ಒಂದು ಪುಟ. ಫೂಲ್ಸ್ ಕ್ಯಾಪ್ ಅಕಾರದ ಅನೇಕಾನೇಕ ಪುಟಗಳಲ್ಲಿ ಇಂಥ ಚಿತ್ರಗಳನ್ನು ಕಾಣಬಹುದು



ಮುಮ್ಮಡಿ ಕೃಷ್ಣರಾಜರ ಅರಮನೆಯ ಅಚ್ಚುಕೂಟದಲ್ಲಿ ಮುದ್ರಣಗೊಂಡ ಆರಂಭದ
ಗ್ರಂಥಗಳಲ್ಲಿ ಇದೊಂದು ಸೊಗಸಾದ ಚಿತ್ರಗಳನ್ನು ಬಿಡಿಸಿ ಅವನ್ನು ಮುದ್ರಿಸುವ ಬಗೆಯು
ಆಗಿನ ಕಾಲಕ್ಕೆ ಭಾರತದಲ್ಲಿ ಇನ್ನೆಲ್ಲಿಯೂ ಕಂಡುಬಾರದ ಸಂಗತಿಯಾಗಿದೆ

# DICTIONARIUM

CANARENSE LATINUM.

AD USUM

MAISSURENSIS CATHOLICI SEMINARII.

Bengalori.

1855.

ರೋಮನ್ ಕೆಥೊಲಿಕ್ ಗುರು ಸಿ.ಚಾರ್ಬೊನಾ ವಿರಚಿತ ಕನ್ನಡ–ಲ್ಯಾಟಿನ್ ಕೋಶ, ಲ್ಯಾಟಿನ್–ಕನ್ನಡ ಸಾಹಚರ್ಯ ೧೯ನೇ ಶತಮಾನದ ಒಂದು ವೈಶಿಷ್ಟ್ಯ

THE

# NEW TESTAMENT,



OF

OUR LORD AND SAVIOUR

## JESUS CHRIST,

TRANSLATED FROM THE ORIGINAL GREEK,

INTO

## CANARESE.

BY A COMMITTEE OF MISSIONARIES BELONGING TO THE GERMAN, LONDON, AND WESLEYAN SOCIETIES.

APPOINTED BY THE

MADRAS AUXILIARY BIBLE SOCIETY.

---

BANGALORE:

PRINTED FOR THE MADRAS AUXILIARY BIBLE SOCIETY,

AT THE WESLEYAN MISSION PRESS.

1858.

ಕನ್ನಡ ಬೈಬಲ್ (೧೮೫೮)

# REPORT

ON THE

## Interior Administration, Resources,

AND

## EXPENDITURE

OF THE

## GOVERNMENT OF MYSORE,

UNDER THE SYSTEM PRESCRIBED

BY THE

ORDERS OF THE GOVERNOR GENERAL IN COUNCIL,
DATED 4TH SEPTEMBER 1799.

---


**BY MAJOR M. WILKS,**

*Of the Establishment of Fort Saint George, Acting Resident at Mysore.*


---

Printed by Order of the Governor General in Council,
Fort William, 4th May, 1805.

---


BANGALORE:

RE-PRINTED AT THE MYSORE GOVERNMENT PRESS.
1861.


ವಿಲ್ಕ್ಸ್ ನೀಡಿದ ವರದಿಯ ಮುಖಪುಟ (೧೮೬೧)

*The Canarese Magazine*

कानडी ज्ञान बोधक.

पुस्तक १ — अंक ५

"सर्व द्रव्येषु विद्यैव द्रव्य माहुर नुत्तमं ॥
अहार्यत्वा दनर्घ्यत्वा दक्षयत्वाच्च सर्वदा १"

माहे मे

सन् १८६२ इसवी

कानडी भाषेंत पुस्तकें प्रसिद्ध करणारी मंडळी यांच्या साठीं

धारवाड येथें गोविंद प्रभाकर जोशी यांच्या सन्मार्ग दर्शक छापखान्यांत छापिलें.

किंमत दोन आणे.

*The Canarese Magazine*

ಕನ್ನಡ ಜ್ಞಾನ ಬೋಧಕವು.

ಪುಸ್ತಕ ೧ — ಸಂಚಿಕೆ ೬

"ಸರ್ವದ್ರವ್ಯೇಷು ವಿದ್ಯೈವ ದ್ರವ್ಯಮಾಹುರನುತ್ತಮಂ
ಅಹಾರ್ಯತ್ವಾದನರ್ಘ್ಯತ್ವಾದಕ್ಷಯತ್ವಾಚ್ಚ ಸರ್ವದಾ"

ಮಾಹೆ ಜೂನ

ಸನ್ ೧೮೬೨ ಇಸವಿ.

ಕನ್ನಡ ಭಾಷೆಯಲ್ಲಿ ಪುಸ್ತಕಗಳು ಪ್ರಸಿದ್ಧ ಮಾಡುವ ಮಂಡಳಿಯ
ದೆಸೆಯಿಂದ

ಧಾರವಾಡದಲ್ಲಿ ಗೋವಿಂದ ಪ್ರಭಾಕರ ಜೋಶಿ ಇವರ ಸನ್ಮಾರ್ಗದರ್ಶಕ
ಛಾಪಖಾನೆಯಲ್ಲಿ ಛಾಪಿಸಲ್ಪಟ್ಟಿದೆ

ಕ್ರಯ ಎರಡು ಆಣೆ.

ವೆಂಕಟ ರಂಗೋ ಕಟ್ಟಿಯವರ ಸಂಪಾದಕತ್ವದ ಮರಾಠಿ–ಕನ್ನಡ ದ್ವೈಭಾಷಿಕ ಪತ್ರಿಕೆ 'ಕನ್ನಡ ಬೋಧಕವು' (೧೮೬೨)

# THE ARUNODAYA.

An [illegible]

## Anglo-Canarese Magazine.

EDITED BY

THE REV. B. RICE,

LONDON MISSION, BANGALORE.

VOL IV—1865.

# ಅರುಣೋದಯ.

ಚಿತ್ರಗಳಿಂದ ಅಲಂಕರಿಸಲ್ಪಟ್ಟ ಬೋಧೆ ಸಂಗ್ರಹ.

ಘನ ರೈಸ ಪಾದರಿಯವರು,

೪ ಪುಸ್ತಕ.—೧೮೬೫.

BANGALORE:

PRINTED FOR THE TRACT AND SCHOOL BOOK SOCIETY,

AT THE WESLEYAN MISSION PRESS.

1865.

ಬಿ.ಎಚ್. ರೈಸ್ ಸಂಪಾದಕತ್ವದ 'ಅರುಣೋದಯ'
ದ್ವೈಭಾಷಿಕ ಪತ್ರಿಕೆಯ ಮುಖಪುಟ (೧೮೬೫)

ಅಂಕಗಣಿತ

ಭಾಗ ೧

ಪೂರ್ಣಾಂಕವು.



ಈ ಗ್ರಂಥವು

ವಿದ್ಯಾರ್ಥಿಗಳ ಉಪಯೋಗಕ್ಕಾಗಿ,

ವೆಂಕಟೇಶ ನಾರಾಯಣ.

ಜಮಖಂಡೀಕರ

ಹಾನಗಲ್ಲ

ಇತನು ತಯಾರು ಮಾಡಿಸ್ಸಿಂತೆ

ಬರೆದಿದ್ದನ್ನು

ಧಾರವಾಡದಲ್ಲಿ

ರಾಮಪ್ರಸಾದ ಮಿಶ್ರರಣ್ಣಾಪರ

ಜ್ಞಾನಬೋಧಕ ಛಾಪಖಾನೆ

ಯಲ್ಲಿ ಛಾಪಿಸಲ್ಪಟ್ಟಿತು

ಮಾಹೆ ಅಗೋಷ್ಟ ಸನ್ ೧೮೭೦ ಇಸ್ವಿ

ಗ್ರಂಥಕಾರನು ಇದರ ಮಾಲಕಿಯತ್ತನ್ನು ತನ್ನ ಕಡೆ ಇಟ್ಟು ಕೊಂಡಿರುತ್ತಾನೆ.

ಮುಂಬಯಿ ಕರ್ನಾಟಕದಲ್ಲಿ ವ್ಯಾಪಕವಾಗಿ ನಡೆಯುತ್ತಿದ್ದ ಕಲ್ಲಚ್ಚಿನ ಪುಸ್ತಕದ ಒಂದು ಮಾದರಿ (೧೮೭೦).

# ನಾಗವರ್ಮನ
# ಕನ್ನಡ ಛಂದಸ್ಸು



## NAGAVARMA'S
# CANARESE PROSODY

EDITED WITH AN INTRODUCTION TO THE WORK AND AN ESSAY ON CANARESE LITERATURE

BY

REV. F. KITTEL
B. M. S.



MANGALORE
BASEL MISSION BOOK & TRACT DEPOSITORY
1875

LONDON
TRÜBNER & Co.

BASEL
MISSIONSHAUS

ಕಿಟೆಲ್ ಸಂಪಾದಿಸಿದ ನಾಗವರ್ಮನ ಛಂದಸ್ಸು (೧೮೭೫)

ಮುಂಬಯಿ ಇಲಾಖೆಯೊಳಗಿನ ಸರಕಾರೀ ವಿದ್ಯಾಖಾತೆ.

# ಯಂತ್ರಶಾಸ್ತ್ರ

ವಿದ್ಯಾಖಾತೆಗೆ ಸೇರಿದ
ಕನ್ನಡ ಟ್ರಾನ್ಸಲೇಟರರಿಂದ ಭಾಷಾಂತರಿಸಲ್ಪಟ್ಟಿತು.

೧೦೦೦ ಪ್ರತಿಗಳು



ಮುಂಬಯಿ:
ಗವರ್ನಮೆಂಟ ಸೆಂಟ್ರಲ್ ಬುಕ್ ಡಿಪೊ.
೧೮೮೨.



ಕ್ರಯ: ೭ ಆಣೆ.

ಮುಂಬೈ ಸರ್ಕಾರದಿಂದ ಪ್ರಕಟವಾದ ಇಂಜನಿಯರಿಂಗ್‌ಗೆ ಸಂಬಂಧಿಸಿದ
ಕನ್ನಡ ಕೃತಿ ( ೧೮೮೨)

ಓಂ

ತತ್ ಸತ್

# ವಿಧವೋದ್ವಾಹಚಿಕೀರ್ಷಾಧ್ವಾಂತ ಭಂಜನಮ್

ಈ ಗ್ರಂಥವು

ಶ್ರೀಮತ್

ಪರಮಹಂಸಪರಿ

ವ್ರಾಜಕಾಚಾರ್ಯವರ್ಯಶ್ರೀ

ಮತ್ ಕೃಷ್ಣಾಶ್ರಮಾನುಗೃಹೀತಶ್ರೀ

ಮತ್ ಪಾಂಡುರಂಗಾಶ್ರಮಶ್ರೀ

ಗೌಡಭಗವತ್ಪೂಜ್ಯಪಾದ

ರಿಂದ

ರಚಿಸಲ್ಪಟ್ಟು

ಮುಂಬಯಿ

**ಕರ್ಣಾಟಕ ಮುದ್ರಾಶಾಲೆಯಲ್ಲಿ**

ಛಾಪಿಸಿ

ಶಕೆ ೧೮೧೦ನೇ ಸರ್ವಧಾರಿ

ಸಂವತ್ಸರದಲ್ಲಿ

ಪ್ರಕಾಶಿಸಲ್ಪಟ್ಟಿತು.

(ಇದರ ಎಲ್ಲಾ ತರದ ಹಕ್ಕು ಗ್ರಂಥಕರ್ತೃಗಳ ಅಧೀನ ಇರುತ್ತದೆ.)

ಕ್ರಯ [illegible] ಪೋಸ್ಟೇಜು ಹಾಸಲ್ ಸಹಿತ ರೂ. ೧ ಆ. ೧೨

ಬಾಲ್ಯವಿವಾಹ ನಿಷೇಧ ಹಾಗೂ ವಿಧವಾ ವಿವಾಹ ಪುರಸ್ಕಾರ–ಇವನ್ನು ಎತ್ತಿ ಹಿಡಿದು, ಶಿಷ್ಯರು ಕೇಳಿದ ಪ್ರಶ್ನೆಗಳಿಗೆ ಶಿರಾಲಿ ಚಿತ್ರಾಪುರ ಮಠದ ಪಾಂಡುರಂಗಾಶ್ರಮ ಸ್ವಾಮಿಗಳು ಕೊಟ್ಟ ಉತ್ತರ ಈ ವಿಶಿಷ್ಟ ಗ್ರಂಥದಲ್ಲಿದೆ. (೧೮೮೮)

ಶ್ರೀರಸ್ತು

ಶ್ರೀಮಹಾಗಣಾಧಿಪತಯೇನಮಃ.

ಸಕಲನೀತಿಸಾರವಾಗಿಯೂ ಸರ್ವರಿಗುಪಯುಕ್ತವಾಗಿರುವ

# ಸಟೀಕಾವಿಷ್ಣುಶರ್ಮ-ಪಂಚತಂತ್ರವು

ಇದು

ಗ್ರಂಥಾಂತರ್ಗತ ಶ್ಲೋಕಗಳಿಗೆ ಟೀಕಾಸಹಿತವಾಗಿ

ಆ, ವೆಂಕಟಸುಬ್ಬಯ್ಯನವರಿಂದ

ಪರಿಶೋಧಿಸಲ್ಪಟ್ಟು.

ಎಸ್, ಕೋನೇರಿಶೆಟ್ಟರಿಂದ

ಬಳ್ಳಾರಿ- ಕರ್ಣಾಟಕ ಬುಕ್ ಡಿಪೋ ಏಜಂಟ್

 ಶಿವಲಿಂಗಂಶೆಟ್ರವರಗಳ

ಸ್ವಕೀಯ

ಗ್ರಂಥರತ್ನಾಕರಮುದ್ರಾಕ್ಷರಶಾಲೆಯಲ್ಲಿ,

ಮುದ್ರಿಸಿ ಪ್ರಕಟಿಸಲ್ಪಟ್ಟಿತು.

MADRAS.

೧೮೯೩ - ಸಂ॥

ಗುರುವಪ್ಪಬೀಧಿ ೪೧ ನಂಬರ್

ENGLISH CLASSICS FOR KANARESE READERS.

# ಕನ್ಯಾ ವಿತಂತು



ಅಡ್ವಕೇಟ್

ಎಂ. ಎಲ್. ಶ್ರೀಕಂಠೇಶ ಗೌಡ, ಬಿ. ಎ., ಬಿ. ಎಲ್.

ರವರಿಂದ ವಿರಚಿತವಾದುದು.

ಮೈಸೂರು

ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್.

*1895.*



ಕ್ರಯ ೮ ಆಣೆ.

ಹೆನ್ರಿ ಫೀಲ್ಡಿಂಗ್‌ನ ' ಎ ಪಿಲಿಕನ್ ಸಮ್ಮರ್' ಕೃತಿಯ ಕನ್ನಡಾನುವಾದ (೧೮೯೫)

# English Classics

for

# Kanarese Readers.

# ಪ್ರಮೀಳಾರ್ಜುನೀಯಂ.

ಅಡ್ವೊಕೇಟ್

ಎಂ. ಎಲ್. ಶ್ರೀಕಂಠೇಶಗೌಡರಿಂದ

ವಿರಚಿತವಾದುದು.



ಮೈಸೂರು :

ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್.

***1896.***



ಶೇಕ್ಸ್‌ಪಿಯರನ ನಾಟಕವೊಂದರ ಹೃದ್ಯವಾದ ರೂಪಾಂತರ. ಶ್ರೀಕಂಠೇಶಗೌಡನ ಕೃತಿಯನ್ನು ಪ್ರಕಟಿಸಿದ ಜಿ.ಟಿ.ಎ ಸಂಸ್ಥೆ ಹೊಸಗನ್ನಡ ಗ್ರಂಥೋದ್ಯಮಕ್ಕೆ ಅಮೋಘ ಸೇವೆ ಸಲ್ಲಿಸಿದೆ.

# INDIRA BAI

OR

## THE TRIUMPH OF TRUTH AND VIRTUE

TRANSLATED FROM THE CANARESE OF

*Mr. Gulvadi Venkat Rao*

BY

M. E. COUCHMAN, I C S.

MANGALORE
PRINTED AT THE BASEL MISSION PRESS
1903

ಹೊಸಗನ್ನಡದ ಮೊತ್ತಮೊದಲಿನ ಸ್ವತಂತ್ರ ಸಾಮಾಜಿಕ ಕಾದಂಬರಿ ಎಂಬ ಹೆಗ್ಗಳಿಕೆಯಂತೂ ಸರಿಯೆ. ಅದು ಬಲು ಬೇಗ ಇಂಗ್ಲಿಶ್‌ಗೆ ಭಾಷಾಂತರಗೊಂಡದ್ದು ಇನ್ನೊಂದು ವಿಶೇಷದ ಸಂಗತಿಯಾಗಿದೆ. (ವಿಭಾಗ – ೮೩೨) (೧೯೦೩)

## ಮುಂಬಯಿ ಕರ್ನಾಟಕದ ಮಹಾನುಭಾವರು



ಡೆ. ಚೆನ್ನಬಸಪ್ಪ
೧೮೩೪–೧೮೮೧
(ಪು. ೩೦೦–೩೦೧)



ವೆಂ. ರಂ. ಕಟ್ಟಿ
೧೮೩೩–೧೯೦೯
(ಪು.೩೦೨–೩೦೬)



ಶಾ. ಎ. ಕೈಕಿಣಿ
೧೮೪೧–೧೯೦೫
(ಪು.೨೯೧–೨೯೨)



ಜೆ. ಎಫ್. ಫ್ಲೀಟ್
೧೮೪೭–೧೯೧೭)
(ಪು.೧೫೩–೧೬೦)



ಶಾಂತಕವಿ
೧೮೫೬–೧೯೨೦
(ಪು. ೩೧೦–೩೧೪)



ರಾ.ಹ.ದೇಶಪಾಂಡೆ
೧೮೬೧–೧೯೩೦
(ಪು.೩೧೬–೩೧೮)

## ಇಬ್ಬರು ಹಿರಿಯ ಮಿಶನರಿಗಳು



ಹರ್ಮನ್ ಮೊಗ್ಲಿಂಗ್
(೧೮೧೧–೧೮೮೧)
ಹೊಸಗನ್ನಡ ಗದ್ಯ ಹಾಗೂ ಪದ್ಯ ಮಾರ್ಗದ ಹೊಳಹನ್ನು ಹಾಕಿದವ. ನಮ್ಮ ಪ್ರಾಚೀನ ಕೃತಿಗಳನ್ನು ಜರ್ಮನಿಗರಿಗೆ ಪರಿಚಯ ಮಾಡಿ ಕೊಟ್ಟವ; ಲಿಪಿಸುಧಾರಕ; ಆದ್ಯ ಪತ್ರಿಕಾಕರ್ತ (ಪುಟ ೧೧೩–೧೧೯)

ಬೆಂಜಮಿನ್ ಹೋಲ್ಟ್ ರೈಸ್
(೧೮೧೪–೧೮೮೭)
ನಮ್ಮ ನಾಡಿನಲ್ಲಿ ಅರ್ಧ ಶತಮಾನ ಬಾಳಿ, ಜನಜೀವನದಲ್ಲಿ ಬೆರೆತವ; ಅನೇಕ ಪಠ್ಯಪುಸ್ತಕಗಳನ್ನು ರಚಿಸಿದವ; 'ಅರುಣೋದಯ'ದ ಸಂಪಾದಕ. ಕ್ರಿಶ್ಚಿಯನ್ ಗೀತೆಗಳ ರಚಯಿತ.
(ಪುಟ ೧೦೨–೧೦೬)



## ಅನುಬಂಧ – ೧೨

## ಪದಸೂಚಿ



'ಹೊಸಗನ್ನಡದ ಅರುಣೋದಯ' ಕನ್ನಡದ ಒಂದು ಮೇರು ಕೃತಿ. ಹೊಸಗನ್ನಡ ಸಾಹಿತ್ಯ ಮೂಡುವ ಮುಂಚೆ ಹಳೆಗನ್ನಡ ಸಾಹಿತ್ಯ ರಚನೆ ನಿಂತುಹೋದ ನಂತರದ ಸಂಧಿ ಕಾಲದಲ್ಲಿನ ಸಂದರ್ಭಗಳನ್ನು ಲೇಖಕರು ಇಲ್ಲಿ ಅಧಿಕೃತವಾಗಿ ದಾಖಲಿಸಿದ್ದಾರೆ. ಡಾ. ಶ್ರೀನಿವಾಸ ಹಾವನೂರರ ಈ ಕೃತಿ, ಮುಂದೆ ಯಾವ ಕಾಲಕ್ಕೂ ಸಂಶೋಧಕರಿಗೆ ಅಧಿಕೃತ ಆಕರ ಗ್ರಂಥವಾಗುವಂತದ್ದು. ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ಹಾವನೂರರದು ಬಹಳ ದೊಡ್ಡ ಹೆಸರು. ಹಿರಿಯ ವಿದ್ವಾಂಸರೂ, ಸೌಜನ್ಯಶೀಲರೂ ಆದ ಅವರನ್ನು ಪ್ರಾಧಿಕಾರ ಈ ಕೃತಿಯ ಮರುಮುದ್ರಣಕ್ಕೆ ಅನುಮತಿ ಕೋರಿದಾಗ ಸಂತೋಷದಿಂದ ಒಪ್ಪಿ, ಮೂರನೇ ಮುದ್ರಣಕ್ಕೆ ಅಗತ್ಯ ತಿದ್ದುಪಡಿಗಳನ್ನು ಮಾಡಿ ಸ್ವತಃ ಪ್ರಾಧಿಕಾರಕ್ಕೆ ತಂದುಕೊಟ್ಟಿದ್ದರು. ಪುಸ್ತಕ ಹೊರಬರುವ ಮುಂಚೆಯೇ ಅವರು ನಮ್ಮನ್ನು ಅಗಲಿರುವುದು ತುಂಬಾ ವೇದನೆಯನ್ನುಂಟುಮಾಡಿದೆ. ಅವರಿಗೆ ನಾನು ಇಡೀ ಕನ್ನಡ ವಾಚಕಲೋಕದ ಪರವಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ

ಡಾ.ಸಿದ್ದಲಿಂಗಯ್ಯ
ಅಧ್ಯಕ್ಷರು.



ಕನ್ನಡ ಪುಸ್ತಕ ಪ್ರಾಧಿಕಾರ
ಕನ್ನಡ ಭವನ ಜೆ.ಸಿ. ರಸ್ತೆ
ಬೆಂಗಳೂರು-2

Design: SINCHANA GRAPHICS